# ಇತಿಹಾಸ ದರ್ಶನ

ಸಂಪುಟ ೧೪ / ೧೯೯೯




KARNATAKA ITIHASA ACADEMY
कर्नाटक इतिहास अकादमि

# ಇತಿಹಾಸ ದರ್ಶನ




ಸಂಪುಟ ೧೪/೧೯೯೯

೧೯೯೮ರಲ್ಲಿ ಬೆಂಗಳೂರಿನಲ್ಲಿ ಸಮಾವೇಶಗೊಂಡಿದ್ದ
ಕರ್ನಾಟಕ ಇತಿಹಾಸ ಅಕಾದೆಮಿಯ ಹನ್ನೆರಡನೆಯ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು
ಮಂಡಿಸಿದ ಪ್ರಬಂಧಗಳ ಸಂಕಲನ

ಸಂಪಾದಕರು

★ ಎಂ. ಜಿ. ನಾಗರಾಜ್

★ ಪಿ. ವಿ. ಕೃಷ್ಣಮೂರ್ತಿ



ಕರ್ನಾಟಕ ಇತಿಹಾಸ ಅಕಾದೆಮಿ ( ರಿ., ) ಬೆಂಗಳೂರು

# ITIHĀSA DARŚANA

Proceedings of the Twelth Annual Conference of
**The Karnataka Itihasa Academy** (Regd.)
held at Bangalore on 14th, 15th and 16th November 1998

**Volume 14, June 1999**

Edited by : *M.G. Nagaraj*
*P.V. Krishna Murthy*

Published by : *Karnataka Ithihasa Academy (Regd.)*
Gokhale Institute of Public Affairs Premises
Basavanagudi Road, Narasimharaja Colony
Bangalore - 560 019



ಬೆಲೆ : ರೂ. ೧೫೦-೦೦

**ಪ್ರಬಂಧಕಾರರ ಗಮನಕ್ಕೆ**

ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ. ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ. ಕರ್ನಾಟಕ ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುವ ಬರಹಗಳಿಗೆ ಇತಿಹಾಸ ದರ್ಶನ ಮೀಸಲಾಗಿದೆ. ಲೇಖನಗಳು ಹಸ್ತಲಿಖಿತ ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವೆಡೆ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥ ಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ. ಈ ೧೩ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು. ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಜನವರಿ ೩೧, ೨೦೦೦ದ ಒಳಗಾಗಿ, **ಸಂಪಾದಕರು, ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಸಂಪಾದಕೀಯ

ಹರಪನಹಳ್ಳಿ ಬಳ್ಳಾರಿ ಜಿಲ್ಲೆಯಿಂದ ಜಿಗಿದು ದಾವಣಗೆರೆ ಜಿಲ್ಲೆಗೆ ಬಂದಿದೆ. ಬದುಕಿನ ವ್ಯವಹಾರಗಳಿಗೆ ಅತ್ತ ಹೋಗುತ್ತಿದ್ದವರು, ಇತ್ತ ಬರುತ್ತಾರಷ್ಟೆ. ಕನ್ನಡ ನೆಲದಲ್ಲಿ ಇದೊಂದು ಆಡುಂಬೊಲವಷ್ಟೆ. ಸಾಂಸ್ಕೃತಿಕ ಅಂತರಂಗ ಕರ್ನಾಟಕದ ಯಾವ ಮೂಲೆಯ ಜನಕ್ಕೂ ಒಂದೇ ಮಿಡಿತದ ನೆಲೆ. ಕಳೆದ ಕರ್ನಾಟಕ ಇತಿಹಾಸ ಅಕಾದೆಮಿಯ ೧೨ನೇ ಸಮ್ಮೇಳನವು ಬೆಂಗಳೂರಿನಲ್ಲಿ ೧೯೯೮ರ ನವೆಂಬರ್ ೧೪-೧೬ರ ವರೆಗೆ ನಡೆಯಿತು. ಆರಂಭದ ಸಮ್ಮೇಳನದ ನಂತರ ೧೧ ವರ್ಷ ಕಳೆದ ಮೇಲೆ ಬೆಂಗಳೂರಿನಲ್ಲಿಯೆ ವ್ಯವಸ್ಥೆ ಆಗಿತ್ತು. ಈ ಹಿಂದೆ ೧೯೯೦ರಲ್ಲಿ ದಾವಣಗೆರೆಯು ಜಿಲ್ಲಾ ಕೇಂದ್ರವಾಗುವ ಮುನ್ನ ಕರ್ನಾಟಕ ಇತಿಹಾಸ ಅಕಾದೆಮಿಯ ಸಮ್ಮೇಳನವು ನಡೆದಿತ್ತು. ಮತ್ತೆ ಈಗ ಅದು ಜಿಲ್ಲೆಯಾದ ಮೇಲೆ ಅದಕ್ಕೆ ಈ ಯೋಗ. ಅಂದರೆ ವಿದ್ವತ್ ಸಮುದಾಯದ ಸಂಗಮ ಇದೀಗ ಮತ್ತೆ ದಾವಣಗೆರೆ ಜಿಲ್ಲೆಯ ಹರಪನಹಳ್ಳಿಯಲ್ಲಿ ಇದೇ ಜೂನ್ ೧೧ರಿಂದ ೧೩ರ ವರೆಗೆ.

ಹರಪನಹಳ್ಳಿ ಒಂದು ಪಾಳೆಯಪಟ್ಟಾಗಿಯೂ ಹೆಸರುಗೊಂಡ ನೆಲೆ. ತನ್ನ ನೆರೆಯ ಬಾಗಳಿ, ಮಾಗಳ ಗ್ರಾಮಗಳಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಕಲಾಕುಸುರಿಯನ್ನು ಶಿಲ್ಪ, ದೇಗುಲಗಳಲ್ಲಿ ಮೂಡಿಸಿಕೊಂಡಿದೆ. ನೆರೆಯ ಹೂವಿನಹಡಗಲಿ ವಿಜಯನಗರ ಕಾಲದಲ್ಲಿ ವಿರೂಪಾಕ್ಷನಿಗೆ ಹಡಗಿನಲ್ಲಿ ಹೂ ಕಳುಹುತ್ತಿದ್ದ ಕೇಂದ್ರ. ಅದೇ ಹೂವಿನಹಡಗಲಿ ತಾಲೂಕಿನ ಭಾವಿಹಳ್ಳಿ- ಹೊಳಗುಂದಿಯಿಂದ ವಿಜಯನಗರಕ್ಕೆ ಹೊಳೆ ನೀರ ಮೇಲೆ ತೇಲುವ ದೋಣಿಗಳಲ್ಲಿ ಹೂವಿನ ಸರಬರಾಜು; ಮುಖ್ಯವಾಗಿ ರಾಜಕೀಯ ಧರ್ಮೋ- ಸಾಂಸ್ಕೃತಿಕ ಕವಚ ತೊಡಿಸಿದ ನೆಲೆ. ವಿಜಯನಗರದ ರಾಜಗುರು ಪರಂಪರೆಯಲ್ಲಿ ಬಂದ ಶ್ರೀಶೈಲ ನಿಡುಮಾಮಿಡಿ ಮಹಾಸಂಸ್ಥಾನ ಪೀಠದ ಜ॥ ಕರಿಬಸವೇಂದ್ರರು ರಾಜಗುರುಗಳಾಗಿದ್ದವರು. ಅವರ ಗದ್ದುಗೆ ಸಮೀಪದ ಭಾವಿಹಳ್ಳಿಯಲ್ಲಿದೆ. ಈ ದೃಷ್ಟಿಯಿಂದ ಹರಪನಹಳ್ಳಿ ವಿಜಯನಗರ ಕಾಲದಲ್ಲಿ ಒಂದು ಸಾಂಸ್ಕೃತಿಕ ಸ್ನೇಹಸೇತು ಎನ್ನಬೇಕು.

ಇಂತಹ ನೆಲೆಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ೧೩ನೇ ವಾರ್ಷಿಕ ಸಮ್ಮೇಳನವು ನಡೆಯುತ್ತಿದೆ. ಇತಿಹಾಸ ಅಕಾದೆಮಿಯ ೮ನೇ ವಾರ್ಷಿಕ(೧೯೯೪) ಸಮ್ಮೇಳನಾಧ್ಯಕ್ಷರೂ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳೂ ಆದ ಸನ್ಮಾನ್ಯ ಡಾ॥ ಎಂ. ಎಂ. ಕಲಬುರ್ಗಿ ಅವರು ಇತಿಹಾಸ ದರ್ಶನದ ೧೪ನೇ ಸಂಪುಟವನ್ನು ಅನಾವರಣಗೊಳಿಸುತ್ತಿರುವುದು ಗೌರವಪೂರ್ಣ ಸಂತೋಷದ ವಿಷಯ. ಅಕಾದೆಮಿಯು ತನ್ನೆಲ್ಲ ಸದಸ್ಯರ ಒತ್ತಾಸೆಯಿಂದ, ಜಿಲ್ಲಾ ಘಟಕಗಳ ಚಟುವಟಿಕೆಗಳ ಕಾರ್ಯಶೀಲತೆಯಿಂದ, ನಾಡವರ ಕುತೂಹಲ ಆಸಕ್ತಿಗಳನ್ನು ಬೆಳೆಸಿದೆ. ಇತಿಹಾಸ ಪ್ರಶಸ್ತಿ ಪರೀಕ್ಷೆ, ಸಮ್ಮೇಳನದಲ್ಲಿ ಪಾಲ್ಗೊಳ್ಳುವ ವಿದ್ವಾಂಸರು, ಇತಿಹಾಸ ದರ್ಶನದಲ್ಲಿ ಪ್ರಕಟವಾಗುತ್ತಿರುವ ಅವರ ಪ್ರಬಂಧಗಳು ಇವಕ್ಕೆಲ್ಲ ಒಂದು ಸಮರ್ಥ ಪುರಾವೆ.

ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಯು. ಕಾಮತ್‌ರ 'ಬದುಕು - ಬರಹ ಸಮೀಕ್ಷೆ' ಕಾರ್ಯಕ್ರಮವನ್ನು ೧೯೯೯ನೇ ಏಪ್ರಿಲ್ ೩ರಂದು ಅವರಿಗೆ ೬೩ನೇ ವಯಸ್ಸು ತುಂಬಿದ ಸಂದರ್ಭದಲ್ಲಿ ಅಕಾದೆಮಿಯು ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಹಯೋಗದೊಡನೆ ಯಶಸ್ವಿಯಾಗಿ ನಡೆಸಿತು. ಅಧ್ಯಕ್ಷರಿಗೆ ಸಾಂದರ್ಭಿಕ ಗೌರವ ಸಲ್ಲಿಸುವ ಸಲುವಾಗಿ, ಹಳೆಯ ಸುದ್ದಿ ಆಗಬಾರದೆನ್ನುವ ದೃಷ್ಟಿಯಿಂದ, ಆ ಸಂಬಂಧದ ಒಂದು ಛಾಯಾಚಿತ್ರವನ್ನು ಪ್ರಸ್ತುತ ಸಂಪುಟದಲ್ಲಿ ಅಳವಡಿಸಲಾಗಿದೆ.

ಅಕಾದೆಮಿಯ ಸಮ್ಮೇಳನದಲ್ಲಿ ಸದಸ್ಯರು ಬಹಳ ಪರಿಶ್ರಮ ವಹಿಸಿ, ವಿದ್ವತ್ ಪ್ರಬಂಧಗಳನ್ನು ಹೊಸ ಶೋಧಗಳೊಡನೆ ಪಕ್ವ ಪ್ರಯತ್ನಗಳಿಂದ ಮಂಡಿಸುತ್ತಿರುವುದು ಸ್ವಾಗತಾರ್ಹ ವಿಷಯ. ಪ್ರಸ್ತುತ ಸಂಪುಟದಲ್ಲಿ ಅಕಾದೆಮಿ ಸದಸ್ಯರು ಮಂಡಿಸಿದ ಪ್ರಬಂಧಗಳನ್ನು ಮಾತ್ರ ಪ್ರಕಟಿಸಲಾಗಿದೆ.

ನಮ್ಮೆಲ್ಲ ಕಾರ್ಯಗಳಲ್ಲಿ ಸಹಕರಿಸುತ್ತಿರುವ ಕಾರ್ಯಕಾರಿ ಸಮಿತಿ ಸದಸ್ಯರಿಗೆ, ಪದಾಧಿಕಾರಿಗಳಿಗೆ ಮತ್ತು ಕಛೇರಿ ಕಾರ್ಯದರ್ಶಿ ಶ್ರೀ ವೇ. ಬು. ಸೋಮಶೇಖರ್, ಈ ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಒಡೆಯರಾದ ಶ್ರೀ ಅಶೋಕ್ ಕುಮಾರ್, ವ್ಯವಸ್ಥಾಪಕ ಶ್ರೀ ವೆಂಕಟೇಶ್ ಹಾಗು ಡಿಟಿಪಿ ಸಿಬ್ಬಂದಿ ವರ್ಗದ ಶ್ರೀಮತಿ ಜಿ. ಸತ್ಯಕುಮಾರಿ, ಶ್ರೀಮತಿ ಗಾಯತ್ರಿ ಮಂಜುನಾಥ್, ಕು॥ ಆರ್. ಸುನೀತ ಹಾಗು ಕು॥ ಎಸ್. ರೋಹಿಣಿ ಅವರುಗಳಿಗೆ ನಮ್ಮ ಕೃತಜ್ಞತೆಗಳು.

೭.೬.೧೯೯೯ : ಬೆಂಗಳೂರು
ಶ್ರೀ ಪ್ರಮಾಥಿ ಸಂವತ್ಸರ, ಜೇಷ್ಠಮಾಸ, ಅಷ್ಟಮಿ,
ಸೋಮವಾರ

★ ಎಂ. ಜಿ. ನಾಗರಾಜ್
★ ಪಿ. ವಿ. ಕೃಷ್ಣಮೂರ್ತಿ

# ಕರ್ನಾಟಕ ಇತಿಹಾಸ ಅಕಾದೆಮಿ ( ರಿ., )

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೧೫.೧೧.೧೯೯೮ರಲ್ಲಿ ಆಯ್ಕೆಗೊಂಡಂತೆ)

★ *ಆಜೀವ ಗೌರವ ಅಧ್ಯಕ್ಷರು*

ಪ್ರೊ ॥ ಜಿ. ಎಸ್. ದೀಕ್ಷಿತ್, ಧಾರವಾಡ

★ *ಅಧ್ಯಕ್ಷರು*

ಡಾ ॥ ಸೂರ್ಯನಾಥ ಕಾಮತ್, ಬೆಂಗಳೂರು

★ *ಉಪಾಧ್ಯಕ್ಷರು*

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು

ಪ್ರೊ ॥ ಲಕ್ಷ್ಮಣ್ ತೆಲಗಾವಿ, ಹಂಪಿ

★ *ಪ್ರಧಾನ ಕಾರ್ಯದರ್ಶಿ*

ಡಾ ॥ ಎಚ್. ಎಸ್. ಗೋಪಾಲರಾವ್, ಬೆಂಗಳೂರು

★ *ಕಾರ್ಯದರ್ಶಿಗಳು*

ಡಾ ॥ ಎಚ್. ಆರ್. ರಘುನಾಥಭಟ್, ಧಾರವಾಡ

ಡಾ ॥ ಕೆ. ವಸಂತಲಕ್ಷ್ಮಿ, ಬೆಂಗಳೂರು

★ *ಕೋಶಾಧ್ಯಕ್ಷರು*

ಶ್ರೀ ಎಂ. ಬಿ. ಪಾಟೀಲ್, ಬೆಂಗಳೂರು

★ *ಸದಸ್ಯರು*

ಶ್ರೀ ತ. ರಂ. ಕೃಷ್ಣಗೌಡ, ಬೆಂಗಳೂರು
ಪ್ರೊ ॥ ಬಿ. ರಾಜಶೇಖರಪ್ಪ, ಚಿತ್ರದುರ್ಗ
ಡಾ ॥ ಚೆನ್ನಕ್ಕ ಪಾವಟೆ, ಧಾರವಾಡ
ಡಾ ॥ ಎ. ಕೆ. ಶಾಸ್ತ್ರಿ, ಶಿರಸಿ
ಶ್ರೀ ಗುರುಮೂರ್ತಿ ಪೆಂಡಕೂರು, ಹಗರಿಬೊಮ್ಮನಹಳ್ಳಿ
ಡಾ ॥ ದೇವರ ಕೊಂಡಾರೆಡ್ಡಿ, ಕಮಲಾಪುರ
ಶ್ರೀ ವ್ಹಿ. ಸಿ. ಮಾಲಗತ್ತಿ, ಬೆಳಗಾವಿ
ಪ್ರೊ ॥ ವಸಂತ ಕುಷ್ಟಗಿ, ಗುಲಬರ್ಗಾ
ಶ್ರೀ ಕೇಶವ ಉಮರ್ಜಿ, ಬಿಜಾಪುರ ಜಿಲ್ಲೆ
ಡಾ ॥ ಕೆ.ಜಿ. ವಸಂತ ಮಾಧವ, ದಕ್ಷಿಣ ಕನ್ನಡ ಜಿಲ್ಲೆ
ಶ್ರೀ ಸಿದ್ಧಯ್ಯ ಹಿರೇಮಠ, ಶಿವಮೊಗ್ಗ
ಡಾ ॥ ಎಂ. ಎಸ್. ಕೃಷ್ಣಮೂರ್ತಿ, ಮೈಸೂರು
ಡಾ ॥ ರು. ಮ. ಷಡಕ್ಷರಯ್ಯ, ಧಾರವಾಡ

# ಪರಿವಿಡಿ

## ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ "ಸರ್ವಾಧ್ಯಕ್ಷತೆ" ಗೌರವ ಪಡೆದವರು

| ಕ್ರಮಾಂಕ | ವರ್ಷ | ಸ್ಥಳ | ಹೆಸರು |
|---|---|---|---|
| ೧. | ೧೯೮೭ | ಬೆಂಗಳೂರು | ಡಾ॥ ಎಂ. ಚಿದಾನಂದಮೂರ್ತಿ |
| ೨. | ೧೯೮೮ | ತುಮಕೂರು | ಡಾ॥ ಜಿ. ಎಸ್. ಗಾಯಿ |
| ೩. | ೧೯೮೯ | ಗದಗ | ಡಾ॥ ಶ್ರೀನಿವಾಸ ರಿತ್ತಿ |
| ೪. | ೧೯೯೦ | ದಾವಣಗೆರೆ | ಡಾ॥ ಎಸ್.ಆರ್. ರಾವ್ |
| ೫. | ೧೯೯೧ | ಚಿತ್ರದುರ್ಗ | ಡಾ॥ ಬಾ.ರಾ. ಗೋಪಾಲ್ |
| ೬. | ೧೯೯೨ | ರಾಯಚೂರು | ಡಾ॥ ಕೆ. ವಿ. ರಮೇಶ್ |
| ೭. | ೧೯೯೩ | ಮೈಸೂರು | ಡಾ॥ ಅ.ಸುಂದರ |
| ೮. | ೧೯೯೪ | ಸೊಂಡೂರು | ಡಾ॥ ಎಂ.ಎಂ. ಕಲಬುರ್ಗಿ |
| ೯. | ೧೯೯೫ | ಬೆಳಗಾವಿ | ಡಾ॥ ಎ. ವಿ. ನರಸಿಂಹಮೂರ್ತಿ |
| ೧೦. | ೧೯೯೬ | ಧಾರವಾಡ | ಡಾ॥ ಜಿ. ಎಸ್. ದೀಕ್ಷಿತ್ |
| ೧೧. | ೧೯೯೭ | ಶಿರಸಿ | ಪ್ರೊ॥ ಕೆ.ಅಭಿಶಂಕರ್ |
| ೧೨. | ೧೯೯೮ | ಬೆಂಗಳೂರು | ಡಾ॥ ಎಸ್. ನಾಗರಾಜು |

ಬೆಂಗಳೂರಿನಲ್ಲಿ ನಡೆದ ಹನ್ನೆರಡನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಡಾ॥ ಎಸ್. ನಾಗರಾಜು



ಅಕಾದೆಮಿಯ ೧೨ನೇ ವಾರ್ಷಿಕ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಡಾ॥ ಎಸ್. ನಾಗರಾಜು, ಶ್ರೀ ಡಿ. ಬಿ. ಕಲ್ಮಣ್‌ಕರ್ (ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಗಳು), ಪ್ರೊ॥ ಜಿ. ಎಸ್. ದೀಕ್ಷಿತ್, ಡಾ॥ ಸೂರ್ಯನಾಥ ಕಾಮತ್, ಮತ್ತು ಶ್ರೀ ಎಂ. ಜಿ. ನಾಗರಾಜ್



ಅಕಾದೆಮಿಯ ೧೨ನೇ ವಾರ್ಷಿಕ ಸಮ್ಮೇಳನದಲ್ಲಿ ಇತಿಹಾಸ ದರ್ಶನ ಸಂಪುಟ ೧೩ನ್ನು ಬಿಡುಗಡೆ ಮಾಡುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪ್ರೊ॥ ಎನ್. ಬಸವಾರಾಧ್ಯ, ಮಾನ್ಯ ಶ್ರೀ ಡಿ. ಬಿ. ಕಲ್ಮಣ್‌ಕರ್, ಡಾ॥ ಎಸ್. ನಾಗರಾಜು ಹಾಗು ಡಾ॥ ಎಚ್. ಎಸ್. ಗೋಪಾಲರಾವ್,



ಪ್ರೇಕ್ಷಕ ವೃಂದ






ಡಾ॥ ಸೂರ್ಯನಾಥ ಯು. ಕಾಮತ್ ಅವರ 'ಬದುಕು-ಬರಹ ಸಮೀಕ್ಷೆ' ಸಂದರ್ಭದಲ್ಲಿ ಕಾಮತ್ ದಂಪತಿಗಳಿಗೆ ಅಭಿನಂದನೆ; ಡಾ॥ ಎಂ. ಕೆ. ಎಲ್. ಎನ್. ಶಾಸ್ತ್ರೀ, ಶ್ರೀ ನಿಟ್ಟೂರು ಶ್ರೀನಿವಾಸರಾವ್, ಡಾ॥ ಶ್ರೀನಿವಾಸ್ ಹಾವನೂರ್



ಶಿವಮೊಗ್ಗ ಜಿಲ್ಲಾ ಘಟಕದ 'ಇತಿಹಾಸ' ಕಾರ್ಯಕ್ರಮದಲ್ಲಿ ಜ॥ ಶ್ರೀ ಶ್ರೀ ಶ್ರೀ ಮಲ್ಲಿಕಾರ್ಜುನ ಮರುಘರಾಜೇಂದ್ರ ಮಹಾಸ್ವಾಮಿಗಳು, ಶ್ರೀ ಎಂ. ಎಲ್. ಶಿವಶಂಕರ್, ಡಾ॥ಸೂರ್ಯನಾಥ ಕಾಮತ್, ಜಯದೇವಪ್ಪ ಜೈನಕೇರಿ ಹಾಗು ಇತರ ಗಣ್ಯ ಅತಿಥಿಗಳು

# ಸಮ್ಮೇಳನಾಧ್ಯಕ್ಷರ ಭಾಷಣ

***ಸಭೆಗೆ ವಂದನೆ***

ಕರ್ನಾಟಕ ಇತಿಹಾಸ ಅಕಾದೆಮಿಯ ಈ ಹನ್ನೆರಡನೆಯ ಸಮ್ಮೇಳನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದ್ದಕ್ಕಾಗಿ ಈ ಅಕಾದೆಮಿಯ ಗೌರವ ಅಧ್ಯಕ್ಷರೂ, ನನಗೆ ಗುರು ಸಮಾನರೂ, ಹಿತೈಷಿಗಳು ಆದ ಸನ್ಮಾನ್ಯ ಪ್ರೊಫೆಸರ್ ಜಿ. ಎಸ್. ದಿಕ್ಷಿತ್‌ರವರು ಮತ್ತು ಅಧ್ಯಕ್ಷರೂ, ಸನ್ಮಿತ್ರರೂ ಆದ ಡಾ॥ ಸೂರ್ಯನಾಥ ಕಾಮತ್ ಹಾಗೂ ಕಾರ್ಯಕಾರಿ ಸಮಿತಿಯ ಎಲ್ಲ ಪದಾಧಿಕಾರಿಗಳಿಗೂ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುವುದು ನನ್ನ ಆದ್ಯ ಕರ್ತವ್ಯ. ನನ್ನ ವೃತ್ತಿ ಜೀವನದ ಮೊದಲರ್ಧ ಭಾಗದಲ್ಲಿ ಕರ್ನಾಟಕದ ಪುರಾತತ್ತ್ವ ಮತ್ತು ಇತಿಹಾಸದ ಬಗ್ಗೆ ಹೊಸ ಹಾದಿಗಳನ್ನು ಹುಡುಕಿ ಸಂಶೋಧನೆಯನ್ನು ಮಾಡಬೇಕೆಂಬ ಉತ್ಸಾಹದಿಂದ ಸ್ವಲ್ಪ ಮಟ್ಟಿನ ಕಾರ್ಯ ನಿರ್ವಹಿಸಿದ್ದರೂ, ಕಳೆದ ಎರಡು ದಶಕಗಳನ್ನು ಈ ನಾಡಿನ ಹೊರಗೇ ಕಳೆಯಬೇಕಾದ್ದರಿಂದ, ಈ ಅವಧಿಯಲ್ಲಿ ಕರ್ನಾಟಕದ ಬಗ್ಗೆ ನನ್ನ ಕೊಡುಗೆ ಅತ್ಯಲ್ಪ ಎಂದು ಹೇಳಬಹುದು. ಹೀಗಿದ್ದರೂ ಈ ಅಕಾದೆಮಿಯವರು ನನ್ನನ್ನು ಬರಮಾಡಿಕೊಂಡಿರುವುದು, ಕರ್ನಾಟಕದ ಇತಿಹಾಸ-ಪುರಾತತ್ತ್ವದ ಬಗೆಗಿನ ನನ್ನ ಸಾಧನೆಗಳಿಗಿಂತಲೂ ಹೆಚ್ಚಾಗಿ, ನನ್ನ ಮುಂದಿನ ಸಾಧನೆಗಳ ಕಾರ್ಯಕ್ಷೇತ್ರ ಕರ್ನಾಟಕವೇ ಆಗಲಿ ಎಂಬ ಆಶಯದಿಂದಲೇ ಎಂದು ನನ್ನ ಅನಿಸಿಕೆ. ಈ ಬಗ್ಗೆ ಅವರ ಭರವಸೆಯನ್ನು ಈಡೇರಿಸುವೆನು ಎನ್ನುವ ಆಶ್ವಾಸನೆಯನ್ನು ಮಾತ್ರ ಸದ್ಯಕ್ಕೆ ನೀಡಬಲ್ಲೆ. ಈ ನಿವೃತ್ತ ಅವಧಿಯಲ್ಲೂ ಇಂತಹ ಆಶ್ವಾಸನೆಯನ್ನು ಕೊಡಬಲ್ಲೆನಾದರೆ, ಇದಕ್ಕೆ ಕಾರಣರು ನನ್ನನ್ನು ಈ ರಂಗಕ್ಕೆ ತಂದು ಪ್ರೋತ್ಸಾಹ ನೀಡಿ ಮಾರ್ಗದರ್ಶನವನ್ನು ಮಾಡಿದ ನನ್ನ ಗುರುವರ್ಯರಾದ ಪ್ರೊಫೆಸರ್ ಕೆ. ಎ. ನೀಲಕಂಠಶಾಸ್ತ್ರಿಗಳು ಮತ್ತು ಡಾ॥ ಎ. ಶೇಷಾದ್ರಿಯವರು ಎಂದು ಗೌರವಪೂರ್ವಕವಾಗಿ ಸ್ಮರಿಸುತ್ತೇನೆ. ಇದೇ ರೀತಿಯಲ್ಲಿ ಅಷ್ಟೇ ಆಸಕ್ತಿಯಿಂದ ನನಗೆ ರೂಪುಗೊಟ್ಟವರು ನನ್ನ ಇನ್ನೊಬ್ಬ ಗುರುಗಳೂ, ಹಿತೈಷಿಗಳೂ ಆದ ಪ್ರೊಫೆಸರ್ ಶ್ರೀನಿವಾಸ ರಿತ್ತಿಯವರಿಗೆ ನನ್ನ ಗೌರವವನ್ನು ಅರ್ಪಿಸಿ ಇಂದಿನ ಪ್ರಸ್ತಾಪಕ್ಕೆ ಬರುತ್ತೇನೆ.

## I

ಪ್ರಸ್ತುತ ಭಾಷಣದ ಬಗ್ಗೆ ವಿಷಯವನ್ನು ಆರಿಸಿಕೊಳ್ಳಲು ಹಿಂದಿನ ಸಮ್ಮೇಳನಗಳಲ್ಲಿ ಈ ವೇದಿಕೆಯನ್ನು ಅಲಂಕರಿಸಿದ ಎಲ್ಲರ ಭಾಷಣಗಳನ್ನೂ **ಇತಿಹಾಸ ದರ್ಶನ**ದ ಪುಟಗಳಿಂದ ಒಮ್ಮೆ ಒಟ್ಟಾಗಿ ಓದಿದಾಗ ಒಂದು ವಿಷಯ ಸ್ಪಷ್ಟವಾಯಿತು. ಈ ನಾಡಿನ ಇತಿಹಾಸ ರಂಗದಲ್ಲಿ ಗಣನೀಯ ಸಾಧನೆಗಳನ್ನು ಮಾಡಿರುವ ಈ ಪೂರ್ವಸೂರಿಗಳು ಹೇಳಿರುವ ರಂಗ ವಿಮರ್ಶೆ, ಮಾರ್ಗದರ್ಶನ ಇವುಗಳ ವಿಷಯದಲ್ಲಿ ನಾನು ಹೊಸದಾಗಿ ಹೇಳಬಹುದಾದುದು ಅಲ್ಪ ಎಂಬುದು. ಆದ್ದರಿಂದ ಈ ವಿಷಯಗಳನ್ನು ಹೊರತುಪಡಿಸಿ ನನ್ನ ನಲವತ್ತು ವರ್ಷಗಳ ಇತಿಹಾಸ- ಪುರಾತತ್ತ್ವದ ಅಧ್ಯಯನದ, ಅಧ್ಯಾಪನದ ಉದ್ದಕ್ಕೂ ಎದುರಿಸುತ್ತಿರುವ ಈ ರಂಗಕ್ಕೆ ಸಂಬಂಧಿಸಿದ ಕೆಲವು ವೈಚಾರಿಕ ಸಮಸ್ಯೆಗಳನ್ನೂ, ಅನಿಸಿಕೆಗಳನ್ನೂ ಈ ವಿದ್ವತ್ ಸಭೆಯೊಡನೆ ಹಂಚಿಕೊಳ್ಳಬೇಕೆಂದು ಆಶಿಸಿದ್ದೇನೆ. ಈ ವಿಚಾರಗಳು ಕರ್ನಾಟಕದ ಇತಿಹಾಸವೂ ಸೇರಿದಂತೆ ಇಡೀ ಇತಿಹಾಸಶಾಸ್ತ್ರದ ಮೂಲಭೂತ ಸ್ವರೂಪವನ್ನು ಕುರಿತದ್ದು. ತಿಳಿದ ಕೆಲವು ಮಾದರಿಗಳನ್ನು ಅನುಸರಿಸಿ ಸಂಶೋಧನೆಯಲ್ಲಿ ತೊಡಗುವುದಕ್ಕಿಂತ ಇನ್ನೂ ಆಳವಾಗಿ ಹೋಗಿ ಆ ಮಾದರಿಗಳ ಸ್ವರೂಪವೇನು? ಅವೆಷ್ಟು ನಿರ್ದಿಷ್ಟ? ಈ ಮಾದರಿಗಳನ್ನು ಅನುಸರಿಸಿ ಪುನಾರಚನೆ ಮಾಡಿದ ಇತಿಹಾಸ ತನ್ನ ಗುರಿಯನ್ನು ಮುಟ್ಟಬಲ್ಲದೇ? ಮೊದಲಾದ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವ ಪ್ರಯತ್ನ ಈ ದಿನದ ವಿಚಾರದ ವಸ್ತುವೆಂದು ಸ್ಥೂಲವಾಗಿ ಹೇಳಬಹುದು.

ಇಂದು ನಾವು **ಇತಿಹಾಸ ಮತ್ತು ಪುರಾತತ್ತ್ವ** ಎಂಬ ಪದಪುಂಜವನ್ನು ಸರ್ವೇಸಾಮಾನ್ಯವಾಗಿ ಒಂದೇ ಶಾಸ್ತ್ರವೇನೋ ಎನ್ನುವಂತೆ ಬಳಸುತ್ತಿದ್ದೇವೆಯಾದರೂ, ಸ್ವಲ್ಪ ವಿಮರ್ಶಿಸಿ ನೋಡಿದರೆ ಇವೆರಡೂ ವಿಭಿನ್ನ ಸ್ವರೂಪದ ಶಾಸ್ತ್ರಗಳು. ಇತಿಹಾಸ ರಚನೆಗೆ ಉಪಯೋಗಿಸುವ ಮೂಲ ಸಾಮಗ್ರಿಗಳು ಅಂದರೆ ದಾಖಲೆಗಳು, ಬರಹಗಳು ಇತ್ಯಾದಿಗಳೆಲ್ಲಾ ಶಾಬ್ದಿಕ, ಬಹುವಾಚಾಳಿ. ಅವು ಹೇಳುವ ವಿಷಯಗಳೂ ಅಪಾರ. ಅವುಗಳನ್ನು ತಾರ್ಕಿಕ ಮೂಸೆಯಲ್ಲಿ ಕರಗಿಸಿ, ಶೋಧಿಸಿ, ವ್ಯಕ್ತಿನಿಷ್ಠ ಅಭಿಪ್ರಾಯಗಳು, ಸ್ವಪ್ರಶಂಸೆ, ಆಡಂಬರ ಇತ್ಯಾದಿ ಅಸತ್ಯದ ಕಿಟ್ಟವನ್ನು ಬೇರ್ಪಡಿಸಿ ಸತ್ಯಾಂಶವನ್ನಬಹುದಾದುದನ್ನು ಹೊರತೆಗೆದು ಉಪಯೋಗಿಸಿಕೊಳ್ಳುವುದು ಇತಿಹಾಸಗಾರನ ವಿಧಾನ. ಆ ರೀತಿ ಪುನಾರಚಿತವಾದ ಇತಿಹಾಸದ ಜಯಾಪಜಯಗಳೆಲ್ಲಾ ಇತಿಹಾಸಕಾರನ ವಿಶ್ಲೇಷಣಾ ಶಕ್ತಿಯನ್ನು ಅವಲಂಬಿಸಿರುತ್ತದೆ.

ತದ್ವಿರುದ್ಧವಾಗಿ ಪುರಾತತ್ವದ ಮೂಲವಸ್ತುಗಳಾದರೋ ಜಡಪದಾರ್ಥಗಳು, ಅಷ್ಟೇ ಮೌನಿ. ಅವು ಏನನ್ನೂ ತಾವಾಗಿಯೇ ಹೇಳುವುದಿಲ್ಲ. ಅವುಗಳ ಸ್ವರೂಪ, ಪರಿಸರ, ಪರಸ್ಪರ ಸಂಬಂಧಗಳು ಇತ್ಯಾದಿಗಳನ್ನು ಸಮನ್ವಯಗೊಳಿಸಿ, ಪ್ರಾಕ್‌ಚರಿತ್ರೆಯ ಕಲ್ಪನೆಯನ್ನು ಮಾಡಿಕೊಳ್ಳುವುದು ಪುರಾತತ್ವದ ವಿಧಾನ. ಅಂದರೆ ಇತಿಹಾಸದ ಜೀವಾಳ ವಿಶ್ಲೇಷಣೆಯಾದರೆ, ಪುರಾತತ್ವದ ಜೀವಾಳ ಸಂಯೋಜನೆ.

ಈ ಎರಡೂ ರಂಗಗಳು ಬೆಳೆದು ಬಂದಿರುವ ರೀತಿ ಸಹ ವಿಭಿನ್ನ. ಈ ಜಗತ್ತಿನ ಇತಿಹಾಸದಲ್ಲಿ 'ಮಾನವನ' ವಿಕಾಸದೊಡನೆಯೇ ಚರಿತ್ರೆಯ ಉಗಮ ಸಹ ಆಗಿರಬೇಕು ಎಂದು ನನ್ನ ಅನಿಸಿಕೆ. ಪ್ರತಿ ವ್ಯಕ್ತಿಗೂ ತನ್ನ ನಡವಳಿಕೆ, ಗುರಿಸಾಧನಾ ಮಾರ್ಗಗಳು ಇವನ್ನು ಗುರುತಿಸಿಕೊಳ್ಳಲು ನೆನಪು ಹೇಗೆ ಅತ್ಯವಶ್ಯಕವೋ, ಹಾಗೆ ಸಮಾಜಕ್ಕೂ ತನ್ನ ಪೂರ್ವಕಾಲದ ನೆನಪು ಅವಶ್ಯ. ಅದೇ ಇತಿಹಾಸ. ಹಲವಾರು ಸಮಾಜಗಳಲ್ಲಿ ಮತ್ತು ಬುಡಕಟ್ಟುಗಳಲ್ಲಿ ತಮ್ಮ ಬಗ್ಗೆ ಕಂಡು ಬರುವ ಕಥೆಗಳೂ, ಪುರಾಣಗಳೂ ಒಂದು ದೃಷ್ಟಿಯಲ್ಲಿ ಅವುಗಳ ಇತಿಹಾಸವೇ. ಹೀಗೆ ಅತಿ ಪ್ರಾಚೀನ ಕಾಲದಲ್ಲೇ ಪ್ರಾರಂಭವಾದ ಈ ರಂಗದ ರಚನೆಗಳೆಲ್ಲಾ ಬಹು ಇತ್ತೀಚಿನವರೆಗೂ ಸಾಹಿತ್ಯದ ಒಂದು ಪ್ರಕಾರವಾಗಿಯೇ ಸಮಂಜಸವಾಗಿ ಗುರುತಿಸಲಾಗುತ್ತಿತ್ತು. ಕಳೆದ ೩-೪ ಶತಮಾನಗಳಿಂದ ಬೆಳೆದಿರುವ ವಾಸ್ತವವಾದ ಮತ್ತು ವಿಜ್ಞಾನದ ವಿಚಾರಧಾರೆಗಳ ಪ್ರಭಾವದಿಂದ, ಸಾಹಿತ್ಯವಾಗಿದ್ದ ಈ ರಂಗ ವಿಜ್ಞಾನದ ಒಂದು ಪ್ರಕಾರವಾಗಿ ರೂಪುಗೊಳ್ಳಲು ಪ್ರಯತ್ನಿಸುತ್ತ ತನ್ನದೇ ಆದ ಹೊಸ ಮಾರ್ಗ ರೀತಿ ವಿಧಾನಗಳನ್ನು ಅಳವಡಿಸಿಕೊಳ್ಳುತ್ತಿದೆ. ಇದು ಬಹು ಸ್ವಾಗತಾರ್ಹ ಹೆಜ್ಜೆಯಾದರೂ, ನನ್ನ ದೃಷ್ಟಿಯಲ್ಲಿ ಅತಿ ಪ್ರಯಾಸದ ಕೆಲಸ . ಅದರಲ್ಲೂ ಇತ್ತೀಚಿನ ದಿನಗಳಲ್ಲಿ, 'ಹಿಸ್ಟರಿ ಟುಡೆ', 'ಫಿಲಾಸಫಿ ಆಫ್ ಹಿಸ್ಟರಿ' ಇತ್ಯಾದಿ ವಿದ್ವತ್ಪತ್ರಿಕೆಗಳಲ್ಲಿ ನಡೆಯುತ್ತಿರುವ ಐತಿಹಾಸಿಕ ಸತ್ಯದ ಸ್ವರೂಪ, ಇತಿಹಾಸದ ಉಪಯೋಗ-ದುರುಪಯೋಗ ಇತ್ಯಾದಿ ಚರ್ಚೆಗಳನ್ನೂ, ವಿಭಿನ್ನ ದೃಷ್ಟಿಕೋನಗಳಿಂದ ಬರೆದ ಪಂಥನಿಷ್ಠ ಇತಿಹಾಸ ಗ್ರಂಥಗಳನ್ನೂ, ವರ್ಗಗಳ ಹೆಚ್ಚಳವನ್ನು ಸಾಧಿಸಲೋ ಎಂಬಂತೆ ರಚಿತವಾಗುತ್ತಿರುವ ಚರಿತ್ರೆಗಳನ್ನೂ ನೋಡಿದರೆ, ಇತಿಹಾಸದ ವಿಜ್ಞಾನೀಕರಣ ಪಕ್ವವಾಗಿಲ್ಲವೆಂದು ಸ್ಪಷ್ಟವಾಗುತ್ತದೆ. ಆದರೂ ಇತಿಹಾಸಕಾರರು ತಾವು ಹೇಳುವದು ವೈಜ್ಞಾನಿಕ ಮಾರ್ಗಗಳನ್ನು ಅನುಸರಿಸಿ ಪುನಾರಚಿಸಿದ ಇತಿಹಾಸ ಎಂದು ಪ್ರತಿಪಾದಿಸಿ ಜನ ನಂಬುಗೆಯನ್ನು ಸಂಪಾದಿಸಲು ಪ್ರಯತ್ನಿಸುವುದನ್ನು ನೈತಿಕ ಪ್ರಶ್ನೆಯಾಗಿ ವಿಚಾರಿಸಬೇಕೆಂದು ಅನಿಸುತ್ತದೆ. ಈ ಇತಿಹಾಸರಂಗ ಇನ್ನೂ ಪರಿವರ್ತನಾ ಸ್ಥಿತಿಯಲ್ಲಿ ಇದೆ ಎಂಬುದೇ ನನ್ನ ಅನಿಸಿಕೆ. ಶಾಸ್ತ್ರದ ಬೆಳವಣಿಗೆಯಲ್ಲಿ ಇದು ಸಹ ಒಂದು ಐತಿಹಾಸಿಕ ಘಟ್ಟವೇ. ಆದರೂ ಈ ಸಂಧಿಕಾಲದಲ್ಲಿ ನಮ್ಮ ಇತಿಹಾಸ ರಚನಾವಿಧಾನ, ವಿಜ್ಞಾನವನ್ನು ಅನುಕರಿಸುವ ಪ್ರಯತ್ನದಲ್ಲಿ, ಅತ್ತ ಸಾಹಿತ್ಯಿಕವಾಗಿ ರೂಢಿಸಿಕೊಂಡಿದ್ದ ಕಲಾತ್ಮಕ ಸೊಗಡನ್ನು ಕಳೆದುಕೊಂಡಿದೆ, ಇತ್ತ ವಿಜ್ಞಾನದ ಗಟ್ಟಿ ಪ್ರಾಮಾಣಿಕತೆಯನ್ನು ಇನ್ನೂ ಪಡೆಯಲು ಆಗಿಲ್ಲ.

ಪುರಾತತ್ವ ಹುಟ್ಟಿದ್ದೇ ಇತ್ತೀಚೆಗೆ. ಅದರ ಉಗಮ ಭೂಗರ್ಭಶಾಸ್ತ್ರದಂಥ ಘಟ್ಟಿ ವಿಜ್ಞಾನ ಪರಂಪರೆಯಲ್ಲಿ ಪ್ರಾರಂಭದಿಂದಲೇ ವೈಜ್ಞಾನಿಕ ತರ್ಕ, ಕ್ರಮಗಳನ್ನು ಅಳವಡಿಸಿಕೊಂಡಿದ್ದ ಈ ರಂಗ ಈಗ ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರ, ಪರಿಸರ ವಿಜ್ಞಾನ, ಹವಾಮಾನ ವಿಜ್ಞಾನ, ಮೊದಲಾದ ಇತರ ವಿಜ್ಞಾನ ರಂಗಗಳ ಸಹಕಾರದೊಂದಿದೆ ಮತ್ತಷ್ಟು ಪುಷ್ಟವಾಗಿದೆ. ದೊರಕುವ ಆಧಾರಗಳ ಕೊರತೆಯೊಂದನ್ನು ಬಿಟ್ಟರೆ, ಪುರಾತತ್ವ ಪುನಾರಚನೆ ಹೆಚ್ಚು ತರ್ಕಸಮ್ಮತವಾಗಿದ್ದು ಇತರ ವಿಜ್ಞಾನಗಳೊಡನೆ ಸರಿಸಾಟಿಯಾಗಿ ನಿಲ್ಲುವ ಯೋಗ್ಯತೆಯನ್ನು ಗಳಿಸಿಕೊಂಡಿದೆ. ಪುರಾತತ್ವವು ವಿಶೇಷವಾಗಿ ಅಧ್ಯಯನ ಮಾಡುವ ಪ್ರಾಕ್ ಇತಿಹಾಸ ಕಾಲದಲ್ಲೂ ಮಾನವಕುಲವು ಸಮೂಹ, ವರ್ಗಗಳಾಗಿ ವಿಂಗಡಿತವಾಗಿದ್ದು, ಆ ಕಾಲದ ಪುರಾವಶೇಷಗಳು ಅವಕ್ಕೆ ಸಂಬಂಧಿಸಿದವೇ ಆದರೂ, ಆ ಅವಶೇಷಗಳೆಲ್ಲಾ ಆಯಾ ಸಂಸ್ಕೃತಿಯನ್ನು ನಡೆಸುವ ಕ್ರಿಯೆಯಲ್ಲಿ ಉತ್ಪನ್ನವಾದವುಗಳಾಗಿದ್ದು, ಅವು ಪುರಾತತ್ವಜ್ಞನಿಗೂ, ಆ ಪ್ರಾಕ್ ಸಂಸ್ಕೃತಿಗಳಿಗೂ, ನೇರ ಸಂಪರ್ಕವನ್ನು ಒದಗಿಸುತ್ತವೆ. ಮೂಲಮಾಹಿತಿಗಳ ಸ್ವರೂಪವನ್ನು ತಿರುಚಿಯೋ, ಬಣ್ಣಕೊಟ್ಟೋ ಪ್ರತಿಪಾದಿಸಬಹುದಾದ ಮಧ್ಯವರ್ತಿಗಳಿಗೆ ಇಲ್ಲಿ ಸ್ಥಾನವಿಲ್ಲದಿರುವುದೂ ಮತ್ತು ಇಂದಿನ ಸಮಾಜದಲ್ಲಿರುವ ಪುರಾತತ್ವಜ್ಞ, ತಾನು ಅಭ್ಯಸಿಸುತ್ತಿರುವ ಪ್ರಾಚೀನ ಸಮಾಜವನ್ನು ತನ್ನ ಸಮಾಜ-ವರ್ಗ-ಸನ್ನಿವೇಶಗಳೊಡನೆ ಏಕೀಕರಿಸದೆ ನಿಷ್ಪಕ್ಷಪಾತವಾಗಿ ನೋಡಬಲ್ಲವನಾಗಿರುವುದೂ ಇಂಥ ವೈಜ್ಞಾನಿಕ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ಸಹಾಯ ಮಾಡಿದೆ. ಅಂದರೆ, ಪುರಾತತ್ವಜ್ಞನೂ ಸಹ ದ್ರವ್ಯ, ಕಾಲ ಪರಿಮಿತಿಗಳಿಂದ ಯಾವುದೋ ದೇಶದ ಯಾವುದೋ ಸಂಸ್ಕೃತಿಯನ್ನು ಅಧ್ಯಯನ ಮಾಡುತ್ತಿದ್ದರೂ, ಅವನ ಪ್ರತಿಪಾದನೆ ಇಡೀ ಮಾನವಕುಲದ ವೃತ್ತಾಂತವನ್ನು ಪುನಾರಚಿಸುವ ಧಾಟಿಯಲ್ಲೆ ಇರುತ್ತದೆ.

ಈ ಪ್ರಸ್ತಾಪ ಪುರಾತತ್ವವು ಇತಿಹಾಸಕ್ಕಿಂತ ಉತ್ತಮ ಶಾಸ್ತ್ರ ಎಂದು ಸಾಧಿಸುವುದಕ್ಕಾಗಲೀ, ಇತಿಹಾಸ ಗ್ರಂಥಗಳು ಅಷ್ಟಾಗಿ ನಂಬಲನರ್ಹ ಎಂದು ಹೇಳುವುದಕ್ಕಾಗಲೀ ಅಲ್ಲ. ಈ ಎರಡು ಶಾಸ್ತ್ರಗಳೂ ಜ್ಞಾನರಂಗಕ್ಕೆ ಸಂಬಂಧಿಸಿದವು. ಮಾನವನ ಗತಕಾಲದ ಆಗುಹೋಗುಗಳನ್ನು ಪುನಃ ರಚಿಸುವುದೇ ಇವೆರಡೂ ಶಾಸ್ತ್ರಗಳ ಏಕೈಕ ಗುರಿ. ಇಂಥಹ ಸಂದರ್ಭದಲ್ಲಿ ಅವೆರಡರ ಸದ್ಯದ ಸ್ವರೂಪದ ವಿಭಿನ್ನತೆಯನ್ನು ಗುರುತು ಮಾಡಿಕೊಳ್ಳುವುದಷ್ಟೇ ಇದರ ಉದ್ದೇಶ.

# II

ಈ ಪ್ರಸ್ತಾಪದಿಂದಲೇ ಸಮವಾಹಿಯಾಗಿ ಉದ್ಭವವಾಗುವ ಎರಡನೇ ಪ್ರಶ್ನೆ, ಪುರಾತತ್ತ್ವ ರಂಗದ ಸಿದ್ಧಾಂತ - ಪ್ರಮೇಯಗಳನ್ನು ಅಳವಡಿಸಿಕೊಂಡು ಇತಿಹಾಸವನ್ನು ಸಹ ಇನ್ನೂ ಕಟ್ಟುನಿಟ್ಟಾದ ವಿಜ್ಞಾನವಾಗಿ ಬೆಳೆಸಲು ಸಾಧ್ಯವೇ ಎಂಬುದು. ಪರ್ಯಾಯವಾಗಿ ಹೇಳುವುದಾದರೆ ತರ್ಕಸಮ್ಮತವೂ, ವಸ್ತುನಿಷ್ಠವೂ ಆಗಿರುವ ಪುರಾತತ್ತ್ವದ ವಿಧಾನಗಳನ್ನು ಮಾಗದರ್ಶಿಯಾಗಿ ಇಟ್ಟುಕೊಂಡು ವ್ಯಕ್ತಿ, ವರ್ಗ, ಸಮೂಹ, ಪಂಥಗಳ ಏಕಪಕ್ಷೀಯ ವಿಚಾರಧಾರೆಗಳಿಂದ ಹೊರತುಪಡಿಸಿದ ಮಾನವ ಇತಿಹಾಸ ರಚನೆ ಸಾಧ್ಯವೇ ಎಂಬುದರ ಬಗ್ಗೆ ವಿಮರ್ಶೆ. ಮೇಲುನೋಟಕ್ಕೆ ಈ ಪ್ರಶ್ನೆಯೇ ಸ್ವವಿರೋಧಾತ್ಮಕವಾಗಿ ಕಾಣಿಸಬಹುದೇನೋ. ಈ ವಿಷಯವನ್ನು ಒಮ್ಮೆ ಚರ್ಚಿಸುತ್ತಿದ್ದಾಗ ವಿದ್ಯಾರ್ಥಿಯೊಬ್ಬರಿಂದ ಒಂದು ಮರುಪ್ರಶ್ನೆ ಎದುರಾಯಿತು. ಇಡೀ ಮಾನವ ಪ್ರಪಂಚವೇ ವ್ಯಕ್ತಿ, ವರ್ಗ, ಸಮೂಹ, ಪಂಥಗಳಿಂದ ಕೂಡಿದವುಗಳಾಗಿದ್ದು, ಅವುಗಳ ಕಾರ್ಯಾಚರಣೆಗಳೇ ಇತಿಹಾಸದ ವಸ್ತುವಾಗಿರುವಾಗ ಅದನ್ನು ಹೊರತುಪಡಿಸಿದ ಇತಿಹಾಸ ಎಂಬುದಾದರೂ ಇರುತ್ತದೆಯೇ? ಎಂಬುದು ಆ ಪ್ರಶ್ನೆ. ಈ ಪ್ರಶ್ನೆಗೆ ಸಮಾಧಾನ ನೀಡಿದಲ್ಲಿ ನಮ್ಮ ಚಿಂತನೆಯ ಹಾದಿ ಮತ್ತಷ್ಟು ಸ್ಪಷ್ಟವಾಗುತ್ತದೆ. ಈ ಮರುಪ್ರಶ್ನೆಗೆ ಎರಡು ರೀತಿಯ ಸಮಾಧಾನಗಳನ್ನು ನೀಡಬಹುದು.

ಮೊದಲನೆಯದು, ವ್ಯಕ್ತಿ, ಸಮಾಜ, ಪಂಥಗಳ ಸ್ವಕೀಯ ದೃಷ್ಟಿಕೋನಗಳಿಂದ ಪ್ರಭಾವಿತವಾಗುವುದು. ಶಾಬ್ದಿಕ ಆಧಾರಗಳನ್ನು ಉಪಯೋಗಿಸಿ ರಚಿತವಾಗುವ ಇತಿಹಾಸದಲ್ಲಿ ಮಾತ್ರ; ಅದರ ವ್ಯಾಪ್ತಿ ೩-೪ ಸಾವಿರ ವರ್ಷಗಳಿಗಿಂತ ಹೆಚ್ಚಲ್ಲ. ಅಲ್ಲದೆ ಇದರ ಪ್ರಭಾವ ಬಹಳ ಹೆಚ್ಚಾಗಿ ಚರಿತ್ರಕಾರನ ಸಮೀಪ ಕಾಲದ ಇತಿಹಾಸ ರಚನೆಯಲ್ಲಷ್ಟೇ ಕಾಣುತ್ತೇವೆ. ಆದರೆ ಮಾನವನ ಇತಿಹಾಸ ವ್ಯಾಪ್ತಿ ಸುಮಾರು ೨೦ ಲಕ್ಷ ವರ್ಷಗಳು. ಮೊದಲ ೧೯,೯೫,೦೦೦ ವರ್ಷಗಳ ನಿರೂಪಣೆಯಲ್ಲಿ ನಿಷ್ಪಾಕ್ಷಿಕ ದೃಷ್ಟಿ ಸಾಧ್ಯವಾಗಬಹುದಾದರೆ, ಕಳೆದ ಐದು ಸಾವಿರ ವರ್ಷಗಳ ಇತಿಹಾಸ ರಚನೆಯಲ್ಲಿ ಅದು ಏಕೆ ಸಾಧ್ಯವಾಗಬಾರದು ಎಂಬುದು ಸಾಮಾನ್ಯ ಸಮಾಧಾನ.

ಎರಡನೆಯದು ಇತಿಹಾಸದ ಸ್ವರೂಪದ ಕಲ್ಪನೆಗೆ ಸಂಬಂಧಿಸಿದ್ದು. ವೈಜ್ಞಾನಿಕವೂ, ವಸ್ತುನಿಷ್ಠವೂ, ಸತ್ಯಸಮೀಪಿಯೂ, ಆದ ಇತಿಹಾಸ ರಚನೆ ನಮ್ಮ ಉದ್ದಿಶ್ಯವಾಗಿದ್ದರೆ, ಅದನ್ನು ಸಾಧಿಸಲು ಇರುವ ತೊಡಕುಗಳೇನು, ನಿವಾರಣೆಯ ವಿಧಾನಗಳು ಹೇಗೆ, ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಇತಿಹಾಸ ರಚನೆಗೆ ದೊರಕುವ ಲಿಖಿತ ಅಥವಾ ಶಾಬ್ದಿಕ ಆಧಾರಗಳೆಲ್ಲವೂ ವ್ಯಕ್ತಿ, ಸಮೂಹ, ವರ್ಗ, ಪಂಥ ಇಂತಹ ಮೂಲಗಳಲ್ಲೇ ಉತ್ಪನ್ನವಾದವುಗಳಾಗಿ ಅವು ಸ್ವನಿಷ್ಠೆ, ಸ್ವಆಕಾಂಕ್ಷೆಗಳು, ದೃಷ್ಟಿಕೋನಗಳು ಇವುಗಳಿಂದ ನಿರ್ದೇಶಿಸಲ್ಪಟ್ಟು, ಅವುಗಳ ಯಾವ ನಿಷ್ಪಾಕ್ಷಿಕ ದೃಷ್ಟಿಯೂ ಇರಲು ಸಾಧ್ಯವಿಲ್ಲ ಎಂಬುದು ಮೊದಲನೆಯದು. ಸಮಾಜಸಹಜವಾಗಿ ಒಂದು ವರ್ಗ, ಪಂಥ ಸಮೂಹದ ಸನ್ನಿವೇಶದಲ್ಲೇ ಬೆಳೆದ ಇತಿಹಾಸಕಾರ ಸಹ ತನ್ನ ಹಿನ್ನೆಲೆಯಿಂದ ಹೊರಗಿರಲಾರನು ಎಂಬುದು ಎರಡನೆಯದು. ಈ ಸಂದೇಹಗಳು ಸಹಜವೂ ಹೆಚ್ಚು ಕಡಿಮೆ ಸತ್ಯವೂ ಹೌದು. ಆದರೂ ಸತ್ಯಾನ್ವೇಷಣೆಯೇ ಧ್ಯೇಯವಾಗಿದ್ದಲ್ಲಿ ನಿಷ್ಪಾಕ್ಷಿಕ ದೃಷ್ಟಿಕೋನವನ್ನು ಬೆಳೆಸಿಕೊಳ್ಳುವುದು ಮಾನವನ ಬೌದ್ಧಿಕ ಚೈತನ್ಯದಿಂದ ಹೊರಗಿರುವುದೇನೂ ಅಲ್ಲ. ಈ ಸಂದರ್ಭದಲ್ಲಿ ಕಾಲ-ದೇಶ-ಸಂದರ್ಭ ವಶದಿಂದ ಉತ್ಪನ್ನವಾಗುವ ಶಾಬ್ದಿಕ ಆಧಾರಗಳನ್ನೂ, ಇತಿಹಾಸ ರಚನೆಯನ್ನೂ ಸಮಾಜದ ಚಾರಿತ್ರಿಕ, ಪ್ರಕ್ರಿಯೆಯ ಒಂದು ಪ್ರಕ್ರಿಯಾತ್ಮಕ ಭಾಗ ಎಂದು ತಿಳಿಯಲು ಪ್ರಯತ್ನಿಸಿದಲ್ಲಿ ಸತ್ಯಶೋಧನೆಯತ್ತ ಒಂದು ಹೊಸ ದೃಷ್ಟಿಯೇ ತೆರೆದಂತಾಗುತ್ತದೆ. ಅಂದರೆ ಇತಿಹಾಸ ಪ್ರಕ್ರಿಯೆಯ ಅನೇಕ ಅಂಶಗಳಲ್ಲಿ ವ್ಯಕ್ತಿ, ಸಮೂಹ, ವರ್ಗ, ಪಂಥಗಳ ಅನಿಸಿಕೆಗಳೂ ತಮ್ಮದೇ ಆದ ಕರ್ತವ್ಯಗಳನ್ನು ನಿರ್ವಹಿಸುತ್ತವೆ ಮತ್ತು ಎಂದಿನವರೆಗೆ ಸಮಾಜದಲ್ಲಿ ವ್ಯಕ್ತಿ, ವರ್ಗ, ಸಮೂಹ, ಪಂಥಗಳು ಇರುತ್ತವೆಯೋ ಅಂದಿನವರೆಗೂ ಈ ಕ್ರಿಯೆ ನಡೆಯುತ್ತಲೇ ಇರುತ್ತದೆ ಎಂಬ ಸಾಮಾಜಿಕ ಸತ್ಯವನ್ನು ಗುರುತಿಸಿದಂತಾಗುತ್ತದೆ. ಈ ಹೇಳಿಕೆಯಿಂದ ನಾನು ಅಪಾಯದ ಕರೆಗಂಟೆಯನ್ನು ಒತ್ತುತ್ತಿದ್ದೇನೆಯೋ ಎಂಬ ಅನುಮಾನ ಬರುವುದು ಸಹಜ. ಇದಕ್ಕೆ ಸಮಾಧಾನ ಚಾರಿತ್ರಿಕ ಪ್ರಕ್ರಿಯೆ ಘಟನೆಗಳು ಮತ್ತು ಇತಿಹಾಸ ರಚನಾ ಪ್ರಕ್ರಿಯೆ ಇವುಗಳನ್ನು ಸ್ಪಷ್ಟವಾಗಿ ಬೇರ್ಪಡಿಸಬಲ್ಲ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದೇ ಆಗಿದೆ. ಕ್ರೀಡೆಯ ಉಪಮೆಯನ್ನು ಉಪಯೋಗಿಸಿ ಹೇಳಿದಲ್ಲಿ ಕ್ರೀಡೆಯಲ್ಲಿ ಪಾಲ್ಗೊಳ್ಳುವ ಆಟಗಾರರೂ, ಪಕ್ಷಗಳೂ, ಆ ಪಕ್ಷಗಳ ಅಭಿಮಾನಿಗಳೂ ಹೇಳುವುದು "ಇತಿಹಾಸ" ಮತ್ತು ನಿರೂಪಣೆಗಾರ ಹೇಳುವುದು "ಚರಿತ್ರೆ" ಎಂದು ಸಮೀಕರಿಸಬಹುದು. ಸ್ವಲ್ಪ ವಿಚಿತ್ರವಾಗಿ ಕಂಡರೂ ಈ ಇತಿಹಾಸ ಮತ್ತು ಚರಿತ್ರೆಯ ಭೇದವನ್ನು ಪ್ರಜ್ಞಾಪೂರ್ವಕವಾಗಿಯೇ ಮುಂದಿಡುತ್ತಿದ್ದೇನೆ. ಇಂತಹ ಕಲ್ಪನೆ ಸ್ವಲ್ಪಮಟ್ಟಿಗೆ ಭಾರತೀಯ ಚಿಂತನೆಯಲ್ಲೇ ಅಡಗಿದೆ. ಭಾರತೀಯ ಸಂಪ್ರದಾಯದಲ್ಲಿ ಜ್ಞಾನಕ್ಕೆ ಪ್ರಮಾಣವನ್ನು ನಿರೂಪಿಸುವಾಗ ಪ್ರತ್ಯಕ್ಷ, ಅನುಮಾನಗಳಿಗಿಂತಲೂ ವಿಭಿನ್ನವಾದ ಶಬ್ದ ಮತ್ತು ಆಪ್ತವಾಕ್ಯ ಎಂಬ ಪ್ರಮಾಣಗಳನ್ನು ಸ್ವೀಕರಿಸಿದ್ದರೂ, 'ಇತಿಹಾಸ' ಎಂಬುದನ್ನು ಈ ಎರಡೂ ಪ್ರಮಾಣದ ಕಕ್ಷೆಯೊಳಗೆ ತರುವುದಿಲ್ಲ. (ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಈ ಸಾಂಪ್ರದಾಯಿಕ ಕಲ್ಪನೆಯನ್ನೇ ಈ ಪದದ ಪ್ರಧಾನ ಅರ್ಥವಾಗಿ ಹೀಗೆ ನಿರೂಪಿಸುತ್ತದೆ. "ಇತಿಹಾಸ (ನಾ). ಹೀಗೆ ಇತ್ತಂತೆ, ಹೀಗಂತೆ ಎಂದು ಮುಂತಾಗಿ

ತಿಳಿಸುವ ಪೂರ್ವ ಕಥೆ.'') ಅದು ಸರ್ವಕಾಲೀನ ಸತ್ಯವೆಂದು ಎಲ್ಲೂ ನಿರೂಪಿಸುವುದಿಲ್ಲ. ಭಾರತೀಯ ಸಂಪ್ರದಾಯದಲ್ಲಿ 'ಚರಿತ್ರೆ'ಯ ಕಲ್ಪನೆ ಅಷ್ಟೇನೂ ಸ್ಪಷ್ಟವಿಲ್ಲ. ಆದರೆ ಈಗ ಸತ್ಯನಿರೂಪಣಾಧ್ಯೇಯವನ್ನು ಹೊಂದಿರುವ ವಸ್ತುನಿಷ್ಠವೂ, ವೈಜ್ಞಾನಿಕವೂ ಆಗಿರುವ ರಚನೆಯನ್ನು ಮೇಲಿನ 'ಇತಿಹಾಸ' ವರ್ಗದಿಂದ ಪ್ರಥಕ್ಕರಿಸಿ 'ಚರಿತ್ರೆ' ಎಂದು ಕರೆಯಬಹುದೇನೋ ಎಂದು ಅನಿಸುತ್ತದೆ. ಇದು ಕೇವಲ ಬೌದ್ಧಿಕ ವ್ಯವಹಾರವಲ್ಲ. ಇಡೀ ಮಾನವ ಸಮಾಜದ ಹಿತದೃಷ್ಟಿಯಿಂದಲೂ ಇದರ ಅವಶ್ಯಕತೆ ಇದೆ. ಎಂದಿನವರೆಗೆ ಪಕ್ಷಪಾತೀಯ ಇತಿಹಾಸ ರಚನೆಗಳು ತಾವು ಹೇಳುವುದೇ ಸರ್ವಸತ್ಯ, ವೈಜ್ಞಾನಿಕ ಎಂದು ಪ್ರತಿಪಾದಿಸುತ್ತಿರುತ್ತವೋ ಅಂದಿನವರೆಗೂ ಅವು ಮಾನವ ಸಮಾಜದ ಸಂಘರ್ಷಣೆಗಷ್ಟೇ ದಾರಿಮಾಡುತ್ತಿರುತ್ತವೆ. ಈ ಸತ್ಯದ ಅರಿವು ಸಮಾಜಕ್ಕೆ ಅತಿ ಅವಶ್ಯಕ. ನಿಜ ಜ್ಞಾನವು ಶಾಂತಿ ಸಾಧಕವಾಗಬೇಕೇ ಹೊರತು, ವಿಚ್ಛಿದ್ರ ಶಕ್ತಿಯಾಗಬಾರದು.

## III

ಈಗ ನಿಷ್ಪಕ್ಷಪಾತಿಯೂ, ತಾರ್ಕಿಕವೂ, ಸತ್ಯನಿಷ್ಠವೂ ಆದ ಇತಿಹಾಸರಚನೆಗೆ ಇರುವ ವಿಧಾನಗಳೇನು ಎಂಬುದನ್ನು ಪ್ರಸ್ತಾಪಿಸಬಹುದು. ಇಂಥಹ ಪ್ರಯತ್ನಕ್ಕೆ ಸಹಕಾರಿಯಾಗುವ ವೈಚಾರಿಕ ಮಂಥನ ಇತ್ತೀಚಿನ ದಶಕಗಳಲ್ಲಿ ಜ್ಞಾನಾನ್ವೇಷಣೆಯ ವಿವಿಧ ರಂಗಗಳಲ್ಲಿ ನಡೆದಿದೆ. ಇವುಗಳಲ್ಲಿ ನಮಗೆ ಅತಿ ಸನ್ನಿಹಿತವಾಗಿರುವುದು ೧೯೬೦ ರಿಂದ ಈಚೆಗೆ ಬೆಳೆದು ಬಂದಿರುವ ನೂತನ ಪುರಾತತ್ವದ ಚಿಂತನ. ''ಪುರಾತತ್ವದ ಅವಶೇಷಗಳು ಕೇವಲ ವಸ್ತುಗಳಲ್ಲ, ಇವು ಕ್ರಿಯಾತ್ಮಕ ಸಂಸ್ಕೃತಿಯ ಲೌಕಿಕ ಅವಶೇಷಗಳು. ವ್ಯವಸ್ಥೆಯಲ್ಲಿ ಕ್ರಿಯಾಶೀಲವಾಗಿರುವ ನಿಷ್ಕರ್ಷಕಗಳ (determinents) ಪೂರ್ಣಶ್ರೇಣಿಯ ಅಧ್ಯಯನದಿಂದ ಆ ಸಂಸ್ಕೃತಿಯ ಅಲೌಕಿಕ ಮುಖಗಳನ್ನೂ ಹಾಗೂ ಸಂಸ್ಕೃತಿಯ ವ್ಯವಸ್ಥೆಯನ್ನೂ ಅರಿತುಕೊಳ್ಳಲು ಸಾಧ್ಯವಿದೆ'' ಎಂಬುದು ಈ ಮಾರ್ಗದ ಸಾರಾಂಶ. ಇನ್ನೂ ಸರಳವಾಗಿ ಹೇಳಬೇಕಾದರೆ ಹಿಂದಿನ ಪುರಾತತ್ವ ಪುರಾವಸ್ತುಗಳ ಅಧ್ಯಯನವು ಹೆಚ್ಚುಮಟ್ಟಿಗೆ, ಅವು ಏನು, ಎಲ್ಲಿ, ಯಾವಾಗ ಮೂಡಿದವು ಎಂಬ ನಿರೂಪಣೆಗೆ ಸೀಮಿತಗೊಂಡಿದ್ದರೆ ಈ ಹೊಸವಿಧಾನದಲ್ಲಿ ಹೇಗೆ, ಏಕೆ ಎಂಬ ಇನ್ನೂ ಎರಡು ಹೊಸ ಪ್ರಶ್ನೆಗಳು ಸೇರಿವೆ. ಹೇಗೆ ಎಂಬ ಪ್ರಶ್ನೆಗೆ ಆ ವಸ್ತುಗಳಿಗೂ ಸಂಸ್ಕೃತಿಗೂ ಇರುವ ಸಂಬಂಧಗಳನ್ನೂ, ಏಕೆ ಎಂಬುದು ಸಾಂಸ್ಕೃತಿಕ ವ್ಯವಸ್ಥೆಯ ಇಡೀ ಚೌಕಟ್ಟು ಮತ್ತು ಉದ್ದೇಶಗಳನ್ನೂ ಬೆಳಕಿಗೆ ತರುತ್ತದೆ. ಈ ಸಂದರ್ಭದಲ್ಲಿ ಉಪಯೋಗಿಸಿರುವ ''ವ್ಯವಸ್ಥೆ'' ಎಂಬ ಪದ ವಿಶಿಷ್ಟವಾದ ಅರ್ಥವುಳ್ಳದ್ದು. ಇದು 'ವ್ಯವಸ್ಥಾವಾದ'ಕ್ಕೆ (System Theory) ಸಂಬಂಧಿಸಿದ ಪಾರಿಭಾಷಿಕ ಪದ. ಇತ್ತೀಚಿನ ಎಲ್ಲ ಜ್ಞಾನರಂಗಗಳೂ ಸಮರ್ಥವಾಗಿ ಉಪಯೋಗಿಸು ತ್ತಿರುವ ಒಂದು ಪ್ರಮೇಯ. ಈ ಚಿಂತನಾ ಮಾರ್ಗವನ್ನು ಅರ್ಥಮಾಡಿಕೊಂಡರೆ, ಇತಿಹಾಸ ರಚನೆಗೂ ಇರುವ ಇದರ ಮಹತ್ವ ಸ್ಪಷ್ಟವಾಗುತ್ತದೆ.

ಈ ವ್ಯವಸ್ಥಾವಾದವ ಮೂಲತಃ ಪ್ರಾರಂಭವಾದದ್ದು ಗಣಿತಶಾಸ್ತ್ರದಲ್ಲಾದರೂ ಅದು ಸ್ಪಷ್ಟವಾಗಿ ನಿರೂಪಿತವಾದದ್ದು ಜೀವವಿಜ್ಞಾನದಲ್ಲಿ. ಅದರ ಪ್ರಕಾರ ಇಡೀ ಜೀವ ಸಮೂಹವನ್ನೇ ಒಂದು ಸಾಮಾನ್ಯ ವ್ಯವಸ್ಥೆಯಾಗಿ ಪರಿಗಣಿಸಬಹುದು. ಆದರೆ ಈ ಸಾಮಾನ್ಯ ವ್ಯವಸ್ಥೆಯಲ್ಲಿ ಅನೇಕ ಉಪವ್ಯವಸ್ಥೆಗಳಿದ್ದು ಅವು ಒಂದು ಕ್ರಮಬದ್ಧ ಶ್ರೇಣಿಯಲ್ಲಿ ಇರುತ್ತವೆ. ಉದಾಹರಣೆಗೆ ಜೀವಕಣಗಳದೇ ಒಂದು ವ್ಯವಸ್ಥೆ. ಇಂಥ ಅನೇಕ ಜೀವಕಣಗಳು ವ್ಯವಸ್ಥಿತವಾಗಿ ಸೇರಿದಲ್ಲಿ, ರಸಕೋಶಗಳು, ಅಂಗಾಂಶಗಳು, ಅಂಗಗಳು ರೂಪುಗೊಳ್ಳುತ್ತವೆ. ಇವೂ ರಚನಾ ರೀತಿಯಲ್ಲಿ ಮತ್ತು ಉದ್ದಿಶ್ಯದಲ್ಲಿ ಒಂದು ವ್ಯವಸ್ಥೆಯೇ ಆಗಿರುತ್ತದೆ. ಈ ರಸಕೋಶಗಳ ಮತ್ತು ಅಂಗಗಳ ಸಮೂಹವೇ ಜೀವಿ. ಈ ಜೀವಿಗಳೂ ಪರಸ್ಪರಾವಲಂಬಿಗಳಾಗಿ ಒಂದು ವ್ಯವಸ್ಥಿತ ಕುಟುಂಬವಾಗಿ ಒಂದುಗೂಡಿರುತ್ತವೆ. ಇಂತಹ ಅನೇಕ ಕುಟುಂಬಗಳು ಇನ್ನಷ್ಟು ವಿಶಾಲವಾದ ಹರವಿನಲ್ಲಿ ಒಂದು ಸಮಾಜದ ಸಹಭಾಗಿತ್ವದ ವ್ಯವಸ್ಥೆಯಲ್ಲಿ ಇರುತ್ತದೆ. ಇಂಥ ಅನೇಕ ವ್ಯವಸ್ಥೆಗಳು ಕೂಡಿದ್ದೇ ಜೀವರಾಶಿ. ಈ ಜೀವರಾಶಿಯಲ್ಲಿ ಈ ರೀತಿಯ ಪ್ರತ್ಯೇಕ ವ್ಯವಸ್ಥೆಗಳಿದ್ದರೂ ಅವೂ ಸಹ ಪರಸ್ಪರವಾಗಿ ಸ್ಪಷ್ಟ ಸಂಬಂಧಗಳನ್ನು ಹೊಂದಿರುತ್ತವೆ. ಆ ಸಂಬಂಧಗಳು ಮೂರು ವಿಧ: ಪರಸ್ಪರಾನುಕೂಲಿ ಸಂಬಂಧ, ಆಕ್ರಮಣಕಾರಿ ಸಂಬಂಧ ಅಥವಾ ಪರಾವಲಂಬಿ ಸಂಬಂಧ. ಈ ವ್ಯವಸ್ಥೆಗಳ ಸ್ವರೂಪವೇ ಆ ಜೀವಿಗಳ ರೂಪ, ನಡವಳಿಕೆ ಮತ್ತು ವಿಕಸನಕ್ರಮವನ್ನು ನಿರ್ಧರಿಸುತ್ತದೆ. ಈ ಎಲ್ಲ ವ್ಯವಸ್ಥೆಗಳಲ್ಲೂ ಸಾಮಾನ್ಯವಾಗಿ ಕಾಣುವ ಒಂದು ಅಂಶ ತನ್ನ ವ್ಯವಸ್ಥೆಯನ್ನು ಸಂಘರ್ಷರಹಿತವಾಗಿ ಸಮತೋಲನದಲ್ಲಿರುವಂತೆ ಕಾಪಾಡಿಕೊಳ್ಳುವುದು. ಇದೇ ಈ ವ್ಯವಸ್ಥೆಗಳ ಗುರಿ.

ಈ ವ್ಯವಸ್ಥಾವಾದವು ಮಾನವ ಸಮಾಜಕ್ಕೆ ಕೂಡ ಹೇಗೆ ಸಮಂಜಸವಾಗಿ ಅನ್ವಯವಾಗುತ್ತದೆ ಎಂಬುದನ್ನು ಮಾನವ ಶಾಸ್ತ್ರಜ್ಞರೂ, ಸಮಾಜಶಾಸ್ತ್ರಜ್ಞರೂ ಚೆನ್ನಾಗಿ ಗುರುತಿಸಿ ತಮ್ಮ ಅಧ್ಯಯನಾರಂಗಗಳಿಗೆ ಅಳವಡಿಸಿಕೊಂಡಿದ್ದಾರೆ. ಮಾನವನಿಗೆ ಸಂಬಂಧಿಸಿದಂತೆ ಕುಟುಂಬ ವ್ಯವಸ್ಥೆ, ಕುಲವ್ಯವಸ್ಥೆ, ಬುಡಕಟ್ಟು, ಸಮಾಜವರ್ಗಗಳು, ರಾಷ್ಟ್ರಗಳು ಮತ್ತು ರಾಜಕೀಯ ವ್ಯವಸ್ಥೆ ಹೀಗೆ

ವಿಸ್ತರಿಸಿಕೊಂಡಿದ್ದಾರೆ. ಅಂದರೆ ಯಾವುದೇ ಸಮಾಜದ, ಸಂಸ್ಥೆಯ ಅಥವಾ ಅವುಗಳು ಒಳಗೊಂಡಿರುವ ಉಪಾಂಗಗಳ ಅಧ್ಯಯನವನ್ನೂ, ಅರ್ಥೀಕರಣವನ್ನೂ ಈ ವ್ಯವಸ್ಥಾ ಸಿದ್ಧಾಂತವನ್ನು ಉಪಯೋಗಿಸಿಕೊಂಡು ನಿಷ್ಪಾಕ್ಷಿಕವಾಗಿ ಮಾಡಬಹುದು ಎಂಬುದು ಸಿದ್ಧವಾಗುತ್ತದೆ. ಗತಕಾಲಕ್ಕೆ ಸಂಬಂಧಿಸಿದಂತೆ ಇಂಥಹ ಅಧ್ಯಯನವೇ ಇತಿಹಾಸದ ಗುರಿಯೂ ಆಗಿದೆ ಎಂಬುದನ್ನು ಸದ್ಯಕ್ಕೆ ನಾವು ಗಮನದಲ್ಲಿ ಇಟ್ಟುಕೊಂಡು ಮುಂದುವರೆಯಬಹುದು.

ವಿವಿಧ ಜ್ಞಾನರಂಗಗಳಿಗಿಂತಲೂ ಹೆಚ್ಚಿನ ಒಂದು ಹೊಸ ಆಯಾಮ ಇತಿಹಾಸಕ್ಕಿದೆ. ಅದು ಕಾಲದ ಆಳ. ಇಂಥಹ ಸಮಾಜ ಸಂಸ್ಥೆಗಳ ಆಗು ಹೋಗುಗಳನ್ನು ಕಾಲಾನುಕ್ರಮವಾಗಿ ನಿರೂಪಿಸುವುದು ಈ ಅನುಕ್ರಮದಲ್ಲಿ ನಡೆದು ಬರುವ ಮಾರ್ಪಾಡುಗಳು ಮತ್ತು ಅವುಗಳ ಕಾರಣ, ವೈಲಕ್ಷಣ್ಯಗಳನ್ನು ಗುರುತಿಸುವುದು ಇತಿಹಾಸದ ಮುಖ್ಯ ವಿಧಾನ. ಜೀವಶಾಸ್ತ್ರಜ್ಞರು ಈ ವ್ಯವಸ್ಥಾವಾದದ ಅಂಗಗಳನ್ನು ಉಪಯೋಗಿಸಿಕೊಂಡು ಜೀವಿಗಳ ವಿಕಸನ ಹಂತಗಳನ್ನು ಗುರುತಿಸಲು ಪ್ರಯತ್ನ ನಡೆಸಿದ್ದರೂ ಅಲ್ಲಿ ಅದನ್ನು ಸೀಮಿತ ವ್ಯವಸ್ಥೆಯ ಅಧ್ಯಯನಕ್ಕಷ್ಟೇ ಬಳಸಲಾಗಿದೆ.

ಆದರೆ ಈ ದಿಶೆಯಲ್ಲಿ ಇತ್ತೀಚಿನ ಮಾನವಶಾಸ್ತ್ರ ಮತ್ತಷ್ಟು ಆಳವಾದ ಚಿಂತನೆ ನಡೆಸಿದೆ. ಸಾಂಸ್ಕೃತಿಕ ಮಾನವಶಾಸ್ತ್ರದಲ್ಲಿ (Cultural Anthropology) ಸಂಸ್ಕೃತಿಯ ಸ್ವರೂಪ, ಲಕ್ಷಣಗಳ ಅಧ್ಯಯನವಲ್ಲದೆ, ಸಂಸ್ಕೃತಿಗಳು ಹೇಗೆ ಮಾರ್ಪಾಟಾಗುತ್ತವೆ ಎಂಬುದೂ ಅಧ್ಯಯನದ ಒಂದು ಮುಖ್ಯ ಅಂಶ. ಈ ಮಾರ್ಪಾಟು ಕಾಲಾವಲಂಬಿಯಾದುದಾದ್ದರಿಂದ, ಈ ಅಧ್ಯಯನಕ್ಕೂ ಕಾಲದ ಆಳವನ್ನು ಒಂದು ಮುಖ್ಯವಾದ ಆಯಾಮವಾಗಿ ಹೊಂದಿರುವ ಇತಿಹಾಸ ಮತ್ತು ಪುರಾತತ್ವ ರಂಗಗಳಿಗೂ ಸಹಮತ ಸಂಬಂಧವಿದೆ. ಇದಕ್ಕಿಂತಲೂ ಗಮನೀಯವಾದುದು, ಈ ಮಾನವಶಾಸ್ತ್ರ ವಿಭಾಗವು ಅನುಸರಿಸುತ್ತಿರುವ ವೈಜ್ಞಾನಿಕ ತರ್ಕಮಾರ್ಗ. ಇಂದಿನ ವಿಜ್ಞಾನ ಪ್ರಪಂಚದಲ್ಲಿ ವಿಜ್ಞಾನದ ಯಾವುದೇ ಸಿದ್ಧಾಂತವನ್ನು ಪ್ರಮೇಯ-ಪ್ರಮಾಣಾತ್ಮಕವಾಗಿ ಸಾಧಿಸಬೇಕಾಗುತ್ತದೆ. ಅಂದರೆ ಗಣಿತಶಾಸ್ತ್ರ, ಜ್ಯಾಮಿತಿಗಳಲ್ಲಿ ಒಂದು ಪ್ರಮೇಯವನ್ನು ಮಂಡಿಸಿ ಅದನ್ನು ಪ್ರಮಾಣಾತ್ಮಕವಾಗಿ ಸಾಧಿಸಿದಂತೆ ಅಥವಾ ಒಂದು ವೈಜ್ಞಾನಿಕ ಕಲ್ಪನೆಯನ್ನು ಅದು ಸರಿಯೇ, ತಪ್ಪೇ ಎಂದು ಪ್ರಯೋಗಕ್ಕೆ ಒಳಪಡಿಸಿ ಸಿದ್ಧಪಡಿಸುವಂತೆ. ಇಂದಿನ ಮಾನವಶಾಸ್ತ್ರಜ್ಞರು ಸಹ ಸಂಸ್ಕೃತಿ ವ್ಯವಸ್ಥೆ ಮತ್ತು ಸಂಸ್ಕೃತಿ ಮಾರ್ಪಾಟುಗಳ ಬಗ್ಗೆ ತಾವು ಮಂಡಿಸುವ ಪ್ರಮೇಯಗಳನ್ನು ಸಾಧಿಸಲು ಪುರಾತತ್ವದ ವಿಧಾನಗಳನ್ನು ಅನುಸರಿಸುತ್ತಿದ್ದು. ಇಂದು ಸೈದ್ಧಾಂತಿಕ ಹಿನ್ನೆಲೆಯನ್ನು ಬೆಳೆಸಲು ಪ್ರಯತ್ನಿಸುತ್ತಿರುವ ನೂತನ ಪುರಾತತ್ವವೂ, ತಮ್ಮ ಪ್ರಮೇಯಗಳಿಗೆ ಪ್ರಮಾಣಗಳನ್ನು ಹುಡುಕುತ್ತಿರುವ ಮಾನವಶಾಸ್ತ್ರವೂ ಸಮ್ಮಿಳಿತಗೊಂಡು ಮಾನವಶಾಸ್ತ್ರೀಯ ಪುರಾತತ್ವ (Anthropological Archaeology) ಎಂಬ ನೂತನ ಜ್ಞಾನರಂಗವೇ ಬೆಳೆಯುತ್ತಿದೆ. ಈ ಹೊಸಬೆಳವಣಿಗೆ ಪುರಾತತ್ವವನ್ನು ವೈಜ್ಞಾನಿಕ ರಂಗದ ಭಾಗವಾಗಿಯೇ ಸಿದ್ಧಪಡಿಸುತ್ತಿರುವಂತೆ, ಇತಿಹಾಸವನ್ನೂ ವಿಜ್ಞಾನದ ನಕ್ಷೆಯಲ್ಲಿ ತರುವಲ್ಲಿ ಬಹಳಷ್ಟು ಸಹಾಯ ಮಾಡುತ್ತದೆ ಎಂದು ನನ್ನ ಅಭಿಪ್ರಾಯ. ಈ ವಿಧಾನದಲ್ಲಿ ವ್ಯಕ್ತಿ, ವರ್ಗ, ಸಮೂಹಗಳ ಇಚ್ಛಾಕಾಂಕ್ಷೆಗಳಿಗಾಗಲಿ, ಮೇಲು-ಕೀಳು ಸಾಧನೆಗಳಿಗಾಗಲಿ ಜಾಗವಿಲ್ಲ. ಎಲ್ಲವೂ ತರ್ಕಬದ್ಧವಾಗಿ ವಿಮರ್ಶಿಸಲ್ಪಡಬೇಕು. ಯಾವುದೇ ಸಂಸ್ಕೃತಿಗೆ ವ್ಯಕ್ತಿಗಳೇ ಕಾರಣರಾಗಿದ್ದಾಗ, ಇಂಥ ನಿಷ್ಪಾಕ್ಷಿಕ ಅವಲೋಕನ ಹೇಗೆ ಸಾಧ್ಯ ಎಂಬುದನ್ನು ಇತ್ತೀಚೆಗೆ ಬೆಳೆದಿರುವ ಮಾನವಶಾಸ್ತ್ರೀಯ ಪ್ರಮೇಯದಲ್ಲಿ ನೋಡಬಹುದು. ಅದೂ ವ್ಯವಸ್ಥಾ ಸಿದ್ಧಾಂತವನ್ನು ಅನುಸರಿಸಿದೆ. ಆ ಪ್ರಮೇಯವನ್ನು ಸ್ವಲ್ಪ ಮಟ್ಟಿಗೆ ಮಾರ್ಪಡಿಸಿ ಈ ರೀತಿ ವಿವರಿಸಬಹುದು : ಈ ಭೂಮಂಡಲವೇ ಒಂದು ವ್ಯವಸ್ಥೆ. ಇದರಲ್ಲಿ ಎಲ್ಲ ಜೀವಕೋಟಿಗಳಿಗೂ ಆಧಾರವಾಗಿರುವುದು ಭೌತಿಕ ಪ್ರಪಂಚ. ಈ ಭೌತಿಕ ನೆಲೆಯ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಜೀವನ ಸಾಧನೆ ಮಾಡುವುದು ಮಾನವ ಜೀವಿಗಳೂ ಒಳಗೊಂಡಂತೆ ಎಲ್ಲ ಜೀವಿಗಳಲ್ಲೂ ಕಂಡುಬರುವ ಸಾಮಾನ್ಯ ಅಂಶ. ಆದರೆ ಈ ಭೂಮಂಡಲದಲ್ಲಿರುವ ಎಲ್ಲ ಜೀವಿಗಳೂ ಪ್ರಕೃತಿಯ ಸ್ಥಿತಿಯನ್ನು ಅವಲಂಬಿಸಿ ಜೀವಿಸುತ್ತಿದ್ದರೆ, ಆ ಪ್ರಕೃತಿಯನ್ನು ಅವಶ್ಯವಿದ್ದಲ್ಲಿ ಹಾಗೂ ಸಾಧ್ಯವಿದ್ದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಬದಲಾಯಿಸಿ ಸಂಪನ್ಮೂಲಗಳ ಪ್ರಯೋಜನವನ್ನು ಹೆಚ್ಚು ಸುಲಭವಾಗಿಯೂ ಪರಿಣಾಮಕಾರಿಯಾಗಿಯೂ ಪಡೆದುಕೊಳ್ಳುವುದು ಮಾನವ ಜನಾಂಗಗಳು ಅಳವಡಿಸಿಕೊಂಡಿರುವ ಪದ್ಧತಿ. ಇದಕ್ಕೆ ಉಪಯೋಗಿಸುವ ವಿಧಾನ ತಂತ್ರಜ್ಞಾನ. ಈ ತಂತ್ರಜ್ಞಾನವನ್ನು ಬೆಳೆಸುವುದಕ್ಕೂ ಅದನ್ನು ಸಮರ್ಥವಾಗಿ ಬಳಸುವುದಕ್ಕೂ ಅನುಕೂಲವಾಗುವಂತೆ ಸಮಾಜ ವ್ಯವಸ್ಥೆ ನಿರೂಪಿತವಾಗುತ್ತದೆ. ಈ ಸಾಮಾಜಿಕ ವ್ಯವಸ್ಥೆಯನ್ನು ಘಟ್ಟಿಯಾಗಿ ಕಾಪಾಡಲು ಹಾಗೂ ಮುಂದುವರಿಸಲು ಅವಶ್ಯವಾದ ಚೌಕಟ್ಟನ್ನು ಸಂಸ್ಕೃತಿ ಒದಗಿಸುತ್ತದೆ. ಈ ಕಾರ್ಯ ಕಾರಣ ಸಂಬಂಧಗಳು ನೇರ ಅಥವಾ ಲಂಬ ರೂಪದಲ್ಲಿ ಇರುವುದಿಲ್ಲ. ಕ್ರಿಯಾತ್ಮಕ ಸ್ಥಿತಿಯಲ್ಲಿ ಅವು ತಮ್ಮದೇ ಆದ ಉಪವ್ಯವಸ್ಥೆಯ ರೂಪದಲ್ಲಿ ವರ್ತಿಸುತ್ತಿದ್ದು ಪರಸ್ಪರಾವಲಂಬಿಗಳೂ ಪರಸ್ಪರ ಪರಿಣಾಮಕಾರಿಗಳೂ ಆಗಿರುತ್ತವೆ. ಮಾನವ ಕುಲದ ಸಮೂಹ ನೆನಪೇ ಈ ಇಡೀ ವ್ಯವಸ್ಥೆಯ ನಿಯಂತ್ರಣ ಮತ್ತು ಮುಂದುವರಿಕೆಗೆ ಕಾರಣಶಕ್ತಿ. ಈ ವ್ಯವಸ್ಥೆಯನ್ನು ಈ ಕೆಳಗಿನ ರೀತಿ ಚಿತ್ರಿಸಬಹುದು.




ಜೀವ ವಿಜ್ಞಾನದ ವ್ಯವಸ್ಥಾ ಪ್ರಮೇಯದಲ್ಲಿ ಹೇಳಿರುವಂತೆ, ಈ ಬೃಹತ್ ವ್ಯವಸ್ಥೆಗೆ ಸಹ, ಸಮತೋಲನವನ್ನು ಕಾಪಾಡಿಕೊಳ್ಳುವುದೇ ಗುರಿ. ಆದರೆ ಇದು ನಿರಂತರ ಮಾರ್ಪಾಟುಗಳಿಂದಷ್ಟೇ ಸಾಧ್ಯ. ಏಕೆಂದರೆ ಈ ಉಪವ್ಯವಸ್ಥೆಗಳಲ್ಲಿ ಯಾವುದೂ ಸ್ಥಿರ ರೂಪಿಯಲ್ಲ. ಎಲ್ಲವೂ ಒಂದಲ್ಲ ಒಂದು ರೀತಿಯ ಬದಲಾವಣೆಯನ್ನು ಹೊಂದುವಂಥವು. ಯಾವುದೇ ಉಪವ್ಯವಸ್ಥೆಯ, ಅಂಗದಲ್ಲಿ ನ್ಯೂನಾಧಿಕ್ಯತೆ ಉಂಟಾದಲ್ಲಿ ಅವುಗಳ ಪರಿಣಾಮ ಇತರ ಎಲ್ಲ ಉಪವ್ಯವಸ್ಥೆಗಳ ಮೇಲೂ ಉಂಟಾಗುತ್ತದೆ. ನ್ಯೂನಾಧಿಕ್ಯತೆಗಳು ಮಾನವನ ಕೈವಾಡವಿಲ್ಲದೆಯೇ ಭೂಸವಕಳಿ, ತೀವ್ರತರ ಹವಾಮಾನ ಬದಲಾವಣೆ ಇತ್ಯಾದಿ ರೂಪದಲ್ಲಿ ಪರಿಸರದಲ್ಲಿ ಉಂಟಾಗಬಹುದು ಅಥವಾ ಇಂಥವು ಅಗಾಧ ತಂತ್ರಜ್ಞಾನದ ಬೆಳವಣಿಗೆ ಮತ್ತು ಅವುಗಳ ಅತ್ಯುಪಯೋಗದಿಂದ ಮಾನವನಿಂದಲೇ ಸಂಘಟಿಸಬಹುದು. ಮನುಕುಲದ ಹಾಗೂ ಇತರ ಜೀವ ವರ್ಗಗಳ ಸ್ವಾಭಾವಿಕ ಸಂಖ್ಯಾಭಿವೃದ್ಧಿಯಿಂದ ಅಥವಾ ವಲಸೆ ಹೋಗುವುದು, ವ್ಯಾಪಾರ, ಸಂಪರ್ಕ ಸಾಧನಗಳ ಅಭಿವೃದ್ಧಿ ಮುಂತಾದವುಗಳಿಂದ ಆಗುವ ಸಂಸ್ಕೃತಿಸಂಕರ, ಹೀಗೆ ಹಲವಾರು ಕಾರಣಗಳಿಂದ ಈ ವ್ಯವಸ್ಥೆಯಲ್ಲಿ ಮಾರ್ಪಾಟುಗಳು ಜರಗುತ್ತಲೇ ಇರುತ್ತವೆ. ಈ ಮಾರ್ಪಾಟು ಚೈತನ್ಯ ಪೂರಿತ ಸಮಾಜದ ಸೂಚಕ. ಈ ಮಾರ್ಪಾಟುಗಳಿಗೆ ಸ್ಪಂದಿಸಿ ಸಮತೋಲಕ್ಕೆ ಅನುವಾಗುವಂತೆ ಇತರ ವ್ಯವಸ್ಥೆಗಳಲ್ಲಿ ಸೂಕ್ತ ಮಾರ್ಪಾಟುಗಳನ್ನು ಏರ್ಪಡಿಸುವುದು ಸಮಾಜದ ನೆನಪಿನ ಶಕ್ತಿ. ಅದು ಎಷ್ಟು ಸ್ಪಷ್ಟವಾಗಿರುತ್ತದೋ ಸಮತೋಲದ ಸಾಧನೆ ಅಷ್ಟು ಸುಲಭವಾಗಿ ಸಾಗುತ್ತದೆ. ಸ್ಪಷ್ಟ ನೆನಪಿಗೆ ಯಾವುದೇ ಕಾರಣದಿಂದ, ಅಂದರೆ ನೆನಪನ್ನು ಸರಿಯಾಗಿ ಉಳಿಸಿಕೊಳ್ಳುವ ಸಾಧನ ಮತ್ತು ಕ್ರಮಗಳ ಅಭಾವದಿಂದ ಅಥವಾ ವ್ಯಕ್ತಿ, ವರ್ಗಗಳ ಸ್ವಹಿತಾಶಕ್ತಿ ಉದ್ದಿಶ್ಯಗಳಿಂದ ಕೊರತೆಯಾಗಲಿ, ವಿಕಾರವಾಗಲಿ ಸಂಭವಿಸಿದಲ್ಲಿ ಸಮಾಜದಲ್ಲಿ ಕ್ಷೋಭೆಯುಂಟಾಗಿ, ಸಮತೋಲ ಪುನಃ ಸ್ಥಾಪಿತವಾಗುವ ಪ್ರಕ್ರಿಯೆ ನಿಧಾನವಾಗುತ್ತದೆ.

ಈ ವ್ಯವಸ್ಥೆ-ಉಪವ್ಯವಸ್ಥೆಗಳಲ್ಲಿ ನಡೆಯುವ ಇಂಥ ಘಟನೆಗಳು ಇತಿಹಾಸದಲ್ಲಿ ದಾಖಲಾಗಿದ್ದರೂ ಅವುಗಳ ವಿಶ್ಲೇಷಣೆ, ಕಾರ್ಯ ಕಾರಣ ಸಂಬಂಧಗಳನ್ನು ಗುರುತಿಸುವಿಕೆ ಇವು ತಾರ್ಕಿಕವಾಗಿ ಜರುಗದೆ, ವ್ಯಕ್ತಿ, ವರ್ಗ, ಸಮೂಹ ಪ್ರಭಾವದಿಂದ ಅಸ್ಪಷ್ಟವಾಗಿ, ಅಂದರೆ ಮಾನವ ಸಮಾಜದ ಸ್ಪಷ್ಟ ನೆನಪನ್ನು ವಿರೂಪಗೊಳಿಸುವ ರೀತಿಯಲ್ಲಿ ಸಾಗುತ್ತಿದೆ ಎಂದೇ ನನ್ನ ಭಾವನೆ. ಮೇಲೆ ಹೇಳಿದ ತಾರ್ಕಿಕ ಸಿದ್ಧಾಂತವನ್ನು ಇತಿಹಾಸಕ್ಕೂ ಅನ್ವಯಿಸುವುದು, ಅದರ ಇತಿಮಿತಿಗಳನ್ನು ಪರೀಕ್ಷಿಸುವುದು, ಅಂದರೆ ಸಮಾಜದ ನೆನಪನ್ನು ಸ್ಪಷ್ಟವಾಗಿ ಸತ್ಯನಿಷ್ಠವಾಗಿ ನಿಷ್ಕಲ್ಮಶವಾಗಿ ರೂಪಿಸುವುದು ಸಮಾಜ ಹಿತದೃಷ್ಟಿಯಿಂದ ಆಗಬೇಕಾಗಿರುವ ಮುಖ್ಯ ಕೆಲಸ. ಅಂದರೆ ಒಟ್ಟಿನಲ್ಲಿ ವೈಜ್ಞಾನಿಕ ಚರಿತ್ರೆಯ ಪುನಾರಚನೆಯ ನವಾಂದೋಲನ ಇಂದಿನ ಅವಶ್ಯಕತೆ.

ಈ ಸಂದರ್ಭದಲ್ಲಿ ಈ ದಿಶೆಯ ಚಿಂತನೆ ಇತಿಹಾಸಕಾರರಲ್ಲಿ ಜರುಗಿಯೇ ಇಲ್ಲವೆಂದರೆ ಅಸತ್ಯವಾದೀತು. ಅದಕ್ಕೆ ಇನ್ನೂ ಹೆಚ್ಚು ಪ್ರಚಾರ ದೊರಕದೇ ಇದ್ದರೂ, ೧೯೪೦ ರಿಂದ ಈಚೆಗೆ 'ಅನ್ನಾಲ್ಸ್' ಮಾರ್ಗ ಎಂಬ ಚಾರಿತ್ರಿಕ ಪ್ರಮೇಯ ಇತಿಹಾಸ ರಚನೆಯಲ್ಲಿ ಬೆಳಕು

ಕಂಡಿದೆ. (ಅನ್ನಾಲ್ಸ್ ಎನ್ನುವುದು ಫ್ರಾನ್ಸ್ ದೇಶದಲ್ಲಿ ಪ್ರಕಟವಾಗುತ್ತಿರುವ ಒಂದು ವಿದ್ವತ್ಪತ್ರಿಕೆಯ ಹೆಸರು. ಈ ಪ್ರಮೇಯಕ್ಕೆ ಸಂಬಂಧಿಸಿದ ಅನೇಕ ಮೌಲಿಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿರುವುದರಿಂದ, ಈ ಹೆಸರಿನಲ್ಲೇ ಆ ಮಾರ್ಗವನ್ನು ಗುರುತಿಸುವುದು ರೂಢಿ). ಈ ಮಾರ್ಗದ ಚಿಂತನೆ ನೂತನ ಪುರಾತತ್ವದ ಅಥವಾ ಮಾನವಶಾಸ್ತ್ರೀಯ ಪುರಾತತ್ವದ ಬೆಳವಣಿಗೆಯ ಜೊತೆಗೇ ಸಮಾಂತರವಾಗಿ ಬೆಳೆದಿದೆ. ಇದೂ ಸಹ ವ್ಯವಸ್ಥಾ ಸಿದ್ಧಾಂತದಿಂದ ಪ್ರಭಾವಿತವಾಗಿದ್ದರೂ, ವ್ಯವಸ್ಥೆಗಿಂತ, ವ್ಯವಸ್ಥೆಯ ಕಾಲಾನುಕಾಲೀನ ಮಾರ್ಪಾಟಿನ ಬಗ್ಗೆ ಅಂದರೆ ಇತಿಹಾಸ ಸ್ರೋತದ ಬಗ್ಗೆ ಹೆಚ್ಚಿನ ಒತ್ತು ನೀಡಿದೆ. ಈ ಪ್ರಮೇಯವನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು. ಈ ಜಗತ್ತಿನಲ್ಲಿ ಮಾನವನ ಬದುಕು ಮೂರು ಸ್ಥರಗಳನ್ನು ಅವಲಂಬಿಸಿ ನಡೆಯುತ್ತದೆ. ಅದರಲ್ಲಿ ಮೊದಲನೆಯದು ಪೃಥ್ವಿ. ಎಲ್ಲ ಮಾನವರ ಬದುಕಿಗೂ ಈ ಪೃಥ್ವಿಯೇ ಆಧಾರಪೀಠ. ಇದರ ಮೇಲು ಸ್ತರದಲ್ಲಿ ಇರುವುದು ಸಾಮಾಜಿಕ ವ್ಯವಸ್ಥೆ. ಇಲ್ಲಿ ಸಾಮಾಜಿಕ ವ್ಯವಸ್ಥೆ ಸ್ವಲ್ಪ ವಿಶಾಲಾರ್ಥವನ್ನು ಒಳಗೊಂಡಿದ್ದು, ಇದರಲ್ಲಿ ಸಮಾಜದ ವ್ಯವಸ್ಥೆ, ಸಾಂಸ್ಕೃತಿಕ ವ್ಯವಸ್ಥೆ, ರಾಜಕೀಯ ವ್ಯವಸ್ಥೆ ಇವೆಲ್ಲಾ ಸೇರಿರುತ್ತದೆ. ಇದರ ಮೇಲು ಸ್ತರದಲ್ಲಿ ಇರುವುದು ವ್ಯಕ್ತಿಗಳು, ಅವರ ವೈಯಕ್ತಿಕ ಅಭಿಲಾಷೆಗಳು, ಆಕಾಂಕ್ಷೆಗಳು ಇತ್ಯಾದಿ. ಈ ಮೂರು ಸ್ತರಗಳು ಸಹ ಎಂದೂ ಮಾರ್ಪಾಟನ್ನು ಹೊಂದುತ್ತಲೇ ಇರುತ್ತವೆ. ಆದರೆ ಮಾರ್ಪಾಟಿನ ವೇಗ ಮಾತ್ರ ಮೇಲಿನಿಂದ ಕೆಳಕ್ಕೆ ಕ್ರಮವಾಗಿ ತಗ್ಗುತ್ತಿರುತ್ತದೆ. ಇದನ್ನು ಸ್ವಲ್ಪ ವಿಸ್ತರಿಸುವುದಾದಲ್ಲಿ, ಪೃಥ್ವಿ ಅಂದರೆ ಭೌತ ಜಗತ್ತು ಬಹಳ ನಿಧಾನವಾಗಿ ಬದಲಾಗುತ್ತಿರುತ್ತದೆ. ನಿತ್ಯ ಜೀವನದಲ್ಲಿ ಅಥವಾ ಒಂದೆರಡು ತಲೆಮಾರಿನಲ್ಲಿ ಇಂಥ ಬದಲಾವಣೆಯನ್ನು ಗುರುತಿಸುವುದೇ ಕಷ್ಟ. ಆದರೆ ಇದರ ಮೇಲು ಸ್ತರ ಅಂದರೆ ಸಾಮಾಜಿಕ-ಸಾಂಸ್ಕೃತಿಕ ಸ್ತರದಲ್ಲಿ ಮಾರ್ಪಾಡು ಸ್ವಲ್ಪ ತ್ವರಿತಗತಿಯಲ್ಲಿ ಅಂದರೆ ಕೆಲವು ತಲೆಮಾರುಗಳ ಅವಧಿಯಲ್ಲಿ ಸುಲಭವಾಗಿ ಗುರುತಿಸಬಹುದಾದ ವೇಗದಲ್ಲಿ ನಡೆಯುತ್ತಿರುತ್ತದೆ. ಅತ್ಯಂತ ಮೇಲು ಸ್ತರದ, ಅಂದರೆ ವ್ಯಕ್ತಿಗಳ ಮಟ್ಟದಲ್ಲಿ ಅವರ ಆಶೆ, ಆಕಾಂಕ್ಷೆಗಳು, ಗುರಿ ಇತ್ಯಾದಿಗಳು ಬಹಳ ತ್ವರಿತಗತಿಯಲ್ಲಿ ವ್ಯತ್ಯಾಸವನ್ನು ಹೊಂದಬಹುದು. ಇವನ್ನು ಒಂದೇ ತಲಮಾರಿನ ಜನರೇ ಸುಲಭವಾಗಿ ಗುರತಿಸಬಹುದು. ಮೇಲಿನ ಎರಡು ಸ್ತರಗಳಲ್ಲಿ ಕಾಲಾನುಕ್ರಮದಲ್ಲಿ ಜರುಗುವ ಮಾರ್ಪಾಟಿನ ದಾಖಲೆಯೇ ಇತಿಹಾಸ. ಈ ಎಲ್ಲ ಮಾರ್ಪಾಟುಗಳೂ ಪರಸ್ಪರ ಪ್ರಭಾವಿಗಳಾಗಿ ಇರುತ್ತವೆ. ಎಲ್ಲ ಐತಿಹಾಸಿಕ ಘಟನೆಗಳನ್ನೂ ಇಡೀ ಐತಿಹಾಸಿಕ ಸ್ರೋತವನ್ನು ಈ ಪ್ರಮೇಯದಿಂದ ವಿವರಿಸಲು ಸಾಧ್ಯವಿದೆ, ಅಷ್ಟೇ ಅಲ್ಲ, ಹಾಗೆ ಮಾಡಿದರೇ ತಾರ್ಕಿಕವೂ ಸಂಪೂರ್ಣವೂ ಆಗಬಲ್ಲದು ಎಂಬುದು ಅನ್ನಾಲ್ಸ್ ಸಿದ್ಧಾಂತ. ಈ ಇತಿಹಾಸಕಾರರ ಮಾರ್ಗಕ್ಕೂ ಮಾನವಶಾಸ್ತ್ರ ಪುರಾತತ್ವದ ಮಾರ್ಗಕ್ಕೂ ಬಹಳಷ್ಟು ವ್ಯತ್ಯಾಸವೇನೂ ಇಲ್ಲ.

ಒಟ್ಟಿನಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ವಿವಿಧ ಜ್ಞಾನರಂಗಗಳಲ್ಲಿ ನಡೆದಿರುವ ಚಿಂತನೆ ನಮ್ಮ ಇತಿಹಾಸವನ್ನು ಹೆಚ್ಚು ತಾರ್ಕಿಕವಾಗಿ, ವಸ್ತುನಿಷ್ಠವಾಗಿ ಪುನಾರಚಿಸಲು ಸಹಾಯಕವಾಗಿವೆ ಎನ್ನಬಹುದು. ಈ ಎಲ್ಲಾ ಜ್ಞಾನ ಮಾರ್ಗದ ಸಾಧನೆಗಳೂ ಸತ್ಯಾನ್ವೇಷಣೆಯತ್ತ ಹಾಕಿದ ದಾಪುಗಾಲುಗಳು. ಇಂಥ ವ್ಯವಸ್ಥಿತವೂ, ತಾರ್ಕಿಕವೂ ಆದ ಸಿದ್ಧಾಂತ-ಪ್ರಮೇಯ-ವಿಧಾನಗಳನ್ನು ಅನುಸರಿಸಿ ವಸ್ತುನಿಷ್ಠವಾದ ವೈಜ್ಞಾನಿಕವಾದ ಇತಿಹಾಸ ಪುನಾರಚನೆ ಜರುಗಲಿ, ಅದು ಕರ್ನಾಟಕದ ಇತಿಹಾಸದಲ್ಲೇ ಮೊದಲಾಗಲಿ ಎಂಬುದು ನನ್ನ ಇಂದಿನ ವಿವೇಚನೆಯ ಆಶಯ.

### ಹನ್ನೆರಡನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದ

# ಡಾ॥ ಎಸ್. ನಾಗರಾಜು ಅವರ

## ಜೀವನ ಪರಿಚಯ-ಪಕ್ಷಿ ನೋಟ

೧೪-೮-೧೯೩೬ - ಮೈಸೂರು ಜಿಲ್ಲೆಯ ನಂಜನಗೂಡಿನಲ್ಲಿ ಜನನ.

**ತಂದೆ :** ಶಿವಪೂಜೆಯ ಶೇಷಭಟ್ಟ,

**ತಾಯಿ :** ಪುಟ್ಟಲಕ್ಷಮ್ಮ

**ಪ್ರಾಥಮಿಕ ವಿದ್ಯಾಭ್ಯಾಸ :** ನಂಜನಗೂಡು

೧೯೫೭ - ಬಿ. ಎ. ಆನರ್ಸ್ (ಇಂಡಾಲಜಿ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯೫೮ - ಎಂ. ಎ. (ಇಂಡಾಲಜಿ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯೫೮-೬೨ - ಶಾಸನತಜ್ಞ, ಮೈಸೂರು(ಕರ್ನಾಟಕ) ಸರ್ಕಾರದ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆ, ಮೈಸೂರು

೧೯೬೨ - ಡಿಪ್ಲೊಮಾ ಇನ್ ಆರ್ಕಿಯಾಲಜಿ, ಸ್ಕೂಲ್ ಆಫ್ ಆರ್ಕಿಯಾಲಜಿ, ದೆಹಲಿ

೧೯೬೨-೬೪ - ಸಂಶೋಧನ ಸಹಾಯಕ, ಕರ್ನಾಟಕ ಸರ್ಕಾರ ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆ, ಮೈಸೂರು

೧೯೬೪-೭೮ - ಅಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯೭೭ - ಪಿಎಚ್.ಡಿ. (ಬೌದ್ಧ ಕಲೆ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೮-೮೩ - ರೀಡರ್, ಇತಿಹಾಸ ಮತ್ತು ಪುರಾತತ್ವ ವಿಭಾಗ, ನಾಗಾರ್ಜುನ ವಿಶ್ವವಿದ್ಯಾಲಯ,

೧೯೮೩-೮೪ - ರೀಡರ್, ವಿಭಾಗದ ಮುಖ್ಯಸ್ಥರು, ಬೌದ್ಧ ಅಧ್ಯಯನ ವಿಭಾಗ, ನಾಗಾರ್ಜುನ ವಿಶ್ವವಿದ್ಯಾಲಯ

೧೯೮೪-೮೮ - ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯ, ಹೈದ್ರಾಬಾದ್

೧೯೮೮ - ಪ್ರಾಧ್ಯಾಪಕರು, ಓರಿಯಂಟಲ್ ಇನ್‌ಸ್ಟಿಟ್ಯೂಟ್, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ

೧೯೮೯-೯೧ - ಪ್ರಾಧ್ಯಾಪಕರು, ಫ್ಯಾಕ್ಯುಲ್ಟಾಸ್ ಶಾಸ್ತ್ರ, ಇಂಡೋನೇಶಿಯ ವಿಶ್ವವಿದ್ಯಾಲಯ

೧೯೯೧ - ಪ್ರಾಧ್ಯಾಪಕರು, ಇತಿಹಾಸವಿಭಾಗ, ಹೈದ್ರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯ, ಹೈದ್ರಾಬಾದ್

೧೯೯೬ - ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯದಿಂದ ನಿವೃತ್ತಿ

೧೯೯೬ - ಬೆಂಗಳೂರಿನಲ್ಲಿ ವಾಸ

೧೯೮೯-೯೧ರ ಅವಧಿಯಲ್ಲಿ ಬೋರ್ಡ್ ಆಫ್ ಸೋಷಿಯಲ್ ಸೈನ್ಸ್‌ಸ್‌ಗೆ ಛೇರಮನ್ ಹಾಗೂ ಡೀನ್ ಆಗಿ ಸೇವೆಸಲ್ಲಿಸಿದರು. ೧೯೯೨-೯೬ರ ಅವಧಿಯಲ್ಲಿ ಯೂನಿವರ್ಸಿಟಿ ಎಕ್ಸಿಕ್ಯುಟಿವ್ ಕೌನ್ಸಿಲ್ ಹಾಗೂ ಅನ್ ಅಸೈನಡ್ ಗ್ರ್ಯಾಂಟ್ಸ್ ಕಮಿಟಿ, ಅಕಾಡೆಮಿಕ್ ಕೌನ್ಸಿಲ್, ಕಲ್ಚರಲ್ ಕಮಿಟಿ, ಯುನಿವರ್ಸಿಟಿ ಕ್ಯಾಲಂಡರ್ ಕಮಿಟಿ, ಮುಂತಾದ ಅನೇಕ ಸಮಿತಿಗಳಿಗೆ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ.

## ಸಂದ ಗೌರವಗಳು

೧೯೮೫ರಲ್ಲಿ SAARCನ ಮೊದಲ ಪುರಾತತ್ತ್ವ ಕಾಂಗ್ರೆಸ್‌ಗೆ ಪ್ರತಿನಿಧಿ ಸದಸ್ಯರಾಗಿ ಆಯ್ಕೆ. ೧೯೮೭ರಲ್ಲಿ ಆಂಧ್ರಪ್ರದೇಶ ಹಿಸ್ಟರಿ ಕಾಂಗ್ರೆಸ್‌ನ ಹನ್ನೊಂದನೇ ಅಧಿವೇಶನದ ಪ್ರಾಚೀನ ಇತಿಹಾಸ ಮತ್ತು ಪುರತತ್ತ್ವ ವಿಭಾಗದ ಅಧ್ಯಕ್ಷರಾಗಿ ಆಯ್ಕೆ. ೧೯೯೭ರಲ್ಲಿ ಇಂಡಿಯನ್ ಕಾಂಗ್ರೆಸ್ ಆಫ್ ಏಶಿಯನ್ ಅಂಡ್ ಪೆಸಿಫಿಕ್ ಸ್ಟಡೀಸ್ ಅಧಿವೇಶನದ ಮಹಾಕಾರ್ಯದರ್ಶಿಯ ಗೌರವಕ್ಕೆ ಪಾತ್ರರಾದರು. ಅನೇಕ ರಾಷ್ಟ್ರೀಯ, ಅಂತರರಾಷ್ಟ್ರೀಯ ಸಂಘ ಸಂಸ್ಥೆಗಳ ಸದಸ್ಯರಾಗಿರುವ ಇವರು ಬೌದ್ಧ ಕಲೆಯ ಅಧ್ಯಯನದಲ್ಲಿ ವಿಶೇಷ ಪರಿಣತಿಯನ್ನು ಹೊಂದಿದ್ದಾರೆ. ಅಲ್ಲದೆ, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬ್ರಿಟಿಷ್ ಮ್ಯೂಸಿಯಂ, ಜಕಾರ್ತದ ನ್ಯಾಶನಲ್ ರಿಸರ್ಚ್ ಸೆಂಟರ್ ಆಫ್ ಆರ್ಕಿಯಾಲಜಿ, ಅಮೇರಿಕಾದ ವಿಸ್ಕಾನ್ಸಿನ್ ವಿಶ್ವವಿದ್ಯಾಲಯ, ದೆಹಲಿಯ ಇನ್‌ಸ್ಟಿಟ್ಯೂಟ್ ಆಫ್ ಆರ್ಕಿಯಾಲಜಿ, ಆಂಧ್ರ ಪ್ರದೇಶ ಪುರಾತತ್ತ್ವ ಇಲಾಖೆ, ಪತ್ರಾಗಾರ, ಹೈದರಾಬಾದಿನ ಸಾಲಾರ್ ಜಂಗ್ ಮ್ಯೂಸಿಯಂ, ಕರ್ನಾಟಕ ಸರ್ಕಾರದ ಪುರಾತತ್ತ್ವ ಇಲಾಖೆ, ಮೈಸೂರಿನ ಚಾಮರಾಜೇಂದ್ರ ಅಕಾದೆಮಿ ಆಫ್ ವಿಷುಯಲ್ ಆರ್ಟ್ಸ್, ಬೆಂಗಳೂರಿನ ಮಿಥಿಕ್ ಸೊಸೈಟಿ ಮುಂತಾದ ಪ್ರಸಿದ್ಧ ಸಂಘ ಸಂಸ್ಥೆಗಳಿಂದ ಹಾಗೂ ಅನೇಕ ವಿಶ್ವವಿದ್ಯಾಲಯಗಳಿಂದ ವಿಶೇಷ ಉಪನ್ಯಾಸಗಳಿಗಾಗಿ ಆಹ್ವಾನಿತರಾಗಿ ಗೌರವ ಉಪನ್ಯಾಸಗಳನ್ನು ನೀಡಿದ್ದಾರೆ.

## ಪ್ರಕಟಿತ ಕೃತಿಗಳು

1974 - **Excavations at Hemmige,** Directorate of Archaeology and Museums in Karnataka, Mysore

೧೯೮೦ – **'ಕರ್ನಾಟಕ' ವಿಷಯ ವಿಶ್ವಕೋಶ,** (ಗೌರವ ಸಂಪಾದಕರು) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

1981 - **Buddhist Architecture of Western India** ( C. 250 BC - C. 300 AD), Agamakala Prakashana, Delhi

1995 - **Sri Nagabhinandanam,** in two Vols. (Dr. M.S.N. Rao Felicitation Vols.) Edited along with L.K. Srinivasan

## ಅಪ್ರಕಟಿತ ಕೃತಿಗಳು

**ಕರ್ನಾಟಕ ವಾಸ್ತು ಶಿಲ್ಪ ಪರಂಪರೆ,** (ಪ್ರಾಚೀನ ಕಾಲದಿಂದ ಕ್ರಿ.ಶ. ೧೦೦೦ವರೆಗೆ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**Buddhist Rock Cut Architecture of Andra Pradesh.**

**ಸ್ತೂಪ ಲಕ್ಷಣ ಕಾರಿಕ** (೧೦ನೇ ಶತಮಾನದ ಬೌದ್ಧ ವಾಸ್ತು ಶಿಲ್ಪದ ಪಠ್ಯ)

ಇತಿಹಾಸ, ಪುರಾತತ್ತ್ವ, ಬೌದ್ಧ ಅಧ್ಯಯನ, ಮೂರ್ತಿಶಿಲ್ಪ, ವಾಸ್ತುಶಿಲ್ಪ, ಜಾನಾಂಗಿಕ, ನಾಣ್ಯಶಾಸ್ತ್ರ, ಶಾಸನಶಾಸ್ತ್ರ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಸುಮಾರು ೧೭೦ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದು ಅವು ***ಕನ್ನಡ ವಿಶ್ವಕೋಶ, ಕರ್ನಾಟಕ ವಿಷಯ ವಿಶ್ವಕೋಶ, ಮುಕ್ತಶ್ರೀ, Epigraphia Indica, ಪ್ರಬುದ್ಧ ಕರ್ನಾಟಕ, ಜಾನಪದ, ಸಾಧನೆ, ಶ್ರೀಕಂಠಿಕಾ, ಶ್ರೀ ನಾಗಾಭಿಂದನಂ, ಸ್ವಸ್ತಿಶ್ರೀ, Studies in Indian Culture, South Indian Studies*** ಮುಂತಾದ, ಗ್ರಂಥ, ಗೌರವ ಸಂಪುಟ, ಸ್ಮರಣ ಸಂಪುಟ ಹಾಗೂ ಸಂಶೋಧನ ಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತವೆ.

ಡಾ॥ ಎಂ. ಎಸ್. ಕೃಷ್ಣಮೂರ್ತಿ *
ಡಾ॥ ಎಂ. ಪಿ. ಮಹದೇವಯ್ಯ **

# ಕಲ್ಲುಸೇವೆ/ಕಲ್ಸೇವೆ ( ಕಲ್ಲು + ಸೇವೆ ) - ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯ ಪರಂಪರೆಯೇ?

ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲೂಕು ಸಂತೇಬಾಚಳ್ಳಿಯ ಪೂರ್ವಕ್ಕೆ ಸುಮಾರು ಎರಡು ಕಿ. ಮೀ. ದೂರದಲ್ಲಿ (ಬೆಣ್ಣೆ ಸುದ್ದನ ಗುಡ್ಡ - ನಂಜನ ಗುಡ್ಡ - ಬೋರನ ಗುಡ್ಡ) ಸಣ್ಣ ಗುಡ್ಡವೊಂದಿದೆ. ವಿಸ್ತಾರವಾಗಿ ಹರಡಿದ ಹಾಸು ಬಂಡೆಗಳು, ಬಂಡೆಗಲ್ಲುಗಳು, ಸಣ್ಣ ಸಣ್ಣ ಒರಟು ಕಲ್ಲುಗಳು ಮುಂತಾದವುಗಳಿಂದ ಕೂಡಿದ ಈ ಬೆಟ್ಟ ಸುಮಾರು ಎಪ್ಪತ್ತು ಅಡಿಗಳಷ್ಟು ಎತ್ತರವಿರಬಹುದು. ಕುರುಚಲು ಕಾಡಿನಿಂದ ಆವೃತವಾದ ಕೆಳಭಾಗವಿದ್ದು, ಮೇಲ್ಭಾಗ ಸಂಪೂರ್ಣ ಬಂಡೆಯ ನೆಲವಾಗಿದೆ. ಸಣ್ಣ ಸಣ್ಣ ಕುರುಚಲು ಗಿಡಗಳು ಮೇಲ್ಭಾಗದಲ್ಲೂ ಇವೆ. ಸತತವಾದ ಬಿಸಿಲು, ಮಳೆ, ಗಾಳಿಗಳ ಹೊಡೆತದಿಂದಾಗಿ ಬೆಟ್ಟದ ಮೇಲ್ಪದರವು ತೆಳುಚಪ್ಪಡಿ ಕಲ್ಲುಗಳು, ಒರಟು ಕಲ್ಲುಗಳು, ಚೂರುಕಲ್ಲುಗಳು ಇತ್ಯಾದಿಗಳಿಂದ ಕೂಡಿದೆ. ಇಂತಹ ಮೇಲ್ಮೈ ಇರುವ ಗುಡ್ಡದ ಮೇಲೆ ಕೆಲವು ವಿಚಿತ್ರವಾದ ಕಲ್ಲಿನ ಗೂಡುಗಳನ್ನು ನಮ್ಮ ಗಮನಕ್ಕೆ ತಂದವರು, ಸ್ಥಳೀಯರಾದ, ಶಿಕ್ಷಕ ಶ್ರೀಯುತ ಎಸ್. ರಂಗಸ್ವಾಮಿಯವರು.[1] ಈ ಗೂಡುಗಳು ಶವಸಂಸ್ಕಾರಕ್ಕಾಗಿ ಅಲ್ಲಿಯೇ ದೊರೆಯುವ ಕಲ್ಲುಗಳಿಂದ ನಿರ್ಮಿಸಲಾದ ಸಣ್ಣ ನಿರ್ಮಾಣಗಳು. ಇವುಗಳು ಸಂಖ್ಯೆಯಲ್ಲಿ ಅನೇಕವಿದ್ದು, ಎಲ್ಲವೂ ಸಂರಕ್ಷಣೆಯ ವಿವಿಧ ಹಂತಗಳಲ್ಲಿ ಉಳಿದು ಬಂದಿವೆ. ಎಷ್ಟೋ ಇಂತಹ ಗೂಡುಗಳು ನಾಶವಾಗಿ ಹೋಗಿರುವ ಕುರುಹುಗಳೂ ಸಾಕಷ್ಟಿವೆ.

**ಗೂಡುಗಳ ವರ್ಣನೆ :** ಪ್ರತಿಯೊಂದು ಗೂಡೂ ಸುಮಾರು ಎರಡರಿಂದ ನಾಲ್ಕು ಅಡಿಗಳಷ್ಟು ಎತ್ತರವಿದ್ದು, ತಳದಲ್ಲಿ ಚೌಕದುಂಡು ಅಥವಾ ಸುಮಾರು ವೃತ್ತಾಕಾರವಾಗಿರುತ್ತದೆ. ಸ್ಥಳೀಯವಾಗಿ ದೊರೆಯುವ ಸಣ್ಣ ಸಣ್ಣದಾದ ಒರಟು ಕಲ್ಲುಗಳು, ಸಣ್ಣ ಸ್ವಾಭಾವಿಕ ಚಪ್ಪಡಿಗಳು ಮತ್ತು ಕೆಲವು ಸಂದರ್ಭಗಳಲ್ಲಿ ಸಣ್ಣ ಬಂಡೆ ಕಲ್ಲುಗಳು ಇವುಗಳನ್ನುಪಯೋಗಿಸಿ ಕಟ್ಟಲಾಗಿದೆ. ಹೆಚ್ಚಿನ ಸಂದರ್ಭಗಳಲ್ಲಿ ಬೆಟ್ಟದ ಮೇಲ್ಮೈಯಲ್ಲಿನ ಇಳಿಜಾರಿನಲ್ಲಿ ಕಾಣಬರುವ, ಬಂಡೆಯ ಕಡಿದಾದ ಮುಖಕ್ಕೆ ಹೊಂದಿಕೊಂಡಂತೆ, ಇವುಗಳನ್ನು ನಿರ್ಮಿಸಲಾಗಿರುವುದರಿಂದ ಬೆಟ್ಟದ ಇಳಿಜಾರಿನಲ್ಲೇ ಇವೂ ಸಹ ಕೂಡಿಕೊಂಡು, ಕೆಲವು ಕೋನಗಳಿಂದ ನೋಡಿದಾಗ, ಇವು ಪ್ರತ್ಯೇಕ ಕಟ್ಟಡಗಳಂತೆ ಕಾಣಬರುವುದಿಲ್ಲ. ಭದ್ರತೆಯ ದೃಷ್ಟಿಯಿಂದಲೂ ಸಹ ಈ ರೀತಿಯ ಜಾಗಗಳು ಹೆಚ್ಚು ಅನುಕೂಲಕರವೆಂದು ಪರಿಗಣಿಸಿದ್ದುದನ್ನು ನಾವು ಇಲ್ಲಿ ಗಮನಿಸಬಹುದು. ಈ ರೀತಿಯ ನಿರ್ಮಾಣದಿಂದ ಹೆಚ್ಚು-ಕಡಿಮೆ ಎಲ್ಲಾ ಗೂಡುಗಳೂ ಯಾವುದಾದರೂ ಒಂದು ಪಾರ್ಶ್ವದಲ್ಲಿ ಬೆಟ್ಟದ ಭಾಗಕ್ಕೇ ಹೊಂದಿಕೊಂಡಿರುವುದು ಸಾಮಾನ್ಯ; ಆದ್ದರಿಂದ ಯಾವ ಗೂಡಿಗೂ ಎಲ್ಲಾ ದಿಕ್ಕಿನಲ್ಲೂ ನಿರ್ಮಿತ ಭಾಗವಿರುವುದಿಲ್ಲ.

ಹೀಗೆ ಒಂದು ರೀತಿಯಲ್ಲಿ ಸುರಕ್ಷಿತವೆನಿಸಿರುವ ಪ್ರದೇಶಗಳನ್ನಾರಿಸಿ ಗೂಡುಗಳನ್ನು ನಿರ್ಮಿಸಲಾಗಿದೆ. ಸಣ್ಣ ಒರಟು ಕಲ್ಲುಗಳಿಂದ ಹಿಡಿದು ಬರಿಗೈಯಲ್ಲಿ ಚಲಿಸಬಹುದಾದ ಎಲ್ಲಾ ಗಾತ್ರದ ಕಲ್ಲುಗಳನ್ನೂ ಇಲ್ಲಿ ಬಳಸಲಾಗಿದೆ. ಗಾರೆ ಅಥವಾ ಮಣ್ಣನ್ನು ಉಪಯೋಗಿಸದೆ ಒಣ - ಕಟ್ಟಡ (Dry-mesonory) ದಲ್ಲಿ ಕಲ್ಲುಗಳನ್ನು ವರಸೆಗಳಲ್ಲಿ ಪೇರಿಸಿ ನಿರ್ಮಿಸಲಾಗಿದೆ. ಮೇಲಿನ ವರಸೆಗಳನ್ನು ಸ್ವಲ್ಪ-ಸ್ವಲ್ಪವಾಗಿ ಒಳಕ್ಕೆ ಚಾಚುವಂತೆ ಮಾಡಿ (Corbel-dome), ಮೇಲ್ಭಾಗವು ಸಾಕಷ್ಟು ಕಿರಿದಾದ ಮೇಲೆ, ಗೂಡಿನ ಬಾಯನ್ನು ಒಂದೋ ಅಥವಾ ಎರಡೂ ಒರಟಾದ ಸ್ವಾಭಾವಿಕ ಚಪ್ಪಡಿಯ ರೀತಿಯ ಕಲ್ಲಿನಿಂದ ಮುಚ್ಚಲಾಗಿದೆ. ಈ ಚಪ್ಪಡಿಯ ಮೇಲೂ ಸಹ ಸಣ್ಣ ಸಣ್ಣ ಕಲ್ಲುಗಳನ್ನು ಪೇರಿಸಿ ಹೆಚ್ಚು ಭದ್ರಪಡಿಸಿರುತ್ತಾರೆ. ಕೆಲವು ಸಂದರ್ಭಗಳಲ್ಲಿ ಹೊರಮುಖದಲ್ಲಿ ಸ್ವಲ್ಪ ದಪ್ಪದಾದ ಬಂಡೆಗಳನ್ನಿಟ್ಟು ಗೋಡೆಗಳಿಗೆ ಒತ್ತಾಸರೆ (Buttress)ಗಳನ್ನು ನಿರ್ಮಿಸಿರುವುದೂ ಉಂಟು. ಗೂಡಿನ ಬಾಯಿ ಯಾವಾಗಲೂ ಮೇಲ್ಭಾಗದಲ್ಲೇ ಇರುವುದು ಗಮನಿಸಬೇಕಾದ

* ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬
** ಪ್ರವಾಚಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

ಅಂಶ. ಗೂಡುಗಳಿಗೆ ಒಳನೆಲ ಬೆಟ್ಟದ ಸ್ವಾಭಾವಿಕ ಹಾಸು ಬಂಡೆಯೇ ಆಗಿರುತ್ತದೆ. ಗೋಡೆಗಳು ಒರಟು ಕಲ್ಲಿನ ಒಣ ಕಟ್ಟಡವಾಗಿರುವುದರಿಂದ ಸಣ್ಣ-ಸಣ್ಣ ರಂಧ್ರಗಳಿರುವುದು ಸ್ವಾಭಾವಿಕ.





ವಿಶೇಷವೆಂದು ಹೇಳಬಹುದಾದ ಒಂದು ಗೂಡಿನಲ್ಲಿ ನಿರ್ಮಾಣ ರೀತಿಯಲ್ಲಿ ವ್ಯತ್ಯಾಸ ಕಂಡುಬಂದಿದೆ. ಇದನ್ನು ಕಡಿದಾದ ಬಂಡೆಯೊಂದರ ಮುಖಕ್ಕೆ ಹೊಂದಿಕೊಂಡಂತೆ ಕಲ್ಲು ಚಪ್ಪಡಿಗಳನ್ನು ಪೆಟ್ಟಿಗೆಯಾಕಾರದಲ್ಲಿ ಜೋಡಿಸಲಾಗಿದೆ. ಚಪ್ಪಡಿಗಳು ಹೊರಕ್ಕೆ ಬೀಳದಂತೆ, ಹೊರಮುಖದಲ್ಲಿ ಸಣ್ಣ ಸಣ್ಣ ಕಲ್ಲುಗಳನ್ನು ಪೇರಿಸಿದ್ದಾರೆ. ಇದು ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯ ಚಪ್ಪಡಿ ಕೋಣೆಯನ್ನು ನೆನಪಿಗೆ ತರುತ್ತದೆ. ದುರದೃಷ್ಟವಶಾತ್ ಈ ಗೂಡಿನ ಮೇಲ್‌ಚಪ್ಪಡಿ ಈಗ ಮಾಯವಾಗಿದೆ.

ಉದ್ದೇಶ : ಈ ರೀತಿಯ ಗೂಡುಗಳನ್ನು ಅಲ್ಲಿಯ ಕೆಲವು ಜನಾಂಗದವರು ಬಹಳ ಹಿಂದಿನಿಂದ ಈ ಶತಮಾನದ ಮೊದಲ ಕೆಲವು ದಶಕಗಳವರೆಗೂ ನಿರ್ಮಿಸುತ್ತಿದ್ದರೆಂದು ಹೇಳುತ್ತಾರೆ. ಇದಕ್ಕೆ ಕಲ್ಲುಸೇವೆಯೆಂದು ಸ್ಥಳೀಯರ ಹೇಳಿಕೆ. ಸಿ. ಹಯವದನ ರಾಯರು*[3] ಅಂಟುಜಾಡ್ಯದಿಂದ ಸತ್ತವರು, ಕುಷ್ಠರೋಗಿಗಳು,



ಕಾಡುಪ್ರಾಣಿಗಳಿಂದಾದ ಗಾಯಗಳಿಂದ ಸತ್ತವರು ಗರ್ಭಿಣಿ ಸ್ತ್ರೀಯರ ಮರಣ ಇಂತಹ ಸಂದರ್ಭಗಳಲ್ಲಿ, ಉಪ್ಪಾರರು, ವಡ್ಡರು, ದೊಂಬರು, ಮಾದಿಗರು, ಅಗಸರು, ತೆಲುಗು ಬಣಜಿಗರು ಮುಂತಾದ ಜನಾಂಗಗಳವರು, ಶವವನ್ನು ಸುಡದೆ ಅಥವಾ ಹೂಳದೆ ಕಲ್ಲುಸೇವೆ ಮಾಡುತ್ತಿದ್ದರು ಎಂದು ಹೇಳಿದ್ದಾರೆ. ಕಲ್ಲುಸೇವೆ ಎಂಬುದು ಹಯವದನರಾಯರ ಪ್ರಕಾರ 'ಹೆಣವನ್ನು ಸೂಕ್ತ ಸ್ಥಳದಲ್ಲಿ ಮಲಗಿಸಿ ಅದರ ಮೇಲೆ ಕಲ್ಲುಗಳನ್ನು ಗುಡ್ಡೆಯ ಆಕಾರದಲ್ಲಿ ಜೋಡಿಸುವ ಪದ್ಧತಿ'. ಇದು ಈ ಶತಮಾನದ ಪ್ರಾರಂಭದಲ್ಲಿ ಮಂಡ್ಯ ಜಿಲ್ಲೆಯಲ್ಲಿತ್ತು ಎಂದು ಹೇಳಿದ್ದಾರೆ.

ಸ್ಥಳೀಯರ ಹೇಳಿಕೆಗೂ ಹಯವದನರಾಯರ ವರ್ಣನೆಗೂ ಸ್ವಲ್ಪ ವ್ಯತ್ಯಾಸ ಕಾಣಬರುತ್ತದೆ. ಸ್ಥಳೀಯರ ಪ್ರಕಾರ ಮೇಲೆ ಹೇಳಿದ ಎಲ್ಲಾ ಜನಾಂಗದವರೂ ಹಾಗೂ ಒಕ್ಕಲಿಗರೂ ಸಹ, ತೊನ್ನು, ಕುಷ್ಠ, ವಿಚಿತ್ರ ವ್ಯಾಧಿ, ದುರ್ಮರಣ ಇಂತಹ ಸಾವಿನ ಪ್ರಸಂಗಗಳಲ್ಲಿ, ಗರ್ಭಿಣಿ ಹಾಗೂ ಬಾಣಂತಿಯರ ಸಾವಿನ ಸಂದರ್ಭಗಳಲ್ಲಿ ಈ ರೀತಿ ಕಲ್ಸೇವೆ ಮಾಡುತ್ತಿದ್ದರು. ಶವವನ್ನು ಕೂಡಲೇ ಸಂಸ್ಕಾರ ಮಾಡದೆ, ಈ ಬೆಟ್ಟದ ಮೇಲೆ ಇಟ್ಟು, ತರಗು-ಗರಿ ಮುಂತಾದವುಗಳಿಂದ ಮುಚ್ಚಿಡುತ್ತಿದ್ದರು. ಈ ಹೆಣಗಳು ಹದ್ದು, ನಾಯಿ, ನರಿ ಹಾಗೂ ಇನ್ನಿತರ ಕಾಡುಪ್ರಾಣಿಗಳಿಗೆ ಆಹಾರವಾಗುತ್ತಿದ್ದವು. ಕೆಲವು ದಿನಗಳ ನಂತರ ಈ ಸ್ಥಳದಲ್ಲಿ ಅಳಿದುಳಿದ ಅಸ್ಥಿಯ ಭಾಗಗಳನ್ನು ಸಂಗ್ರಹಿಸಿ, ಇಂತಹ ಗೂಡುಗಳನ್ನು ನಿರ್ಮಿಸಿ, ಅದರೊಳಗೆ ಅಸ್ಥಿಗಳನ್ನಿಟ್ಟು, ಗೂಡಿನ ಬಾಯನ್ನು ಚಪ್ಪಡಿಯಿಂದ ಮುಚ್ಚುತ್ತಿದ್ದರು. ಸಾಧಾರಣವಾಗಿ ತಿಳಿದಿರುವಂತೆ ಒಬ್ಬರಿಗೆ ಒಂದು ಗೂಡನ್ನು ಕಟ್ಟುತ್ತಿದ್ದರು. ನಿಯತಕಾಲಿಕವಾಗಿ ಈ ಗೂಡುಗಳಿಗೆ ಪೂಜೆ ಅಥವಾ ಭೇಟಿ, ಯಾವ ಸಂದರ್ಭದಲ್ಲೂ ಇಲ್ಲವೆಂದು ಸ್ಥಳೀಯರ ಹೇಳಿಕೆ. ಈ ರೀತಿ ಮರಣ ಹೊಂದಿದವರ ಶವವನ್ನು ಹೂಳಿದರೆ, ಬರಗಾಲ ಪ್ರಾಪ್ತಿಯಾಗುವುದೆಂದು ಸ್ಥಳೀಯರ ನಂಬಿಕೆ.*[4]

ಆರೋಗ್ಯವಂತರು, ಸ್ವಾಭಾವಿಕವಾದ ಸಾವನ್ನಪ್ಪಿದರೆ ಅಂತಹವರಿಗೆ ಅವರವರ ಸಂಪ್ರದಾಯದ ಪ್ರಕಾರ ಸುಡುವುದು, ಹೂಳುವುದು ಇತ್ಯಾದಿ ವಾಡಿಕೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ವಿಶೇಷ ಹಾಗೂ ವಿಚಿತ್ರ ಸಂಪ್ರದಾಯವನ್ನನುಸರಿಸಿರುವುದು ಸೋಜಿಗವೇ ಸರಿ. ಕರ್ನಾಟಕದ ಅನೇಕ ಭಾಗಗಳಲ್ಲಿ ಈ ರೀತಿಯ ರೋಗ ಅಥವಾ ಅಸಹಜ ಸಾವನ್ನಪ್ಪಿದವರನ್ನು ಹೂಳುವ ವಾಡಿಕೆ ಇಲ್ಲ. * ತಮ್ಮ ಸಂಪ್ರದಾಯ ಏನೇ ಇರಲಿ ಶವವನ್ನು ಮಾತ್ರ ಸುಡುತ್ತಾರೆ. ಆದರೆ ಪ್ರಸಕ್ತ ಸಂದರ್ಭದಲ್ಲಿ ಶವಸಂಸ್ಕಾರ ವಿಶೇಷ ರೀತಿಯದು. ಅದರಲ್ಲೂ ಅದು ಎರಡು ಹಂತದಲ್ಲಿ ನಡೆಯುತ್ತದೆ. ಮೊದಲನೆಯ ಹಂತದಲ್ಲಿ ಶವವನ್ನು ಕಾಡು ಪ್ರಾಣಿಗಳಿಗೆ ಆಹಾರವಾಗಿ ಒಪ್ಪಿಸಿ ನಂತರ ಅಸ್ಥಿಯ ಶೇಷಗಳನ್ನು ಸಂಗ್ರಹಿಸಿ, ಪ್ರಾಯಶಃ ಶಾಸ್ತ್ರೋಕ್ತವಾಗಿ, ಕಲ್ಲಿನ ಗೂಡುಕಟ್ಟಿ ಸಂಸ್ಕಾರ ಮಾಡುವುದು. ಈ ರೀತಿಯ ಶವಸಂಸ್ಕಾರ ಕ್ರಮವನ್ನು ದ್ವಿತೀಯ ಹಂತದ ಶವಸಂಸ್ಕಾರ (Secondary Burial) ಎಂದು ಕರೆಯುತ್ತೇವೆ. ಇಲ್ಲಿಯ ಬೆಟ್ಟದ ಮೇಲಿನ ಅನೇಕ ಗೂಡುಗಳಲ್ಲಿ ಮಾನವ ದೇಹದ ಅನೇಕ ದೊಡ್ಡಗಾತ್ರದ ಮತ್ತು ಗಟ್ಟಿಯಾದ ಮೂಳೆಯ ಭಾಗಗಳನ್ನು ಈಗಲೂ ಸಹ ಕಾಣಬಹುದು. ಯಾವ ಗೂಡಿನಲ್ಲೂ ಸಹ ಸಂಪೂರ್ಣ ಅಸ್ಥಿಪಂಜರ ಕಾಣಬಂದಿಲ್ಲ. ಇದರಿಂದಾಗಿ ಈ ಗೂಡುಗಳೆಲ್ಲವೂ *ದ್ವಿತೀಯ ಹಂತದ ಶವಸಂಸ್ಕಾರ* ಪದ್ಧತಿಯ ಪ್ರತೀಕವೆಂದು ಹೇಳಬಹುದು. ಈ ರೀತಿಯ ಶವಸಂಸ್ಕಾರ ಪದ್ಧತಿ ನಿಂತು ಎಷ್ಟೋ ದಶಕಗಳಾಗಿವೆ ಎಂದು ಸ್ಥಳೀಯರ ಹೇಳಿಕೆ. *೪

ಸಂತೇಬಾಚಳ್ಳಿಯ ಬೆಟ್ಟದ ಮೇಲಿನ ಕಲ್ಸೇವೆಯ ಸಂಪ್ರದಾಯವನ್ನು ಗಮನಿಸಿದಾಗ, ದಕ್ಷಿಣ ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಎರಡು ಸಹಸ್ರಮಾನಗಳ ಹಿಂದೆ ಪ್ರಚಲಿತದಲ್ಲಿದ್ದ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಗೋರಿಗಳ ನೆನಪು ಮರುಕಳಿಸುತ್ತದೆ. ಅದರಲ್ಲೂ ವಿಶೇಷ ರೀತಿಯದೆಂದು ಹೇಳಿರುವ, ಚಪ್ಪಡಿ ಕಲ್ಲಿನಿಂದ ನಿರ್ಮಿತವಾದ, ಪೆಟ್ಟಿಗೆಯಾಕಾರದ ಗೂಡಂತೂ, ಬೃಹತ್ ಶಿಲಾ ಸಮಾಧಿಯ ಚಪ್ಪಡಿ ಕಲ್ಲಿನ ಕೋಣೆಯಂತೆಯೇ ನಿರ್ಮಿತವಾಗಿದೆ. ಚಪ್ಪಡಿಯು ಹೊರಕ್ಕೆ ಬೀಳದಂತೆ ಸುತ್ತಲೂ ಒರಟು ಕಲ್ಲುಗಳನ್ನು ಪೇರಿಸಿರುವುದು, ಬೃಹತ್ ಶಿಲಾ ಸಮಾಧಿಯ ತಂತ್ರಜ್ಞಾನವನ್ನು ನೆನಪಿಗೆ ತರುತ್ತದೆ. ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಶವಸಂಸ್ಕಾರ ಪದ್ಧತಿ, ಚರಿತ್ರ ಕಾಲದ ಕರ್ನಾಟಕ ಸಂಸ್ಕೃತಿಯ ಪರಂಪರೆಯಲ್ಲಿ ಮುಂದುವರಿದಿರುವುದಕ್ಕೆ ನೇರ ಹಾಗೂ ಖಚಿತವಾದ ಆಧಾರಗಳು ಇದುವರೆಗೂ ದೊರೆತಿಲ್ಲ. ಏಕೆಂದರೆ ಚಾರಿತ್ರಿಕ ಯುಗದ ಸಂಸ್ಕೃತಿಯ ವಿವಿಧ ಮುಖಗಳನ್ನು ಅರಿಯಲು, ಅದರಲ್ಲೂ ಶವಸಂಸ್ಕಾರ ಪದ್ಧತಿಯನ್ನರಿಯಲು, ಪುರಾತತ್ವ ಉತ್ಖನನಗಳು ಬಲು ಮುಖ್ಯ. ಆದರೆ ಅವೆಲ್ಲ ನಮ್ಮಲ್ಲಿ ಕಡಿಮೆ. ತಲಕಾಡಿನಲ್ಲಿ ನಡೆದ ಉತ್ಖನನಗಳಿಂದ ಗಂಗರ ಕಾಲದ ಶವಸಂಸ್ಕಾರ ಪದ್ಧತಿಯ ಬಗ್ಗೆ ಅನೇಕ ಮಾಹಿತಿಗಳು ದೊರೆತಿವೆ. ಅವು *ದ್ವಿತೀಯ ಶ್ರೇಣಿಯ ಶವಸಂಸ್ಕಾರ* ಪದ್ಧತಿಯವಾಗಿದ್ದು, ಅವು ಕೇವಲ ಸಮಾಧಿ ಗುಂಡಿಗಳಾಗಿವೆ. ಕಲ್ಲುಕೋಣೆಯಾಗಲೀ, ಸಂಪುಟವಾಗಲೀ ಅಲ್ಲಿ ದೊರೆತಿಲ್ಲ. ಆದರೆ ಇತರ ಅಂಶಗಳೆನಿಸಿರುವ ಮಣ್ಣಿನ ಪಾತ್ರೆಗಳ ಜೋಡಣೆ, ಆಹಾರ, ಆಭರಣ ಮುಂತಾದ ಸಹಯೋಗ ಇವೆಲ್ಲವೂ ಬೃಹತ್ ಶಿಲಾಸಂಸ್ಕೃತಿಯ ಸಂಪ್ರದಾಯದ ಮುಂದುವರಿಕೆ ಎಂಬುದನ್ನು ಸೂಚಿಸುತ್ತದೆ. ಅನೇಕ ಶತಮಾನಗಳ ನಂತರ ಸಂತೇಬಾಚಳ್ಳಿಯ ಪರಿಸರ ದಲ್ಲಿ ಬೃಹತ್ ಶಿಲಾಸಮಾಧಿ ಕಟ್ಟಡಗಳನ್ನು ಕೆಲವು ಮಟ್ಟಿಗೆ ಹೋಲುವ ಸಮಾಧಿ ಸಂಪುಟ ಅಥವಾ ಕೋಣೆ ಅಥವಾ ಗೂಡುಗಳು ನಮಗೆ ಕಾಣಬರುವುದು ಒಂದು ವಿಶೇಷ ಸಂಗತಿಯೇ ಸರಿ. ಕನ್ನಡ ವಿಶ್ವಕೋಶದಲ್ಲಿ *೫ ಕಲ್ಲುಗುಡ್ಡೆ ಸಮಾಧಿಗಳ ಬಗ್ಗೆ ಬರೆಯುವಾಗ ಪ್ರೊ॥ ಎಸ್. ನಾಗರಾಜುರವರು '**ಈಗಲೂ ಕೆಲವು ಪಂಗಡಗಳವರು ಸಮಾಧಿಗಳ ಮೇಲೆ ಚಿಕ್ಕ ಕಲ್ಲುಗಳನ್ನು ಪೇರಿಸಿಡುವ ರೂಢಿ ಈ ಪ್ರಾಚೀನ ಸಂಪ್ರದಾಯದ ಅವಶೇಷವಿದ್ದಂತೆ ಕಾಣುತ್ತದೆ**' ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದೇ ರೀತಿ ಕಲ್ಲು ಸೇವೆಯ ಸಂಪ್ರದಾಯದ ಹುಟ್ಟು ಹಾಗೂ ಬೆಳವಣಿಗೆಗಳ ಬಗ್ಗೆ ನಮಗೆ ಸಾಕಷ್ಟು ಮಾಹಿತಿ ದೊರೆಯುವು ದಿಲ್ಲವಾದರೂ, ಅವುಗಳ ಆಕಾರ, ನಿರ್ಮಾಣ ರೀತಿ ಮತ್ತು ಉದ್ದೇಶ ಇವುಗಳನ್ನು ಅಧ್ಯಯನ ಮಾಡಿದಾಗ, ಈ ಪದ್ಧತಿಯು ಬೃಹತ್ ಶಿಲಾಸಮಾಧಿ ಸಂಪ್ರದಾಯದ ಕೊನೆಯ ಕೊಂಡಿಯೆಂದು ಪರಿಗಣಿಸುವುದರಲ್ಲಿ ತಪ್ಪಿಲ್ಲವೆಂದೇ ತೋರುತ್ತದೆ. *೬

---

* ಆದರೆ ಇಂಥ ಅಥವಾ ಇದಕ್ಕೆ ಸಮಾನಾಂತರವಾದ ಪದ್ಧತಿ ಕರ್ನಾಟಕದ ಬೆಂಗಳೂರು ಜಿಲ್ಲೆಯ ಆನೇಕಲ್ ತಾಲೂಕು ಪ್ರದೇಶದ ಗ್ರಾಮಗಳಲ್ಲಿ (ಸಮಂದೂರು, ಮಾರನಾಯಕನಹಳ್ಳಿ ಇತ್ಯಾದಿ) ಬಳಕೆಯಲ್ಲಿದ್ದ ಬಗ್ಗೆ ಅಲ್ಲಿನ ಹಿರಿಯರು ಹೇಳುತ್ತಿದ್ದುದನ್ನು ನಾವು ಗಮನಿಸಿದ್ದೇವೆ - (ಸಂ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ತಂಡವೊಂದು ಇಲ್ಲಿಗೆ ಇದೇ ವರ್ಷದ (೧೯೯೮) ಫೆಬ್ರವರಿ ತಿಂಗಳಿನಲ್ಲಿ ಈ ಸ್ಥಳದಲ್ಲಿ ಪುರಾತತ್ವ ಶೋಧನೆ ನಡೆಸಿತು. ಲೇಖಕರ ಜೊತೆಗೆ ಪುರಾತತ್ವ ಶೋಧನೆಯಲ್ಲಿ ಭಾಗವಹಿಸಿದ್ದ ಪ್ರೊಫೆಸರ್ ಎಂ. ವಿ. ಕೃಷ್ಣಪ್ಪನವರಿಗೆ ಲೇಖಕರು ಕೃತಜ್ಞರಾಗಿದ್ದಾರೆ.

*೨. **ಮೈಸೂರು ಗೆಜೆಟಿಯರ್**, ಸಂ. - I(ಹೊಸ ಆವರ್ತನ) ದೆಹಲಿ, ೧೯೮೪, ಪು. ೨೦೮. ಹಾಗೆಯೇ ನೋಡಿ **ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್**, (ಸಂ. ಡಾ॥ ಸೂರ್ಯನಾಥ್ ಕಾಮತ್, ಬೆಂಗಳೂರು ೧೯೬೭, ಮಂಡ್ಯ ಜಿಲ್ಲೆ, ಪು. ೮೭

*೩. ಸುಮಾರು ೮೦ ವರ್ಷಗಳ ಹಿಂದೆ ಸಂತೇಬಾಚಳ್ಳಿಯ ಕೆರೆಯ ಅಂಗಳದಲ್ಲಿ, ತೊನ್ನು ರೋಗದಿಂದ ಮರಣ ಹೊಂದಿದ ಒಬ್ಬ ಒಕ್ಕಲಿಗ ಜನಾಂಗದ ವ್ಯಕ್ತಿಯ ಶವವನ್ನು ಹೂಳಿದ್ದು, ತದನಂತರದ ೨ ವರ್ಷದಲ್ಲಿ ಮಳೆಬಾರದೆ, ಆ ಶವವನ್ನು ಅಲ್ಲಿಂದ ತೆಗೆದು ಕಲ್ಲೇವೆ ಮಾಡಿದರೆಂದು ಸ್ಥಳೀಯರಾದ ಶ್ರೀ ಸುಬ್ಬರಾವ್ (೫೦ ವರ್ಷ) ಅವರು ಹೇಳಿದ ವಿಷಯವನ್ನು ನಿಮ್ಮ ಗಮನಕ್ಕೆ ತಂದಿದ್ದೇವೆ.

*೪. ಸ್ಥಳೀಯರ ಸ್ಮೃತಿಯಲ್ಲಿ ಈ ರೀತಿಯ ಕಲ್ಲೇವೆ ನಡೆದು ಸುಮಾರು ೮೦ ವರ್ಷಗಳೇ ಕಳೆದಿವೆ

*೫. **ಕನ್ನಡ ವಿಶ್ವಕೋಶ**, ಸಂ. ೪, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೨ ಪುಟ ೨೯೦, ಕಾಲಂ ೨

*೬. ಇದೇ ಪದ್ಧತಿಗೆ ಹೆಚ್ಚು ವಿಭಿನ್ನವೆನಿಸಿದ ಸಂಪ್ರದಾಯವನ್ನು ಶ್ರೀ ಹೆಚ್. ಆರ್. ನಾಗರಾಜಶರ್ಮ ಅವರು ಬನ್ನೂರು (ಮಹದೇಶ್ವರ ಬೆಟ್ಟದ) ಪರಿಸರದಲ್ಲಿ ಗಮನಿಸಿದ್ದಾರೆ. ಅವರ ಲೇಖನವೂ ಸಹ, ಈ ಲೇಖನದ ಜೊತೆ ಪ್ರಕಟವಾಗುವಂತಿದೆ.

ಮೈಸೂರು ನಾಗರಾಜ ಶರ್ಮ*

# ಕಲ್ಲುಮಲ್ಲಯ್ಯ - ಅಪರೂಪದ ಶವಸಂಸ್ಕಾರ ಪದ್ಧತಿ ಒಂದು ಶೋಧನೆ

ಮೈಸೂರು ಜಿಲ್ಲೆಯ ನರಸೀಪುರ ತಾಲ್ಲೋಕಿನ 'ಬನ್ನೂರು' ಒಂದು ಪ್ರಾಚೀನ ಗ್ರಾಮ. 'ವಹ್ನಿಪುರ' ಎಂಬ ಪದವು ಬನ್ನಿಪುರ - ಬನ್ನೂರು ಎಂಬುದಾಗಿ ಬದಲಾಗಿದೆ ಎಂಬುದು ವಿದ್ವಾಂಸರ ಮತ. ಬನ್ನೂರಿನ ಬಳಿ ಗುಡ್ಡವೊಂದರಲ್ಲಿ ನನ್ನ ಕ್ಷೇತ್ರಕಾರ್ಯದ ವೇಳೆ ಪ್ರಾಚೀನ ನೆಲೆಯೊಂದು ಕಂಡುಬಂದು, ಅದನ್ನು ತಪಾಸಣೆ ನಡೆಸಿದಾಗ, ಶಿಲಾತಾಮ್ರ ಯುಗದ ಪ್ರಾಚ್ಯಾವಶೇಷಗಳು ದೊರೆತು, ಅದರ ವಿವರವಾದ ಅಧ್ಯಯನವನ್ನು ಮುಂದುವರಿಸಲಾಗಿದೆ.*[1] ಬೊಮ್ಮನ ಹಳ್ಳಿ ಎಂಬ ಕುಗ್ರಾಮವೊಂದರ ಗುಡ್ಡವೊಂದರಲ್ಲಿ ಈ ಪ್ರಾಚೀನ ನಿವೇಶನವು ಅಸ್ತಿತ್ವದಲ್ಲಿದ್ದು, ಈ ನೆಲೆಯಲ್ಲಿ ಶಿಲಾತಾಮ್ರ ಯುಗ, ಬೃಹತ್ ಶಿಲಾಯುಗ ಮತ್ತು ಆದಿ ಚರಿತ್ರಕಾಲದ ಅವಶೇಷಗಳನ್ನು ಒಳಗೊಂಡಂತೆ, ನಿರಂತರ ಜನವಸತಿಯ ಲಕ್ಷಣಗಳು ಕಂಡುಬಂದಿವೆ.

ಬೃಹತ್ ಶಿಲಾ ಸಂಸ್ಕೃತಿಯ ಮಡಕೆ ಚೂರುಗಳು, ಗ್ರಾಫೈಟ್ ವಿನ್ಯಾಸದೊಡನೆ ಮತ್ತು ಕಬ್ಬಿಣದ ಮೂಸೆಗಳೇ ಅಲ್ಲದೆ, ಕಬ್ಬಿಣದ ಚರಟದ ಉಂಡೆಗಳು ಇಲ್ಲಿ ಹೇರಳವಾಗಿ ಲಭ್ಯವಾಗಿವೆ. ಆದರೆ, ಬೃಹತ್ ಶಿಲಾ ನೆಲೆಗಳಲ್ಲಿ ಸಾಮಾನ್ಯವಾಗಿ ಲಭ್ಯವಾಗ ಬೇಕಾದ ಶಿಲಾ ಸಮಾಧಿಗಳು ಮಾತ್ರ, ಸುತ್ತಮುತ್ತಲಲ್ಲಿ ಕಂಡುಬಂದಿಲ್ಲ. ಈಗಾಗಲೇ ನಮಗೆ ಪರಿಚಿತವಿರುವಂತೆ, ಇತರ ಕೆಲವು ಬೃಹತ್ ಶಿಲಾ ನೆಲೆಗಳಲ್ಲಿ ಸಮಾಧಿಗಳು ನಾಶವಾಗಿದ್ದರೂ, ಅವುಗಳ ಬೃಹತ್ ಚಪ್ಪಡಿಗಳು ಅಥವಾ ಗುಂಡುಕಲ್ಲುಗಳಾದರೂ ದೊರೆತಿರುವಂತೆ ಇಲ್ಲಿಯೂ ದೊರೆಯಬೇಕಿದ್ದಿತು.*[2] ವ್ಯವಸಾಯೀಕರಣದಿಂದ ಇವು ನಾಶವಾಗಿರಬೇಕೆನಿಸಿದರೂ, ಇನ್ನೂ ವ್ಯವಸಾಯಕ್ಕೆ ಪರಿವರ್ತಿಸದ ಸ್ವಾಭಾವಿಕ ಭೂಮಿಯು ಸುತ್ತಮುತ್ತೆಲ್ಲ ಅಪಾರವಾಗಿ ಉಳಿದಿದ್ದು, ಶಿಲಾಗೋರಿಗಳು ಮಾತ್ರ ಅಲ್ಲೆಲ್ಲೂ ಲಭ್ಯವಾಗಲೇ ಇಲ್ಲ. ಅಂತೆಯೇ, ಅಕ್ಕಪಕ್ಕದ ಹಳ್ಳಿಗರನ್ನು ಭೇಟಿಮಾಡಿ, ಶಿಲಾ ಗೋರಿಗಳ ರಚನೆಯನ್ನು ವಿವರಿಸಿ, ಅವುಗಳು ಇರುವ ಸಾಧ್ಯತೆಗಳ ಬಗ್ಗೆ ವಿಚಾರಿಸಿದಾಗ, ದೊರೆತ ಉತ್ತರ ನಕಾರಾತ್ಮಕವಾಗಿಯೇ ಇತ್ತು. ಆದರೆ ವಿಚಾರಣೆಯ ವೇಳೆಯಲ್ಲಿ, ಬನ್ನೂರಿನ ಬಳಿಯ 'ಬೆಟ್ಟಳ್ಳಿ' ಎಂಬ ಹಳ್ಳಿಯ ವಯೋವೃದ್ಧರು ನೀಡಿದ ಮಾಹಿತಿಯು ಮತ್ತಷ್ಟು ಕುತೂಹಲಕ್ಕೆ ಕಾರಣ ವಾಯಿತು. ಆ ಊರಿನಲ್ಲಿ ಇತ್ತೀಚಿನ ವರುಷಗಳವರೆವಿಗೂ ಅಪರೂಪದ ಶವ ಸಂಸ್ಕಾರ ವಿಧಾನವೊಂದು ಉಳಿದು ಬಂದಿದ್ದು, ಅದರ ಜಾಡು ಹಿಡಿದು ನಡೆಸಿದ ಅಧ್ಯಯನದ ಫಲವೇ ಕಲ್ಲುಮಲ್ಲಯ್ಯ ಎಂಬ ಶವಸಂಸ್ಕಾರ ಪದ್ಧತಿಯ ಪರಿಚಯವಾಗಿದೆ.

ಬನ್ನೂರು ಸಮೀಪದ 'ವಡ್ಡಗಲ್ಲು ರಂಗನಾಥಸ್ವಾಮಿ' ಬೆಟ್ಟದ (ಮೂಲತಃ ಒಡ್ಡುಗಲ್ಲು) ಸುತ್ತಮುತ್ತಲ ಇಳಿಜಾರಿನ ಬಂಡೆಗಳ ಬದಿಯಲ್ಲಿ ಬಿಂದಿಗೆ ಗಾತ್ರದಿಂದ ಹಿಡಿದು, ಹಿಡಿ ಗಾತ್ರದ ವರೆಗಿನ ಸ್ವಾಭಾವಿಕ ಕಲ್ಲುಗಳಿಂದ ಸಿದ್ಧಪಡಿಸಿದ ಗುಡ್ಡೆಗಳು ಅನೇಕ ಸಂಖ್ಯೆಯಲ್ಲಿ ಕಾಣಸಿಗುತ್ತವೆ. ಮೇಲುನೋಟಕ್ಕೆ ಕಲ್ಲಿನ ರಾಶಿಯಂತೆ ಕಾಣುವ ಅವುಗಳು ಮಾನವ ಸಮಾಧಿಗಳು ಎಂಬುದು ಕೂಡಲೇ ಅರಿವಿಗೆ ಬರುವುದೇ ಇಲ್ಲ! ಸ್ಥಳೀಕರ ನೆರವಿನೊಂದಿಗೆ ಇಂತಹ ಗುಡ್ಡೆಗಳ ತಾಣವನ್ನು ಕಂಡುಕೊಂಡು, ಕಲ್ಲುಮಲ್ಲಯ್ಯನನ್ನು ಪರಿಚಯ ಮಾಡಿಕೊಳ್ಳಲಾಯಿತು. ಮೃತಹೊಂದಿದ ವ್ಯಕ್ತಿಗಳನ್ನು ಊರಿನಿಂದ ದೂರವಾದ ಬೆಟ್ಟದ ಇಳಿಜಾರು ಪ್ರದೇಶಕ್ಕೆ ಕೊಂಡೊಯ್ದು, ಎರಡು ಬಂಡೆಗಳ ನಡುವೆ ಆಯಕಟ್ಟಿನ ಸ್ಥಳವೊಂದರಲ್ಲಿ ಮಲಗಿಸಲಾಗುವುದು (ಕೆಲವೊಮ್ಮೆ ಕೂರಿಸುವ ಪದ್ಧತಿಯೂ ಉಂಟು). ನಂತರ ದೇಹದ ಮೇಲೆ ಪುಟ್ಟ ದೊಡ್ಡ ಕಲ್ಲುಗುಂಡುಗಳನ್ನು ಪೇರಿಸಿ, ಗುಡ್ಡವೊಂದನ್ನು ನಿರ್ಮಿಸಿ ಶವಸಂಸ್ಕಾರದ ಪ್ರಕ್ರಿಯೆಯನ್ನು ಪೂರೈಸಲಾಗುವುದು. ಹೆಣವನ್ನು ಬೆಂಕಿಯಿಂದ ದಹಿಸುವ ಕ್ರಮವಾಗಲೀ ಅಥವಾ ಮಣ್ಣಿನಲ್ಲಿ ಮುಚ್ಚುವ, ನಮಗೆ ಪರಿಚಿತವಿರುವ ವಿಧಾನಗಳಲ್ಲಿ ಅಂತ್ಯಕ್ರಿಯೆಯನ್ನು ನಡಸದೇ, ಬಹು ಸರಳವಾದ ವಿಧಾನದ ಮೂಲಕ ಸಮಾಧಿ ಮಾಡುವ ಈ ಆಚರಣೆಯು ಬಹು ಕುತೂಹಲಕರವಾದುದು. ಹಳೇ ಮೈಸೂರಿನ ಹಾಸನ, ಚಿಕ್ಕಮಗಳೂರು ಮತ್ತು ಮಂಡ್ಯ

---

* ಸಂಶೋಧಕರು, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೫೭೦ ೦೦೫

ಜಿಲ್ಲೆಗಳಲ್ಲಿ ಒಂದು ವಿಧದ ಶವ ಸಂಸ್ಕಾರವೊಂದು ಅನೇಕ ವರ್ಷಗಳ ಹಿಂದೆಯೇ ಇತಿಹಾಸಕಾರರಾದ ಹಯವದನ ರಾಯರ ಮೂಲಕ ದಾಖಲಿಸಲ್ಪಟ್ಟಿದೆ.** ಇಲ್ಲಿ ಹೆಣದ ಸುತ್ತಲೂ ಸಣ್ಣ ಪುಟ್ಟ ಕಲ್ಲುಗಳನ್ನು ಬಳಸಿ, ಗೋಡೆಯಂತೆ ಕಲ್ಲನ್ನು ಜೋಡಿಸಿ, ಪುಟ್ಟ ಕೋಣೆಯೊಂದನ್ನು ರಚಿಸಿಸುತ್ತಾರೆ. ಮೂರು ನಾಲ್ಕು ಅಡಿಗಳ ಎತ್ತರಕ್ಕೆ ಏರಿದಂತೆ ಅಗಲವು ಕಡಿಮೆಯಾಗುತ್ತಾ ಬಂದು ಗವಾಕ್ಷಿ ಅಥವಾ ಕಣಜವನ್ನು ಮುಚ್ಚುವ ಬಾಗಿಲಿನಂತೆ ಚಪ್ಪಡಿಯೊಂದನ್ನು (Chiseled slab) ಅದರ ಮೇಲಭಾಗಕ್ಕೆ ಮುಚ್ಚಲಾಗುವುದು. ಕಲ್ಲುಸೇವೆ ಎಂದು ಕರೆಯಲ್ಪಡುವ ಈ ಸಮಾಧಿಗಳನ್ನು ಸಾಮಾನ್ಯವಾಗಿ ಅಸ್ವಾಭಾವಿಕ ಮರಣಗಳನ್ನು ಹೊಂದುವವರಿಗೆ ಮತ್ತು ಗರ್ಭಿಣಿ ಸ್ತ್ರೀಯರು ಮರಣಹೊಂದಿದಾಗ ಮಾತ್ರ ನಡೆಸಲಾಗುತ್ತದೆ. ಆದರೆ, ವಡ್ಡಗಲ್ಲು ಬೆಟ್ಟದ ಸುತ್ತಲಿನ 'ಕಲ್ಲುಮಲ್ಲಯ್ಯ' ವಿಧಾನವು ಮೇಲಿನ ವಿಧಿಗಿಂತ ಅನೇಕ ಅಂಶಗಳಿಂದ ಭಿನ್ನವಾಗಿದೆ. ಇಲ್ಲಿ 'ಕೆತ್ತಿ ಸಿದ್ಧಗೊಳಿಸಿದ' ಚಪ್ಪಡಿಯನ್ನು ಮುಚ್ಚದೇ ಅಥವಾ ಗೋಡೆಯಂತೆ ಕಲ್ಲುಗಳನ್ನು ಜೋಡಿಸದೇ, ಬಹು ಪ್ರಾಚೀನ ಶೈಷವ ವಿಧಾನದಿಂದ ಸಮಾಧಿಯನ್ನು ಪೂರ್ಣಗೊಳಿಸಲಾಗುವುದು. ಬೆಟ್ಟಳ್ಳಿ ಮತ್ತು ಸುತ್ತಮುತ್ತಲ ಇತರ ಅನೇಕ ಹಳ್ಳಿಗಳಲ್ಲಿನ ಗೌಡ ಮತ್ತು ಹರಿಜನ ಕೋಮಿನ ಜನಾಂಗಗಳು ಮಾತ್ರವಲ್ಲದೆ, ಇತರ ಕೆಲವು ಜಾತಿಯ ಜನರೂ ಈ ಪದ್ಧತಿಯನ್ನು ಅನುಸರಿಸುತ್ತಾರೆ.

**ಹುಟ್ಟು :** ಕಳೆದ ಶತಮಾನದಲ್ಲಿ ಮಲೆ ಮಹದೇಶ್ವರ ಬೆಟ್ಟಕ್ಕೆ, ಕಾಲ್ನಡಿಗೆಯ ಮೂಲಕ ದೀರ್ಘ ಪ್ರಯಾಣವನ್ನು ಕೈಗೊಂಡಾಗ, ಇಂತಹ ಸಮಾಧಿಗಳು ಬಳಕೆಗೆ ಬಂದಿರಬಹುದಾದ ಸಾಧ್ಯತೆ ಕಂಡುಬರುತ್ತದೆ. ಬೆಟ್ಟ ಗುಡ್ಡಗಳ ಕಾಡು ಹಾದಿಯಲ್ಲಿ ಯಾತ್ರಿಕರು ತಿಂಗಳುಗಟ್ಟಲೆ ಪ್ರಯಾಣ ಮಾಡುವಾಗ, ಗುಂಪಿನ ಕೆಲ ಹಿರಿಯರು ಸಾವನ್ನಪ್ಪುವ ಸಾಧ್ಯತೆಗಳೂ ಅನೇಕವಿದ್ದಿತು. ಅಂತಹ ವೇಳೆಯಲ್ಲಿ ಸತ್ತ ವ್ಯಕ್ತಿಗಳನ್ನು ಸ್ವಂತ ಊರಿಗೆ ಸಾಗಿಸಲು ಹಲವಾರು ದಿವಸಗಳೇ ಬೇಕಿದ್ದ ಕಾರಣ, ಅದು ದುಸ್ಸಾಧ್ಯವಾಗಿದ್ದಿತು. ಅಥವಾ ಹೆಣವನ್ನು ಮಣ್ಣಿನಲ್ಲಿ ಹೂಳುವುದೋ ಇಲ್ಲವೇ ಸೌದೆಯಿಂದ ಸುಡುವುದೋ ಪರಿಕರಗಳು ಲಭ್ಯವಿಲ್ಲದ ಕಾಡಿನಹಾದಿಯಲ್ಲಿ ಅಸಂಭವವಾಗಿದ್ದಿತು. ಅಲ್ಲದೆ, ಮೃತ ವ್ಯಕ್ತಿಯನ್ನು ನಾಯಿ ನರಿಗಳ ಪಾಲಿಗೆ ಬಿಡುವುದೂ ಸಾಧು ವಾಗಿರಲಿಲ್ಲ. ಅಂತೆಯೇ ಅಂದಿನ ಯಾತ್ರಾರ್ಥಿಗಳು ಕಂಡುಕೊಂಡ ಸುಲಭ ಉತ್ತರವೆಂದರೆ, ಹೆಣವನ್ನು ಕಲ್ಲುಗಳಿಂದ ಮುಚ್ಚಿ ಮುನ್ನಡೆಯುವುದು. ಯಾತ್ರೆಯವೇಳೆ ಈ ವಿಧದ ಸಮಾಧಿಗಳನ್ನು ಕಣ್ಣಾರೆ ಕಂಡಿರುವ ಅನೇಕ ವೃದ್ಧರು ಇನ್ನೂ ಜೀವಂತವಾಗಿರುವ ಕಾರಣ ಈ ಮಾಹಿತಿ ಲಭ್ಯವಾಗಿದೆ.

ಕಾಲಕ್ರಮದಲ್ಲಿ ಈ ಪದ್ಧತಿಯು ಯಾತ್ರೆಯ ವೇಳೆ ಮಲೆ ಮಹದೇವನ ಸನ್ನಿಧಿಯಲ್ಲಿ ಸಾವನ್ನಪ್ಪಿ ಸಮಾಧಿ ಹೊಂದುವುದು ಸದ್ಗತಿಯ ದ್ಯೋತಕವೆಂದು ಭಾವಿಸಿ, ಕಲ್ಲುಮಲ್ಲಯ್ಯ ಎಂಬ ಹೆಸರಿನೊಂದಿಗೆ ಅಸ್ತಿತ್ವವನ್ನು ಕಂಡುಕೊಂಡಿತು. ನಂತರದ ಕಾಲದಲ್ಲಿ ಸ್ವಂತ ಊರಿನಲ್ಲಿ ಸತ್ತ ಹಿರಿಯರಿಗೂ ಈ ಪದ್ಧತಿಯ ಅಪೇಕ್ಷಣೀಯವಾಗಿ ಕಂಡುಬಂದು, ಹತ್ತಿರದ ಬೆಟ್ಟಕ್ಕೆ ಅವರನ್ನು ಸಾವಿನ ನಂತರ ಕೊಂಡೊಯ್ದು, ಕಲ್ಲುಮಲ್ಲಯ್ಯನನ್ನಾಗಿಸುವ ಅವರ ಕೊನೆಗಾಲದ ಬಯಕೆಯೂ ಆಗಿ ಮುಂದುವರೆಯಿತು. ಅಂತೆಯೇ, ಈ ಕಲ್ಲುಮಲ್ಲಯ್ಯ ವಿಧಾನವನ್ನು ತೀರ ವಯಸ್ಸಾದ ವೃದ್ಧರು ಮರಣಹೊಂದಿದಾಗ, ಒಂದು ಅವಶ್ಯ ಕ್ರಿಯೆಯಾಗಿ ನಡೆಸುವ ಪರಿಪಾಠ ಇತ್ತೀಚಿನವರೆವಿಗೂ ಇಲ್ಲಿ ಮುಂದುವರೆದಿತ್ತು.



ಅಧ್ಯಯನದ ದೃಷ್ಟಿಯಿಂದ ಒಂದೆರಡು ಗುಡ್ಡೆಗಳನ್ನು ಕೆದಕಿ ಪರೀಕ್ಷಿಸಿದಾಗ, ಅದರ ಮಧ್ಯದಲ್ಲಿ ಮಾನವನ ಮೂಳೆಗಳು ಕಂಡುಬಂದುವು. ಕಳೆದ ಎರಡು ವರ್ಷಗಳ ಹಿಂದೆಯಷ್ಟೇ ನಡೆಸಲಾದ ತನ್ನ ಸೋದರನೊಬ್ಬನ ಸಮಾಧಿಯನ್ನು ಓರ್ವ ಹರಿಜನ ಹಿರಿಯರು ಪರಿಚಯಿಸಿದರು. ಸಂಸ್ಕಾರದವೇಳೆ ಕೈಕಾಲುಗಳನ್ನು ಮಡಚಿ, ತಲೆಯು ದಕ್ಷಿಣದ ಕಡೆಗೆ ಇರುವಂತೆ ದೇಹವನ್ನು ದಕ್ಷಿಣೋತ್ತರವಾಗಿ ಮಲಗಿಸಲಾಗುವುದು. ವಡ್ಡಗಲ್ಲು ರಂಗಯ್ಯನಬೆಟ್ಟದ ಸುತ್ತಲ ಕೆಲವಾರು ಸಮಾಧಿಗಳು ಮಾತ್ರ ಇಂದು ಉಳಿದು ಬಂದಿದ್ದು, ಅನೇಕ ಸಮಾಧಿಗಳು ಕಣ್ಮರೆಯಾಗಿವೆ. ಎಲ್ಲ ವಸ್ತುಗಳಿಗೂ ಶತ್ರುಗಳು ಇರುವಂತೆ ಈ ಸಮಾಧಿಗಳಿಗೂ ಕೆಲವು ವಿನಾಶದ ಕಾರಣಗಳಿವೆ. ಸುತ್ತಮುತ್ತಲ ಮಾಂತ್ರಿಕರು, ಮಾನವನ ತಲೆ ಬುರುಡೆಗಳಿಗಾಗಿ ಅರಸುತ್ತಿರುತ್ತಾರೆ. ಇತರೆಡೆ ನೆಲದಲ್ಲಿ ಹುದುಗಿರುವ ಹೆಣಗಳನ್ನು ಅಗೆದು ತೆಗೆಯುವುದಕ್ಕಿಂತ ಸುಲಭವಾಗಿ ಪಡೆಯಬಹುದಾದ ಕಾರಣ ಕಲ್ಲುಮಲ್ಲಯ್ಯನನ್ನು ಜಾಲಾಡಿ, ಬುರುಡೆಯನ್ನು ಸುಲಭವಾಗಿ ಪಡೆಯುತ್ತಾರೆ. ಅಲ್ಲದೆ ತಲೆಯಲ್ಲಿನ ಕೂದಲು ಉದುರುವ ಒಂದು ಬಗೆಯ ವ್ಯಾಧಿಗೆ ಹಳ್ಳಿಗರು ಇಲ್ಲಿನ ತಲೆ ಬುರುಡೆಯನ್ನು ಹುಡುಕಿ ಅದನ್ನು ಗಂಧದಲ್ಲಿ ತೇಯ್ದು

ಲೇಪಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಮನೆಮಾಡುಗಳನ್ನು ಕಟ್ಟುವವರು ಅಡಿಪಾಯಕ್ಕೆ ಕಲ್ಲುಗಳನ್ನು ಸಂಗ್ರಹಿಸುವ ಉದ್ದಿಶ್ಯ ದಿಂದ ಕಲ್ಲುಮಲ್ಲಯ್ಯ ಸಮಾಧಿಗಳ ಮೇಲೆ ದಾಳಿಯಿಟ್ಟು, ಒಂದೇ ಜಾಗದಲ್ಲಿ ಲಭ್ಯವಿರುವ ಅಪಾರ ಕಲ್ಲಿಗಾಗಿ, ಈ ಸಮಾಧಿಗಳನ್ನು ಕೆದಕುತ್ತಾರೆ.

ಒಟ್ಟಾರೆ ಬೃಹತ್ ಶಿಲಾ ನೆಲೆಗಳು ಅಪಾರವಾಗಿ ಕಂಡು ಬಂದಿರುವ ಈ ಬೆಟ್ಟದಲ್ಲಿ ನಮಗೆ ಪರಿಚಿತವಿರುವ ಬೃಹತ್ ಶಿಲಾ ಗೋರಿಗಳು ಕಾಣಸಿಗದೇ ಕೇವಲ 'ಕಲ್ಲುಮಲ್ಲಯ್ಯ' ಪರಂಪರೆಯು ಉಳಿದುಬಂದಿದೆ. ಅಂತೆಯೇ ಈ ಸಮಾಧಿ ಪದ್ಧತಿಯನ್ನೇ ಇಲ್ಲಿನ ಬೃಹತ್ ಶಿಲಾಸಂಸ್ಕೃತಿಯ ಜನರು ಅಳವಡಿಸಿಕೊಂಡಿದ್ದರೇ? ಅಥವ ಇಲ್ಲಿನ ನವ ಶಿಲಾಸಂಸ್ಕೃತಿಯ ಕಾಲದ ಶವಸಂಸ್ಕಾರ ಪದ್ಧತಿಯು ಯಾವುದು? ಎಂಬ ಹಲವಾರು ಪ್ರಶ್ನೆಗಳಿಗೆ ಈ ಸ್ಥಳದಲ್ಲಿ ಶಾಸ್ತ್ರೀಯ ಉತ್ಖನನ ನಡೆಸಿದಲ್ಲಿ ಮಾತ್ರ ಉತ್ತರಗಳು ದೊರೆಯಬಹುದು.

*ಇನ್ನೂ ಜೀವಂತವಾಗಿರುವ ಪ್ರಾಚೀನ ಪರಂಪರೆಯ ಪದ್ಧತಿಗಳ ಮೂಲಕ ಜನಾಂಗೀಯ ಪುರಾತತ್ವ (Ethno- Archaeology) ಅಧ್ಯಯನವನ್ನು ನಡೆಸಲು ಯೋಗ್ಯವಾದ ಈ ಪದ್ಧತಿಯ ಮೇಲೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲಬೇಕಿದೆ. ಸಹಸ್ರಾರು ವರುಷಗಳ ಹಿಂದೆ ಮಾನವನು ಬೆಂಕಿಯ ಬಳಕೆ ಅಥವಾ ಹಾರೆ ಗುದ್ದಲಿಗಳ ಉಪಯೋಗ ವನ್ನು ಕಂಡುಕೊಳ್ಳುವ ಮುಂಚೆ, ತನ್ನ ಬಂಧುಗಳ ಶವವನ್ನು ನಾಯಿ-ನರಿಗಳಿಗೆ ಸಿಕ್ಕದಂತೆ ನೋಡಿಕೊಳ್ಳಲು ಈ ಪದ್ಧತಿಯನ್ನು ಕಂಡುಕೊಂಡಿರಬಹುದಾದ ಸಾಧ್ಯತೆಯತ್ತ ಅಧ್ಯಯನ ನಡೆಸಬೇಕಿದೆ. ಹಾಗಾದಲ್ಲಿ ಈ ರೀತಿಯ ಶವಸಂಸ್ಕಾರವು ಮನುಕುಲದ ಪ್ರಾರಂಭಿಕ ಸಂಸ್ಕಾರ ವಿಧಾನವಾಗಿರಲು ಸಾಕು! ಒಟ್ಟಾರೆ, ಇತ್ತೀಚಿನ ವರುಷಗಳವರೆವಿಗೂ ಅಸ್ತಿತ್ವದಲ್ಲಿದ್ದ ಈ ಅಪರೂಪದ ಕಲ್ಲು ಮಲ್ಲಯ್ಯ ಶವಸಂಸ್ಕಾರ ಪದ್ಧತಿಯು ಒಂದು ಕುತೂಹಲಕಾರಿ ಆಚರಣೆಯಾಗಿ ಉಳಿದುಬಂದಿದೆ.*

[ಶವಗಳನ್ನು ಕೂರಿಸಿಯೋ, ಮಲಗಿಸಿಯೋ ಕಲ್ಲುಗಳನ್ನು ಪೇರಿಸುವ ಅಂದಿನ ರೂಢಿಯ ಸರಳೀಕೃತ ಜನಪದ ಪದ್ಧತಿಯ ಪ್ರತೀಕವಾಗಿ ಇಂದು ಬನ್ನೇರುಘಟ್ಟ, ಹಂಪೆಯಲ್ಲಿನ ಕಲ್ಲು ಗುಡ್ಡಗಳಲ್ಲಿ ಕಾಣಬಹುದೆನಿಸುತ್ತದೆ. ಆದರೆ ಇದರಲ್ಲಿ ಸಂತಾನದ ಬಯಕೆಯ ಪೂರೈಕೆ, ಹಿರಿಯರ ದೈವತ್ವದ ಕಲ್ಪನೆಯು ಅಳವಟ್ಟಿರುವುದನ್ನು ಗಮನಿಸಬಹುದು. ವಿಶೇಷತಃ ಕೊಡಗಿನ ಸುಗ್ಗಿಕಟ್ಟೆ ಹಬ್ಬಗಳಲ್ಲಿ, 'ಅಜ್ಜಬನ'ದಲ್ಲಿ ವೃತ್ತಾಕಾರದಲ್ಲಿ ಸಣ್ಣ ಕಲ್ಲುಗಳನ್ನಿಟ್ಟು ಪೂಜಿಸುವುದು, ಪ್ರತಿವರ್ಷವೂ ಹಿರಿಯರ ನೆಲೆ ಎಂದು ಇರುವ ಕಲ್ಲಿನ ರಾಶಿಗೆ ಮತ್ತೊಂದು ಕಲ್ಲನ್ನು ಸೇರಿಸುವುದು (ಯಡೂರು ಇತ್ಯಾದಿ ಕಡೆ) ಕಾಣಬರುತ್ತದೆ. ಪುಷ್ಪಗಿರಿಬೆಟ್ಟದ ಬುಡದ ಹೆಗ್ಗಡೆಮನೆ ಬಳಿಯ ಪಟ್ಟೆಪಾರಿ ಬಂಡೆಗಳ ಮೇಲೆ ಹಾಗು ಪುಷ್ಪಗಿರಿಯ ಮೇಲೆ ಕಲ್ಲಿನ ರಾಶಿಗಳನ್ನು ಪ್ರತ್ಯೇಕವಾಗಿ ಒಟ್ಟಿ ನಿಲ್ಲಿಸಿರುವುದು, ಕೆಲವೆಡೆ ರಾಶಿಯೊಳಗೆ ಗೂಡುಮಾಡಿ ದೀಪವಿಟ್ಟು ದೈವಾರೋಪ ಮಾಡಿ ಪೂಜಿಸುವುದು ಇಂದಿಗೂ ವಾರ್ಷಿಕಾಚರಣೆಯಾಗಿದೆ. ಬಹುಶಃ ಇವೆಲ್ಲ ಮೇಲಿನ ಶವಸಂಸ್ಕಾರ ಪದ್ಧತಿಯ ಬೃಹತ್ ಶಿಲಾನೆಲೆಗಳಲ್ಲಿನ ಸರಳೀಕೃತ ಪದ್ಧತಿ ಆಗಿರಬಹುದು. ಇನ್ನು ಮಲೆ ಮಹದೇವನನ್ನು 'ಮಲ್ಲಯ್ಯ' ಎಂದು ಮೊದಲಿಗೆ ಕರೆಯುತ್ತಿದ್ದರೆ? ಅಥವಾ ಶ್ರೀ ಶೈಲ ಮಲ್ಲಿಕಾರ್ಜುನನಿಗೆ 'ಕಂಬಿಮಲ್ಲಯ್ಯ' ಎಂಬ ಕರೆವ ರೂಢಿಗೆ ಸಂವಾದಿಯಾಗಿ 'ಕಲ್ಲುಮಲ್ಲಯ್ಯ' ಶಬ್ದವು ರೂಪುಗೊಂಡಿತೆ? ಎಂಬ ಬಗ್ಗೆಯೂ ಪರಿಶೀಲಿಸಬಹುದು. - (ಸಂ.)]

## ಆಧಾರ ಗ್ರಂಥ ಸೂಚಿ


*1. ***Deccan Herald,*** Sunday, Nov. 2, 1998, Pg. 3

*2. Dr. B. K. Gururaja Rao - ***Megalithic Culture of South India***

*3. **Mysore Gazetteer** : (Ed) C. Hayavadanan Rao - Vol. 1, Page 208

ಜಯದೇವಪ್ಪ ಜೈನಕೇರಿ *

# ಶಿವಮೊಗ್ಗ ಪರಿಸರದಲ್ಲಿಯ ಬೃಹತ್ ಶಿಲಾ ಸಂಸ್ಕೃತಿಯ ಗೀರು ಬಂಡೆ ಚಿತ್ರಗಳು ಒಂದು ಹೊಸ ಶೋಧನೆ

ಶಿವಮೊಗ್ಗದಿಂದ ಹೊನ್ನಾಳಿ ರಸ್ತೆಯಲ್ಲಿ ಸುಮಾರು ೧೪ ಕಿ.ಮೀ. ದೂರದಲ್ಲಿ ಹೊಳೆಹಟ್ಟಿ ಗ್ರಾಮವಿದೆ. ಇದು ತುಂಗ - ಭದ್ರಾ ನದಿಯ ಎಡಭಾಗದ ದಂಡೆಯ ಮೇಲಿದೆ. ಇದರ ಹತ್ತಿರ ನದಿಯ ಮಧ್ಯದ ಒಂದು ಬಂಡೆಯ ಮೇಲೆ ಸುಮಾರು ೧೩ ಗೀರು ಚಿತ್ರಗಳು ಇವೆ. ಇವುಗಳ ಬಗ್ಗೆ ಸ್ಥಳೀಯ ಆಸಕ್ತರಿಂದ ತಿಳಿದು ಬಂದಿತು. ಶ್ರೀ ಸಿದ್ಧಯ್ಯ ಹಿರೇಮಠ, ಶ್ರೀ ಜಗದೀಶ ಅಗಸಿಬಾಗಿಲವರ ಜೊತೆಗೆ ನಾನು ಅವುಗಳ ಛಾಯಾ ಚಿತ್ರಗಳನ್ನು ತೆಗೆದು ಡಾ॥ ಸುಂದರರವರ ಗಮನಕ್ಕೆ ತಂದೆವು. ಇದೇ ರೀತಿಯ ಗೀರು ಚಿತ್ರಗಳು ಸಮೀಪದ ಹೊಳಲೂರಿನಲ್ಲಿ ನಾವುಗಳು ಡಾ॥ ಸುಂದರ ಅವರೊಂದಿಗೆ ೪ ವರ್ಷ ಮುಂಚೆಯೇ ನೋಡಿ, ಅಧ್ಯಯನ ನಡೆಸಿದ ಆನೆ ಬಂಡೆ, ಚಿತ್ರಗಳಂತೆಯೇ ಇದ್ದು, ಶಿಲಾ ತಾಮ್ರಯುಗ ಬೃಹತ್ ಶಿಲಾಸಂಸ್ಕೃತಿಯ ಗೀರು ಚಿತ್ರಗಳನ್ನೇ ಹೋಲುತ್ತಿರುವುದನ್ನು ಗಮನಿಸಿದೆವು. ಇಲ್ಲಿ ಸಿಕ್ಕಿರುವ, ೧೩ ಚಿತ್ರಗಳೆಲ್ಲವೂ ಪ್ರಾಣಿಗಳ ಚಿತ್ರಗಳಾಗಿರುವುದು, ಒಂದು ವಿಶೇಷವಾಗಿದ್ದು, ಅಧ್ಯಯನ ಯೋಗ್ಯವಾಗಿವೆ.

ಪ್ರಾಗಿತಿಹಾಸವು, ನದಿಗಳ ರಚನೆಯ ಅಧ್ಯಯನವೇ ಆಗಿದ್ದು, ಎಲ್ಲಾ ಕಾಲಗಳಲ್ಲಿ ನದಿಗಳು, ಮಾನವನ ನೀರಿನ ಪೂರೈಕೆ, ಆಹಾರ ಮತ್ತು ಸಂಪರ್ಕ ಮಾಧ್ಯಮಗಳನ್ನು ಒದಗಿಸಿದೆ. ಮಾನವನ ಸಂಸ್ಕೃತಿ ಅಧ್ಯಯನಕ್ಕೆ ನದಿಗಳ ದಂಡೆಗಳು ಮಹತ್ತರ ಕೊಡುಗೆ ನೀಡಿವೆ. ನದಿಯ ಉರುಟು ಕಲ್ಲುಗಳು ಆದಿಮಾನವನಿಗೆ, ಆಯುಧಗಳ ಕಲ್ಪನೆಯನ್ನು ಕೊಟ್ಟು, ಹರಿತವಾದ ಆಯುಧಗಳನ್ನು ತಯಾರಿಸಲು ಮೂಲ ವಸ್ತುಗಳಾಗಿದ್ದವು. ಈಗಲೂ ಶಿಲಾಯುಗದ ಮಾನವನು ಸೃಷ್ಟಿಸಿದ (ಶಿಲೆಯ) ಆಯುಧಗಳು, ಹೆಚ್ಚಾಗಿ ನದಿ ದಂಡೆ, ನದಿ ಪ್ರವಾಹದಿಂದ ಉಂಟಾದ ಮೈದಾನ ಭಾಗಗಳಲ್ಲಿ ಉತ್ಖನನ ನಡೆಸಿದಾಗ ಸಿಕ್ಕುತ್ತಲೇ ಇವೆ. ಉದಾಹರಣೆಗೆ ಸಿಂಧೂ ನದಿ ಬಯಲು, ನರ್ಮದಾ ನದಿ ದಂಡೆ, ದಕ್ಷಿಣದಲ್ಲಿ ಪಾಲಾರ್, ಮಲಪ್ರಭಾ, ತುಂಗಭದ್ರಾ ನದಿಗಳ ಪಾತ್ರಗಳು, ವಿಶೇಷವಾಗಿ ಹಂಪಸಾಗರ ಬಳಿ ತುಂಗಭದ್ರಾನದಿ ಅಧ್ಯಯನದಿಂದ ಸ್ತರಾನುಕ್ರಮವಾಗಿ ನಡೆದಿರುವುದನ್ನು ನೋಡಬಹುದು. ಬಿಜಾಪುರ ಜಿಲ್ಲೆ ತಾಳಿಕೋಟೆ ಸಮೀಪ ಸಾಲ್ವಡಗಿಯಲ್ಲಿ ಸಿಕ್ಕಿರುವ ಶಿಲಾ ಆಯುಧಗಳು ಗಮನಾರ್ಹವಾಗಿದೆ. ಕರ್ನಾಟಕದಲ್ಲಿ ನವ ಶಿಲಾಯುಗದ ಬಾಚಿ, ಕೊಡಲಿಗಳು ಮತ್ತು ಉಳಿಗಳ ಮಾದರಿಗಳು ದೊರಕಿದ್ದು, ಇವುಗಳ ಉಪಯೋಗದಿಂದ ಬಂಡೆಗಳ ಮೇಲೆ ಗೀರು ಚಿತ್ರಗಳನ್ನು ರಚಿಸಿರುವುದು ಮತ್ತು ಆಯುಧಗಳನ್ನು ನಯ ಮಾಡಿ, ಮೆರಗು ಕೊಡಲು ಉಜ್ಜಿದ ಗೆರೆಗಳು, ಬಳ್ಳಾರಿಯ ಬಳಿ ಬೆಟ್ಟದಲ್ಲಿ ಸಿಕ್ಕಿವೆ. ನವಶಿಲಾಯುಗ ಮತ್ತು ತಾಮ್ರ ಶಿಲಾಯುಗದ ಸ್ಪಷ್ಟವಾದ ನಿದರ್ಶನಗಳು ಬ್ರಹ್ಮಗಿರಿ, ಸಂಗನಕಲ್ಲು, ಮಸ್ಕಿ, ತೆಕ್ಕಲಕೋಟೆಗಳಲ್ಲಿ ನಡೆಸಿದ ಉತ್ಖನನದಲ್ಲಿ ಶಿಲಾ ಅಲಗುಗಳು ಟ್ರಾಪ್ ಶಿಲೆಯ ಮೆರಗು ಕೊಟ್ಟ ಕಲ್ಲು, ಕೊಡಲಿಗಳು, ಸ್ವಲ್ಪ ಪ್ರಮಾಣದ ತಾಮ್ರ, ಕಂಚುಗಳು ದೊರಕಿವೆ. ದಕ್ಷಿಣದಲ್ಲಿ ಟಿ. ನರಸಿಪುರದ ಹತ್ತಿರ ಕಾವೇರಿ ನದಿಯ ಎಡ ದಂಡೆಯಲ್ಲಿ ನಡೆಸಿದ ಭೂ ಶೋಧದಲ್ಲಿ ಸಹ ಶಿಲಾ ಅಲಗುಗಳು, ಮರಗು ಕೊಟ್ಟಿರುವ ಕಲ್ಲು ಕೊಡಲಿಗಳೂ ದೊರಕಿವೆ. ಬಳ್ಳಾರಿಯಿಂದ ೬ ಕಿ.ಮೀ. ದೂರದಲ್ಲಿರುವ ಸಂಗನಕಲ್ಲು ಗ್ರಾಮದ ಸುತ್ತ ಇರುವ ಬೆಟ್ಟಗಳಲ್ಲಿ ಶಿಲಾಯುಧಕ್ಕೆ ಬೇಕಾದ ಗಟ್ಟಿ ಕಣಶಿಲೆ ಮತ್ತು ನಯಗೊಳಿಸಲು ಬಳಸಿದ ಬಂಡೆಗಳನ್ನು ಇತ್ತೀಚೆಗೆ ಶೋಧಿಸಲಾಗಿದೆ. ಇಲ್ಲಿರುವ ಹಿರೆಬೆಟ್ಟದಲ್ಲಿ ಶಿಲೆಗಳ ಮೇಲೆ ಅಂದಿನ ಮಾನವನು ಚಿತ್ರಿಸಿರುವ ಗೂಳಿ, ಹಸು, ಜಿಂಕೆ, ಬೇಟೆ ಮಾನವ ರೇಖಾ ಚಿತ್ರಗಳೂ ಕಂಡು ಬಂದಿವೆ.

ಪ್ರಸ್ತುತ ಹೊಳೆಹಟ್ಟಿ ಗ್ರಾಮವು ಶಿವಮೊಗ್ಗ ಹೊನ್ನಾಳಿ ಮುಖ್ಯ ರಸ್ತೆಯಿಂದ ೧ ಕಿ.ಮೀ. ತುಂಗಭದ್ರಾ ನದಿ ದಂಡೆಯ ಮೇಲಿದೆ. ಗ್ರಾಮದಲ್ಲಿ ಸ್ಥಳೀಯವಾಗಿ ದೊರಕುವ ಕಾಡು ಕಲ್ಲುಗಳಿಂದ ನಿರ್ಮಿತವಾದ ೧೬-೧೭ನೇ ಶತಮಾನದ ಬುರುಜು (ಕೋಟೆ) ಇದೆ. ಈ ಹುಡೇವಿನ ಸುತ್ತ ಹೊಲದಲ್ಲಿ ನೂತನ

* ನಂ. ೮೭, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

ಶಿಲಾಯುಗದ ಕಲ್ಲಿನ ಕೊಡಲಿಗಳೂ, ಕಲ್ಲಿನ ಆಯುಧಗಳೂ ಮಡಿಕೆ ೧೬-೧೭ನೇ ಶತಮಾನದ ಕಟೆದ ಗುಂಡುಕಲ್ಲುಗಳು ಬಹುಶಃ ಶತ್ರುಗಳ ಮೇಲೆ ಬುರುಜಿನಿಂದ ಎಸೆಯಲು ಮತ್ತು ತೂಕದ ಕಲ್ಲುಗಳಾಗಿ ಉಪಯೋಗಿಸಿರಬಹುದಾದವುಗಳು ದೊರಕಿವೆ. ಗ್ರಾಮದ ಮಧ್ಯೆ ರಂಗನಾಥನ್ ದೇವಾಲಯವಿದೆ. ಎದುರಿಗೆ ಸುಮಾರು ೯ ಮೀಟರ್ ಎತ್ತರದ ದೀಪಸ್ತಂಭವಿದೆ. ದೇವಾಲಯದ ಗರ್ಭಗುಡಿ ಅಕ್ಕ ಪಕ್ಕದಲ್ಲಿ ಬೇಟೆಗಾರ ಮತ್ತು ನಾಯಿಯ ಉಬ್ಬುಶಿಲ್ಪಗಳಿವೆ. ದೇವಾಲಯದ ಹೊರಭಾಗದಲ್ಲಿ ಒಂದು ಮಿಥುನ ಶಿಲ್ಪವಿದ್ದು, ಕೈಯಲ್ಲಿ ವೀಣೆ, ಕಾಲಿನಿಂದ ಮೃದಂಗ ಬಾರಿಸುತ್ತಾ, ಪುರುಷನ ಮೇಲೆ ಕುಳಿತಿರುವ ಸ್ತ್ರೀ ಉಬ್ಬು ಚಿತ್ರವಿರುತ್ತದೆ. ದೇವಾಲಯದ ಮುಂಭಾಗದಲ್ಲಿ ಒಂದು ತ್ರುಟಿತ ಶಾಸನಕಲ್ಲು ಮತ್ತು ೩-೪ ಲಿಂಗಮುದ್ರೆ, ವಾಮನ ಮುದ್ರೆ ಕಲ್ಲುಗಳಿವೆ. ಸ್ಥಳೀಯರಾದ ಶ್ರೀ ಸುರೇಶ್‌ರವರ ಮಾರ್ಗದರ್ಶನ ದಲ್ಲಿ ತುಂಗಭದ್ರಾ ನದಿಯಲ್ಲಿ ನಡೆದುಹೋಗಿ ಬೇಸಿಗೆ ಯಾಗಿದ್ದರೂ, ೩ ಅಡಿ ಆಳದ ನೀರಿನಲ್ಲಿ ಬಹಳ ಪ್ರಯಾಸದಿಂದ ಬಂಡೆಗಲ್ಲು ತಲುಪಿದೆವು. ಚಿತ್ರಗಳನ್ನು ನೋಡಿ ಬಹಳ ಸಂತೋಷದಿಂದ ನಮ್ಮಲ್ಲಿದ್ದ ನೀರಿನ ಬಾಟಲಿಯಿಂದ, ಚಿತ್ರಗಳ ಮೇಲೆ ನೀರು ಹಾಕಿ, ತೊಳೆದು, ಅಲ್ಪ ಸ್ವಲ್ಪ ಹಸಿ ಇರುವಾಗಲೇ ಫೋಟೋಗಳನ್ನು ವಿವಿಧ ಕೋನಗಳಿಂದ ತೆಗೆದೆವು. ಅಳತೆಗಾಗಿ ಒಂದು ೬" ಪಟ್ಟಿಯನ್ನು ಉಪಯೋಗಿಸಿದೆವು. ಗೀರು ರೇಖಾ ಚಿತ್ರಗಳಲ್ಲಿ ಜಿಂಕೆ, ಕಡವೆ, ಗೂಳಿ, ಆನೆ ಅಲ್ಲದೆ ಸಾಲು ಗೂಳಿ ಚಿತ್ರಗಳಿವೆ. ವಿವಿಧ ಆಕಾರ ಮತ್ತು ಅಳತೆಯ ಗೀರು ಚಿತ್ರಗಳು ಇವೆ. ಒಂದು ಆನೆಯ ಚಿತ್ರವು ಸುಮಾರು ೩೦" ಉದ್ದ. ೨೬" ಎತ್ತರವಿದ್ದು ಪ್ರಮಾಣಬದ್ಧವಾಗಿದೆ. ನದಿಯ ನೀರಿನ ಹರಿವಿನಿಂದಾಗಿ ಗೀರು ಶಿಲ್ಪಗಳ ಕಲ್ಲು ನುಣುಪಾಗಿವೆ. ಬಂಡೆಯ ಇನ್ನೊಂದು ಭಾಗದಲ್ಲಿ ಗೂಳಿಗಳ ಸಾಲು ಚಿತ್ರವಿದ್ದು ೩-೪ ಗೂಳಿಗಳಿರುವಂತೆ ಕಂಡು ಬಂದರೂ ಸಹ ಅಸ್ಪಷ್ಟವಾಗಿ ಗುರುತಿಸಬಹುದು ಮತ್ತು ೧ ಕೊಂಬಿರುವ ಜಿಂಕೆ ಸುಮಾರು ೧೮" ಉದ್ದ ೨೦" ಎತ್ತರವಾಗಿದ್ದು ಜಿಂಕೆ ಹಿಂಭಾಗದಲ್ಲಿ ಗೂಳಿಯ ಚಿತ್ರ ಸುಮಾರು ೨೪" ಉದ್ದ ೨೦" ಎತ್ತರವಿದೆ. ೨ ಸೆಂ.ಮೀ. ಅಗಲ, ೦.೫ ಸೆಂ.ಮೀ ಆಳವಾಗಿವೆ. ಮತ್ತೊಂದು ಭಾಗದಲ್ಲಿ ಒಂದರ ಮೇಲೆ ಮತ್ತೊಂದರಂತೆ ೪ ಪ್ರಾಣಿಗಳ ಚಿತ್ರಗಳಿವೆ. ಇವುಗಳನ್ನು ಗುರುತಿಸುವುದು ಸದ್ಯದ ಪರಿಸ್ಥಿತಿಯಲ್ಲಿ ಕಷ್ಟ. ಇವುಗಳ ವಿಶೇಷವೆಂದರೆ; ಪ್ರಾಣಿ ದೇಹದೊಳಗಿನ, ಮೂಳೆಗಳನ್ನು ಸಹ ಗೀರು ಚಿತ್ರಗಳಲ್ಲಿ ಕಾಣಿಸಿರುವುದು. ಒಟ್ಟು ಬಂಡೆಯ ಮೂರು ಮಗ್ಗಲುಗಳಲ್ಲಿ ೧೩ ಚಿತ್ರಗಳು ಪತ್ತೆಯಾಗಿವೆ. ಇವುಗಳು ಶೈಲಿಯಲ್ಲಿ ಆಕಾರದಲ್ಲಿ ಪ್ರಾಣಿವರ್ಗಕ್ಕೆ ಸೇರಿವೆ. ಡಾ|| ಅ. ಸುಂದರರವರು ಹೊಳೆ ಆಲೂರಿನಲ್ಲಿ ಪತ್ತೆ ಮಾಡಿರುವ ಚಿತ್ರಗಳನ್ನು ಬಹುಪಾಲು ಹೋಲುತ್ತಿವೆ. ಆದ್ದರಿಂದ ಈ ಚಿತ್ರಗಳೂ ಸಹ, ಕುಟ್ಟಿದ ಮತ್ತು ಗೀರು ರೇಖಾಚಿತ್ರಗಳು ಎಂದೂ, ಶಿಲಾ ತಾಮ್ರ - ಬೃಹತ್ ಶಿಲಾಯುಗ ಸಂಸ್ಕೃತಿ ಕಾಲಕ್ಕೆ ಸೇರಿದುವುಗಳೆಂದೂ ಗುರುತಿಸ ಬಹುದು. ಈ ಬಗ್ಗೆ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.



ಗುಲ್ಬರ್ಗಾ - ರಾಯಚೂರು - ಬಳ್ಳಾರಿ ಪ್ರದೇಶಗಳಲ್ಲಿ ಕಂಡುಬರುವ ಇಂತಹ ಬಂಡೆಯ ಮೇಲೆ ಕುಟ್ಟಿ ತೆಗೆಯುವ ಚಿತ್ರತ ಪ್ರಕಾರಗಳು ಬೆಳೆದು ಬಂದ ಬಗೆ ಹೇಗೆ? ಈ ಚಿತ್ರಕಲೆ ನಿಸರ್ಗದ ಪರಿಸರದಲ್ಲಿ ಮನುಷ್ಯ ತನಗೆ ಬೇಕಾದ ಮತ್ತು ಬದುಕಿನಲ್ಲಿ ಸಹಾಯಕವಾಗುವ, ಬೇಟೆ ಆಡಿ ಜೀವಿಸಲು ಉಪಯೋಗವಾಗುವ ಪ್ರಾಣಿಗಳನ್ನು ವಿಶೇಷವಾಗಿ ಗೂಳಿ, ಚಿಗರೆ, ಆನೆ, ಕಡವೆಯ ರೇಖಾ ಚಿತ್ರಗಳನ್ನು ಚಿತ್ರಿಸಿದ್ದಾನೆ. ಚಿತ್ರಗಳು ತೀರಾ ಸರಳ ವಾಗಿದ್ದರೂ, ವಿನ್ಯಾಸದ ಸಂಕೇತದಲ್ಲಿ ಸತ್ವಶಾಲಿಯಾಗಿವೆ. ಪರಿಣಾಮಕಾರಿ ಯಾಗಿವೆ. ಈ ಲಕ್ಷಣಗಳೇ ಕಲೆಯ ಜೀವಾಳ. ಸಮಕಾಲೀನ ಕಲೆಯ ಪೂರ್ವಭಾವಿ ಹಂತ ಎನ್ನಬಹುದು. ಸಣ್ಣ ತಲೆ, ಉದ್ದವಾದ ಮುಂಡಭಾಗ, ಚಲನೆಯಿಂದ ಕೂಡಿದ ಕಾಲುಗಳು ಮುಂತಾದವು ನೈಜತೆಗೆ ದೂರ ಇರುವ ಸಂಕೇತಾಕೃತಿಗಳಾಗಿವೆ. ಇಂಥ ಗೀರು ಚಿತ್ರಗಳು ಕರ್ನಾಟಕದ ಅತ್ಯಂತ ಪ್ರಾಚೀನ ಕಲಾಕೃತಿಗಳು ಎಂಬುದು ಮುಖ್ಯ ಅಂಶ. ಬಂಡೆ ಚಿತ್ರಗಳು ಎತ್ತರದ ಗುಡ್ಡ ಪ್ರದೇಶದಲ್ಲಿ ಅಥವಾ ಸುಲಭವಾಗಿ ತಲುಪಲಾಗದ ನದಿ ಮಧ್ಯೆ ಬಂಡೆಗಳ ಮೇಲೆ ಚಿತ್ರಿತವಾಗಿರುವುದರಿಂದಾಗಿ, ಇಲ್ಲಿಯವರೆಗೆ ನಮಗೆ ಕಾಣಸಿಗುತ್ತಿವೆ. ಸ್ವಾತಂತ್ರ್ಯಾನಂತರ ನಮ್ಮ ನಾಗರೀಕತೆಯ ಓಟದಲ್ಲಿ ಈ ಬಂಡೆಗಳು ಸಿಡಿತಕ್ಕೆ ಈಡಾಗಿ ಕಾಣದಂತೆ ಆಗುವ ಅಪಾಯದ ಅಂಚಿನಲ್ಲಿವೆ. ಈ ಚಿತ್ರಗಳು ಕಲೆಯ ದೃಷ್ಟಿಯಿಂದಲೂ ಮತ್ತು ದುರ್ಗಮ ಸ್ಥಳಗಳು ಪವಿತ್ರ ಎಂಬ ಧಾರ್ಮಿಕ ನಂಬಿಕೆಗಳ ಅಂಗವಾಗಿರಬಹುದು. ಕ್ರಿ.ಪೂ. ೨೫೦೦ ರಿಂದ ಕ್ರಿ. ಪೂ. ೮೦೦ ರವರೆಗೆ ನವಶಿಲಾ-ತಾಮ್ರಯುಗ ಶಿಲಾ ಸಂಸ್ಕೃತಿ**ಯ ಯುಗವೆನ್ನಬಹುದು. ಸುಮಾರು ೩೫೦೦ ವರ್ಷಗಳ ಕಾಲಘಟ್ಟದಲ್ಲಿ ವಿವಿಧ ಪ್ರಾಕಾರಗಳ ಗೀರುಬಂಡೆ ಚಿತ್ರಗಳು ನಿರ್ಮಾಣ ವಾಗಿರುವುದನ್ನು ಕಾಣಬಹುದಾಗಿದೆ.



೧೮೭೩ರಲ್ಲಿ ರಾಬರ್ಟ್ ಬ್ರೂಸ್ ಫುಟ್[*೪] ರವರು ಕಾವೇರಿ ನದಿ ದಂಡೆಯ ತಿರುಮಲಕೂಡಲು ನರಸಿಪುರದ[*೫] ಹತ್ತಿರ ನೂತನ ಶಿಲಾಯುಗದ ಜನವಾಸ್ತವ್ಯದ ನೆಲೆಗಳನ್ನು ಗುರುತಿಸಿರುತ್ತಾರೆ. ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯ ಆ ರ್. ಎಸ್. ಪಂಚಮುಖಿಯವರು ಸಪ್ತಸಾಗರ[*೬] (ಅಥಣಿ ತಾಲ್ಲೂಕು)ದಲ್ಲಿ ಶಿಲಾತಾಮ್ರಯುಗ ಸಂಸ್ಕೃತಿಯ ನೆಲೆಗಳನ್ನು ಬೆಳಕಿಗೆ ತಂದಿರುತ್ತಾರೆ. ೧೯೪೪ - ೧೯೪೭ರಲ್ಲಿ ಕೇಂದ್ರ ಪುರಾತತ್ವ ಇಲಾಖೆ ಮಹಾ ನಿರ್ದೇಶಕರಾಗಿದ್ದ ಶ್ರೀ ಮಾರ್ಟಿಮರ್ ವೀಲರ್‌ರವರು ಬ್ರಹ್ಮಗಿರಿ, ಚಂದ್ರವಳ್ಳಿಯಲ್ಲಿ ನಡೆಸಿದ ಉತ್ಖನನವನ್ನು ಮತ್ತು ಇಲ್ಲಿ ಕಂಡಂತೆ ವರದಿಗಳನ್ನು ಪ್ರಕಟಿಸಿರುತ್ತಾರೆ. ಇಲ್ಲಿ ನೂತನ ಶಿಲಾಯುಗ ಕಾಲಗಳ ಸಾಂಸ್ಕೃತಿಕ ವಿವರಗಳು ದೊರತಿವೆ.

ಶಿವಮೊಗ್ಗ ಜಿಲ್ಲೆಯ ತುಂಗಾ, ಭದ್ರಾ, ತುಂಗ-ಭದ್ರಾ ನದಿಯ ಪ್ರದೇಶವು ಇಂಥ ಇನ್ನೂ ಅನೇಕ ನವಶಿಲಾ ಯುಗದ ಬಂಡೆ ಚಿತ್ರಗಳಿಂದ ಸಂಪತ್‌ಭರಿತವಾಗಿರಬಹುದು. ಈ ಪ್ರದೇಶದಲ್ಲಿ ಕೂಲಂಕಷವಾಗಿ, ವ್ಯವಸ್ಥಿತವಾಗಿ ಪುರಾತತ್ವ ಅನ್ವೇಷಣೆ ನಡೆಯ ಬೇಕಾಗಿದೆ.

(ಹೊಳೆಹಟ್ಟಿಯಲ್ಲಿರುವ ಗೀರು ಬಂಡೆ ಚಿತ್ರಗಳ ಬಗ್ಗೆ ನಮಗೆ ಮಾಹಿತಿ ನೀಡಿದ ಹೊಳಲೂರಿನ ಶ್ರೀ ಬಡಿಗೇರ ಮತ್ತು ಶ್ರೀ ಸುರೇಶ್ ಅವರಿಗೂ, ಈ ಪ್ರಬಂಧವನ್ನು ಮಂಡಿಸಲು ನನಗೆ ಅನುಮತಿ ನೀಡಿ, ಮಾರ್ಗದರ್ಶನ ಮಾಡಿದ ಡಾ॥ ಅ. ಸುಂದರ ಅವರಿಗೂ ಧನ್ಯವಾದಗಳು)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. *ವಜ್ರಪಥ*, ಕರ್ನಾಟಕ ಸಂಘ, ಶಿವಮೊಗ್ಗ, ಪುಟ

*೨. ಡಾ॥ ಅ. ಸುಂದರ: *ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ*

*೩. ಡಾ॥ ಅ. ಸುಂದರ : *ಕರ್ನಾಟಕ ಚರಿತ್ರೆ*, ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ

*೪. ರಾಬರ್ಟ್ ಬ್ರುಸ್ ಫಟ್ : *ಇಂಡಿಯನ್ ಪ್ರೀ ಹಿಸ್ಟಾರಿಕ್ ಆಂಡ್ ಪ್ರೋಟ ಹಿಸ್ಟಾರಿಕ್ ಆಂಟಿಕ್ವಟಿಸ್, ದೇರ್ ಏಜಸ್ ಆಂಡ್ ಡಿಸ್ಟ್ರಿ ಬ್ಯೂಷನ್*

*೫. ಅದೇ

*೬. ಅದೇ

ಸಾಸಲು ಜೆ. ವಿಶ್ವನಾಥ್ *

# ದೊಡ್ಡಬಳ್ಳಾಪುರ ಹಾಗೂ ದೇವನಹಳ್ಳಿಯ ನವಶೋಧಿತ ಶಿಲಾಯುಗ ಸಂಸ್ಕೃತಿಯ ಸ್ಮಾರಕಗಳು ಮತ್ತು ರೇಖಾ ಚಿತ್ರಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ಹಾಗೂ ದೇವನಹಳ್ಳಿ ತಾಲ್ಲೂಕುಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಅಪೂರ್ವ ನೆಲೆಗಳು ಪತ್ತೆಯಾಗಿವೆ. ವಿಭಿನ್ನ ಮಾದರಿಯ ಸಮಾಧಿಗಳ ಜೊತೆಗೆ ನಿಲಸುಗಲ್ಲುಗಳು ಹೇರಳವಾಗಿದ್ದು ಆ ಪರಿಸರಗಳಲ್ಲಿ ರೇಖಾಚಿತ್ರಗಳು ಬೆಳಕಿಗೆ ಬಂದಿವೆ.

ದೊಡ್ಡಬಳ್ಳಾಪುರ ತಾಲ್ಲೂಕು ಬೆಣಕಿನ ಮಡಗು ಗ್ರಾಮದ ಪಕ್ಕದಲ್ಲಿರುವ ಸೊಲುಕುಂಟೆ ಗ್ರಾಮದ ಪಕ್ಕದಲ್ಲಿ ಕಾಡಿನ ಮಧ್ಯೆ ೧೩ ಅಡಿ ಉದ್ದ ೩ ಅಡಿ ಅಗಲದ 'ನಿಲುವುಗಲ್ಲು' ಒಂದಿದೆ. ಈ ಸ್ಮಾರಕ ಸ್ತಂಭದ ಪರಿಸರದಲ್ಲಿ ೧೫೦ಕ್ಕೂ ಹೆಚ್ಚು ಕಲ್ಲುಗುಪ್ಪೆ ಸಮಾಧಿಗಳಿವೆ. ಸ್ಥಳೀಯರು ಇದನ್ನು **ಪಾಂಡವರ ದಿನ್ನೆ** ಎಂದು ಕರೆಯುವರು. ಈ ಪರಿಸರದಲ್ಲಿ ಉಜ್ಜನಿ ಬೆಟ್ಟವಿದ್ದು ಒಂದೆರಡು ಗುಹೆ ಕಲ್ಲಾಸರೆಗಳು ಇವೆ. ಶಿಲಾಯುಗ ಜನರ ಯೋಗ್ಯವಾದ ನೆಲೆ ಇದಾಗಿತ್ತೆಂಬುದಕ್ಕೆ ಸಾಕಷ್ಟು ಕುರುಹುಗಳು ದೊರೆತಿವೆ. ಇಲ್ಲಿನ ಸಮಾಧಿಗಳು ಕೆಲವು 'ನಿಧಿ ಶೋಧಕರ' ದಾಳಿಗೆ ಗುರಿಯಾಗಿದ್ದು ಸ್ವಸ್ತಿಕ್ ಆಕಾರದ ಕಣಜಗಳಂತೆ ಗೋಚರವಾಗುತ್ತವೆ.

ಕಲ್ಕುಂಟೆ ಗ್ರಾಮದ ಬಳಿ ೧೦ ಅಡಿ ಉದ್ದ ೪ ಅಡಿ ಅಗಲದ ಇನ್ನೊಂದು ನಿಲುವುಗಲ್ಲು ಇದ್ದು ಇದರ ಸುತ್ತಲೂ ೧೭ ಶಿಲಾವೃತ್ತ ಸಮಾಧಿಗಳಿವೆ. ಇಲ್ಲಿಂದ ಸ್ವಲ್ಪ ಮುಂದೆ ಬೆಟ್ಟದ ತಪ್ಪಲಲ್ಲಿ ಹಾಲು ಚಿಲುಮೆ ಬಳಿ ೧೨ ಅಡಿ ಉದ್ದ ೩ ೧/೨ ಅಡಿ ಅಗಲದ ನಿಲುವುಗಲ್ಲೊಂದು ಇದ್ದು ಇದರ ಸುತ್ತಲೂ ೧೯ ಮೇಲ್ಗುಪ್ಪೆ ಸಮಾಧಿಗಳಿವೆ. ಸ್ಥಳೀಯರು ಈ ಸ್ಮಾರಕ ಕಲ್ಲನ್ನು **ಗೂಡ್ಗಲ್ಲು, ಕೋತಿಕಲ್ಲು, ಪಾಂಡವರ ಕಲ್ಲು,** ಎಂದು ಕರೆಯುತ್ತಾರೆ.



ರಾಜಗಟ್ಟ ಗ್ರಾಮದ ಬಳಿ ಬೂದಿಗುಂಡಿಯಲ್ಲಿ ೪ ಹಾದಿ ಕೋಟೆ ಸಮಾಧಿಗಳು ಒಂದು ಅಗೆದು ಹಾಳಾದ ರಂಧ್ರ ಕೋಣೆ ಸಮಾಧಿ ಇದ್ದರೆ ಬೈರಾಪುರ ಗ್ರಾಮದ ಹೊಲಗಳಲ್ಲಿ ೩೨ ಶಿಲಾವೃತ್ತ ಸಮಾಧಿಗಳಿವೆ. ಇದೇ ಹಳ್ಳಿಯ ಪಕ್ಕ ಜಾಲಗೆರೆ ಸಮೀಪ ೧೨ ಅಡಿ ಉದ್ದ ೩ ೧/೨ ಅಡಿ ಅಗಲದ ಒಂದು ನಿಲುವುಗಲ್ಲು ಇದ್ದು ಈ ಪರಿಸರದಲ್ಲಿ ೧೧ ಕಲ್ಲುಗುಪ್ಪೆ ಸಮಾಧಿಗಳಿವೆ. ದೊಡ್ಡ ಬೆಳವಂಗಲ ಸಕ್ಕರೆಗೊಲ್ಲಹಳ್ಳಿ ಮಧ್ಯೆ ಅಕ್ಕತಮ್ಮನ ಹಳ್ಳಿ ಸಮೀಪ ಮಟಗುಂಟೆಯ ಹತ್ತಿರ ಒಂದು ತುಂಡು ಕಲ್ಲಿನ ಸಮಾಧಿ ಇದೆ. ಒಂದು ಚಿಕ್ಕ ನಿಲಸುಗಲ್ಲು ಇದೆ. ಭಕ್ತರಹಳ್ಳಿ ಅಲಪನಹಳ್ಳಿ ಮಧ್ಯೆ ೧೪ ಅಡಿ ಎತ್ತರ ೪ ಅಡಿ ಅಗಲದ ನಿಲಸುಗಲ್ಲು ಇದೆ. ಇದೇ ಪ್ರದೇಶದಲ್ಲಿ ೧೭ ಬೃಹತ್ ಶಿಲಾಸಮಾಧಿಗಳಿವೆ.

ಹುಲುಕಡಿ ಬೆಟ್ಟ, ಮಾಕಳಿದುರ್ಗ ಮತ್ತು ಉಜ್ಜನಿ ಬೆಟ್ಟಗಳ ಆವರಣದಲ್ಲಿ ಕೆಲವು ಕಲ್ಲಿನ ಮಂಟಪಗಳಿವೆ. ಶ್ರೀರಾಮನ ಹಳ್ಳಿಯ ಕಾಡಿನ ಗುಡ್ಡದಲ್ಲಿ ಬಂಡೆಗಳ ಮೇಲೆ ಕೆಲವು ರೇಖಾಚಿತ್ರಗಳಿವೆ, ಆನೆ, ಗೂಳಿ, ನವಿಲು, ಮನುಷ್ಯನ ಚಿತ್ರಗಳಿವೆ. ಈ ಪ್ರದೇಶಗಳಲ್ಲಿ ಮಡಿಕೆ ಚೂರುಗಳು ದೊರೆತಿವೆ. ದೇವನ

* ನಂ. ೮೭೦, ೪ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು - ೪೦



ಹಳ್ಳಿಯ ಕೊಯಿರಾ, ಹೊಸೂರು, ಹರುವನ ಹಳ್ಳಿ, ಜ್ಯೋತಿಪುರ, ಬೇಡರಹಳ್ಳಿ ಸಮೀಪ ಮೂವತ್ತಕ್ಕೂ ಹೆಚ್ಚು ಸಮಾಧಿಗಳಿವೆ.

ದೇವನಹಳ್ಳಿ ದೊಡ್ಡಬಳ್ಳಾಪುರ ರಸ್ತೆಯ ಹೊಸೂರು ಗ್ರಾಮದಲ್ಲಿ ೧೨ ನಿಲಸುಗಲ್ಲುಗಳು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ನೂರಾರು ಸಮಾಧಿಗಳಿವೆ. ಸನಿಹದಲ್ಲಿರುವ ನಿಲುವುಗಲ್ಲುಗಳಲ್ಲಿ ೨ ನಿಲಸುಗಲ್ಲುಗಳು ೨೨ ಅಡಿ ಎತ್ತರವಾಗಿವೆ. ಉಳಿದವು ಆರಿಂದ ೧೧ ಅಡಿ ಎತ್ತರವಾಗಿವೆ.

ಕೊಯಿರಾದ ಒಂದು ಹೊಲದಲ್ಲಿ ೪ ನಿಲಸುಗಲ್ಲುಗಳಿದ್ದು ಒಂದು ೧೬ ಅಡಿ ಎತ್ತರವಿದೆ, ಇನ್ನೆರಡು ೧೦ ಅಡಿ ಎತ್ತರವಿವೆ. ಒಂದು ೭. ಅಡಿ ಎತ್ತರವಿದೆ. ಇಲ್ಲಿರುವ ಸಮಾಧಿಗಳ ಸುತ್ತ ಮೂರರಿಂದ ೯ ಶಿಲಾವೃತ್ತಗಳಿವೆ. ಈ ಸಮಾಧಿಗಳ ಪೂರ್ವದಿಕ್ಕಿನ ಚಪ್ಪಡಿಗಳಿಗೆ ವೃತ್ತಾಕಾರದ ರಂಧ್ರಗಳಿವೆ.

ಈ ಅಂಶಗಳನ್ನು ಗಮನಿಸಿದರೆ ದೊಡ್ಡ ಬಳ್ಳಾಪುರ ಮತ್ತು ದೇವನ ಹಳ್ಳಿಯು ಬೃ.ಶಿ. ಸಂಸ್ಕೃತಿಯ ಅಪೂರ್ವ ನೆಲೆಗಳಾಗಿತ್ತೆಂದು ಹೇಳಬಹುದು.

ಎಂ. ಲೋಕೇಶ್ *
ಬಿ. ಎಸ್. ರಾಜೇಶ್ ಬಾಬು **
ಎಂ. ಎಸ್. ಮರಿದೇವರು ***

# ಗಿರಿಗೌಡನ ದೊಡ್ಡಿಯ ಬೃಹತ್ ಶಿಲಾಯುಗದ ಸಮಾಧಿಗಳು – ಒಂದು ಹೊಸ ಶೋಧ

ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಂತು ಜೀವನವನ್ನು ಪ್ರಾರಂಭಿಸುವ ವೇಳೆಗೆ ಕಲ್ಲಿನ ಆಯುಧಗಳ ಬಳಕೆಯನ್ನು ಕರಗತಮಾಡಿಕೊಂಡಿದ್ದನು. ತನ್ನ ದಿನ ನಿತ್ಯದ ಹಲವಾರು ಕೆಲಸಗಳಿಗೆ ವಿವಿಧ ರೀತಿಯ ಕಲ್ಲಿನ ಆಯುಧಗಳನ್ನು ಉಪಯೋಗಿಸುತ್ತಿದ್ದರಿಂದ ಆ ಕಾಲವನ್ನು ಶಿಲಾಯುಗ ಎಂದು ಕರೆಯಲಾಗಿದೆ.

ಶಿಲಾಯುಗದ ಸಂಸ್ಕೃತಿಯನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ೧) ಪುರಾತನ ಶಿಲಾಯುಗ ೨) ಮಧ್ಯ ಶಿಲಾಯುಗ ಮತ್ತು ೩) ನೂತನ ಶಿಲಾಯುಗ. ನೂತನ ಶಿಲಾಯುಗಕ್ಕೆ ಸಂಬಂಧಪಟ್ಟ ಪ್ರದೇಶಗಳನ್ನು ಬೆಂಗಳೂರು ಜಿಲ್ಲೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಂಬಂಧಪಟ್ಟ ಇಲಾಖೆಯವರು ಹಾಗೂ ಹವ್ಯಾಸಿ ಸಂಶೋಧಕರು ಗುರುತಿಸಿರುತ್ತಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕಗ್ಗಲೀಪುರ ಹೋಬಳಿಯ 'ಗಿರಿಗೌಡನ ದೊಡ್ಡಿ'ಯ ಬಳಿಯಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬಂದಿವೆ. ಗಿರಿಗೌಡನ ದೊಡ್ಡಿಯ ಬಳಿ ಇರುವ ಬೋಳುಗುಡ್ಡದ ಮೇಲೆ ಮತ್ತು ತಪ್ಪಲಿನಲ್ಲಿ ಸುಮಾರು ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳನ್ನು ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ಪತ್ತೇ ಹಚ್ಚಿರುತ್ತೇವೆ. ಬೆಂಗಳೂರು ಜಿಲ್ಲೆಯಲ್ಲಿ ಈಗಾಗಲೇ ಜಡಿಗೇನಹಳ್ಳಿ (ಹೊಸಕೋಟೆ ತಾಲ್ಲೂಕು), ಸಾವನ ದುರ್ಗ(ಮಾಗಡಿ ತಾಲ್ಲೂಕು), ಚಿಕ್ಕಜಾಲ (ಬೆಂಗಳೂರು ಉತ್ತರ ತಾಲ್ಲೂಕು) ಮತ್ತು ಬನವಳ್ಳಿ (ಚನ್ನಪಟ್ಟಣ ತಾಲ್ಲೂಕು) ಮುಂತಾದ ಕಡೆಯಲ್ಲಿ ಉತ್ಖನನಗಳು ನಡೆದಿವೆ.

ಕಗ್ಗಲೀಪುರ ಹೋಬಳಿಯಲ್ಲಿ ಹಲವಾರು ಬೆಟ್ಟದ ಸಾಲುಗಳಿವೆ. ಕಳೆದ ಬಾರಿ ಮುನಿನಗರದ ಬಳಿಯಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳನ್ನು 'ಅಭಿರುಚಿ ಅಡ್ವೆಂಚರರ್ಸ್ ಕ್ಲಬ್ (ರಿ.)ನ' ಸದಸ್ಯರು ಚಾರಣದ ಸಮಯದಲ್ಲಿ ಗುರುತಿಸಿರುತ್ತಾರೆ.

ಮುನಿನಗರದಿಂದ ಗೊಟ್ಟಿಗೆಹಳ್ಳಿಗೆ ಹೋಗುವ ಬಂಡೀ ರಸ್ತೆಯ ಎಡಭಾಗದಲ್ಲಿ ಸುಮಾರು, ಎತ್ತರದ ವಿಸ್ತಾರವಾದ ಬೆಟ್ಟವಿದೆ. ಸ್ಥಳೀಯರು ಈ ಬೆಟ್ಟವನ್ನು *ಬೋಳು ಗುಡ್ಡ*ಯೆಂದು ಕರೆಯುತ್ತಾರೆ. ಮೇಲ್ಭಾಗದಲ್ಲಿ ಬೃಹದಾಕಾರದ ಮತ್ತು ವಿಸ್ತಾರವಾದ ಬಂಡೆಗಳು ಇರುವುದರಿಂದ ಮರಗಳು ಹೆಚ್ಚಾಗಿ ಬೆಳೆದಿಲ್ಲವಾದ್ದರಿಂದ ಹೀಗೆ ಕರೆಯುತ್ತಿರಬಹುದು.

ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಜನರು ವಾಸವಾಗಿದ್ದ ನೆಲೆಗಳ ಬಳಿಯಲ್ಲಿರುವ ಬೆಟ್ಟಗಳಲ್ಲಿ ಕಲ್ಲಾಸರೆಗಳು ಮತ್ತು ಗುಹೆಗಳಲ್ಲಿ ರೇಖಾಚಿತ್ರಗಳು ಕಂಡುಬರುತ್ತವೆ. ಆದರೆ ಗಿರಿಗೌಡನ ದೊಡ್ಡಿಯ ಬೆಟ್ಟದಲ್ಲಿರುವ ಕಲ್ಲಾಸರೆಗಳಲ್ಲಿ ಯಾವುದೇ ರೇಖಾಚಿತ್ರಗಳು ಕಂಡುಬರುವುದಿಲ್ಲ. ಬೆಟ್ಟದ ಮೇಲೆ ಎರಡು ಬಗೆಯ ಸಮಾಧಿಗಳು ಕಂಡುಬರುತ್ತವೆ:

೧. *ಮೊದಲನೆಯದಾಗಿ ಮೂರು ಕಡೆ ಕಲ್ಲುಗಳನ್ನು ಜೋಡಿಸಿಟ್ಟು ಅವುಗಳ ಮೇಲೆ ಬೃಹದಾಕಾರದ ಚಪ್ಪಡಿಗಳನ್ನು ಮುಚ್ಚಲಾಗಿದೆ. ಇವುಗಳಲ್ಲಿ ಕೆಲವು ಸಮಾಧಿಗಳಿಗೆ ಸುತ್ತಲೂ ಕಲ್ಲುಗಳನ್ನು ಜೋಡಿಸಿದ್ದು ಒಂದೇ ಕಡ ಪ್ರವೇಶವಿರುವಂತೆ ಮಾಡಿದ್ದಾರೆ.*

೨. *ಎರಡನೆಯದಾಗಿ ನೆಲಮಟ್ಟದ ಸಮಾಧಿಗಳ ಮುಚ್ಚಳ ಕಲ್ಲಿನ ಮೇಲೆ ಮಧ್ಯಮ ಗಾತ್ರದ ಬೆಣಚುಕಲ್ಲುಗಳನ್ನು ಗುಡ್ಡೆ ಹಾಕಿ ಅದನ್ನು ವೃತ್ತಾಕಾರದಲ್ಲಿ ಹರಡಿರುವುದು ಮತ್ತು ಕೆಲವು ಸಮಾಧಿಗಳಿಗೆ ಈ ಬೆಣಚು ಕಲ್ಲಿನ ಗುಡ್ಡೆಯ ಸುತ್ತಲೂ ದಪ್ಪನಾದ*

* ನಂ. ೩೨೩೭, ೩ನೇ ಕ್ರಾಸ್, ರಾಜ್ಯೋತ್ಸವ ನಗರ, ಕುಮಾರಸ್ವಾಮಿ ಬಡಾವಣೆ ಬೆಂ-೫೬೦ ೦೭೮
** ನಂ. ೨೯, ಪುಟ್ಟಯ್ಯ ರಸ್ತೆ, ಕಾಮಾಕ್ಷಿಪಾಳ್ಯ, ಬೆಂಗಳೂರು - ೫೬೦ ೦೭೯
*** ಹರ್ಷಿತ ನಿಲಯ, ಚಿನ್ನಿಗಪ್ಪ ಬಡಾವಣೆ, ಕಾಮಾಕ್ಷಿಪಾಳ್ಯ, ಬೆಂಗಳೂರು - ೫೬೦ ೦೭೯

*ಬಂಡೆಯ ಕಲ್ಲುಗಳನ್ನು ವೃತ್ತಾಕಾರವಾಗಿ ಜೋಡಿಸಿದ್ದಾರೆ. ಇಲ್ಲಿ ಒಂದರಿಂದ ಎರಡು ವೃತ್ತಗಳು ಕಂಡುಬರುತ್ತದೆ.*

ಬೆಟ್ಟದ ಮೇಲೆ ಕಂಡು ಬರುವ ಸಮಾಧಿ ಮೇಲೆ ಇರುವ ಅತಿ ದೊಡ್ಡದಾದ ಮುಚ್ಚಳ ಕಲ್ಲಿನ ಅಳತೆ ೭ ೧/೨ ಅಡಿ ಅಗಲ ಮತ್ತು ೧೫ ೧/೪ ಅಡಿ ಉದ್ದ, ಸರಾಸರಿ ೧/೨ ಅಡಿಗಿಂತ ಹೆಚ್ಚು ದಪ್ಪವಾಗಿದೆ. ತುಂಬಾ ಚಿಕ್ಕದಾದ ಸಮಾಧಿ ಎಂದರೆ ೩ ಅಡಿ ಅಗಲ, ೪ ಅಡಿ ಉದ್ದದ ಮುಚ್ಚಳ ಕಲ್ಲನ್ನು ಹೊಂದಿರುವುದಾಗಿದೆ.

ಇದಲ್ಲದೆ, ಬೆಟ್ಟದ ಬುಡದಲ್ಲಿ ಹಲವಾರು ಸಮಾಧಿಗಳು ಕಂಡುಬರುತ್ತವೆ. ಕೆಲವು ಸಮಾಧಿಗಳು ಹಾಳಾಗಿದ್ದರೂ ಉಳಿದವುಗಳ ಅಧ್ಯಯನಕ್ಕೆ, ಕ್ಷೇತ್ರಕಾರ್ಯಕ್ಕೆ ಸಹಾಯಕವಾಗಿದೆ. ನೆಲ ಮಟ್ಟಕ್ಕಿಂತ ಕೆಳಗೆ ನಾಲ್ಕು ಕಡೆಗಳಲ್ಲಿ ಚಪ್ಪಡಿಗಳು ಹುದುಗಿದ್ದು ಅವುಗಳ ಅಳತೆಯನ್ನು ತೆಗೆದುಕೊಳ್ಳಲು ಅನುಕೂಲವಾಗಿದೆ. ೪ ರಿಂದ ೬ ಇಂಚುಗಳಷ್ಟು ದಪ್ಪವಾಗಿದ್ದು, ಉದ್ದ, ಅಗಲ, ಸರಾಸರಿ ೬ ರಿಂದ ೪ ಅಡಿಗಳು. ಆದರೆ ಹೆಚ್ಚಿನ ಸಮಾಧಿಗಳು ನೆಲದಲ್ಲಿ ಹಾಸುಗಲ್ಲುಗಳಾಗಿ ಕಂಡುಬರುತ್ತದೆ. ಸಮಾಧಿಯ ಒಳಗೆ ಮತ್ತು ಹೊರಗಡೆ ವಿವಿಧ ಬಣ್ಣದ ಮಡಕೆ ಚೂರುಗಳು ಕಂಡುಬರುತ್ತವೆ. ಆದರೆ ಈ ಪರಿಸರದಲ್ಲಿ ನಿಲುವು ಗಲ್ಲುಗಳು ಕಂಡುಬರುವುದಿಲ್ಲ. ಕುರುಚಲು ಗಿಡಗಳು ಹೆಚ್ಚಾಗಿರುವುದರಿಂದ ತಪ್ಪಲಿನಲ್ಲಿ ಇನ್ನೂ ಅನೇಕ ಸಮಾಧಿಗಳು ಇರುವ ಸಾಧ್ಯತೆ ಇದೆ. ದಕ್ಷಿಣದಲ್ಲಿ ದಟ್ಟವಾದ ಕಾಡು ಇರುವುದರಿಂದ ಹಾಗೂ ಕಾಡು ಪ್ರಾಣಿಗಳ ಭಯದಿಂದ ವಿಶಾಲವಾದ ಕ್ಷೇತ್ರಕಾರ್ಯವನ್ನು ಮಾಡಲಾಗಿಲ್ಲ. ಇಲ್ಲಿಯೂ ಕೂಡ ಕಲ್ಲುಗಳನ್ನು ವೃತ್ತಾಕಾರದಲ್ಲಿ ಜೋಡಿಸಿದ್ದಾರೆ.

## ಟಿಪ್ಪಣಿಗಳು

೧. ಈ ಲೇಖನವನ್ನು ಸಿದ್ಧಪಡಿಸಲು ಸಲಹೆ ಮತ್ತು ಸೂಚನೆಗಳನ್ನು ನೀಡಿದ ಪೂಜ್ಯ ಗುರುಗಳಾದ ಶ್ರೀ ಜಿ. ಟಿ. ಜಯರಾಮಯ್ಯರವರಿಗೆ ವಂದನೆಗಳು

೨. ಈ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ 'ಅಭಿರುಚಿ ಅಡ್ವೆಂಚರರ್ಸ್ ಕ್ಲಬ್(ರಿ.)ನ ಸದಸ್ಯರಾದ ಮೂರ್ತಿ. ಕೆ, ರೇಣುಕಾಸ್ವಾಮಿ ಎಸ್. ಕೆ. ಮತ್ತು ವಿವೇಕಾನಂದ ಪದವಿಪೂರ್ವ ಕಾಲೇಜಿನ ಅಧ್ಯಾಪಕರಾದ ಶ್ರೀ ವೆಂಕಟನಾರಾಯಣ ಮತ್ತು ಶ್ರೀ ಪದ್ಮನಾಭ ಅವರಿಗೂ ಹಾಗೂ ಪಿ.ಯು. ಸಿ. ವಿಭಾಗದ ಪ್ರಥಮ ಮತ್ತು ದ್ವಿತೀಯ ಕಲಾವಿಭಾಗದ ವಿದ್ಯಾರ್ಥಿನಿಯರಿಗೂ ಕೃತಜ್ಞತೆಗಳು.

ಜೆ. ಟಿ. ಜಯರಾಮಯ್ಯ *
ಎಸ್. ವೈ. ನಿರ್ಮಲ **
ಅರವಿಂದ ಎಸ್. ***

# ಬಂಡಿ ಹಳ್ಳಿಯ ಬೃಹತ್ ಶಿಲಾಯುಗದ ನೆಲೆಗಳು

ಪ್ರಾಚೀನ ಕಾಲದಲ್ಲಿ ಮಾನವನು ಕಲ್ಲಿನ ಆಯುಧಗಳನ್ನು ದಿನನಿತ್ಯದ ಕೆಲಸಕಾರ್ಯಗಳಲ್ಲಿ ಉಪಯೋಗಿಸುತ್ತಿದ್ದನು. ಕಲ್ಲಿನ ಆಯುಧಗಳನ್ನು ಉಪಯೋಗಿಸುತ್ತಿದ್ದರಿಂದ ಆ ಕಾಲವನ್ನು ಶಿಲಾಯುಗದ ಸಂಸ್ಕೃತಿ ಎಂದು ಕರೆಯಲಾಗಿದೆ. ಈ ಶಿಲಾಯುಗದ ಸಂಸ್ಕೃತಿಯನ್ನು ಪುರಾತನ ಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗ ಎಂದು ವರ್ಗೀಕರಿಸಲಾಗಿದೆ.

ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿಯು ಶಿಲಾ ಯುಗದ ಸಂಸ್ಕೃತಿಯ ಕೊನೆಯ ಹಂತವಾಗಿದೆ. ಮಾನವನು ಈ ವೇಳೆಗಾಗಲೆ ಲೋಹದ ತಯಾರಿಕೆಯನ್ನು ಅರಿತುಕೊಂಡಿದ್ದನು. ವಿವಿಧ ರೀತಿಯ ಮಡಕೆಗಳನ್ನು ತಯಾರಿಸುವುದನ್ನು ತಿಳಿದು ಕೊಂಡಿದ್ದನು. ಈ ಸಂಸ್ಕೃತಿಯ ಮುಖ್ಯ ಲಕ್ಷಣಗಳೆಂದರೆ, ಒಂದು ಕಡೆ ನೆಲೆಸಿ ಜೀವನ ನಡೆಸಿದ್ದು ಮತ್ತು ಸತ್ತವರ ಶವಸಂಸ್ಕಾರಕ್ಕಾಗಿ ಬೃಹದಾಕಾರದ ಶಿಲಾಸ್ಮಾರಕಗಳನ್ನು ರಚಿಸಿದ್ದು.

ಭಾರತದ ದಕ್ಷಿಣಭಾಗದಲ್ಲಿ ಈ ಸಂಸ್ಕೃತಿಯ ಅವಶೇಷಗಳು ಹೆಚ್ಚಾಗಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಇಂತಹ ಅನೇಕ ನೆಲೆಗಳನ್ನು ಗುರುತಿಸಿ ಅಧ್ಯಯನ ನಡೆಸಿ ಮಹಾಪ್ರಬಂಧಗಳನ್ನು ರಚಿಸಲಾಗಿದೆ. (ಡಾ॥ ಅ. ಸುಂದರ ಅವರ ಅರ್ಲಿ ಚೆಂಬರ್ ಟೂಂಬ್ಸ ಆಫ್ ಸೌತ್ ಇಂಡಿಯಾ (Early Chamber tombs of South India) ಮತ್ತು ಬಿ. ಕೆ. ಗುರುರಾಜ್ ಅವರ ''ಮೆಗಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ'') ಇದೇ ರೀತಿಯಲ್ಲಿ ಇಂತಹ ಸಂಸ್ಕೃತಿಯ ಮಾಹಿತಿಗಾಗಿ ಕೆಲವು ಸ್ಥಳಗಳಲ್ಲಿ ಈ ಶಿಲಾಗೋರಿಗಳ ಉತ್ಖನನವನ್ನು ಕೈಕೊಳ್ಳಲಾಗಿದೆ. ಪ್ರಮುಖ ವಾದವುಗಳೆಂದರೆ ಜಡಿಗೇನಹಳ್ಳಿ ಉತ್ಖನನ, ಬ್ರಹ್ಮಗಿರಿಯ ಉತ್ಖನನ, ಮಾಸ್ಕಿಯ ಉತ್ಖನನ ಮೊದಲಾದವು.

ತುಮಕೂರು ಜಿಲ್ಲೆಯಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಬಗ್ಗೆ ಕೆಲವರು ಮಾಹಿತಿಗಳನ್ನು ನೀಡಿರುತ್ತಾರೆ. ೧೮೯೨ರಲ್ಲಿ ಬಿ.ಎಲ್. ರೈಸರು ಬೆಳ್ಳಿಬಟ್ಟಲು ಹಳ್ಳಿಯಲ್ಲಿ ಬೃಹತ್ ಶಿಲಾ ಗೋರಿಗಳನ್ನು ಶೋಧಿಸಿ ಪ್ರಕಟಿಸಿದ್ದರು. ಹೆಚ್. ಸ್ಲೇವರ್ ಅವರು ತಿಪಟೂರು ತಾಲ್ಲೂಕಿನ ಕೇರಳ ಕಟ್ಟೆಯಲ್ಲಿ ಅಧ್ಯಯನ ಮಾಡಿದರು. ವಿ. ಆರ್. ಚಲುವರಾಜನ್ ಅವರು ಪಾವಗಡ ತಾಲೂಕಿನ ಬಸವನಬೆಟ್ಟ, ಕಣಿಕಲಬಂಡೆ, ತಪ್ಪಗಾನದೊಡ್ಡಿ ಮೊದಲಾದ ಕಡೆ ಬೃಹತ್ ಶಿಲಾಯುಗದ ನೆಲೆಗಳನ್ನು ಆಕಸ್ಮಿಕವಾಗಿ ಗಮನಿಸಿ ಗುರುತಿಸಿದ್ದಾರೆ. ಇದೇ ರೀತಿಯಲ್ಲಿ ಇತ್ತೀಚೆಗೆ ಕೆ. ಬಿ. ಶಿವಕಾರಕ್‌ರವರು ತುಮಕೂರು ಜಿಲ್ಲೆಯಲ್ಲಿ ಬೃಹತ್ ಶಿಲಾಯುಗದ ನೆಲೆಗಳನ್ನು ಗುರುತಿಸಿದ್ದಾರೆ. ಆದರೂ ತುಮಕೂರು ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಸರ್ವೇಕ್ಷಣ ಕಾರ್ಯವು ಹೆಚ್ಚಾಗಿ ನಡೆದಿಲ್ಲ ಎಂಬುದಾಗಿ ಹೇಳಬಹುದಾಗಿದೆ.

ಇತ್ತೀಚಿನ ನಮ್ಮ ಕ್ಷೇತ್ರಕಾರ್ಯದಲ್ಲಿ ತುಮಕೂರು ಜಿಲ್ಲೆಯ ಕ್ಯಾತಸಂದ್ರದ ಬಳಿಯ ಬಂಡೇಹಳ್ಳಿಯ ಬೆಟ್ಟದ ತಪ್ಪಲಿನಲ್ಲಿ ಕೆಲವು ಬೃಹತ್ ಶಿಲಾಯುಗದ ಸಮಾಧಿಗಳನ್ನು ಗುರುತಿಸಿದ್ದೇವೆ. ಅಭಿರುಚಿ ಅಡ್ವೆಂಚರರ್ಸ್ ಕ್ಲಬ್ ಮತ್ತು ವಿವೇಕಾನಂದ ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಜೊತೆಯಲ್ಲಿ ಆಯೋಜಿಸಿದ ಕ್ಷೇತ್ರಕಾರ್ಯದಲ್ಲಿ ಈ ನೆಲೆಗಳನ್ನು ಗುರುತಿ ಸಲಾಯಿತು. ಬಂಡೇಹಳ್ಳಿಯ ಸಂಜೀವಪ್ಪಗೌಡರ ಹೊಲದಲ್ಲಿ *ಪಾಂಡವರ ದಿಬ್ಬ* ಎಂಬ ಸ್ಥಳದಲ್ಲಿ ಸುಮಾರು ೨೦ ಬೃಹತ್ ಶಿಲಾಯುಗದ ಸಮಾಧಿಗಳನ್ನು ಪತ್ತೆಹಚ್ಚಲಾಯಿತು.

ಬಸದಿ ಬೆಟ್ಟ ಎಂದು ಕರೆಯಲ್ಪಡುವ ಬೆಟ್ಟದ ಪಶ್ಚಿಮ ಭಾಗದಲ್ಲಿ ಸುಮಾರು ½ ಕಿ. ಮೀ. ದೂರದಲ್ಲಿ ಈ ಸಮಾಧಿಗಳು

* ಉಪನ್ಯಾಸಕರು ವಿವೇಕಾನಂದ ಪದವಿ ಪೂರ್ವ ಕಾಲೇಜು, ರಾಜಾಜಿನಗರ, ಬೆಂಗಳೂರು - ೫೬೦ ೦೧೦
** ಸಂಖ್ಯೆ ೩, ಮಹಡಿ, ನರಸಿಂಹಯ್ಯ ಗಾರ್ಡನ್, ಲನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩
*** ಅಂತಿಮ ಬಿ.ಎ. ವಿದ್ಯಾರ್ಥಿ, ಬಸವೇಶ್ವರ ಪದವಿ ಕಾಲೇಜ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಚದುರಿದಂತೆ ಕಂಡುಬರುತ್ತವೆ. ಸಂಜೀವಪ್ಪ ಗೌಡರ ತೋಟದಲ್ಲಿ (ಕಣದಲ್ಲಿ) ೧೦ ಬೃಹತ್ ಶಿಲಾಯುಗದ ಸಮಾಧಿಗಳಿವೆ. ಎರಡು ವೀರಗಲ್ಲುಗಳಿವೆ. ಆದರೆ ವೀರಗಲ್ಲುಗಳಲ್ಲಿ ಶಾಸನವಿಲ್ಲ. ಇಂದಿಗೂ ಸಹ ಈ ಮನೆಯವರು ಈ ಸ್ಥಳದಲ್ಲಿ ಮುನಿಯಪ್ಪ ದೇವರ ಆಚರಣೆ ಮಾಡುತ್ತಾರೆ.

ಇಲ್ಲಿ ಕಂಡು ಬರುವ ಶಿಲಾಗೋರಿಗಳು ಬೃಹತ್ ಶಿಲಾಯುಗಕ್ಕೆ ಸೇರಿರುವುದರಲ್ಲಿ ಸಂಶಯವಿಲ್ಲ. ಕೆಲವು ಸಮಾಧಿಗಳಿಗೆ ವೃತ್ತಾಕಾರವಾದ ಉರುಟು ಕಲ್ಲುಗಳನ್ನು



ಉಪಯೋಗಿಸಿದ್ದಾರೆ, ಕೆಲವು ಸಮಾಧಿಗಳಿಗೆ ಚಪ್ಪಡಿ ಕಲ್ಲುಗಳನ್ನು ವೃತ್ತಾಕಾರವಾಗಿ ನೆಟ್ಟಿರುವುದು ಕಂಡುಬರುತ್ತದೆ. ಕೆಲವು ಸಮಾಧಿಗಳು ಹಾಳಾಗಿದ್ದು ಅವುಗಳ ಒಳರಚನೆಯನ್ನು ತಿಳಿಯಬಹುದಾಗಿದೆ. ಈ ಬೃಹತ್ ಶಿಲಾಯುಗದ ಸಮಾಧಿಗಳ ಒಳರಚನೆಯು ಆಯತಾಕಾರವಾಗಿದೆ. ನಾಲ್ಕು ಕಡೆ ಕಲ್ಲು ಚಪ್ಪಡಿಗಳನ್ನು ಚೌಕಾಕಾರದಲ್ಲಿ ತೊಟ್ಟಿಯಂತೆ ರಚಿಸಿದೆ. ಪೂರ್ವದಿಕ್ಕಿನಲ್ಲಿರುವ ಕಲ್ಲುಚಪ್ಪಡಿಯಲ್ಲಿ ಅರ್ಧಚಂದ್ರಾಕಾರವಾಗಿ ರಂಧ್ರವನ್ನು ಕೊರೆಯಲಾಗಿದೆ. ನಾಲ್ಕೂಕಡೆ ಬಳಸಿರುವ ಕಲ್ಲುಚಪ್ಪಡಿಗಳು ೭½ ಅಡಿ ಗಾತ್ರವುಳ್ಳದ್ದಾಗಿವೆ. ಮೇಲ್ಭಾಗದಲ್ಲಿರುವ ಮುಚ್ಚಳಕಲ್ಲು (Capstone) ೭½ ಅಡಿಗೂ ಹೆಚ್ಚು ದಪ್ಪವಾಗಿದೆ. ಈ ಪರಿಸರದಲ್ಲಿ ಹೆಚ್ಚಾಗಿ ಹಾವುಗಳು ಕಂಡು ಬರುವುದರಿಂದ ಸಮಾಧಿಗಳು ಹಾಳಾಗಿಲ್ಲವೆಂದು ಹೇಳಬಹುದು.

ಇಲ್ಲಿ ಹಾಳಾಗದೆ ಉಳಿದಿರುವ ಸಮಾಧಿ ಕಲ್ಲುಗಳ ಮೇಲೆ ಸಣ್ಣ ಸಣ್ಣ ಕಲ್ಲುಗಳ ರಾಶಿ ಕಂಡುಬರುತ್ತದೆ. ಆದರೆ ಇಲ್ಲಿ ನಿಲವುಗಲ್ಲುಗಳು ಕಂಡುಬರುವುದಿಲ್ಲ. ಪಕ್ಕದಲ್ಲಿರುವ ಬಸದಿ ಬೆಟ್ಟದಲ್ಲಿ ನೈಸರ್ಗಿಕವಾದ ಹಲವಾರು ಕಲ್ಲಾಸರೆಗಳು ಕಂಡು ಬರುತ್ತವೆ. ಈ ಕಲ್ಲಾಸರೆಗಳೂ ಕೆಲವು ಗುಹೆಯಾಕಾರದಲ್ಲಿ ಕಂಡುಬಂದಿವೆ. ಆದರೆ ಈ ಕಲ್ಲಾಸರೆಯಲ್ಲಿ ಯಾವುದೇ ರೀತಿಯ ಅವಶೇಷಗಳಾಗಲಿ ಚಿತ್ರವಾಗಲಿ ಕಂಡುಬಂದಿಲ್ಲ.

ಬಸದಿ ಬೆಟ್ಟದಲ್ಲಿ ಪುರಾತನ ಅವಶೇಷಗಳು ಕಂಡುಬರುತ್ತವೆ. ಇದೊಂದು ಸುಂದರ ತಾಣವಾಗಿದ್ದು ಬೆಟ್ಟದ ಮೇಲೆ ಜೈನಧರ್ಮಕ್ಕೆ ಸಂಬಂಧಪಟ್ಟ ದೇವಾಲಯಗಳಿವೆ. ಹೊಯ್ಸಳರ ಕಾಲದ ಲಿಪಿಯ ಲಕ್ಷಣವುಳ್ಳ ಒಂದು ಪ್ರಕಟಿತ ಶಿಲಾಶಾಸನವಿದೆ. ಮುಖ್ಯ ದೇವಾಲಯದಲ್ಲಿ ಪಾರ್ಶ್ವನಾಥನ ವಿಗ್ರಹವಿದೆ. ನವರಂಗದ ಭುವನೇಶ್ವರಿಯಲ್ಲಿ ಸುಂದರವಾದ ಅಷ್ಟದಿಕ್ಪಾಲಕರನ್ನು ಬಿಡಿಸಿರುತ್ತಾರೆ.

ಈ ಬೆಟ್ಟದಲ್ಲಿ ಕಂಡುಬರುವ ಕಲ್ಲಾಸರೆಗಳನ್ನು ಇನ್ನೂ ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಚಿತ್ರಗಳು ಕಂಡುಬರುವ ಸಾಧ್ಯತೆಗಳಿವೆ. ಈ ಪರಿಸರದಲ್ಲಿ ೪ ವೀರಗಲ್ಲುಗಳು ಕಂಡು ಬರುತ್ತವೆ. ಸಂಪೂರ್ಣವಾಗಿ ನಿರ್ಮಿಸಲಾಗದ ಗುಹೆಯೊಂದು ಇಲ್ಲಿ ಕಂಡುಬರುತ್ತದೆ. ಪ್ರಾಗೈತಿಹಾಸಿಕ ಆಸಕ್ತರನ್ನು ಆಕರ್ಷಿಸುವ ಈ ಸ್ಥಳದಲ್ಲಿ ವೈಜ್ಞಾನಿಕವಾಗಿ ಅಧ್ಯಯನ ಮತ್ತು ಕ್ಷೇತ್ರಕಾರ್ಯ ನಡೆದರೆ ಹೆಚ್ಚಿನ ಮಾಹಿತಿಗಳು ದೊರೆಯುವ ಸಾಧ್ಯತೆಗಳಿವೆ.

*(ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ಹಳ್ಳಿಯ ಪಟೇಲ್ ಸಂಜೀವಪ್ಪಗೌಡರಿಗೆ ಕುಮಾರಿ ಹೇಮ, ಎಂ. ಸವಿತಾ ಹಾಗೂ ಅಭಿರುಚಿ ಅಡ್ವೆಂಚರರ್ಸ್‌ನ ತಂಡದ ಸದಸ್ಯರಿಗೆ ನಮ್ಮ ನಮನಗಳು ಹಾಗೂ ಕೃತಜ್ಞತೆಗಳು).*

ವೀಣಾ ಮಹಾಂತೇಶ್. ಸಿ. *

# ಅಲ್ಲಿಪುರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆ

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಪ್ರಾಕ್ಚಾರಿತ್ರಿಕ ನಿವೇಶನಗಳ ಪೈಕಿ ಅಲ್ಲಿಪುರವು ಒಂದು.

ಅದು ಹೂವಿನ ಹಡಗಲಿಯಿಂದ ಪಶ್ಚಿಮಕ್ಕೆ ಸುಮಾರು ೧೦ ಕಿ. ಮೀ. ಹಾಗೂ ರಾಜವಾಳ (ರಾಜವಾಡ) ದಿಂದ ಪಶ್ಚಿಮಕ್ಕೆ ೩ ಕಿ. ಮೀ. ದೂರದಲ್ಲಿದೆ. ರಾಜವಾಳವು ಈಗಾಗಲೇ ಪುರಾತತ್ವ ದೃಷ್ಟಿಯಿಂದ ಸ್ವಲ್ಪ ಮಟ್ಟಿಗೆ ಸಂಶೋಧಕರಿಗೆ ಪರಿಚಿತವಾದ ನೆಲೆ. ಇಲ್ಲಿ ಸುಮಾರು ೩೦ ಬೃಹತ್ ಶಿಲಾ ಸಂಸ್ಕೃತಿಯ ಕಲ್ಗೋರಿಯ ಅವಶೇಷಗಳಿವೆ. ಇಲ್ಲಿಂದ ಪಶ್ಚಿಮಕ್ಕೆ ಸುಮಾರು ೧೦೦ ಕಿ. ಮೀ. ದೂರದಲ್ಲಿ ಪುರಾತತ್ವ ಸಂಶೋಧಕರಿಗೆ ಪರಿಚಿತವಿರುವ ಹಳ್ಳೂರು ಗ್ರಾಮವಿದ್ದು, ಇಲ್ಲಿ ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳು ದೊರೆತಿವೆ. ಈ ನೆಲೆಯಿಂದ ಉತ್ತರಕ್ಕೆ ಸುಮಾರು ೫ ಕಿ. ಮೀ. ದೂರದಲ್ಲಿ ಸುಮಾರು ೫೦ ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿ ನೆಲೆಯನ್ನು ಆರ್. ಎಸ್. ಪಂಚಮುಖಿ (೧೯೫೦) ಅವರು ಶೋಧಿಸಿದ್ದಾರೆ. ರಾಜವಾಳದ ಕಲ್ಗೋರಿಗಳು ಸ್ವಲ್ಪ ಹೆಚ್ಚು ಕಡಿಮೆ ಇಲ್ಲಿಯ ಕಲ್ಗೋರಿಗಳನ್ನು ಹೋಲುತ್ತವೆ.

ಅಲ್ಲಿಪುರದಿಂದ ಪಶ್ಚಿಮಕ್ಕೆ ಒಂದು ಕಿ. ಮೀ. ದೂರದಲ್ಲಿ ರಾಜಬಾಬು ಎಂಬುವವರ ಜಮೀನಿನಲ್ಲಿ ಮನೆ ಕಟ್ಟಲು ಬುನಾದಿ ತೆಗೆಯುವಾಗ ಭೂಮಿಯಿಂದ ಒಂದೂವರೆ ಅಡಿ ಆಳದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಮೃತ್ಪಾತ್ರೆಗಳು ದೊರೆತಿವೆ. (ಈ ನೆಲೆಯು ತುಂಗಭದ್ರಾ ನದಿಯ ದಕ್ಷಿಣಕ್ಕೆ ಅರ್ಧ ಕಿ. ಮೀ. ದೂರದಲ್ಲಿದೆ.) ಈ ಮಡಿಕೆಗಳನ್ನು ಬಿಡಿಸಿ ನೋಡಲಾಗಿ ಕೇವಲ ಬೂದಿ ಇದ್ದದ್ದು ಕಂಡು ಬಂತು. ಆಗ ಜಮೀನಿನವರು ಈ ಮಡಿಕೆಗಳನ್ನು ಒಡೆದು ಹೊರಗೆ ಎಸೆದರು. ಎರಡು ಮೂರು ತಿಂಗಳ ನಂತರ ನನಗೆ ಮಡಿಕೆ ದೊರೆತ ಸುದ್ದಿಯು ತಿಳಿದು ಕೂಡಲೇ ಸ್ಥಳವನ್ನು ಪರೀಕ್ಷಿಸಿದೆ. ಮಡಿಕೆ ದೊರೆತ ಸ್ಥಳದ ಸಮೀಪದಲ್ಲಿಯೇ ಒಡೆದ ಮಡಿಕೆ ಚೂರುಗಳು ಬಿದ್ದಿದ್ದವು. ಸಾಂಸ್ಕೃತಿಕ ವಿಷಯಗಳನ್ನು ಸಾಧ್ಯವಾದಷ್ಟು ತಿಳಿಯುವ ಉದ್ದೇಶದಿಂದ ಕೆಲವು ಮಡಿಕೆ ಚೂರುಗಳನ್ನು ಸಂಗ್ರಹಿಸಲಾಯಿತು.



ಆಯ್ದ ಮಡಿಕೆ ಚೂರುಗಳನ್ನು ಸ್ಥೂಲವಾಗಿ ಅವುಗಳ ಮೇಲಿನ ಬಣ್ಣದ ಆಧಾರದ ಮೇಲೆ ಎರಡು ವಿಧವಾಗಿ ವಿಂಗಡಿಸಬಹುದು.

೧. ಸ್ವಲ್ಪ ಮಸುಕಾದ ಬೂದು ಬಣ್ಣದ ದಪ್ಪನೆಯ ಮೃತ್ಪಾತ್ರೆಗಳು.

೨. ಮಸುಕಾದ ಕೆಂಪು ಬಣ್ಣದ ಮೃತ್ಪಾತ್ರೆ ಚೂರುಗಳು.

ಮೊದಲನೇ ವರ್ಗದ ಪಾತ್ರೆ ಚೂರುಗಳಲ್ಲಿ ಅರ್ಧ ಗೋಲಾಕೃತಿಯ ಬಟ್ಟಲು ಸ್ಪಷ್ಟವಾಗಿ ಕಾಣುತ್ತದೆ. ಕೆಂಪು ಬಣ್ಣದ ಮಡಿಕೆಗಳಲ್ಲಿ ಕನಿಷ್ಟ ಎರಡು ಆಕೃತಿಗಳನ್ನು ಗುರುತಿಸಬಹುದು.

* ಪರವಾಗಿ ಎಂ. ಪಿ. ಪ್ರಕಾಶ್, ಸಂಖ್ಯೆ ೧, ರೇಸ್‌ವ್ಯೂ ಕಾಟೇಜ್, ರೇಸ್‌ಕೋರ್ಸ್‌ರಸ್ತೆ, ಬೆಂಗಳೂರು - ೫೬೦ ೦೦೧

ಒಂದನೆಯದು ಇಂದಿನ ಚಂಬಿನಾಕಾರದಲ್ಲಿದೆ. ಮೇಲಿನ ಹಿಡಿಕೆಯು ಹೊರಚಾಚಿದ್ದು, ಸ್ವಲ್ಪ ಉಬ್ಬಿದ ಹೊಟ್ಟೆಯನ್ನು ಹೊಂದಿದೆ. ಇನ್ನೊಂದು ಗಡಿಗೆಯ ಆಕೃತಿಯಲ್ಲಿದೆ. ಸಾಮಾನ್ಯ ವಾಗಿ ಈ ಆಕಾರದ ಪಾತ್ರೆಗಳು ಎಲ್ಲಾ ಸಂಸ್ಕೃತಿಯ ಹಂತಗಳಲ್ಲೂ ಕಂಡುಬರುತ್ತವೆ. ಆದರೆ ಭಟ್ಟಿಗಳಲ್ಲಿ ಮಣ್ಣಿನ ಪಾತ್ರೆಗಳನ್ನು ಸುಡುವ ಕ್ರಮದಲ್ಲಿ ಹೊರಮೈನಲ್ಲಿ ಲೇಪಿಸಿದ ಬಣ್ಣಗಳಲ್ಲಿ ಅಲ್ಲಲ್ಲಿ ವ್ಯತ್ಯಾಸಗಳು ಸ್ಪಷ್ಟವಾಗಿ ಕಂಡು ಬರುತ್ತವೆ. ಅಧ್ಯಯನಕ್ಕೆ ಒಳಪಡಿಸಿದಾಗ ಈ ಪಾತ್ರೆಗಳು ಮಸ್ಕಿ, ಬ್ರಹ್ಮಗಿರಿ, ತಡಕನಹಳ್ಳಿ ಮೊದಲಾದೆಡೆ ದೊರೆತ ಬೃಹತ್ ಶಿಲಾಸಂಸ್ಕೃತಿಯ ಮಡಿಕೆಗಳನ್ನು ಹೋಲುತ್ತವೆ. ಇವುಗಳಲ್ಲಿ ಎಲುಬಿನ ಚೂರುಗಳು ದೊರೆತದ್ದರಿಂದ ಈ ಪಾತ್ರೆಗಳು ಬೃಹತ್ ಶಿಲಾ ಸಂಸ್ಕೃತಿಯವು ಎಂಬುದಂತು ಸುಸ್ಪಷ್ಟ. ಈಗಾಗಲೇ ಸಮೀಪದ ರಾಜವಾಳದಲ್ಲಿ ಬೃಹತ್ ಶಿಲಾ ಸಂಸ್ಕೃತಿಗಳ ಕಲ್ಗೋರಿಗಳನ್ನು ಗಮನಿಸಿದ್ದೇವೆ.

ಬೂದುವರ್ಣದ ಅರ್ಧಗೋಲಾಕೃತಿಯ ಬಟ್ಟಲಿರುವುದನ್ನು ಮೇಲೆ ಹೇಳಿದೆಯಷ್ಟೆ. ಇದರ ಲಕ್ಷಣ ಮತ್ತು ಮಾದರಿಯು ಈ ಪ್ರದೇಶದಲ್ಲಿಯ ಶಿಲಾ ತಾಮ್ರಯುಗ ಸಂಸ್ಕೃತಿಯ ಹಂತದ ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ಹೇರಳವಾಗಿ ದೊರೆಯುತ್ತವೆ. ಆದ್ದರಿಂದ ಇದು ಈ ಸಂಸ್ಕೃತಿಯದ್ದೆಂದು ತಿಳಿಯುವುದರಲ್ಲಿ ತಪ್ಪಿಲ್ಲ. ಇವೆರೆಡು ಸಂಸ್ಕೃತಿಯ ಪಾತ್ರೆಗಳು ಒಂದೆಡೆಯಲ್ಲಿ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಸಿಗುವುದರಿಂದ ಇವೆಲ್ಲವು ನೂತನ ಶಿಲಾಯುಗದ ಕೊನೆಯ ಹಂತ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಆರಂಭದ ಹಂತವನ್ನು ಸೂಚಿಸುತ್ತವೆ. ಆದ್ದರಿಂದ ಇವೆಲ್ಲವನ್ನು ಆದಿಹಂತದವೆಂದು ಗುರುತಿಸಬಹುದಾದರೆ ಸುಮಾರು ಕ್ರಿ. ಪೂ. ೧೧೦೦ - ೯೦೦ರ ಕಾಲಕ್ಕೆ ಸೇರಿದುವಾಗಿ ಕಾಣಿಸುತ್ತವೆ.

ಅಲ್ಲಿಪುರದಿಂದ ಸುಮಾರು ೩ ಕಿ. ಮೀ. ಪಶ್ಚಿಮಕ್ಕೆ ಮಾಗಳದಲ್ಲಿ ಉತ್ತರಕಾಲದ ನೂತನ ಶಿಲಾಯುಗ ಸಂಸ್ಕೃತಿಯ ಬಗ್ಗೆ ವರದಿಯಾಗಿವೆ. ಈ ಪ್ರದೇಶದಲ್ಲಿ ಬೃಹತ್ ಶಿಲಾ ಸಂಸ್ಕೃತಿ, ಉತ್ತರ ಕಾಲ ನೂತನ ಶಿಲಾಸಂಸ್ಕೃತಿಯ ಜನವರ್ಗಗಳು ಪರಸ್ಪರ ಹತ್ತಿರದಲ್ಲಿದ್ದು ಇವೆರಡು ಸಮಕಾಲೀನವಾಗಿದ್ದಿರಬಹುದು. ಆದ್ದರಿಂದ ಮಾಗಳದ ಜನರಿಂದ ಅಲ್ಲಿಪುರದ ಬೃಹತ್ ಶಿಲಾಯುಗದ ಜನರಿಗೆ ಮೇಲೆ ವರ್ಣಿಸಿದ ಬೂದುವರ್ಣದ ಬಟ್ಟಲು ಬಂದಿರಬೇಕು. ರಾಜವಾಳದಲ್ಲಿಯ ಬೃಹತ್ ಶಿಲಾ ಕಲ್ಗೋರಿಗಳಲ್ಲಿ ಯಾವ ಪ್ರಕಾರಗಳ ವಸ್ತು ಅವಶೇಷಗಳಿದ್ದವು ಎಂಬುದನ್ನು ಉತ್ಖನನದಿಂದ ಮಾತ್ರ ತಿಳಿಯಲು ಸಾಧ್ಯ. ಆದರೆ ಬಹಳಷ್ಟು ಹಾಳಾಗಿರುವುದರಿಂದ ಇಲ್ಲಿ ಉತ್ಖನನದಿಂದ ತೃಪ್ತಿಕರವಾದ ಅವಶೇಷಗಳು ದೊರೆಯುವುದು ಅನುಮಾನ. ಮೇಲೆ ವರ್ಣಿಸಿದ ಅಲ್ಲಿಪುರದ ಮಡಿಕೆ ಚೂರುಗಳು ಅಲ್ಪಮಟ್ಟಿಗೆ ಈ ಕೊರತೆಯನ್ನು ನೀಗಿಸುತ್ತವೆ ಮತ್ತು ಇವೆರಡು ಒಂದಕ್ಕೊಂದು ಸಾಂಸ್ಕೃತಿಕವಾಗಿ ಪೂರಕವಾಗಿವೆ.

ಈ ಪಾತ್ರೆಗಳನ್ನು ಅಗೆದು ತೆಗೆದ ಜನರ ಹೇಳಿಕೆಯಂತೆ ಈ ಪಾತ್ರೆಗಳಲ್ಲಿ ಅಸ್ಥಿಯ ಅವಶೇಷದೊಡನೆ ಬೂದಿಯು ದೊರೆತಿದೆ. ಪ್ರಾಯಶಃ ಇವು ಆ ಜನರ ಶವ ಸಂಸ್ಕಾರದ ಪದ್ಧತಿಯ ಒಂದು ವಿಶಿಷ್ಟ ಕ್ರಮವನ್ನು ಸೂಚಿಸುತ್ತದೆ ಎಂದು ತೋರುವುದು. ಅದೆಂದರೆ ದಹನ ಪದ್ಧತಿ. ಮೊದಲು ಶವವನ್ನು ದಹನ ಮಾಡಿ ನಂತರ ಬೂದಿ ಮತ್ತು ಅಸ್ಥಿ ಅವಶೇಷಗಳನ್ನು ಸಂಗ್ರಹಿಸಿ ಪಾತ್ರೆಯಲ್ಲಿಟ್ಟು ಗೋರಿಯನ್ನು ನಿರ್ಮಿಸಿರಬೇಕು. ಆದರೆ ಈ ಒಂದು ಅಭಿಪ್ರಾಯದ ಸತ್ಯಾಸತ್ಯತೆಯು ಅಲ್ಲಿ ದೊರೆತ ಎಲುಬುಗಳ ಪರೀಕ್ಷೆಯಿಂದ ಮಾತ್ರ ಸಾಧ್ಯ. ಆದರೆ ಇಲ್ಲಿ ಅದಕ್ಕೆ ಅವಕಾಶವಿಲ್ಲ. ತೀರ ಅಪರೂಪಕ್ಕೆ ಬೃಹತ್ ಕಲ್ಗೋರಿಗಳಲ್ಲಿ ದಹನ ಪದ್ಧತಿಯ ಬಗ್ಗೆ ತಿಳಿಯುತ್ತದೆ. ಉದಾ : ೧೮೫೦ರ ದಶಕದಲ್ಲಿ ಮೆಡೋಲಾಸ್ ಟೈಲರ್ ಎಂಬ ಬ್ರಿಟಿಷ್ ಅಧಿಕಾರಿಯು ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಚಿಕ್ಕನಹಳ್ಳಿಯಲ್ಲಿ ಕೆಲವೊಂದು ಕಲ್ಗೋರಿಗಳನ್ನು ಅಗೆದಾಗ ಕೆಲವು ದಹನ ಪದ್ಧತಿಯ ಕುರುಹುಗಳು ಕಂಡುಬಂದುವು. ಇವರು ಈ ಮುಂಚೆ ಇದೇ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ಜೇವರ್ಗಿ ಮತ್ತು ಆಂಡೋಲಾಗಳಲ್ಲಿ ಇದ್ದ ನೂರಾರು ವೃತ್ತಕಟ್ಟೆ ಕಲ್ಗೋರಿಗಳನ್ನು ಶೋಧಿಸಿ ಕೆಲವೊಂದನ್ನು ಉತ್ಖನನ ಮಾಡಿದ್ದನು. ಅವುಗಳಲ್ಲಿ ಶವಗಳನ್ನು ಹೂಳಿದ ಪದ್ಧತಿಯ ಲಕ್ಷಣದ ಕಂಡು ಬಂದುವು. ಮತ್ತು ಇವನು ತುಂಬಾ ಎಚ್ಚರಿಕೆಯಿಂದ ಇಂಥ ಕ್ಷೇತ್ರ ಕಾರ್ಯವನ್ನು ನಡೆಸುತ್ತಿದ್ದನು. ಆದ್ದರಿಂದ ಚಿಕ್ಕನಹಳ್ಳಿಯ ಶವಸಂಸ್ಕಾರದ ಬಗ್ಗೆ ಹೇಳಿರುವ ಅವರ ಅಭಿಪ್ರಾಯದಲ್ಲಿ ಸತ್ಯವಿದೆ ಎನ್ನಿಸುತ್ತದೆ. ಒಟ್ಟಿನಲ್ಲಿ ಬೃಹತ್ ಶಿಲಾಸಂಸ್ಕೃತಿಯಲ್ಲಿ ಈ ಶವಸಂಸ್ಕಾರ ಪದ್ಧತಿಯು ರೂಢಿಯಲ್ಲಿತ್ತು-ಎಂಬುದಕ್ಕೆ ಅಲ್ಲಿಪುರದ ಈ ಪುರಾವೆಗಳು ಹೆಚ್ಚು ಪುಷ್ಟಿ ನೀಡುತ್ತದೆ.

ಈ ಮೃತ್ಪಾತ್ರೆ ಚೂರುಗಳು ದೊರೆತ ಸನ್ನಿವೇಶವು ಸ್ವಾರಸ್ಯಕರವಾಗಿದೆ. ಸ್ವಲ್ಪಪುಡಿ (ಸುಣ್ಣದ ಹರಳು) ಮಣ್ಣು ಇದ್ದು, ಇಲ್ಲಿ ಯಾವುದೇ ಸಸ್ಯ ಅಥವಾ ಗಿಡಗಳು ಬೆಳೆಯುವುದಿಲ್ಲ. ಆದ್ದರಿಂದ ಶವಸಂಸ್ಕಾರ ಮಾಡಿದ ಜನರು ಮನುಷ್ಯ ಮತ್ತು ಪ್ರಾಣಿಗಳಿಗೆ ಉಪಯೋಗವಾಗದಂಥ ಸ್ಥಳದಲ್ಲಿ ಶವಸಂಸ್ಕಾರವನ್ನು ಮಾಡಿದ್ದುದು ಸ್ಪಷ್ಟವಾಗಿದೆ. ಇದರಿಂದ ಭೂಮಿಯನ್ನು ಒಳ್ಳೆಯ ರೀತಿಯಲ್ಲಿ ಉಪಯೋಗ ಮಾಡಿಕೊಳ್ಳುವ ಲೌಕಿಕ ಚತುರತೆಯನ್ನು ಅರಿತು ಸ್ಥಳ ಆಯ್ಕೆ ಮಾಡಿರಬಹುದು ಎಂಬುದು ತಿಳಿಯುತ್ತದೆ. ಹಡಗಲಿ ತಾಲ್ಲೂಕಿನ ತುಂಗಭದ್ರ ದಂಡೆಯ ಮೇಲೆ ಇಂಥ ಅನೇಕ ನೆಲೆಗಳಿದ್ದು, ಅವುಗಳ ಕೂಲಂಕಷ ಅಧ್ಯಯನ ಅವಶ್ಯಕವಾಗಿದೆ.

*(ಪ್ರಸ್ತುತ ಲೇಖನವನ್ನು ಪ್ರೊ|| ಅ. ಸುಂದರ ಅವರೊಡನೆ ಚರ್ಚಿಸಿ ರಚಿಸಲಾಗಿದೆ. ಪ್ರೊ|| ಅ. ಸುಂದರ ಅವರಿಗೂ ಮತ್ತು ಗ್ರಾಮಸ್ಥರಿಗೂ ನಾನು ಕೃತಜ್ಞನಾಗಿದ್ದೇನೆ).*

ಹೆಚ್. ತಿಪ್ಪೇಸ್ವಾಮಿ *

# ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು

ಮಾನವ ಬರಹ ಅಥವಾ ಲೇಖನ ಕಲೆಯನ್ನು ಕಂಡುಕೊಳ್ಳುವ ಪೂರ್ವದ ಕಾಲವನ್ನು ಚರಿತ್ರೆ ಪೂರ್ವ ಕಾಲ ಎನ್ನುತ್ತಾರೆ. ಆಗ ಮನುಷ್ಯ ನದಿ, ಹಳ್ಳಗಳ ಹತ್ತಿರ, ಕಲ್ಲಾಶ್ರಯಗಳಲ್ಲಿ ವಾಸ ಮಾಡುತ್ತಾ ಪ್ರಕೃತಿಯ ಅಧೀನದಲ್ಲೇ ತನ್ನ ಜೀವನವನ್ನು ಸಾಗಿಸುತ್ತಾ ಕಲ್ಲಿನಿಂದ ಆಯುಧಗಳನ್ನು ತಯಾರಿಸಿ ಆಹಾರ ಸಂಗ್ರಹಣೆ ಮತ್ತು ರಕ್ಷಣೆಗಾಗಿ ಅವುಗಳನ್ನು ಬಳಸುತ್ತಿದ್ದನು. ಕ್ರಮೇಣ ಕೃಷಿಯಲ್ಲಿ ತೊಡಗಿದ್ದು ಅಲ್ಲದೆ ಉಜ್ಜಿ ನಯಗೊಳಿಸಿದ ಕಲ್ಲಿನ ಕೊಡಲಿ, ತಾಮ್ರ, ಕಬ್ಬಿಣದ ಆಯುಧಗಳನ್ನು ನಿರ್ಮಿಸುವ ತಂತ್ರಗಳನ್ನು ಅಳವಡಿಸಿಕೊಂಡನು. ಆತನ ಕಾರ್ಯಚಟುವಟಿಕೆಗಳು ಬದಲಾದಂತೆ ಅವುಗಳನ್ನು ವಿವಿಧ ಕಾಲಘಟ್ಟಗಳನ್ನಾಗಿ ಕ್ರಮವಾಗಿ ವಿಂಗಡಿಸಲಾಗಿದೆ.

೧. *ಹಳೆ ಶಿಲಾಯುಗ (ಪೆಲಿಯೋಲಿಥಿಕ್)*

೨. *ಸೂಕ್ಷ್ಮ ಶಿಲಾಯುಗ (ಮೆಸೋಲಿಥಿಕ್)*

೩. *ನವಶಿಲಾಯುಗ (ನಿಯೋಲಿಥಿಕ್)*

೪. *ಬೃಹತ್ ಶಿಲಾಯುಗ (ಮೆಗಾಲಿಥಿಕ್)*

ಸದಾ ಅಲೆದಾಡುತ್ತಿದ್ದ ಮಾನವ ನವ ಶಿಲಾಯುಗದ ವೇಳೆಗೆ ಒಂದು ಕಡೆ ನೆಲೆ ನಿಂತು ವ್ಯವಸಾಯವನ್ನು ಆರಂಭಿಸಿ ಬೃಹತ್ ಶಿಲಾಯುಗದ ಹೊತ್ತಿಗೆ ಅದರಲ್ಲಿ ಯಶಸ್ವಿಯಾಗಿ ತಾನು ಸ್ವಾವಲಂಬಿ ಎಂಬುದನ್ನು ತೋರಿಸಿಕೊಟ್ಟ.

ಆಂಗ್ಲ ಭಾಷೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯನ್ನೇ ಮೆಗಾಲಿಥಿಕ್ ಕಲ್ಚರ್ ಎನ್ನುತ್ತಾರೆ. ಈ ಕಾಲದ ಜನರು ಮರಣ ಹೊಂದಿದಾಗ ವ್ಯಕ್ತಿಯ ಶವ ಸಂಸ್ಕಾರಕ್ಕಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿ ಕಲ್ಗೋರಿಗಳನ್ನು ಕಟ್ಟಿ ಅದರಲ್ಲಿ ಶವಗಳನ್ನಿಟ್ಟು ಹೂಳುತ್ತಿದ್ದರು. ಹಾಗಾಗಿ ಬೃಹತ್ ಶಿಲಾಯುಗ ಸಂಸ್ಕೃತಿ ಎನ್ನುತ್ತಾರೆ. ಇದೇ ಅವಧಿಯಲ್ಲಿ ಕಬ್ಬಿಣ, ಪ್ರಾಚುರ್ಯಕ್ಕೆ ಬಂದಿದ್ದರಿಂದಾಗಿ ಮತ್ತು ಕಬ್ಬಿಣದಿಂದ ವಿವಿಧ ಆಯುಧಗಳನ್ನು ತಯಾರಿಸಿ ಉಪಯೋಗಿಸಿದ್ದರಿಂದಾಗಿ ಈ ಯುಗವನ್ನು ಕಬ್ಬಿಣ ಯುಗವೆಂದೂ ಕರೆಯುತ್ತಾರೆ.

ಈ ಸಂಸ್ಕೃತಿಗೆ ಸೇರಿದ ಅನೇಕ ನೆಲೆಗಳು ಕರ್ನಾಟಕ, ಕೇರಳ, ಆಂಧ್ರ, ಮಹಾರಾಷ್ಟ್ರ ಮತ್ತಿತರೆ ರಾಜ್ಯಗಳಲ್ಲಿ ಕಂಡು ಬಂದಿದ್ದು ಕರ್ನಾಟಕದಲ್ಲಿ ಮೆಡೋಸ್‌ಟೇಲರ್, ಶೇಷಾದ್ರಿ, ಎಂ. ಎಚ್. ಕೃಷ್ಣ, ನಾಗರಾಜರಾವ್, ಡಾ॥ ಅ. ಸುಂದರ, ಕೃಷ್ಣಮೂರ್ತಿ, ಪೂಣಚ್ಚ, ಡಾ॥ ಕೆ. ಕೆ. ಸುಬ್ಬಯ, ಲಕ್ಷ್ಮಣ್ ತೆಲಗಾವಿ, ಬಾಲಸುಬ್ರಮಣ್ಯ ಮೊದಲಾದ ವಿದ್ವಾಂಸರ ಶೋಧನೆಯಿಂದಾಗಿ ಚಿತ್ರದುರ್ಗ, ಶಿವಮೊಗ್ಗ, ಕೋಲಾರ, ಕೊಡಗು, ಮೈಸೂರು, ತುಮಕೂರು, ಜಿಲ್ಲೆಗಳಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಅನೇಕ ನಿವೇಶನಗಳು ಪತ್ತೆ ಆಗಿದ್ದು ಬಳ್ಳಾರಿ ಜಿಲ್ಲೆಯ ಕುಪ್ಪಗಲ್ಲು, ಸಂಗನಕಲ್ಲು, ಕುಮತಿ, ಹುಲಿಕುಂಟೆಗಳಲ್ಲಿ ಸಹ ಬೃಹತ್ ಶಿಲಾ ಯುಗದ ನೆಲೆಗಳನ್ನು ಸಂಶೋಧಕರು ಗುರುತಿಸಿದ್ದಾರೆ.

ನಮ್ಮ ಕರ್ನಾಟಕದಲ್ಲೂ ಆಯಾ ಪ್ರದೇಶಗಳ ಐತಿಹ್ಯಕ್ಕನು ಗುಣವಾಗಿ ಈ ಕಾಲಕ್ಕೆ ಸೇರಿದ ಪ್ರದೇಶಗಳನ್ನು ಮೋರಿಯರ ಮನೆ, *ಪಾಂಡವರ ಮನೆ, ಮುನಿವಾಸ ಗುಹೆಗಳು, ರಕ್ಕಸಗಲ್ಲುಗಳು, ರಕ್ಕಸ* ಪ್ರದೇಶ ಎಂದು ಕರೆಯುವ ಪ್ರತೀತಿ ಇದ್ದು, ವಿದ್ವಾಂಸರು ಈ ಕಾಲಕ್ಕೆ ಸೇರಿದ ಹತ್ತಕ್ಕಿಂತಲೂ ಹೆಚ್ಚು ಮಾದರಿಯ ವಿಭಿನ್ನ ಶಿಲಾ ಗೋರಿಗಳನ್ನು ಗುರುತಿಸಿದ್ದಾರೆ. ಈ ಕಾಲಕ್ಕೆ ಸೇರಿದ ಇದೇ ಅವಧಿಯ ಅಪರೂಪದ ಮಾನವಾಕೃತಿಗಳು ಕೂಡ್ಲಿಗಿ ತಾಲೂಕಿನ ಕುಮತಿ, ಹುಲಿಕುಂಟೆಗಳಲ್ಲಿ ಕಂಡು ಬಂದಿದ್ದು ಬಹಳ ಮಹತ್ವದಾಯಕವೆನಿಸಿವೆ.

ಕುಮತಿ ಗ್ರಾಮವು ತಾಲ್ಲೂಕ್ ಕೇಂದ್ರವಾದ ಕೂಡ್ಲಿಗಿ ಯಿಂದ ಸು. ೪೦ ಕಿ.ಮೀ. ದೂರದಲ್ಲಿದೆ. ಈ ಪ್ರದೇಶವು ಬಯಲು

* ಸಂಶೋಧನಾ ವಿದ್ಯಾರ್ಥಿ, ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪ್ರದೇಶವಾಗಿದ್ದು, ಸಣ್ಣ ಪುಟ್ಟ ಗುಡ್ಡಗಳನ್ನು ಗ್ರಾಮದ ಸುತ್ತ ಕಾಣಬಹುದಾಗಿದೆ. ಸ್ವಲ್ಪ ಮಟ್ಟಿನ ಅರಣ್ಯವಿದ್ದು ಮಳೆಯ ಪ್ರಮಾಣ ಅಷ್ಟೇನು ಹೆಚ್ಚಿಲ್ಲ, ಹಾಗೇಯೇ ಚಿನ್ನಹಗರಿ ನದಿಯು ಈ ಗ್ರಾಮದ ಸಮೀಪದಲ್ಲಿ ಹರಿದು ಹೋಗುತ್ತದೆ. ೧೯೭೬ರಲ್ಲಿ ಪುರಾತತ್ವ ಇಲಾಖೆಯ ಬೆಂಗಳೂರು ಶಾಖೆಯವರು ಕೆ. ಪಿ. ಪೂಣಚ್ಚ ಇವರ ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಗ್ರಾಮಾಂತರ ಸರ್ವೇಕ್ಷಣ ಕಾರ್ಯದ ಸಂದರ್ಭದಲ್ಲಿ ಈ ನೆಲೆಯನ್ನು ಅನ್ವೇಷಿಸಿ ವರದಿ ಮಾಡಲಾಯಿತು. ಒಂದು ಕಂಡಿ ಕೋಣೆಯ ಕಲ್ಗೋರಿ, ಮಾನವಾಕಾರದ ಏಕಶಿಲಾಸಮುಚ್ಚಯಗಳು, ಇವುಗಳ ಆಧಾರದ ಮೇಲೆ ಇದೊಂದು ಬೃಹತ್ ಶಿಲಾಯುಗದ ನೆಲೆ ಎನ್ನಬಹುದು.

ಈ ಗ್ರಾಮದ ಕೆರೆದಂಡೆಯ ಉತ್ತರಕ್ಕೆ ಸುಮಾರು ಮುನ್ನೂರು ಮೀಟರ್ ದೂರದಲ್ಲಿರುವ ಕೆ. ಎಂ. ತಿಪ್ಪೇರುದ್ರಯ್ಯ ಎಂಬುವರ ಜಮೀನಿನಲ್ಲಿ ಈ ಸಮುಚ್ಚಯಗಳಿವೆ. ಈ ಸಮುಚ್ಚಯ ದಲ್ಲಿ ಏಳುಮೂಲ ಸ್ಮಾರಕ ಶಿಲ್ಪಗಳಿದ್ದು ಇವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾಫಲಕಗಳನ್ನು ಉಪಯೋಗಿಸಿ ದಕ್ಷಿಣೋತ್ತರವಾಗಿ ಯೋಜಿಸಲಾಗಿದೆ. ಪೂರ್ವಾರ್ಧಮುಖ ವಾಗಿರುವಂತೆ ನಿಲ್ಲಿಸಲಾಗಿದ್ದು ಈ ಶಿಲ್ಪಗಳ ಅಳತೆ ಈ ಕೆಳಗಿನಂತಿದೆ.

ಎಡಭಾಗದ ಶಿಲ್ಪವು ೩.೦೨ ಮೀಟರ್ ಎತ್ತರ, ೨.೪೨ ಮೀಟರ್ (ಎದೆಭಾಗ) ಅಗಲ, ತಳಭಾಗ - ೧.೪೬ ಮೀಟರ್ ಅಳತೆಯನ್ನು ಹೊಂದಿದೆ. ಬಲಭಾಗದ ಶಿಲ್ಪ ೩.೦೭ ಮೀಟರ್ ಉದ್ದ, ೨.೩೯ ಮೀಟರ್ ಅಗಲ (ಎದೆಭಾಗ), ತಳಭಾಗವು ೦.೭೫ ಮೀಟರ್ ಅಳತೆಯನ್ನು ಹೊಂದಿದೆ. ಹಾಗೆಯೇ ಇವೆರಡು ನಡುವಿನ ಶಿಲ್ಪಗಳ ನಡುವಿನ ಅಂತರ ೫.೭೫ ಮೀಟರ್ ಇದೆ.

೧೯೯೮ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಪುರಾತತ್ವ ವಿಭಾಗದ ಮುಖ್ಯಸ್ಥರಾದ ಶ್ರೀ ಬಾಲಸುಬ್ರಮಣ್ಯ ಇವರ ನೇತೃತ್ವದ ತಂಡವು *[೧] ಹಮ್ಮಿಕೊಂಡಿದ್ದ ಸರ್ವೇಕ್ಷಣಾ ಸಮಯದಲ್ಲಿ ಕರ್ನಾಟಕದಲ್ಲೇ ಮೊದಲ ಬಾರಿಗೆ ಶಿಲಾ ವೃತ್ತದೊಳಗಡೆ ಮೂರು ಮಾನವಾಕೃತಿಯ ಏಕಶಿಲಾ ಸಮುಚ್ಚಯಗಳನ್ನು ಮತ್ತು ಮಡಿಕೆ ಚೂರು ಕಬ್ಬಿಣ ತಯಾರಿಸುವ ಕೆಲ ಅವಶೇಷಗಳನ್ನು ಹುಲಿಕುಂಟೆ ಗ್ರಾಮದ ವಾಯುವ್ಯ ಭಾಗಕ್ಕೆ ಸುಮಾರು ಎರಡು ಕಿ.ಮೀ. ದೂರದಲ್ಲಿನ ಹರಿಜನ ಬೋರಕ್ಕ ಎಂಬುವರ ಜಮೀನಿನಲ್ಲಿ ಪತ್ತೆ ಹಚ್ಚಲಾಯಿತು. ಈ ಗ್ರಾಮವು ತಾಲ್ಲೂಕ್ ಕೇಂದ್ರವಾದ ಕೂಡ್ಲಿಗಿಯಿಂದ ಸುಮಾರು ೩೧ ಕಿ.ಮೀ ದೂರದಲ್ಲಿದ್ದು ಈ ಗ್ರಾಮದ ಸಮೀಪ ಗುಡೇಕೋಟೆ ಬೆಟ್ಟಸಾಲು ಹಾದು ಹೋಗುತ್ತದೆ. ಈ ಬೆಟ್ಟದ ಬಳಿ ಕೆರೆ, ಹಳ್ಳಗಳಿದ್ದು ಇಲ್ಲಿನ ಗವಿಗಳು ಪ್ರಾಚೀನ ಮಾನವನ ವಾಸಕ್ಕೆ ಯೋಗ್ಯ ನೆಲೆ ಎಂಬುದನ್ನು ಸಾಬೀತು ಪಡಿಸುತ್ತವೆ.

ಹುಲಿಕುಂಟೆಯ ಮೂರು ಮಾನವಾಕೃತಿಗಳಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದ್ದು ಮತ್ತೊಂದರ ಅರ್ಧಭಾಗ ಭೂಮಿಯಲ್ಲಿ ಅಡಗಿದೆ. ಇನ್ನೊಂದರ ಕೆಲ ಅವಶೇಷಗಳು ಮಾತ್ರ ಲಭ್ಯವಿದೆ. ಅರ್ಧಗೋಲಾಕೃತಿಯ ತಲೆ ಮತ್ತು ಕೈಯನ್ನು ಪಕ್ಕಕ್ಕೆ ಬಾಚಿ ನಿಂತ ಹಾಗೆ ಕಾಣುವ ಸುಸ್ಥಿತಿಯಲ್ಲಿರುವ ಮಾನವಾಕೃತಿಯನ್ನು ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾ ಫಲಕಗಳಿಂದ ನಿರ್ಮಿಸಲಾಗಿದ್ದು, ೧.೮೨ ಮೀಟರ್ ಎತ್ತರ ಹಾಗೂ ೧.೯೯ ಮೀಟರ್ ಅಗಲ ಮತ್ತು ೧೫ ಸೆಂ. ಮೀಟರ್ ನಷ್ಟು ದಪ್ಪವಾಗಿದ್ದು ಈ ಶಿಲ್ಪಗಳನ್ನು ಸಹಾ ದಕ್ಷಿಣೋತ್ತರವಾಗಿ ಯೋಜಿಸಲಾಗಿದ್ದು ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದೆ.



ಇಲ್ಲಿಯ ಸ್ಥಳೀಯರು ಇವುಗಳನ್ನು ರಕ್ಕಸಗಲ್ಲು ರಾಕ್ಷಸ(ಕಲ್ಲು)ಗಳೆಂದು, ಈ ಪ್ರದೇಶವನ್ನು *ರಕ್ಕಸಗೊಂದಿ, ರಕ್ಕಸ ಮಟ್ಟಿ* ಎಂದು ಕರೆಯುತ್ತಾರೆ. ಆದರೆ ಇವುಗಳಿಗೆ ಹುಲಿಕುಂಟೆ ಜನರು ಯಾವುದೇ ಪೂಜೆ ಪುನಸ್ಕಾರಗಳನ್ನು ಮಾಡಿದಂತೆ ಕಾಣುವುದಿಲ್ಲ. ಆದರೆ ಕುಮತಿ ಪ್ರದೇಶದ ಜನರು ಪ್ರಮುಖ ಹಬ್ಬ ಹರಿದಿನಗಳಂದು ಮೊದಲು ಎಡೆ ಇಟ್ಟು ಪೂಜಿಸುವ ಸಂಪ್ರದಾಯ ಎದೆ. ಜೊತೆಗೆ ಅನಂತನ ಹುಣ್ಣಿಮೆಯಂದು ವಿಶೇಷ ಪೂಜೆ ನಡೆಸಿ (ಪರವು ಮಾಡಿ) ವಿವಿಧ ಜನರಿಗೆ ಅನ್ನ ಸಂತರ್ಪಣೆ ಮಾಡುತ್ತಾರೆ. ಸಾಮಾನ್ಯವಾಗಿ ಈ ಸಂದರ್ಭದಲ್ಲಿ ಪಾಯಸ, ಅನ್ನದ ಎಡೆ ಹಾಕಿ ಕಾಯಿ ಕೊಟ್ಟು ಪೂಜಿಸುವ ಪರಿಪಾಠವಿದೆ. ಎರಡು ಪ್ರದೇಶ ಗಳಲ್ಲಿಯೂ ಸಹ ಇವುಗಳ ನಿರ್ಮಾಣದ ಬಗ್ಗೆ ಅನಾದಿ

ಕಾಲದಿಂದಲೂ ಜನಪದರಲ್ಲಿ ಕಂಠಸ್ಥ ಹೇಳಿಕೆಯೊಂದು ಉಳಿದುಕೊಂಡು ಬಂದಿದೆ: ಅದೇನೆಂದರೆ ಹಿಂದೆ ಶ್ರೀ ನುಂಕೇ ಭೈರವೇಶ್ವರ ಎಂಬ ದೇವತಾ ಪುರುಷನು ಬೇಟೆಗಾಗಿ ಬಂದ ಸಂದರ್ಭದಲ್ಲಿ ರಕ್ಕಸರು, ಅಡ್ಡಿಯನ್ನುಂಟುಮಾಡಿದ್ದರಿಂದ (ತೊಂದರೆ) ಶ್ರೀ ನುಂಕೇಭೈರವೇಶ್ವರರು ಕಲ್ಲುಗಳಾಗುವಂತೆ ರಾಕ್ಷಸರಿಗೆ ಶಾಪವಿತ್ತದ್ದರಿಂದಾಗಿ ಅವು ಕಲ್ಲುಗಳಾಗಿ ಜನಮನದಲ್ಲಿ ರಕ್ಕಸಕಲ್ಲುಗಳೆಂದು ಹೆಸರು ಪಡೆದುಕೊಂಡು ಅಸ್ತಿತ್ವದಲ್ಲಿವೆ. *೨

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕ್ ಯರ್ರೇನಹಳ್ಳಿ ಗ್ರಾಮದ ಶ್ರೀ ಅಜ್ಜಮುನಿ ವಿರಚಿತ ಶ್ರೀ ಕಾಲಭೈರವೇಶ್ವರ ಅರ್ಥಾತ್ ಶ್ರೀ ನುಂಕೇಮಲೆ ಸಿದ್ದೇಶ್ವರ ಎಂಬ ಯಕ್ಷಗಾನ ಬಯಲಾಟದಲ್ಲಿ ಇವುಗಳ ನಿರ್ಮಾಣದ ಬಗ್ಗೆ ಸಾಹಿತ್ಯಿಕ ಆಧಾರ ದೊರೆಯುತ್ತದೆ. (ಅಪ್ರಕಟಿತ, ಪು. ಸಂ. ೧೫೩) 'ಭಲ... ಲಲ.. ಅಹೋ ಅಕ್ಕಯ್ಯ ಚೆಂದದಿಂದ ಹಿಂದಕ್ಕೆ ರಕ್ಕಸರೊಡಗೂಡಿ ಬರುವಾಗ ಸಂದಿಸಿದ ದುರ್ಗಟನೆ ಏನೆಂದರೆ ಭಳಿರೇ.... ಅಕುಲ್ಲ ದಾನ್ನವರು ಹುಲ್ಲೇಗಳಂ ಕೊಲ್ಲುವ ಸಮಯದಿ ಯಮ್ಮನ್ನು ತಲ್ಲಣಿಸುವಂತೆ ಮಾಡಿದರು. ಆದರಿಂದ ಭಳಿರೇ..... ಆ ರಕ್ಕಸರನ್ನು ಆ ಕುಮ್ಮಿ ರೇವಿನಲ್ಲಿಯೇ ಕಲ್ಲಾಗಿ ಬೀಳುವಂತೆ ಬಲ್ಲಿದ ಶಾಪವಂ ಕೊಟ್ಟು ಬಂದೆನು. ಅಲ್ಲಿಂದ ಬರಲು ತಡವುಂಟಾಯಿತಮ್ಮ ಶಿವನ ಪುತ್ರಿ ಸದಮಲಗಾತ್ರಿ' ಎಂದು ತನ್ನ ಅಕ್ಕನಿಗೆ ಶ್ರೀ ಭೈರವೇಶ್ವರನು ತಡವೇತಕ್ಕೆಂದು ಕೇಳಿದ್ದಕ್ಕೆ ಉತ್ತರವಾಗಿ ಹೇಳುತ್ತಾನೆ.

ಭಾರತದ ಬೃಹತ್ ಶಿಲಾಯುಗ ಕಾಲಕ್ಕೆ ಸೇರಿದ ವಿವಿಧ ನಿವೇಶನಗಳತ್ತ ನಾವು ಕಣ್ಣಾಡಿಸಿದಾಗ ಅಲ್ಲಲ್ಲಿ ನಿಲಿಸುಗಲ್ಲುಗಳು ದೊರೆಯುತ್ತವೆ. ಹಾಗೇಯೇ ಪಕ್ಷಿಯಾಕಾರದ ಇಲ್ಲವೇ ಅಸ್ಪಷ್ಟ ಮಾನವಾಕಾರದ ಶಿಲ್ಪಗಳು ಆಂಧ್ರಪ್ರದೇಶದ ಮಿಡಿಮಿಲ್ಲ, ದೊಮಾಡ, ತ್ರುತ್ತಿಗುಟ್ಟ, ಡೊಂಗಾ, ಟೊಗು ಮತ್ತು ತೆಮಳು ನಾಡಿನ ಮೊಟ್ಟರು, ಕರ್ನಾಟಕದ ಐಹೊಳೆ, ಹಿರೇಬೆನಕಲ್ಲು, ಮಡಿಕೇರಿ ಹತ್ತಿರ ರಾಮಸ್ವಾಮಿ ಕಣಿವೆಯಲ್ಲಿ, ದೊರೆತಿದ್ದರೂ ಅವು ಸ್ಪಷ್ಟವಾಗಿ ಮಾನವಾಕೃತಿಯನ್ನು ಪಡೆದುಕೊಂಡಿಲ್ಲ, ಆದರೆ ಕುಮತಿ, ಗುಲಕುಂಟೆ ಮಾನವಾಕೃತಿಗಳು ಸ್ಪಷ್ಟವಾಗಿ ಮಾನವಾಕೃತಿ ಗಳಂತೆ ಗೋಚರಿಸುವುದರ ಜೊತೆಗೆ ವಿಶಿಷ್ಟ ಲಕ್ಷಣಗಳನ್ನೊಳ ಗೊಂಡಿರುವುದರಿಂದ ಇವುಗಳು ಅಪರೂಪವೆನಿಸಿವೆ.

ಮೇಲಿನ ನೆಲೆಗಳಲ್ಲಿ ದೊರೆತ ಮಾನವಾಕೃತಿಗಳು ಎರಡು ಕೆಲಸಗಳನ್ನು ಅಡ್ಡಲಾಗಿ ಹಿಡಿದು ಹಸ್ತಗಳನ್ನು ಕೆಳಗೆ ಬಾಗಿಸಿ ನಿಂತ ಮನುಷ್ಯಾಕಾರದಂತಿವೆ. ಹುಡುಗರು ಆಟದಲ್ಲಿ ಹಕ್ಕಿಯಂತೆ ಹಾರುವುದನ್ನು ತೋರಿಸಲು ಕೈಗಳನ್ನು ಈ ರೀತಿ ಚಚ್ಚಿ ಹಿಡಿದು ಸಹಜವಾಗಿ ಓಡಾಡುತ್ತಾರೆ. ಆದ್ದರಿಂದ ಇಂಥ ಕಲ್ಲಿನ ಆಕೃತಿಗಳನ್ನು ಬೃಹತ್ ಪಕ್ಷಿಯೆಂದು ಸಾಮಾನ್ಯ ಜನರು ಗುರುತಿಸುತ್ತಾರೆ. ಇಲ್ಲವೇ ಕೆಲ ಐತಿಹ್ಯಗಳಿಗೆ ಅನುಗುಣವಾಗಿ ಕೆಲ ಹೆಸರುಗಳಿಂದ ಕರೆಯುತ್ತಿರುತ್ತಾರೆ. ಆದರೆ ಮನುಷ್ಯನ ಆಕೃತಿಗಳೆಂದು ವಿದ್ವಾಂಸರು ಸರಿಯಾಗಿ ಗುರುತಿಸಿದ್ದಾರೆ. ಈ ಬೃಹತ್ ಕಲ್ಲಿನ ಗೊಂಬೆಗಳಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಉತ್ತರ ಭಾರತದ ಗಂಗಾನದಿ ಬಯಲಿನ ಪಯರಾಜುಪುರ ಮಧ್ಯ ಪ್ರದೇಶ ಗುಂಗೇರಿಯ ಸ್ಥಳಗಳಲ್ಲಿ ದೊರೆತ ವಿವಿಧ ಅಪೂರ್ವ ತಾಮ್ರದ ಆಕೃತಿಗಳಲ್ಲಿ ಕಾಲುಗಳನ್ನು ಅಗಲಿಸಿ ನಿಂತ ಸಾಂಕೇತಿಕ ಮನುಷ್ಯಾಕಾರದ ಗೊಂಬೆಗಳಂತೆ ಇವುಗಳ ಬದಲಾಗಿ ಗಿಡುಗ ಮೊದಲಾದ ಪಕ್ಷಿ ಚಿತ್ರಗಳಂತೆ ಪಕ್ಕದ ಗರಿಗಳನ್ನು ಅಗಲವಾಗಿ ಪಸರಿಸಿದಂತೆ ಕೆಳಭಾಗವು ಇರುತ್ತದೆ. ಆದ್ದರಿಂದ ಇವು ನಿಜಕ್ಕೂ ಪಕ್ಷಿಯೇ ಸಂಕೇತವಿರಬಹುದೇ? ಇಲ್ಲವೇ ಹಾರುವ ಹಕ್ಕಿಯಂತೆ ಮನುಷ್ಯನನ್ನು ತೋರಿಸುವ ಪ್ರಯತ್ನವಿರಬಹುದೇ? ಎಂಬ ಅನುಮಾನವನ್ನು ಖ್ಯಾತ ಪುರಾತತ್ವ ಶಾಸ್ತ್ರಜ್ಞರಾದ ಡಾ|| ಅ. ಸುಂದರ ಅವರು (ಇತಿಹಾಸ ದರ್ಶನ, ಸಂ-೬, ಪು. ೫-೬ರಲ್ಲಿ) 'ಜಟ್ಟಂಗ್ ರಾಮೇಶ್ವರದಲ್ಲಿಯ ಪ್ರಾಗ್ಯೆತಿಹಾಸಿಕ ಪುರಾತತ್ವ ಅವಶೇಷಗಳು ಈ ಐತಿಹ್ಯ ಒಂದು ವಿವೇಚನೆ' ಎಂಬ ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

ಇವರೇ ಮತ್ತೊಂದೆಡೆ ''ಪ್ರಾಯಶಃ ಕುಮತಿಯ ಗೊಂಬೆಗಳು ಪಂಚಪಾಂಡವರನ್ನು ನಿರ್ದೇಶಿಸುತ್ತವೆಯಂದು ತೋರುತ್ತದೆ. ಈ ಗುಡಿಪಾಡವ ಎಂಬ ಹಬ್ಬವು ಬಲಿಪಾಡ್ಯಮಿ ಯಿಂದ ಆರಂಭವಾಗಿ ಪಂಚಮಿಯಂದು ಮುಕ್ತಾಯವಾಗುವು. ಈ ಪಂಚಮಿಯ ಪಾಂಡವ ಪಂಚಮಿಯೆಂದು ಪ್ರಚಲಿತವಾಗಿ ಒಟ್ಟಿನಲ್ಲಿ ಈ ಗೊಂಬೆಗಳು ಬೃಹತ್ ಶಿಲಾ ಸಂಸ್ಕೃತಿಯ ಧಾರ್ಮಿಕ ನಂಬಿಕೆ, ಭಾವನೆ ಮತ್ತು ಪರಂಪರೆಯನ್ನು ಸೂಚಿಸುವ ಆಕರಗಳಾಗಿರುವುದಷ್ಟೆ ಅಲ್ಲದೆ, ಕರ್ನಾಟಕ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ. ಇದುವರೆಗೂ ಪರಿಶೀಲಿಸಿದ ಬೃಹತ್ ಶಿಲಾಗೋರಿಗಳ ಹಾಗೂ ಅಪರೂಪದ ನಿರ್ಮಿತಿಗಳು ಮತ್ತು ಕಲ್ಲುಗೊಂಬೆಗಳು ಈ ಜನರ ನಿರ್ಮಾಣ ಮತ್ತು ರೂಪಣ ಕಾರ್ಯಗಳಲ್ಲಿ ಸರಳ ಹಾಗೂ ಚತುರ ತಾಂತ್ರಿಕ ಕುಶಲತೆಯನ್ನು ತೋರಿಸುತ್ತವೆ; ತರುವಾಯ ಕಾಲದ ಶಿಲಾ ನಿರ್ಮಿತಿಗಳಿಗೆ ಇವು ನಾಂದಿಯಾಗಿವೆ*೩ ಎಂದಿದ್ದಾರೆ.

ಶ್ರೀ ನುಂಕೇಶ್ವರ ದೇವರ ಶಾಪದಿಂದಾಗಿಯೇ ರಾಕ್ಷಸರು ಕಲ್ಲುಗಳಾಗಿ ನಿಂತಿರುವುದು ಎಂಬ ಅಭಿಪ್ರಾಯವು ಸಮಂಜವಲ್ಲ. ಕಾರಣ ಶ್ರೀ ನುಂಕೇಶ್ವರ (ಶ್ರೀ ನುಂಕೇಮಲ್ಲೇಶ್ವರ) ದೇವಾಲಯ ಇಂದಿಗೂ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಸಮೀಪದ ನುಂಕೇಮಲೆ ಬೆಟ್ಟದಲ್ಲಿದ್ದು ಈ ಪ್ರದೇಶದ ಸುತ್ತಲಿನ ಜನ ಈ ದೇವರನ್ನು ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಮತ್ತು ಶ್ರೀ ನುಂಕೇಮಲ್ಲೇಶ್ವರ ಮತ್ತು ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳನ್ನು ಕದಂಬ ರಾಜರು ನಿರ್ಮಿಸಿ ಆ ದೇವಾಲಯ

ಗಳಿಗೆ ದತ್ತಿ ಬಿಟ್ಟ ಬಗ್ಗೆ ಶಾಸನಗಳು ಮತ್ತು ಕೆಲ ಚರಿತ್ರ ಗ್ರಂಥಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಶ್ರೀ ನುಂಕೇ ಭೈರವೇಶ್ವರ ಕದಂಬರ ಆರಾಧ್ಯದೈವವೆಂದು ತಿಳಿದು ಬಂದಿರುವುದರಿಂದ ಪ್ರಸ್ತುತಾ ದೇವತಾ ಪುರುಷನ ಶಾಪದಿಂದಾಗಿ ಅಥವಾ ಬಾಣ ಪ್ರಯೋಗದಿಂದಾಗಿ ಆಗಿಲ್ಲ. ಬದಲಾಗಿ ನುಂಕಪ್ಪ ಬೃಹತ್ ಶಿಲಾಯುಗದ ಕಾಲದ ಪ್ರಮುಖನಾಗಿರಬೇಕು. ಕುಮತಿ, ಹುಲಿಕುಂಟೆ ಪ್ರದೇಶಗಳಿಗೆ ಆತ ಬೇಟೆಗಾಗಿ ಬಂದಿರಬೇಕು. ಅಲ್ಲಿರುವ ಜನರು ಹೊಸ ಮನುಷ್ಯನೊಡನೆ ಹೋರಾಟಕ್ಕೆ ಇಳಿದಿರಬೇಕು. ಶ್ರೀ ನುಂಕೇಶ್ವರ ಬಹಳ ಬಲಿಷ್ಠನಿರಬೇಕು. ಹಾಗಾಗಿ ಈ ಎರಡು ಪ್ರದೇಶಗಳಲ್ಲೂ ತನ್ನ ವಿರುದ್ಧ ಯುದ್ಧಕ್ಕೆ ಬಂದವರನ್ನು ಕೊಂದಿರಬೇಕು (ಆದಿಮ ಸಮಾಜಗಳಲ್ಲಿ ತಮ್ಮ ಜನರನ್ನು ಹೊರತುಪಡಿಸಿ ಅಂದರೆ ಹೊಸ ಮನುಷ್ಯರು ತಾವಿದ್ದ ಪ್ರದೇಶಕ್ಕೆ ಬಂದರೆ ಅವರೊಡನೆ ಯುದ್ಧಕ್ಕಿಳಿಯುವುದು ಸಾಮಾನ್ಯವಾಗಿತ್ತು.) ಹಾಗಾಗಿ ಅಲ್ಲಿ ಎಷ್ಟು ಜನ ಸತ್ತರೂ ಅವರೆಲ್ಲರ ಸ್ಮರಣೆಗೆ ಮಾನವಾಕಾರದ ಶಿಲ್ಪಗಳನ್ನು ನಿಲ್ಲಿಸಿರಬೇಕು. ನಂತರ ನೋಡಲು ವಿಚಿತ್ರವಾಗಿ ಕಂಡುಬಂದಿದ್ದರಿಂದ ಆ ರೀತಿಯ ಐತಿಹ್ಯವನ್ನು ಜನ ಹುಟ್ಟು ಹಾಕಿರಬೇಕು. ಆದ್ದರಿಂದ ಶಾಪಕೊಟ್ಟು ಮತ್ತು ಬಾಣ ಪ್ರಯೋಗದಿಂದ ನಿರ್ಮಾಣವಾಗಿವೆ ಎಂಬುದ ಜನರ ಐತಿಹ್ಯ.

ಸಂಪೂರ್ಣವಾಗಿ ಮಾನವಾಕೃತಿಯ ಲಕ್ಷಣಗಳನ್ನೊಳಗೊಂಡ ಕುಮತಿ, ಹುಲಿಕುಂಟೆಯ ಶಿಲ್ಪಗಳನ್ನು ಬೇರ್‍ಯಾವ ನೆಲೆಗಳ ಮಾನವಾಕೃತಿಗಳು ಸಮಗಟ್ಟಲಾರವು. ಈ ಮೇಲಿನ ವಿವಿಧ ನೆಲೆಗಳಲ್ಲಿ ಮಾನವಾಕಾರದ ಶಿಲ್ಪಗಳು ಉಗಮವಾಗಿರಬೇಕು. ಅವು ಅಂತಿಮವಾಗಿ ಕುಮತಿ, ಹುಲಿ ಕುಂಟೆಯಂಥ ನೆಲೆಗಳಲ್ಲಿ ಅಂತಿಮ ರೂಪ ಕಂಡಿರಬೇಕು (ಬೆಳವಣಿಗೆ ಆಗಿರಬೇಕು). ಸುಸ್ಥಿತಿಯಲ್ಲಿರುವ ಕುಮತಿಯ ಶಿಲ್ಪಗಳನ್ನು ಬಹು ಸೂಕ್ಷ್ಮವಾಗಿ ಗಮನಿಸಿದರೆ ಎಡಭಾಗದಲ್ಲಿನ ಮಾನವಾಕೃತಿಯು ಪ್ರಾಯಶಃ ಸ್ತ್ರೀಯರು ಇರಬೇಕೆನ್ನಿಸುತ್ತದೆ. ಈ ಶಿಲ್ಪದ ಸೊಂಟದ ಭಾಗ ಚಿಕ್ಕದಾಗಿದ್ದು ಅದರ ಕೆಳಗಿನ ಭಾಗ ದಪ್ಪವಾಗಿದೆ. ಬಲಭಾಗದ ಶಿಲ್ಪಕ್ಕಿಂತ ಇದು ಎತ್ತರದಲ್ಲಿ ಕಡಿಮೆ ಇದೆ. ಆದರೆ ಬಲಭಾಗದ ಶಿಲ್ಪವು ಎತ್ತರವಾಗಿದ್ದು ಸೊಂಟದ ಭಾಗ ಚಿಕ್ಕದಾಗಿರದೆ ನೇರವಾಗಿದೆ. ಹೀಗಾಗಿ ಇವು ಸ್ತ್ರೀ-ಪುರುಷ ಮಾನವಾಕೃತಿಗಳಿರಬಹುದೆನಿಸುತ್ತದೆ..*೪

ಇವುಗಳು ದಕ್ಷಿಣ ಭಾರತದ ಇತರೆ ನೆಲೆಗಳಲ್ಲಿ ದೊರೆಯುವ ನಿಲಸುಗಲ್ಲುಗಳೋಪಾದಿಯಲ್ಲಿದ್ದು ಇವು ಮಾನವಾಕಾರ ಪಡೆದುಕೊಂಡಿವೆ. ಬೃಹತ್ ಶಿಲಾಯುಗ ಕಾಲದ ಜನರು ಸತ್ತಾಗ ಸಮಾಧಿ ಮಾಡುವ ವಿಧಾನಗಳಲ್ಲಿ ಇದೊಂದಾಗಿದೆ. ಕರ್ನಾಟಕದ ಇತರೆ ನೆಲೆಗಳಲ್ಲಿ ದೊರೆಯುವ ಮಾನವಾಕೃತಿ ಶಿಲ್ಪಗಳಿಗಿಂತ ಕುಮತಿ, ಹುಲಿಕುಂಟೆ ಶಿಲ್ಪಗಳು ಭಿನ್ನವಾಗಿದ್ದು, ಅವು ಬಹುಶಃ ಆ ಕುಲದ ಯಜಮಾನ ಅಥವಾ ಹಿರಿಯ ಸತ್ತಾಗ ಅವನ ನೆನಪಿನ ಸ್ಮಾರಕವಾಗಿ ಅದೇ ಆಕಾರದಲ್ಲಿ ಮಾಡಿ ನಿಲ್ಲಿಸಿರಬೇಕು. ಪ್ರಾಯಶಃ ಅಂದಿನ ಜನತೆಯ (ಕಬ್ಬಿಣ ಯುಗದ) ಧಾರ್ಮಿಕ ಹಾಗೂ ಸಾಮಾಜಿಕ ನಂಬಿಕೆಗಳಲ್ಲಿ ಇದು ಸಹ ಒಂದಾಗಿರಬೇಕು. ಪ್ರಸ್ತುತ ಈ ಎರಡು ನೆಲೆಗಳಲ್ಲಿ ಉತ್ಖನನ ನಡೆಸಿದರೆ ಅನೇಕ ಹೊಸ ಅಂಶಗಳು ಬೆಳಕಿಗೆ ಬರುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

*(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿ ನನ್ನ ತಪ್ಪುಗಳನ್ನು ತಿದ್ದಿ ಕೊಟ್ಟ ನನ್ನ ಗುರುಗಳಾದ ಶ್ರೀ ಬಾಲಸುಬ್ರಮಣ್ಯ, ಸಿ. ಮಹದೇವ, ಸಿ. ಎಸ್. ವಾಸುದೇವನ್, ಪ್ರೊ॥ ಲಕ್ಷ್ಮಣ್ ತೆಲಗಾವಿ ಹಾಗು ರಾಜುರಂಗನಾಥನಿಗೆ ಧನ್ಯವಾದಗಳು).*

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಈ ಸಂಶೋಧನಾ ತಂಡದಲ್ಲಿ ನಾನು, ಭೀಮಸಮುದ್ರದ ಎಂ. ರಂಗನಾಥ, ಬಿ. ಸಿದ್ದೇಶರಪ್ಪ, ಎಂ. ಮಂಜುನಾಥ, ಶ್ರೀ ಭೀಮ್ ಮತ್ತು ಹೆಚ್. ಆಂಜನೇಯ ಭಾಗವಹಿಸಿದ್ದವು.

*೨. ಮಂತ್ರಪೂರಿತ ಬಾಣಗಳನ್ನು ರಾಕ್ಷಸರ ಮೇಲೆ ಪ್ರಯೋಗಿಸಿದ್ದರಿಂದಾಗಿ ಅವು ಆ ರೀತಿ ಆಗಿವೆ ಎಂದು ಕೆಲವರು ಹೇಳುತ್ತಾರೆ

*೩. ***ಕರ್ನಾಟಕ ಚರಿತ್ರೆ ಸಂಪುಟ*** – ೧, ಪುಟ. ೨೪೧

*೪. ***ಕುಮತಿಯ ಮಾನವಾಕಾರದ ಶಿಲ್ಪಗಳು – ಒಂದು ಅಧ್ಯಯನ***; ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ

*೫. ಶ್ರೀ ಕಂಠಶಾಸ್ತ್ರಿ ಎಸ್: ***ಪುರಾತತ್ವ ಶೋಧನೆ*** (೧೯೭೫) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

*೬. ***ಕನ್ನಡ ವಿಷಯ ವಿಶ್ವಕೋಶ*** (೧೯೭೧) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

*೭. ರಂಗಪ್ಪ ಟಿ : ***ಶ್ರೀ ನುಂಕೆಮಲೆಯ ಜಾತ್ರಾರ್ಥ*** (೧೯೩೮), ಶ್ರೀ ನುಂಕೆಮಲೇಶ್ವರ ಭಕ್ತ ಮಂಡಳಿ, ಮೊಳಕಾಲ್ಮೂರು

*೮. ***ಇತಿಹಾಸದರ್ಶನ*** (ಸಂಪುಟ – ೬) ಡಾ. ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು

*೯. ಶ್ರೀ ಅಜ್ಜಮುನಿ : ***ಶ್ರೀ ನುಂಕೇಮಲೆಸಿದ್ದೇಶ್ವರ, ಅರ್ಥಾತ್ ಕಲಾಭೈರವೇಶ್ವರ*** (ಯಕ್ಷಗಾನ ನಾಟಕ) ಅಪ್ರಕಟಿತಕೃತಿ

*೧೦. ***Progress of Archaeology in Karnataka*** (1956 - 1972), (1978) : Nagaraja Rao, M. S.(Edit) Directorate of Archaeology and Museum, in karnataka Mysore

*೧೧. Rao K. P. (1988) : ***Deccan Megaliths,*** Sundeep Prakashan, Delhi

*೧೨. Sundra. A (1975) : ***Early Megatithic Chamber Tombs of South India,*** Pustaka Prakasna, Delhi

ವಾಸುದೇವ ಬಡಿಗೇರ *

# ಹಂಪಿ ಪ್ರದೇಶದ ಲೋಹಶಾಸ್ತ್ರ ಕಲೆ

ಭೂಮಿಯ ಮೇಲೆ ಮಾನವ ಜೀವಿ ಉಗಮಗೊಂಡು ಕ್ರಮೇಣ ಆತನ ಕಾರ್ಯ ಚಟುವಟಿಕೆಗಳು ಅಭಿವೃದ್ಧಿ ಹೊಂದುತ್ತಾ ಬಂದವು. ಈ ಕಾರ್ಯದಲ್ಲಿ ಬರವಣಿಗೆಯ ಹಂತಕ್ಕೆ ತಲುಪಿದಾಗ ಅದನ್ನು ಇತಿಹಾಸ ಕಾಲವೆಂದೂ, ಅದರ ಮೊದಲಿನ ಹಂತವನ್ನು ಪ್ರಾಗಿತಿಹಾಸ ಕಾಲವೆಂದೂ ಕರೆಯಲಾಯಿತು. ಪ್ರಾಗಿತಿಹಾಸ ಕಾಲದಲ್ಲಿ ಮಾನವನು ನದಿ-ಹಳ್ಳಗಳ ಪಕ್ಕದಲ್ಲಿ, ಕಾಡು-ಬೆಟ್ಟಗಳಲ್ಲಿ ವಾಸವಾಗಿದ್ದನು. ಆತನ ಜ್ಞಾನ, ಉತ್ಪಾದಿಸುವ ವಸ್ತುಗಳು ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಈ ಸುದೀರ್ಘವಾದ ಅವಧಿಯನ್ನು ಅದಿಶಿಲಾಯುಗ, ಮಧ್ಯ ಶಿಲಾಯುಗ, ನವಶಿಲಾಯುಗ, ಶಿಲಾ ತಾಮ್ರಯುಗ ಹಾಗೂ ಕಬ್ಬಿಣ-ಬೃಹತ್ ಶಿಲಾಯುಗವೆಂದು ವಿಂಗಡಿಸಲಾಯಿತು. ನವಶಿಲಾಯುಗ ಸಂಸ್ಕೃತಿಯಲ್ಲಿ, ತಾವು ವಾಸವಾಗಿರುವ ಭೌಗೋಳಿಕ ಲಕ್ಷಣಗಳಿಗೆ ಹೊಂದಿಕೊಂಡಂತೆ ಒಂದು ಗುಂಪಿನವರು ಪಶುಪಾಲನೆಯನ್ನು ಮತ್ತೊಂದು ಗುಂಪಿನವರು ಕೃಷಿಯನ್ನು ಆರಂಭಿಸಿದರು. ಈ ಯುಗದ ಕೊನೆಯ ಹಂತದಲ್ಲಿ ಅದಿರಿನಿಂದ ತಾಮ್ರವನ್ನು ತಯಾರಿಸುವ ಕಲೆಯನ್ನು ಕಂಡು ಕೊಂಡರು. ಅನಂತರ ಕಬ್ಬಿಣದ ಉತ್ಪಾದನೆಯು ಆರಂಭವಾಯಿತು. ತಾಮ್ರ, ಕಬ್ಬಿಣದ ತಯಾರಿಕೆಯಿಂದ ಜನಜೀವನದಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದವು..

**ಕಬ್ಬಿಣ ಉತ್ಪಾದನೆಯ ಪ್ರಾಚೀನತೆ**

ಅದಿರನ್ನು ಕರಗಿಸಿ ತಾಮ್ರ, ಚಿನ್ನವನ್ನು ಪಡೆಯುವ ಕಲೆ, ಕಬ್ಬಿಣಕ್ಕಿಂತಲೂ ಪ್ರಾಚೀನವಾದುದು. ಇದಕ್ಕೆ ಕಾರಣ ತಾಮ್ರವನ್ನು ೧೨೦೦ ಡಿಗ್ರಿ ಸೆಲ್ಸಿಯಸ್ ಕಡಿಮೆ ಶಾಖದಲ್ಲಿ ಕರಗಿಸಬಹುದು. ಆದರೆ ಕಬ್ಬಿಣವನ್ನು ಕರಗಿಸಲು ೧೮೦೦ ಡಿಗ್ರಿ ಸೆಲ್ಸಿಯಸ್ ಶಾಖ ಬೇಕಾಗುತ್ತದೆ. ಇಷ್ಟೊಂದು ಶಾಖವನ್ನು ಉತ್ಪನ್ನಗೊಳಿಸಬಲ್ಲಂತಹ ತಿದಿಗಳನ್ನು ತಯಾರಿಸುವುದು ಆ ಜನರಿಗೆ ಸಾಧ್ಯವಿರಲಿಲ್ಲ ಈ ಕಲೆ ಅನಂತರ ಬಂದುದು.

ಒಂದು ಹೇಳಿಕೆಯ ಪ್ರಕಾರ ಕ್ರಿ. ಪೂ. ೪೦೦೦ ವರ್ಷಗಳ ಹಿಂದೆಯೇ ಕಬ್ಬಿಣದ ಬಳಕೆ ಇತ್ತು. ಇದಕ್ಕೆ ಸಂಬಂಧಿಸಿದ ಕೆಲವು ಸಾಕ್ಷ್ಯಗಳು ದೊರಕಿವೆ. ದಕ್ಷಿಣ ಆಫ್ರಿಕೆಯಲ್ಲಿ ವರ್ಣದ್ರವ್ಯ ಪಡೆಯಲು ಕಬ್ಬಿಣದ ಅದಿರನ್ನು ತೋಡಿ ತೆಗೆಯುವ ಗಣಿಕೆಲಸ ನಡೆಯುತ್ತಿತ್ತೆಂದು ತೋರುತ್ತದೆ. ಮಧ್ಯಶಿಲಾಯುಗದಲ್ಲಿ ಪ್ರಾರಂಭವಾದ ಈ ಕಲೆ ಕ್ರಮೇಣ ಜಗತ್ತಿನಾದ್ಯಂತ ಹರಡಿತ್ತು.

ಕಬ್ಬಿಣವನ್ನು ಅದಿರಿನಿಂದ ಒಂದು ರೀತಿಯ ಒರಟು ಕುಲುಮೆಗಳಲ್ಲಿ ತಯಾರಿಸುತ್ತಿದ್ದರು. ಕಬ್ಬಿಣದ ಅದಿರನ್ನು ಇದ್ದಿಲಿನೊಡನೆ ಮಿಶ್ರಮಾಡಿ, ಈ ರಾಶಿಯ ಮೂಲಕ ಗಾಳಿ ಬೀಸುವಂತೆ ತಳದಲ್ಲಿ ಒಂದು ರಂಧ್ರ ಮತ್ತು ಮೇಲ್ಭಾಗ ಮತ್ತೊಂದು ರಂಧ್ರವನ್ನಿಟ್ಟು, ಅನಂತರ ಇದ್ದಿಲನ್ನು ಹೊತ್ತಿಸುತ್ತಿದ್ದರು. ಒಂದು ಭಾಗ ಇದ್ದಿಲು ಉರಿದು ಕಾರ್ಬನ್ ಡೈ ಆಕ್ಸೈಡ್ ಆಗುತ್ತಿತ್ತು. ಇದು ಮೇಲೇರಿ ಇದ್ದಿಲಿನಿಂದ ಅಪಕರ್ಷಕವಾಗಿ ಕಾರ್ಬನ್ ಮಾನಾಕ್ಸೈಡ್ ಆಗಿ ಕಬ್ಬಿಣದ ಆಕ್ಸೈಡನ್ನು ಕಬ್ಬಿಣವನ್ನಾಗಿ ಪರಿವರ್ತಿಸುತ್ತಿತ್ತು.

ಇತ್ತೀಚಿನ ಕೆಲವು ಶೋಧಗಳಿಂದ ಗಣಿಗಾರಿಕೆಯ ಮೇಲೆ ಹೊಸಬೆಳಕು ಚೆಲ್ಲುವಂತಹ ಅಂಶಗಳು ಕಂಡುಬಂದಿವೆ. ಸ್ಥಳ ಪರಿಶೀಲನೆಯ ಸಮಯದಲ್ಲಿ ಅದರ ಬಣ್ಣವನ್ನು ನೋಡಿ ಕಬ್ಬಿಣಕ್ಕಾಗಿ ಗಣಿ ಪ್ರದೇಶವನ್ನು ಆಯ್ಕೆ ಮಾಡುವ ಕಲೆಯನ್ನು ಮಧ್ಯ ಭಾರತದ ಅಗಾರಿಯಾ ಎಂಬ ಜನರು ಬಲ್ಲವರಾಗಿದ್ದರು. ಅವರು ಕಂದು, ಕೆಂಪು ಅಥವಾ ಕಪ್ಪು ಬಣ್ಣದ (Haemetite) ಅದಿರನ್ನಾಗಲಿ ಇಲ್ಲವೇ ಕಾಂತಾಕರ್ಷಣೆಯುಳ್ಳ ಅಯಸ್ಸಿಂಧೂರ ಅಥವಾ ಪುಡಿ (Magnetite) ಯನ್ನಾಗಲಿ ಬಳಸುತ್ತಿದ್ದರು. ಕೆಲವು ಸಲ ಜಂಬುಮಣ್ಣಿನೊಂದಿಗೆ (Laterite) ಕೂಡಿಸುತ್ತಿದ್ದುದು ಉಂಟು.

---

* ಸಹಾಯಕ ನಿರ್ದೇಶಕರು, ವಸ್ತು ಸಂಗ್ರಹಾಲಯ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬

ಈ ತಂತ್ರ ಕಬ್ಬಿಣಯುಗದಲ್ಲಿ ಎಲ್ಲಾ ಕಡೆಯೂ ಬಳಕೆಯಲ್ಲಿದ್ದಿರಬಹುದು.

ಕಬ್ಬಿಣದ ಬಳಕೆ ಉತ್ತರ ಭಾರತದಿಂದ ದಕ್ಷಿಣಕ್ಕೆ ಹರಡಿತೆಂದೂ ಇದು ಗಂಗಾನದಿಯ ಬಯಲಿನಲ್ಲಿ ವರ್ಣರಂಜಿತ ಬೂದು ಮಡಿಕೆಗಳ ಮತ್ತು ಮಧ್ಯಭಾರತದಲ್ಲಿ ಕಪ್ಪು-ಕೆಂಪು ಮಡಿಕೆಗಳನ್ನು ಬಳಸುತ್ತಿದ್ದ ಜನರಿಂದ ಪ್ರಾರಂಭವಾಯಿತೆಂದು ಕೆಲವರ ಅಭಿಪ್ರಾಯವಾಗಿದೆ. *ಆದರೆ ಬ್ರಹ್ಮಗಿರಿಯಲ್ಲಿ ಉತ್ಖನನ ಮಾಡಿದ ಮಾರ್ಟಿಮಾರ್ ವೀಲರ್ ಅವರು ಇಲ್ಲಿ ದೊರೆತ ಅವಶೇಷಗಳಿಂದ ಕಬ್ಬಿಣದ ಬಳಕೆ ಉತ್ತರ ಭಾರತದಲ್ಲಿ ರೂಢಿಯಲ್ಲಿರುವ ಮೊದಲೇ ಬಳಕೆಯಲ್ಲಿತ್ತೆಂದು ಹೇಳುತ್ತಾರೆ.* ಇದನ್ನು ಗಮನಿಸಿದರೆ ಹಳ್ಳೂರಿನ (ಧಾರವಾಡ. ಜಿ) ಉತ್ಖನನ ದಿಂದ ಅಲ್ಲಿ ತಯಾರಾದ ಕಬ್ಬಿಣದ ಉಪಕರಣಗಳ ಕಾಲ ಕಾರ್ಬನ್ ೧೪ ರಿಂದ ಕ್ರಿ. ಪೂ. ೧೧ನೇ ಶತಮಾನದಲ್ಲಿ ತಯಾರಾದವೆಂದು ತಿಳಿದು ಬಂದಿದೆ. ಇದರಿಂದ ಕಬ್ಬಿಣದ ಉತ್ಪಾದನೆ ಭಾರತದಲ್ಲಿ ಏಕಕಾಲದಲ್ಲಿ ಪ್ರಾರಂಭವಾದುದನ್ನು ಸೂಚಿಸುತ್ತದೆ.

ಕರ್ನಾಟಕದಲ್ಲಿ ಬ್ರಹ್ಮಗಿರಿ, ಹಳ್ಳೂರು, ಹೆರಕಲ್, ಕೋಮಾರನಹಳ್ಳಿ, ಕುಡುತಿನಿ ಮುಂತಾದ ಸ್ಥಳಗಳಲ್ಲಿ ಕ್ರಿ. ಪೂ. ೧೧ನೇ ಶತಮಾನದಿಂದ ೩ನೇ ಶತಮಾನದವರೆಗೆ ಬೃಹತ್ ಶಿಲಾಸಂಸ್ಕೃತಿಯಲ್ಲಿ ಕಬ್ಬಿಣದ ಉತ್ಪಾದನೆ ಕಂಡು ಬಂದಿದೆ. ಈ ಯುಗದಲ್ಲಿ ಚಿಕ್ಕಪುಟ್ಟ ಅದಿರನ್ನು ಹೊಂದಿದ ಬೆಟ್ಟಗಳ ಆಶ್ರಯದಲ್ಲಿಯೂ ಸಣ್ಣ ಪ್ರಮಾಣದಲ್ಲಿ ಕಬ್ಬಿಣವನ್ನು ಉತ್ಪಾದಿಸಲಾಗುತ್ತಿತ್ತು. ಅಲ್ಲದೆ ಹೊಸಪೇಟೆ, ಸಂಡೂರು - ಬಳ್ಳಾರಿಯವರೆಗೆ ಹರಡಿರುವ ಕಬ್ಬಿಣದ ಅದಿರನ್ನು ಹೊಂದಿದ ಬೆಟ್ಟದ ಆಶ್ರಯದಲ್ಲಿ ಬೃಹತ್ ಪ್ರಮಾಣದ ಕಬ್ಬಿಣದ ಕಾರ್ಯಗಾರವೇ ಬೆಳೆದು ಬಂದಿತ್ತು. ಇಲ್ಲಿ ತಯಾರಾದ ಕಬ್ಬಿಣದ ಉಪಕರಣಗಳು ಸುತ್ತಮುತ್ತಲಿನ ಸ್ಥಳಗಳಿಗೆ ರಫ್ತಾಗುತ್ತಿದ್ದವು.

ಹಿರೇಬೆಣಕಲ್, ಹಂಪಿ ಪ್ರದೇಶದ ಬೃಹತ್ ಶಿಲಾ ಗೋರಿಗಳಲ್ಲಿ ಕಬ್ಬಿಣದ ಉಪಕರಣಗಳು ದೊರಕಿವೆ. ಇಲ್ಲಿಯ ಬೆಟ್ಟಗಳ ಕಲ್ಲಾಶ್ರಯದಲ್ಲಿ ಹೇರಳವಾಗಿರುವ ಗವಿವರ್ಣ ಚಿತ್ರಗಳು. ಈಟಿ, ಭರ್ಚಿ, ಬಾಣ ಮುಂತಾದ ಆಯುಧಗಳನ್ನು ತಯಾರಿಸುತ್ತಿದ್ದುದಕ್ಕೆ ಸಾಕ್ಷಿಯಾಗಿವೆ. ಇಲ್ಲಿಯ ಬೃಹತ್ ಶಿಲಾಗೋರಿಗಳಲ್ಲಿ ದೊರೆತ ಕಬ್ಬಿಣ ಉಪಕರಣಗಳ ವೈಜ್ಞಾನಿಕ ಅಧ್ಯಯನದಿಂದ ಅವುಗಳನ್ನು ಕುಡಿತಿನಿ, ಸಂಡೂರು ಬೆಟ್ಟದ ಅದಿರಿನಿಂದ ಕ್ರಿ.ಪೂ. ೧೦೦೦ದಲ್ಲಿ ತಯಾರಿಸಿದವೆಂದೂ ತಿಳಿದುಬಂದಿದೆ.

*ಹಂಪಿ ಪ್ರದೇಶ :* ಪ್ರಾಗಿತಿಹಾಸ ಕಾಲದಿಂದಲೂ ನಡೆದುಬಂದ ಕಬ್ಬಿಣದ ಉತ್ಪಾದನೆ ಈ ಪ್ರದೇಶದ ಕುಡತಿನಿ, ಲಿಂಗನಬಂಡಿ, ಗೊಲ್ಲರಹಳ್ಳಿ, ನಂದಿಬಂಡಿ, ಚಿಲಕನಹಟ್ಟಿ, ಇಂಗಳದಾಳ, ಕಮಲಾಪುರ ಮುಂತಾದ ಕಡೆಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಅವಶೇಷಗಳು ಕಂಡು ಬರುತ್ತವೆ. ಈ ವ್ಯವಸ್ಥೆ ವಿಜಯನಗರ ಕಾಲದವರೆಗೂ ಭರದಿಂದ ಸಾಗಿ ಕ್ರಮೇಣ ಕಡಿಮೆಯಾಗುತ್ತ ಬಂತು.

*ಲಿಂಗನಬಂಡಿ :* ದೊಡ್ಡ ದೊಡ್ಡ ಬಂಡೆಗಳಿಂದ ಕೂಡಿದ ಬೆಟ್ಟದ ಆಶ್ರಯದಲ್ಲಿರುವ ಲಿಂಗನಬಂಡಿ (ಕೊಪ್ಪಳ. ತಾ) ಯಲ್ಲಿ ಹಾಳು ಮಣ್ಣಿನಿಂದ ಮಿಶ್ರಿತವಾದ ಸು. ೪ ಎಕರೆ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗದ ಆಯುಧಗಳು ಕಬ್ಬಿಣ ಬೃಹತ್ ಶಿಲಾಯುಗದ ಕಪ್ಪು ಕೆಂಪು ಮಡಿಕೆಗಳು ಕಬ್ಬಿಣದ ಕಿಟ್ಟ ಕಬ್ಬಿಣ ತಯಾರಿಸುವ ಕ್ರಿಯೆಯಲ್ಲಿ ಅದರ ರಸ ಸೋರಿ ಮಣ್ಣಿನಲ್ಲಿ ಗಟ್ಟಿಗೊಂಡ ಅವಶೇಷಗಳಿವೆ. ಇವುಗಳನ್ನು ಗಮನಿಸಿದರೆ ಕಬ್ಬಿಣ ಯುಗದ ಆರಂಭಕಾಲದಲ್ಲಿಯೇ ಅದಿರನ್ನು ಕರಗಿಸುವ ಕಲೆ ಇಲ್ಲಿ ನಡೆಯುತ್ತಿತ್ತೆಂದು ತಿಳಿಯುತ್ತದೆ. ವಿಜಯನಗರ, ಅವರ ನಂತರದ ಕಾಲದಲ್ಲಿ ಕಮ್ಮಾರಿಕೆ ಲಿಂಗನಬಂಡಿಯಲ್ಲಿ ನಡೆದು ಬಂದಿತು. ಆ ವೇಳೆಯಲ್ಲಿ ಕಮ್ಮಾರಿಕೆಯಲ್ಲಿ ಪರಿಣಿತನಾದ ಮಾನಪ್ಪಯ್ಯ ಈ ಗ್ರಾಮಕ್ಕೆ ಬಂದು ಬೆಟ್ಟದಲ್ಲಿ ತಂಗಿದ್ದನೆಂದು ಪ್ರತೀತಿ. ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಸಾರುವ ಮಾನಪ್ಪಯ್ಯನ ಗುಡಿ ಬೆಟ್ಟದ ಮೇಲಿದೆ. ಇಂದಿಗೂ ಗುಡಿಯಲ್ಲಿರುವ ಅವಶೇಷಗಳು ಜನರಿಂದ ಪೂಜೆಗೊಳ್ಳುತ್ತಿವೆ.

*ಕುಡತಿನಿ :* ಬಳ್ಳಾರಿ ಜಿಲ್ಲೆಯ ಕುಡತಿನಿ ಗ್ರಾಮವು ಸುದೀರ್ಘವಾದ ಚರಿತ್ರೆಯನ್ನು ಹೊಂದಿದೆ. ಇಲ್ಲಿ ನವಶಿಲಾ ಯುಗದಲ್ಲಿ ಜನವಸತಿ ಬೆಳೆದು ಬಂತು. ಇತಿಹಾಸ ಕಾಲದಲ್ಲಿ ಎಪ್ಪತ್ತು ಹಳ್ಳಿಗಳ ಆಡಳಿತ ಕೇಂದ್ರವಾದ ಈ ಗ್ರಾಮ ''ಸಬಾಳ ಎಳ್ಪತ್ತು'' ಎಂದು ಹೆಸರುವಾಸಿಯಾಗಿತ್ತು. ಪೌರಾಣಿಕ ಹಿನ್ನೆಲೆಯಂತೆ, ಮೊದಲು ಕುಮಾರಸ್ವಾಮಿ ಈ ಸ್ಥಳದಲ್ಲಿ ಬಂದು ಕುಳಿತನೆಂಬ ನಂಬಿಕೆಯಿಂದ 'ಕುಳಿತನೋ' ಎಂಬ ಅಗ್ರಹಾರ ಗ್ರಾಮನಾಮವಾಯಿತು. ಈ ಪ್ರದೇಶದಲ್ಲಿ ಹೇರಳವಾಗಿರುವ ಕಬ್ಬಿಣದ ಅದಿರನ್ನು ಬಳಸಿ ಕಬ್ಬಿಣದ ಉತ್ಪಾದನೆಯಲ್ಲಿ ತೊಡಗಿದರು. ಇಲ್ಲಿ ಪ್ರಾರಂಭವಾದ ಕಬ್ಬಿಣದ ಕಾರ್ಯಾಗಾರ ವಿಜಯನಗರ ಕಾಲದವರೆಗೂ ಮುಂದುವರೆಯಿತು. ನಿರಂತರವಾಗಿ ನಡೆದು ಬಂದ ಈ ಕಾರ್ಯಾಗಾರದಲ್ಲಿ, ಅರಸರಿಗೆ ಶಸ್ತ್ರಾಸ್ತ್ರಗಳನ್ನು ಒದಗಿಸುತ್ತ, ಇತರ ಉಪಕರಣಗಳನ್ನು ಗ್ರಾಮದ ಕಮ್ಮಾರ, ಕಂಚುಗಾರ ಪೇಟೆಗಳಲ್ಲಿ ಮಾರಾಟ ಮಾಡುತ್ತಿದ್ದುದಲ್ಲದೇ, ಸುತ್ತಮುತ್ತಲಿನ ಪ್ರದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.

*ಗೊಲ್ಲರಹಳ್ಳಿ :* ಗೊಲ್ಲರಹಳ್ಳಿ (ಹೊಸಪೇಟೆ ತಾ)ಯಲ್ಲಿ ಸು. ೧೫ ಅಡಿ ಎತ್ತರದ ಕಬ್ಬಿಣ ಕರಗಿಸಿದ ಅವಶೇಷಗಳ ದಿಬ್ಬವಿದೆ. ವಿಜಯನಗರ ಕಾಲದಲ್ಲಿ ಇಲ್ಲಿರುವ ಕಮ್ಮಾರರಿಗೆ

ಕಾಳಿಕಾ ದೇವಾಲಯವನ್ನು ಕಟ್ಟಿಸಿ ದತ್ತಿ ಬಿಡಲಾಯಿತು. ಈ ದಿಬ್ಬದಲ್ಲಿ ದೊರಕಿರುವ ಕೊಳವೆ, ಕಬ್ಬಿಣದ ಕಿಟ್ಟ, ಕುಲುಮೆ ತಯಾರಿಕೆಯಲ್ಲಿ ಬಳಸಿದ ಇಟ್ಟಿಗೆ ಮುಂತಾದ ವಸ್ತುಗಳನ್ನು ಗಮನಿಸಿದರೆ, ಕುಲುಮೆಗಳನ್ನು ಸುಮಾರು ಐದು ಅಡಿ ಎತ್ತರವಾಗಿ (ವೃತ್ತಾಕಾರದಲ್ಲಿ) ನಿರ್ಮಿಸಿ ಗಾಳಿ ಹಾಕಲು ಎರಡು ತಿದಿಗಳನ್ನು ಕೂಡಿಸುತ್ತಿದ್ದರು. ಆಗ ಬಳಸಿದ ಇಕ್ಕಳ, ಭರ್ಚಿ, ಅಡಿಗಲ್ಲು ಈ ದಿಬ್ಬದಲ್ಲಿ ಕಂಡುಬಂದಿವೆ. ಅಡಿಗಲ್ಲನ್ನು ಕಾಳಿಕಾ ದೇವಾಲಯದಲ್ಲಿಟ್ಟು ತಮಟೇಶ್ವರನೆಂದು ಆರಾಧಿಸಲಾಗುತ್ತದೆ.



*ಬೆಲಗ್‌ನಟ್ಟಿ :* (ಹೊಸಪೇಟೆ ತಾ.) ಗ್ರಾಮದಲ್ಲೂ ಕೂಡಾ ಗೊಲ್ಲರ ಹಳ್ಳಿಯಲ್ಲಿರುವಂತೆ ಕಬ್ಬಿಣದ ಉತ್ಪಾದನೆಗೆ ಸಂಬಂಧಿಸಿದಂತೆ ದೊಡ್ಡ ಪ್ರಮಾಣದ ದಿಬ್ಬ ಉಂಟಾಗಿದೆ. ಇಲ್ಲಿಯ ಕಮ್ಮಾರರು ಹೇಳುವಂತೆ ಈ ಉತ್ಪಾದನೆಯಲ್ಲಿ ಒಂದೊಂದು ಕುಲುಮೆಗಳಲ್ಲಿ ದಿನಕ್ಕೆ ಎರಡು ಕಬ್ಬಿಣ ಮುದ್ದೆಗಳನ್ನು ತಯಾರಿಸಿ, ಅವುಗಳನ್ನು ಉಪಕರಣಗಳ ತಯಾರಿಕೆಗೆ ಬಳಸಲಾಗುತ್ತಿತ್ತು.

*ನಂದಿಬಂಡಿ :* ಇದಕ್ಕೆ ಹತ್ತಿರದಲ್ಲಿರುವ ನಂದಿಬಂಡೆ ಗ್ರಾಮದಲ್ಲಿ ಈ ಕಾರ್ಯ ನಡೆಯುತ್ತಿತ್ತು. ಇಲ್ಲಿ ಪ್ರಾಕೃತಿಕವಾಗಿರುವ ನಂದಿ ಆಕಾರದ ದೊಡ್ಡ ಬಂಡೆಯಿಂದ **'ನಂದಿ ಬಂಡೆ'** ಎಂದು ಗ್ರಾಮನಾಮವಾಯಿತು. ಬೆಟ್ಟದ ಆಶ್ರಯದಲ್ಲಿ ಮೊದಲಿದ್ದ ಹಾಳು ಗ್ರಾಮದಲ್ಲಿ ಅಲ್ಲಲ್ಲಿ ಸುಮಾರು ೧೦೦ಕ್ಕೂ ಹೆಚ್ಚು ಕುಲುಮೆಗಳಿವೆ. ವೃತ್ತಾಕಾರದಲ್ಲಿರುವ ಕುಲುಮೆಗಳ ತಳ ೧೪ × ೧೪ ಅಳತೆಯನ್ನು ಗಮನಿಸಿದರೆ ೨ ಅಡಿ ಎತ್ತರವಾಗಿರಬಹುದೆಂದು ಅಂದಾಜು ಮಾಡಬಹುದಾಗಿದೆ. ಇಲ್ಲಿ ನಡೆಯುತ್ತಿದ್ದ ಸಣ್ಣ ಪ್ರಮಾಣದ ಕಬ್ಬಿಣ ತಯಾರಿಕೆಯಲ್ಲಿ ಬೆಟ್ಟದಲ್ಲಿರುವ ಅದಿರನ್ನು ತಂದು ಪುಡಿ ಮಾಡಿ ಎತ್ತರ ಬಂಡೆಗಳ ಮಧ್ಯ ಹಾಕಲಾಗುತ್ತಿತ್ತು. ಅದರಲ್ಲಿರುವ ಮಣ್ಣು ನೀರಿನೊಂದಿಗೆ ಹರಿದು ಹೋಗಿ ಪುಡಿ ಅದಿರು ಮುಂದೆ ಬಂದು ನಿಲ್ಲುತ್ತಿತ್ತು. ಅದನ್ನು ಇದ್ದಿಲಿನೊಡನೆ ಕುಲುಮೆಗೆ ಹಾಕಿ ಗಾಳಿ ಹಾಕಲಾಗುತ್ತಿತ್ತು. ಅದಕ್ಕೆ ಕೆಳಗೆ ಒಂದು ರಂಧ್ರ ಬಿಟ್ಟು ನಳಿಕೆ ಕೂಡಿಸಲಾಗುತ್ತಿತ್ತು. ಈ ನಳಿಕೆಯಿಂದ ಅದಿರು ಕರಗಿ ಸೋರುತ್ತಿದ್ದ ಕಬ್ಬಿಣದ ರಸವನ್ನು ಮುಶಿಗಳಲ್ಲಿ ತುಂಬಿ ಇಡಲಾಗುತ್ತಿತ್ತು. ಇಂಥ ಮುಶಿಗಳು ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುತ್ತವೆ.

ಈ ರೀತಿಯಾಗಿ ಹಂಪಿ ಪ್ರದೇಶದಲ್ಲಿ ನಡೆದು ಬಂದ ಕಬ್ಬಿಣ ಉತ್ಪಾದನೆಯ ನೆಲೆಗಳ ವರದಿಯನ್ನು ಈ ಲೇಖನದಲ್ಲಿ ಪ್ರಸ್ತುತಪಡಿಸಲಾಗಿದೆ. ಇಲ್ಲಿಯ ಭೌಗೋಳಿಕ ಹಿನ್ನೆಲೆ, ಕಬ್ಬಿಣ ಉತ್ಪಾದನೆಯ ತಂತ್ರದಲ್ಲಾದ ಬದಲಾವಣೆ, ಹೊಳಪುಳ್ಳ ಕಬ್ಬಿಣ ಮತ್ತು ಉಕ್ಕು ತಯಾರಿಸಲು ಬಳಸುತ್ತಿದ್ದ ಗಿಡಮೂಲಿಕೆ ಮುಂತಾದವುಗಳ ಬಗ್ಗೆ ವೈಜ್ಞಾನಿಕ ಅಧ್ಯಯನ ಮುಂದುವರಿಸಲಾಗಿದೆ.

ಸ್ಮಿತಾರೆಡ್ಡಿ *

# ದೊಡ್ಡನಾಗಮಂಗಲದ ಗಂಗರ ಶಾಸನ

ಬೆಂಗಳೂರು ನಗರ ಜಿಲ್ಲೆ ದಕ್ಷಿಣ ತಾಲ್ಲೂಕು ಬೇಗೂರು ಹೋಬಳಿಯ ದೊಡ್ಡ ನಾಗಮಂಗಲಕ್ಕೆ ಪೂರ್ವದಿಕ್ಕಿನಲ್ಲಿ ಪಿಲ್ಲಾರೆಡ್ಡಿಯವರ ಹೊಲದಲ್ಲಿ ಶಾಸನವಿದೆ. ಇದು ಕರ್ನಾಟಕದಲ್ಲಿ ವೇಳೆವಾಳಿಗಳನ್ನು ಉಲ್ಲೇಖಿಸುವ ಪ್ರಾಚೀನ ಶಾಸನವಾಗಿದೆ. ೩ ೧/೨ ಅಡಿ ಉದ್ದ ಮತ್ತು ೪ ೧/೨ ಅಡಿ ಅಗಲವಿರುವ, ಈ ಶಾಸನವನ್ನು ಚಪ್ಪಡಿಗಲ್ಲಿನಲ್ಲಿ ಕೆತ್ತಲಾಗಿದ್ದು, ಲಿಪಿ ದುಂಡಗಿದೆ. ಇದು ೪ ಭಾಗಗಳಾಗಿ ಒಡೆದು ಹೋಗಿದ್ದು, ಅದರಲ್ಲಿ ಒಂದು ಭಾಗ ನೆಲದಲ್ಲಿ ಹೂತುಹೋಗಿದೆ. ಹೀಗಾಗಿ ಶಾಸನ ಶಿಲ್ಪದಲ್ಲಿರುವ ಶಿಲ್ಪದ ಮೇಲ್ಭಾಗ ಅಸ್ಪಷ್ಟವಾಗಿದ್ದು ಇಬ್ಬರು ವೀರರ ಚಿತ್ರವೆಂದು ಗುರುತಿಸಬಹುದಷ್ಟೆ.

### ಶಾಸನ ಪಾಠ

೧ ××××

೨ ××× ಪಡುವ[ಲ್ಲಿ] ×××

೩ ಲ್ಲಿ × ಕರಳಕಲಿ ಕಜ್ಙರ × ಳಿ

೪ ಕದಮ್ಬಕಮ್ಮಾರಮ್ಮರಸರ್ ವಿಟ್ಟಲ್ಲಿ ಪ

೫ ಡೆತತು ನಾಗಮಙ್ಗಲಂ ತೋಟ ಕಟಿ

೬ ಇಞ್ಞು ಇದನ್ನಟಿವೋನ್ ಪಞ್ಚ

೭ ಮಹಾ ಪಾದಕನ್ನಕ್ಕುಂ ಇದನ್ ಕಾಪ್ಪೋನ್ ನಡಿ ಮೇ [ಲೆ] ಎನ್ನಟಿಲ್ಲ ವೆನ್ನೊತ್ತಮ್ಮು ಕಟನಿ ಇರ್ ತುಬು ಪಟಿ?

೮ ಕನಕಾದಿ ನತಮರನ್ ಕೊಟ್ಟುದು, ಮಜುತಲೆ ಆಗಿ ವಿಟ್ಟೋರ್ ವೇಲವಸನ್ತಿಯುಂ ದೇವನಾಗನುಂ.

ಶಾಸನವಿದ್ದ ಒಂದು ಭಾಗ ನೆಲದಲ್ಲಿ ಹೊತುಹೋಗಿದೆ. ಉಳಿದ ಶಾಸನವಿರುವ ಭಾಗದಲ್ಲಿ ಮೊದಲ ಮೂರು ಸಾಲುಗಳು ತುಂಬಾ ಅಸ್ಪಷ್ಟತೆಯಿಂದ ಕೂಡಿದೆ. ೪ನೇ ಸಾಲಿನಿಂದ ಸಷ್ಟವಾಗಿದೆ.

ಕದಂಬ ವಂಶದ ಮಾರಮ್ಮರಸ ಎಂಬುವವನು ಸತ್ತಾಗ ನಾಗಮಂಗಲದ ತೋಟ ಮತ್ತು ಹಣವನ್ನು (ಕಟಂಚು) ಬಹುಶಃ ಅವನ ವಂಶಸ್ಥರು ಪಡೆದುದಾಗಿ ಶಾಸನ ಹೇಳುತ್ತದೆ. ನಂತರ ಶಾಪಾಶಯ ಬರುತ್ತದೆ. ಇದನ್ನು ನಾಶ ಮಾಡುವವನು ಪಂಚಮಹಾ ಪಾತಕನಾಗುತ್ತಾನೆ ಮತ್ತು ಇದನ್ನು ಕಾಪಾಡುವವನ ಪಾದಗಳ ಮೇಲೆ ನನ್ನ ತಲೆಯಿರಲಿ ಎಂದಿದೆ. ಈ ರೀತಿಯ ಶಾಪಾಶಯ ಬಹುತೇಕ ಸಮಾಕಾಲೀನ ತಮಿಳು ಮತ್ತು ಗಂಗರ ಶಾಸನಗಳಲ್ಲಿ ಕಂಡುಬರುತ್ತದೆ. ಶಾಪಾಶಯದ ನಂತರ ಮತ್ತೊಂದು ದಾನದ ಉಲ್ಲೇಖ ಬರುತ್ತದೆ. ಎಂಟು ತೊಬು (ಎ ನ್ನೊತ್ತಮ್ಮು) *೧ ಬತ್ತ ಬೆಳೆಯುವಂತಹ ವಿಸ್ತೀರ್ಣದ ಗದ್ದೆ ಮತ್ತು ಎರಡು ತೂಬು ಫಲ, ಕನಕ ಇತ್ಯಾದಿಗಳನ್ನು ನತಮರನ್ ಎನ್ನುವನು ಕೊಡುತ್ತಾನೆ. ಆದರೆ ಯಾರಿಗೆ ಎನ್ನುವುದು ಸ್ಪಷ್ಟವಾಗಿಲ್ಲ. ಶಾಸನದ ಕೊನೆಯ ವಾಕ್ಯ ಮಹತ್ವ ಪೂರ್ಣದ್ದಾಗಿದೆ. ''ಮಜುತಲೆ ಆಗಿ ವಿಟ್ಟೋರ್ ವೇಲವಸನ್ತಿಯುಂ ದೇವನಾಗನುಂ'' ಎಂದಿದೆ. ಕದವ್ಬ ಕುಮಾರಮ್ಮರಸ ಸತ್ತಾಗ ವೇಲವಸನ್ತಿ ಮತ್ತು ದೇವನಾಗರು ಮಜುತಲೆ ಆಗಿ ಬೀಳುತ್ತಾರೆ. ಅಂದರೆ ಇವರೂ ಸಾಯುತ್ತಾರೆ. ಇಲ್ಲಿ ಬರುವ ಕದಮ್ಬ ಕಮ್ಮಾರರಸ ಯಾರು ಎಂಬುದು ಶಾಸನದಲ್ಲಿ ಸ್ಪಷ್ಟವಾಗಿಲ್ಲ.

### ಶಾಸನದ ಮಹತ್ವ

ಪ್ರಾಚೀನ ಕರ್ನಾಟಕದ ಆತ್ಮಬಲಿ ಪ್ರಕಾರಗಳಲ್ಲಿ ಜೋಳವಾಟಿ, ವೇಳೆವಾಟಿ, ಲೆಂಕವಾಟಿ, ಗರುಡಗಳಲ್ಲಿ ವೇಳೆವಾಟಿ ಆತ್ಮಬಲಿಯ ಪರಾಕಾಷ್ಠತೆಯನ್ನು ತಲುಪಿದ್ದು, ತನಗೆ ಆಶ್ರಯ ನೀಡಿದ ಒಡೆಯ ಸತ್ತಾಗ ತಾವೂ ಸಾಯುವುದಾಗಿ ಈ ವೇಳೆವಾಟಿಗಳು ಪ್ರತಿಜ್ಞೆ ಮಾಡುತ್ತಿದ್ದರು.

ಡಾ॥ ಎಂ. ಚಿದಾನಂದ ಮೂರ್ತಿಯವರು ಕ್ರಿ.ಶ. ೮೬೫ರ ಮೇವುಂಡಿ ಶಾಸನವು ವೇಳೆವಾಟಿತನವನ್ನು ಕುರಿತು ಖಚಿತವಾಗಿ ಪ್ರಸ್ತಾಪಿಸುವ ಮೊಟ್ಟಮೊದಲ ಶಾಸನ ಎಂದಿದ್ದಾರೆ. ಆದರೆ

* ಭಾಷಾಂತರ ನಿರ್ದೇಶನಾಲಯ ೩ನೇ ಮಹಡಿ, ಬ್ಲಾಕ್ ಸಿ.ಬಿ. ಎ.ಬಿ. ಸಂಕೀರ್ಣ ಕೆಂಪೇಗೌಡ ರಸ್ತೆ, ಬೆಂಗಳೂರು – ೫೬೦ ೦೦೯

ಪ್ರಸ್ತುತ ಶಾಸನದಲ್ಲಿ ಮಱುತಲೆ ಆಗಿ ಬಿದ್ದವರ ಹೆಸರು ವೇಲವಸನ್ತಿ ಮತ್ತು ದೇವನಾಗ. ಹೆಸರುಗಳ ಮುಂದೆ ಬರುವ, ವೇಲ ಮತ್ತು ದೇವ ಎಂಬುದು ಗುಣವಾಚಿಗಳಾಗಿದ್ದು, ಇದು ಕರ್ನಾಟಕದ ವೇಳೆವಾಳಿಗಳನ್ನು ಉಲ್ಲೇಖಿಸುವ ಪ್ರಾಚೀನ ಶಾಸನವಾಗಿದೆ.

ಭಾಷೆ : ಈ ಶಾಸನದ ಭಾಷೆ ಪೂರ್ವದ ಹಳಗನ್ನಡ. ಇದನ್ನಟಿವೋನ್, ಕಾಪ್ಪೋನ್, ಪಞ್ಚಮಹಾಪಾದಕನಕ್ಕುಂ ಇತ್ಯಾದಿ ಪದಗಳು ಪೂರ್ವದ ಹಳಗನ್ನಡ ಪದಗಳಾಗಿವೆ. ಜೊತೆಗೆ ಈ ಶಾಸನದ ಮೇಲೆ ಸಮಕಾಲೀನ ತಮಿಳು ಭಾಷಾ ಪ್ರಭಾವ ಸ್ವಲ್ಪ ಮಟ್ಟಿಗಿದೆ ಉದಾ: ಪಡೆತತು (ಪಡೆದದು), ಮಹಾಪಾದಕನಕ್ಕುಂ (ಮಹಾಪಾತಕನಕ್ಕುಂ) ಇಲ್ಲಿ 'ದ'ಕಾರಕ್ಕೆ ಬದಲಾಗಿ 'ತ'ಕಾರ ಬಳಸಿದ್ದಾರೆ.

ಲಿಪಿ : ಅಕ್ಷರಗಳು ತುಂಡಾಗಿವೆ. ಟ ಎರಡು ರೀತಿಯಲ್ಲಿ ಪ್ರಯೋಗವಾಗಿದೆ. ೦ ಹ, ಬ, ಮ, ಎ, ಱ ಇವು ಸಂಪೂರ್ಣವಾಗಿ ಪ್ರಾಚೀನ ಸ್ವರೂಪದಲ್ಲೇ ಇವೆ. ಒತ್ತಕ್ಷರಗಳು ಮೂಲ ಅಕ್ಷರಗಳಿಗೆ ಅಂಟಿಕೊಂಡೇ ಇವೆ.

**ಶಾಸನದ ಕೆಲವು ವಿಶಿಷ್ಟ ಪದಗಳು**

ಕಟಞ್ಚು=ಇದು ತಮಿಳಿನ 'ಕಟಂಜು' ಎಂಬುದರ ರೂಪ. ಇದಕ್ಕೆ ಚಿನ್ನದ ನಾಣ್ಯ ಎಂದು ಅರ್ಥವಿದೆ. ಕೆಲವು ಇತಿಹಾಸಜ್ಞರು ಕಟಂಚು ಎಂಬ ಪದ ಶಾಸನಗಳಲ್ಲಿ ೧೨ನೇ ಶತಮಾನದ ನಂತರವೂ ಕಾಣಿಸಿಕೊಳ್ಳುತ್ತದೆಂದು ಅಭಿಪ್ರಾಯ ಪಡುತ್ತಾರೆ.

ಮಱುತಲೆ = 'ಮಱುತಲೆ' ಎಂಬ ಪದ ೧೧ನೇ ಶತಮಾನದ ಶಾಸನಗಳವರೆಗೆ ಎಲ್ಲಿಯೂ ಕಂಡುಬರುವುದಿಲ್ಲ. ತಲೆಗೆ ಮುಂದಲೆಯಾಗಿ ಪ್ರತಿ ತಲೆಯಾಗಿ ಎಂದು ಬಳಕೆಯಾಗಿದೆ. ಆದರೆ ಇದೇ ಅರ್ಥವನ್ನುಳ್ಳಂತಹ ಮಱುತಲೆ ಎಂಬ ಪದ ಇಲ್ಲಿ ಉಲ್ಲೇಖಿತವಾಗಿದೆ. ಕದಮ್ಬ ವಂಶರ ಮಾರಮ್ಮರಸ ಸತ್ತಾಗ ಅವನಿಗೆ ವೇಲವಸನ್ತಿ ಮತ್ತು ದೇವನಾಗ ಇಬ್ಬರೂ ಮರುತಲೆಯಾಗಿ ಆತ್ಮಾಹುತಿ ಮಾಡಿಕೊಳ್ಳುತ್ತಾರೆ.

ಕಾಲ : ಶಾಸನದ ಪ್ರಾರಂಭದ ಭಾಗ ನೆಲದಲ್ಲಿ ಹೊತು ಹೋಗಿರುವುದರಿಂದ ಇದು ಯಾವ ರಾಜನ ಆಳ್ವಿಕೆಗೆ ಒಳಪಟ್ಟಿದೆಯೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲವಾದರೂ ಲಿಪಿಯ ದೃಷ್ಟಿಯಿಂದ ಇದು ಗಂಗ ಅರಸ ಶ್ರೀ ಪುರುಷನ ಶಾಸನದ ಲಿಪಿಯನ್ನು ಹೋಲುವುದರಿಂದ ಇದು ಕ್ರಿ.ಶ. ೭೦೦-೭೫೦ ಕ್ಕೆ ಸೇರುತ್ತದೆ ಮತ್ತು ಬೆಂಗಳೂರು ಜಿಲ್ಲೆಯಲ್ಲಿ ದೊರೆತ ಪ್ರಾಚೀನ ಶಾಸನಗಳೆಲ್ಲಾ ಗಂಗರದ್ದಾದ್ದರಿಂದ ಇದೂ ಸಹ ಗಂಗರ ಶಾಸನವಿರಬೇಕು,

ಬೆಂಗಳೂರು ನಗರ ಜಿಲ್ಲೆಗೆ ಸೇರುವ ವರ್ತೂರು, ಅಗರ, ಬೇಗೂರು, ಹಾರಗದ್ದೆಗಲಲ್ಲಿ ದೊರೆತಿರುವ ಪ್ರಾಚೀನ ಶಾಸನಗಳು ಗಂಗರದ್ದಾಗಿವೆ. ಇವುಗಳನ್ನು ಗಮನಿಸಿದಾಗ ಬೆಂಗಳೂರು ನೇರವಾಗಿ ಗಂಗರ ಆಳ್ವಿಕೆಗೆ ಒಳಪಟ್ಟದ್ದಿತ್ತು ಎಂಬುದು ಸ್ಪಷ್ಟವಾಗುತ್ತದೆ. **

**ಆಧಾರ ಸೂಚಿ ಮತ್ತು ಟಿಪ್ಪಣಿಗಳು**

*೧. ತೂಂಬು > ತೂಬು ಆಗಿದ್ದು ಈ ಪದ ಈಗಲೂ ಬಳಕೆಯಲ್ಲಿದ್ದು ಇದು ೩ ಸೇರಿಗೆ ಸಮನಾದ ಅಳತೆಯುಳ್ಳದ್ದಾಗಿದೆ.

**೨. ಈ ಶಾಸನದ ಬಗ್ಗೆ ಮಾಹಿತಿ ನೀಡಿ ಕ್ಷೇತ್ರಕಾರ್ಯಕ್ಕೆ ನನ್ನೊಂದಿಗೆ ಬಂದು ಸಂಪೂರ್ಣ ಸಹಕಾರ ನೀಡಿದ ನನ್ನ ವಿದ್ಯಾರ್ಥಿ ರಾಹುತ ಎಸ್. ರೆಡ್ಡಿಯವರಿಗೆ, ಕ್ಷೇತ್ರಕಾರ್ಯದಲ್ಲಿ ಸಹಾಯ ನೀಡಿದ ಡಿ. ಯಶವಂತ ಮತ್ತು ನನ್ನ ಸೋದರ ಸನತ ಕುಮಾರ್‌ನಿಗೆ ಮತ್ತು ಸ್ಥಳೀಯರಾದ ಹನುಮಂತರೆಡ್ಡಿಯವರಿಗೆ ನನ್ನ ಕೃತಜ್ಞತೆಗಳು.

೩. ಶಾಸನವನ್ನು ಅರ್ಥೈಸಲು ಸಹಾಯಮಾಡಿದ ನನ್ನ ಗುರುಗಳಾದ ಡಾ॥ದೇವರ ಕೊಂಡಾರೆಡ್ಡಿಯವರಿಗೆಮತ್ತು ಪಿ.ವಿ. ಕೃಷ್ಣ ಮೂರ್ತಿಯವರಿಗೆ ನನ್ನ ಕೃತಜ್ಞತೆಗಳು.

೪. ಎ.ಕ. ೯. ಬೆಂಗಳೂರು ಜಿಲ್ಲೆ

೫. ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್

೬. ಡಾ॥ ಎಂ. ಚಿದಾನಂದ ಮೂರ್ತಿ : *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

ಎಂ. ಜಿ. ನಾಗರಾಜ್ *
ಎಚ್. ಎಂ. ಸಿದ್ಧನಗೌಡ **

# ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು

ಬಿದಲೂರು ಶಾಸನ : ಬೆಂಗಳೂರು ಜಿಲ್ಲೆ ನೆಲಮಂಗಲ ತಾಲೂಕು ಬಿದಲೂರಿನ ಗಂಗಮ್ಮನ ಕೆರೆಯ ಕೆಳಗೆ ಶ್ರೀಮತಿ ಮುದ್ವೀರಮ್ಮನವರ ಗದ್ದೆಯಲ್ಲಿ ಪಾಳು ಶಿವಾಲಯವೊಂದು ಗುಡ್ಡೆಯಾಗಿ ಬಿದ್ದಿದೆ. ಆ ಗುಡ್ಡೆಯ ಬಳಿ ಮಣ್ಣಲ್ಲಿ ಮುಚ್ಚಿಹೋಗಿದ್ದ ಎರಡೇ ಸಾಲುಗಳು ಕಾಣುತ್ತಿದ್ದ ಶಿಲೆಯ ತುದಿಯನ್ನು ಕೆದಕಿದಾಗ ಶಿಲೆಯ ಇಬ್ಬದಿಯಲ್ಲೂ ಶಾಸನಗಳು ಇದ್ದುದು ಕಾಣಬಂದಿತು. *೧ ಶಿಲೆಯ ಮುಂಬದಿಯಲ್ಲಿ ೧೧ ಸಾಲುಗಳು, ಹಿಂಬದಿಯಲ್ಲಿ ೧೫ ಸಾಲುಗಳಿದ್ದು ೫ ಅಡಿ ಎತ್ತರ ೩ $^{1}/_{2}$ ಅಡಿ ಅಗಲದ ಈ ಶಿಲಾ ಶರೀರದ ಮೇಲೆ ಶಾಸನ ಲಿಪಿಯು ಕಂಡರಣೆಗೊಂಡಿದೆ. ೦.೫ಸೆಂ.ಮೀ ನಿಂದ ೩ ಸೆಂ.ಮೀ ಉದ್ದ; ೫ ಸೆಂ.ಮೀ. ನಿಂದ ೧.೫ಸೆಂ.ಮೀ. ಅಗಲವಿರುವ ಶಾಸನಾಕ್ಷರಗಳು ಕೆಲವೆಡೆ ಆಳವಾಗಿ ಕೆಲವೆಡೆ ತೆಳುವಾಗಿ ಕಂಡರಣೆ ಆಗಿವೆ. ಕೆಲವು ಅಕ್ಷರಗಳು ತ್ರುಟಿತವಾಗಿವೆ, ಅಸ್ಪಷ್ಟವಾಗಿವೆ. ಕೆಲವು ಸಾಲುಗಳು ನೇರವಾಗಿಲ್ಲದೆ ಪರಸ್ಪರ ಸೇರಿಕೊಂಡು ಗೋಜಲಾಗಿ ಕಾಣುತ್ತವೆ. ಹಿಂಬದಿಯ ಮೊದಲ ಸಾಲಿನ ಶಿರಭಾಗ ತುಸು ಸವೆದಿದೆ.

ಶಾಸನದ ಲಿಪಿಗಳ ಪೈಕಿ, ವ,ರ,ಷ ಅಕ್ಷರಗಳು ದುಂಡು ತಳದ್ದಾಗಿವೆ. 'ಣ' ಅಕ್ಷರಕ್ಕೆ 'ಉ' ಕಾರವು ಪಾರ್ಶ್ವದ ಬದಲು ತಳಭಾಗ ಪ್ರತ್ಯೇಕವಾಗಿ ಹೊರಭಾಗದಲ್ಲಿ ಕೆಳಕ್ಕಿಳಿದು ಬಂದಂತಿದೆ. ನ, ಬ ಅಕ್ಷರಗಳು ಆ ಕಾಲದ ರೂಪದಂತೆ ಕೂಡಿಕೊಂಡ ಭಾಗಗಳಂತಿವೆ; ಕ್ರಿ.ಶ. ೯೧೮ರ ದಂಡಾಪುರದ ಶಾಸನಾಕ್ಷರಗಳನ್ನು ಹೋಲುವಂತಿವೆ. 'ಜ್ಪ' ವು ಕ್ರಿ.ಶ. ೯೫೦ರ ರಾಷ್ಟ್ರಕೂಟ ಕನ್ನರನ ಆತಕೂರು ಶಾಸನದ ಅಕ್ಷರವನ್ನೂ ಹೋಲುತ್ತದೆ. ತಲೆಕಟ್ಟು, ಗೀಟು ಹಾಗೂ ಕೋನಶಿರಗಳೂ ಅದೇ ಶಾಸನ ಲಿಪಿಗಳನ್ನು ಹೋಲುತ್ತವೆ. ೭ನೇ ಸಾಲಿನಲ್ಲಿ 'ದೇವಸ್ತಳ' ಎಂಬ ಪದದ ಅಕ್ಷರಗಳು, ಮೇಲೆ-ಕೆಳಗೆ ಇವೆ. ೨೪ನೇ ಸಾಲಿನ 'ಮಳಲಗದೆ' ಎನ್ನುವಲ್ಲಿಯೂ ಹೀಗೆಯೆ ಆಗಿದೆ. ಕೆಲವು ಅಕ್ಷರಗಳು ಹೆಂಜೇರು (ಹೇಮಾವತಿ) ಸ್ತಂಭ ಶಾಸನಾಕ್ಷರಗಳನ್ನು ಹಾಗು ಧರ್ಮಪುರಿ ಶಾಸನಾಕ್ಷರಗಳನ್ನು (ಕ್ರಿ.ಶ. ೯೫೩) ಹೋಲುತ್ತವೆ.

ಶಾಸನದ ಮುಂಬದಿಯ ಸಾಲುಗಳ ವಿಷಯದ ಕಾಲಕ್ಕೂ ಹಾಗು ಹಿಂಬದಿಯ ಸಾಲುಗಳ ವಿಷಯದ ಕಾಲಕ್ಕೂ ಸುಮಾರು ಆರು ವರ್ಷಗಳ ಅಂತರವಿದೆ. ಆದರೆ ಮುಖ್ಯವಾಗಿ ದಾನ ಶಾಸನವಾಗಿರುವುದರಿಂದ ಎರಡೂ ದಾನದ ಸಂಗತಿಗಳನ್ನು, ಎರಡನೇ ದಾನದ ಸಮಯದಲ್ಲಿ ಕೆತ್ತಿದಂತಿದೆ. ಹಾಗಾಗಿ ಸ್ವಸ್ತಿ ವಾಚಕ ಸಾಲು ಮುಂಭಾಗದಲ್ಲಿ ಬಂದಿದ್ದು, ಹಿಂಭಾಗದ ಸಾಲುಗಳನ್ನು ಮುಂದಿನ ಸಾಲುಗಳ ಮುಂದುವರಿಕೆ ಎಂಬಂತೆ ಕಂಡರಿಸಿರುವುದು ಕಾಣಬರುವಂತಿದೆ. ಪೂರ್ವ ಹಳಗನ್ನಡ ಉತ್ತರಕಾಲದ ಲಕ್ಷಣದ ಈ ಶಾಸನದಲ್ಲಿ ತ್ರುಟಿತ, ಅಸ್ಪಷ್ಟ ಅಕ್ಷರಗಳು ಕೆಲವೆಡೆ ಇದ್ದರೂ, ಮುಖ್ಯ ವಿಷಯ ತಿಳಿಯಲು ಬಾಧಕವಾಗಿಲ್ಲ. ತೇದಿಯ ಹೆಚ್ಚಿನ ವಿವರವಿಲ್ಲದೆ ಕೇವಲ ಸಂವತ್ಸರವನ್ನು ಮಾತ್ರ ಕೆತ್ತಿ ಗ್ರಾಮೀಣ ಸಂದರ್ಭವನ್ನು ಪೋಷಿಸುವಂತಿದೆ.

**ಶಾಸನದ ಮುಂಬದಿಯ ಸಾಲುಗಳ ವಿಷಯ :** ಶಕ ೮೭೧ (ಕ್ರಿ.ಶ. ೯೪೯) ನೇ ಕೀಲಕ ಸಂವತ್ಸರದಲ್ಲಿ ಬಿನಳಮಂಗಳದ ಬಿದಲೂರಿನ ಮೊಯ್ದ ಎರಮ್ಮಗವುಣ್ಡನು (ಅಗ್ರಹಾರ) ಪುರಪೊನ್ನೇರು ಬೆಲೆಯ ಪುರೇಶ್ವರನಾದ ದೇವರಿಗೆ (ಬಹುಶಃ ಸಿದ್ಧೇಶ್ವರ) ಬಿತ್ತುವಟ್ಟದ ಆದಾಯವನ್ನು ಕೊಡುವ ಹಾಗು ದೇವಸ್ತಳ ಕೆಳಮಾಗಿ (ಬಹುಶಃ ಬಿದಲೂರು ಕೆರೆಯ ಹಿಂಬದಿಗಿದ್ದ ಶಿವಾಲಯದ ಸುತ್ತಲ ಗದ್ದೆಯ ಉತ್ಪನ್ನ) ೩೦೦ ಖಡುಗ ಗದ್ದೆ ಕೊಡಗಿಯನ್ನು ಬೇಗುಪುರದ (ಬಹುಶಃ ಇಂದಿನ ಟಿ. ಬೇಗೂರು) ದೇವತೆಯ ಗೊರವರ ಮಠಕ್ಕೆ ಕೊಟ್ಟ ಸಂಗತಿ ಇದೆ. ಈ ದಾನವನ್ನು ನಾಶಮಾಡಿದರೆ ಕಾಶಿಯಲ್ಲಿ ಗೊರವರನ್ನು ಕೊಂದ ಪಾಪ ಬರುತ್ತದೆ ಎಂಬ ಶಾಪಾಶಯವಿದೆ.

---

* ೧೭೫, ೭ನೇ ಅಡ್ಡರಸ್ತೆ, ಶ್ರೀ ರಾಮನಗರ, ಮಹಾಲಕ್ಷ್ಮೀಪುರಂ, ಬೆಂಗಳೂರು - ೫೪೬೦ ೮೯

** ಸಹಾಯಕ ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ, ಕಸ್ತೂರಿಬಾ ರಸ್ತೆ, ಬೆಂಗಳೂರು - ೫೬೦ ೦೦೧

***ಶಿಲಾಶಾಸನದ ಹಿಂಬದಿಯ ಸಾಲುಗಳ ವಿಷಯ :*** ಸಾಮಂತ ಶ್ರೇಷ್ಠನೂ ಕೇಡಿಗರ ಗಂಡನೆನಿಸಿದ (ನೊಳಂಬರ) ಮಹಾ ಸಾಮಂತನಾಗಿದ್ದ ಪೊಲ್ಲತಾಳ್ವನು ಕ್ರಿ.ಶ. ೮೭೭(ಕ್ರಿ.ಶ. ೯೫೫) ರಲ್ಲಿ ಇಲ್ಲಿ ಆಳುತ್ತಿದ್ದಾಗ (ಅವನ ಸೈನ್ಯದ ಶರಭಯಂಕರ ವೀರ ಪುಳುದೆಯ ಬೀವಯ್ಯನು, ಈಜಿಲ್ಲ ಪ್ರಚಂಡ ಮಾರ್ತಂಡನ ಸೈನಿಕರನ್ನು ಶ್ರೀ ವರ್ತೂರಿನಲ್ಲಿ ತನ್ನೆಲ್ಲ ಸೈನ್ಯದೊಡನೆ ಹೋರಾಡಿ ಗೆದ್ದಾಗ!) ಇರ್ಮಾವತಿಯ ಮಲ್ಲಾಮಾತ್ಯ, ಪುಸಿಗೋಳ್ಪರ್ವರಸ ಮತ್ತು ಪೆಗ್ಗದೇವಿಯರ ಮಗನೂ ನಾಳ್ಗಾವುಂಡನೂ ಆದ ಚಲತ್ಯರಸ, ಗಂಗಗಾಮುಣ್ಣ ಮುಂತಾದವರು ಶಕ ೮೭೭ನೇ (ಕ್ರಿ.ಶ. ೯೫೫) ಆನಂದ ಸಂವತ್ಸರದಲ್ಲಿ ಪೊಲ್ಲಬ್ಬರಸಿಯರ ಮಂಗಲಪುರ ದೊಳಗಣ ಬಿದಿಳೂರ ದೇವರಿಗೆ ಹಾಗು ದೇವರ ಕೆರೆಯ ದುರಸ್ತಿ ಮಾಡಿದ ಮೇಚಗಾವುಣ್ಣನಿಗೆ ಕೆರೆಯ ಕೆಳಗಣ ೧೨ ಖಂಡುಗ ಮರಳುಗದ್ದೆ ಹಾಗು ಬಿತ್ತುವಟ್ಟವನ್ನು ಕೊಟ್ಟ ಸಂಗತಿಯನ್ನು ಶಾಸನದಿಂದ ಹೆಕ್ಕಬಹುದಾಗಿದೆ. ಈ ದಾನ ಕೆಡಿಸಿದವರಿಗೆ ಹಸುವನ್ನು ಕಾಶಿಯಲ್ಲಿ ಕೊಂದ ಪಾಪ ಬರುತ್ತದೆ, ಎಂಬ ಶಾಪಾಶಯವನ್ನು ಹೇಳಲಾಗಿದೆ. ಶಾಸನದ ಈ ಭಾಗದ ತಳಕೇಂದ್ರ ಭಾಗದಲ್ಲಿ ಕರುವಿಗೆ ಹಾಲೂಡಿಸುತ್ತಿರುವ ಹಸುವಿನ ರೇಖಾಶಿಲ್ಪವು ಶಾಪಾಶಯಕ್ಕೆ ಸಂಕೇತವಾಗಿ ನಿಂತಿದೆ.

ಶಾಸನದ ಮೊದಲ ಭಾಗವು ನೊಳಂಬರ ಪೊನ್ನೇರು ಬೆಲೆ (ಹೆಂಜೇರು ರಾಜಧಾನಿ) ಸ್ಥಳವನ್ನೂ ಸೂಚಿಸಿ, ಅಲ್ಲಿನ ಅವರ ಕುಲದೇವರು ಸಿದ್ಧೇಶ್ವರನ ಪ್ರಸ್ತಾಪವನ್ನು ಮಾಡುವಂತಿದೆ. ಶಾಸನದ ಬಳಿ ಇದ್ದ ಶಿವಾಲಯವು ಬಹುಶಃ ಆ ಸಿದ್ಧೇಶ್ವರನ ಪ್ರತಿಬದ್ಧ (ಸಾಕ್ಷಿಗುಡಿ) ದೇಗುಲವಾಗಿದ್ದಿರಬಹುದು. ಪ್ರಸ್ತಾಪಿತವಾಗಿರುವ ಬೇಗುಪುರದ ದೇವಿಗೊರವರ ಮಠವು ಆ ಕಾಲದ ಪ್ರಸಿದ್ಧ ಮಠವಾಗಿದ್ದು, ಬಿದಿಲೂರುಗಂಗಮ್ಮನ ಸಪ್ತಮಾತೃಕಾ ಸುಂಬಂಧವು ಅಂಟಿದ್ದರೆ, ಅಲ್ಲಿ ಬಹುಶಃ ಸಪ್ತಮಾತೃಕೆಯರ ಪ್ರಾತಿನಿಧಿಕ ದೇವಿ ಚಾಮುಂಡೇಶ್ವರಿಯ ದೇಗುಲವಿದ್ದಿರ ಬಹುದೆನಿಸುತ್ತದೆ. ಇಂದು ಅದಕ್ಕೆ ತೆಪ್ಪದ ಬೇಗೂರು ಎಂಬ ಹೆಸರಿರುವುದು, ಅಲ್ಲಿದ್ದ ಪ್ರಾಚೀನ ಕೆರೆ ಹಾಗು ದೇವಿಯ ತೆಪ್ಪೋತ್ಸವದ ಆಚರಣೆ ಜಾನಪದ ಸಂಕೇತವೆನಿಸುತ್ತದೆ. ದೇವಿಗೊರವರ ಮಠ ಎಂದಿರಲು ಆ ಗೊರವನು ಮೈಲಾರದೇವರ ***ಅರ್ಚಕನೆನಿಸದೆ*** ದೇವಿದೇಗುಲಕ್ಕೆ ಅಂಟಿದ ಗೊರವವಾಡ (ಮಠ)ದ ಕಾಳಾಮುಖ ಶೈವ ಗುರು ಅವನಾಗಿರಬೇಕು. ಕಾಲಂಕರ್ಚಿ ಧಾರೆಯ ನೆರೆದ ಪ್ರಸ್ತಾಪವಿಲ್ಲದಿದ್ದರೂ ಶಾಪಾಶಯದಲ್ಲಿ ಗೊರವರನ್ನೂ ನಾಶಮಾಡಿದ ಪಾಪವು ದಾನವನ್ನು ಅಪಹರಿಸಿದರೆ ಒದಗುತ್ತದೆ ಎಂದಿರುವುದು ಗೊರವರಿಗೆ ರಾಜಮಾನಿತ ಧರ್ಮೋ – ಸಾಂಸ್ಕೃತಿಕ ಗೌರವವೆನಿಸುತ್ತದೆ; ಕೇಡಿಗರಿಗೆ ಪಾಪಭಯ ಪ್ರೇರಿಸುತ್ತದೆ.

ನೊಳಂಬ ಅಯ್ಯಪದೇವನ ಮಗ ಇರಿವನೊಳಂಬದಿಲೀಪ (ಕ್ರಿ.ಶ. ೯೪೧-೬೭)ನ ಆಳಿಕೆಯಲ್ಲಿ ಪೊಲ್ಲತಾಳ್ವನು ಮಹಾಸಾಮನ್ತನಾಗಿದ್ದು, ಈ ಪ್ರದೇಶವನ್ನು ಆಳುತ್ತಿದ್ದ ಸಂಗತಿಯು ಶಾಸನದಿಂದ ವ್ಯಕ್ತವಾಗುತ್ತದೆ. ಅಂದರೆ ನೊಳಂಬರ ಆಳಿಕೆಯ ಅಂಶವನ್ನು ಇಲ್ಲಿ ಸೂಚಿಸಿದೆ ಎನ್ನಬೇಕು.

ಚಾರುಪೊನ್ನೇರನ ಕಾಲದಲ್ಲಿ (ಕ್ರಿ.ಶ. ೮೦೦-೮೩೦) ನೊಳಬಂರು ತಮ್ಮ ರಾಜ್ಯಕ್ಕೆ 'ಪೊನ್ನೇರು' (ಹೆಂಜೇರು) ಎಂಬ ಹೆಸರು ಕೊಟ್ಟದ್ದು; ಕ್ರಿ.ಶ. ೯೩೦ರ ಸಮಯದಲ್ಲಿ ಅದು ಅಭೇದ್ಯ ದುರ್ಗವೆನಿಸಿತ್ತು. ಪೆಂಜೇರು ಎಂಬ ಹೆಸರಲ್ಲೂ ಚಾಲ್ತಿ ಗೊಂಡಿತ್ತು.[*] ಕ್ರಿ.ಶ. ೯೪೧-೬೭ರ ನೊಳಂಬರಾಜ ಇರಿವ ನೊಳಂಬ ದಿಲೀಪನಾಗಿದ್ದು ಅವನ ಆಳಿಕೆಗೆ ಸೇರಿದ ಈ ಪ್ರದೇಶದ ಸದ್ಯದ ಶಾಸನದಲ್ಲಿ 'ಪೊನ್ನೇರು' ಸ್ಥಳನಾಮವನ್ನೂ ವಂಶಿಕ ಪರಂಪರೆಯ ಸಾಕ್ಷಿಯಾಗಿ ದಾಖಲಿಸಿರುವುದು ಗಮನಾರ್ಹ. 'ಬಿನಳ್ಮಙ್ಗಲ' ಎಂಬ ಶಾಸನದ ಸ್ಥಳನಾಮ ಇಂದಿನ ಬಿನ್ನಮಂಗಲವಾಗಿದ್ದು, ಬಿದಳೂರು ಇಂದಿನ ಜಾನಪದ ಪ್ರಸಿದ್ಧಿಯ ಬಿದಲೂರು ಆಗಿದೆ. ಅಂದರೆ ನೊಳಂಬರ ರಾಜ್ಯಕ್ಕೆ ಬಿನ್ನಮಂಗಲವೂ ಸೇರಿದ್ದು ಆ ಸಂಬಂಧದ ಹೆಚ್ಚಿನ ಪುರಾವೆ ಶಾಸನದ ಎರಡನೇ ಭಾಗದಲ್ಲಿ ಕಾಣಬರುತ್ತದೆ. ಬಿನ್ನಮಂಗದಲ್ಲಿ ನೊಳಂಬ ಶೈಲಿಯ ಬಸವ ಇಂದಿಗೂ ಉಳಿದು ಬಂದಿದೆ.

ಯಜಮ್ಮಗವುನ್ದ ಎಂಬ ವ್ಯಕ್ತಿನಾಮ ಮಣ್ಣೆಯ ಗಂಗರಾಳ್ವಿಕೆಯ ಪ್ರಭಾವವೆ. ೧ನೇ ರಾಚಮಲ್ಲನ ಮಗಳಾದ ಗಂಗರಾಜಕುಮಾರಿ ಜಾಯಬ್ಬೆ, ನೊಳಂಬರ ೧ನೇ ಪೊಳಲ್ಚೋರನನ್ನೂ, ಅವನ ಮಗ ೧ನೇ ಮಹೇಂದ್ರ ಗಂಗರಾಜಕುಮಾರಿ ಗಾಮಬ್ಬೆಯನ್ನು ಮದುವೆ ಆಗಿದ್ದ ಕಾರಣ ಗಂಗ-ನೊಳಂಬರ ಸ್ನೇಹ ಬಲವಾಗಿತ್ತು. ಅದು ಪ್ರಜೆ ಹಾಗು ಅಧೀನ ಗಾವುಣ್ಡರ ಮೇಲೆ ಪ್ರಭಾವ ಬೀರಿತ್ತು. ಹಾಗಾಗಿ ಈ ವ್ಯಕ್ತಿ ನಾಮಗಳು. ಶಾಸನದ ಮೊದಲ ಭಾಗದಲ್ಲಿ ಬರುವ ಮೊಯ್ದ್ದಯಜಮ್ಮಗಾವುಣ್ಡ ಎಂಬ ಹೆಸರು ಕೂಡ ನೊಳಂಬರ ಮಹೇಂದ್ರ, ಗಂಗ ಎಜೆಯಮ್ಮ ಅರಸರ ಹೆಸರಿನ ಪ್ರಭಾವವೆ. ನೊಳಂಬ ೨ನೇ ಮಹೇಂದ್ರನನ್ನು ಮೊಯ್ದಮ್ಮರಸ ಎಂದು ಕರೆಯಲಾಗುತ್ತಿತ್ತು.

ನೆಲಮಂಗಲ ತಾಲೂಕಿನ ಸೋಲದೇವನ ಹಳ್ಳಿಯ ಕ್ರಿ.ಶ. ೧೦೨೯ರ ಶಾಸನದಲ್ಲಿ ರೀತ್ಯಾ ಗುರು ಮೌನಿಭಟ್ಟಾರಕರ ಸಂಬಂಧದಲ್ಲಿ ಸಿದ್ಧೇಶ್ವರ ದೇವರನ್ನು ಪ್ರತಿಷ್ಠಾಪಿಸಿದ ಸಂದರ್ಭವಿದೆ. ಪನ್ನಿರ್ಕ್ಕಣ್ಣುಗ ಗಟ್ಟೆ ಕೊಟ್ಟದ್ದು ಉಕ್ತವಿದೆ. ಇದಲ್ಲದೆ ಕಳಾಗಮ ನಿಪುಣ ದ್ವೀಪನಾಥ ಅವನ ಶಿಷ್ಯ ಮೌನಿನಾಥ ಮುನಿಪ, ಅವನ ಆಜ್ಞಾಧಾರಕ ರೂಪಶಿವ ಪಣ್ಡಿತ, ಶ್ರೀ ಸಿದ್ಧೇಶ್ವರ ಸ್ಥಾನದ ಒಡೆಯನಾಗಿದ್ದ. ನೊಳಂಬರ ರಾಜಗುರು ಪರಂಪರೆಯಲ್ಲಿ ಮೌನಿನಾಥಮುನಿ ಇದ್ದ. ಈ ಹಿನ್ನೆಲೆಯಲ್ಲಿ ಕಾಳಾಮುಖ

ಗೊರವವಾದದ ಗುರುಸ್ಥಾನದಲ್ಲಿ ಬಿದಳೂರು, ಬೇಗೂರು, ಬಿನಳ್ಮಂಗಲ ಪ್ರದೇಶಕ್ಕೆ ದ್ವೀಪ ನಾಥ ಮುನಿ ಇದ್ದಿರಬೇಕೆನಿಸುತ್ತದೆ. ಇತಿಹಾಸದ ತಲೆಮಾರಿನ ಅನ್ವಯಕ್ರಮವಾಗಿ ಹೀಗೆ ಹೇಳ ಬೇಕಾಗುತ್ತದೆ. ಹಾಗು ಸಪ್ತಮಾತೃಕಾ ಆರಾಧನಾ ಪರಂಪರೆಯು ಬಿದಲೂರು ಗಂಗಮ್ಮ, ಬೇಗೂರು ದೇವಿಗೊರವರ ಮಠದ ಸಂಬಂಧಗಳನ್ನನುಲಕ್ಷಿಸಿದರೆ ಕಾಳಾಮುಖ ಶೈವರಲ್ಲಿ ಅದು ಇದ್ದಿದ್ದುದರ ಸೂಚನೆಯನ್ನು ಈ ಶಾಸನ ನೀಡುವಂತಿದೆ. ನೊಳಂಬವಾಡಿಯಲ್ಲಿ (ನೊಳಂಬವಾಡಿ ೩೨೦೦೦) ಕಾಳಾಮುಖ ಶೈವರ ಪ್ರಾಬಲ್ಯವಿತ್ತು. ನೊಳಂಬರ ಕಾಲದಲ್ಲಿ ಮಾತೃಕಾ ಆರಾಧನೆಯು ಜನಪ್ರಿಯವಾಗಿತ್ತು.[*೩] ಎಂಬ ಮಾತಿಗೂ ಶಾಸನದ ಸಂದರ್ಭವು ಸಾಕ್ಷಿ ಯಾಗಿರುವಂತಿದೆ.

ಶಾಸನದ ಎರಡನೆ ಭಾಗದಲ್ಲಿ ಒಂದೆರಡು ಸಾಲುಗಳ ವಿಷಯವು ಅಸ್ಪಷ್ಟವೆನಿಸುತ್ತದೆ (೧೪,೧೫ನೇ ಸಾಲುಗಳು), ಆದರೆ ಸಾಮಂತ ಪೊಲ್ಲತಾಳ್ವನ ವಿಷಯ ನಿಖರವಿದೆ. ಗಂಗ ಶ್ರೀ ಪುರುಷನ ಕಾಲದಲ್ಲಿ ಕರಿಕನಾಡು ಬಿದಿರುಕಲ್ಲು ಆಳುತ್ತಿದ್ದ 'ಪೊಲೆತ್ತಾಳ್ಪೋರನ್ ಕುಕ್ಕರ' ಆಗಿದ್ದ.[*೪] ಇವನು ಕ್ರಿ.ಶ. ೮೬೫ರ ಚನ್ನಪಟ್ಟಣದ ಮಳೂರಿನ ಹೊಸ ಶಾಸನದ ವೀರ ದುಗ್ಗನ ಸಂದರ್ಭದಲ್ಲಿ 'ಪೊಲ್ಲೆತಾಳ್ವ' ಎಂದು ಉಕ್ತನಾಗಿ ರುವಂತಿದೆ.[*೫] ಬಹುಶಃ ಗಂಗರ ಮಾಡಲಿಕರಾಗಿ 'ಪೊಲ್ಲೆತಾಳ್ವ' ವಂಶವಿತ್ತೆಂದು ತೋರುತ್ತದೆ. ಸದ್ಯದ ಶಾಸನದಲ್ಲಿ ಗಂಗರ ನಂತರ ನೊಳಂಬರ ಮಾಂಡಲಿಕತ್ವಕ್ಕೆ ಬಂದ 'ಪೊಲ್ಲೆತಾಳ್ವ' ವಂಶದ 'ಪೊಲ್ವತಾಳ್ವನಾಹವ ಈ ಜಿಲ್ಲ' ಎಂಬುವ ಇಲ್ಲಿ ಇರಿವ ನೊಳಂಬನ ಸಾಮಂತನಾಗಿ ಆಳುತ್ತಿದ್ದ ಸೂಚನೆ ಒದಗುತ್ತದೆ.

ಇರ್ಮಾವತಿ ಮಲ್ಲಾಮಾತ್ರ್ಯ ಎಂಬ ಹೆಸರೇ (ಪೊನ್ನೇರು> ಪೆಂಜೇರು > ಹೆಂಜೇರು....> ಇರ್ಮಾವತಿ>ಹೇಮಾವತಿ !) ಹೆಂಜೇರಿನ ಅಂದಿನ ಇನ್ನೊಂದು ಹೆಸರಾಗಿ ಅಲ್ಲಿದ್ದ ನೊಳಂಬರ ಅಮಾತ್ಯನನ್ನು ಸೂಚಿಸುವಂತಿಧೆ. ಈ ಪ್ರದೇಶದ ನಾಳ್ಗಾವುಂಡ ಚಲತ್ಯರಸನನ್ನು ಹೆಸರಿಸಿದೆ; ಗಂಗರ ಪ್ರಭಾವದ ಗಂಗ ಗಾವುಣ್ಡನ ಹೆಸರೂ ಇಲ್ಲಿದೆ. ಇಲ್ಲಿ ಬರುವ 'ಬೀವಂ' ಬಹುಶಃ ಕ್ರಿ.ಶ. ೯೫೫ರ ನೆರೆಯ (ಪುಳುದೆ?) ಕೋಡಿಪಾಳ್ಯದ ನೊಳಂಬರ ಶಾಸನದಲ್ಲಿ[*೬] ಉಕ್ತನಾದ 'ಬೀವಯ್ಯ' ನಿಗೆ ಸಂಬಂಧಗೊಂಡಿರಬಹುದೆನಿಸುತ್ತದೆ. ಸದ್ಯದ ಶಾಸನ ಕಾಲಕ್ಕೂ, ಈ ಶಾಸನಕ್ಕೂ ಇರುವ ಕಾಲದ ವ್ಯತ್ಯಾಸ ಕೇವಲ ನಾಲ್ಕು ವರ್ಷಗಳಾದ ಕಾರಣ ಈ ಊಹೆಗೆ ಪುಷ್ಟಿ ದೊರಕುವಂತಿದೆ.

ಶಾಸನದಲ್ಲಿ ಬರುವ 'ಪೊಲ್ಲಬ್ಬಾರಸಿಯರ ಮಙ್ಗಳಮ್ಪುರ ದೊಳ ಬಿದಿಳೂರ ದೇವರ ಕೆಱೆ' ಎನ್ನುವಲ್ಲಿ ನೊಳಂಬ-ಗಂಗರ ನಡುವಣ ವೈವಾಹಿಕ ಸಂಬಂಧದ ಇನ್ನೊಂದು ಸೂಚನೆಯೂ ದೊರಕುತ್ತದೆ. ಕಾರಣ ೧ನೇ ಮಹೇಂದ್ರ ಮತ್ತು ಅವನ ಅವನ ಅಗ್ರಮಹಿಷಿ ಗಂಗರಾಜಕುಮಾರಿ ಗಾಮಬ್ಬೆಯ ಮಗ ೧ನೇ ಅಯ್ಯಪ ದೇವ. (ಕ್ರಿ.ಶ. ೮೯೭-೯೩೪)ರ ಅಯ್ಯಪದೇವ, ಗಂಗರಾಜಕುಮಾರಿ 'ಪೊಲ್ಲಬ್ಬರಸಿ'ಯನ್ನು ಮದುವೆಯಾಗಿದ್ದ. ಅವಳು ಅಗ್ರಹಮಹಿಷಿ ಆಗಿದ್ದಳು[*೭]. ಅವಳ ಹೆಸರಿನಲ್ಲಿ 'ಮಂಗಳಪುರ' ಎಂಬ ಅಗ್ರಹಾರ ವನ್ನು ಅಯ್ಯಪದೇವ ನಿರ್ಮಿಸಿರಬೇಕು ಎಂಬ ಸೂಚನೆ ಒದಗುತ್ತದೆ. ಶಾಸನದ ಮೊದಲ ಭಾಗದಲ್ಲಿ 'ಬಿನಳ್ಮಙ್ಗಲದೊಳು ಬಿದಳೂರ' ಎಂದಿರುವ ಕಾರಣ ಪೊಲ್ಲಬ್ಬರಸಿಯರ ಮಂಗಲಪುರವು ಬಿನ್ನಮಂಗಲವೆನಿಸಿದ್ದು ಬಿದಳೂರು ಅದಕ್ಕೆ ಸೇರಿದ ನೊಳಂಬ ಪ್ರದೇಶವಾಗಿತ್ತು; ನೊಳಂಬರ ಕಾಲಕ್ಕೆ ಬಿನ್ನಮಂಗಲವು ರಾಜಮಾನಿತ ಅರಸಿಯ ಪಟ್ಟಣವಾಗಿತ್ತು; ಆಕೆಯ ಆಳ್ವಿಕೆಗಿತ್ತೆನ್ನ ಬೇಕು. ಕಾರಣ ಅಯ್ಯಪದೇವನ ಕೈಕೆಳಗೆ ಅವನ ಇನ್ನಿತರ ರಾಣಿಯರಾದ ನಾಗಿಯಬ್ಬೆ, ಹೆಳೆಯಬ್ಬೆಯರು ರಾಜ್ಯವಾಳುತ್ತಿದ್ದ ಸಂಗತಿ ಇದೆ.[*೮] ನೊಳಂಬ ರಾಜವಂಶದಲ್ಲಿ ಅರಸಿಯರ ಹೆಸರಿನಲ್ಲಿ ಮಂಗಲಪುರವನ್ನು ಕಟ್ಟಿಸುವ ಪದ್ಧತಿಯ ಕುರುಹಾಗಿ ಮುಳಬಾಗಿಲು ಶಾಸನವೊಂದು ಸಾಕ್ಷಿಯಾಗಿದೆ: ನೊಳಂಬರ ೨ನೇ ಪೊಳಲ್ಚೋರನ ಕದಂಬವಂಶದ ರಾಣಿ 'ದೀವಬ್ಬರಸಿಯಪೊರ್ಬಿರಮಂಗಲದೊಳ್ದೀ ವಟ್ಟಿ' ಎಂಬ ಸಾಲೇ ಅದು.[*೯] ಹೀಗಾಗಿ ಶಾಸನದ ಪೊಲ್ಲಬ್ಬರಸಿಯ ಮಂಗಲಪುರಕ್ಕೆ ಪ್ರಾಚೀನ ಮಹತ್ವ.

ಇನ್ನು 'ಬಿದಿಳೂರ ದೇವರ ಕೆಱೆ' ಎಂದಿರುವಕಾರಣ ಇಂದಿನ ಜಾನಪದೀಯ 'ಬಿದಲೂರು ಗಂಗಮ್ಮ'ನ ಕೆರೆಯ ಇತಿಹಾಸವು ಶಾಸನೋಕ್ತವಾಗಿ ಸಾವಿರ ವರುಷದ ಹಳಮೆಯನ್ನು ಹೊಂದಿದಂತಾಗಿದೆ. ಏಳು ಕನ್ನಿಕೆಯರ ಹಾಗು ನೀರುಗಂಟಿ ಸಂಬಂಧದ ಜಾನಪದ ಕತೆಯ ನಂಟು ಈ ಕೆರೆಗೆ ಇದ್ದು, 'ದೇವರಕೆರೆ' ಆಗಿರುವುದು ಶಾಸನೋಕ್ತವಿರಲು ಸಪ್ತಮಾತೃಕಾ ಸಂಬಂಧದ ದೇವತೆಯೂ ಈ ಕೆರೆಗಿದ್ದು ಆ ಆರಾಧನೆಯ ಇತಿಹಾಸವೂ ಇಲ್ಲಿ ಸೂಚಿತವಾದಂತಾಗುತ್ತದೆ.

'ಮಳಲಗದೆ' – ಕೆರೆಯ ಕೆಳಗಡೆ ಇರುವ ಗದ್ದೆಗೆ ಇಂದಿಗೂ ಈ ಹೆಸರಿದೆ. ಬಿತ್ತುವಟ್ಟ ಎಂದಿನಂತೆ ತರೀ ಜಮೀನಿನ ಬಿತ್ತು – ಬೀಜವರಿಯ ಮೇಲಿನ ಪಾಲು, ಕೆರೆಯ ದುರಸ್ತಿಗೆ ಬಿಟ್ಟು ಕೊಡುತ್ತಿದ್ದ, ಭೂಮಿಯ ಆದಾಯವೆನಿಸಿ ಶಾಸನದ ಅರ್ಥಕ್ಕೆ ಪ್ರಸ್ತುತ ಗೊಂಡಿದೆ. ಬಿತ್ತುವಟ್ಟ, ಬಿತ್ತುಕಟ್ಟು ಬಿಡುವುದು ನೊಳಂಬರ ಶಾಸನಗಳಲ್ಲಿ[*೧೦] ಸಾಮಾನ್ಯವಾಗಿ ಕಂಡುಬರುತ್ತದೆ. ನೊಳಂಬ ಶೈಲಿಯ ಆಸೀನ ಬಸವ (ವೃಷಭ) ವಿಗ್ರಹದಲ್ಲಿ ಎತ್ತಿ ಮಡಿಸಿದ ಎಡಗಾಲು, ಕೊರಳಿನಿಂದ ಇಳಿಬಿದ್ದ ಗಂಟೆ, ಕೊರಳು ಹಾಗೂ ಮಂಡಿಭಾಗದ ಅಲಂಕಾರ ಇರುವಂತೆ, ಪ್ರಸ್ತುತ ಬಿದಲೂರು ಕೆರೆ ಹಿಂಬದಿ ಶಾಸನದ ಬಳಿ ಶಿರ ಭಿನ್ನಗೊಂಡ ಬಸವನ ಶಿಲ್ಪವಿದೆ. ಶಾಸನದ ೨ನೇ ಭಾಗದ ಕೊನೆಯಲ್ಲಿ ಮಧ್ಯಕ್ಕೆ ಗೋವು ಕರುವಿಗೆ ಹಾಲೂಡಿಸುವುದು – ಚಿತ್ರವಿದೆ. ಇವೆಲ್ಲ ನೊಳಂಬ ಶೈಲಿಗೆ



ತುಂಬಿದ ಬಿದಲೂರು ಗಂಗಮ್ಮನ ಕೆರೆ, ಶುಕ್ರ ಕೊಳದ (ಕೊಣ) ಕಳಶ, ಬೆನಕ - ಮಾತೃಕಾ ಪೂಜೆ

ಸಮೀಪದವಾಗಿವೆ. ಈ ಹಿನ್ನೆಲೆಗಳಲ್ಲಿ ಪ್ರಸ್ತುತ ಶಾಸನ ನೊಳಂಬರ ಸಂಬಂಧದ್ದು ಎನ್ನಬೇಕಾಗಿದೆ.

**ಬಿದಲೂರು ದೇವರ ಕೆಜೆಯ ಜಾನಪದ ಅನ್ವಯಿಕೆಗಳು** [*೧೦೪]

ಸಾವಿರ ವರುಷಕ್ಕೂ ಮೀರಿದ. ಇತಿಹಾಸವನ್ನು ಅಪ್ಪಿ ಕೊಂಡಿರುವ ಬಿದಲೂರು ಗಂಗಮ್ಮನ ಕೆರೆಯು ಜಾನಪದೀಯವಾಗಿ ಕತೆ, ಸ್ಥಳಪುರಾಣಗಳನ್ನು ಅಂಟಿಸಿಕೊಂಡು, ಆಚರಣೆಗಳನ್ನೂ ಮೈಳೈಸಿಕೊಂಡಿದೆ: ಶಿವಗಂಗೆಯ ಗಂಗಪ್ಪ ಹೊನ್ನಾದೇವಿಯನ್ನು ಕದ್ದು ತರುವಾಗ 'ಬಿದಳೂರು ಬಳಿ '**ಕಡೆ**' ಆದಳು. ಆಗ ನೀರ ನೆಲೆಯನ್ನರಸಿ ಏಳು ಜನ ದೇವಕನ್ನಿಕೆಯರು ಬಂದಾಗ ಗುಪ್ತಗಾಮಿನಿ ಕುಮುದ್ವತಿ ಚಿಮ್ಮಿದ ನೆಲೆ ಕಂಡರು. ಹಾಗೆ ಚಿಮ್ಮಿದ ಗಂಗೆಯನ್ನು ಅಣೆಕಲ್ಲು ಹಾಕಿ 'ನೆಲೆ ಮರೆ'ಯಲ್ಲಿರಿಸಿದ್ದ ಹೊನ್ನಾದೇವಿಯತ್ತ ಹರಿಸಿದರು. ಹೊನ್ನಾದೇವಿಗೆ ಮಡಿ ಆಯಿತು. ಇಂದಿಗೂ ಹೊನ್ನಾದೇವಿ ನಿಂತ ನೆಲೆ ಎಂದು ಗಂಗವ್ವನ ಕೆರೆಯ ಹಿಂಬದಿ ಪಶ್ಚಿಮ ದಿಸೆಯಲ್ಲಿ ನೆಲೆ ತೋರುವುದುಂಟು. ಕನ್ನಿಕೆಯರ ಸಹಾಯಕ್ಕಾಗಿ ಹೊನ್ನಾದೇವಿಗೆ ಸಂತೋಷವಾಗಿ ಶಿವಗಂಗೆಗೆ ಆಹ್ವಾನಿಸಿ ಗಂಗಪ್ಪನೊಡನೆ ಶಿವಗಂಗೆ ಸಾಗಿದಳು. ನಂತರ ಮತ್ತೊಂದು ಕತೆ ಆಯಿತು. ಕುಮುದ್ವತಿ ಚಿಮ್ಮಿದ ನೆಲ ಅಂದರೆ ಗಂಗೆ ಬಿದ್ದನೆಲ ಬಿದಲೂರು; ಅಲ್ಲಿನ ಕೆರೆ ತುಂಬಿ ಗಂಗೆ ಮೀರಿ ಹರಿಯ ತೊಡಗಿದಳಂತೆ. ಆಗ ಕನ್ನಿಕೆಯರು ಕಟ್ಟಿದ ಏರಿಗೆ ತೂಬು ಜೋಡಿಸಲು ಶುರು ಮಾಡಿದರು. ಇಡೀ ರಾತ್ರಿ ಕೆಲಸ ಮಾಡಿ 'ಕೊಣ' ಕಟ್ಟಿ ಕಲ್ಲಿನ ಸ್ತಂಭಗಳನ್ನಿಟ್ಟು, ವಾಸರ ಹೇಗಿದೆ ಎಂದು ಗಲಗಲ ಕಾಲಂದಿಗೆ ಗೆಜ್ಜೆ ಸದ್ದು ಮಾಡಿಕೊಂಡು ಓಡಾಡುತ್ತಿದ್ದರಂತೆ. ಆ ಹೊತ್ತಿಗೆ ನೆರೆಯ ಕೋಡಿಹಳ್ಳಿಯ ನೀರುಗಂಟಿ ಆಲದ ಮರದ ಪೊಟರೆಯಲ್ಲಿ ಮಲಗಿದ್ದವ ಸದ್ದು ಕೇಳಿ ಎದ್ದು ಕನ್ನಿಕೆಯರ ಮಾತು ಕೇಳಿಸಿಕೊಂಡ. 'ಬಲಗೈ ವಾಸರ' ಎಂದ (ವಾಸರ ಬಲಕ್ಕೆ ಇದೆ). ಅಚ್ಚರಿಗೊಂಡ ಕನ್ನಿಕೆಯರು ಅವನ ತಿಳುವಳಿಕೆಗೆ ಮೆಚ್ಚಿದರು. ಅವನ ಬಯಕೆ ಕೇಳಿದರು. ನೀರುಗಂಟಿ ತನ್ನ ಮೈ ಕಜ್ಜಿ ವಾಸಿಯಾಗಲು ಕೇಳಿಕೊಂಡ. ಕಟ್ಟಿರುವ 'ಕೊಣ'ದ ಒಳಗೆ ಸ್ನಾನ ಮಾಡಿದರೆ ವಾಸಿ ಆಗುತ್ತದೆ ಎಂದರು. ಸ್ನಾನಮಾಡಿ ನೀರುಗಂಟಿ ಹರುಷಗೊಂಡ. ಕನ್ನಿಕೆಯರು ದೇವತೆಗಳೆಂದು ಭಕ್ತಿಯಿಂದ ಬೇಡಿದ. ಮುಟ್ಟಿದ್ದೆಲ್ಲ ಚಿನ್ನ ಆಗಲಿ ಎಂದರು. ಆದರೆ ಸದ್ಯ ನಡೆದ ಸಂಗತಿಯನ್ನು ಅನ್ಯರಿಗೆ ಹೇಳಿದರೆ ತಲೆಹೋಳು ಎಂದರು. ನೀರ್ಗಂಟಿ ಭಾಷೆಕೊಟ್ಟು, ಗುಟ್ಟು ರಟ್ಟು ಮಾಡದೆ ಸುಖವಾಗಿ ಬಹಳ ಕಾಲ ನಡೆದುಕೊಂಡ. ಆದರೆ ಒಮ್ಮೆ ಮೈಮರೆತು ಹೆಂಡತಿಗೆ ಗುಟ್ಟು ಹೇಳಿದಾಗ ತಲೆ ಸಿಡಿದು ಸತ್ತನಂತೆ.

ಈ ಕತೆ ಪ್ರಚಾರವಾಗುತ್ತ ಬಿದಲೂರು ಗಂಗಮ್ಮನ ಪ್ರಸಿದ್ಧಿಯೂ ಹೆಚ್ಚಿತು. ಕೆರೆಯ ಬಳಿಯ ಬಾವಿಯ ನೆಲೆಗೆ 'ಶುಕ್ರಕೊಳ' ಎನ್ನುತ್ತಾರೆ. ಇಲ್ಲಿರುವ ಕೊಣಕ್ಕೆ ಏಳು ಒಳಗುಣಿ (ಕುಳಿ)ಗಳಿವೆ. ತೂಬಿನ ಬುಡದಲ್ಲಿ ನೀರು ನಿಂತ ನೆಲೆಯೂ ಸೇರಿದಂತೆ 'ಕೊಣ' ಎಂದು ವ್ಯವಹರಿಸುತ್ತಾರೆ. ಬುಡದಿಂದ ಹತ್ತು ಅಡಿ ಎತ್ತರದಲ್ಲಿ ಕೊಣಕ್ಕೆ ಸೇರಿದಂತೆ ವಾಸರ ಬಾಗಿಲು ಹಾಗು ಅದರ ಬುಡದಲ್ಲಿ ತೊಟ್ಟಿಲು ಕಟ್ಟಲಾಗಿದೆ. ಮೇಲೆ ಕಂಬಗಳ ಅಡ್ಡ ತೊಲೆಯಿಂದ ಕಳಶ ಹಾಗು ಗಂಟೆಗಳನ್ನು ಇಳಿಬಿಟ್ಟು ಪೂಜೆ ಸಲ್ಲಿಸುತ್ತಾರೆ. ಪ್ರತಿ ಮಂಗಳವಾರ, ಶುಕ್ರವಾರ ಇಲ್ಲಿ ಹೆಂಗಳೆಯರ ಹರಕೆ ಹಬ್ಬದಾಚರಣೆ. ಶ್ರಾವಣದ ಗೌರಿಮಾಸದಲ್ಲಿ ಬಿದಲೂರಿನ ಒಕ್ಕಲಿನವರು ಎಲ್ಲಿದ್ದರೂ ಬಂದು ಪೂಜೆ ಸಲ್ಲಿಸುತ್ತಾರೆ. ಶುಕ್ರವಾರ ಹೆಚ್ಚಿನ ಪೂಜೆ. ಸುಂದರಿಯರಾದ ಸಪ್ತಕನ್ನಿಕೆಯರು ಇಲ್ಲಿ ಜಲ ಕ್ರೀಡೆಯಾಡುತ್ತಿದ್ದರೂ, ಶುಕ್ರಮುನಿ ಇಲ್ಲಿ ಬಂದು ತನ್ನ ಪಾಡಿಗೆ

ಸ್ನಾನಾದಿಗಳನ್ನು ಮುಗಿಸಿ ವಿಚಲಿತನಾಗದೆ ಹೋಗುತ್ತಿದ್ದರಂತೆ. ಅಂತಾಗಿ 'ಶುಕ್ರಕೊಳ' ಎಂಬ ಹೆಸರು ನಿಂತಿತಂತೆ, ಎಂದೆಲ್ಲ ಜನಪದ ಕತೆ.

ಇಲ್ಲಿಗೆ ಬರುವ ಹರಕೆಯ (ಮದುವೆ, ಸಂತಾನ, ಖಾಯಿಲೆ ಕಸಾಲೆ) ಯಾವುದೇ ಹೆಣ್ಣು ಮಗಳು ಕೊಣದ ಬಳಿ ನೀರು ಮಿಂದು ಗಂಗೆ ಪೂಜೆ ಸಲ್ಲಿಸುತ್ತಾಳೆ. ಒದ್ದೆ ಮಡಿಯಲ್ಲಿ ಕೊಣದ ಮೇಲ್ಬದಿಯಲ್ಲಿ ಅಂಗಳದಲ್ಲಿ ಹಾಸಿರುವ ಸಿಮೆಂಟಿನ ನೀಳ ಜಗತಿಗಳ ಮೇಲೆ ಹಸಿ ಅಕ್ಕಿ ಬೆಲ್ಲದಿಂದ ತಮ್ಮಟ (ತಂಬಿಟ್ಟು) ಸಿದ್ಧ ಮಾಡುತ್ತಾಳೆ. ಜಗತಿಯ ಮುಂದೆ ಜೋಡಿ ಮಣ್ಣಿನ ಗದ್ದುಗೆ ಮಾಡಿ ಐದು ಕಲ್ಲು ಬೆನಕಗಳನ್ನು (ಬೆಣಚುಕಲ್ಲು) ಸಾಲು ಜೋಡಿಸಿಡುತ್ತಾಳೆ. ಹರಿಶಿನ-ಕುಂಕುಮ-ಹೂವಿಟ್ಟು, ಅಗ್ರಬಾಳೆಯಲ್ಲಿ ತಮ್ಮಟ, ಎಳ್ಳುಂಡೆ, ಬೆರಗಾಳು (ಹಸಿಕಡಲೆ, ಉದ್ದು, ಅಕ್ಕಿ, ಹೆಸರು ಬೇಳೆ ಇತ್ಯಾದಿಗಳನ್ನು ನವಗ್ರಹ ಪೂಜಾ ಸಂಕೇತ ದಂತೆ) ಇಟ್ಟು, ಹೊಸಸೀರೆ, ಕುಪ್ಪಸವಿಟ್ಟು, ಧೂಪ-ದೀಪ ಆರತಿ ಎತ್ತುತ್ತಾಳೆ. ನಂತರ ಹೊಸ ಸೀರೆ ಕುಪ್ಪಸ ತೊಟ್ಟು ಕೊಣದ ಪೂಜೆ ಮಾಡುತ್ತಾಳೆ. ಅದೇ ಉಡುಗೆಯಲ್ಲಿ ಪ್ರಸಾದದೊಡನೆ ಹಿಂದಿರುಗುತ್ತಾಳೆ. ಹೊಸದಾಗಿ ಗಂಗವ್ವನಿಗೆ ನಡೆದು ಕೊಳ್ಳುವವರು ಮೂರು ಬಾರಿ ಪೂಜೆಗೆ ಬರಬೇಕು: ಮೂರನೇ ಬಾರಿಗೆ ಬರುವಲ್ಲಿ ಸೀರೆ-ಕುಪ್ಪಸ ತಂದು ಪೂಜೆ ಮಾಡಿಕೊಂಡು ಹೋಗಬೇಕು. ಮೇಲಿನ ಕತೆ, ಆಚರಣೆ, ಹರಕೆ, ಮಹಿಮೆ ಎಲ್ಲ ಸೇರಿದಂತೆ 'ಬಿದ್ಲೂರು ಗಂಗವ್ವ' ಎಂಬ ಜನಪದ ಗೀತೆಯೂ ಕಳೆದ ದಶಕದಲ್ಲಿ (ಎಂ. ಜಿ. ನಾಗರಾಜ್ ವಿರಚಿತ) ರಚಿತವಾಗಿದೆ. ಅದನ್ನು ಕೋಲಾಟಕ್ಕೆ ಹೊಂದಿಸಿಕೊಂಡು ತ್ಯಾಮಗೊಂಡ್ಲು ಪ್ರದೇಶದ ಜನಪದರು ಹಾಡುತ್ತಿದ್ದಾರೆ.

ಬಿದಲೂರಿನಲ್ಲಿ ಗಂಗರ ಕಾಲದ ವೀರಗಲ್ಲುಗಳು, ವಿಜಯನಗರ ಕಾಲದ ಮಾಸ್ತಿಗಲ್ಲುಗಳೂ ಇವೆ. ಪಶ್ಚಿಮ ಭಾಗದಲ್ಲಿ ಈಗ ಬರಿ ನಿಂತ ಕಲ್ಲುಕಂಬಗಳಿರುವೆಡೆಯಲ್ಲಿ ಮೊದಲಿಗೆ ಗಂಗಮ್ಮನ ಗುಡಿ ಇತ್ತೆನ್ನಲಾಗಿದೆ. ಊರಿನ ಸೆರಗಿಗೆ ಬಿದಲೂರು ಕೆರೆ ಇದೆ. ೩೧ ಕೆರೆಗಳ ನೀರು ಸೇರುವ ಈ ವಿಶಾಲವಾದ ಕೆರೆಯ ಪೂರ್ವಕ್ಕೆ ಕೋಡಿಪಾಳ್ಯ, ಆರುವೆಸಂದ್ರ ಗ್ರಾಮಗಳಿವೆ. ಕೋಡಿಪಾಳ್ಯದಲ್ಲಿ ನೊಳಂಬರ ಕಾಲದ ಕ್ರಿ.ಶ. ೯೫೫ರ ಶಾಸನವೊಂದಿದೆ. ಬಿದಲೂರು ಗಂಗವ್ವನಿಗೆ ಉಗಾದಿ ಕಳೆದ ೨ ದಿನಕ್ಕೆ ಅಥವಾ ೧೫ ದಿನಕ್ಕೆ ಆರತಿ ಉತ್ಸವ ಉಂಟು. ತ್ಯಾಮಗೊಂಡ್ಲುವಿನಲ್ಲಿರುವ ಗಂಗವ್ವನ ಉತ್ಸವಮೂರ್ತಿಯನ್ನು ಬಿದಲೂರಿಗೆ ಕರೆತಂದು ಉತ್ಸವಾದಿಗಳನ್ನು ನಡೆಸುತ್ತಾರೆ. ಕಾರ್ತೀಕದಲ್ಲಿ ಒಂದು ತಿಂಗಳ ಕಾಲ ಸಂಕ್ರಾಂತಿ ಪೂಜೆ ಉಂಟು. ಜಾತ್ರೆ ಜೇಷ್ಠ ಮಾಸದಲ್ಲಿ ನಡೆಯುತ್ತದೆ.

ಐತಿಹ್ಯವೊಂದರ ರೀತ್ಯಾ, ತ್ಯಾಮಗೊಂಡ್ಲುವಿಗೆ ನಿಜಗಲ್ಲಿನಿಂದ ವಲಸೆ ಬಂದ ಇಲ್ಲಿನ ಗಂಗಾಮತಸ್ತರ ಮೂಲ ಪುರುಷ 'ಅರಸ್' ಎಂಬುವನ ಕನಸಿನಲ್ಲಿ ಬಿದಲೂರು ಗಂಗವ್ವ ಕಾಣಿಸಿಕೊಂಡಳಂತೆ. ತಾನು ಹುತ್ತದ ಬಳಿ ನಿಂತಿದ್ದೇನೆ, ತನಗೆ ನೆಲೆ ಬೇಕು ಎಂದಳಂತೆ. ಆಗ ಅರಸ್ ಅಕೆಗೆ ಬಚ್ಚಣಿಗೆ (ಮರದ) ವಿಗ್ರಹ ಮಾಡಿ ಸ್ಥಾಪಿಸಿ, ಕುಲದೇವತೆಯಾಗಿ ಸ್ವೀಕರಿಸಿದನಂತೆ. ತ್ಯಾಮಗೊಂಡ್ಲುವಿನಲ್ಲಿ ಚಲುವರಾಯ ಸ್ವಾಮಿ ದೇಗುಲದ ಕ್ರಿ.ಶ. ೧೫೪೬ರ ಶಾಸನದಲ್ಲಿ ಕೆಂಪರಾಯ ಎಂಬುವನ ಆಳ್ವಿಕೆ ಸೂಚಿತವಿದೆ. ನಂತರ ಕೆಂಪೇಗೌಡನ ಕಾಲದ ಶಾಸನಗಳೂ ಇದ್ದು ಶಿವಗಂಗೆ, ಬಿದಲೂರು, ತ್ಯಾಮಗೊಂಡ್ಲು ಸಂಬಂಧಗಳಿಗೆ ಜನಪದ ಸಾಕ್ಷಿಗಳಲ್ಲದೆ, ಐತಿಹಾಸಿಕ ಸಾಕ್ಷಿಗಳೂ ದೊರಕುತ್ತವೆ.

ಈ ಹಿನ್ನೆಲೆಗಳಲ್ಲಿ ಬಿದಲೂರಿನ ಸದಸ್ಯದ ಶಾಸನವು ಇತಿಹಾಸ ಹಾಗೂ ಜನಪದ ಸಂಗತಿಗಳಿಗೆ ಕೊಂಡಿಯಾಗಿ ನಿಲ್ಲುವಂತಿದೆ. ೧. ನೊಳಂಬರ ಆಳಿಕೆಗೆ ಸೇರಿದ್ದ ಈ ಪ್ರದೇಶದಲ್ಲಿ ೬-೭ ಮೈಲಿಗಳ ಫಾಸಲೆಯಲ್ಲಿರುವ ಬಿನಳಮಂಗಲ, ಬೇಗುಪುರ (ತೆಪ್ಪದ ಬೇಗೂರು) ಬಿದಳೂರು : ಪ್ರಾಮುಖ್ಯ ಪಡೆದ ಊರುಗಳಾಗಿದ್ದುವು. ಗಂಗ ಹಾಗು ನೊಳಂಬರ ಆಳ್ವಿಕೆಯ ಕುರುಹಾಗಿ ತದನುಗುಣ ವ್ಯಕ್ತಿನಾಮಗಳು ಇಲ್ಲಿನ ನಾಡಧಿಕಾರಿಗಳು ಹಾಗೂ ಸಾಮಾನ್ಯರಲ್ಲಿ ಬಳಕೆಗಿದ್ದುವು. ೨. ಈ ಪ್ರದೇಶವು ಸಾಂಸ್ಕೃತಿಕವಾಗಿ ಸಪ್ತಮಾತೃಕಾ ಆರಾಧನೆಯ ಕೇಂದ್ರವಾಗಿತ್ತು. ೩. ಕಾಳಾಮುಖ ಶೈವಕೇಂದ್ರವಾಗಿ ಆ ಮಠಗಳ ಪ್ರಭಾವ ಇಲ್ಲಿತ್ತು. ಅಂತೇ ಬಿನ್ನಮಂಗಲದ ಮುಕ್ತನಾಥೇಶ್ವರ ದೇಗುಲದ ಭಿತ್ತಿಗಳಲ್ಲಿ ಕಾಳಾಮುಖ ಶೈವಯತಿಗಳ ಶಿಲ್ಪವಿರುವುದೂ ಗಮನಾರ್ಹ. ೪. ನೊಳಂಬರ ಮಹಾ ಸಾಮಂತನಾಗಿ ಪೊಲ್ಲತಾಳ್ವ ಇಲ್ಲಿ ಆಳುತ್ತಿದ್ದ. ೫. ನೊಳಂಬರ ಅಯ್ಯಪದೇವನ ರಾಣಿ ಪೊಲ್ಲವ್ವಬ್ಬರಸಿ ಈ ಪ್ರದೇಶದಲ್ಲಿ ಕೆಲಕಾಲ ಆಳುತ್ತಿದ್ದಳು. ಆ ಕುರುಹಾಗಿ ಅವಳ ಹೆಸರಿನಲ್ಲಿ (ಅಗ್ರಹಾರ)ಪುರವೊಂದನ್ನು ಸ್ಥಾಪಿಸಲಾಗಿತ್ತು. ೬. ಬಿದಳೂರ ದೇವತೆ ಇಲ್ಲಿನ ಸಮುದಾಯದ ಜನಪ್ರಿಯ ಗಣ್ಯ ದೇವತೆ (ಸಪ್ತಮಾತೃಕಾ) ಆಗಿದ್ದಳು. ೭. ಆ ದೇವತೆಯ ಹೆಸರಿನ ಕೆರೆ ಬಹಳ ಪ್ರಸಿದ್ಧಿಗೊಂಡಿತ್ತು. (ಇದಕ್ಕೆ ಪೋಷಕವಾಗಿ ಇಂದಿಗೂ ೩೧ ಕೆರೆಗಳ ನೀರು ಸೇರುವ ಬೃಹತ್ತಾದ ಕೆರೆ ಅದು ಆಗಿರುವುದು ಗಮನಾರ್ಹ. ಮಳೆಗಾಲದಲ್ಲಿ ತುಂಬಿದ ಈ ಬೃಹತ್ ಕೆರೆ ಮಹಾ ಸರೋವರದಂತೆ ಕಾಣುತ್ತದೆ.) ಈ ಕೆರೆಗೆ ಸಾವಿರ ವರುಷಗಳಿಗೂ ಮೀರಿದ ಇತಿಹಾಸವಿದೆ ೮. ಈ ಪ್ರದೇಶಗಳಲ್ಲಿ ಕೆರೆಗಳ ಆಸರೆ ಬಹಳ ಹೆಚ್ಚಿನ ಪ್ರಮಾಣದಲ್ಲಿದ್ದು ಅಂದಿನ ಜಲ ನಿಕ್ಷೇಪದ ಚಿತ್ರವೂ ಒದಗುತ್ತದೆ. ೯. ಶಾಸನದಲ್ಲಿ, ಕೆರೆಗೆ ದಕ್ಷಿಣ ಹಾದಿಯಲ್ಲಿರುವ 'ಕಳಲುಘಟ್ಟ'ದ ಹೆಸರಿಲ್ಲದಿದ್ದರೂ, ಜನಪದ ಕತೆಗಳು ಈ ಕೆರೆಗೂ ಆ ಸ್ಥಳನಾಮಕ್ಕೂ ಗಂಟು ಹಾಕಿವೆ ಎನ್ನಬೇಕು. ಕಳ(ಬ)ಲು = ನೂಪುರ, ಕಡಗ; ಘಟ್ಟ = ಕೆರೆ ಸೋಪಾನ, ಎಂಬ ಅರ್ಥಗಳನ್ನು ಗಮನಿಸಿದರೆ, ಸಪ್ತಜಲ ಕನ್ನಿಕೆಯರು ಹಾಗು ನೀರ್ಗಂಟಿಯ ಕತೆಯಿಂದಾಗಿ ಬಂದ ಜಾನಪದ ಘಟನಾವಾಚಿ ಸ್ಥಳನಾಮವಿದೆನಿಸುತ್ತದೆ.

## ಬದಿಳೂರು ಶಿಲಾ ಶಾಸನದಪಾಠ

ಕಾಲ : ಕ್ರಿ.ಶ. ೯೪೯; ಆಳಿಕೆ : ನೊಳಂಬ ಅರಸು ವಂಶ

*ಶಾಸನದ ಮುಂಬದಿ ಸಾಲುಗಳು*

೧ (ಓಂ) ||? ಸ್ವಸ್ತಿ ಸಕವರಿಷ ಎ

೨. ಣ್ಭುನೂಱ ಎಪ್ಪತ್ತ(ತ್ತೊ)

೩ ನ್ದನೇ ಕೀಲಕ ಸಂವರಿಸದನ್ದು. [ಗೊ]

೪ ರರ ಬಿನಳ್ಮಜ್ಞ[ಲ್ರ]ದೊಳ ಬಿದವ್ಪೊ[ಳೂ] ರ

೫ [ಪುರ] ಮೊಯ್ದಯಱಮ್ಮಗವುಣ್ಣ [ಪು]

೬ ರ ಪೊನ್ನೇರ್ಬ್ಬೆಲೆಯ ಪುರೇಸ್ವರ ದೇಮ

೭ ಗೆ ಬಿಟ್ಟುವಟ ದೇ ^ವ^ ಸ್ತ ^ಳ^ ಕೆಳಮಾಗಿ ಮುನ್ನೂರ್ಕಣ್ಣು

೮ ಗ ಬೇಗುಪುರನ ದೇವಿರ್ಗೊರವರ

೯ [ಮ]ಠದೆ ಕೊಡಗಿನಟಿದೋನ್ಕಟ್ಬೋನ್

೧೦ (ಗೆ) ಯ್ದ ಬಾಣರಾಸಿಯಟ್ಕೊರ

೧೧ ರ ನಟಿದ ಪಾತಕಂ

*ಶಾಸನದ ಹಿಂಬದಿ ಸಾಲುಗಳು* ಕಾಲ : ಕ್ರಿ.ಶ. ೯೫೫

೧೨ ಸಾಮನ್ತರಟ್ ಪಾರಗತ ಪಾಟ್ಬಾತಿರ

೧೩ ಗಣ್ಣ ಮಹಾಸವನ್ತಟ್ಬೊಲ್ಲ [ತಾಟ್ಬ]ಳ್ವೊಡೆ ಪುಳುದೆಯ

೧೪ ಟ್ಬೆವಜ್ಞನಹ(ಟ್ಬೊ)ಲ್ಲತಾಟ್ಬನಾಹವ. ಈಟ್ಪೆಲ್ಲಪ್ರಚ



೧೫ ಣ್ಣಮಾರ್ತಣ್ಣನ ಕಳರಂ ಬೀವಂ[ಟ್ಬ] ಶ್ರೀ ವರ್ತೂರಲಿ ವಿಳ್ದ

೧೬ ರಸರ ಸಮಸ್ತ ಭಠರ್ಗಿಮಾರ್ವತಿ ಮಲ್ಲಾಮಾತ್ಯ

೧೭ ಗುಣ ಸಂಪ[ನ್ನ]ಸ್ವಾಮಿ ನಿಮ್ರಿತ್ಯಾ ಪುಸಿಗೋಇಜ್ಜರಸರ

೧೮ ಶ್ರೀ ಸತಿ ಪೆಗ್ಗದೇಬಿ ಸುದಯ್ಯನುಂ ನಾಟ್ಬಾವುಣ್ಡನ್

೧೯ ಚಲತ್ಕರಸಂ ಗಂಗಗಾಮುಣ್ಡನುಂ ಸಕನ್ರಿಪ ಕ(ಕಾ)ಲಾ

೨೦ ತೀತ ಸಂವತ್ಸರ ಸತಂಗಳೆಣ್ಬುನೂ ಱಟ್ಪತ್ತೇಟನೆಯ

೨೧ ಆನನ್ದ ಸಂವತ್ಸರತ್ತಳ್ದರಿ ಪರ್ಯನ್ತರ ದಳರ್ಪವುಪ್ಪೊಲ್ಲ[ವ್ವೆ]

೨೨ ಬ್ಬಾರಸಿಯರ ಮಜ್ಞಳಮ್ಬುರದೊಳ ಬಿದಿಳೂರ ದೇವರ ಕೆಱೆಗೆ

೨೩ ಳ[ಸ]ಲ್ತಳತಿ ಪೆರ್ಗ್ಗಣ್ಣವ[ರ್] ಮೇಚ ಗಾವುಣ್ಡಗೆ

೨೪ ಮ ^ಳ^ ಲ ^ಗ^ ದೆ ಬೆದೆ ಪನ್ನಿರ್ಕ್ಕಣ್ಬುಗ ಕೊಟ್ಟರ್

೨೫ ಕೆಱೆಗೆ ಬಿತ್ತುವಠ(ಟ) ಸಲ್ವುದು ಇದನಟಿದಾತಂ ಕವಿ

೨೬ ಲೆಯು[ಂ] ಬಾರಣಾಸಿಯುಱುವಂ ನಟಿದ ಪಾತಕ[ಂ]

೨. ಬೆಂಗಳೂರಿನ ಚಿಕ್ಕಪೇಟೆಯ ಮುಂಜಿ ಸೋಮೇಶ್ವರ ಗುಡಿಯ ಎರಡು ಕೊಡಗು ಸಂಬಂಧದ ಶಾಸನಗಳು

ಅ) ಗುಡಿಯ ಒಂದು ಶಾಸನ *೦೦ ಸು. ೫ ಅಡಿ ಎತ್ತರ ೩$^1/_2$ ಅಡಿ ಅಗಲವಿದ್ದು ೧೭ಸಾಲುಗಳನ್ನು ಹೊಂದಿದೆ. ಶಾಸನದ



ಮೇಲ್ಭಾಗದಲ್ಲಿ ಸೂರ್ಯ, ನಕ್ಷತ್ರ, ತ್ರಿಶೂಲ ಹಾಗು ಚಂದ್ರರ ಸೂಚಕ ಉಬ್ಬು ಶಿಲ್ಪಗಳಿವೆ. ಅಕ್ಷರಗಳ ಉದ್ದ ಸುಮಾರು ೦.೯ ಸೆಂ.ಮೀ. ಅಗಲ, ೦.೫ ಸೆಂ.ಮೀ. ವರೆಗೆ ಇವೆ. ಇದೊಂದು ದಾನ ಶಾಸನವಾಗಿದ್ದು ಹಾಲೇರಿ ವಂಶದರಸ ದೊಡ್ಡವೀರರಾಜೇಂದ್ರ ಒಡೆಯನ ಕುರಿತ ಹಾಗು ಸಂಸ್ಥಾನದ ಸೇವಕ ಭಗವಂತಗಿರಿಯ ಕಾಯಕದ ಸಂಗತಿಯು ಇದರಲ್ಲಿದೆ.

ಶಾಸನದ ರೀತ್ಯಾ ಕೊಡಗು ಸಂಸ್ಥಾನದ ಸೇವಕ ಭಗವಂತಗಿರಿಯ ಮೇಲ್ವಿಚಾರಣೆಯಲ್ಲಿ ಕ್ರಿ.ಶ. ೧೭೭೬ (ರಾಕ್ಷಸ ಸಂವತ್ಸರ ಆಷಾಢ ಶುದ್ಧ ೫ರಲ್ಲು) ರಲ್ಲಿ ಕೊಟ್ಟ ದಾನದ ಕುರಿತು, ಕ್ರಿ.ಶ. ೧೭೭೭ರಲ್ಲಿ ಹಾಕಿಸಿದ ದಾನ ಶಾಸನವಿದಾಗಿದೆ. ಕೊಡಗಿನ ಅಂದಿನ ಅರಸನ ದಿವಾನನಾದ ಮಂಜಯ್ಯನು ಚಿಕ್ಕಪೇಟೆಯಲ್ಲಿನ ಸ್ವಗೃಹ ವಠಾರದಲ್ಲಿ ಮನೆದೇವರಾದ ಮಂಜೇಶ್ವರ ಮತ್ತು ಮುಂಜಿ ಸೋಮೇಶ್ವರ ದೇಗುಲಗಳನ್ನು ಸ್ವಂತಕ್ಕಾಗಿ ಕಟ್ಟಿಸಿದ. ಕ್ರಿ.ಶ. ೧೭೭೭ನೇ ನಳಸಂವತ್ಸರದ ಚೈತ್ರದಲ್ಲಿ ಗುರು ಬೃಂದಾವನವನ್ನು ಪ್ರತಿಷ್ಠಿಸಿದ. ಭಗವಂತಗಿರಿಯು ಮಂಜಯ್ಯ ದಿವಾನ ಕೊಟ್ಟ ಹಣದಲ್ಲಿ ಮಹಾದ್ವಾರ ಕಟ್ಟಿಸಿ ಉಳಿದ ದ್ರವ್ಯದಲ್ಲಿ ತಾವರೆಕೆರೆಯ ಗ್ರಾಮದ ಧರ್ಮಾದೀಕ್ಷಿತ ಭಟಮಾನ್ಯ ಇನಾಮು ಭೂಮಿಯನ್ನು ೪೦೦ ರೂಗಳಿಗೆ ಅಡಗಾರಿ ಕ್ರಯಕ್ಕೆ (ಶುದ್ಧಕ್ರಯ/ಅಸಲು ಬೆಲೆ/ರಿಯಾಯಿತಿ ದರ!) ಪಡೆದ. ಅದನ್ನು ದೇಗುಲಗಳ ಸೇವಾರ್ಥವಾಗಿ ಅಜ್ಞಾನುಸಾರ ಮೂಲಕರ್ತರಿಗೆ ಸಮರ್ಪಿಸಿದ, ಎಂದೆಲ್ಲ ಉಕ್ತವಾಗಿದೆ. ಇಲ್ಲಿ 'ಗುರುಬೃಂದಾವನ', 'ಮೂಲಕರ್ತರು' ಎಂಬ ಶಬ್ದಗಳು ಕರ್ತೃಗದ್ದುಗೆ ಎಂಬ ಅರ್ಥವನ್ನು ಸೂಚಿಸುತ್ತವೆ ಎನ್ನಬೇಕು. ಅಂತಾಗಿ ಈ ದೇಗುಲಕ್ಕೆ ಮಠವೊಂದು ಸಹಯೋಗವಾಗಿತ್ತೆಂದು ಹೇಳಬೇಕಾಗುತ್ತದೆ. ಭಗವಂತಗಿರಿಯ ಸ್ವಹಸ್ತವು ಶಾಸನದಲ್ಲಿರುವ ಕಾರಣ ಅವನೊಬ್ಬ ಅಧಿಕಾರಿಯಾಗಿ ಕೊಡಗಿನ ಪರವಾಗಿ ಕೆಲಸ ನಿರ್ವಹಿಸುತ್ತಿದ್ದ ಬಗ್ಗೆ ತಿಳಿಯುತ್ತದೆ. ಮಂಜಯ್ಯ ಎಂಬ ದಿವಾನನೊಬ್ಬನು ಕೊಡಗಿನ ಹೊರನಾಡ ವ್ಯವಹಾರ ನೋಡಿ ಕೊಳ್ಳುತ್ತಿದ್ದ ಎಂಬುದೂ ಶಾಸನ ಪಾಠದಿಂದ ಧ್ವನಿತವಾಗುತ್ತದೆ. ಆ ಕಾಲದ ಆರ್ಥಿಕ ಹಾಗು ಸಾಂಸ್ಕೃತಿಕ ವ್ಯವಹಾರಗಳನ್ನು ಈ ಶಾಸನ ತಿಳಿಸುತ್ತದೆ. ಇಲ್ಲಿದ್ದ ಮಠವು ಗೋಸಾವಿ ಮಠವಾಗಿದ್ದಿರಬಹುದು.

*ರಾಜ : ದೊಡ್ಡ ವೀರರಾಜೇಂದ್ರ ಒಡೆಯ; ಕಾಲ : ಕ್ರಿ.ಶ. ೧೭೭೬, ಸ್ಥಳ : ಬೆಂಗಳೂರು ಚಿಕ್ಕ ಪೇಟೆ ಮುಂಜಿಸೋಮೇಶ್ವರ ಗುಡಿ*

**ಶಾಸನದ ಪಾಠ**

*ಸ್ವಸ್ತಿ ಶ್ರೀ ರಾಕ್ಷಸ ಸಂವತ್ಸರದ ಆಷಾಢ ಶು॥ ೫ ॥ರಲ್ಲು ಸ್ಥಾಪಿಸಿದ ದಾನಶಾಸನಾ।*

*☆ ಸೂರ್ಯ ನಕ್ಷತ್ರ ತ್ರಿಶೂಲ ○ ಚಂದ್ರ*

೧ *ಶ್ರೀ ಕೊಡಗು ದೇಶದ ಮಹಾ*

೨ ರಾಜರು ಅವರ ದಿವಾನಜೀರು ಬೆಂಗಳೂರು ಚಿಕ್ಕಪೇಟೇ
೩ ಲಿ ಅವರ ಸ್ವಗೃಹ ವಠಾರದಲ್ಲಿ ಅವರ ಮನೆದೇವರಾದ
೪ ಶ್ರೀ ಮಂಚೇಶ್ವರ ಶ್ರೀ ಮುಂಜೇ ಸೋಮೇಶ್ವರವೆಂಬ ಯೆರಡು ದೇ
೫ ವಾಲಯಗಳನ್ನು ಸ್ವಂತಕ್ಕಾಗಿ ಕಟ್ಟಿಶಿ ನಳಸಂವತ್ಸರ ಚೈತ್ರ
೬ ದಲ್ಲಿ ಅವರ ಗುರು ಭ್ರುಂದಾವನ ವೇದಕೀಲಿ ಪ್ರತಿಷ್ಠಿಶಿ
೭ ಸನ್ನಿಧೀಲಿ ಶಾಸನಾ ಸ್ಥಾಪಿಸಿರುವುದು ವೇದ್ಯಾವಿರುತ್ತಕುಶಲ
೮ ಅವರು ನನ್ನಲ್ಲಿ ಕೊಟ್ಟ ದ್ರವ್ಯದಲ್ಲಿ ಮಹಾದ್ವಾರಾ ಕಟ್ಟಿಶಿ
೯ ಉಳಿದ ದ್ರವ್ಯದಲ್ಲಿ ತಾವರಕೆರೆ ಧರ್ಮಾದೀಕ್ಷಿತರ ಯರ
೧೦ ಡು ಖಂಡ್ಗ ಭಟಮಾನ್ಯ ಇನಾಮಿಯನ್ನು ನಾನ್ನೂರು
೧೧ ಪಾಯಿಗೆ ಆಡಗಾರಿಕ್ರಯ ಹೊಂದಿಸಿದನ್ನು ಮೇ
೧೨ ಲಿನ ಯರಡೂ ದೇವಸ್ಥಾನಗಳ ಶೇವೆಗಾಗಿ ಅಪ್ಪಣೆ ಮೇರೆ
೧೩ ಮೂಲಕರ್ತರಿಗೆ ಸಮರ್ಪಿಶಿದ ದಾನಶಾಸನಾ ಸಹಾ।
೧೪ ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನ
೧೫ ಮಿತಿ।
೧೬ ಕೊಡಗು ಸಂಸ್ಥಾನದ ಮಹಾರಾಜರವರ ಶೇವಕ
೧೭ ಭಗವಂತಗಿರಿ।

ಆ) ಗುಡಿಯ ಇನ್ನೊಂದು ಶಾಸನದರೀತ್ಯಾ ಕ್ರಿ.ಶ. ೧೭೯೭ರಲ್ಲಿ (ನಳಸಂವತ್ಸರ ಚೈತ್ರ ಶು. ೧) ಸ್ವನಿವೇಶನದಲ್ಲಿ ಗುರು ಬೃಂದಾವನ ವೇದಿಕೆ (ಗುರುಗದ್ದುಗೆ!) ಯ ಆಲಯದಲ್ಲಿ ಹೊರಗೆ ಮಂಜಿ ಸೋಮೇಶ್ವರ, ಪಶ್ಚಿಮ ಬದಿಗೆ ಮಂಚೇಶ್ವರ ಮಹಾಲಿಂಗಗಳನ್ನು (ಮನೆದೇವರುಗಳಾದ ಕಾರಣ) ೮.೪.೧೭೯೭ರಂದು ಮಂಜಯ್ಯ ದಿವಾನನು ಪ್ರತಿಷ್ಠಾಪಿಸಿದ. ಇವನು ಕೊಡಗು ಸಂಸ್ಥಾನದ ಮಹಾರಾಜ ದೊಡ್ಡ ವೀರರಾಜೇಂದ್ರ ಒಡೆಯನ ದಿವಾನನಾಗಿದ್ದ. ರಾಜನ ಪರವಾಗಿ ಈ ಉಭಯ ದೇಗುಲಗಳಿಗೆ ಧೂಪ ದೀಪಾರಾಧನೆಯ ಉದ್ದೇಶಕ್ಕಾಗಿ ಕೊಡಗಿನ ಅಪ್ಪಂಗಳ ಜಹಗೀರಿನ ನೂರು ಭಟ್ಟಿ (ಸು. ೩ ಎಕರೆ) ಭೂಮಿಯನ್ನು ದಾನ ನೀಡಿ ಸನ್ನದು ಮಾಡಿ ದಿವಾನನ ಸ್ವಹಸ್ತ ಹಾಕಿಸಿ ಕೊಟ್ಟಿದ್ದಾನೆ. ಇದಲ್ಲದೆ ಈ ದಾನಕ್ಕೆ ದೊಡ್ಡ ವೀರರಾಜೇಂದ್ರ ಒಡೆಯ, ಮಹಾರಾಣಿ ಮಹದೇವರಾಜಮ್ಮಾಜಿ ಹಾಗು ಮಂಜಯ್ಯ ದಿವಾನನ ಹೆಸರುಗಳು ಸ್ವಹಸ್ತವೆಂಬಂತೆ ನಮೂದು ಆಗಿವೆ. ಶಾಸನದ ಮೇಲೆ ಶಿವಲಿಂಗ ಕೆಳಗೆ ಸೂರ್ಯ, ಚಂದ್ರರ ಸಾಕ್ಷಿ ಎಂದು ಉಬ್ಬು ಶಿಲ್ಪಗಳಿವೆ. ೧೭ಸಾಲುಗಳ ದಾನ ಶಾಸನವಿದಾಗಿದೆ.

*ರಾಜ : ದೊಡ್ಡ ವೀರರಾಜೇಂದ್ರ ಒಡೆಯ ; ಕಾಲ : ಕ್ರಿ.ಶ. ೧೭೯೭, ಸ್ಥಳ : ಬೆಂಗಳೂರು ಚಿಕ್ಕಪೇಟೆ ಮುಂಜಿ ಸೋಮೇಶ್ವರ ಗುಡಿ*

**೨ನೇ ಶಾಸನದ ಪಾಠ**

ಶ್ರೀಮಂಚ್‌ಶ್‌ವರ ಸುಪ್ರತಿಷ್‌ಠಾ ಶಾಸನಾ।
ಶಿವಲಿಂಗ ಚಿತ್ರ
೧ ಸ್‌ವಸ್‌ತಿ ಶ್ರೀ ನಳಸ್‌ಂವತ್‌ಸರದ ಚೈತ್ರ ಶು ೧।
೨ ಲ್ಲು ಶ್ರೀ। ಕೊಡಗು ಸಂಸ್‌ಥಾನದ ಮಹಾರಾಜರು।
೩ ದಿವಾನ್‌ಜೀರು ಬೆಂಗಳೂರು ಚಿಕ್ಕಪೇಟೇಲಿ ಸ್‌ವನಿವೇಶ
೪ ನದಲ್ಲಿ ಸ್‌ಥಾಪಿಶಿರುವ ಗುರು ಭ್ರುಂದಾವನ ವೇದ
೫ ಕೀಲಿ ಹೊರ್‌ವಾಲಯದಲ್ಲಿ ಶ್ರೀ ಮಂಜಿ ಸೋಮೇಶ್‌ವರ
೬ ಪಶ್‌ಚಿಮ ಕಡೇಲಿ ಶ್ರೀ ಮಂಚೇಶ್‌ವರ ಮಂದೇವ
೭ ರ ಮಹಲಿಂಗಗಳನ್ನು ಈ ಶುಭದಿನ ಸುಪ್ರಶಿಷ್
೮ ಠಂ ಗೈದು ಈ ಉಭಯ ದೇವಾಲಯಗಳ ಧೂಪ ದೀಪಾ
೯ ರಾಧನೋದ್ದಿಶ್‌ಯ ಅಪ್ಪಂಗಳ ಜಹಗೀರಿನ ನೂರು
೧೦ ಭಟ್ಟಿ ಭೂ ಸದ್ವಾನ ಮಾಡಿ ಸನ್ನದು ದಿವಾನ್‌ಜೀರ ಸ್‌ವ
೧೧ ಹಸ್ತ ವಪ್ಪಿಶಿ ವಂಶ ಪಾರಂಪರ್ಯವಾಗಿ ಸಾರೋದ್ಧಾ
೧೨ ರಾ ನಡಿಸತಕ್ಕದ್ದೆಂದು ಅರ್‌ಪಿಶದ ಸುಪ್ರತಿಷ್ಠಾ
೧೩ ದಾನ ಶಾಸನಾ ಓಂ।
೧೪ ಕೊಡಗು ಸಂಸ್ಥಾನದ ಮಹಾರಾಜಾ
೧೫ ವೀರರಾಜೇಂದ್ರ ವಡಯರ್ ಬಹದ್ದೂರ್।
೧೬ ಮಹಾರಾಣಿ ಮಹದೇವ ರಾಜಮ್ಮಾಜಿ ರಾಣಿ
೧೭ ಯವರು - ಮಂಜಯ್‌ಯಾ ದಿವಾನ್ ಜೀರು
☆ ಸೂರ್ಯ ○ ಚಂದ್ರ ಸಾಕ್ಷಿಗಳು

ಈ ಎರಡು ಶಾಸನದಿಂದ ಕೊಡಗಿನ ದಿವಾನರುಗಳಲ್ಲಿ ಮಂಜಯ್ಯ ದಿವಾನ ಎಂಬುವನೂ ಇದ್ದ ಎಂದು ಮೊದಲ ಬಾರಿಗೆ ತಿಳಿದು ಬರುತ್ತದೆ. ಕೊಡಗಿನ ಹೊರನಾಡ ಸಚಿವನಾಗಿದ್ದ ಎಂಬ ಸೂಚನೆ ದೊರಕುತ್ತದೆ. ಆಗ ಬೆಂಗಳೂರಿನಲ್ಲಿದ್ದುದು ಆಂಗ್ಲರ ಆಡಳಿತವಾದ್ದರಿಂದ, ಆಂಗ್ಲರು ಹಾಗು ಒಡೆಯನ ಸಂಬಂಧ ಸ್ನೇಹಪರವಾಗಿದ್ದುದರಿಂದ ಈ ಹೊರನಾಡ ಸಚಿವತನಕ್ಕೆ ಅವಕಾಶವಿತ್ತೆಂದು ತೋರುತ್ತದೆ. ಕೊಡಗಿನ ಜಮೀನು ಕೂಡ ಬೆಂಗಳೂರಿನ ಈ ದೇಗುಲ ದೇವತೆಗಳಿಗೆ ಒದಗಿರುವ ಕಾರಣ ಸಾಂಸ್ಕೃತಿಕ ಸಂಬಂಧವು ರಾಜಕೀಯ ಸಂಬಂಧದ ಜೊತೆಗೆ ಇತ್ತು ಎಂದಾಗುತ್ತದೆ. ಬಹುಶಃ ಇಂತಹ ಸಾಂಸ್ಕೃತಿಕ ಸಂಬಂಧದ ಹಿನ್ನೆಲೆಯಲ್ಲಿ ಜನ ಸಂಪರ್ಕವು ಮುಂದುವರಿದು ಚಿಕ್ಕ ವೀರರಾಜೇಂದ್ರ ಒಡೆಯನು ಬೆಂಗಳೂರಿನ ಕೋಟೆಯನ್ನು ಕ್ರಿ.ಶ. ೧೮೩೨ರ ಸುಮಾರಿನಲ್ಲಿ ಹಿಡಿದುಕೊಳ್ಳಲು ಆತ್ಮೀಯ ಅಬ್ಬಾಸ್ ಸಾಹೇಬನನ್ನು ಕಳುಹಿಸಿ, ಬೆಂಗಳೂರಿನ ಕೆಲವು ಜನ ಮುಖ್ಯರೊಡನೆಯೂ ವ್ಯವಹಾರ ಮಾಡಿದ ಸಂಗತಿ ಮ್ಯಾಕ್‌ನಾಟ ಪತ್ರಗಳಿಂದ ತಿಳಿದು ಬರುವಲ್ಲಿ[*೨] ಕೊಡಗು ಸಂಬಂಧ ಹಾಗೂ ಬೆಂಗಳೂರಿನ ಈ ದೇಗುಲಗಳ ಸಂಬಂಧ ಮಂಜಯ್ಯ ದಿವಾನ, ಭಗವಂತಗಿರಿಯ ಪಾತ್ರ, ದೊಡ್ಡವೀರರಾಜೇಂದ್ರ ಒಡೆಯನ ಕಾಲದಿಂದ ಬೆಳೆದ ಇಲ್ಲಿನ ಜನಸಂಪರ್ಕದ ಪ್ರಭಾವ ತಿಳಿಯುವಂತಾಗುತ್ತದೆ.

ಒಡೆಯನು ಮಹದೇವಮ್ಮಾಜಿಯನ್ನು ಮದುವೆ ಆದ ಸುಮಾರು ೨ ತಿಂಗಳ ನಂತರ ಈ ದೇವ ಪ್ರತಿಷ್ಠೆ ಭೂದಾನಗಳು ನಡೆದಿವೆ. ಮಂಜಯ್ಯ ದಿವಾನನು ಮಹದೇವಮ್ಮಾಜಿಯ ಕೌಟುಂಬಿಕ ಸಂಬಂಧಿಯೂ ಆಗಿದ್ದಿರಬಹುದು. ಮಹದೇವ ರಾಣಿಗೆ

ಮಹದೇವ ರಾಜಮ್ಮಾಜಿ ಎಂಬ ಹೆಸರಿದ ಬಗ್ಗೆ ಈ ಶಾಸನದಿಂದ ತಿಳಿಯುತ್ತದೆ. ಭಗವಂತಗಿರಿಯು 'ಕೊಡಗಿನ ಸಂಸ್ಥಾನದ ಮಹಾರಾಜರ ಸೇವಕ' ಎಂದಿರುವುದರಿಂದ ಬೆಂಗಳೂರಿನಲ್ಲಿ ದಿವಾನ ಮಂಜಯ್ಯನ (ಅಪ್ಪ) ಸಹಾಯಕನನ್ನಾಗಿ ಅರಸ ಅವನನ್ನು ನಿಲ್ಲಿಸಿರುವಂತಿದೆ. ಕೊಡಗು ಆಂಗ್ಲರಿಗೆ ವಶವಾದ ನಂತರ ಈ ಭಗವಂತಗಿರಿಯು ಗೋಸಾವಿಯಾಗಿ ಇದೇ 'ಅರಳೆ ಪೇಟೆ'ಯ. ಮಂಜಿ ಸೋಮೇಶ್ವರ ಸ್ವಾಮಿಯ ಸೇವೆಯಲ್ಲಿ ಕ್ರಿ.ಶ. ೧೮೫೬ರಲ್ಲಿಯೂ ಇದ್ದ ಬಗ್ಗೆ ಬೆಂಗಳೂರು ಶಾಸನವೊಂದರಿಂದ *೧೪ ತಿಳಿಯುತ್ತದೆ. ಅದರ ರೀತ್ಯಾ ರಾಕ್ಷಸನಾಮ ಸಂವತ್ಸರ ಆಷಾಡ ಶು. ೫ ಗುರುವಾರದಂದು ತಾವರೆಕರೆಯ ಧರ್ಮಾದೀಕ್ಷಿತರ ಮೊಮ್ಮಗ ಶಾಂಭಟ್ಟನಿಂದ ಭಟ್ಟಮಾನ್ಯಹೊಲವನ್ನು ೪೦೦ರೂಗಳಿಗೆ ಶುದ್ಧಕ್ರಯಕ್ಕೆ ತೆಗೆದುಕೊಂಡು ಸೋಮೇಶ್ವರ ದೇವರ ಸೇವೆ ಹಾಗು ಅರ್ಚಕ ಪರಿವಾರ ನಿರ್ವಹಣೆಗೆ ಭಗವಂತಗಿರಿ ಗೋಸಾವಿ ನೀಡಿ ಮರಾಠಿ ಅಕ್ಷರಗಳಲ್ಲಿ ಸಹಿಹಾಕಿದ್ದಾನೆ. ವೀರರಾಜೇಂದ್ರ ಒಡೆಯನ ಕಾಲದಲ್ಲಿ ರಾಜಸೇವೆಯಲ್ಲಿದ್ದ ಇವನು ನಂತರ ವಿರಕ್ತನಾಗಿರುವಂತಿದೆ. ಗೋಸಾವಿಗಳ ಜನ್ಮಭಾಷೆ ಹಿಂದೂಸ್ತಾನಿ. ಗಿರಿ, ಪುರಿ, ಭಾರತಿ ಇತ್ಯಾದಿ ಹತ್ತು ಭೇದಗಳುಳ್ಳ ವರ್ಗವಾಗಿ ಶಿವನ ಭಕ್ತರು *೧೫ ಇವರು. ಸೋಮವಾರ ಪೇಟೆಯಲ್ಲಿ ಇವನ ಗೋಸಾವಿ ಗುರುನೆಲೆ ಇದ್ದು, ಭಗವಂತ ಗಿರಿ ವಿಜಯಗಿರಿ ಗೋಸಾವಿಯ ಶಿಷ್ಯನೆಂದು ತಿಳಿದುಬರುತ್ತದೆ. ಎಂದರೆ ಕೊಡಗಿನಲ್ಲಿ, ಶಿವಾರಾಧಕ ಗೋಸಾವಿ ಪರಂಪರೆ ಹಾಗು ಮಠವಿದ್ದ ಸೂಚನೆ ಇವನಿಂದಾಗಿ ತಿಳಿಯುತ್ತದೆ.

ಸದ್ಯದ ಎರಡೂ ಶಾಸನಗಳೂ, ಕಳೆದ ವರ್ಷಗಳಲ್ಲಿ ಜೀರ್ಣೋದ್ಧಾರ ವಾದ (೪.೧೨.೧೯೯೨) ದೇಗುಲದ ನವರಂಗ ಭಾಗದಲ್ಲಿ ಭಿತ್ತಿ ಬಳಿ ನೆಡಲ್ಪಟ್ಟು ಕೆಳಗಿನ ಸಾಲುಗಳು ಭೂಮಿಯೊಳಗಿಳಿದಿವೆ. ಮಂಜೇಶ್ವರ ಹಾಗು ಗುರು ಬೃಂದಾವನ ವೇದಿಕೆ ಕಾಣ ಬರುವುದಿಲ್ಲ. ನಿಮಿಷಾಂಬಾಗುಡಿ (ಮೊದಲು ಶಾಸನ ಹೊರಗೆ ಇದ್ದ ಜಾಗ), ಗಣಪತಿ, ಪಾರ್ವತಿ ದೇವನೆಲೆಗಳು ಅಲ್ಲಿ ಪ್ರತಿಷ್ಠಾಪಿತವಾಗಿರುವುದು ಈಗ ಕಾಣಬರುತ್ತದೆ.

ಈ ಶಾಸನದಲ್ಲಿ ರೀತ್ಯಾ ದೊಡ್ಡವೀರರಾಜೇಂದ್ರ ಒಡೆಯ ಮಹದೇವ ರಾಜಮ್ಮಾಜಿ ರಾಣಿ ಸಹಿತವಾಗಿ ದೇವದಾನವಿತ್ತಿದ್ದು, ನಳಸಂವತ್ಸರದ ಚೈತ್ರ ಶು. ೧ ಅಂದರೆ ೮.೪.೧೭೯೭ ರಲ್ಲಿ. ರಾಜೇಂದ್ರನಾಮೆಯ ರೀತ್ಯಾ ಒಡೆಯನಿಗೆ ನಾಲ್ನಾಡು ಅರಮನೆಯಲ್ಲಿ ರಾಜಪಟ್ಟಾಭಿಷೇಕ ನಡೆದದ್ದು ನಳಸಂವತ್ಸರದ ಮಾಘ ಶು. ೧ ಭಾನುವಾರ ಬೆಳಗಾದ ಗಳಿಗೆ ಐದಕ್ಕೆ (ಪು. ೧೦೯) ಅಂದರೆ ೨೯.೧.೧೭೯೭ಕ್ಕೆ ಅದು ಹೊಂದಿಕೆ ಆಗುತ್ತದೆ. ಅಂದು ಭಗಂಡೇಶ್ವರ ದೇಗುಲದಲ್ಲಿ ವಿಗ್ರಹ ಪ್ರತಿಷ್ಠೆಯು ರಾಜ್ಯ ಪಟ್ಟಾಭಿಷೇಕದ ಸಮಯದಲ್ಲಿ ನಡೆದಿದೆ. ಅದೇ ರಾತ್ರಿ ಗಳಿಗೆ ೧೯ ವೃಶ್ಚಿಕ ಲಗ್ನದಲ್ಲಿ ಒಡೆಯ ಮಹದೇವರಾಣಿಯನ್ನು ಮದುವೆ ಆದ; ಹಾಗೆಯೆ ೮.೪.೧೭೯೭ರಲ್ಲಿ ಮಾದಾಪುರ ಮಠಕ್ಕೆ, ಬೆಂಗಳೂರಿನ ಮಂಜೇಶ್ವರ, ಮುಂಜಿ ಸೋಮೇಶ್ವರ ದೇವರುಗಳಿಗೆ ಭೂದಾನಗಳನ್ನು ನೀಡಿರುವಲ್ಲಿ ವಿಶೇಷವಿರುವಂತಿದೆ. ಪಟ್ಟಾಭಿಷೇಕದ ದಿನ ಭಂಗಡೇಶ್ವರನಲ್ಲಿ ವಿಗ್ರಹ ಪ್ರತಿಷ್ಠೆ ಶುಭ ಸಂದರ್ಭವಾಯಿತು. ಸದ್ಯದ ದೇವದಾನ, ಮಠದ ದಾನದ ದಿನಾಂಕಗಳನ್ನು ಶುಭ ಸಂದರ್ಭದ ಹಿನ್ನೆಲೆಯಲ್ಲಿ ಊಹಿಸುವುದಾದರೆ ಬಹುಶಃ ಅದು ಮಹದೇವ ರಾಜಮ್ಮಾಜಿಯ ಹುಟ್ಟು ದಿನಾಂಕವಿರಬಹುದೆನಿಸುತ್ತದೆ. (ಒಡೆಯ ಹುಟ್ಟಿದ್ದು ಜೂನ್ ೧೭೬೩ರ ಸಮಯದಲ್ಲಿ)

**ರಾಮನಗರದ ( ಬೆಂ. ಜಿಲ್ಲೆ ) ಆತ್ಮಬಲಿ ಶಾಸನ *೧೬**

ಎರಡೂವರೆ ಅಡಿ ಎತ್ತರ, ಒಂದೂವರೆ ಅಡಿ ಅಗಲದ ಒರಟು ಕೆಂಪು ಗ್ರಾನೈಟ್ ಶಿಲೆಯ ಮೇಲೆ ವ್ಯಕ್ತಿ ರೇಖಾಶಿಲ್ಪದ ಸುತ್ತ ಎರ್ರಾಬಿರ್ರಿ ಅಕ್ಷರಗಳಲ್ಲಿ ಬರೆದಿರುವ ೧೭ (ಕ್ರಿ.ಶ. ಸು. ೧೬೭೭!) ನೇ ಶತಮಾನಕ್ಕೆ ಸೇರಿದ ಶಾಸನವಿದಾಗಿದೆ. ಅಕ್ಷರಗಳು ೧ ಅಂ. ಅಗಲ, ೨ ಅಂಗುಲ ಉದ್ದವಾಗಿವೆ. ೧೧ ಸಾಲಿನ ಈ ಶಾಸನದಲ್ಲಿ ಸ್ವಸ್ತಿವಾಚನ, ತೇದಿ ಇತ್ಯಾದಿ ವಿವರಗಳೇನೂ ಕಾಣವು. ಶಾಸನದಲ್ಲಿ ಎದ್ದು ಕಾಣುವಂತೆ ವ್ಯಕ್ತಿಯ ರೇಖಾ ಶಿಲ್ಪವಿದೆ. ವ್ಯಕ್ತಿಯ ಹಣೆಯ ಮೇಲೆ ವೃತ್ತ ಚಿಹ್ನೆ ಇದ್ದು, ದುಂಡು ಮೊಗದಲ್ಲಿ ಮೇಲಕ್ಕೆ ಬಾಗಿದ ಹುರಿ ಮೀಸೆ ಇದೆ. ವ್ಯಕ್ತಿಯ ಕೊರಳಲ್ಲಿ ಹಾರ, ಬಹುಶಃ ಎದೆಯ ಮೇಲೆ ತ್ರಿಶೂಲದಿಂದೆಳೆದ ವಿಭೂತಿ ( !) ಯ ಮೂರುಗೀರುಗಳು ಕಾಣಬರುತ್ತವೆ. ಅಗಲಿಸಿದ ತೋಳುಗಳ ಮಣಿಕಟ್ಟುಗಳಿಗೆ ಇಬ್ಬದಿಯಲ್ಲಿ ಬಂಧಿಸಿದ ತ್ರಿಶೂಲಗಳಿವೆ. ಹಾಗೆಯೆ ಅಗಲಿಸಿದ ಕಾಲುಗಳ ಮಣಿಕಟ್ಟುಗಳೂ ತ್ರಿಶೂಲಗಳಿಂದ ಬಂಧಿತವಾಗಿವೆ. ವ್ಯಕ್ತಿಯ ಇಡೀ ದೇಹ ನೀಳ ತ್ರಿಶೂಲದ ಮೇಲಿರುವಂತೆ ಬಿಡಿಸಿದೆ. ವ್ಯಕ್ತಿಯ ಬೋಳುತಲೆಯ ಮೇಲೆ ಗಂಟಿನಂತಹ ರಚನೆ ಇದ್ದು ಅದಕ್ಕೆ ತಾಗಿದಂತೆ ಬಲಕ್ಕೆ ವಾಲಿದ ನೀಳ ಕೊಡಂಗಿ ಕುಲಾವಿಯಂತಹ ರಚನೆ ಇದೆ. ಇದು ವಿಜಯನಗರ ಕಾಲದ ವೇಷಭೂಷಣದಲ್ಲಿ ಕಾಣಬರುವ ಕುಲಾವಿಯನ್ನು ಹೋಲುವಂತಿದೆ ಎಂದರೂ ಬಾಗಿದ ಕುಲಾವಿಯ ಮೇಲಿನ ಅಡ್ಡಗೆರೆಗಳು, ಹಿಡಿಪುವಿನಂತೆ ಕಾಣುವ ಬುಡದ ರಚನೆ, ಶಿರದ ಮೇಲೆ ನಿಮಿರಿಸಿದ ಕತ್ತಿ ಎಂಬ ಭಾವವನ್ನು ತರಬಹುದು. ವ್ಯಕ್ತಿಯ ಶಿಶ್ನವೂ ಸೂಚಿತವಾಗಿದೆ. ವ್ಯಕ್ತಿಯ ಬಲಮೇಲ್ಬದಿಗೆ ೫ ಸಾಲುಗಳ ಎಡ ಪಾರ್ಶ್ವದಲ್ಲಿ ೫ ಸಾಲುಗಳ ಎಡ ಮುಂದುವರಿಕೆ ಸೇರಿದಂತೆ ೧೧ ಸಾಲುಗಳ ಅಕ್ಷರಗಳು ಕಾಣಬರುತ್ತವೆ. ಈ ಹಿನ್ನೆಲೆಯಲ್ಲಿ ಇದೊಂದು ಧಾರ್ಮಿಕ ವೇಳವಾಳಿ - ಆತ್ಮಬಲಿ ಶಾಸನಮೆದು ಪರಿಭಾವಿಸಲೂ ಅವಕಾಶವಾಗುತ್ತದೆ.

'ಮಂತ್ರ ಮಹೋದಧಿ'ಯ ರೀತ್ಯ ವಾಮಾಚಾರ

ವಿಧಾನದಲ್ಲಿ ತ್ರಿಶೂಲದ ಸಂಕೇತವಿಟ್ಟು ವ್ಯಕ್ತಿಯನ್ನು ಬಲಿಯಾಗಿಸುವ ಪದ್ಧತಿ ಇದೆ; 'ಅಭಿಚಾರಿಕ ಬಿಂಬ' ಎಂಬ ತಾಂತ್ರಿಕ ಸಾಹಿತ್ಯದ ಸಾಹಿತ್ಯದಲ್ಲಿ, ಈ ಬಗೆಯ ಶಿಲ್ಪ ಸಂಕೇತಗಳ ಮೂಲಕ ರಾಜರುಗಳು ಯಂತ್ರ ಪೂಜೆಮಾಡಿ ಶತ್ರುಗಳ ರಾಜ್ಯದ ಗಡಿಯಲ್ಲಿಡುತ್ತಿದ್ದ ವಿಷಯವಿದೆ. ಕೇರಳದಲ್ಲಿ 'ಇರವ' ಎಂಬ ಜನಾಂಗದ ಜನರು ಆನೆ ಸೊಂಡಲಿನಂತಹ ತೋಳುಗ್ಯೆ ಇರುವ ತ್ರಿಶೂಲಾಂಕಿತ 'ಜ್ವರ ಪುರುಷ' ಯಂತ್ರವನ್ನೂ ಗ್ರಹಚೇಷ್ಟೆಯ ನಿವಾರಣೆಗೆ ಬಳಸುತ್ತಿದ್ದುದುಂಟು. ಶಕ್ತೇಶ್ವರಿ ಯಂತ್ರ, ಕಾಟೇರಿ ಯಂತ್ರಗಳಲ್ಲಿ ತ್ರಿಶೂಲ ತುದಿ ಸಂಕೇತಗಳಿದ್ದು 'ಓಂ ಶಿವ' ಎಂಬ ಶಬ್ದ ಸಹಿತವಾಗಿ ಗುರುತಿಸಿರುವುದಿದೆ. ಅವುಗಳಲ್ಲಿ ನಗ್ನ ವ್ಯಕ್ತಿಯ ಚಿತ್ರವಿರುತ್ತದೆ ಇದು ಗ್ರಹಬಾಧೆ ನಿವಾರಣೆಗೆ ಬಳಕೆ ಎನ್ನುವುದುಂಟು. ಮಲಯಾಳದಲ್ಲಿ, 'ಘಂಟಾಕರ್ಣ'ನಿಗೆ ಶಂಕುವಿನಾಕಾರದ ಶಿರೋವೇಷವಿದ್ದು, ಕೈಯಲ್ಲಿ ತ್ರಿಶೂಲ ಹಿಡಿದಿರುವ ಭಂಗಿಯನ್ನು ತೋರಿಸಿ, ವಿಷ್ಣುಮೂರ್ತಿ ದೈವ ಎಂಬ ತೆರೆ (ವೇಷ) ಕಟ್ಟಿರುವುದಿದೆ; ಭಟ್ಟಿ ವಿಕ್ರಮಾದಿತ್ಯನ ಕತೆಗಳ ರೀತ್ಯಾ, ಶೂಲಗಳನ್ನು ನೇರ ಜಲಾಧಿವಾಸದಲ್ಲಿರಿಸಿ ಬೇತಾಳ ಸಾಕ್ಷಿಯಾಗಿ ವ್ಯಕ್ತಿಯು ಅವುಗಳ ಮೇಲೆ ಬೀಳುತ್ತಾನೆ. ಆಗ ದೇವಿಯ ರಕ್ಷೆಯು ಅವನಿಗೆ ಒದಗಿ ಅವನಿಚ್ಛೆಗಳು ನೆರವೇರುತ್ತವಂತೆ; ಕೋಲಾರ ಜಿಲ್ಲೆ ಎಲ್ದೂರಿನ ಶಾಸನ ಶಿಲ್ಪವೊಂದರಲ್ಲಿ ಅಗಲ ಮುಖವಿರುವ ತ್ರಿಶೂಲದ ಮೇಲೆ ಕುಳಿತು ಒತ್ತಿಕೊಳ್ಳುತ್ತ ದೇಹವನ್ನೂ ಇಬ್ಭಾಗ ಮಾಡಿಕೊಂಡು ಧಾರ್ಮಿಕ ಆತ್ಮಬಲಿ ನೀಡಿರುವುದಿದೆ; ನೆಲಮಂಗಲ ತಾ. ನಿಜಗಲ್‌ದುರ್ಗ(ಸಿದ್ದರ ಬೆಟ್ಟ)ದಲ್ಲಿ ಭೂತೋಚ್ಚಾಟನೆ, ಪಾಪ ಪರಿಹಾರಕ್ಕೆ ಬಂಡೆಯ ಮೇಲೆ ಚೌಕಾಕಾರದ ಅಂಚುಗಳಲ್ಲಿ ತ್ರಿಶೂಲಾಕೃತಿಗಳನ್ನು ಬಿಡಿಸಿ ಚೌಕಟ್ಟಿನೊಳಗೆ ವ್ಯಕ್ತಿಗಳು ಮಲಗಿರುವಂತೆ ಬಿಡಿಸಿರುವ ರೇಖಾ ಶಿಲ್ಪಗಳು ಕಾಣಬರುತ್ತವೆ; ನಯಸೇನನ 'ಧರ್ಮಾಮೃತ'ದಲ್ಲಿ ಕಳ್ಳನೊಬ್ಬ ತ್ರಿಶೂಲದ ಮೇಲೆ (ಪಾಪಪರಿಹಾರಾರ್ಥ!) ಧುಮುಕಿ ಪ್ರಾಣ ಕಳೆದು ಕೊಂಡ ಸಂಗತಿಯನ್ನು ಹೇಳಲಾಗಿದೆ.

ಈ ವಿಷಯಗಳ ಹಿನ್ನೆಲೆಯಲ್ಲಿ ಪ್ರಸ್ತುತ ವ್ಯಕ್ತಿ ರೇಖಾಶಿಲ್ಪ ಶಾಸನವು ಮೇಲೆ ಹೇಳಿರುವುದೆಲ್ಲದರ ಸಂಯುಕ್ತ ಸಂಕೇತವೇ! ಎನಿಸುತ್ತದೆ. ಶಿಲ್ಪದಲ್ಲಿ ವ್ಯಕ್ತಿಯ ಮುಖದಲ್ಲಿ ಕ್ರೌರ್ಯಭಾವವಿಲ್ಲದೆ, ಸ್ಥೈರ್ಯ, ದೃಢತೆ, ಸಹನ ಶಕ್ತಿ ತೋರುವಂತಿದೆ. ದಷ್ಟಪುಷ್ಟ ದೇಹವಿದೆ; ನಗ್ನತ್ವ ಇದೆ. ಶಕ್ತಿ ದೇವತೆಯನ್ನು ತನ್ನ ಮೋಕ್ಷಕ್ಕಾಗಿ ಒಲಿಸಿಕೊಳ್ಳುವ ವಾಮಾಚಾರದ ಕಾಳಾಮುಖ ಶೈವನೊಬ್ಬನ ಆತ್ಮ ಬಲಿಶಾಸನವಿದಾಗಿದೆ ಎನ್ನಬೇಕು. ಶಾಸನದ ಕಾಲವನ್ನು ಪರಿಗಣಿಸುವಲ್ಲಿ ಕ್ರಿ.ಶ. ೧೮೦೦ ಕ್ಲೋಸ್‌ಪೇಟೆ (ರಾಮನಗರಂ) ಆರಂಭವಾಗುವ ಮುನ್ನ ಇಲ್ಲಿ ಊರಿರಲಿಲ್ಲ ಎನ್ನುವ ಅಭಿಪ್ರಾಯಕ್ಕೆ ವಿರುದ್ಧವಾಗಿ ಊರಿನ ಅಸ್ತಿತ್ವವನ್ನು ಈ ಶಾಸನದ ಅಸ್ತಿತ್ವ ತೋರಿಸುತ್ತದೆ.



ಶಾಸನದ ಪಾಠ

| | | | |
|---|---|---|---|
| ೧ | ಯಿರೂ | | ಪುಯನೇ[ಕ] ರ್‍ಪು |
| ೨ | ಕಲ್ಲುಚಿ | ವ್ಯಕ್ತಿ | ಲೆ ಕ ರ್ಕ ಲ್ಲು ಹ |
| ೩ | ಳೇಸ | | ಗೇಳು |
| ೪ | ತೇಜ ಬಿ | ಚಿತ್ರ | ನ್ನಪ |
| ೫ | ಉ | | ದೇವಿಗೆ |
| ೬ | | ಇದೆ | ಸಕ್ಷಿ |
| ೭ | . | | ಧಕೆ |
| ೮ | | | ಬ್ಯೇತಳ |
| ೯ | | | ಸಕವ |
| ೧೦ | [೧೫೯.] | | [ರ] ಉಲೂ [ನ] |
| ೧೧ | | | ಸಿಗೆ |

ವಿರೂಪಯ್ಯ ಎಂಬುವವನು ಪೂಜಿಸುವ ಕಲ್ಲು (ಏರುಗಲ್ಲು ಅಥವ ಕರುಗಲ್ಲು) ಹಾಳೇಸಲಿಂಗವಾಗಿತ್ತು. ಆ ಲಿಂಗಸಾಕ್ಷಿಯಾಗಿ ಏಳು ಜೋತಿಗಳನ್ನು ದೇವಿಗೆ (ಶಕ್ತಿ ದೇವತೆಗೆ) ಅರ್ಪಿಸಿ, ಮೋಕ್ಷ ಮಾರ್ಗಕ್ಕಾಗಿ ಈ ಮೊದಲೆ ತ್ರಿಶೂಲದಿಂದ ಎದೆಯ ಮೇಲೆ ಮೂರು ಎಳೆ ಗುರುತು ಮಾಡಿಕೊಂಡು (ಲೂನಸಿಗೆ!) ಧಾರ್ಮಿಕ ವೇಳೆವಾಳಿ ಆಗಿದ್ದ ಈ ಶಿವಭಕ್ತನು ತ್ರಿಶೂಲದ ಮೇಲೆ ಬಿದ್ದು ಆತ್ಮಬಲಿಯಾದ ಸಂಗತಿಯನ್ನು ಸೂಚಿಸುವಂತಿದೆ ಶಾಸನ.

ಬೇತಾಳನನ್ನು ಸಾಕ್ಷಿಯಾಗಿ ಹೇಳಿರುವುದು, ನಗ್ನ ಶಿಲ್ಪ ಸೂಚನೆ ಇರುವುದು, ಬಹುಶಃ ವಾಮಾಚಾರ ನಿಷ್ಠನಾದ ಕಾಳಾಮುಖಶೈವ ಭಕ್ತನೊಬ್ಬನ ಧಾರ್ಮಿಕ ಆತ್ಮಬಲಿ ಇದೆನಿಸುತ್ತದೆ. ಬಹುಶಃ ಧಾರ್ಮಿಕ ವೇಳೆವಾಳಿತನವನ್ನು ಸೂಚಿಸಬಹುದಾದ ಈ ಶಾಸನ ಶಿಲ್ಪ ವಿಶಿಷ್ಟವಾಗಿದ್ದು ಸುಮಾರು ಕ್ರಿ.ಶ. ೧೬೭೦ ದಶಕದ್ದಾಗಿದೆ ಎನ್ನಬೇಕು. ಕಾಳಾಮುಖರು ಆ ಹೊತ್ತಿಗೆ ಇಲ್ಲವೆಂದೆನಿಸಿದ್ದರೂ ಅವರ ಭಕ್ತ ಪರಂಪರೆ ಉಳಿದಿದ್ದಿರಬೇಕೆನಿಸುತ್ತದೆ. ಜೊತೆಗೆ ಈ ಪ್ರದೇಶವು ಕಾಳಾಮುಖ ಶೈವಮುನಿಗಳ ನೆಲೆಯಾಗಿತ್ತು ಎಂಬುದು ಈ ನೆರೆಯ ಶಾಸನಗಳಿಂದ ವಿದಿತವಾಗಿದೆ. ಅರ್ಚಕರ ಹಳ್ಳಿ, ಸೋಮೇದೇವರ ಬೆಟ್ಟ, ಲಕ್ಷ್ಮೀಪುರ, ಚೆನ್ನಮಾನಹಳ್ಳಿ ಇತ್ಯಾದಿ ಗ್ರಾಮಗಳ ಶಾಸನ ಶಿಲ್ಪಗಳು, ವೀರಗಲ್ಲುಗಳು, ಈ ಬಗ್ಗೆ ಸಾಕ್ಷಿ ತೋರುತ್ತವೆ. ಹಾಗು ಅಚ್ಚಲು ದುರ್ಗದ 'ಜಡೆಮುನಿ' ಜನಪದ ಆಚಾರಗಳೂ ಇದಕ್ಕೆ ಸಾಕ್ಷಿಯಂತೆ ತೋರುತ್ತವೆ.

ಇನ್ನು ಇತ್ತೀಚೆಗೆ ರಾಮನಗರದ ಅಗ್ರಹಾರದ ಮಾರುತಿ ಗುಡಿಯಲ್ಲಿ ಕಂಡುಹಿಡಿದ ಅಪ್ರಕಟಿತ ಸ್ತಂಭ ಶಾಸನಗಳಲ್ಲಿ *[೧೭] ಲಿಂಗರಸರ ಮಗ ಕುಮಾರರಸರು ನೀಡಿದ ದಾನ, ಹಾಗು ದೇಗುಲ ದಾನದ ವಿಷಯವಿದೆ. ಲಿಪಿಯ ಆಧಾರದ ಮೇಲೆ ಇವನ್ನು ಹೊಯ್ಸಳರ ಹಾಗು ವಿಜಯನಗರ ಕಾಲಕ್ಕೆ ಸೇರಿಸಬಹುದಾಗಿದೆ. ೮ನೇ ಶತಮಾನದ ಐಜೂರು ರಣಪಾರನ ಶಾಸನ *[೧೮] ಲಭ್ಯವಾಗಿ ಅರ್ಕಾವತಿಯ ಪಶ್ಚಿಮದಂಡೆಯಲ್ಲಿ ಗ್ರಾಮವಿದ್ದುದು ತಿಳಿದುಬಂದಂತೆ, ಮೇಲಿನ ಎರಡೂ ಶಾಸನಗಳಿಂದ ಹೊಯ್ಸಳ, ವಿಜಯ ನಗರಕಾಲದಲ್ಲಿ ಅರ್ಕಾವತಿಯ ಪೂರ್ವದಂಡೆಯಲ್ಲಿ ಕ್ಲೋಸ್‌ಪೇಟೆ ಆರಂಭವಾಗುವ ಮುನ್ನವೂ ಗ್ರಾಮಗಳ ಅಸ್ತಿತ್ವ ಇತ್ತು ಎಂಬುದು ವಿದಿತವಾಗುತ್ತದೆ.

### ಕೊಡಗು ಜಿಲ್ಲೆಯ ಶಾಸನಗಳು

#### ಅ. ಹೈಸೊಡ್ಲೂರಿನ ಶಾಸನ *[೨೦]

ವೀರರಾಜೇಂದ್ರಪೇಟೆ ತಾಲೂಕು ಹುದಿಕೇರಿ ಬಳಿಯ ಹೈಸೊಡ್ಲೂರಿನಲ್ಲಿ ದೇವರಕೆರೆಯ ಬಳಿ ಅಪ್ರಕಟಿತ ತುಂಡು ಶಿಲಾಶಾಸನವೊಂದು ಲಭ್ಯವಾಯಿತು. ಶಾಸನಗಲ್ಲಿನ ಸು. ೧½ ಅಡಿ ಎತ್ತರ ೨ ಅಡಿ ಅಗಲದ ತುಂಡುಭಾಗದಲ್ಲಿ ೬ ಸಾಲುಗಳು ಇದ್ದು ಅರ್ಧಭಾಗ ಮಾತ್ರ ಕಾಣುತ್ತದೆ. ೬-೮ನೇ ಶತಮಾನದ ಲಿಪಿಗಳ ಹೋಲಿಕೆಯುಳ್ಳ ಈ ಶಾಸನಾಕ್ಷರಗಳು ಕಪ್ಪೆ ಅರಭಟ್ಟ, ಗಂಗರ ಮಾರಸಿಂಹ ಹಾಗು ಐಜೂರು ರಣಪಾರ - ಮಗಚ್ಚವರ್ ಶಾಸನಗಳ ಲಿಪಿಯನ್ನು ಹೋಲುತ್ತವೆ. ಪೂರ್ಣವಾಗಿ ಶಾಸನದ ಸಾಲುಗಳು ಲಭ್ಯವಾಗದ ಕಾರಣ ಅರ್ಥವನ್ನು ನಿಖರವಾಗಿ ಹೇಳಲು ಸಾಧ್ಯವಾಗಿಲ್ಲ. ಕೆಲವೆಡೆ ಅಕ್ಷರಗಳು ಅರ್ಧರ್ಧಉಳಿದುಕೊಂಡಿವೆ. ಶಾಸನದ ಸಾರಾಂಶವನ್ನು ಹೇಳುವುದಾರೆ, ಬಸದಿಯೊಂದಕ್ಕೆ ದಾನ ನೀಡಿದ ಸಂಗತಿ ಇಲ್ಲಿದೆ ಎನ್ನಬಹುದು. ಇರುವ ಅಕ್ಷರಗಳು ಬಹಳ ಸುಂದರವಾಗಿವೆ. ೯ನೇ ಶತಮಾನದ ಲಿಪಿಯಲ್ಲಿ ಬರದದ್ದೆನ್ನಲಾದ ಕ್ರಿ.ಶ. ೪೬೬ರ ಮಡಿಕೇರಿ ಶಾಸನ ಕ್ರಿ.ಶ. ೮೮೮ರ ಬಿಳಿಯೂರಿನ ಗಂಗರ ಇಮ್ಮಡಿ ರಾಚಮಲ್ಲನ ಶಾಸಸನ, ಕ್ರಿ.ಶ. ೯೭೮ರ ಪೆಗ್ಗೂರಿನ ರಕ್ಕಸಗಂಗನ ಶಾಸನಗಳಿಗೆ *[೧೯] ಹೋಲಿಸಿದರೆ ಸದ್ಯದ ಶಾಸನ ಅವಕ್ಕೆ ಮುನ್ನಿನ ಲಿಪಿಯದೆನಿಸುತ್ತದೆ. ಹಾಗು ದ. ಕೊಡಗಿನ ಈ ಭಾಗವು ಗಂಗ ಶ್ರೀ ಪುರುಷನ ಆಳಿಕೆಗೆ ಒಳಪಟ್ಟಿತ್ತೆಂಬ ಸೂಚನೆ ಒದಗುತ್ತದೆ. ಇದಕ್ಕೆ ಪೋಷಕವಾಗಿ ಪೆಗ್ಗೂರಿನ ಶಾಸನದಲ್ಲಿ 'ಶ್ರೀಪುರುಷ ಮಹಾರಾಜ ದತ್ತಿಯು ನಾಪೊರ್ಬ್ಬನಟುದೊಂ ಸಾಸಿರ್ಬ್ಬರ್ಬ್ರಾಹ್ಮಣರುಂ.......।' ಎಂದಿರುವ ಕಾರಣ ಶ್ರೀ ಪುರುಷನ ಇಲ್ಲಿನ ಅಧಿರಾಜತ್ವ ತಿಳಿಯುತ್ತದೆ.



**ಶಾಸನಪಾಠ**

೧ . [ಸ್ತಿ] ಅಚ.......

೨ [ಪು] ದು ಕ್ಕೇರಿಯ......

೩ ಕ್ಕಿಋಪ್ಪಿಲುಕಿಋ......

೪ ಧರ್ಮ್ಮ ಅಟಿಕೊಲ್ಬಗ್ಣ.....

೫ ದೆಪ್ಪೋಗಿ ಪುಲ್ಲಂನ್ಕಂನೆಂಲಿ.....

೬ ಣಾ ಸಿಟಿಂಪ್ಪದಜರುಂ ಅಟಿತ್ತ[ಡೆ]

ಈ ಶಾಸನದಲ್ಲಿ 'ಪುದುಕ್ಕೇರಿ' ಯ (ಇಂದಿನ ಹುದಿಕೇರಿ) ಹೆಸರು ಬಂದಿರುವಕಾರಣ ಆ ಸ್ಥಳನಾಮದ ಇತಿಹಾಸ ೧೪ ಶತಮಾನದಷ್ಟು ಹಳಮೆಯನ್ನು ಪಡೆದ ಪ್ರಾಚೀನ ಗ್ರಾಮ ವೆನಿಸುತ್ತದೆ. 'ಧರ್ಮ'ವನ್ನು 'ಅಳಹಿದಡೆ' ಎಂಬ ಶಬ್ದಗಳಿರುವಲ್ಲಿ ಈ ಹುದಿಕೇರಿ ಗ್ರಾಮದ ನೆರೆಯೆಲ್ಲ ಅಂದಿಗೆ ಜೈನ ಪ್ರಭಾವವಿದ್ದು ಜೈನಗುರುಗಳಿದ್ದ ಹಿನ್ನೆಲೆಯಲ್ಲಿ ಬಸದಿಯೊಂದಕ್ಕೆ ಕೊಟ್ಟದಾನದ

ಸೂಚನೆ ಆಗುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಕೊಡಗಿನ ಮೊದಲ ಕನ್ನಡ ಶಾಸನವಾಗಿ ಇದು ಮಹತ್ವ ಪಡೆಯುತ್ತದೆ.

### ಆ. ಅಬ್ಬಿಮಠಮಲ್ಲಿಕಾರ್ಜುನ ಗುಡಿ ಬಳಿಯ ಶಾಸನ *೨೧

ಸೋಮವಾರ ಪೇಟೆ ತಾಲೂಕು ಅಬ್ಬಿಮಠದ ಈಶಾನ್ಯಕ್ಕೆ ಸುಮಾರು ೨೦೦ ಅಡಿ ದೂರದಲ್ಲಿರುವ ಅಬ್ಬಿಯ ಬದಿಗೆ ಗುಡಿ ಇದ್ದು ಅದರ ಎಡಮುಂಬದಿ ತಳದಲ್ಲಿ ತೀರ ಒರಟುಗಲ್ಲಿನ ಮೇಲೆ ಈ ಶಾಸನವಿದೆ. ಸುಮಾರು ೪ ಅಡಿ ಎತ್ತರ ೩ ಅಡಿ ಅಗಲದ ಈ ಶಾಸನದಲ್ಲಿ ೧೯ ಸಾಲುಗಳಿವೆ; ೨½ ಸಾಲಿನಷ್ಟು ಸಂಸ್ಕೃತ ಶ್ಲೋಕವಿದೆ. ಶಾಸನವು ಶಕ ೧೩೮೬ ತಾರಣ ಸಂವತ್ಸರ (ಕ್ರಿ.ಶ. ೧೪೬೪) ದ್ದಾಗಿ ೧೫ನೇ ಶತಮಾನದ ಚಂಗಾಳ್ವರ ಪ್ರಭಾವದ ಸಂಕೇತವಾಗಿ ನಿಂತಿದೆ. ಕೊಂಗಲಿನಾಡ ಮಲ್ಲಪ್ಪನಾಯಕನು ಯಡವನಾಡಿನ ಈ ದೇಗುಲದ ದೇವರ ಅಂಗರಂಗಭೋಗಕ್ಕೆ ಸಿದ್ಧಾಯ ಹಾಗು ಗ್ರಾಮದಾನ ಮಾಡಿದ ಸಂಗತಿ ಹಾಗು ಮಠದ ಸಂಬಂಧದ ವೊಂಮುಕಸಾಗುವಿನ ಬಗ್ಗೆಯೂ ಹೇಳುತ್ತದೆ. 'ಜಯಮಲ್ಲಿಕಾರ್ಜುನ' ಎಂದು ದೇವರ ಹೆಸರಾಗಿರಲು, ಚಂಗಾಳ್ವರ ಕುಲದೇವರು ಮಲ್ಲಿಕಾರ್ಜುನನ ಸಂಕೇತವಾಗಿ ಈ ಗುಡಿ ಇಲ್ಲಿ ನಿಂತಿದೆ.



**ಶಾಸನದ ಪಾಠ**

೧ ಸ್ವಸ್ತಿ ಶ್ರೀ ಜಯಾಭ್ಯುದಯ ಸಕವರುಷ
೨ ಸಾವಿರದ ಮುಂನೂರ ಎಂಬತ್ತ ಆಱ
೩ ನೆಯ ತಾರಣ ಸಂವತ್ಸರದ ಕಾರ್ತಿಕ ಬಹುಳ೧
೪ ರವಿವಾರದಲು ಯಡವನಾಡಲಿ ಜಯಮಲ್ಲಿಕಾ
೫ ರ್ಜುನ ದೇವರಿಗೆ ಕೊಂಗಲಿನಾಡ ಮಲ್ಲಪ್ಪನಾಯಕರ
೬ ತಮ್ಮ ಸಿದ್ದಾದಾಯವಾಗಿ ವೊಂಮ್ಮುಕಸಾಗುವಂ
೭ ತಾಗಿ ಆ ದೇವರ ಅಂಗರಂಗಭೋಗಕ್ಕೆ ಬಣ
೮ ಕರನ ಸಂಮುಕದಿ ಧಾರೆಯನೆರೆದು ಕೊಟ್ಟೆವಾಗಿ
೯ ಆ ಹಳಿಯಲಿ ಬರಮಯರ ಸುತಂಗೆ ಜಯವಾಗೆ
೧೦ ಜಯದಿ ಕರದವನಱಸಿಯ.ಗ್ಗಿಸ. ಸಲಳಿ...
೧೧ ಆ ದೇವರಿಗೆ ಆಚಂದ್ರಾದಿತ್ಯರುಳ್ಳನ ಪರಿಯಂತರ
೧೨ ಶ್ರೀದಯಭುಜಪಾದ ದೇವರಿಗೆ ಕೊಟ್ಟ ಗ್ರಾಮವನಾಟಿ
೧೩ ಆ ಮುಚಾನ್ನರುಗಂ ನಾಡವರು ವಾಯ ಅರಿವಿಂಗೆ
೧೪ ಸಾಸನವಾಗಿ ಕೊಟ್ಟರು ಆರೊಬರಳಪಿದರ
೧೫ ಮೃತಂಗೆ ಸಾಗು. ಯರಿಗೆ. ದಯ.. ಗ.. ರಿಗೊ
೧೬ ಯರಶ. ವಲಿಕ್ಕಲಿ.. ಯವಕರದ.. ಜಪಕ್ಕೆ. ಆಕ
೧೭ ರು... ವಲಿಗೆ.. ಸ್ವದತ್ತಂ ಪರದತ್ತಂ ವಾಯೋ ಹ
೧೮ ರೇತಿ ವಸುಂಧರಾ ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾ
೧೯ ಯಮ್ ಜಾಯತೇತಿ ಕ್ರಿಮಿ

ಕೊಡಗಿನ ಶಾಸನಗಳ ಪೈಕಿ, ನಿಡುತ ಶಾಸನದಲ್ಲಿ (ಕ್ರಿ.ಶ. ೧೨೭೮) ಗಡಿನಾಡು ಮಲಪನಹಳ್ಳಿಯ ಮಲ್ಲಿಕಾರ್ಜುನ ದೇವರು, ಎಂದು ಉಕ್ತವಿದೆ. ಕ್ರಿ.ಶ. ೧೯೬೮ರ ಮುಳ್ಳೂರು ಶಾಸನವು ಕೊಂಗಳಲಿ ನಾಡನ್ನು ಹೆಸರಿಸುತ್ತದೆ. ಜನಪದದಲ್ಲಿ ಕೊಂಗಳ್ಳಿ ಮಲೆನಾಡು ಎಂದೂ ಬಳಕೆ ಇದೆ. ಬಹುಶಃ ಕ್ರಿ.ಶ. ೧೧೭೫ರ ವರೆಗೂ ಕೊಡಗಿನ ಭಾಗಗಳನ್ನು ಆಳಿದ ಕೊಂಗಾಳ್ವರ ಕಾರಣ ಕೊಂಗಳಲಿ = ಕೊಂಗಲಿ ನಾಡಿನ ಹೆಸರು ರೂಪುಗೊಂಡಿರಬೇಕು. ಕೊಂಗಾಳ್ವರ ನಂತರ ಚಂಗಾಳ್ವರ ಆಳ್ವಿಕೆ ಕೊಡಗಿನಲ್ಲಿ ಮುಂದುವರಿದು ಅವರ ವಂಶಿಕರ (ಕುಟುಂಬದ)ಲ್ಲೊಬ್ಬನಾಗಿ ಕೊಂಗಳಲಿನಾಡ ಕ್ರಿ.ಶ. ೧೪೬೪ರ ಈ ಮಲ್ಲಪ್ಪನಾಯಕ ಇದ್ದಿರಬೇಕು. ಸಿರಹದ ಕ್ರಿ.ಶ. ೧೧೭೫ರ ಶಾಸನವು ಅಲ್ಲಿನ ಮಲ್ಲಿಕಾರ್ಜುನ ದೇವರ ಗುಡಿಯ ಅಸ್ತಿತ್ವವನ್ನು ತಿಳಿಸುತ್ತದೆ. ಚಂಗಾಳ್ವರ ಮೊದಲ ಕಾಲದ ಆಳ್ವಿಕೆಯ ಸಮಯದಲ್ಲಿ ಗುಡಿಯು ಪ್ರಸಿದ್ಧಿಗೆ ಇದ್ದಿರಬೇಕು. ಅವರ ಕುಲದೇವರು ಬೆಟ್ಟದಪುರದ ಅನ್ನದಾನಿ ಮಲ್ಲಿಕಾರ್ಜುನನಾದ ಕಾರಣ. ಕೊಡಗಿನಲ್ಲೂ ಆ ದೇವರ ಗುಡಿಗಳು ಹೆಚ್ಚೆಚ್ಚು ಪ್ರತಿಷ್ಠಾಪನೆ ಆದದ್ದು ಸಹಜವೆ. ಮಲಪನಹಳ್ಳಿ ಮಲ್ಲಿಕಾರ್ಜುನ ದೇವರು ಬಹುಶಃ ಅಬ್ಬಿ ಮಲ್ಲಿಕಾರ್ಜುನ ಗುಡಿಯದೇವರಿಗೆ ಅನ್ವಯವೆಂದು ತೋರುತ್ತದೆ. 'ಮೊದಲ ಚಂಗಾಳ್ವರ' ಕಾಲಕ್ಕೆ ಅಸ್ತಿತ್ವಕ್ಕೆ ಬಂದಿರಬಹುದಾದ ಈ ಗುಡಿಯು 'ನಂತರದ ಚಂಗಾಳ್ವರ' ಕಾಲದಲ್ಲಿ ಬಹುಶಃ ರಂಗರಾಜ,

ಪಿರ್ಯಣ್ಣನ ಕಾಲದಲ್ಲಿ ಮತ್ತೆ ಪ್ರವರ್ಧಮಾನಕ್ಕೆ ಬಂದಿರುವಂತಿದೆ. ಆ ಸಮಯದಲ್ಲಿ ಈ ಗುಡಿಯು ಇಂದಿನ ಅಬ್ಬಿಯ ಮೇಲಿನ ಗುಡಿಯ ನೆಲೆಗೆ ಎದುರಿಗಿನ ಬಯಲಿನಲ್ಲಿ (ತೇರುಗದ್ದೆ ಬಯಲು) ಇತ್ತೆಂದು ತೋರುತ್ತದೆ. ಜನಪದದಲ್ಲಿ ಈ ಅಬ್ಬಿ ಮಲ್ಲಿಕಾರ್ಜುನನನ್ನು 'ಬಯಲ ಮಲ್ಲಿಕಾರ್ಜುನ' ಎಂದೆ ಕರೆವ ರೂಢಿ ಇದೆ. ಜೊತೆಗೆ ಶಿಥಿಲವಾದ ದೇಗುಲದ ಧ್ವಜ ಸ್ತಂಭವು ಈ ತೇರುಗದ್ದೆ ಬಯಲಿನಲ್ಲಿ ಇಂದಿಗೂ ಬಿದ್ದಿದೆ. ವೀರಭದ್ರ, ನಂದಿ ಶಿಲ್ಪವೂ ಅದರ ಮೇಲೆ ಬಿಡಾವಣೆಗೊಂಡಿದೆ ತೇರು ಹಾಗು 'ಪರ'ವು ದೇವರಿಗೆ ಇಲ್ಲಿಯೆ ನಡೆಯುತ್ತಿತ್ತು.

ಬರಮಯ್ಯನ ಮಗನು ಈ ದೇವತೆಗೆ ಹರಸಿಕೊಂಡು ಕೊಂಗಲನಾಡ ಮಲ್ಲಪನಾಯಕನಿಗೆ ಜಯ ತಂದ ಕಾರಣ, ಈ ದೇವರಿಗೆ ಜಯಮಲ್ಲಿಕಾರ್ಜುನ ಎಂಬ ಹೆಸರು ನಿಂತಿರಬೇಕು. ೧೧ನೆಯ ಶತಮಾನದಲ್ಲಿ ಹಾನಗಲ್ಲು ಕದಂಬರ ಕಾಲಕ್ಕೆ ಅಬ್ಬಿಮಠದ, ಅಸ್ತಿತ್ವದ ಸೂಚನೆ ಯಡೂರು ಶಾಸನದಲ್ಲಿ (ಕ್ರಿ.ಶ. ೧೦೯೫) ಕಾಣಬರುವುದರಿಂದ, ಆ ಹೊತ್ತಿಗೆ ಈ ಗುಡಿಯು ರೂಪುಗೊಂಡಿರಬೇಕು. ಕ್ರಿ.ಶ. ೧೬೬೪ರ ಸಮಯದಲ್ಲಿ ಗುಡಿಯನ್ನು ರಕ್ಷಿತ ನೆಲೆಗೆ ಅಂದರೆ ಅಬ್ಬಿಯ ಮೇಲೆ ಕಟ್ಟಿಸಿ, ಕೋಟೆಯನ್ನು ಮಲ್ಲಪ್ಪನಾಯಕನು ಕಟ್ಟಿಸಿರುವಂತಿದೆ. ಜನಪದದಲ್ಲಿ ಕೋಟೆಯ ಅವಶೇಷವಿರುವ ಇಲ್ಲಿನ ನೆಲೆಯನ್ನು 'ಮಲ್ಲಪ್ಪನ ಉಡುವೆ' ಎನ್ನುತ್ತಾರೆ. ಅಬ್ಬಿಯ ಮೇಲಿನ ಗುಡಿಯಲ್ಲಿ ಸಪ್ತ ಮಾತೃಕೆಯರು, ದೀಪದ ಮಲ್ಲಿ ಹಾಗು ಪ್ರಾಚೀನ ಶಿವಲಿಂಗ ಶಿಲ್ಪಗಳಿವೆ. ಸುಗ್ಗಿ ಕಟ್ಟೆ ಹಬ್ಬ ಹಾಗು ಮರೀಯ ಸಂಬಂಧಗಳು ಈ ದೇಗುಲಕ್ಕೆ ಇರುವುದು ಯಡೂರು ಶಾಸನ ಹಾಗು ಸದ್ಯದ ಶಾಸನದಿಂದ ಸೂಚಿತವಾಗುತ್ತದೆ.

'ಪೊಂಮ್ಮುಕಸಾಗು' ಎಂಬ ಶಬ್ದವು ಗುರುವರ್ಗಕ್ಕಿದ್ದ ಕಾಣಿಕೆ ಭೂಮಿ ಅಥವಾ ಧೂಪದ ಕಾಣಿಕೆಗೆ ಅನುವಾದ ಭೂ ಆದಾಯವೆಂದು ತೋರುತ್ತದೆ.*೨೨ ಇದು ಮಠದ ಗುರುವಿಗೆ ಅನ್ವಯ. ಚಂಗಾಳ್ವರು ವೀರಶೈವರಾಗಿ ಈ ಹೊತ್ತಿಗೆ ಇದ್ದುದರಿಂದ 'ವೀರಸಿಂಹಾಸನ ಮುರುಘ-ಬ್ರಹ್ಮ ತರ್ಕ' ಸಂಪ್ರದಾಯವನ್ನು ಅನುಸರಿಸಿದ ಮಠ ಅಬ್ಬಿಮಠವಾದ್ದರಿಂದ*೨೩ ಅವರ ಕಾಲಕ್ಕೆ ಈ ಗುಡಿಗೆ ಮಠವೂ ಹೊಂದಿಕೊಂಡಿದ್ದುದು ವಿದಿತವಾಗುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಈ ಶಾಸನದ ಮೇಲ್ತುದಿಯ ಅಕ್ಷರಗಳನ್ನು ಕಂಡು, ಲೇಖಕರ ಗಮನಕ್ಕೆ ತಂದವರು ಸಾಗರತಾಲೂಕು ವೀರಾಪುರ ಮಠದ ಶ್ರೀ ಮರುಳಸಿದ್ಧ ಪಂಡಿತಾರಾಧ್ಯ ಶಿವಾಚಾರ್ಯರು, ಬ್ಯಾಟರಾಯನಪುರದ ನಗರಸಭಾ ಆಯುಕ್ತ ಶ್ರೀ ಎಚ್.ಎಸ್. ಪ್ರಸನ್ನಕುಮಾರ್ (ಶಾಸನ ಇವರ ಸಂಬಂಧದ ಜಮೀನಲ್ಲಿರುವುದಾಗಿದೆ) ಹಾಗು ಅವರ ಆಪ್ತ ಸಹಾಯಕ ಶ್ರೀ ಬಿ.ಜಿ. ಸುಬ್ಬಣ್ಣ, ಪತ್ರಕರ್ತ ಶ್ರೀ ಬಿ.ವಿ. ಮಲ್ಲಿಕಾರ್ಜುನಯ್ಯ, ಬಿದಲೂರಿನ ಸರ್ವಶ್ರಿ ಪ್ರಕಾಶ್, ಉಮೇಶ್ ಮತ್ತು ಶರತ್ ಅವರುಗಳು ಶಾಸನದ ನಕಲು ತೆಗೆಯುವಲ್ಲಿ ನೆರವಾದರು. ಅವರಿಗೆಲ್ಲರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

*೨ i. ***ನೊಳಂಬ ಇತಿಹಾಸ ದರ್ಶನ,*** ಪ್ರ : ನೊಳಂಬ ಇತಿಹಾಸ ಪರಿಷತ್, ತಿಪಟೂರು, ಪು ೨೬, ೩೩

ii. M.S. Krishna Murthy : ***the Nolambas,*** Mysore, 1980

*೩ M.S. Krishna Murthy : op. Cit., P. 185

*೪ ಎ. ಕ. ೯ (ರೈಸ್ ಆವೃತ್ತಿ) ಬೆಂಗಳೂರು ೩೬, ಕ್ರಿ.ಶ. ೭೫೦

*೫. ಎಂ. ಜಿ. ನಾಗರಾಜ್ : ***ಶಾಸನ ಶಿಲ್ಪಗಳು,*** ಬೆಂಗಳೂರು, ೧೯೯೦, ಪು. ೩೭-೩೮

*೬. ನೊಳಂಬ ಇತಿಹಾಸ ದರ್ಶನ, ಅದೇ, ಪು. ೩೯

*೮. ಅದೇ.,

*೯. ಎ.ಕ. (ರೈಸ್ ಆವೃತ್ತಿ), ಕೋಲಾರ ಜಿಲ್ಲೆ, ಮುಳಬಾಗಿಲು ೩೮, ಕ್ರಿ.ಶ. ೯೬೮

*೧೦ಅ. ಎಂ. ಜಿ. ನಾಗರಾಜ್ : 'ಜಲದೇವಿ ಬಿದಲೂರು ಗಂಗವ್ವ', ಗ್ರಾಮಶುದ್ಧಿ (ಧಾರಾವಾಹಿ : ೧೭.೫. ೧೯೮೬, ೩೧.೫.೮೬; ೨೧.೬.೮೬ ೨೮.೬.೮೬)

*೧೦. ಅದೇ, ಮುಳಬಾಗಿಲು ೧೨೨, ಕೋಲಾರ ೧೯೮

*೧೧. ಈ ಶಾಸನದತ್ತ ನನ್ನ ಗಮನ ಸೆಳೆದವರು ಡಾ || ಸೂರ್ಯನಾಥ ಯು. ಕಾಮತ್ ಅವರು

*೧೨. H. P. Shashidara Murthy. 'Records relating to the last days of the coorg Royal family', ***ಕೊಡಗಿನ ಇತಿಹಾಸ ವಿಚಾರ ಸಂಕಿರಣ ಸ್ಮರಣ ಸಂಚಿಕೆ*** (ಸಂ) ಡಾ || ಸೂರ್ಯನಾಥ ಕಾಮತ್, ವೀರರಾಜೇಂದ್ರಪೇಟೆ, ೧೯೮೧, ಪು ೫೮-೫೯

*೧೩. ಎ.ಕ.೯ (ರೈಸ್ ಆವೃತ್ತಿ), ಬೆಂಗಳೂರು ೩, ಕ್ರಿ.ಶ. ೧೮೫೬

*೧೪. ಮುಂಬಯಿ ಗ್ಯಾಸೆಟಿಯರ್.(ಕರ್ನಾಟಕ ಭಾಗ) : ಕನ್ನಡ ಭಾಷಾಂತರ (ವೆಂಕಟರಂಗೋ ಕಟ್ಟಿ) ಮುಂಬಯಿ, ೧೮೯೩, ಮರುಪ್ರತಿ ೧೯೮೪, ನ್ಯೂಡೆಲ್ಲಿ, ಪು-೨೧೨

*೧೫. ಈ ಶಾಸನವನ್ನು ರಾಮನಗರದ ಎಂ. ಜಿ. ರಸ್ತೆಯಲ್ಲಿರುವ ಶ್ರೀ ಯುವರಾಜ ಮೊದಲಿ ಯಾರ್ ಮನೆಯ ಪಾಯವನ್ನು ಅಗೆದ ಸಂದರ್ಭದಲ್ಲಿ ೧೯೮೮ರಲ್ಲಿ ಕಂಡುಹಿಡಿಯಲಾಯಿತು.

*೧೬. ಲೂನವಕ್ಷ : ಹರಿತವಾದ ಆಯುಧದಿಂದರ ಎದೆಯ ಮೇಲೆ ಒಡೆಯನ ಸೇವೆಗೆ ಒಪ್ಪಿಸಿಕೊಂಡುದುದರ ಸೂಚನೆಯಾಗಿ ವೇಳೆವಾಳಿ, ಗರುಡರು, ಕತ್ತರಿಸಿದ ಗುರುತು ಹೊಂದಿರುತ್ತಿದ್ದವರಿಗೆ ಈ ಹೆಸರಿತ್ತು. ಹೀಗೆಯೆ ಲೂನ = ಕತ್ತರಿಸಿದ, ಅಸಿ = ಖಡ್ಗ ಎಂಬರ್ಥ ಗಮನಿಸಿದರೆ, ಸದ್ಯದ ಶಾಸನದ ಸಂದರ್ಭ ಅಸಿ = ತ್ರಿಶೂಲ ವೆಂಬ ಆಯುಧದಿಂದ ಮಾಡಿಕೊಂಡಿದ್ದ ಧಾರ್ಮಿಕ ವೇಳೆವಾಳಿತನದ ಗುರುತು ಆಗಿರಬಹುದೆನಿಸುತ್ತದೆ. ಹಾಗೆಯೂ 'ಲೂನಸಿಗೆ'ಯನ್ನು ಅರ್ಥೈಸಬಹುದಾಗಿದೆ.

*೧೭. ಈ ಶಾಸನವಿರುವ ವಿಷಯವನ್ನು ಗಮನಕ್ಕೆ ತಂದವರು ರಾಮನಗರದ ಜಿ. ಶೇಷಗಿರಿರಾವ್. ಹೆಚ್. ಕೆ. ರವೀಂದ್ರ ಶ್ರೀಮತಿ ಜಿ. ಶಾಂತಾಬಾಯಿ ಮತ್ತು ಜಯಚಂದ್ರ ಪ್ರಸಾದ್, ಮನಮೋಹನ್ ಪ್ರಸಾದ್ ಅವರುಗಳು. ಶಾಸನದ ನಕಲನ್ನು ತೆಗೆಯುವಲ್ಲಿ ನೆರವಾದವರು ಚನ್ನಪಟ್ಟಣದ ಸ್ನಾತಕೋತ್ತರ ಕೇಂದ್ರದ ಎಂ. ಎ (ಶಾಸನ) ತರಗತಿ ವಿದ್ಯಾರ್ಥಿಗಳಾದ ಸರ್ವಮಂಗಳ, ಸುಕನ್ಯ, ಶಾಂತಮ್ಮ, ಆಶಾ, ಎಸ್. ಜಿ. ಪದ್ಮ, ರವಿಕುಮಾರ್, ದಿನಕರ್ ಅವರುಗಳು.

*೧೮ ೧೯೭೭ರಲ್ಲಿ ಲೇಖಕರು ಕಂಡುಹಿಡಿದ ಈ ಶಾಸನದ ಪಾಠ ಹೀಗಿದೆ:

| | |
|---|---|
| ೧. ಸ್ವಸ್ತಿ ಶ್ರೀರ | ೬ ಚ್ಚವರ್ ಕೆ(ಕ)ಣ |
| ೨ ಣ ಪಾರರ್ಕ್ಕೆ | ೭ ಕುಪ್ಪೆ ಏಱಿ |
| ೩ ಟ್ಗಲಿನಾ | ೮ ನುಡ್ಡೆಱಿದು ವಿ |
| ೪ ಡರ್ಗ್ಗೆ | ೯ ಟ್ಟಾರ್ |
| ೫ ಲ್ಲೂರಾಮಗ | |

*೧೯. ಎ.ಕ. ೧ (ಹೊಸತು) ಕೊಡಗು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ, ೧೯೭೨, ಮಡಿಕೇರಿ ೧, ಬಿಳಿಯೂರು ೯೬, ಪೆಗ್ಗೂರು ೯೮

*೨೦. ಈ ಶಾಸನದ ನೆಲೆಯನ್ನು ನೋಡಲು ನೆರವಾದವರು ಕುಮಟೂರು ಗ್ರಾಮದ ಶ್ರೀ ಬಾಚರಣೆಯಂಡ ಕೆ. ಅಣ್ಣಯ್ಯ, ಹಾಗು ಬೆಂಗಳೂರಿನ ಡಾ॥ ಎಂ. ಜಿ. ಚಂದ್ರಕಾಂತ್

*೨೧. ಮರದ ಪೊಟರೆಯಲ್ಲಿ ಸಿಕ್ಕಿ ಹಾಕಿಕೊಂಡಿದ್ದ ಈ ಶಾಸನವನ್ನು ಬಿಡಿಸಿ ತೋರಿಸಿಕೊಟ್ಟವರು ಗುಡಿಯ ಅರ್ಚಕ ಶ್ರೀ ಬಿ.ಎಸ್. ಶಿವಣ್ಣ ಅವರು.

*೨೨. ಎ.ಕ. ೯ (ರೈಸ್ ಆವೃತ್ತಿ) ಬೆಂಗಳೂರು ೨೬, ಕ್ರಿ.ಶ. ೧೪೩೦ರ ಶಾಸನದಲ್ಲಿ 'ವೊಂಮುಕ ಸುಂಕ' ಎಂಬ ಶಬ್ದ ಪ್ರಯೋಗವಿದೆ - ನೋಡಿ ಎಂ. ಜಿ. ನಾಗರಾಜ್: ಪ್ರಾಚೀನತೆಯ ವಿಕಸನದಲ್ಲಿ ಬೆಳಕಾಗಿ ಬಂದ ಅರ್ವಾಚೀನ ಬೆಂಗಳೂರು ಜಿಲ್ಲೆ'; ಅಂಬಾರಿ (ಜಿಲ್ಲಾ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ) ಆನೇಕಲ್, ೧೯೮೧

*೨೩ ಎಂ. ಜಿ. ನಾಗರಾಜ್ : 'ಕೊಡಗಿನ ವೀರಶೈವ ಮಠಗಳ ಕೊಡುಗೆ', **ದಾಸೋಹಸಿರಿ**, ಶ್ರೀ ಸಿದ್ಧಗಂಗಾ ಕ್ಷೇತ್ರ, ೧೯೯೭, ಪು. ೫೫೮

ಡಾ ॥ ದೇವರಕೊಂಡಾರೆಡ್ಡಿ *

# ದಿದ್ದಿಗಿಯ ಕಾಮಕೋಟಿ ಭಳಾರಿಯ ಶಾಸನ

ದಿದ್ದಿಗಿಯು ಸಿಂಧನೂರು ತಾಲೂಕಿನ ಉತ್ತರಕ್ಕೆ ಮಸ್ಕಿ ಹಳ್ಳದ ದಂಡೆಯಲ್ಲಿದೆ. ಊರ ಹಿಂಬದಿಗೆ ಬಸಮ್ಮಾಗೊಲ್ಲರ್ ಅವರ ಹೊಲದಲ್ಲಿ ಈ ಶಾಸನವಿದೆ. ಈ ಶಾಸನವು ಕಪ್ಪು ಕಲ್ಲಿನದಾಗಿದ್ದು ಕಲ್ಲಿನ ಮುಂಭಾಗದಲ್ಲಿ ಶಾಸನಪಾಠವೂ, ಹಿಂಬದಿಯಲ್ಲಿ ವೀರಗಲ್ಲು ಶಿಲ್ಪವೂ ಇದೆ. ಆದರೆ ವೀರಗಲ್ಲ ಶಿಲ್ಪಕ್ಕಾಗಲೀ ಶಾಸನ ಪಾಠಕ್ಕಾಗಲೀ ಯಾವುದೇ ಸಂಬಂಧವಿಲ್ಲ. ಶಾಸನ ಕಲ್ಲನ್ನು ವೀರಗಲ್ಲಾಗಿ ಬಳಸಿರಬಹುದು ಅಥವಾ ವೀರಗಲ್ಲಿನ ಹಿಂಬದಿಯನ್ನು ಶಾಸನಪಾಠಕ್ಕೆ ಬಳಸಿರಬಹುದು. ಬಹುಶಃ ಶಾಸನ ಪಾಠದ ಹಿಂಬದಿಯನ್ನು ವೀರಗಲ್ಲ ಶಿಲ್ಪಕ್ಕೆ ಬಳಸಿರುತ್ತಾರೆಂದು ಹೇಳುವುದು ಸರಿಯೆಂದು ತೋರುತ್ತದೆ. ವೀರನ ಕಣಕಾಲು, ಎದೆಗೆ ಬಾಣಗಳು ನಾಟಿವೆ.

ಶಾಸನ ಪಾಠವು ೨೮ ಸಾಲುಗಳನ್ನು ಹೊಂದಿದ್ದು ಶಾಸನದ ಆರಂಭದ ಭಾಗವನ್ನು ಸ್ಪಷ್ಟವಾಗಿ ಕೆತ್ತಿರುವುದಿಲ್ಲ. ಹೀಗಾಗಿ ಆರಂಭದ ಕೆಲವು ಸಾಲುಗಳ ಪಾಠ ಪೂರ್ಣವಾಗಿ ದೊರೆತಿಲ್ಲ. ಶಾಸನೋಕ್ತ ಕಾಲವು ಶಕವರ್ಷ ೮೪೬ನೆಯ ಬಹುಧಾನ್ಯ ಸಂವತ್ಸರದ ಕಾರ್ತಿಕ ಸುದ್ಧ ದ್ವಾದಸಿ ಎಂದಿದ್ದು ಇದು ಕ್ರಿಸ್ತ ಪಂಚಾಂಗಕ್ಕೆ ಹೊಂದಿಕೆಯಾಗುತ್ತಿಲ್ಲ. ಅಲ್ಲದೆ ಈ ವರ್ಷದಲ್ಲಿ ಬಹುಧಾನ್ಯ ಬರದೆ ತಾರಣ ಸಂವತ್ಸರ ಬರುತ್ತದೆ. ಬಹುಧಾನ್ಯ ಸಂವತ್ಸರವು ಶಕ ೮೪೦ಕ್ಕೆ ಬರುತ್ತದೆ. ಈ ಕಾಲವು ಕ್ರಿ.ಶ. ೯೧೮ ಆಗುವುದರಿಂದ ಈ ಕಾಲಕ್ಕೆ ಮೇಲ್ಪಾಟಿ ರಾಷ್ಟ್ರಕೂಟರ ವಶದಲ್ಲಿರುವುದಿಲ್ಲ. ಶಕ ೯೦೦ಕ್ಕೆ ಮತ್ತೆ ಬಹುಧಾನ್ಯ ಸಂವತ್ಸರ ಬಂದಿದ್ದು ಇದು ಕ್ರಿ. ಶ. ೯೭೮ಕ್ಕೆ ಸರಿ ಹೊಂದಿದರೂ ಈ ಕಾಲಕ್ಕೆ ರಾಷ್ಟ್ರಕೂಟರು ಮೇಲ್ಪಾಟಿಯಲ್ಲಿರುವುದಿಲ್ಲ. ಹೀಗಾಗಿ ಈ ಶಾಸನೋಕ್ತ ಕಾಲವು ತೊಡಕನ್ನುಂಟುಮಾಡಿದೆ. ಅಂತು ಇದರ ಸುಮಾರು ಕಾಲವು ಕ್ರಿ. ಶ. ೧೨-೧೦-೯೨೪ ಆಗುತ್ತದೆ?

ಶಾಸನದ ಆರಂಭ ಭಾಗದಲ್ಲಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ರಾಜಪರಮೇಶ್ವರಂ ಪರಮ ಭಟ್ಟಾರಕಂ ಮುಂತಾದ ವಿಶೇಷಣಗಳಲ್ಲದೆ ರಟ್ಟರ ಮೇರು, ಅಟ್ಟರಜಾತಂ ಮದಗಜಮಲ್ಲ, ಎಲ್ಲರ ಮರುಳ, ಪರಾಂಗನಾ ಪುತ್ರ ಮೊದಲಾದ ವಿಶೇಷಣಗಳನ್ನುಳ್ಳ ಶ್ರೀಮದುತ್ತುಂಗ... ದೇವರ ಉಲ್ಲೇಖ ಬರುತ್ತದೆ. ಈ ಬಿರುದುಗಳಲ್ಲಿ ಬಹುತೇಕವು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನಿಗೆ ಸಲ್ಲುತ್ತವೆ. ಆದ್ದರಿಂದ ಈ ಶಾಸನವು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದ್ದಾಗಿದ್ದು ಸು. ೯೬೦ಕ್ಕೆ ಸೇರಿದುದಾಗಿರಬಹುದು.

ರಾಷ್ಟ್ರಕೂಟ ರಾಜನು ಮೇಲ್ಪಾಟಿಯ ನೆಲೆವೀಡಿನಲ್ಲಿದ್ದಾಗ ಮಹಾಗ್ರಹಾರ ದಿಙ್ದಿಗೆಯ ಕಾಳಭಟ್ಟ ಪ್ರಮುಖರಾದ ೧೦೮ ಜನ ಮಹಾಜನರು ದೆಙ್ದಿಗೆಯ ಮಹಾ ಅಗ್ರಹಾರವನ್ನು ದತ್ತಿಯಾಗಿ ಬಿಡುತ್ತಾರೆ. ಈ ದಾನವನ್ನು ಕಂಚಿಯ ಕಾಮಕೋಟಿ ಭಳಾರಿಯ ಮುಂದೆ ಕನ್ನೆಸಂಕ್ರಮಣದ ದಿನದಂದು ದಾನ ನೀಡಿದಂತೆ ಹೇಳಿದೆ.

ಕಂಚಿಯು ಪಲ್ಲವರ ರಾಜಧಾನಿಯಾಗಿ ಕ್ರಿ. ಶ. ೧೦ನೆಯ ಶತಮಾನದ ಅಂತ್ಯದವರೆಗೆ ರಾಜಕೀಯವಾಗಿ ಪ್ರಬಲವಾಗಿತ್ತು. ಸುಮಾರು ೯೦೦ ವರ್ಷಗಳ ಕಾಲ ರಾಜಧಾನಿಯಾಗಿ ಮೆರೆದ ಈ ಸ್ಥಳವು ರಾಜಕೀಯ ಹಾಗೂ ಧಾರ್ಮಿಕ ಕೇಂದ್ರವಲ್ಲದೆ ಅದಕ್ಕೆ ಪೂರಕವಾದ ದೇವಾಲಯಗಳ ಕೇಂದ್ರವೂ ಆಗಿತ್ತು. ಕಂಚಿಯನ್ನು ಶಾಸನಗಳಲ್ಲಿ ಕಾಂಚೀಪುರ, ಕಂಚಿ, ಕಚ್ಚಿ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇಲ್ಲಿನ ದೇವಾಲಯಗಳನ್ನು ಅನೇಕ ನಾಯನ್ಮಾರರು ಹಾಗೂ ಆಳ್ವಾರರು ಸ್ತುತಿಸಿರುತ್ತಾರೆ. ತಮಿಳು ನಾಡಿನ ಆಡಳಿತವನ್ನು ಅನೇಕ ಕೋಟ್ಟಗಳಾಗಿ ವಿಂಗಡಿಸಿದ್ದು ಅದರಲ್ಲಿ ಕಂಚಿಯ ಭಾಗವಾದ ಕಾಮಕೋಟ್ಟವೂ ಒಂದಾಗಿತ್ತು. ಈ ಕಾಮಕೋಟ್ಟದ ದೇವತೆಯೇ ದಿದ್ದಿಗಿ ಶಾಸನೋಕ್ತ 'ಕಾಮಕೋಟಿ ಭಳಾರಿ'. ಈ ಶಾಸನ ದೊರೆಯುವುದಕ್ಕೆ ಮೊದಲು ಕಾಮಕೋಟ್ಟದ

* ಪ್ರವಾಚಕ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪೆ, ಕಮಲಾಪುರ - ೫೮೩ ೨೨೧, ಬಳ್ಳಾರಿ ಜಿಲ್ಲೆ

ಪ್ರಾಚೀನ ಉಲ್ಲೇಖವು ತ್ರಿಪುರಾಂತಕದ ಶಾಸನದಲ್ಲಿ ಹಾಗೂ ಕರ್ನೂಲು ಜಿಲ್ಲೆಯ ಗೊಡ್ಲಗಡು ಶಾಸನದಲ್ಲಿ ಬಂದಿತ್ತು. ತ್ರಿಪುರಾಂತಕರ ಶಾಸನಕಾಲವು ಕ್ರಿ. ಶ. ೧೨೫೪ ಆಗಿದೆ. (ARSIE. No. 215 of 1905) ಹೀಗಾಗಿ ಕಾಮಕೋಟಿ ಎಂಬ ಹೆಸರಿನ ಪ್ರಾಚೀನತೆ ಕ್ರಿ.ಶ. ೧೨೫೪ಕ್ಕೆ ಹಿಂದೆ ಹೋಗಿರಲಿಲ್ಲ ಆದರೆ ಪ್ರಸ್ತುತ ಶಾಸನದ ಪ್ರಕಾರ ಅದರ ಕಾಲವು ಸುಮಾರು ಕ್ರಿ. ಶ. ೯೬೦ರಷ್ಟು ಹಿಂದಕ್ಕೆ ಹೋಗಿದೆ.

ಕಂಚಿ ರಾಜಕೀಯ ಕೇಂದ್ರವಾಗಿದ್ದುದರಿಂದ ಇಲ್ಲಿ ಅನೇಕ ಧರ್ಮಗಳು ನೆಲೆನಿಂತಿದ್ದವು. ಶೈವ, ವೈಷ್ಣವ, ಬೌದ್ಧ ಮತ್ತು ಜೈನಧರ್ಮಗಳಲ್ಲದೆ ಶೈವದಲ್ಲಿ ಪಾಶುಪತ, ಕಾಳಾಮುಖ ಮತ್ತು ಕಾಪಾಲಿಕ ಮತದವರೂ ಈ ಸ್ಥಳದಲ್ಲಿದ್ದಂತೆ ಮತ್ತವಿಲಾಸ ಪ್ರಹಸನದಿಂದ ತಿಳಿಯುತ್ತದೆ. ಇಂದಿಗೂ ಕಂಚಿಯು ಶೈವ ಮತ್ತು ವೈಷ್ಣವ ಮತಗಳ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ.

ದಿದ್ದಿಗಿಯ ಶಾಸನವು ಕಂಚಿಯಲ್ಲಿದ್ದು ಕಾಮಕೋಟಿ ಭಳಾರಿಯನ್ನು ಉಲ್ಲೇಖಿಸುತ್ತದೆ. ಕನ್ನೆಸಂಕ್ರಮಣದಂದು ಈ ದೇವಿಯ ಮುಂದೆ ದಾನ ನೀಡಿದಂತೆ ಹೇಳಿರುವುದರಿಂದ ಇದೊಂದು ವೈದಿಕ ಶಾಕ್ತಪೀಠವಾಗಿತ್ತೆಂಬುದು ತಿಳಿಯುತ್ತದೆ. ಹಾಗಾಗದಲ್ಲಿ ಈ ಕಾಮಕೋಟಿ ಭಳಾರಿ ಯಾರು? ಇದೇ ಇಂದಿನ ಕಾಮಾಕ್ಷಿಯೇ? ಕಾಮಾಕ್ಷಿ ದೇವಾಲಯದ ಆವರಣದಲ್ಲಿ ಸು. ಕ್ರಿ. ಶ. ಎಂಟನೆಯ ಶತಮಾನಕ್ಕೆ ಸೇರಿದ ಶಾಸನ ದೊರೆತರೂ ಅದರಲ್ಲಿ ಕಾಮಾಕ್ಷಿಯ ಉಲ್ಲೇಖವಿಲ್ಲ (ARSIE No. 360 of 1955) ಚೋಳರ ಶಾಸನಗಳಲ್ಲಿಯೂ ಈ ದೇವಿಯ ಉಲ್ಲೇಖ ಸಿಗುವುದಿಲ್ಲ. ಹೀಗಾಗಿ ಕಾಮಾಕ್ಷಿಯ ಉಲ್ಲೇಖವು ಪಾಂಡ್ಯರ ಶಾಸನಗಳಲ್ಲಿ ಮೊದಲಿಗೆ ಕಾಣಿಸಿಕೊಳ್ಳುತ್ತದೆ. ತ್ರಿಭುವನ ಚಕ್ರವರ್ತಿ ಮಾರವರ್ಮನ ಐದನೆಯ ವರ್ಷದ (ಕ್ರಿ. ಶ. ೧೩೪೧) ಶಾಸನದಲ್ಲಿ ಪೆರಿಯ ನಾಚ್ಚಿಯಾರ್ ಉಲ್ಲೇಖವಿದ್ದು ಈ ದೇವಿಯ ನಂದಾದೀಪ ನಡೆಯುವುದಕ್ಕಾಗಿ ಹಸುಗಳನ್ನು ದಾನನೀಡಿದ ಉಲ್ಲೇಖವಿದೆ . (ARSIE of 1918 Pt-II p. 52). ಹೀಗಾಗಿ ಕಾಮಾಕ್ಷಿ ಹೆಸರು ೧೪ನೆಯ ಶತಮಾನದ ನಂತರ ನೇರವಾಗಿ ಪ್ರಸ್ತಾಪವಾಗಿದೆ. ಬಹುಶಃ ದಿದ್ದಿಗಿಯ ಶಾಸನದ ಕಾಮಕೋಟಿ ಭಳಾರಿ ಈ ಕಾಮಕೋಟಿಯು ಕಾಮಾಕ್ಷಿಯ ಇನ್ನೊಂದು ಹೆಸರಿರಬೇಕು. ಕಂಚಿಯಲ್ಲಿ ಸ್ತ್ರೀ ದೇವತಾ ಮಂದಿರಗಳು ಅನೇಕ ವಿರುವುದರಿಂದ ಸ್ಪಷ್ಟವಾಗಿ ಗುರುತಿಸಲು ತೊಡಕಾಗಿದೆ.

ಶಾಸನದಲ್ಲಿ ಕಾಳಭಟ್ಟನ ಸಮೇತ ೧೦೮ ಜನರು ದಿದ್ದಿಗೆಯ ಅಗ್ರಹಾರವನ್ನು ಈ ಕೆಳಕಂಡಂತೆ ಹಂಚಿರುತ್ತಾರೆ. ವಿಷ್ಣುದೇವರಿಗೆ ೧೩ ಮತ್ತರು ಮತ್ತು ೪೫೦ ಕಮ್ಮ ಗದ್ದೆ, ಸುಬ್ರಮಣ್ಯ ದೇವರಿಗೆ ೧೩ ಮತ್ತರು, ರಾಮೇಶ್ವರ ದೇವರಿಗೆ...ಮತ್ತರು, ಸೋಮೇಸ್ವರ ದೇವರಿಗೆ ೧೩ ಮತ್ತರು ೧ ಮತ್ತರು ತೋಟ, ಚಿಕೇಸ್ವ ದೇವರಿಗೆ ೭ ಮತ್ತರು ಬಳರಿ ಮಾರಕಬ್ಬೆಗೆ ಮತ್ತರು ಮೂರು, ಪಿರಿಯಕಬ್ಬೆಗೆ...ಮತ್ತರು. ಸತ್ರಕ್ಕೆ ನಾಲ್ಕು ಮತ್ತರು, ಭಟ್ಟರ ಎರೆ ಮತ್ತರು ೧೩... ಹೀಗೆ ಆ ಭೂಮಿಯನ್ನು ಹಂಚುತ್ತಾರೆ. ಈ ದೇವರುಗಳು ದಿದ್ದಿಗಿಯಲ್ಲಿ ದ್ದವೇ ಅಥವಾ ಕಂಚಿಯಲ್ಲಿದ್ದವೇ ಎಂಬುದು ಪ್ರಶ್ನೆ. ದಿದ್ದಿಗಿ ಯಲ್ಲಿ ಈಗ ಉಳಿದಿರುವ ಅವಶೇಷಗಳಲ್ಲಿ ಈ ಬಗೆಯ ದೇವಾಲಯ ಗಳು ಎಲ್ಲೂ ಕಂಡುಬರುವುದಿಲ್ಲ. ಆದರೆ ಕಂಚಿಯಲ್ಲಿ ಕಾಣ ಬರುತ್ತವೆ. ಆದಿತ್ಯ ಚೋಳ ಮತ್ತವನ ವಂಶಸ್ಥರು ಕಂಚಿಯಲ್ಲಿ ಚಂಡೇಶ್ವರ, ಚಂದ್ರ, ಸೂರ್ಯ, ಗಣಪತಿ, ಸಪ್ತಮಾತೃಕೆ, ಸುಬ್ರಮಣ್ಯ, ಜೇಷ್ಠಾದೇವಿ ಮೊದಲಾದ ಪರಿವಾರ ದೇವಾಲಯಗಳನ್ನು ಕಟ್ಟಿಸಿ ದಂತೆ ತಿಳಿಯುವುದರಿಂದ ದಿದ್ದಿಗಿಯ ಉಲ್ಲೇಖಿತ ದೇವಾಲಯ ಗಳು ಕಂಚಿಯಲ್ಲಿಯೇ ಇದ್ದಿರಬೇಕು ಈ ದೇವಾಲಯದ ಆಧಾರ ದಿಂದ ಇದು ಶೈವ ಬ್ರಾಹ್ಮಣರ ಕೇಂದ್ರವಾಗಿತ್ತೆಂಬ ಅಂಶ ವ್ಯಕ್ತವಾಗುತ್ತದೆ.

ಕಂಚಿಯು ಇಂದಿನ ಶೈವಪೀಠವು ಕಾಮಾಕ್ಷಿ ಪೀಠವಾಗಿದೆ. ಈ ಪೀಠವು ಶಂಕರ ವೇದಾಂತರ ಪೀಠವಾಗಿದ್ದು ಈ ಕಾಮಾಕ್ಷಿಯೇ ಅಲ್ಲಿನ ಅಧಿದೈವ. ಅಲ್ಲಿನ ಶಿವನನ್ನು ಏಕಾಮ್ರನಾಥನೆಂದು ಕರೆಯುತ್ತಾರೆ. ಶಂಕರರ ಕಾಲವು ಸು. ಕ್ರಿ. ಶ. ೮೦೦ ಎಂದಿದ್ದು ಅದಕ್ಕಿಂತ ಸುಮಾರು ೧೫೦ ವರ್ಷಗಳಷ್ಟು ಮುಂದಿನ ಕಾಲದ ಶಾಸನ ಇದಾಗಿದೆ. ಶೈವಪರಂಪರೆಯ ಈ ಕೇಂದ್ರವು ಅಷ್ಟು ಹಿಂದಿನಿಂದಲೇ ಇದ್ದಿರಬಹುದು. ಈ ಹಿನ್ನೆಲೆಯಲ್ಲಿ ಶಿವ ಪಾರಂಪರ್ಯದ ಪರಿವಾರ ದೇವತೆಗಳ ಉಲ್ಲೇಖ ಈ ಶಾಸನದಲ್ಲಿ ಬಂದಿದೆ. ಇಲ್ಲಿ ಉಲ್ಲೇಖಿಸಿರುವ ದೇವತೆಗಳ ಎಲ್ಲ ದೇವಾಲಯ ಗಳನ್ನು ಈ ಸಮಾನಾಂತರವಾಗಿ ಗುರುತಿಸುವುದು ಕಷ್ಟಸಾಧ್ಯ.

**ದಿದ್ದಿಗಿ ಬಸಮ್ಮಾಗೊಲ್ಲರ್ ಅವರ ಹೊಲದಲ್ಲಿನ ಶಾಸನ ***

೧ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃ
೨ ಥ್ವೀ ವಲ್ಲಭ ಮಹಾರಾಜಾಧಿರಾಜ
೩ [ರಾಜ] ಪರಮೇಶ್ವರಂ ಪರಮ ಭಟ್ಟಾರಕಂ
೪ . . . ಕ(ಗ?)ಡವ ಕುಳಿತಿಳಕಂ ರಟ್ಟರಮೇರು
೫ . . . . ವಿ(ಗ?) ಮದಗಜ ಮಲ್ಲಂ ಎಲ್ಲರ ಮರುಳಂ ತ
೬ . . ಬಟ್ಟರ ಜಾತಂ ಪರಾಂಗನಾಪುತ್ರಂ
೭ . . . ಕಳಕಾಳ (ಹದಂ?) ಒತ್ತಮ್ಮ ಹ್ಮೊಂ ಶ್ರೀಮದು
೮ ತ್ತುಂಗ? ಮೋ ದೇವರುತ್ತರಾಭಿವೃದ್ಧಿ ಪ್ರವರ್ದ್ಧಮಾನ ರಾಜ್ಯಮಾ
೯ ಚಂದ್ರಾರ್ಕತಾರಂಬರಂ ಸಲೆ ಸಕನ್ರಿಪಕಾಳಾತೀತ ಸ
೧೦ ವತ್ಸರ ಸತಂಗ ೮೮೬ನೆಯ ಬಹುಧಾನ್ಯ ಸಂವತ್ಸರದ

( * ಈ ಶಾಸನದ ಹಿಂಬದಿಯಲ್ಲಿ ರಾಷ್ಟ್ರಕೂಟರ ಕಾಲದ ವೀರಗಲ್ಲ ಶಿಲ್ಪವಿದೆ. )

೧೧ ಕಾರ್ತೀಕ ಸುದ್ಧ ೧೨ಸಿ. ಆದಿತ್ಯವಾರದನ್ದು ಮೆಳ್ಪಾಟಿಯ ನೆಲೆವೀಡಿ

೧೨ ನಲಿಟ್ಟು ಕಂಚಿಯ ಕಾಮಕೋಟಿ ಭಳಾರಿಯ ಮುನ್ತೆ ಕನ್ನೆ ಸಂಕ್ರಾನ್ತಿ

೧೩ ನಿಮಿತ್ತ ಉತ್ತಮದಗ್ರಹಾರಂ ದಿಜ್ಜಿಗೆಯಂ ಕಾಳಭಟ್ಟಪ್ರಮು

೧೪ ಖಿ ಮಾಗೆ ನೂಱೆಣ್ಬರು ಧಾರಾಪೂರ್ವಕದಿಂ ಗ್ರಾಮ ದೆಟ್ಟಿಗೆಯ?

೧೫ ಬಿಟ್ಟದತ್ತಿಯೆನ್ತೆದ್ದಡೆ ವಿಷ್ಣುದೇವರ್ಗ್ಗೆ ಮ ೧೩ಗಟ್ಟೆ ಕಮ್ಮ

೧೬ ೪೫೦? ಸುಬ್ರಮಣ್ಯದೇವರ್ಗೆ ಮ ೧೩ ರಾಮೇಸ್ವರ ದೇವರ್ಗೆಮ . .

೧೭ ಸೋಮೇಸ್ವರ ದೇವರ್ಗೆ ಮ ೧೩ ತೋಂಟ ಮ ೧ ಚಿಕ್ಕೇಸ್ವದೇವರ್ಗ್ಗೆ

೧೮ ಮ ೭? ಬಳರಿಮಾರ? ಕಬ್ಬೆಗೆ ಮ ೩ ಬಳರಿಪಿರಿಯ ಕಬ್ಬೆಗೆ ಮಬ್ಬೆ

೧೯ ಸತ್ರಕೆ ಮ ೪ ಸರಸ್ವತಿಗೆ ಮ . ಭಟ್ಟರೆಯ ಮ ೧೩ ಯ

೨೦ ಟಗೆಯಿ ಮ ೧೩ ಮೆಲ್ದನಾಪಾರುಕೆಯ ಬಿಟ್ಟಕೊಟ್ಟ ನೂರೆಣ್ಬರ

೨೧ ಮೆಂಬಿದೆಲ್ಲ? ಸಿದ್ದಾಯ ಕೊಟ . . ಲ . . ಗೆ . ಪೊನ್ನ ನಿಕ್ಕುವರು

೨೨ . . ತಪ್ಪಲಾ . ಕ ವಾರಣಾಸಿಯಲಿ ಕವಿಲೆವಂ? ಸಾ

೨೩ ಸಿರ ಪಾರ್ವರ ಕೊನ್ದ? ಹೋಹರು? ಸ್ವದತ್ತಂ ಪರದತ್ತ ವಾಯೋಹರೇತಿ ವ

೨೪ ಸುನ್ಧರಾಂ ಷಷ್ಟಿವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ

೨೫ ಸಾಮಾನ್ಯೋಯಂ ಧರ್ಮಸೇತು ನ್ರಿಪಾಣಾಂ ಕಾಲೇಕಾಲೇ ಪಾಲನೀ

೨೬ ಯೋ ಭವದ್ಭಿಃ . . . ತಾಂ . . ಪಾರ್ತ್ಥಿವೇನ್ದ್ರಾಂ ಭೂಯೋ ಭೂಯೋ

೨೭. ಯಾಚತೇ

೨೮. ರಾಮಚನ್ದ್ರಾ।

**ಶಾಸನ ಸಾರಾಂಶ**

ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ರಟ್ಟರಮೇರು, ಮದಗಜಮಲ್ಲ, ಎಲ್ಲರಮರುಳ, ಜಟ್ಟರಜಾತಂ ಪರಾಂಗನಾಪುತ್ರ ಶ್ರೀಮದುತ್ತುಂಗ . . . . ದೇವರು ಉತ್ತರೋತ್ತರಾಭಿವೃದ್ಧಿ ಪ್ರವರ್ದ್ಧನಮಾನರಾಗಿ ರಾಜ್ಯಭಾರ ಮಾಡುತ್ತಿದ್ದಾಗ ಶಕ ವರ್ಷ ೮೪೬ನೆಯ ಬಹುಧಾನ್ಯ ಸಂವತ್ಸರದ ಕಾರ್ತಿಕ ಸು. ೧೨ ಆದಿತ್ಯವಾರದಂದು ಮೇಲ್ಪಾಟಿಯ ನೆಲೆವೀಡಿನಲ್ಲಿದ್ದಾಗ ಕಾಳಭಟ್ಟನ ಮುಂದಾಳತ್ವದಲ್ಲಿ ನೂರೆಂಟು ಮಹಾಜನರು ಕಂಚಿಯ ಕಾಮಕೋಟಿ ಭಳಾರಿಯ ಮುನ್ದೆ ಕನ್ನೆ ಸಂಕ್ರಾಂತಿ ನಿಮಿತ್ತವಾಗಿ ಅಗ್ರಹಾರ ದಿದ್ದಿಗೆಯನ್ನು ಕಂಚಿಯ ದೇವರುಗಳಿಗೆ ಬಿಡುತ್ತಾರೆ. ವಿಷ್ಣುದೇವರಿಗೆ ೧೩ ಮತ್ತರು, ೪೫೦ ಕಮ್ಮ ಗದ್ದೆ, ಸುಬ್ರಮಣ್ಯೇಸ್ವರ ದೇವರಿಗೆ ೧೩ ಮತ್ತರು, ರಾಮೇಸ್ವರದೇವರಿಗೆ....., ಸೋಮೇಸ್ವರ ದೇವರಿಗೆ ೧೩ ಮತ್ತರು ಮತ್ತು ೧ ಮತ್ತರು ತೋಟ, ಚಿಕೇಸ್ವರ ದೇವರಿಗೆ ೭ ಮತ್ತರು, ಬಳರಿ ಮಾರಕಬ್ಬೆಗೆ ೩ ಮತ್ತರು, ಬಳರಿ ಪಿರಿಯಕಬ್ಬೆಗೆ . . . ಸತ್ರಕೆ ನಾಲ್ಕು ಮತ್ತರು, ಸರಸ್ವತಿಗೆ . . ಭಟರೆಯ ಮತ್ತರು ೧೩, ಯಟಗೆಯಿ? ೧೩ ಮತ್ತರು ಈ ಭೂಮಿಯಲ್ಲಿ ಬರುವ ಸಿದ್ಧಾಯ ಮುಂತಾದವನ್ನು ನೀಡಬೇಕೆಂದು ಹೇಳಿದೆ.

(ಡಾ॥ಡಿ. ವಿ. ಪರಮಶಿವಮೂರ್ತಿಯವರು ಈ ಶಾಸನ ಪ್ರತಿ ತೆಗೆಯಲು ನೆರವಾಗಿದ್ದಾರೆ. ಅವರಿಗೆ ಕೃತಜ್ಞತೆಗಳು)

**ಆಧಾರ ಸೂಚಿ**

K. R Srinivasan : ***Kanchipuram through the Ages***, Agamakala Prakashan, NewDelhi, 1979

T. V. Mahalingam : ***Kanchipuram in early South Indian History***, Asia Publishing Home, Bombay, 1968

ಹನುಮಾಕ್ಷಿ ಗೋಗಿ *

# ಹಾನಗಲ್ ತಾಲೂಕಿನ ಕೆಲವು ರಾಷ್ಟ್ರಕೂಟ ಶಾಸನಗಳು

ಹಾನಗಲ್ ತಾಲೂಕಿನ ಒಂದು ಚಿಕ್ಕ ಹಳ್ಳಿ ನರೇಗಲ್, ಧಾರವಾಡ ಜಿಲ್ಲಾ ಶಾಸನ ಸೂಚಿಯ ಪ್ರಕಾರ ಇಲ್ಲಿ ೯ ಶಾಸನಗಳು (ARIE 1946-47 ವರದಿಯ ೨೨೬–೨೩೪ ಸಂಖ್ಯೆಯ ಶಾಸನಗಳು) ದೊರೆಯುತ್ತಿದ್ದು, ರಾಷ್ಟ್ರಕೂಟ ಚಕ್ರವರ್ತಿ ಧೋರನ (ಧ್ರುವ ನಿರುಪಮ) ಶಾಸನದ ಪಠ್ಯ ಮಾತ್ರ (ಗೋಗ್ರಹಣ ಪ್ರಸಂಗದಲ್ಲಿ ದೊಮ್ಮರ ಕಾಡಪನ ವೀರಮರಣ E.I.VI PI 162-163 ಕ್ರಿ. ಶ. ೭೦೯) ಪ್ರಕಟಗೊಂಡಿದೆ. ಉಳಿದೆಲ್ಲ ಶಾಸನಗಳ ಪಠ್ಯಗಳು ನನ್ನಲ್ಲಿವೆ. ಇವುಗಳ ಹೊರತಾಗಿ ೬ ಗೋಸಾಸ ಕಲ್ಲುಗಳು ಸರ್ವೇಶ್ವರ ದೇವಸ್ಥಾನದ ಆವರಣದಲ್ಲಿದ್ದು ನೆಲದಲ್ಲಿ ಹೂತಿರುವುದರಿಂದ ಅಗೆಸಿ ತೆಗೆದು ಲಿಪಿಯಿರುವ ಕುರಿತು ಖಚಿತಪಡಿಸಿಕೊಳ್ಳಬೇಕಿದೆ. ಈ ಲೇಖನದಲ್ಲಿ ರಾಷ್ಟ್ರಕೂಟರ ಕಾಲದ ಎರಡು ವೀರಗಲ್ಲುಗಳ ಕುರಿತು ವಿದ್ವಾಂಸರ ಗಮನ ಸೆಳೆಯುತ್ತಿದ್ದೇನೆ.

ಅ) ಸರ್ವೇಶ್ವರ ದೇವಾಲಯದ ಎಡಮಗ್ಗುಲಲ್ಲಿ ಹೂತಿರುವ ಕಲ್ಲು ೩' ಅಗಲ ೫' ಎತ್ತರವಿರುವ ಕರಿಕಲ್ಲಿನಲ್ಲಿ ಸುಂದರವಾಗಿ ಕೆತ್ತಿದ ಉಬ್ಬು ಶಿಲ್ಪಗಳಿರುವ ವೀರಗಲ್ಲು ಇದಾಗಿದೆ.

ಅಪೂರ್ಣ ಕೆಳಭಾಗದಲ್ಲಿ ರಾಷ್ಟ್ರಕೂಟರ ಲಾಂಛನವಾದ ನೇಗಿಲಿದ್ದು, ಅದರ ಮೇಲಿನ ಪಟ್ಟಿಕೆಯಲ್ಲಿ ವೀರರಿಬ್ಬರು ಬಿಲ್ಲು-ಬಾಣ, ಭಲ್ಲೆಗಳಿಂದ ಕಾದುವ ಚಿತ್ರವಿದೆ. ಮೂರನೆಯ ಪಟ್ಟಿಕೆಯಲ್ಲಿ ೪ ಸಾಲುಗಳ ಶಾಸನವಿದ್ದು, ನಾಲ್ಕನೆಯ ಪಟ್ಟಿಕೆಯಲ್ಲಿ ಮಡಿದ ವೀರ ಅಪ್ಸರೆಯರಿಬ್ಬರ ಭುಜಗಳ ಮೇಲೆ ಕೈಹಾಕಿ ವೀರಸ್ವರ್ಗಕ್ಕೆ ಹಾರುತ್ತಿರುವ ಚಿತ್ರವಿದೆ. ಐದನೆಯ ಪಟ್ಟಿಕೆಯಲ್ಲಿ ೪ ಸಾಲುಗಳ ಶಾಸನವಿದ್ದು, ೫ನೆಯ ಸಾಲು ಅಳಿಸಿ ಹೋಗಿದೆ. ಆರನೆಯ ಪಟ್ಟಿಕೆಯಲ್ಲಿ ಪುಷ್ಪ ಸಿಂಹಪೀಠದ ಮೇಲೆ ಆಸೀನನಾದ ವೀರನಿದ್ದು, ಬದಿಗಳಲ್ಲಿ ಚಾಮರಧಾರಿಯರಾದ ಅಪ್ಸರೆಯರಿದ್ದಾರೆ. ಪೂರ್ಣ ಮೇಲ್ಭಾಗದಲ್ಲಿ ಶಿವಲಿಂಗದ ಮುಂದೆ ಜಟಾಧಾರಿ ಯತಿಯೊಬ್ಬ (ಪೂಜಾರಿ?) ಕುಳಿತಿದ್ದು ಎಡಗಡೆಗೆ ಚಕ್ರವಿದೆ.

ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನ ಕಾಲದ ಶಾಸನವಿದಾಗಿದ್ದು, ಶಾಸನದ ಆರನೆಯ ಸಾಲಿನಲ್ಲಿ ಬರುವ ''[ಸಂವ*]ತ್ಸರ ಶತಂಗಳೆಣ್ಬನೂ(ಱೆ*)ಟ್ಪತ್ತ ಏಟ ರಾಕ್ಷಸ ಸಂವತ್ಸರದ ಶ್ರಾವಣದ ಪುಣ್ಣಮೆಯು ಆದಿತ್ಯವಾರ'' ಎಂದು ತಿಳಿಸುವ ಮಿತಿಯು ಕ್ರಿ. ಶ. ೯೫೫ರ ಆಗಸ್ಟ್ ೧೨ನೆಯ ತಾರೀಖು ಸೋಮವಾರಕ್ಕೆ ಸರಿಹೊಂದುತ್ತದೆ.

ರಾಷ್ಟ್ರಕೂಟ ಅರಸು ಕನ್ನರದೇವ ಪೃಥ್ವೀರಾಜ್ಯವನ್ನಾಳುತ್ತಿರುವಾಗ, ಪುಣಸೆಯ ಗಜ್ಜನಾಳುತ್ತಿರುವಾಗ (ಬಹುಶಃ ಶಾಸನ ದೊರೆತ ಬನವಾಸಿ ಪನ್ನಿರ್ಚ್ಛಾಸಿರದ ಭಾಗ) ನರೆಯಂಗಲ್ಲ ಕೋಚಾರರ ಕೋಟೆಯಮ್ಮನ ಮಗ ತೋಯಿಮ್ಮ ಗೋಗ್ರಹಣ ಪ್ರಸಂಗದಲ್ಲಿ ಹೋರಾಡಿ ಮಡಿದಾಗ, ಸಾಸಿರ್ವರು (ಮಹಾಜನರು) ಆರು ಮತ್ತರು ಕರಿಯ ಭೂಮಿ (ಎರೆಭೂಮಿ) ಆರು ಕೈ ಅಳತೆಯ ಮನೆಯನ್ನು ಆತನ ಮಕ್ಕಳಿಗೆ ಕೊಡುಗೆಯಾಗಿ ನೀಡಿದುದನ್ನು ಈ ವೀರಗಲ್ಲು ತಿಳಿಸುತ್ತದೆ. ಪುಣುಸೆಯ ಗಂಗನೆಂಬ ಪರ್ಯಾಯ ನಾಮ ಗಂಗ ಅರಸು ಬೂತುಗನನಿಗಿತ್ತು ಎಂಬುದನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ. ಶಾಸನದ ಪೂರ್ಣಪಾಠ ಕೆಳಗಿನಂತಿದೆ –

### ನರೇಗಲ್ಲಿನ ಶಾಸನಗಳು

**ಮೊದಲನೆಯ ಸ್ತರ :**

೧ ಆಱು ಮತ್ತಲ ಕರಿಯ್ಯ ಕೆಯಿ ಆಱುಗಯ್ಯ ಮನೆ ಮಕ್ಕಳ್ಗೆಗೊಟ್ಟ
೨ ತೋಯಿಮ್ಮನ ॥ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಬಿ ಸುರಙ್ಗನ ಕ್ಷಣವಿಧ್ವಂಬ್ಸಿ
೩ ನಿಕಯೆ ಖಚಿನ್ತ ವಾ [ರ*]ಣೇ ರಣ(ಣೇ) ಕನ್ನರದೇವ ಪ್ರಿತಿವಿರಾಜ್ಯಂಗೆಯ್ಯೆ ಪುಣುಸೆ

* ನವನಗರ, ಹುಬ್ಬಳ್ಳಿ – ೫೮೦ ೦೨೫

೪ ಗಜ್ಜನಳ್ಳಿಯೊ(ಳಿ) ಸಾಸಿರ್ವ್ವರುಂ ಕೊಟ್ಟರ್ ಸ್ವದತ್ತಂ ಪರದತ್ತಂ ವಾಯೋ ಹರೇ

೫ [ತೆ ವಸುಂಧರಾ ಷಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ]

**ಎರಡನೆಯ ಸ್ತರ :**

೬ [ಸಂವ*]ತ್ಸರ ಶತಂಗಳೆಣ್ಬು ನೂ (ಱ*)ಟ್ಟತ್ತ ಏಟ

೭ ರಾಕ್ಷಸ ಸಂವತ್ಸರದ ಶ್ರಾವಣದ ಪುಣ್ಣಮಯು ಆದಿತ್ಯವಾರ

೮ ನರೆಯಂಗಲ್ಲ ಕೋಚಾರರ ಕೋಟೆಯವ್ಮ್ಮನ ವಂಗ ತೋಯಿಮ್ಮನಲ್ಲಿ

೯ [ತುಱು*]ಪರಿಯೆ ಕಾದು ಸತ್ತು ಸ್ವ[ರ್ಗ್ಗಲೋಕಪ್ರಾ*] ಪ್ತನಾದಂ

ಆ) ಸರ್ವೇಶ್ವರ ದೇವಾಲಯದ ಕೆರೆ ದಂಡೆಯಲ್ಲಿ ಸ್ಮಶಾನದ ದಾರಿಯಲ್ಲಿ ಹೂತಿರುವ ಕಲ್ಲು ೩' ಅಗಲ ೩' ಎತ್ತರದ ತ್ರುಟಿತ ಕರಿಕಲ್ಲಿನ ವೀರಗಲ್ಲು ಇದಾಗಿದೆ. ಕಲ್ಲಿನ ಪೂರ್ಣ ಮೇಲ್ಭಾಗದಲ್ಲಿ ಕುಂಭವಿದ್ದು ಕೆಳಗೆ ಸಿಂಹಪೀಠದ ಮೇಲೆ ವೀರನೊಬ್ಬ ಕುಳಿತಿದ್ದು, ಬಲಭಾಗದಲ್ಲಿ ಚಾಮರಧಾರಿ ಸ್ತ್ರೀಯೊಬ್ಬಳಿದ್ದು ಎಡಭಾಗದಲ್ಲಿ ಪಾತ್ರೆ (ಪಾನಪಾತ್ರೆ?)ಧಾರಿಯಾದ ಇನ್ನೊಬ್ಬ ಸ್ತ್ರೀ ಇದ್ದಾಳೆ. ಅದರ ಕೆಳಗಿನ ಪಟ್ಟಿಕೆಯಲ್ಲಿ ೩ ಸಾಲಿನ ಶಾಸನವಿದೆ. ನಂತರದ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರ ಹೆಗಲ ಮೇಲೆ ಕೈಹಾಕಿ ಸ್ವರ್ಗಕ್ಕೆ ಯಾನ ಮಾಡುವ ವೀರನೊಬ್ಬನ ಶಿಲ್ಪವಿದ್ದು, ಅಲ್ಲಿಗೆ ಒಡೆದು ಹೋಗಿದೆ. ಬಹುಶಃ ಈ ಶಿಲ್ಪದ ಕೆಳಗೆ ಇನ್ನೆರಡು ಪಟ್ಟಿಕೆಗಳಿದ್ದು ಒಂದರಲ್ಲಿ ಶಾಸನದ ಇನ್ನುಳಿದ ಭಾಗ ಮತ್ತು ಅದರ ಕೆಳಭಾಗದಲ್ಲಿ ಯುದ್ಧದ ಹೋರಾಟದ ಸನ್ನಿವೇಶ ಇರಬಹುದಾಗಿದೆ.

ಈಗ ಲಭ್ಯವಿರುವ ಶಾಸನಪಾಠದಲ್ಲಿ ಅರಸ, ಮಂಡಲೇಶ್ವರ, ಮಿತಿಗಳ ವಿವರಗಳಿರುವುದಿಲ್ಲ. ಆದರೆ ಶಾಸನದ ಶಿಲ್ಪ ಮತ್ತು ದೊರೆತ ಪಾಠದ ಲಿಪಿಸ್ವರೂಪದಿಂದಾಗಿ ರಾಷ್ಟ್ರಕೂಟರ ಕಾಲದ ಶಾಸನವಿದಾಗಿದೆಯೆಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಯಾವುದೋ ವೀರನೊಬ್ಬ ಹೋರಾಟದಲ್ಲಿ ಮಡಿದುದರ ಸ್ಮರಣಾರ್ಥವಾಗಿ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ.

***ಶಾಸನದ ಪೂರ್ಣ ಪಾಠ***

೧ ಸ್ವಸ್ತಿ ಶ್ರೀ ಸಮಧಿಗತ ಪಂಚಮಹಾ

೨ ಗ (ಶ)ಬ್ದ ಮಹಸಾಮನ್ತಾಧಿಪತಿ ಶ್ರೀ ಪ್ರಿ 'ತು' ವೀ ವ

೩ ಲ್ಲಭ ಪರಮೇಶ್ವರ ಪರಮ ಭಟ್ಟಾರ*

(೧-೧. ಸಾಲಿನ ಕೆಳಗೆ ಬರೆಯಲಾಗಿದೆ

* ಶಾಸನದ ಮುಂದಿನ ಭಾಗ ಒಡೆದು ಕಳೆದಿದೆ.)

**ಕೆರೆ ಕಟ್ಟೆಯಲ್ಲಿರುವ ಶಾಸನ**

ಈ ಶಾಸನವನ್ನು EI VI ರ 'Some records of the Rashtrakuta Kings of Malkhed' ಲೇಖನದಲ್ಲಿ J.F. Fleet ಅವರು ಈಗಾಗಲೇ ಪ್ರಕಟಿಸಿದ್ದು ಅದರ ಪಠ್ಯ ಕೆಳಗಿನಂತಿದೆ.

೧. ಓಂ ಸ್ವಸ್ತಿ ಶ್ರೀ ಧೋರಂ ಪ್ರಿಥುವೀರಾಜ್ಯಂಕೆಯೆ ಮಾರ

೨. ಕ್ಕರಸಬ್ಬನಮಾ (ವಾ)ಸಿ ಪನ್ನಿರ್ಚ್ಛಾರಸಿನುಮಾಳೆ ನರೆಯಂ

೩. ಗಲ್ಲ ಸಾಸಿರ್ವ್ವರ ತುಱುಪಿನ ಪುಯ್ಯಲೊಳ್

೪. ದೊಮ್ಮರ ಕಾಡಪಂ ಸತ್ತು ಸ್ವರ್ಗ್ಗ (ರ್ಗ್ಗ) ಲಯಕ್ಕೇಱಿದನ್[॥*]

ಈ ಎಲ್ಲ ಲಭ್ಯ ಶಾಸನಗಳ ಹಿನ್ನೆಲೆಯಲ್ಲಿ ನರೇಗಲ್ಲಿನ ಸರ್ವೇಶ್ವರ ದೇವಾಲಯದ ಆವರಣದಲ್ಲಿನ ಗೋಸಾಸ ಕಲ್ಲುಗಳನ್ನು ಅಗೆದು ತೆಗೆದರೆ ಇನ್ನೂ ಕೆಲವು ರಾಷ್ಟ್ರಕೂಟ ಕಾಲದ ಶಾಸನಳು ದೊರೆಯಬಹುದು.

**ಮಂತಗಿಯ ಶಾಸನಗಳು**

ಹಾವೇರಿ ಜಿಲ್ಲೆಯ ಹಾನಗಲ್ ತಾಲೂಕಿನ ಪಶ್ಚಿಮ ಭಾಗದ ಅಂಚಿನಲ್ಲಿ, ಕಾರವಾರ ಜಿಲ್ಲೆ ಮುಂಡಗೋಡ ತಾಲೂಕಿನ ಕುಳಗಿಯ ಪಕ್ಕದಲ್ಲಿರುವ ಚಿಕ್ಕ ಹಳ್ಳಿ ಮುಂತಗಿ. ಆದರೆ ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ತುಂಬ ದೊಡ್ಡ ಪರಂಪರೆಯನ್ನು ಹೊಂದಿದೆ ಎನ್ನುವುದಕ್ಕೆ ಸೂಚಕವಾಗಿ ಧರ್ಮಾನದಿಯ ದಂಡೆಯಿಂದ ಊರವರೆಗೆ, ಊರೊಳಗೆ ಹಲವಾರು ಪ್ರಾಚ್ಯಾವಶೇಷಗಳು ಹರಡಿಕೊಂಡಿವೆ. ಧಾರವಾಡ ಜಿಲ್ಲೆಯ ಶಾಸನ ಸೂಚಿಯ ಪ್ರಕಾರ ೧೫ ಶಾಸನಗಳು ದೊರೆತಿದ್ದು, ನಾನು ಪರಿವೀಕ್ಷಣೆಗೆ ಹೋದಾಗ ಮತ್ತೆ ೫ ಶಾಸನಗಳು ದೊರೆತಿವೆ. ಇವುಗಳಲ್ಲಿ ಎರಡು ಶಾಸನಗಳ ಪಠ್ಯಗಳನ್ನು ಮಾತ್ರ ಡಾ॥ ಆರ್. ಎಂ. ಷಡಕ್ಷರಯ್ಯನವರು ಇತಿಹಾಸ ದರ್ಶನ ಸಂಪುಟ ೧೩ರಲ್ಲಿ ಪ್ರಕಟಿಸಿದ್ದಾರೆ. ಇನ್ನುಳಿದ ಎಲ್ಲ ಶಾಸನಗಳು ಅಪ್ರಕಟಿತ ಶಾಸನಗಳು. ಕಾರಣ ಅವುಗಳಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ೫ ಶಾಸನಗಳ ಪಠ್ಯಗಳನ್ನು ಮಾತ್ರ ಇಲ್ಲಿ ಪ್ರಕಟಿಸುತ್ತಿದ್ದೇನೆ

**೧. ಬನ್ನಿಕಲ್ಲಿನಲ್ಲಿಯ ವೀರಗಲ್ಲು ೧**

೬೪'' ಉದ್ದ ೨೭'' ಅಗಲದ, ಕರಿಕಲ್ಲಿನ ಸುಂದರ ಉಬ್ಬು ಚಿತ್ರಗಳಿರುವ ಲಿಪಿಸಹಿತ ವೀರಗಲ್ಲು ಇದಾಗಿದೆ. ತೀರ ಕೆಳಪಟ್ಟಿಕೆಯಲ್ಲಿ ರಾಷ್ಟ್ರಕೂಟರ ರಾಜಚಿಹ್ನೆ ನೇಗಿಲಿದೆ. ಎರಡನೇ ಪಟ್ಟಿಕೆಯಲ್ಲಿ ಗೋವುಗಳನ್ನು ಹಿಂದಿಟ್ಟುಕೊಂಡು ಹೋರಾಡುತ್ತಿರುವ ವೀರನನ್ನು ಎದುರಿಸಿ ನಿಂತ ಕುದುರೆಯೇರಿದ ವೀರನೊಂದಿಗೆ ಇನ್ನೂ ನಾಲ್ವರು ವೀರರಿದ್ದಾರೆ. ಮೂರನೆಯ ಪಟ್ಟಿಕೆಯಲ್ಲಿ ಮೂರು ಸಾಲುಗಳಲ್ಲಿ ಶಾಸನವಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ಎಡಬಲಗಳಲ್ಲಿ ಇಬ್ಬಿಬ್ಬರು ಅಪ್ಸರೆಯರಿದ್ದು

ಅವರ ಮೇಲೆ ಕೈಹಾಕಿ ವೀರ ಸ್ವರ್ಗಕ್ಕೆ ಹಾರಿಹೋಗುತ್ತಿದ್ದಾನೆ. ಐದನೆಯ ಪಟ್ಟಿಕೆಯಲ್ಲಿಯೂ ಮೂರು ಸಾಲಿನ ಶಾಸನವಿದ್ದು ತ್ರುಟಿತಗೊಂಡಿದೆ. ಆರನೆಯ ಪಟ್ಟಿಕೆಯಲ್ಲಿ ದೇವಲೋಕದಲ್ಲಿ ಇಬ್ಬಿಬ್ಬರು ಅಪ್ಸರೆಯರೊಂದಿಗೆ ಕುಳಿತ ವೀರನಿದ್ದು, ಅದರ ಮೇಲೆ ಮಂಟಪದ ಮಧ್ಯೆ ಶಿವಲಿಂಗವಿದೆ. ಪೂರ್ಣ ಮೇಲೆ ಕುಂಭವಿದೆ.

ಶಾಸನದಲ್ಲಿ ಮಿತಿಯ ಉಲ್ಲೇಖವಿರದಿದ್ದರೂ ರಾಷ್ಟ್ರಕೂಟ ಚಕ್ರವರ್ತಿ ಕನ್ನರದೇವನನ್ನು ಹೆಸರಿಸಲಾಗಿದೆ. ಈ ಹೆಸರು ಮೂರೂ ಜನ ಕೃಷ್ಣರ ಪರ್ಯಾಯನಾಮವಾದುದರಿಂದ ಯಾವ ಕೃಷ್ಣನೆಂಬುದು ಸ್ಪಷ್ಟವಾಗುವುದಿಲ್ಲ. ಕಾರಣ ಕಾಲವನ್ನೂ ಗುರುತಿಸಲಾಗುವುದಿಲ್ಲ. ಲಿಪಿಸಾಮ್ಯ ಮತ್ತು ಶಿಲ್ಪಸಾದೃಶ್ಯದಿಂದಾಗಿ ಸು. ೧೦ನೆಯ ಶತಮಾನದ ಶಾಸನವೆಂದು ಗುರುತಿಸಬಹುದಾಗಿದೆ.

ಬಪ್ಪುವನದಳಿ ವಿಟ್ಟಯ್ಯ ಎಂಬ ವೀರನೊಬ್ಬ ಮಡಿದಾಗ, ಆತನ ಹೆಂಡತಿ ಗೊಜ್ಜಬೆ ಈ ಸ್ಮಾರಕ ಕಲ್ಲನ್ನು ನಿಲ್ಲಿಸಿದುದನ್ನು ಶಾಸನ ತಿಳಿಸುತ್ತದೆ. ಪೂರ್ಣಪಾಠವಿಂತಿದೆ-

ಮೇಲಿನ ಸ್ತರ

೧ ಸ್ವಸ್ತಿ ಶ್ರೀ ಕನ್ನರದೇವಂ ಪ್ರಿಥುವೀರಜ್ಯಂಗೆಯ್ಯೆ ಬಪ್ಪುವನದಳಿ
೨ ವಿಟ್ಟಯ್ಯ ಪೆರ್ಬ್ಬರುಗೆಯ್ಯೆ ಅಮುಸೆವಳ್ಳಿಯರ ಗೊಸಸಿ ಸು.
೩ ಗೊಸಶಿ ಜಕ್ಕಯ್ಯ . . . . . . . . . . ಕೆಳಸ್ತರ
೪ ಆತನ ಪೆಣ್ಣತಿ ಗೊಜ್ಜಬೆ ನಿಜಿಸಿದದು ಕಲ್ಲು ಮಂಗಳ ॥
೫ ಜಿತೇನ ಲಭ್ಯತೇ ಲಕ್ಷ್ಮಿ ಧರೆ ಮೃತೇ ಲಭ್ಯತೇ ನಭ ಸುರಾಂಗನೆ
೬ ಕ್ಷಣ ವಿಧ್ವಂಸಿನಿ ಕಾ ಚಿಂತ್ರಾ ಮರಣೇ ರಣೇ

೨. ಬನ್ನಿಕಲ್ಲಿನಲ್ಲಿಯ ವೀರಗಲ್ಲು ೨

೫೩'' ಉದ್ದ ೨೬'' ಅಗಲದ ಕರಿಕಲ್ಲಿನಲ್ಲಿ ಕೆತ್ತಲಾದ ಸುಂದರ ವೀರಗಲ್ಲಿದು. ಬಹುಶಃ ಶಾಸನದ ಪ್ರಾರಂಭದ ಭಾಗವಿರುವ ಮೇಲ್ಭಾಗ ಒಡೆದು, ಕಳೆದು ಹೋಗಿದೆ. ಬಲ ಮೂಲೆಯಲ್ಲಿ 'ಮ' ಅಕ್ಷರ ಮಾತ್ರ ಕಾಣಿಸುತ್ತದೆ. ಪೂರ್ಣ ಕೆಳಗಿನ ಪಟ್ಟಿಕೆಯಲ್ಲಿ ನೇಗಿಲಿದೆ. ಎರಡನೆಯ ಪಟ್ಟಿಕೆಯಲ್ಲಿ ಮೂವರು ವೀರರಿದ್ದು, ಒಬ್ಬ ವೀರನ ಕಾಲ ಕೆಳಗೆ ವ್ಯಕ್ತಿಯೊಬ್ಬ ಸತ್ತಿದ್ದಾನೆ. ಮೂರನೆಯ ಪಟ್ಟಿಕೆಯಲ್ಲಿ ೨ ಸಾಲುಗಳ ಶಾಸನವಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ಇಬ್ಬರು ವೀರರೊಂದಿಗೆ ಮೂವರು ಅಪ್ಸರೆಯರಿದ್ದಾರೆ. ಇವರೆಲ್ಲರೂ ಒಬ್ಬರ ಹೆಗಲ ಮೇಲೆ ಇನ್ನೊಬ್ಬರು ಕೈಹಾಕಿದ್ದಾರೆ. ಐದನೆಯ ಪಟ್ಟಿಕೆಯಲ್ಲಿ ಮತ್ತೆ ಎರಡು ಸಾಲುಗಳ ಶಾಸನವಿದೆ. ಪೂರ್ಣ ಮೇಲ್ಭಾಗದಲ್ಲಿ ಎಡ-ಬಲಗಳಲ್ಲಿ ಚಾಮರಧಾರಿ ಸ್ತ್ರೀಯರಿದ್ದು ಮಧ್ಯದಲ್ಲಿ ಇಬ್ಬರು ವೀರರಿದ್ದಾರೆ.

ಶಾಸನದಲ್ಲಿ ಅರಸನಾಗಲಿ, ಮಿತಿಯಾಗಲಿ ಉಲ್ಲೇಖಿಸಲಾಗಿಲ್ಲ. ಅಥವಾ ಒಡೆದು ಹೋದ ಮೇಲ್ಭಾಗದಲ್ಲಿ ಆ ವಿಷಯ ಇದ್ದಿರಬಹುದು. ಲಿಪಿಸಾದೃಶ್ಯದಿಂದಾಗಿ ರಾಷ್ಟ್ರಕೂಟ ಅರಸರ ಕಾಲದ ಸುಮಾರು ೧೦ನೆಯ ಶತಮಾನದ ಶಾಸನವೆಂದು ಹೇಳಬಹುದಾಗಿದೆ. ಮನ್ನಗೆಯ ತುಱುಗೋಳ್ ಕದನದಲ್ಲಿ ಕಮನೆತಿಗಳ ಪರಸುರಾಮಮ್ಮನೆಂಬವನು ಊರಳಿವಿನಲ್ಲಿ ಸತ್ತು ಸ್ವರ್ಗ ಸೇರಿದನಂತೆ. ಈ ವೀರಗಲ್ಲನ್ನು ಆತನ ನೆನಪಿಗಾಗಿ ಎಱುಗ ಎಂಬುವವ ನಿಲ್ಲಿಸಿದನಂತೆ. ಇದನ್ನು ಕೊಮೋಜ ಎಂಬುವವನು ಕೆತ್ತಿದನಂತೆ. ಶಾಸನದ ಪಾಠ ಕೆಳಗಿನಂತಿದೆ.

೧ . . . . . . . . . . . . . . . . . . . ಮ
೨ ನ್ನಗೆಯಾ ಮೇಲೆಟ್ಟು ಗೋ ಕೊಣ್ಡನ್ನು ಕಮನೆತಿಗಳ ಪರಸುರಾಮಮ್ಮ
೩ ಊರಟಿವಿನೊಳ್ಸತ್ತು ಸಗ್ಗಾಲಯಕ್ಕೇಜಿದನ್ ಇದಾನ್ಕೊ ಮೋಜ
೪ ಯ್ಯಂ ಕೈಯ್ದೊನ್ ಇದ[೦*] ನಿಱಿಸಿದೋ [೦*]ಎಱುಗನ್

೩. ಬನ್ನಿಕಲ್ಲಿನಲ್ಲಿಯ ವೀರಗಲ್ಲು ೩

೬೬'' ಉದ್ದ ೨೪'' ಅಗಲದ ಕರಿಕಲ್ಲಿನಲ್ಲಿ ಕೆತ್ತಲಾದ ವೀರಗಲ್ಲಿದು. ಶಾಸನದ ಪೂರ್ಣ ಮೇಲ್ಭಾಗದಲ್ಲಿ ಶಾಸನವಿದ್ದು, ನಂತರದ ಪಟ್ಟಿಕೆಯಲ್ಲಿ ವೀರನೊಬ್ಬ ಕುಳಿತಿದ್ದು ಎಡ-ಬಲಗಳಲ್ಲಿ ಚಾಮರಧಾರಿ ಅಪ್ಸರೆಯರಿದ್ದಾರೆ. ಮೂರನೆಯ ಪಟ್ಟಿಕೆಯಲ್ಲಿ ಶಾಸನವಿದ್ದು, ನಾಲ್ಕನೆಯ ಪಟ್ಟಿಕೆಯಲ್ಲಿ ವೀರನ ಕೈಹಿಡಿದ ಇಬ್ಬರು ಚಾಮರಧಾರಿ ಅಪ್ಸರೆಯರಿದ್ದಾರೆ. ನಂತರದ ಪಟ್ಟಿಕೆಯಲ್ಲಿ ಮತ್ತೆ ಶಾಸನವಿದ್ದು ಕೆಳಗೆ ನಾಲ್ಕು ಜನ ವೀರರು ಹೋರಾಡುತ್ತಿರುವ ಸನ್ನಿವೇಶದ ಚಿತ್ರಣವಿದೆ. ಒಬ್ಬ ವೀರನ ಕಾಲಕೆಳಗೆ ವ್ಯಕ್ತಿಯೊಬ್ಬ ಸತ್ತು ಬಿದ್ದಿದ್ದಾನೆ.

ಶಾಸನದಲ್ಲಿ ಮಿತಿಯ ಉಲ್ಲೇಖವಿಲ್ಲ. ಆದರೆ ಕನ್ನರ ಅಕಾಲವರ್ಷ ಎಂಬ ರಾಷ್ಟ್ರಕೂಟ ದೊರೆಯನ್ನು ಹೆಸರಿಸಿ, ಕುನ್ದವರ್ಮ ಎಂಬ ನಾಡ ಅರಸನನ್ನು ಉಲ್ಲೇಖಿಸುತ್ತದೆ. ಇಲ್ಲಿ ಕನ್ನರನೆಂಬ ಪರ್ಯಾಯನಾಮ ಮತ್ತು ಅಕಾಲವರ್ಷನೆಂಬ ಬಿರುದುಗಳು ರಾಷ್ಟ್ರಕೂಟ ಚಕ್ರವರ್ತಿಗಳಾದ ಮೂರೂ ಜನ ಕೃಷ್ಣರಿಗೆ ಅನ್ವಯಿಸುತ್ತವೆ. ಕಾರಣ ಚಲ್ಲಕೇತನ ಮನೆತನದ ಮಂಡಲೇಶ್ವರ ಕುನ್ದವರ್ಮ ಅಥವಾ ಕುಂದಟೆ ಕ್ರಿ. ಶ.೮೬೪ ರಿಂದ ೮೯೫ ರವರೆಗೆ ಆಳುತ್ತಿದ್ದನೆಂದು ತಿಳಿದುಬರುವುದರಿಂದ, ಈತ ಅಮೋಘವರ್ಷ ನೃಪತುಂಗನ ಕೈಕೆಳಗೆ ಯುದ್ಧದಲ್ಲಿ ಪರಿಶ್ರಮ ವಹಿಸಿದವನೂ ಮತ್ತು ನೃಪತುಂಗನ ಮಗ ಎರಡನೆಯ ಕೃಷ್ಣನ ಕಾಲದಲ್ಲಿಯೂ ರಾಷ್ಟ್ರಕೂಟ ಮನೆತನದ ಸೇವೆಯನ್ನು ನಿಷ್ಠೆಯಿಂದ, ಶ್ರದ್ಧೆಯಿಂದ ಮಾಡಿದನೆಂಬುದನ್ನು ಇತಿಹಾಸ ತಿಳಿಸುತ್ತದೆ. ಹೀಗಾಗಿ ಈ ಶಾಸನದ ಕಾಲವನ್ನು ಕ್ರಿ. ಶ. ೮೮೦ರಿಂದ ೮೯೫ರ ಮಧ್ಯಾವಧಿ ಎಂದು ಹೇಳಬಹುದಾಗಿದೆ.

**ಶಾಸನದ ಪೂರ್ಣ ಪಾಠ**

**ಮೊದಲ ಸ್ತರ**

೧ [ಸ್ವ*]ಸ್ತಿ ಶ್ರೀ ಕನ್ನರ ಅ
೨ ಕಾಲ ವರ್ಷ
೩ [ಪ್ರಿ*] ಥಿವೀ ರಾಜ್ಯಂಗೆಯ್ಯೆ
೪ ಕುನ್ನವರ್ಮ್ಮ ನಾಡಾಳೆ

**ಎರಡನೆಯ ಸ್ತರ**

೫ ಸಿರಿಗಾಮುಣ್ಣ ಊರಾ ತಱನಾಳೆ ಧಿರಕಿ
೬ ಯಾಗರ ಮನ್ನಗೆಯ ನಿಱಿವಲ್ಲಿ . ಬಿಟ್ಟ
೭ ಆರಿದನ್

**ಮೂರನೆಯ ಸ್ತರ**

೮. ಪರಿದೆಯ್ದು ಸತ್ತು ಸಗ್ಗಲಯಕ್ಕೇಱಿದಾ ಆಟಣದಿ
೯. ಮಾಡಿದ ಪಟ್ಟಿಕಲ್ಲ ನಿಱಿಸಿದಾನ್

ಶಾಸನದ ಕಲ್ಲಿನಲ್ಲಿ ಅಡ್ಡ ಮೇಲಿಂದ ಕೆಳಕ್ಕೆ ಬರೆದದ್ದು:

೧ .
೨ ವ
೩ ರ
೪ ಅ
೫ ರೆ
೬ .
೭ ನ್ನಿ
೮ ಯಾ
೯ ನಾ

**ಪಂಚಾಯತ್ ಕಛೇರಿಯ ಎದುರಿಗೆ ನಿಲ್ಲಿಸಿದ ಕಲ್ಲು ***

೩೬'' ಅಗಲ ೬೦'' ಎತ್ತರದ ಚಿತ್ರಗಳಿಲ್ಲದ ಕರಿಕಲ್ಲು ಇದಾಗಿದ್ದು, ಶಾಸನವನ್ನು ನೇರವಾಗಿ ಕೆತ್ತಲಾಗಿದೆ. ಮಿತಿಯ ಉಲ್ಲೇಖವಿಲ್ಲದ ಈ ಶಾಸನವು ಅಕಾಲವರ್ಷ ಕನ್ನರನನ್ನು ಹೆಸರಿಸುತ್ತಿದ್ದು, ಚಲ್ಲಕೇತನ ಮನೆತನದ ಲೋಕಟೆ ಮತ್ತು ಬಜ್ಕೇಯರನ್ನೂ ಉಲ್ಲೇಖಿಸುವುದರಿಂದ ಇಲ್ಲಿ ಉಲ್ಲೇಖಿತನಾದ ಅಕಾಲವರ್ಷ ಕನ್ನರ ರಾಷ್ಟ್ರಕೂಟ ಎರಡನೆಯ ಕೃಷ್ಣನೆಂದು, ಶಾಸನದ ಕಾಲವನ್ನು ಕ್ರಿ. ಶ. ಸು. ೯೦೦ ಎಂದು ಊಹಿಸಬಹುದಾಗಿದೆ ಇದಕ್ಕೆ ಆಧಾರವೆಂದರೆ ಎರಡನೆಯ ಕೃಷ್ಣ ಕ್ರಿ. ಶ. ೮೮೦ ರಿಂದ ೯೧೪ರ ವರೆಗೆ ಆಳಿರುವುದು ಮತ್ತು ಲೋಕಟೆ ಅಥವಾ ಲೋಕಾದಿತ್ಯ ಕ್ರಿ. ಶ. ೮೯೫ ರಿಂದ ೯೪೬ರ ವರೆಗೆ ಬನವಾಸಿ ಪನ್ನಿರ್ಚ್ಛಾಸಿರದ ಈ ಭಾಗವನ್ನು ಆಳಿದುದು ಇತರ ಶಾಸನಗಳಿಂದ ತಿಳಿದು ಬರುವುದು.

ಶಾಸನವು ಬನವಾಸಿ ಪನ್ನಿರ್ಚ್ಛಾಸಿರ, ಎಡೆವೊಲಲು ಮತ್ತು ಶಾಸನ ದೊರೆತ ಊರು ಮನ್ನಾಗೆ ಇವುಗಳನ್ನು ಹೆಸರಿಸುತ್ತದೆ. ಚಕ್ರವರ್ತಿ ಮತ್ತು ಮಂಡಲೇಶ್ವರರನ್ನಲ್ಲದೆ ಗೋಯಿನ್ದ, ಜನ್ನಮ್ಮ, ಚಾಮುಣ್ಡ, ಪೊಮ್ಮಮ್ಮು, ಮನ್ನಾಗೆಯ ಮಾಳೋಜ, ಗೋವಣ್ಣ ಇವರನ್ನೂ ಉಲ್ಲೇಖಿಸುತ್ತ ಭೂದತ್ತಿಯೊಂದನ್ನು ತಿಳಿಸುತ್ತದೆ.

ಶಾಸನ ಅಪೂರ್ಣಗೊಂಡಿರುವುದರಿಂದ ಮತ್ತು ಅಸ್ಪಷ್ಟವಿರುವುದರಿಂದ ಪೂರ್ಣ ವಿವರಗಳು ಲಭ್ಯವಾಗುವುದಿಲ್ಲ ಶಾಸನದ ಪೂರ್ಣಪಾಠ ಕೆಳಗಿನಂತಿದೆ-

೧ ಸ್ವಸ್ತಿ ಶ್ರೀ ಕನ್ನರನಕಾಲವರ್ಷ . . . .
೨ ಜಾಧಿರಾಜ ಪರಮೇಶ್ವರ ಭಟ್ಟಾ . . . .
೩ ಪ್ರಿಥಿವೀ ರಾಜ್ಯಂಗೆಯೆ ಲೋ[ಕಟೆ ಬ*]
೪ ನವಾಸಿ ಪನ್ನಿರ್ಚ್ಛಾಸಿರಮನಾಳೆ
೫ ಗೋಯಿನ್ದಂ ಮನ್ನಾಗೆಯನಾಳೆ
೬ ಬಜ್ಕೇಯನೆಡೆವೊಲಲ್ನಾಳ್ಕೆಗೆಯ್ಯು .
೭ ಯಾ ಜನ್ನಮ್ಮನುಂ ಚಾಮುಣ್ಡನುಂ ಪೊಮ್ಮಮ್ಮು
೮ ಮನ್ನಾಗೆಯ ಮಾಳೋಜನಕ್ಕೆ ಆರು ಜಾವಿಕಂ
೯ । ಗೋವಣ್ಣನುಂ। ಯ್ಯೇಳು ಮತ್ತಲ್ಕೆಯ್ಯಂ ಪೊಲೆ
೧೦ [ಗೊ*]ಟ್ಟಂ ಇದಂ ಕಾದೊಂ ನೂಱು ಕವಿಲೆಯಂ ಕೊ [ಟ್ಟಪ್ಪು*]
೧೧ ಲಂ ಇದಂನಟಿದೊನ್ ಸಳಾ ಅಂ ಕೆಟ್ಟ..
೧೨ ನ್ದ ಪಾತಕನಕುಂ ತಮ್ಮುತ್ತಯ್ಯುವರು*

( * ಇಲ್ಲಿಗೆ ಶಾಸನ ನಿಂತು ಹೋಗುತ್ತದೆ. )

ಹಳೆಯ ಚಾವಡಿಯ ಎದುರಿಗೆ ಬಿದ್ದ ತುಣುಕು ಕಲ್ಲು ೧೨'' ಅಗಲ ೧೦'' ಎತ್ತರದ ಕರಿಕಲ್ಲಿನ ತುಣುಕು ಇದಾಗಿದ್ದು ಸೂರ್ಯ - ಚಂದ್ರ, ಆಕಳು-ಕರುಗಳ ಉಬ್ಬುಶಿಲ್ಪಗಳಿವೆ. ಕೆಳಗೆ ಎಡಮೂಲೆಯಲ್ಲಿ ಶಿವಲಿಂಗವಿದ್ದು ಕೆಳಗೆ ಶಾಸನವಿದ್ದು ಒಡೆದು ಹೋಗಿದೆ.

ರಾಷ್ಟ್ರಕೂಟ ಸ್ವರ್ಣ್ನ ವರಿಷನನ್ನು ಹೆಸರಿಸುತ್ತಿದ್ದು ಈ ಬಿರುದಿರುವ ನಾಲ್ಕನೆಯ ಗೋವಿಂದನ ಕಾಲದ್ದಾಗಿರಬಹುದೆಂದು, ಆತನ ಆಳ್ವಿಕೆಯ ಅವಧಿ ಕ್ರಿ. ಶ. ೯೩೦ ರಿಂದ ೯೩೬ರ ವರೆಗಿನ ಕಾಲದಲ್ಲಿ ರಚಿತವಾಗಿರಬಹುದೆಂದು ಊಹಿಸಬಹುದಾಗಿದೆ. ಲಿಪಿ ಸ್ವರೂಪದ ದೃಷ್ಟಿಯಿಂದ ಸು. ೧೦ನೆಯ ಶತಮಾನದ ಅಕ್ಷರಗಳೆಂದು ಹೇಳಬಹುದಾಗಿದೆ.

**ಶಾಸನದ ಪೂರ್ಣಪಾಠ**

೧. [ಸ್ವ]ಸ್ತಿ ಸ್ವರ್ಣ್ನ
೨. × × × ವರಿಷ

ಈ ಶಾಸನಗಳಲ್ಲದೆ ಇನ್ನೂ ೧೪ ಶಾಸನಗಳು ಮಂತಗಿಯಲ್ಲಿ ದೊರೆಯುತ್ತಿದ್ದು, ಪರಿವೀಕ್ಷಣೆ ಇನ್ನೂ ವ್ಯಾಪಕವಾಗಿ ಆ ಭಾಗದಲ್ಲಿ ನಡೆಸಬೇಕಾದ ಅವಶ್ಯಕತೆ ಇದೆಯೆಂದು ಸಮೀಕ್ಷೆ ಒತ್ತಿ ಹೇಳುತ್ತದೆ.

---

* ಈ ಶಾಸನವನ್ನು ಇತಿಹಾಸದರ್ಶನ ೧೩ರಲ್ಲಿ ಪ್ರಕಟಿಸಿದ್ದು ತಿದ್ದುಪಡಿ ಹಾಕಿದೆ.

ಜಗದೀಶ ಎಂ. ಎಚ್. ಅಗಸಿಬಾಗಲವರ *

# ಜೋರಡಿಯ ಎರಡು ಹೊಸ ಶಾಸನಗಳು



ಶಿವಮೊಗ್ಗ - ಸಾಗರ ರಸ್ತೆಯಲ್ಲಿ ೨೭ ಕಿ. ಮೀ. ದೂರದಲ್ಲಿ ಕುಮದ್ವತಿ ನದಿ ಬಲದಂಡೆಯ ಮೇಲೆ ಜೋರಡಿ ಗ್ರಾಮ ಇದೆ.

ಈ ಜೋರಡಿಯಲ್ಲಿ ನದಿಯ ಕಡೆಗಿನ ಪ್ರದೇಶದಲ್ಲಿ ಕೋಟೆಯ ಕಂದಕ ಮತ್ತು ದಿನ್ನೆಗಳು ಕಂಡು ಬರುತ್ತವೆ. ಇಲ್ಲಿನ ಕೆಳದಿ ಅರಸರ ಕಾಲದ ವೀರಭದ್ರ ದೇವಾಲಯದ ಮುಂಭಾಗದಲ್ಲಿ ಒಂದು ಗೋಸಾಸ ಕಲ್ಲಿದೆ. ಗೋಸಾಸ ಕಲ್ಲಿನ ಮೇಲೆ ಯಾವುದೇ ಚಿತ್ರ ಸಂಕೇತ ಇರುವುದಿಲ್ಲ. ಭೌಗೋಲಿಕವಾಗಿ ಗೋಸಾಸಗಳು ಪ್ರಾಚೀನ ಬೆಳ್ವೊಲ - ೩೦೦, ಪುಲಿಗೆರೆ - ೩೦೦ ಮತ್ತು ಬನವಾಸಿ - ೧೨೦೦೦ ನಾಡುಗಳಿಗೆ ಸಂಬಂಧಿಸಿದೆಯೆಂದೂ ಮತ್ತು ಇವು ೮-೧೧ನೇ ಶತಮಾನಗಳಲ್ಲಿ ಕಂಡುಬರುತ್ತದೆ ಎಂದು ಎಂ. ಎಂ. ಕಲಬುರ್ಗಿ ಅಭಿಪ್ರಾಯಪಟ್ಟಿದ್ದಾರೆ. *[1] ಶಿವಮೊಗ್ಗ ತಾಲೂಕಿನಲ್ಲಿ ಪ್ರಥಮವಾಗಿ ಗೋಸಾಸ ಕಲ್ಲು ಕಂಡುಬಂದಿದೆ. ಜೋರಡಿಯಲ್ಲಿ ಗೋವುಗಳನ್ನು ದಾನ ನೀಡಿರುವುದನ್ನು ಈ ಕಲ್ಲು ಸೂಚಿಸುತ್ತದೆ.

ಜೋರಡಿಯ ಕೋಟೆ ಆವರಣದಲ್ಲಿ ಎರಡು ಹೊಸ ಶಾಸನಗಳು ಕಂಡುಬಂದಿದ್ದು, ಒಂದು ಶಾಸನವು ೯ ಸಾಲುಗಳನ್ನೊಳಗೊಂಡಿದೆ ಮತ್ತು ಇನ್ನೊಂದು ಶಾಸನವು ವೀರಗಲ್ಲು ಆಗಿದ್ದು ಮೊದಲ ಎರಡು ಪಟ್ಟಿಗಳಲ್ಲಿ ಶಾಸನ ಕಂಡರಿಸಲ್ಪಟ್ಟಿದೆ.

ಮೊದಲ ಶಾಸನ ಚಕ್ರವರ್ತಿಯ ಅನೇಕ ಪ್ರಶಸ್ತಿಗಳನ್ನು ಉಲ್ಲೇಖಿಸುತ್ತಿದೆ. ಮೃಗೇಂದ್ರ ಲಾಂಛನ, ಮೃಗಧ್ವಜ, ನುತ್ತರ ಮಧುರ ಈ ಪ್ರಶಸ್ತಿಗಳು ಹೊಂಬುಚ ಸಾಂತರರ ಶಾಸನಗಳಲ್ಲಿ ಕಂಡುಬರುತ್ತವೆ. *[2] ಈ ಪ್ರಶಸ್ತಿಗಳ ಸಾಲಿಗೆ *ಪರಚಕ್ರ, ಭೀಮನ ಚಳಿತ, ಮೊರವೊಗೆ ಕಾವಂ, ನಯಕೆ ನಲ್ಲಾತ*, ಪ್ರಶಸ್ತಿಗಳು ಸೇರಿಸಲ್ಪಟ್ಟಿದ್ದು ಚಕ್ರವರ್ತಿಯ ಹೆಸರು ಗೊತ್ತಾಗುವುದಿಲ್ಲ. ಕೊನೆಯ ಸಾಲಿನಲ್ಲಿ ವ್ಯಕ್ತಿಯೊಬ್ಬ ಅಳಿದ ಉಲ್ಲೇಖವಿದೆ. ಹೊಂಬುಚದ ಸಾಂತರರ ಪ್ರಶಸ್ತಿಗಳಿಗೆ ಸಾಮ್ಯವಿರುವುದರಿಂದ ಈ ಶಾಸನವು ಹೊಂಬುಚದ ಸಾಂತರರದ್ದಾಗಿರಬಹುದೆಂದು ಸದ್ಯಕ್ಕೆ ನಿರ್ಣಯಿಸಬಹುದು.

ವೀರಗಲ್ಲುಗಳನ್ನೊಗೊಂಡ ಶಾಸನವು ಎರಡು ತುಂಡಾಗಿದ್ದು ಮೊದಲನೆಯ ಸಣ್ಣ ತುಂಡಿನ ಪಟ್ಟಿಯಲ್ಲಿನ ಸಾಲುಗಳು ಅರ್ಧಭಾಗ ಒಡೆದು ಹೋಗಿವೆ. ಎರಡನೆಯ ದೊಡ್ಡ ಕಲ್ಲಿನ ಮಧ್ಯದ ಪಟ್ಟಿಯಲ್ಲಿ ಸಾಲುಗಳಿದ್ದು ಶಿಲ್ಪದಲ್ಲಿನ ಎರಡನೆಯ ಪಟ್ಟಿಯಲ್ಲಿ ಸ್ತ್ರೀಯರು ಹೋರಾಡುತ್ತಿರುವ ದೃಶ್ಯವಿದೆ. ಇದರ ಕೆಳಗಿನ ಭಾಗ ಮಣ್ಣಿನಲ್ಲಿ ಹೂತುಹೋಗಿದೆ.

ಈ ಶಾಸನವನ್ನು ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಹೊರಡಿಸಲಾಗಿದ್ದು, ಅನಾದಿ ಅಗ್ರಹಾರ ಸೊರಡೆಯ ಮೇಲೆ ದಾಳಿಯೊಂದು (ಘಟನೆ ಅಸ್ಪಷ್ಟವಾಗಿದೆ) ನಡೆದಾಗ ಬಿಲಡಳಾರ ಮತ್ತು ಬೋಪದಳಾರ ಎಂಬ ವೀರರು ದಾಳಿಕಾರರನ್ನು ಆ ಮಾರ್ಗದಲ್ಲೆ ಕೊಲ್ಲುತ್ತಾರೆ. ಸೊರಡೆಯ ಸಾಸಿರ ಮಹಾಜನರು ಈ ಕಾರ್ಯವನ್ನು ಮೆಚ್ಚಿ ಇಬ್ಬರಿಗೂ ಗದ್ದೆ ದಾನ, ಒಕ್ಕಲುದೆರೆ, ಮನೆದೆರೆ ಇಷ್ಟು ಕೊಡುಗೆಯನ್ನು ಬಿಟ್ಟುಕೊಡುತ್ತಾರೆ. ಶಾಸನದ ಇನ್ನೊಂದು ಘಟನೆಯಲ್ಲಿ ಕಡಂಬರ ತೈಲಪ ಅಗ್ರಹಾರ ಸೊರಡೆಯ

---

* ನಂ. ೬೬, ಮೊದಲನೆ ಅಡ್ಡ ರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ - ೫೭೭ ೨೦೧

ಮೇಲೆ ದಾಳಿಯಿಟ್ಟು ಹೆಣ್ಣುಮಕ್ಕಳ ಮಾನಭಂಗಕ್ಕೆ ಪ್ರಯತ್ನಿಸಿ ಹಸುಗಳನ್ನು ಕೊಂಡ್ಯೊಯ್ಯಲು ಬೋಪದಳಾರ ಕಾದಿ ಸುರಲೋಕ ಪ್ರಾಪ್ತನಾದಾಗ, ಬಿಲಡಳಾರ ಆತನ ನೆನಪಿಗಾಗಿ ಕಲ್ಲನಿರಿಸಿದ. ಇದನ್ನು ಕಂಡರಿಸಿದ ವ್ಯಕ್ತಿ ಮಾಲೋಜ.

ಹಾನುಗಲ್ಲು ಕದಂಬರ ವಂಶಕ್ಕೆ ಸೇರಿದ ತೈಲಪ, ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿದ್ದು, ಹಾನಗಲ್ಲು ಮತ್ತು ಬನವಾಸಿ ದೇಶಗಳನ್ನು ಉಭಯ ಸಾಮ್ಯದಿಂದ ಆಳುತ್ತಿರುವ ಉಲ್ಲೇಖ ಹಾನಗಲ್ಲು ಮತ್ತು ತಿಳವಳ್ಳಿ ಶಾಸನಗಳಲ್ಲಿ ಕಂಡುಬರುತ್ತದೆ.*[೩] ಹಿರೇಕೆರೂರು ತಾಲೂಕು ಮಡಲೂರಿನ ಅದೇ. ತೇದಿಯ ಶಾಸನ ಕೂಡಾ ತೈಲಪವನ್ನು ಉಲ್ಲೇಖಿಸುತ್ತದೆ.*[೪] ತೈಲಪನು ಕ್ರಿ. ಶ. ೧೧೦೮-೯ರ ಸುಮಾರಿಗೆ ಬನವಾಸಿ ಮತ್ತು ಹಾನಗಲ್ಲು ಎರಡನ್ನೂ ಪಾರ್ಥಿಪುರ ನೆಲೆವೀಡಿನಲ್ಲಿ ಆಳುತ್ತಿದ್ದನೆಂದು ಹೇಳಲಾಗಿದೆ.*[೫] ಈತನು ಕ್ರಿ. ಶ. ೧೧೧೮ರ ಬಾಳಂಬೀಡು ಮತ್ತು ಕ್ರಿ. ಶ. ೧೧೨೯ ತಿಳವಳ್ಳಿ ಶಾಸನಗಳಲ್ಲಿ ಉಲ್ಲೇಖಿತನಾಗಿದ್ದು ಸುಮಾರು ಕ್ರಿ. ಶ. ೧೧೨೯ರ ವರೆಗೆ ಆಳುತ್ತಿರಬಹುದೆಂದು ಊಹಿಸಲಾಗಿದೆ.

ಶಿಕಾರಿಪುರ . ಶಾಸನವೊಂದು ಕದಂಬರ ತೈಲಪನ ಮಾಂಡಲೀಕ ಮಸಣಿಯನ್ನು ಉಲ್ಲೇಖಿಸುತ್ತದೆ.*[೬] ಈ ಮಸಣಿಯು ಹೊಂಬುಚದ ತ್ರಿಭುವನಮಲ್ಲ ಷೆರ್ಮಡಿ ಸಾಂತರರ ಪಡವಲೆ ೭೦ರ ಮನ್ನೆಯ ಗೋಪರಸ ಮತ್ತು ಒಡಮರಸ ಇವರ ಮೇಲೆ ಎರಗಿ ಗೋಪರಸ ಕೊಲ್ಲಲ್ಪಡುತ್ತಾನೆ. ಒಡಮರಸ ಅರಕೆರೆಯಲ್ಲಿ ಮತ್ತು ಅಲವಳ್ಳಿಯಲ್ಲಿ ಗದ್ದೆ ದಾನ ಬಿಟ್ಟಿರುವುದನ್ನು ಕ್ರಿ. ಶ. ೧೧೧೫ ರ ಶಿವಮೊಗ್ಗ ತಾಲೂಕು ಅರಕೆರೆಯ ಶಾಸನ ತಿಳಿಸುತ್ತದೆ.*[೭] ಕದಂಬರ ತೈಲಪನ ಕ್ರಿ. ಶ. ೧೧೧೯ರ ಹಾನಗಲ್ಲು ಶಾಸನದಲ್ಲಿ ಬಿಲ್ಲೇಸ್ವರ ದೇವರ ಖಂಡಸ್ಫುಟಿತ ಜೀರ್ಣೋದ್ಧಾರ ಮತ್ತು ಭೂದಾನ ಮಾಡಿದ ಉಲ್ಲೇಖವಿದೆ.*[೮]

ಕ್ರಿ. ಶ. ೧೧೨೩. ಶಾಸನದಲ್ಲಿ ವಿಷ್ಣುವರ್ಧನನು ಹೊಂಬುಚಕ್ಕೆ ಮುತ್ತಿಗೆ ಹಾಕಿ ಜಗದೇವನನ್ನು ಸೋಲಿಸಿದ ಮತ್ತು ಜಗದೇವ ಸಾಗರ ತಾಲೂಕಿನ ಬಳಿಯ ಸೇತುವಿನಿಂದ ಆಳುತ್ತಿದ್ದನೆಂದು ತಿಳಿದು ಬರುತ್ತದೆ.*[೯]

*ಮೇಲಿನ ಶಾಸನಗಳನ್ನು ಅವಲೋಕಿಸಿದರೆ ಕ್ರಿ. ಶ. ೧೧೧೯-೧೧೨೩ ಈ ಅವಧಿಯಲ್ಲಿ ಹೊಂಬುಚದ ಸಾಂತರರ ಅವನತಿ ಪ್ರಾರಂಭವಾಗಿರಬಹುದೆಂದು, ಕದಂಬರ ತೈಲಪ ಕ್ರಿ. ಶ. ೧೧೧೫ರಲ್ಲಿ ಸಾಂತರರ ಪ್ರಾಂತ್ಯದ ಮೇಲೆ ಆಕ್ರಮಣ ಶುರುಮಾಡಿದ್ದುದನ್ನು ಅರಕೆರೆಯ ಶಾಸನ ತಿಳಿಸುತ್ತದೆ. ಹೀಗಾಗಿ ಪ್ರಸ್ತುತ ಜೋರಡಿಯ ಕಾಳಗ ಕ್ರಿ. ಶ. ೧೧೧೫ಮತ್ತು ಕ್ರಿ. ಶ. ೧೧೧೯ರ ಅವಧಿಯಲ್ಲಿ ಆಗಿರಬೇಕು. ಜೋರಡಿಯ ಮೊದಲ ಶಾಸನ ಕೂಡಾ ಈ ಪ್ರದೇಶ ಸಾಂತರರ ಆಳ್ವಿಕೆಗೆ ಒಳಪಟ್ಟಿರುವುದನ್ನು ತಿಳಿಸುತ್ತದೆ.*

ಜೋರಡಿ ಸನಿಹದ ಸನ್ನಿವಾಸ ಮಲ್ಲಿಕಾರ್ಜುನ ದೇವಸ್ಥಾನದ ಬಾಗಿಲ ಬಳಿಯ ಜೈನ ನಿಷಧಿ ಅತಿ ತ್ರುಟಿತ ಶಾಸನವು ಜೋರಡಿಯ ಹೆಸರನ್ನು ಜೋರಡೆ ಎಂದು ತಿಳಿಸುತ್ತದೆ.*[೧೦] ಊರಿನ ಹೆಸರು **ಸೊರಡೆ > ಜೋರಡೆ > ಜೋರಡಿ** ಎಂದಾಗಿರುವುದು ಶಾಸನಗಳಿಂದ ತಿಳಿಯುತ್ತದೆ.

### *ಶಿವಮೊಗ್ಗ ತಾಲೂಕು ಜೋರಡಿ ಗ್ರಾಮ*

### ಶಾಸನಗಳು ದೊರೆತ ಸ್ಥಳ : ಕೋಟೆ ಆವರಣ

೧. **ಮೊದಲನೆಯ ಶಾಸನ :**

ಮಿತಿ : ಸುಮಾರು ೧೧ನೆ ಶತಮಾನ ಅರಸ :

**ಮೂಲಪಾಠ**

೧ . . . . . . . . . . . . . . . . . . . .
೨ ತಿಲಕ ಮೃಗೇಂದ್ರ ಲಾಂಚನ
೩ ಮೃಗಧ್ವಜ ನುತ್ತರ ಮಧುರ
೪ ಪರ ಚಕ್ರ ಭೀಮನಚಳಿತ ರಾಮೋ
೫ . ರ ಮಲ್ಲಂ ಮಜೆವೊಗೆ ಕಾವಂ . .
೬ ವಿಧಿ [ತ] ಕಂದಕಲ್ಲ . ನಯಕೆನಲ್ಲಾತ ಪ
೭ ಗೆಸ ನಾಳಿ ಶ್ರೀಮ . . ತ್ತರ ವೊ
೮ ದೆಗೆ ಬಿಟ್ಟಯ ನೆಟ್ಟಗೆ ಕೊಟೋಂ ಆ [ನೆ]
೯ ಯ ಕೈ . . ಯಳಿದ

೨. ಎರಡನೆಯ ಶಾಸನ :

ಮಿತಿ : ಸು. ಕ್ರಿ. ಶ. (೧೧೧೫-೧೧೧೯) ಅರಸ : ವಿಕ್ರಮಾದಿತ್ಯ ಚಾಳುಕ್ಯ

ಮೊದಲ ಪಟ್ಟಿ

೧ ................. ಪ್ರವರ್ಧಮಾನ ಚಂದ್ರಾರ್ಕ್ಕತಾರಂ
೨ ................. (ಶ್ರೀ ಮತ್)ಚಾಳುಕ್ಯ ವಿಕ್ರಮಾದಿ
೩ ................. ತಾ.ಣ ಜ
೪ ................. ಮಾಧಿ
೫ ಶೀಳ ಗುಣ ಸಂ
೬ ............... ಪನ್ನ ರಪ್ಪ ಶ್ರೀ

ಎರಡನೆಯ ಪಟ್ಟಿ

೧ ಮದ್ ಅನಾದಿ ಅಗ್ರಹಾರ ಸೊಟಡೆಯ ಅಜೇಷ ಸಾಸಿರ್ವರ್ ತಮ್ಮ ಮಗಂ ಬಿಲಡಳಾಜಿ
೨ ನು ಭೋಪದಳಾಜಿನ್ಮ ತಮ್ಮಂ........ಹಿತರಂ...........ಟ್ಟಡೆ ಆ ಮಾರ್ಗ
೩ ದಲೇ ಕೊಂದುದಕ್ಕೆ ಮೆಚ್ಚಿ ಗದ್ದೆ ಗಳೆಯ ಮ [ತ] ರು ಸ್ಥ ೧ ಬೆಳ್ದು ಗಳೆಯ ಮತಲ್ಲಿ
೪ ಚೆರಿ ಒಕ್ಕಲುದೆಜೆ ಮನೆದೆಜೆ ಇನುತುವಂ ಕೊಡಂಗೆಯ ಬಿಟ್ಟು ಕೊಟ್ಟರು ಈ ಕೊ
೫ ಡಂಗೆಯ ಅಲಿದಾತ ಸಮಯಬಾಹಿರ (e) ಸ್ವಸ್ತಿ ಶ್ರೀಮದ್ ಅನಾದಿಯ ಅಗ್ನ
೬ ಹಾರಂ ಸೊಜಡೆಯಂ ಕಡಂಬರ ತೈಲಪ ನಿಜೆದು ಪೆಂಡಿಜು ಡೆ ಉಚ್ಚಲು ತುಜುವಂ....
೭ ಗೆಯೆ ಬೋಪದಳಾಜಿಂ ಕಾದಿ ಸುರಲೋಕ ಪ್ರಾಪ್ತನಾದೊಡೆ ಚಿಲದಳಾಜಿ ಅತಂಗೆ ಪ
೮ ರೋಕ ವಿನೆ
೯ ಯಮಂ ಮಾಡಿ
೧೦ ಕಲ್ಲ ನಿಜೆ ಸಿ
೧೧ ದ ಕಂ [ದರಿಸಿ]
೧೨ ದ ಮಾ ಲೋಜ

ಛಾಯಾಚಿತ್ರವಿಲ್ಲ. [ಲೇಖಕರು ನೀಡಿರುವ ಪಾಠವನ್ನು ಪ್ರಕಟಿಸಲಾಗಿದೆ - (ಸಂ)]

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ನಾಗರಖಂಡ – ೭೦, ಭೋಜರಾಜ ಪಾಟೀಲ, ಪುಟ. ೧೮೮-೧೮೯
*೨. ಹಂಪ ನಾಗರಾಜಯ್ಯ ಮತ್ತು ಎಂ.ಜಿ. ಮಂಜುನಾಥ (೧೯೯೭): **ಹೊಂಬುಚದ ಶಾಸನಗಳು,** ಪು. ೧೧೧
*೩. *ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್* ಸಂಪುಟ ೫, ನಂ ೧೮, ಕ್ರಿ. ಶ. ೧೧೧೯, ನಂ. ೧೯, ಕ್ರಿ. ಶ. ೧೧೨೧, ನಂ. ೨೩, ಕ್ರಿ. ಶ. ೧೧೨೯
*೪. – ಅದೇ – ಸಂಪುಟ ೪, ನಂ. ೪೮, ಅದೇ ತೇದಿ
*೫. ಜೆ. ಎಂ. ನಾಗಯ್ಯ : **ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ,** ಪುಟ-೧೬೦,
*೬. **ಇಸಿ ಸಂಪುಟ ೭.** ಶಿಕಾರಿಪುರ, ನಂ. ೧೩೩, ಕ್ರಿ. ಶ. ೧೧೩೧
*೭. – ಅದೇ – ಶಿವಮೊಗ್ಗ, ನಂ. ೨೩, ಕ್ರಿ. ಶ. ೧೧೧೫
*೮. *ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್,* ಸಂಪುಟ ೫, ನಂ. ೧೮, ಹಾನಗಲ್ಲು, ಕ್ರಿ. ಶ. ೧೧೧೯
*೯. **ಕರ್ನಾಟಕ ಪರಂಪರೆ, ಸಂಪುಟ** ೨, ಪುಟ ೨೨೦ – ೨೩೪
*೧೦. **ಇಸಿ ಸಂಪುಟ ೭,** ಶಿವಮೊಗ್ಗ, ನಂ. ೧೧೯

*(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಶಾಸನದ ಮೂಲ ಪಾಠವನ್ನು ಓದುವಲ್ಲಿ ಮಾರ್ಗದರ್ಶನಗೈದ ಡಾ॥ ಶ್ರೀನಿವಾಸ ರಿತ್ತಿಯವರಿಗೆ ನನ್ನ ಕೃತಜ್ಞತೆಗಳು.)*

ಕೆ. ಜಿ. ಭಟ್‌ಸೂರಿ *

# ಗುಂಡೂರಿನ ಎರಡು ಅಪ್ರಕಟಿತ ಶಾಸನಗಳು

ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೮೭-೮೮ನೇ ಸಾಲಿನಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಶಾಸನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಂಯುಕ್ತ ಯೋಜನೆಯನ್ನು ಹಮ್ಮಿಕೊಂಡಾಗ ಅಪ್ರಕಟಿತ ಶಾಸನಗಳು ಇರುವುದು ಕಂಡುಬಂದಿತು.

ಗುಂಡೂರು ಗಂಗಾವತಿ ತಾಲೂಕಿನ ಸಿದ್ಧಾಪುರ ಹೋಬಳಿಯಲ್ಲಿನ ಒಂದು ಕುಗ್ರಾಮ, ಗ್ರಾಮದ ಮಧ್ಯೆ ಆಂಜನೇಯ ಮತ್ತು ಈಶ್ವರ ಗುಡಿಯಿದ್ದು, ನವೀಕರಣಗೊಂಡಿರುವ ಈ ಗುಡಿಗಳ ಮುಂದೆ ಕಟ್ಟೆಗೆ ತಾಗಿ ಒಂದು ಶಿಲಾಶಾಸನವಿದೆ. ಇನ್ನೊಂದು ಶಾಸನ ಅನ್ವೇಷಣೆಯ ಕಾಲದಲ್ಲಿ ಆಕಸ್ಮಿಕವಾಗಿ ಸಿಕ್ಕಿದೆ. ಈ ಶಾಸನ ಆಂಜನೇಯ ಗುಡಿಯಿಂದ ೧-೧½ ಕಿ.ಮೀ. ಅಂತರದಲ್ಲಿ ಶರಣಗೌಡ ಮಲ್ಲನಗೌಡರ ಹೊಲದಲ್ಲಿ ರಕ್ಷಣೆಯಿಲ್ಲದೇ ಬಿದ್ದಿದೆ.

## ಶಾಸನಗಳ ಭಾಷೆ, ಲಿಪಿ ಮತ್ತು ಕಾಲ

ಗುಂಡೂರು ಗ್ರಾಮದಲ್ಲಿ ದೊರೆತ ಈ ಎರಡೂ ಶಾಸನಗಳ ಭಾಷೆ ಮತ್ತು ಲಿಪಿ ಕನ್ನಡ, ಆಂಜನೇಯ ಗುಡಿಯ ಮುಂಭಾಗದಲ್ಲಿನ ಶಾಸನದ ಕಾಲ ಶಕವರ್ಷ ೧೩೩೩ರ ಸಂವತ್ಸರ ಅಂದರೆ ಕ್ರಿ.ಶ. ೧೪೧೧ಕ್ಕೆ ಸಮವಾಗುತ್ತದೆ. ಇದು ವಿಜಯನಗರದ ಅರಸು ಒಂದನೇ ದೇವರಾಯನ ಕಾಲಕ್ಕೆ ಸೇರಿದೆ. ಶರಣಗೌಡ ಮಲ್ಲನಗೌಡರ ಹೊಲದಲ್ಲಿ ಸಿಕ್ಕಿದ ಶಾಸನದ ಕಾಲ ೧೩೫೨ ಸಾಧಾರಣ ಸಂವತ್ಸರ. ಇದು ಕ್ರಿ. ಶ. ೧೪೩೦ಕ್ಕೆ ಸರಿ ಹೊಂದುತ್ತದೆ. ಈ ಶಾಸನ ವಿಜಯನಗರದ ಅರಸು ಇಮ್ಮಡಿ ದೇವರಾಯನ ಕಾಲದ್ದಾಗಿದೆ.

## ಶಾಸನದ ವಿಷಯ ಮತ್ತು ಮಹತ್ವ

ಆಂಜನೇಯ ಗುಡಿಯ ಮುಂಭಾಗದಲ್ಲಿನ ಶಾಸನದಲ್ಲಿ ವಿಜಯನಗರದ ಅರಸು ಮೊದಲನೇ ದೇವರಾಯನ ಕಾಲದಲ್ಲಿ ಕ್ರಿ. ಶ. ೧೪೧೧ರಲ್ಲಿ ಬೆಂಬೆಲ್ಲ ಕೋಟೆಯ ವಡಪಳೆಯ ನಾಗನಾಥ ದೇವರಿಗೆ ಗುಂಡೂರಿನ ದೇವಪಗಳು ಕೊಟ್ಟ ವ್ಯಕ್ತಿಯನ್ನು ಉಲ್ಲೇಖಿಸಿದೆ. ಶರಣಗೌಡ ಮಲ್ಲನಗೌಡನ ಹೊಲದಲ್ಲಿನ ಇನ್ನೊಂದು ಶಾಸನ, ಇಮ್ಮಡಿ ದೇವರಾಯನ ಕಾಲದಲ್ಲಿ ಕ್ರಿ.ಶ. ೧೪೩೦ರಲ್ಲಿ ಶ್ರೀಮನ್ ಮಹಾ ಮಂಡಳೇಶ್ವರ ಶ್ರೀ ಬತಕಂನ್ನೆಳೆ ದೊರೆ ಗುಂಡೂರಿನಲ್ಲಿ ಹೊಸದಾಗಿ ಕೊಟ್ಟ ಉಂಬಳಿಯನ್ನು (ವೃತ್ತಿ) ದಾಖಲಿಸಿದೆ. ಈ ಎರಡೂ ಶಾಸನಗಳು ವಿಜಯನಗರ ಕಾಲಕ್ಕೆ ಸೇರಿವೆಯಾದರೂ, ಎರಡೂ ಶಾಸನಗಳಲ್ಲಿ ಒಂದನೇ ದೇವರಾಯನ ಕಾಲದಲ್ಲಿ ಮತ್ತು ಇಮ್ಮಡಿ ದೇವರಾಯನ ಕಾಲದಲ್ಲಿ ಒಂದೇ ಊರಿನ ನಾಗನಾಥ ದೇವರಿಗೆ ಕೊಟ್ಟ ಉಂಬಳಿಯನ್ನು ಉಲ್ಲೇಖಿಸುತ್ತವೆಯಲ್ಲದೇ ಒಂದನೇ ದೇವರಾಯನ ಕಾಲದಲ್ಲಿ ಇದ್ದ ಸಂಪ್ರದಾಯವನ್ನು ಇಮ್ಮಡಿ ದೇವರಾಯನ ಕಾಲದಲ್ಲೂ ಮುಂದುವರಿಸಿದ ಉಲ್ಲೇಖವನ್ನು ದಾಖಲಿಸಿದೆ. ಅಲ್ಲದೇ ಶಾಸನಗಳಲ್ಲಿ ಬರುವ 'ಗುಂಡೂರು' ಬೆಂಬಲ್ಲಕೋಟೆಯ ವಡೆಪಳೆಯ ಸ್ಥಳನಾಮದ ದೃಷ್ಟಿಯಿಂದಲೂ ಈ ಶಾಸನ ಮಹತ್ವವೆನಿಸಿದೆ.

## ಶಾಸನ ಪಾಠ

೧. *ಆಂಜನೇಯ ದೇವಲಾಯದ ಮುಂಭಾಗದ ಶಾಸನ*

೧) ಸ್ವಸ್ತಿ ಶ್ರೀ ಜಯಾ
೨) ಬ್ಯುದಯ ಶಕವರ್ಷ
೩) ೧೩೩೨ ನೇ ಖರ ಸಂವತ್ಸರ
೪) ದಲು ಬೆಂಬೆಲ್ಲ ಕೋಟೆ

---

* ಕನ್ನಡ ವಿಶ್ವವಿದ್ಯಾಲಯ, ಹಂಪಿ/

೫) ಯ ವಡೆವಳೆಯ ನಾಗ

೬) ನಾಥ ದೇವರಿಗೆ ಗುಂಡೂ

೭) ರ ದೇವಪಗಳು ಕೊಟ್ಟ ವೃತ್ತಿ ಆ ಇಗ್ಗು.....
(ಶಾಸನದ ಮುಂದಿನ ಭಾಗ ಅಳಿಸಿದೆ)

*ಶರಣಗೌಡ ಮಲ್ಲನಗೌಡನ ಹೊಲದಲ್ಲಿನ ಶಾಸನ*

೧) ಸ್ವಸ್ತಿ ಶ್ರೀ ಜಯಾಭ್ಯು

೨) ದಯ ಶಕವರ್ಷ ೧೩೫೨ ನೇ

೩) ಸಾಧರಣ ಸಂವತ್ಸರದಲು

೪) ಶ್ರೀ ಮಂನ್ಮಹಾಮಂಡಳೇಸ್ವರ ಶ್ರೀ

೫) ಬತಕಂನೆಳೊಳ ದೊರೆ ಬೆಂಬೆಲ್ಲ ಕೋಟೆ

೬) ಯ ವಡೆವಳೆಲ ನಾಗನಾಥ ದೇವರಿಗೆ

೭) ಗುಂಡೂರದಲು ಹೊಸ್ತಾಗಿ ಕೊಟ

೮) ವೃತ್ತಿ ಆಹ ಗುಡದ ಭೃ . . (ಶಾಸನದ ಮುಂದಿನ ಭಾಗ ಹಾಳಾಗಿದೆ )

*[ಶಾಸನದ ಛಾಯಾಚಿತ್ರ ಒದಗಿಸಿಲ್ಲ. ಲೇಖಕರು ಓದಿರುವಂತೆ ಇಲ್ಲಿ ಪ್ರಕಟಿಸಿದೆ - ಸಂ.]*

*(ಈ ಶಾಸನ ಪ್ರತಿ ತರುವಾಗ ಗುಂಡೂರಿನ ಗ್ರಾಮದ ಜನಗಳು, ಶರಣಗೌಡ ಮಲ್ಲನಗೌಡರೂ ನನ್ನೊಡನೆ ಹೊಲಕ್ಕೆ ಬಂದು ಸಹಕರಿಸಿದ್ದಾರೆ. ಶಾಸನದ ಕಾಲ ಚರ್ಚಿಸುವಾಗ ಡಾ॥ ಎಚ್. ಆರ್. ರಘುನಾಥ ಭಟ್ಟ, ಶ್ರೀ ಕಲವೀರ ಮನ್ನಾಚಾರರವರು ನೆರವಾಗಿದ್ದಾರೆ. ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳು).*

ಎ. ಜಯಂತಿ *

# ಕಾಳಾರಿಯ ಒಂದು ಅಪ್ರಕಟಿತ ಶಾಸನ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿಗೆ ಸೇರಿದ 'ಕಾಳಾರಿ' ಗ್ರಾಮವು ಇತಿಹಾಸ ಪ್ರಸಿದ್ಧವಾದ 'ಕಲ್ಯ' ಗ್ರಾಮದಿಂದ ಐದು ಕಿಲೋಮೀಟರ್ ದೂರದಲ್ಲಿದೆ. ಕಾಳಾರಿ ಗ್ರಾಮದಲ್ಲಿರುವ ಆಂಜನೇಯ ದೇವಾಲಯದಲ್ಲಿ ದೊರೆತ ಒಂದು ಅಪ್ರಕಟಿತ ಶಿಲಾಶಾಸನದ ಬಗ್ಗೆ ಪ್ರಸ್ತುತ ಸಂಪ್ರಬಂಧವನ್ನು ರಚಿಸಲಾಗಿದೆ.

ಈ ಶಾಸನವನ್ನು ಆಂಜನೇಯ ದೇವಾಲಯದಲ್ಲಿರುವ ೨ ಅಡಿ ಅಗಲ ಹಾಗೂ ೫ ಅಡಿ ಎತ್ತರದ ಕಠಿಣವಾದ ಕಣಶಿಲೆಯ (ಗ್ರಾನೈಟ್) ಸ್ತಂಭದ ಮೇಲೆ ಕೊರೆಯಲಾಗಿದೆ. ಈ ಶಾಸನದಲ್ಲಿ ಒಟ್ಟು ೮ ಸಾಲುಗಳ ಬರಹವಿದೆ. ಶಾಸನದ ಮೊದಲ ಸಾಲಿನ ಬರಹ ಸಂಪೂರ್ಣವಾಗಿ ತ್ರುಟಿತವಾಗಿದ್ದು ತೀರಾ ಸವೆದಿರುವುದರಿಂದ ಓದಲು ಸಾಧ್ಯವಾಗುತ್ತಿಲ್ಲ.

**ಶಾಸನ ಪಾಠ :**

೧ × × × × × ×
೨ ಕಲೂರ × × × ಮ
೩ ಗ ರಾಮ ವರ
೪ ದ ರಾಜ ದೇವರಿ
೫ ಗೆ ರಂಗಮಂಟ
೬ ಪದ ನಡುವ
೭ ಣ ಅಂಕಣ
೮ ರಾಮನ ಸೇವೆ

***ಶಾಸನದ ಸಾರಾಂಶ :*** ಕಲ್ಲೂರಿನ ವರದರಾಜಸ್ವಾಮಿ ದೇವಾಲಯದ ರಂಗಮಂಟಪದ (ನವರಂಗ) ನಡುವಣ ಅಂಕಣವನ್ನು ಅದೇ ಗ್ರಾಮದ ರಾಮ ಎಂಬುವನು ತನ್ನ ಸೇವಾರ್ಥವಾಗಿ ನಿರ್ಮಿಸಿಕೊಟ್ಟಿದ್ದನ್ನು ಈ ಶಾಸನ ದಾಖಲಿಸಿದೆ.

***ಶಾಸನದ ಕಾಲ :*** ಪ್ರಸ್ತುತ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲದ್ದರೂ ಶಾಸನದ ಲಿಪಿಯ ಆಧಾರದಿಂದ ಈ ಶಾಸನವನ್ನು ಕ್ರಿ. ಶ.ಸುಮಾರು ಹದಿನೈದನೆಯ ಶತಮಾನದ್ದೆಂದು ಗುರ್ತಿಸಬಹುದು.



* ನಂ. ೫/೧, ಒನೇ ಕ್ರಾಸ್, ಅಜಾದ್ ನಗರ, ಬೆಂಗಳೂರು – ೫೬೦ ೦೧೮

***ಸಾಂಸ್ಕೃತಿಕ ಮಹತ್ವ :*** ಈ ಶಾಸನದಲ್ಲಿ ಉಲ್ಲೇಖಿತ ವಾಗಿರುವ ಕಲ್ಲೂರು ಗ್ರಾಮವು ಯಾವುದೆಂದು ಸೂಕ್ಷ್ಮವಾಗಿ ಪರಿಶೀಲಿಸಬಹುದು. ಈ ಶಾಸನ ದೊರೆತ 'ಕಾಳಾರಿ' ಗ್ರಾಮವೇ ಈ ಶಾಸನೋಕ್ತ 'ಕಲ್ಲೂರು' ಎಂಬುದು ತಿಳಿಯುತ್ತದೆ. ಆ ಹೆಸರು ಕಾಲಕ್ರಮೇಣ ತನ್ನ ಮೂಲ ರೂಪ 'ಕಲ್ಲೂರು' ಎಂಬುದರ ಅಪಭ್ರಂಶವಾಗಿ 'ಕಾಳಾರಿ' ಎಂದು ರೂಪುಗೊಂಡಿರಬಹುದೆಂಬ ಅಂಶ ತಿಳಿದುಬರುತ್ತದೆ. ಪ್ರಸ್ತುತ ಶಾಸನೋಕ್ತ ವರದರಾಜ ಸ್ವಾಮಿ ದೇವಾಲಯ ಈಗ ಆ ಗ್ರಾಮದಲ್ಲಿ ಕಂಡುಬರುವುದಿಲ್ಲ. ಬಹುಶಃ ಈ ಶಾಸನ ದೊರೆತ ಆಂಜನೇಯ ದೇವಾಲಯವೇ ಈ ಹಿಂದೆ ವರದರಾಜ ಸ್ವಾಮಿ ದೇವಾಲಯ ಆಗಿದ್ದಿರಬಹುದೆಂದು ತೋರುತ್ತದೆ.

ಕಾಳಾರಿ ಗ್ರಾಮದಿಂದ ಕೇವಲ ೫ ಕಿ.ಮೀ. ದೂರದಲ್ಲಿರುವ ಕಲ್ಯ, ೮ ಕಿ. ಮೀ. ದೂರದಲ್ಲಿರುವ ಮಾಗಡಿ, ಸು. ೧೫ ಕಿ. ಮೀ. ದೂರದಲ್ಲಿರುವ ಮತ್ತೊಂದು ಕಲ್ಲೂರು ಇವೆಲ್ಲವೂ ಆ ಪ್ರದೇಶದ ಅತ್ಯಂತ ಸುಪ್ರಸಿದ್ಧ ಜೈನ-ವೈಷ್ಣವ ಧರ್ಮದ ಕೇಂದ್ರ ಗಳಾಗಿದ್ದವು.

ಇತಿಹಾಸ ಪ್ರಸಿದ್ಧ ಕಲ್ಯ ಗ್ರಾಮಕ್ಕೆ ಸರ್ವಶೀಲೆ ಚನ್ನಮ್ಮ ಎಂಬ ಶಿವಶರಣೆ ಅಲ್ಲಿದ್ದು ಸುಪ್ರಸಿದ್ಧ ವೀರಶೈವ ಕೇಂದ್ರವಾಗಿತ್ತು. ತದ ನಂತರ ಪಾಲ್ಕುರಿಕೆ ಸೋಮನಾಥನು ಸಹ ಅಲ್ಲಿಯೇ ಬಂದು ನೆಲೆಸಿ ಕೆಲವು ಕಾಲಾನಂತರ ಶಿವೈಕ್ಯನಾದನು. ಕಾಲಕ್ರಮೇಣ ಆ ಪ್ರದೇಶದಲ್ಲಿ ವೀರಶೈವ ಧರ್ಮದ ಪ್ರಭಾವವು ಹೆಚ್ಚಿದಂತೆ ಪ್ರಸ್ತುತ ಶಾಸನ ದೊರೆತ ಕಾಳಾರಿ ಗ್ರಾಮದಲ್ಲಿಯೂ ವೀರಶೈವ ಧರ್ಮ ಹರಡಿದಂತೆ ತೋರುತ್ತದೆ. ಕಾಳಾರಿ ಗ್ರಾಮದಲ್ಲಿ ಈಗ ವೀರಶೈವ ಧರ್ಮೀಯರೇ ಬಹುಸಂಖ್ಯಾತ ರಾಗಿದ್ದಾರೆನ್ನುವುದು ಗಮನಾರ್ಹ ಅಂಶ.

*( ಈ ಶಾಸನದ ಚಿತ್ರ ತೆಗೆಯಲು ನೆರವಾದ ನನ್ನ ಸಹಪಾಠಿ ಶ್ರೀ ದೇವರಾಜ ಸ್ವಾಮಿಯವರಿಗೆ ಮತ್ತು ಈ ಶಾಸನದ ಪ್ರಬಂಧ ಸಿದ್ಧ ಪಡಿಸಲು ನೆರವಾದ ಶ್ರೀ ಎಂ. ಜಿ. ಮಂಜುನಾಥ ಅವರಿಗೆ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತೇನೆ ).*

ಡಾ॥ ಕೆ. ರವೀಂದ್ರನಾಥ *

# ಕೊಪ್ಪಳದ ಎರಡು ಅಪ್ರಕಟಿತ ತಾಮ್ರ ಶಾಸನಗಳು

ನಾಡಿನ ಚರಿತ್ರೆಯ ನಿರ್ಮಾಣಕ್ಕೆ ಸ್ಥಿರ ದಾಖಲೆಗಳಾದ ಶಾಸನಗಳ ಮಹತ್ವ ಹಿರಿದಾದದ್ದು. ಇಲ್ಲಿಯವರೆಗೆ ಇವುಗಳ ಪರಿವೀಕ್ಷಣೆ ಹಾಗೂ ವಿಶ್ಲೇಷಣಾ ಕಾರ್ಯವು ಅಧಿಕವಾಗಿ ನಡೆದಿದ್ದರೂ ಶಾಸನಗಳ ನಿಕ್ಷೇಪ ನೆಲದ ಮರೆಯ ನಿಧಾನದಂತೆ ನಿಗೂಢವಾಗಿದೆ; ಬಗೆದಷ್ಟೂ ಸೆಲೆಯ ರೂಪದಲ್ಲಿ ಜಲದಂತೆ ಹರಿದು ಬರುತ್ತಲಿದೆ. ಪ್ರಾಚೀನ ಐತಿಹಾಸಿಕ ಪ್ರಸಿದ್ಧವಾದ ಕೊಪ್ಪಳಕ್ಕೆ ಸಂಬಂಧಿಸಿದ ಸದ್ಯ ಎರಡು ತಾಮ್ರಶಾಸನಗಳು ಅಲ್ಲಿಯ ಗೌಡಕಿ ಹಾಗೂ ಶಾನುಭೋಗಿಕಿಯನ್ನು ಕುರಿತು ಬರೆದುಕೊಟ್ಟ ಕ್ರಯಪತ್ರಗಳಾಗಿವೆ.

*ಶಾಸನ ಒಂದು :* ಶಾಲಿವಾಹನ ಶಕವರುಷ ೧೫೦೩ (ಕ್ರಿ.ಶ. ೧೫೮೧)ಕ್ಕೆ ಸೇರಿದ ಈ ಶಾಸನವು "ಪಡುನಾಡೊಳಗಣ ಹಸ್ತಿನಾವತಿಗೆ ವಳಿತವಾದ ಕಾತರಿಕೆ ವೇಂಟಕ್ಕೆ ಸಲ್ಲುವ ಕಸಬೆ ಕೊಪ್ಪಳದ ಸೇನಭೋಗಕಿಯ" ವಿಷಯವನ್ನು ಒಳಗೊಂಡಿದೆ. ೫೧ ಸಾಲುಗಳನ್ನೊಳಗೊಂಡ ಈ ಶಾಸನದಲ್ಲಿ ಧೇಮರಸೈಯ್ಯ ಮತ್ತು ಗೌತಮರಸೈಯ್ಯ ಎಂಬುವವರು ಧರಣೇಗೌಡನ ಮಕ್ಕಳಾದ ಮಲೆಯಪ್ಪಗೌಡ, ಚಂದಣಗೌಡ ಎಂಬುವವರಿಗೆ ಕೊಪ್ಪಳದ ಅರ್ಧಪಾಲು ಶಾನುಭೋಗಿಕಿಯನು ಬಿಟ್ಟುಕೊಟ್ಟು ಅವರಿಂದ ೫೧೫ ಗದ್ಯಾಣು ವರಹಗಳನ್ನು ತೆಗೆದುಕೊಂಡು ಈ ಕ್ರಯಕ್ಕೆ ಅರ್ಧಸೇನಭೋಗಿಕಿಗೆ ಸಲ್ಲುವ ಅಯಮಾಂನ್ಯ ಹಿಟ್ಟು, ಹುಗಿನಿಧಿ, ನಿಕ್ಷೇಪ, ಜಲ, ಪಾಶಾಣ, ಅಕ್ಷಣ, ಆಗಮಿ, ಸಿದ್ಧ, ಸಾಧ್ಯಗಳೆಂಬ ಎಂದು ಭೋಗಗಳನ್ನೂ ಹಾಗೂ ತೇಜ; ಸಾಮ್ಯ ವಿಳ್ಯಗಳೆಂಬ ಉಡುಗೊರೆಯನ್ನೂ ಹೆಂಡತಿ ಮತ್ತು ಮಕ್ಕಳ ಅನುಮತದಿಂದ, ಕೊಪ್ಪಳ ಸೀಮೆಯ ದೇಸಾಯಿಗಳ, ಗೌಡರ, ಅಷ್ಟದಶ ಪ್ರಜೆಗಳ ಮತ್ತು ಆಯಗಾರರ ಸಾಕ್ಷೀ ಸಮ್ಮುಖದಲ್ಲಿ ಕುಕುನೂರಿನ ಆರಾಧ್ಯದೈವ ಮಹಾಮಾಯೆಯ ಸಾಕ್ಷಿಯಾಗಿ ಕ್ರಯಕ್ಕೆ ಬಿಟ್ಟು ಕೊಟ್ಟ ಸೇನಭೋಗಿಕಿಯ ವಿವರವಿದೆ.

*ಶಾಸನ ಎರಡು :* ಶಾಲಿವಾಹನ ಶಕವರುಷ ೧೫೦೫ (ಕ್ರಿ.ಶ. ೧೫೮೩)ಕ್ಕೆ ಸಲ್ಲುವ ಈ ಶಾಸನವು "ಪಡುನಾಡೊಳಗಣ ಹಸ್ತಿನಾವತಿ ವಳಿತಾದ ಕಾತರಿಕೆವೇಂಟಕ್ಕೆ ಸಲ್ಲುವ ಕಸಬೆ ಕೊಪ್ಪಳದ ಗೌಡರೆಯನು ಕ್ರಯಕ್ಕೆ ಬಿಟ್ಟುಕೊಡುವ ಪ್ರಸ್ತಾಪವಿದೆ. ೯೧ ಸಾಲುಗಳಿರುವ ಈ ಶಾಸನದಲ್ಲಿ ಚೌಮಣಗೌಡನ ಮಗ ಜೆಡಗಣಗೌಡಗೆ ಮಾನಿಗೌಡನ ಮಗ ಬೊಮ್ಮಣಗೌಡ ಅರ್ಧ ಬೆಳೆಪಾಲು ಗೌಡಕಿಗೆ ಬರೆದುಕೊಟ್ಟ ಕ್ರಯ ಪತ್ರ.

ಜೆಡಗಣಗೌಡ ಹಾಗೂ ಬೊಮ್ಮಣಗೌಡನ ಹಿರಿಯರಾ ಲಿಂಗಣಗೌಡ ಹಾಗೂ ಸಿರುಮಸೆಟ್ಟಿಗಳು ಗ್ರಾಮದ ಹಿರಿಯರಾಗಿ, ಅಣ್ಣ ತಮ್ಮಂದಿರಾಗಿ, ಸರಿಬಣಕಾರರಾಗಿ ಊರಿನ ಗೌಡಕಿಯನ್ನು ಮಾಡಿಕೊಂಡಿದ್ದರು. ಈ ಹಿರಿಯರು ಗಳಿಸಿದ್ದ ಅರ್ಧಪಾಲು ಗೌಡಿಕಿಯಲ್ಲಿ ಬೊಮ್ಮಣ್ಣಗೌಡನ ಹಿರಿಯರಾದ ಚಂದಣಗೌಡ, ಮಾದಣಗೌಡ ಹಾಗೂ ವಿಜೆಯಪ್ಪಗೌಡ ಇವರುಗಳು ಉಂಡುಕೊಂಡು ಬರುತ್ತಿದ್ದರು. ಇವರು ತೀರಿಹೋದ ಮೇಲೆ ಬೊಮ್ಮನಗೌಡರ ಚಿಕ್ಕಅಜ್ಜ ವಿಜಯಪ್ಪಗೌಡರ ಬೆಳೆಪಾಲನ್ನು ಆತನ ಮಗ ಸಿರುಮಣಗೌಡನಿಗೆ ಕೊಟ್ಟು ಉಳಿದ ಚಂದಣಗೌಡ, ಮಾದಣಗೌಡರ ಬೆಳೆಪಾಲು ಗೌಡಕಿಯನು ಬೊಮ್ಮಣಗೌಡನ ದೊಡ್ಡಪ್ಪ ಸಿರಿಯಣ ಗೌಡ ಹಾಗೂ ತಂದೆ ಮಾನಿಗೌಡರೆಂಬ ಅಣ್ಣ ತಮ್ಮಂದಿರು ಅನುಭೋಗಿಸುತ್ತಿದ್ದರು.

ಕಾಲಾಂತರದಲ್ಲಿ "ಗ್ರಾಮ ನಷ್ಟವಾಗಿ ದಿವಾಳಿಯಾಗಿ, ರೊಕ್ಕ ರೂಪಾಯಿಗಳ ಬೆಲೆ ಹೆಚ್ಚಳದಿಂದ, ಬೆಳೆಪಾಲಿಗೆ ನಷ್ಟ ತುಂಬಲಿಕ್ಕೆ ಗತಿಯಿಲ್ಲದೆ ಸಾಲಸಂಬಂಧಗಳು ತೀರಲಾಗದೆ" ಸಿರುಮಣಗೌಡನು "ನನ್ನ ಕೈಲಿ ಆಗದು ನೀನು ಯೀ ಬಂದ ನಷ್ಟವನ್ನು ತುಂಬಿಕೊಂಡು ಗೌಡಕಿ ಮಾಡಿಕೊಂಡು ಹೋಗಲು ಮಾನಿಗೌಡನಿಗೆ ತಿಳಿಸಿದನು. ಮಾನೀಗೌಡ ನಿರಾಕರಿಸಿದ್ದನು. ಮುಂದೆ ಮಾನೀಗೌಡನ ಮಗ ಬೊಮ್ಮಣಗೌಡ ಬೆಳೆಪಾಲು ಗೌಡಕಿ

* ಅಧ್ಯಾಪಕ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ - ವಿದ್ಯಾರಣ್ಯ, ಕಮಲಾಪುರ, ಬಳ್ಳಾರಿ ಜಿಲ್ಲೆ - ೫೮೩ ೨೨೧

ಒಳಗೆ'' ಕಾಲ ಪರಿವರ್ತನೆಗೆ ಸಲ್ಲುವ ಶ್ರಾಹೆ ಗಟ್ಟಿ ವರಹಾ ೧೭೫ ಹಣವನ್ನು ಕಂತುಗಳ ರೂಪದಲ್ಲಿ ತೆಗೆದುಕೊಳ್ಳದೆ ಒಂದೇ ಸಲಕ್ಕೆ ಮೊತ್ತವನ್ನು ತೆಗೆದುಕೊಂಡು ಕ್ರಯಪತ್ರವನ್ನು ಬರೆದುಕೊಟ್ಟನು. ಆ ಪ್ರಕಾರ ಅಯಮಾನ್ಯ ಹಿಟ್ಟು, ಹುಗಿನಿಧಿ, ನಿಕ್ಷೇಪ, ಜಲ, ಪಾಶಾಣ, ಅಕ್ಷಣೆ, ಆಗಮಿ, ಸಿದ್ಧ ಸಾಧ್ಯಗಳೆಂಬ ಅಷ್ಟಭೋಗ ಹಾಗೂ ತೇಜ, ಸಾಮ್ಯ ವಿಳ್ಯ, ಉಡುಗೊರೆ, ಸಕಲೋತ್ಪತ್ಯ ಕುಳಬಳಿಸಹಿತವಾಗಿ ಮಡದಿ ಮಕ್ಕಳ ಅನುಮತದಿಂದ ಕೊಪ್ಪಳದ ಸೀಮೆಯ ದೇಸಾಯಿಗಳು, ಗೌಡರು, ಶಾನುಭೋಗರು, ಅಷ್ಟದಶ ಪ್ರಜೆಗಳು ಮುಂತಾದ ಆಯಗಾರರ ಸಾಕ್ಷೀ ಸಮ್ಮುಖದಲ್ಲಿ ಅರ್ಧಪಾಲು ಬೆಳೆಗೌಡಕಿ ಬಿಟ್ಟುಕೊಡುವ ವಿವರಣೆಯಿದೆ.

ಪ್ರಸ್ತುತ ಈ ಎರಡು ಶಾಸನಗಳಿಂದ ಆ ಕಾಲದ ಗೌಡಕಿ-ಸೇನಭೋಗಕಿ ಕುರಿತ ವಿಚಾರ ಸ್ಪಷ್ಟವಾಗುವುದರ ಜೊತೆಗೆ ಇಂದು ಜಿಲ್ಲಾ ಕೇಂದ್ರವಾಗಿರುವ ಕೊಪ್ಪಳನಾಡು ಆ ಕಾಲಕ್ಕೆ ಕಾತರಿಕೆ ವೇಂಟಕ್ಕೆ ಸೇರಿದುದಾಗಿದೆ. ಇಂದು ಕಾತರಿಕೆ ಎಂಬುದು ಕೊಪ್ಪಳದ ಸಮೀಪ ಚಿಕ್ಕ ಹಳ್ಳಿಯಾಗಿ ಉಳಿದಿದೆ. ಅಂದು ಕಾತರಿಕೆ ವೇಂಟಕ್ಕೆ ಸಲ್ಲುವ ಒಂದು ಚಿಕ್ಕ ಸ್ಥಳವಾದ ಕೊಪ್ಪಳ ತನ್ನ ಒಡಲಿನಲ್ಲಿ ೧ ಸಾವಿರ ವರ್ಷಕ್ಕೂ ಮಿಗಿಲಾದ ಇತಿಹಾಸವನ್ನೇ ಒಳಗೊಂಡಿದೆ. ಇಷ್ಟೇ ಅಲ್ಲದೆ ಸುಮಾರು ೨೩೦೦ ವರ್ಷಗಳಷ್ಟು ಪ್ರಾಚೀನತೆಯನ್ನುಳ್ಳ ಅಶೋಕ ಚಕ್ರವರ್ತಿಯ ಎರಡು ಶಾಸನಗಳು ಇಲ್ಲಿ ದೊರೆತಿವೆ. ೧೦ನೇ ಶತಮಾನದ ರನ್ನ ಮಹಾಕವಿ ತನ್ನ ಅಜಿತ ಪುರಾಣದಲ್ಲಿ ಕೊಪ್ಪಳದ ಅಂದಿನ ಮಹಿಮೆಯನ್ನು ಬಹುವಾಗಿ ವರ್ಣಿಸಿದ್ದಾನೆ. ಬಹುತೇಕ ಕವಿಗಳಿಗೆ ತಿರುಳ್ಗನ್ನಡ ಸೀಮೆಯಾಗಿ ಪರಿಚಯವಾಗಿದ್ದ ಕೊಪ್ಪಳ ಈ ಶಾಸನಗಳ ಕಾಲಕ್ಕೆ ಸಣ್ಣ ಗ್ರಾಮವಾಗಿದ್ದು ಈಗ ಮತ್ತೆ ಜಿಲ್ಲಾಕೇಂದ್ರವಾಗಿರುವುದು ಇತಿಹಾಸದ ಮರುಕಳಿಸುವಿಕೆಗೆ ಸಾಕ್ಷಿಯಾಗಿದೆ. ಅಲ್ಲದೆ ಕುಕನೂರು ಆರಾಧ್ಯ ದೈವ ಮಹಾಮಾಯಿ ಪ್ರಸ್ತಾಪದಿಂದ ಆ ದೈವಕ್ಕೆ ಪ್ರಾಚೀನ ಪರಂಪರೆಯಿದೆ. ವಿಶೇಷವಾಗಿ ಮೊದಲಿನಿಂದಲೂ ಹೈದ್ರಾಬಾದ್ ನಿಜಾಮರ ಆಳ್ವಿಕೆಗೆ ಒಳಪಟ್ಟ ರಾಯಚೂರು, ಬೀದರ, ಗುಲಬರ್ಗಾ ಹಾಗೂ ಬಿಜಾಪುರ ಜಿಲ್ಲೆಗಳು ಬರಗಾಲ ಪ್ರದೇಶಗಳೆಂದೇ ಪ್ರತೀತಿಯಾಗಿವೆ. ಹೀಗಾಗಿ ಅಂದು ನಿಜಾಮ ಪ್ರಾಂತಕ್ಕೆ ಸೇರುವ ಕೊಪ್ಪಳವೂ ಕೂಡ ಬರಗಾಲದಿಂದ ಬಳಲುತ್ತಿರಬೇಕೆಂಬುದು ''ಗ್ರಾಮ ನಷ್ಟವಾಗಿ ಬೆಳೆಪಾಲಿಗೆ ಬಂದ ನಷ್ಟದಿಂದ ಸಾಲಸಂಬಂಧ ಹೆಚ್ಚಿ ತೀರಿಸುವುದಕ್ಕೆ ಗತಿಯಿಲ್ಲದೆ''-ಎಂಬ ಶಾಸನೋಕ್ತ ಮಾತುಗಳಿಂದ ದೃಢಪಡುತ್ತದೆ. ಇದರಿಂದಾಗಿ ಈ ಶಾಸನಗಳ ಹುಟ್ಟುವಿಕೆಯ ಹಿಂದಿನ ಮನಸ್ಸನ್ನು ನೋಡಿದರೆ ಈ ಅವಧಿಯಲ್ಲಿ ಬರಗಾಲವಿತ್ತೆಂದು ತಿಳಿದುಬರುವುದಲ್ಲದೆ ಈ ಪ್ರದೇಶದ ಬರಗಾಲದ ಇತಿಹಾಸಕ್ಕೆ ಪ್ರಾಚೀನ ಸಾಕ್ಷಿಯಾಗಿ ನಿಲ್ಲುತ್ತದೆ. ಗೌಡಕಿ ಹಾಗೂ ಶಾನುಭೋಗಿಕಿ ನಡೆಸಿಕೊಂಡು ಹೋಗುವವರು ಅನುಭೋಗಿಸುವ ಅಷ್ಟಭೋಗಗಳು, ಇಂಥ ಒಪ್ಪಂದಕ್ಕೆ ಸಾಕ್ಷಿಯಾಗಿ ನಿಲ್ಲುವ ದೇಸಾಯಿಗಳು, ಪ್ರಜೆಗಳು, ಆಯಗಾರರು ಮುಂತಾದ ಸಮಸ್ತರೆಲ್ಲರೂ ಕಂಡುಬಗುವುದನ್ನು ಗಮನಿಸಿದರೆ ಪ್ರಾಚೀನ ಜೀವನ ಪದ್ಧತಿಯ ವಿಧಿ ವಿಧಾನಗಳು ತಿಳಿದುಬರುತ್ತವೆ.

*ಶಾಸನಪಾಠ೧:* ಕೊಪ್ಪಳದ ಸೇನಭೋಗಿಕಿಗೆ ಸಂಬಂಧಿಸಿದ ಶಾಸನ ೯½" ಉದ್ದ ೪" ಅಗಲವಿದೆ. ಶಾಸನದ ಮೊದಲ ಭಾಗದಲ್ಲಿ ೨೭ ಸಾಲುಗಳು, ಎರಡನೆಯ ಭಾಗದಲ್ಲಿ ೨೪ ಸಾಲುಗಳು ಇರುತ್ತವೆ.

**ಮೊದಲನೆಯ ಭಾಗದ ಬರಹ**

೧ *ಶ್ರೀ ಸುಭಮಸ್ತು । ನಮಸ್ತುಂಗ*
೨ *ಸಿರಸ್ತುಂಭ ಚಂದ್ರಚಾಮಾರ ಚಾ*
೩ *ರವೆ ತ್ರೈಲೋಕ್ಯನಗರರಂಬ ಮುಲ*
೪ *ಸ್ತಂಭಾಯ । ಶಂಭವೆ ಸ್ವಸಿನ್ತಿಜಯಾ*
೫ *ದ್ಭುಜಯ ಶಲಿವಹನ ಶಖ ವರುಶ*
೬ *೧೫೦೩ನೆಯ । ಚಿತ್ರಭಾಂನು । ಸೌವಂಚ*
೭ *ರ ಶ್ರವಣ ಸುದ ದಸಿಮೆಯೆಲು ದರ*
೮ *ಣೆಗೌಡನ ಮಕ್ಕಳು ಮಲೆಯಪ್ಪಗೌಡ*
೯ *ಚಂದಣಗೌಡಗೆ ಧಮರಸ್ಯೆಯ ಗೌತ*
೧೦ *ಮರಸ್ಯೆಯ ಕೊಟ್ಟ ಕ್ರಯದ ಪತ್ರಕ್ರಮ*
೧೧ *ವೆಂತೆಂದರೆ ಪಡುನಾಡೊಳಗಣ ಹಸ್ತಿ*
೧೨ *ನವತಿ ವಳಿತಾದ ಕತರಿಕೆ ವೇಂಟಕೆ ಸ*
೧೩ *ಲುವ ಕೊಪಳದ ಕಸಬೆಯ ಸೆನ*
೧೪ *ಬೋವಿಕಿನೂ ನಿಮಗೆ ಅರ್ಧಪಾಲು ಸೆನ*
೧೫ *ಬೋವಿಕಿನು ಕೊಟ್ಟು ನಿಂಮ ಕೈಯ ನಾ*
೧೬ *ಉ ತೆಗೆದುಕೊಂಡದು ಕಾಲ ಪರಿವ*
೧೭ *ರ್ತಗೆ ಸಲುವ ಪ್ರಿಯ ಶ್ರಾಹ ಗಟ್ಟಿ*
೧೮ *ವರಹಾ ಗ ೫೧೫ ಅಕ್ಷರದಲು ಅ*
೧೯ *ಯಿನೂರ ಹದಿನೈದು ವರಹಂನು*
೨೦ *ಯಿಸಕೊಂಡೆಲು ಮುಂದೆ ನಂಮಾ ಮ*
೨೧ *ನೆ ದೈವ ಕುಕನುರ ಮಹಾಂಮಾಯಿ*
೨೨ *ಸಕ್ಷಿಯಾಗಿ ಕ್ರಯಕ್ಕೆ ಕೊಟ ವಿವ*
೨೩ *ರಲು ಅರ್ಧಸೆನಬೋವಿಕಿಗೆ ಸಲು*
೨೪ *ವ ಅಯಮಾಂನ್ಯ ಹಿಟ್ಟು ಹುಗಿ ನಿ*
೨೫ *ಧಿ ನಿಕ್ಷೇಪ ಜಲ ಪಾಶಾಣ ಅಕ್ಷಣ*
೨೬ *ಆಗಮಿಸಿಥ ಸಾಧ್ಯಗಳೆಂಬ ಅ*
೨೭ *ಷ್ಟ ಭೋಗ ತೇಜಸಾಮ್ಯ ವಿಳ್ಯ ಉ*

**ಎರಡನೆಯ ಭಾಗದ ಬರಹ**

೨೮ *ಡುಗೊರೆ ಸಕಲೋತ್ಪತ್ಯಕುಳ ಬಳಿ*
೨೯ *ಸಹಿತ್ರವಾಗಿ ನಾವು ನಂಮ ಸ್ತ್ರೀ ಪು*
೩೦ *ತ್ರ ಅನುಮತ್ರದಿಂದ ಕ್ರಯವನು*

೩೧ ಕೊಟ್ಟೆಉ ನಿಂಮ ಪುತ್ರ ಪೌತ್ರ ಪಾರಂ
೩೨ ಪಾರ ಅಚಂದ್ರರ್ಕ ಸಾಯಿಗಳಾಗಿ
೩೩ ಸುಖದಲ್ಲು ಉಡುಕೊಂಡು ಯಿ
೩೪ ಹುದುವೆಂದು ಬರಕೊಟ್ಟ ಕೊಪ
೩೫ ಳದ ಕಸಬೆಯ ಸೇನಬೋವಿಕಿ
೩೬ ಯ ಅರ್ಧಪಾಲ್ಲು ಕ್ರಯದ ಪತ್ರ
೩೭ ಕೊಟ್ಟ ಕತೃಗಳ ವಪಿತ್ತಉ ದ
೩೮ ಮರಸ್ಯೆಯ್ಯ ಗೌತ್ತ್ರರಸ್ಯೆಯನ
೩೯ ವರ ವಪಿತಉ ಯಿದಕೆ ಸಾಕ್ಷಗಾ
೪೦ ಳೂ ಕೊಪಳದ ಸೀಮೆಯ ದೇಶಾಯಿ
೪೧ ಗಳು ಮುಂತಾದ ಕಸಚಗೌಡದು ಅ
೪೨ ಷ್ಟದಶಪ್ರಜೆಗಳು ಮುಂತದ ಅ
೪೩ ಯಗರರೂ ಸಕ್ಷಗಳೂ
೪೪ ದೇಶಾಯಿ ದಸಕು ದೇಶಯಿ ದೇಸಕು
೪೫ ಲಕುರುಣಿ ಸಕ್ಷಿ || ಲಕರಣಿ ಬನಪ್ಪ
೪೬ ವಿಚಿಪ್ಪನ ಸಕ್ಷಿ || ಪನ ಸಕ್ಷಿ
೪೭ ಗಿರಿಯಪಗೌಡನ ಮಗ | ಕಂನಪ್ಪಗೌಡನ
೪೮ ಬಸವಣಗೌಡನ ಸಕ್ಷಿ | ಮಗ ಗಿರಿಯಪ್ಪನ
೪೯ ಕುಮಾರ ಪಡಂಣ ಸಕ್ಷಿ | ಸಕ್ಷಿ ಬಡಗೆರಕ
೫೦ ತ್ರಳವರ ಕನಕನಯ | ರಿವಿರಂಣ ಸಕ್ಷಿ
೫೧ ಕಮರ ನಂದಂಣ

*ಶಾಸನ ಪಾಠ ೨* : ಕೊಪ್ಪಳದ ಬೆಳೆಪಾಲು ಗೌಡಕಿಗೆ ಸಂಬಂಧಿಸಿದ ಶಾಸನ. ಶಾಸನ ಎರಡು ಹಲಗೆ (ಪಟ)ಯಲ್ಲಿ ಪೂರ್ಣಗೊಂಡಿದೆ. ಹಲಗೆ ಒಂದು ೭ ೧/೨'' ಉದ್ದ, ೩ ೧/೨'' ಅಗಲ, ಹಲಗೆ ಎರಡು ೬'' ಉದ್ದ ೩೧/೨'' ಅಗಲವಿರುತ್ತದೆ. ಒಂದನೆ ಹಲಗೆಯ ಮೊದಲ ಭಾಗದಲ್ಲಿ ೨೨ ಸಾಲುಗಳು. ಎರಡನೆಯ ಭಾಗದಲ್ಲಿ ೨೬ ಸಾಲುಗಳು. ಎರಡನೆಯ ಹಲಗೆಯ ಮೊದಲಭಾಗದಲ್ಲಿ ೨೧ ಸಾಲುಗಳು, ಎರಡನೆಯ ಭಾಗದಲ್ಲಿ ೨೨ ಸಾಲುಗಳನ್ನು ಒಳಗೊಂಡಿದೆ.

**೧ನೇ ಹಲಗೆಯ ಮೊದಲನೆಯ ಭಾಗದ ಬರಹ**

೧ ಶ್ರೀ ಶುಭಮಸ್ತು ನಮಸ್ತುಂಗ ಸಿರ
೨ ಸ್ಪಂಬ ಚಂದ್ರಚಾಮರ ಚಾರವೆ ತ್ರಲೋ
೩ ಕ್ಯ ನಗರಾರಂಭ ಮೂಲಸ್ತಂಭಾಯ
೪ ಶಾಂಭವೇ। ಸ್ವಸ್ತಿ ಶ್ರೀ ಜಯಾಭ್ಯುದ
೫ ಯ ಶಾಲಿವಾಹನ ಶಖ ವರುಶ ೧೫೦೫
೬ ನೆಯ ಶ್ರೀ ತಾರಣ ಸವತ್ಸರದ ವೈಶಾಖ
೭ ಸು ೫ಲ್ಲು ಶ್ರೀಮತು ಚಾಮಣಗೌಡ
೮ ನ ಮಗ ಚೆಡಗಣಗೌಡಗೆ ಮಾನಿಗೌ
೯ ಡನ ಮಗ ಚೊಂಮಣಗೌಡನು ಕೊ
೧೦ ಟ್ಟ ಕ್ರಯದ ಪತ್ರದ ಕ್ರಮವೆಂತೆಂ
೧೧ ದರೆ ಪಡುನಾಡೊಳ ಹಸ್ತಿನಾವತಿ ವ
೧೨ ಳತಾದ ಕಾತರಿಕೆ ವೇಂಟ್ಯಕೆ ಸಲುವ
೧೩ ಕೊಪಳದ ಕಸಬೆಯ ಗೌಡಿಕಿನು ನ
೧೪ ಂಮ ಹಿರಿಯರು ಸಿರುಮ ಸೆಟ್ಟಿಯರು
೧೫ ನಿಂಮ ಹಿರಿಯರು ಲಿಂಗಣಗೌಡನು
೧೬ ಗ್ರಮದಾಯದ್ಯರಾಗಿ ಅಂಣತಂ
೧೭ ಮಂದರಾಗಿ ಸರಿಬಣಕಾರರಾಗಿ ಉ
೧೮ ಂಡು ಕೊಂಡು ಗ್ರಮದ ಗೌಡಕಿಯನು
೧೯ ಮಾಡಿಕೊಂಡು ಯಿದರು ನಂಮ
೨೦ ಹಿರಿಯರು ಫಳಿಸಿದ ಅರ್ದ ಪಾ
೨೧ ಲು ಗೌಡಕಿಯ ವಳಗೆ ನಂಮ ಮುತ್ಯ
೨೨ ಗಳು ಉಣತಿದ ವಿವರ ಚಂದಣ ಗೌ

**ಎರಡನೆಯ ಭಾಗದ ಬರಹ**

೨೩ ಡರ ಪಾಲು ಹಾಗಪಾಲು ಮಾದಣಗೌಡ
೨೪ ರ ಬೆಳೆಪಾಲು ವಿಜೆಯಪ್ಪಗೌಡರ ಬೆ
೨೫ ಳೆ ಪಾಲು ಯಿಯಪಂದದಲ್ಲಿ ತಂಮ
೨೬ ಜೀವಾದಿ ಉಂಡುಕೊಂಡು ಬರುತಿದರು
೨೭ ಅವರು ಅವತಾರವಾದ ಮೇಲೆ ನಂಮ
೨೮ ಚಿಕ್ಕಮುತ್ಯಯ ವಿಜೆಯಪ್ಪಗೌಡರ
೨೯ ಬೆಳೆಪಾಲನು ಅತನ ಮಗ ಸಿರಮಣ
೩೦ ಗೌಡಗೆ ಕಳದು ಮುಂದೆ ನಂಮ ಚಂದ
೩೧ ಣಗೌಡ ಮಾದಣಗೌಡನವರ ಪಾಲು ಹಾ
೩೨ ಗಲು ಬೆಳೆಗೌಡಿಕಿನು ನಂಮ ಹಿರಿಯ
೩೩ ಪ್ಪ ಸಿರಿಯಣಗೌಡನು ನಂಮ ತಂದೆ ಮ
೩೪ ನಿಗೌಡನು ಯಿಬರು ಹಾಗೂ ಬೆಳೆ
೩೫ ಪಾಲು ಗೌಡಿಕಿನು ಉಂಡುಕೊಂಡು ಬ
೩೬ ರುತ ಯಿದರು ನಂಮ ಹಿರಿಯಪ್ಪನ
೩೭ ಪಿಳಿಗೆ ಗತಿ ನಷ್ಟಗಣವಾಗಲಾಗಿ ನಾನು
೩೮ ಯಿಂದು ಪರಿಯಂತರದಲ್ಲು ಯಿ ಹಾ
೩೯ ಗು ಬೆಳೆಪಾಲು ಗೌಡಿಕಿನು ಉಂಡುಕೊ
೪೦ ಂಡು ಬರುತ್ತಯಿದೆನು ಯಿಂದಿಗೆ ಗ್ರ
೪೧ ಮ ನಷ್ಟಗಣವಾಗಿ ದೀವಾಣದಿಂದಲ್ಲು
೪೨ ಹೊಕ್ಕರೂಪಗಳು ಹೆಚಲಾಗಿ ನಂಮ
೪೩ ಹಾಗು ಬೆಳೆಪಾಲಿಗೆ ಬಂದ ನಷ್ಟವ ತೆರವ
೪೪ ದಕ್ಕೆ ಗತಿಗಳು ಯಿಲ್ಲದೆ ಸಾಲಸಮಂದಗಳು
೪೫ ಅಟ್ಟುಳಿಗಾರದೆ ನಂಮ ದಾಯಾದಿ ಸಿರಮ
೪೬ ಣಗೌಡನು ಕರದು ನಂನ ಕೈಯ್ಯ ಅಗದು
೪೭ ನಿನು ಯಿ ಬಂದ ನಷ್ಟತುಷ್ಟ ತೆಕುಕೊಂಡು ನಿ
೪೮ ನು ಮಡಿಕೊ ಯಂದು ಕೆಳಲಾಗಿ ಅ

**೨ನೇ ಹಲಗೆಯ ಮೊದಲನೆಯ ಭಾಗದ ಬರಹ**

೪೯ ತನು ನಂನ ಕೈಯಿಲಿ ಅಗಮ ನಾನು
೫೦ ವಲ್ಲೆನು ಯೆನಲಾಗಿ ನಾನು ನಂನ ಹಾಗು ಬ
೫೧ ಳೆ ಪಾಲು ಗೌಡಿಕೆ ವಳಗೆ ನಿಮಗೆ ಯಿಕಂಠ

೫೨ ಕಾಲೋಚಿತ ಕ್ರಯದಲ್ಲು ನಿಮಗೆ ಹಾಗ
೫೩ ಪಾಲು ಗೌಡಿಕಿನು ಕ್ರಯವನು ಕೊಟ್ಟು ನಂ
೫೪ ಮ ನಿಂಮ ಕೈಯ್ಯಲ್ಲು ಯಿಸಕೊಂಡದು
೫೫ ಕಾಲ ಪರಿವರ್ತಗೆ ಸಲುವ ಪ್ರಿಯ ಶ್ರಾ
೫೬ ಹೆ ಗಟ್ಟಿ ವರಹಾ ಗ ೧೭೫ ಅಕ್ಸಾರದಲ್ಲು
೫೭ ಯಿವೆನೂರ ಯಪ್ಪತ್ರ ಅಯಿದು ವರಹ
೫೮ ಯಿ ಹಣವನು ದಿವದಲ್ಲಿ ಕಾಸು ವಿಸ ಹ
೫೯ ಣ ಹಾಗ ಸಿಕ್ಕದೆ ವಂದೆ ಗಂಟ್ಟಾಗಿ ಸಲಿಸಿ
೬೦ ಕೊಂಡೆನು ಮುಂದೆ ನಾನು ಕ್ರಯವನು
೬೧ ಕೊಟ್ಟ ಕಸಬೆ ಹಾಗ ಪಾಲುಗೌಡಿಕಿಗೆ ಸ
೬೨ ಲುವ ಆಯಮಾನ್ಯ ಹಿಟ್ಟು ಹುಗಿ ನಿಧಿ
೬೩ ನಿಕ್ಷೆಪ ಜಲ ಪಾಶಾಣ ಅಕ್ಷಣಿ ಆಗ
೬೪ ಮಿ ಸಿಧ ಸಾದ್ಯಗಳೆಂಬ ಅಷ್ಟಭೋಗ
೬೫ ತೇಜ ಸಾಮ್ಯ ವಿಳ್ಯ ಉಡುಗೊರೆ ಸಕಲೊತ್ಪ
೬೬ ತ್ಯಕುಳಬಳಿ ಸಹಿತವಾಗಿ ನೀಉ ನಂಮ
೬೭ ಸ್ರಿ ಪುತ್ರ ಅನುಮತದಿಂದ ಕ್ರಯವನು
೬೮ ಕೊಟ್ಟೆಉ ನಿಂಮ ಪುತ್ರ ಪೌತ್ರ ಪಾರಂಪಾ
೬೯ ರೆ ಅಚೆಂದ್ರಾರ್ಕಸ್ತಾಯಿಗಳಾಗಿ ಸು

ಎರಡನೆಯ ಭಾಗದ ಬರಹ

೭೦ ಖದಲ್ಲು ಉಂಡುಕೊಂಡು ಯಿಹುದು
೭೧ ಯೆಂದು ಕೊಟ್ಟ ಕೊಪಳದ ಕಸಬೆಯ
೭೨ ಗೌಡಿಕಿಯ ಹಾಗು ಪಾಲುಕ್ರಯದ
೭೩ ಪತ್ರಕೊಟ್ಟ ಕರ್ತುವಿನ ವಪಿತಉ
೭೪ ಬೊಂಮಣಗೌಡನ ವೊಪಿತಉ
೭೫ ಬರಮಣಗೌಡನ ವೊಪಿತಉ
೭೬ ಯಿದಕ್ಕೆ ಸಾಕ್ಷಿಗಳು ಕೊಪಳದ ಸೀಮೆ
೭೭ ಯ ದೇಶಾಯಿಗಳು ಮುಂತದ ಕಸ
೭೮ ಬೆಗೌಡ ಸೆನಭೋವರು ಅಷ್ಟದಶ ಪ್ರ
೭೯ ಜೆಗಳು ಮುಂತಾದ ಅಯಗಾರರು
೮೦ ಸಾಕ್ಷಿಗಳು ॥ ಸೇನಭೋವ ದೇವ
೮೧ ದೇಶಾಯಿ ವಿಟಪ ಸಾಕ್ಷಿ ॥ ರಸಸಾಕ್ಷಿ ॥ ಪಟ

೮೨ ಸಿರಮಣಗೌಡನ ಸಾಕ್ಷಿ ॥ ಣ ಸೆಟಿ ಬುಸೆ
೮೩ ಗಿರಿಯಪ್ಪಗೌಡನ ಸಾಕ್ಷಿ ॥ ಸೆಟ್ಟಿ ಸಾಕ್ಷಿ ॥ ಮ
೮೪ ವಿರುಪಣಗೌಡನ ಮಗ ॥ ಲ್ಲರಸ ಸಾಕ್ಷಿ ॥
೮೫ ಚಿಕ್ಕ ಚೆಡಗಣಗಡನಸಾಕ್ಷಿ ॥ ಪಟಂಣಸೆಟಿ
೮೬ ಗುಂಮಟಪುರದ ಧರಣಿ ॥ ದರಂಣಿ ಪ
೮೭ ಗೌಡನ ಸಾಕ್ಷಿ ॥ ಗೊಂದಿ ॥ ॥ ಸಾಕ್ಷಿ ॥ ತಳವ
೮೮ ಗೊಂಡನ ಸಾಕ್ಷಿ ॥ ಕಂಮ ॥ ॥ ರ ಗಿರಿಯಪ್ಪನಯಿ
೮೯ ರ ಮುದಿಯಪನ ಸಾಕ್ಷಿ ॥ ॥ ಕ ಸಾಕ್ಷಿ ॥
೯೦ ಅಕಸಾಲೆ ಸಿರುಮಂಣನ ಸಾ ॥
೯೧ ಕ್ಷಿ ॥ ಮದಿಗ ಮುದಕ ಸಾಕ್ಷಿ ॥

[ಲೇಖಕರು ನೀಡಿರುವ ಪಾಠದಲ್ಲಿ ಕಂಡು ಬಂದಿರುವ ಕೆಲವು ವ್ಯತ್ಯಾಸಗಳನ್ನು ಸರಿಪಡಿಸಿ ಇಲ್ಲಿ ಪ್ರಕಟಿಸಲಾಗಿದೆ - (ಸಂ)]

(ನನ್ನ ಅಧ್ಯಯನಕ್ಕೆ ಶಾಸನಗಳನ್ನು ನೀಡಿ ಸಹಕರಿಸಿದ ಮಾಜಿ ಸಂಸತ್ ಸದಸ್ಯರಾದ ಕೊಪ್ಪಳದ ಶ್ರೀ ಅಗಡಿ ಸಂಗಣ್ಣನವರು ಅವರಿಗೆ ಕೃತಜ್ಞತೆಗಳು ).

ಹೊ. ನ. ನೀಲಕಂಠೇಗೌಡ *
ಎಂ. ಜಿ. ಮಂಜುನಾಥ **

# ಮೂಡುಬಿದರೆ ಜೈನಮಠದ ಅಪ್ರಕಟಿತ ತಾಮ್ರಶಾಸನಗಳು

ಜೈನರ ಕಾಶಿ ಎಂದು ಸುಪ್ರಸಿದ್ಧವಾಗಿರುವ ಮೂಡುಬಿದರೆಯ ಜೈನ ಮಠದಲ್ಲಿರುವ ಅಪ್ರಕಟಿತ ತಾಮ್ರಶಾಸನಗಳ ಬಗ್ಗೆ ಪ್ರಸ್ತುತ ಸಂಪ್ರಬಂಧವನ್ನು ರಚಿಸಲಾಗಿದೆ. ನಮಗೆ ಇಲ್ಲಿಯ ಜೈನಮಠದಲ್ಲಿನ ಸಂಗ್ರಹದಲ್ಲಿ ದೊರೆತ ಒಂದು ತಾಮ್ರಫಲಕದ ಎರಡೂ ಬದಿಗಳಲ್ಲಿ ಒಂದೊಂದು ಪ್ರತ್ಯೇಕ ಶಾಸನಗಳು ಉಪಲಬ್ಧವಾದವು. ಈ ತಾಮ್ರಫಲಕವು ೨೫ ಸೆಂಟೀಮೀಟರ್ ಅಗಲ ಹಾಗೂ ೩೯ ಸೆಂಟೀಮೀಟರ್ ಉದ್ದವಾಗಿದ್ದು ೯೦೦ ಗ್ರಾಂ ತೂಕವಿದೆ.

*ಶಾಸನದ ಸಾರಾಂಶ :* ಮೊದಲನೆಯ ಶಾಸನವು ಮೂಡುಬಿದರೆಯ ಜೈನಮಠದ ಪಟ್ಟಾಚಾರ್ಯರಾಗಿದ್ದ ತುಳು ಸಮಂತಭದ್ರದೇವರು ಮೂಡುಬಿದರೆಯ ತ್ರಿಭುವನ ತಿಲಕ ಚೈತ್ಯಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ವಿವರಗಳನ್ನು ದಾಖಲಿಸಿದೆ. ಹಾಗೂ ಮೂಡುಬಿದರೆಯ ಪಟ್ಟಾಚಾರ್ಯರು ತಮ್ಮ ಮಿತ್ರರಾದ ದೇಸಿಗಣದ ಅಯ್ಯಗಳ ಶಿಷ್ಯರಾದ ಬಲಾತ್ಕಾರ ಗಣದ ದೇವಣ್ಣನ ನೆರವಿನಿಂದಲೂ ಹಿರಿಯರಾದ ೧೬ ಮಂದಿ ಮುಖಂಡರ ನೆರವಿನಿಂದಲೂ ಮೂಡುಬಿದರೆಯ ಪಟ್ಟಣದಲ್ಲಿನ ವಿವಾದವೊಂದನ್ನು ಬಗೆಹರಿಸಿದ ಬಗ್ಗೆ ವಿವರಗಳನ್ನು ನೀಡುತ್ತದೆ.

ಶಕವರ್ಷ ೧೫೫೪ನೆಯ ಆಂಗೀರಸ ಸಂವತ್ಸರ ಅಂದರೆ ಕ್ರಿ.ಶ. ೧೬೩೨ನೆಯ ಇಸವಿ ದೀಪಾವಳಿ ಹಬ್ಬದ ವೇಳೆಯಲ್ಲಿ ಮಡಲಂಗಡಿ ಕೇರಿ ಮತ್ತು ಬೆಟ್ಟಕೇರಿಯವರು ಕಲ್ಲು, ಕವಣೆ, ಬಡಿಗೆಗಳಿಂದ ಹೊಡೆದಾಡಿಕೊಂಡದ್ದನ್ನು ಕಂಡು ಇನ್ನು ಮುಂದೆ ನೀವು ಈ ರೀತಿ ಹೊಡೆದಾಡಿಕೊಂಡರೆ ನಾವು, ನಮ್ಮ ಶಿಷ್ಯರು ಮತ್ತು ನಾಲ್ಕು ಗಣದ ಜಿನಮುನಿಗಳು ನಿಮ್ಮಿಂದ ಆಹಾರ ದಾನ ಸ್ವೀಕರಿಸುವುದಿಲ್ಲವೆಂದು ಹೇಳಿ ಯುಕ್ತಿಯಿಂದ ಒಪ್ಪಿಸಿ ಇನ್ನು ಮುಂದೆ ದೀಪಾವಳಿ ಹಬ್ಬದಲ್ಲಿ ಆಟ ಆಡುವಾಗ ಬರಿಕೈಯಿಂದಲೆ ಗುದ್ದಾಡಿ ಜಗಳ ಮಾಡುವುದು; ಜೀವದಯಾಷ್ಟಮಿ ಹಬ್ಬದ ಪ್ರಯುಕ್ತ ಎರಡೂ ಕೇರಿಗಳಲ್ಲಿ ಗೋಷ್ಠಿ ಮಾಡುವುದೆಂದು (ಸಮಾರಂಭ) ಎರಡೂ ಕೇರಿಗಳ ಜನರು ವ್ರತವಾಗಿ ಸ್ವೀಕರಿಸಿ ಒಪ್ಪಂದ ಮಾಡಿಕೊಳ್ಳುತ್ತಾರೆ. ಹಾಗೂ ಪ್ರತೀ ವರ್ಷವೂ ದೀಪಾವಳಿಯಲ್ಲಿ ಮೂರು ದಿನಗಳ ಕಾಲ ಚಂದ್ರನಾಥ ಸ್ವಾಮಿಯ ಹೊಸ ಬಸದಿಯ ಅಂಗಳದಲ್ಲಿ ಎರಡೂ ಕೇರಿಯವರು ಕೂಡಿ ಪಾತ್ರ ಭೋಗ ಸಹಿತವಾಗಿ (ಪಾತ್ರದವರು=ವೇಶ್ಯೆಯರು ಪಾದರ=ಹಾದರ) ರಥೋತ್ಸವ ಮಾಡೋಣ; ರಾತ್ರಿಯ ವೇಳೆಯಲ್ಲಿ ಹತ್ತು ಸಾವಿರ ದೀಪಗಳ ದೀಪೋತ್ಸವ ಮಾಡೋಣ; ಇದರ ವೆಚ್ಚಕ್ಕೆ ಆ ಬಸದಿಗಳ ಅರ್ಚಕರೂ ಸೇರಿದಂತೆ ಎಲ್ಲರೂ ಒಂದೊಂದು ವರಹವನ್ನು ಪ್ರತಿವರ್ಷವೂ ಕೊಡುಗೆಯಾಗಿ ಕೊಡಬೇಕು, ಎಂದೆಲ್ಲ ಕಟ್ಟಳೆ ಮಾಡಿಕೊಂಡ ವಿವರಗಳಿವೆ.

*ರಥೋತ್ಸವದ ಕಾಲದಲ್ಲಿ ಪಾತ್ರದವರ ಸೇವೆ ಅಂದರೆ ವೇಶ್ಯೆಯರ ನೃತ್ಯಸೇವೆಯನ್ನು ರಂಗಭೋಗವಾಗಿ ಸಲ್ಲಿಸುತ್ತಿದ್ದುದು ಸಮಕಾಲೀನವಾದ ಶಾಸನಗಳಲ್ಲಿ ದೊರೆತರೂ ಸಹ ಈ ಪದ್ಧತಿಯು ಜೈನಧರ್ಮೀಯರಲ್ಲಿಯೂ ಅಸ್ತಿತ್ವದಲ್ಲಿದ್ದುದು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ.*

ಮೂಡುಬಿದರೆಯಲ್ಲಿ ವಿದ್ಯಾಕೇಂದ್ರವೊಂದು ಜೈನಮಠದ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದುದು ಸಹ ಈ ಶಾಸನದಿಂದ ತಿಳಿದುಬರುತ್ತದೆ. ಮೂಡುಬಿದರೆಯ ಜೈನಮಠದ ಪಟ್ಟಾಚಾರ್ಯರ ಹೆಸರು ಪಾರಂಪರಿಕವಾಗಿ ಚಾರುಕೀರ್ತಿ ಪಂಡಿತಾಚಾರ್ಯ ಎಂಬುದಾಗಿಯೇ ಇದೆ. ಆದರೆ ಈ ಶಾಸನ ರಚಿತವಾದ ಕಾಲದಲ್ಲಿ ಅಂದರೆ ಕ್ರಿ. ಶ. ೧೬೩೨ರಲ್ಲಿ ಪಟ್ಟಾಚಾರ್ಯರಾಗಿದ್ದವರ ಹೆಸರು ಸಮಂತ ಭದ್ರದೇವ ಎಂಬುದಾಗಿರುವುದು ವಿಶೇಷವಾಗಿದೆ. ಬಹುಶಃ ನಂತರದ ಕಾಲದಲ್ಲಿ ಇದು ಬದಲಾಗಿರಬಹುದೆಂದು ತೋರುತ್ತದೆ.

* ಕನ್ನಡ ಉಪನ್ಯಾಸಕ, ಸರ್ಕಾರಿ ಪದವಿ ಪೂರ್ವ ಕಾಲೇಜು, ಬಂಗಾರಪೇಟೆ, ಕೋಲಾರ ಜಿಲ್ಲೆ
** ಕನ್ನಡ ಉಪನ್ಯಾಸಕ, ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಕೋಲಾರ

ಮೂಡುಬಿದರೆಯಲ್ಲಿ ಈ ಶಾಸನ ರಚಿತವಾದ ಕಾಲದಲ್ಲಿ ಇಪ್ಪತ್ತು ಜೈನಬಸದಿಗಳಿದ್ದವೆಂಬುದು ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ. ಆದರೆ ಈಗ ಮೂಡುಬಿದರೆಯಲ್ಲಿ ಹದಿನೆಂಟು ಬಸದಿಗಳು ಮಾತ್ರ ಇವೆ. ಉಳಿದೆರಡು ಬಸದಿಗಳು ಕಾಲಕ್ರಮದಲ್ಲಿ ನಾಶವಾಗಿರಬಹುದು. ಆ ಪ್ರದೇಶದಲ್ಲಿ ಉತ್ಖನನ ನಡೆಸಿದರೆ ಎರಡು ಬಸದಿಗಳ ಅವಶೇಷಗಳು ದೊರೆಯಬಹುದೆಂದು ತೋರುತ್ತದೆ.

ಎರಡನೆ ಶಾಸನವೂ ಸಹ ಸಾಂಸ್ಕೃತಿಕವಾಗಿ ಮಹತ್ವದ ಅಂಶಗಳನ್ನು ಹೊಂದಿರುವ ಅಪೂರ್ವ ಶಾಸನವಾಗಿದೆ. ಇದು ಕೆಳದಿಯ ವೆಂಕಟಪ್ಪ ನಾಯಕನ ಕಾಲಕ್ಕೆ ಸೇರಿದುದು. ಆತನ ಕೈಕೆಳಗೆ (ಅಧೀನದಲ್ಲಿ) ಮಂಗಳೂರು ಪ್ರಾಂತ್ಯವನ್ನು ಭಂಡಾರದ ದೇವಪ್ಪೊಡೆಯರು ಆಳುತ್ತಿದ್ದಾಗ ಮೂಡುಬಿದರೆಯ ಚಂದ್ರನಾಥ ಸ್ವಾಮಿಯ ತ್ರಿಭುವನ ತಿಲಕವೆಂಬ ಬಸದಿಯ ಜೀರ್ಣೋದ್ಧಾರದ ವಿವರಗಳು ಈ ಶಾಸನದಲ್ಲಿ ದಾಖಲಾಗಿವೆ.

ಮೂಡುಬಿದರೆಯ ಪಟ್ಟಾಚಾರ್ಯರಾದ ತುಳು ಸಮಂತ ಭದ್ರದೇವರು ಇಕ್ಕೇರಿಗೆ ಹೋಗಿ ವೆಂಕಟಪ್ಪ ನಾಯಕರನ್ನು ಭೇಟಿ ಮಾಡಿ ಪ್ರತಿವಾದಿಗಳೊಡನೆ ವಾದಮಾಡಿ ಜಯಿಸಿ ವೆಂಕಟಪ್ಪ ನಾಯಕರಿಂದ ಬಸದಿಯ ಜೀರ್ಣೋದ್ಧಾರಕ್ಕೆ ಎಂದು ಐನೂರು ವರಹ ಪಡೆದುಕೊಂಡು ಮಿಕ್ಕ ಸಹಾಯಕ್ಕೆ ದೇವಪ್ಪೊಡೆಯರಿಗೆ ಪತ್ರ ಬರೆಸಿಕೊಂಡು ಅವರ ಸಹಾಯದಿಂದ ಮರಮುಟ್ಟು ಪಡೆದು ಬಿದರೆಯಲ್ಲಿ ಒಂದು ಸಾವಿರ ವರಹ ಚಂದಾ ಎತ್ತಿ, ನಗರದಲ್ಲಿ ಎರಡು ಸಾವಿರ ವರಹ ಸಂಗ್ರಹಿಸಿ ಹನ್ನೊಂದು ತಿಂಗಳಲ್ಲಿ ಮರಗೆಲಸ ತಾಮ್ರದ ಕೆಲಸ ಪೂರ್ಣ ಮಾಡಿ ಪತ್ರ ಬರೆದು ಜಿನಮುನಿ ಸಂಘವನ್ನು ಕರೆಸಿಕೊಂಡು ವೈಭವದಿಂದ ಜೀರ್ಣೋದ್ಧಾರ ಪ್ರತಿಷ್ಠೆ ಮಾಡಿಸಿದರು. ಬಸದಿಯ ಪೂರ್ವದಿಕ್ಕಿನ ಹೆಬ್ಬಾಗಿಲ ಬಳಿ ಮನೆಗಳನ್ನು ಕಟ್ಟಿಕೊಂಡಿದ್ದ ಜನರನ್ನು ಒಪ್ಪಿಸಿ ಉಪಾಯದಿಂದ ಹನ್ನೆರಡು ಮನೆಗಳನ್ನು ಕೆಡವಿಸಿದರು. ದಾರಿಯನ್ನು ಸುಗಮಗೊಳಿಸಿದರು.

ಮಂಜಣ್ಣ ಎಂಬ ಮತ್ತೊಬ್ಬರು ಲಕ್ಷಾಂತರ ವರಹ ಸಂಗ್ರಹಿಸಿ ಹೊಸ ಬಸ್ತಿಯನ್ನು ಕಟ್ಟಿಸಿದರು. ಕೆಲವು ಕಾಲಾನಂತರ ಅದು ಜೀರ್ಣವಾದಾಗ ಪಟ್ಟದ ಬಿದುರೆಯ ಸಮಂತಭದ್ರದೇವರು ಎರಡನೆಯ ಜೀರ್ಣೋದ್ಧಾರವನ್ನು ಮಾಡಿಸಿದ ವಿವರಗಳು ಈ ಶಾಸನದಲ್ಲಿ ದೊರೆಯುತ್ತವೆ.

ಈ ಶಾಸನವು ಶಕವರ್ಷ ೧೫೪೪ನೆಯ ರುಧಿರೋದ್ಗಾರಿ ಸಂವತ್ಸರದ ವೈಶಾಖಮಾಸದಲ್ಲಿ ರಚಿತವಾಗಿದೆ ಅಂದರೆ ಕ್ರಿ.ಶ. ೧೬೨೨ನೆಯ ಇಸವಿ ಮೇ-ಜೂನ್‌ನಲ್ಲಿ ರಚಿತವಾಗಿದೆಯೆಂದು ಹೇಳಬಹುದು.

ಶಾಸನ ಫಲಕದ ಎರಡನೆಯ ಭಾಗದಲ್ಲಿ ಇದೇ ಶಾಸನದ ಎರಡು ಸಾಲುಗಳನ್ನು ಮಾತ್ರ ಬರೆಯಲಾಗಿದೆ. ಬಹುಶಃ ಲಿಪಿಕಾರ (ಕಂಡರಣೆಕಾರ)ನು ಈ ಭಾಗದಲ್ಲಿ ಬರೆಯಲು ಪ್ರಾರಂಭಿಸಿ ಯಾವುದೋ ಕಾರಣದಿಂದ ಮತ್ತೆ ಕೆಳಭಾಗದಲ್ಲಿ ಮೊದಲಿನಿಂದ ಬರೆದಿರಬಹುದೆಂದು ತೋರುತ್ತದೆ.

**ಶಾಸನದ ಪಾಠ**

**ತಾಮ್ರಶಾಸನದ ಒಂದನೆಯ ಭಾಗದಲ್ಲಿರುವ ಬರಹ**

೧ *ಶ್ರೀಮತು ಬಿದುರೆಯ ನಗರದಲ್ಲಿಯೆ ಹುಟ್ಟಿ ಶಾಲಿ ಬಳಿಯಲ್ಲಿ ಇದ್ದು ಸಕಲ (ಶಾ)**

೨ *ಸ್ತ್ರಾಭ್ಯಾಸವ ಮಾಡಿ ಕುಮಾರದೀಕ್ಷೆಯ ಮಾಡಿಕೊಂಡ ೨ನೆಯ ವರ್ಷಕ್ಕೆ ಚಂ*

೩ *ದ್ರನಾಥ ಸ್ವಾಮಿಯ ತ್ರಿಭುವನ ತಿಲಕವೆಂಬ ಚೈತ್ಯಾಲಯದ ೨ನೆ*

೪ *ಯ ಜೀರ್ನ್ನೋದ್ಧಾರವ ಮಾಡ್ಸಿ ಪ್ರತಿಷ್ಠೆಯ ಮಾಡಿಸಿದ ಸೇನಗಣದ ಪ*

೫ *ಟ್ಟದ ಬಿದುರೆಯ ತುಳು ಸಮಂತ ಭದ್ರ ದೇವರು ಬಲಾತ್ಕಾರ*

೬ *ಗಣದ ತಂಮ ಮಿತ್ರ (ದೇಸಿಗಣದ ಅಯ್ಯಗಳ ಶಿಸ್ಯಂ)* ದೇವಂಣಗಳ ಅನುಕೂಲದಿಂದಲು ಹಿರಿಯರಾ(ದ)* ೧೬ ಮಂ*

೭ *ದಿ ಹಲರ ಸಮ್ಮತದಿಂದಲೂ ಮಾಡಿದ ಕಾರ್ಯ್ಯ ಶಕ ವರುಷ ೧೫೫೪ನೆಯ ಆಂಗೀ*

೮ *ರಸ ಸಂವತ್ಸರದ ದೀಪಾ(ವ)* ೪ ಹಬ್ಬದಲ್ಲಿ ಮೂಡಲಂಗಡಿ ಕೇರಿಯ ಬೆಟ್ಟಕೇರಿಯ*

೯ *ವರು ಹಬ್ಬ ೩ ದಿನದಲ್ಲಿ ಕಲ್ಲು ಕವಣೆ ಹರಿಗೆ ಬಡಿಗೆಗಳಿಂದ ಯಿಟ್ಟಾಡಿ*

೧೦ *ಕಾದು ಕೊಂಬಲ್ಲಿ ಅನರ್ತ್ಥವಾದುದ ಕಂಡು ಜಿನಮತಕ್ಕೆ ಪ್ರಸಿದ್ಧವಾದ ಯಿ*

೧೧ *ಪುಣ್ಯ ನಗರದಲ್ಲಿ ಆರಮಾತನು ಕೇಳದೆ ಪಾಪಕ್ಕೂ ಅಪಕೀರ್ತ್ತಿಗು ಹೆದರದೆ ನಿಂವಂಥಾ*

೧೨ *ಶ್ರಾವಕರೆ ಹೀಗಿದ್ದ ಅನರ್ತ್ಥವ ಮಾಡುವಾಗ ನಾವು ನಂಮ ಶಿಷ್ಯರು ನಾಲ್ಕುಗಣದ ತಪಸ್ವಿಗ*

೧೩ *ಳು ಯಿ ನಗರದಲ್ಲಿ ಆಹಾರವ ಕೊಳ್ಳೆಉಯೆಂಬುದು ಮುಂತಾದ ಹಲವು ಯುಕ್ತಿಯಿಂದ ಬೋ*

೧೪ *ಧಿಸುವಾಗ ಆ ೨ ಕೇರಿಯವರು ಆ ಬೋಧನೆಗೆ ವೊಳಗಾಗಿ ಚಂದ್ರನಾಥ ಸ್ವಾಮಿಯ ಸಂನಿ*

೧೫ *ಧಿಯಲ್ಲಿ ಚತುಃಸಂಘದ ಮಧ್ಯದಲ್ಲಿ ತಾವು ಸಮಸ್ತರು ತ್ರಿಕರಣ ಶುದ್ಧಿಯಿಂದ ಮಾಡಿಕೊಂಡ ವ್ರ*

೧೬ ತದ ವಿವರ ಬೆಟ್ಟಕೇರಿಯ ಮಡಲಂಗಡಿ ಕೇರಿಯಲ್ಲಿ ಹಬ್ಬ ೩ ದಿನವು ಯೆಲ್ಲಿಯು ಚಿಕ್ಕಮಕ್ಕಳು

೧೭ ಮೊದಲಾಗಿ ಅಟ್ಟಳಿಗೆ ಹಾಕಿ ಪೂಜೆ ಹೊತ್ತಿಸಿ ಪ್ರಭಾವನೆ ಬಂದು ಆಡೂಡು ಕಂಚಿ ಕಾಯಿ ಮೊ

೧೮ ದಲಾದ ಕಾಯಿ ಕಲ್ಲುಗಳಿಂದ ಯಿಟ್ಟಾಡುವುದು ಬಡಿ(ಗೆ)**ಮೊದಲಾದುದರಿಂದ ಹೊಯಿದಾಡಿಕೊಳ್ಳ

೧೯ (ದ)** ಬರಿಕ್ಕೆಯಿಂದಲೆ ನೂಕುತಾಕು ಮಾಡಿ ಗುದ್ದಾಡಿ ಜಗಳವ ಮಾಡುವುದು ಜೀವದಯಾ

೨೦ ಷ್ಟಮಿಯಲ್ಲಿ ೨ ಕೇರಿಯಲ್ಲಿಯು ಗೋಷ್ಟಿಯನೆತ್ತೂದು ಇಷ್ಟು ನಂಮ ಜನ್ಮಪರ್ಯ್ಯಂತವಾಗಿಯೂ

೨೧ ಪಂಚಪರಮೇಷ್ಟಿಗಳು ಸಾಕ್ಷಿಯಾಗಿ ನಮಗೆ ದೇವರು ಪಾಲಿಸಿದ ವ್ರತವಾಗಿ ಯಿರಲಿ ಯೆಂ

೨೨ ದು ತಾವು ಸಮಸ್ತರು ವ್ರತವ ಕೈಕೊಂಡು ಮುಂದೆ ತಂಮ ಆಗಿ ಯಂಡಿರು ಮಕ್ಕಳಿಗು

೨೩ ಆಚಂದ್ರಾರ್ಕ್ಕವಾಗಿ ಯಿದೇ ವ್ರತವೆಂದು ತಾಮ್ರ ಶಾಸನಾಂಕಿತವಾಗಿ ಮಾಡಿಸಿ

೨೪ ದರು ಪೂಜಾಕಾರಿಗಳು ಹಬ್ಬ ೩ ದಿನವು ಹಬ್ಬದ ಮುಂದಣ ಹುಂಣಮೆ ಅಭಿಷೇಕದ

೨೫ ಲ್ಲಿಯು ತಂಮ ಕೇರಿಗಳಲ್ಲಿ ಅಟ್ಟಳಿಗೆ ಹಾಕಿ ಪೂಜೆ ಹೊತ್ತಿಸಿ ಆಡೂದು ಕಾಯಿಕಲ್ಲಿಂದ

೨೬ ಇಟ್ಟಾಡೂದು ಆಚಂದ್ರಾರ್ಕ್ಕವಾಗಿಯು ವ್ರತವಾಗಿರಲಿ ಯೆಂದು ತಾವು ವ್ರತವ ಮಾ

೨೭ ಡಿ ಕೊಂಡರು ಅದಕ್ಕೆ ಜೀಯ್ಯನವರು ಹಿರಿಯರಾದ ೧೬ ಮಂದಿ ಹಲರು ಸಂತೋಷವ ಮಾ

೨೮ ಡಿ ಕೊಂಡು ಬೆಟ್ಟಕೇರಿಯ ಮಡಲಂಗಡಿಯ ಕೇರಿಯ (ವ) **ರಿಗೆ ಕೊಟ್ಟ ಧರ್ಮವಾವುದೆಂದರೆ

೨೯ ವರುವರ್ಷವು ಹಬ್ಬ ೩ ದಿನವು ಚಂದ್ರನಾಥ ಸ್ವಾಮಿಯ ಹೊಸ ಬಸ್ತಿಯ ಹೊರ ಅಂಗಣದಲ್ಲಿ

೩೦ ೨ ಕೇರಿಯವರು ಕೂಡಿ ಪಾತ್ರಭೋಗಸಹಿತವಾಗಿ ತೇರು ಯೆಳಸೋಣ ರಾತ್ರೆಯಲ್ಲಿ ಪೊಳ ಅಂ

೩೧ ಗಣದಲ್ಲಿ ಅಯಿದು ಹತ್ತು ಸಾವಿರ ದೀಪವ ಹೊತ್ತಿಸಿ ದೀಪಾರಾಧನೆಯ ಮಾಡ್ಸಿ ಸೊಡರ ಬಲಿ ಬಂ

೩೨ ದು ೩ ದಿನವು ಸ್ವಾಮಿಗೆ ಅಭಿಷೇಕ ಪೂಜೆಗಳನು ಮಾಡಿ ಸುವೋಣ ಯಿ ಧರ್ಮ ವೆಚ್ಚಕ್ಕೆ ಹಣ

೩೩ ವ ಯೆತ್ತಿ ರೇಖ ಮಾಡಿ ವೆಚ್ಚಸೋಣ ಯೆಂದು ಯೋಚಿಸಿ ಭೂಮಿ ಚಂದ್ರ ಕಾಲಕ್ಕೂ ನಿರಂತರವಾಗಿ ನಡೆಯ

೩೪ ಬೇಕೆಂದು ಮಾಡಿಕೊಟ್ಟ ಧರ್ಮ ಯಿ ಕಟ್ಟಳೆಯನು ಕೈಕೊಂಡ ವ್ರತವನು ಪಾಪಾಪಕೀರ್ತ್ತಿಗೆ ಹೆದರದೆ ಆರು

೩೫ ಕೆಲಂಬರು ಅಳಿಸಿದರು ಅವರು ಇಹದಲ್ಲಿ ಚತುಃಸಂಘಕ್ಕೆ ಹೊರಗು ಯಿ ನಗರ ಧರ್ಮ್ಮವನು

೩೬ ಯಿಪ್ಪತ್ತು ಚೈತ್ಯಾಲಯಂಗಳನು ಅಳಿಸಿದ ಪಾಪಕ್ಕೆ ಭಾಜನರಾಗಿ ಪರತ್ರದಲ್ಲಿ ನರಕಾದಿ ದುರ್ಗ್ಗತಿ

೩೭ ಗೆ ಹೋದಾರು ಅವರ ವೊಯಿಸಿಕೊಂಡರಿಗು ಉಪೇಕ್ಷೆಯ ಮಾಡಿ ಯಿ ಕಾರ್ಯ್ಯವ ಕೆಡಿಸಿದ ಅ

೩೮ ನ್ಯಾಯಕಾರಿಗಳಿಗು ಅದೇ ದುರ್ಗ್ಗತಿಯಾಧೀತು. ತ್ರಿಕರಣ ಷುದ್ಧಿ ಯಿಂದಲು ಯಿ ಧರ್ಮ್ಮಕಾರ್ಯ

ಎರಡನೆಯ ಭಾಗದಲ್ಲಿರುವ ಬರಹ

೩೯ ವನು ಯಿಡೇರಿಸಿದವರು ಮಹಾಪುಣ್ಯ ಕೀರ್ತ್ತಿಗೆ ಭಾಜನರಾಗಿ ಧನಕನಕಸಂತಾನಾದಿ ಸಂಮೃದ್ಧಿಯಾಗಿ ಸ್ವರ್ಗಮೋ

೪೦ ಕ್ಷ ಸುಖವ ಪಡೆವರು ಯಿ ಧರ್ಮ್ಮವು ಆಚಂದ್ರಾರ್ಕ್ಕ ಸ್ಥಾಯಿಯಾಗಿ ನಡೆಯಲಿ ಮಂಗಲ ಶ್ರೀ ಶ್ರೀ ಶ್ರೀ

ತಾಮ್ರಪತ್ರದ ಎರಡನೆಯ ಬದಿಯಲ್ಲಿರುವ ಮತ್ತೊಂದು ಶಾಸನ

೧ ಶ್ರೀಮತು ಕೆಳದಿ ವೆಂಕಟಪ್ಪನಾಯಕರು ತುಳು ರಾಜ್ಯವನೆಲ್ಲ ಶಕ್ತಿಯಿಂದ ಕಟ್ಟಿಕೊಂಡು ಮಲೆ

೨ ನಾಡು ಗಡಿಯಾಗಿ ರಾಜ್ಯವನಾಳುವಾಗ ಮಂಗಲೂರ ಪಟ್ಟಡಿಗೆ ಮುದ್ರಾಮನುಷ್ಯರಾಗಿ ಯಿರು

೩ ವ ಭಂಡಾರದ ದೇವಪ್ಪೊಡೆಯರು ಅರಸುತನವ ಮಾಡುವಾಗ ಬಿದುರೆಯ ಚಂದ್ರನಾಥ ಸ್ವಾಮಿಯ ತ್ರಿ

೪ ಭುವನ ತಿಲಕವೆಂಬ ಚೈತ್ಯಾಲಯದ ಜೀರ್ನ್ನೋದ್ಧಾರವಾದ ವಿವರ ಬಿದುರೆಯಲ್ಲಿ ಹುಟ್ಟಿ ಶಾಲಿ ಬಳಿಯಲ್ಲಿ

೫ ಇದ್ದು ಬಾಲಬ್ರಹ್ಮಚಾರಿಯಾಗಿ ಸಕಲ ಶಾಸ್ತ್ರಾಭ್ಯಾಸವ ಮಾಡಿ ಚಿಕ್ಕಪ್ರಾಯದಲ್ಲಿ ಕುಮಾರದೀಕ್ಷೆಯ

೬ ಮಾಡಿಕೊಂಡ ಸೇನಗಣದ ಪಟ್ಟದ ಬಿದುರೆಯ ತುಳು ಸಮಂತಭದ್ರ ದೇವರು ತಾವು ಕಲುತ ಶಾಸ್ತ್ರವನು ಪ್ರತಿಪಾದಿಸು

೭ ವುದು ನಿಮಿತ್ತ ಯಿಕ್ಕೇರಿಗೆ ಹೋಗಿ ವೆಂಕಟಪ್ಪನಾಯಕರನು ಸಂಧಿಸಿ ಆ ಸಭೆಯಲ್ಲಿ ಪ್ರತಿವಾದಿಗಳ ಕೂಡೆ ವಾದಿಸಿ ಜ

೮ ಯಸಿ ವೆಂಕಟಪ್ಪ ನಾಯಕರ ಚಿತ್ತವ ಪಡದು ಚಂದ್ರನಾಥ ಸ್ವಾಮಿಯ ತ್ರಿಭುವನತಿಲಕವೆಂಬ ಚೈತ್ಯಾಲಯವ ಜೀರ್ನ್ನೋದ್ಧಾ

೯ ರದ ಕಾರ್ಯ್ಯಕರ್ತವ್ಯವಾಗಿ ಹೇಳಿಕೊಂಡು ವೆಂಕಟಪ್ಪ ನಾಯಕರ ಕಯಿಂದ ೫೦೦ ವರಹ ಪರ್ಯ್ಯಂತರವ ಆಗಳೇ ಕೊಟ್ಟದ್ದು

೧೦ ತೆಕ್ಕೊಂಡು ಮಿಕ್ಕಾದ ಸಹಾಯಕ್ಕೆ ದೇವಪ್ಪೊಡೆಯರಿಗೆ ವೊಪ್ಪರಾಯಸವನು ತರಿಸಿಕೊಂಡು ಬಿದುರೆಗೆ ಬಂದು ದೇವಪ್ಪೊಡೆ

೧೧ ಯರಕಂಡು ಅವರನು ಅಹುದು ಮಾಡಿಕೊಂಡು ದೇವಪ್ಪೊಡೆ ಯರ ಸಹಾಯದಿಂದ ಮರಮುಟ್ಟು ಮೊದಲಾದ ಸಾಮಗ್ರಿಯ

೧೨ ದೊರಕಿಸಿಕೊಂಡು ಬಿದುರೆ ನಗರದ ಯೆಂಟು ಮಂದಿ ಸೆಟ್ಟಿಗಾರರು ನಾಲ್ಕರು ಯೇಮೆಗೊಳಗಾದ ಸಮಸ್ತ ಹಲರ ಸಂಮತವ ಮಾ

೧೩ ಡಿ ಕೊಂಡು ಬಿದುರೆಯಿಂದ ೧೦೦೦ ವರಹ ಗೋಷ್ಟಿಯನೆತ್ತಿ ಮತ್ತೆ ಸಮಂತಭದ್ರದೇವರು ೧೬ ಮಂದಿ ಹಲರು ಸಹ ಆ ನಗರ

೧೪ (ಗರ)ಕ್ಕೆ ಹೋಗಿ ಯೆರಡು ಸಾವಿರ ವರಹ ಪರ್ಯ್ಯಂತರವಾಗಿ ಗೋಷ್ಟಿಯ ತಂದು ಶುಭಲಗ್ನದಲ್ಲಿ ಚಂದ್ರನಾಥ ಸ್ವಾಮಿಗೆ ಮುಖವಸ್ತ್ರ

೧೫ ವನು ಹಾಕ್ಸಿದ ೧೧ ತಿಂಗಳಿಗೆ ಮರಗೆಲಸ ತಾಮ್ರ ಕೆಲಸವನು ಹೊಸತಾಗಿ ಸಂಪೂರ್ನ್ನವ ಮಾಡ್ಸಿ ಶಕವರುಷ ೧೫೪೪ನೆಯ

೧೬ ರುಧಿರೋದ್ಗಾರಿ ಸಂವತ್ಸರದ ವೈಶಾಖಮಾಸದಲ್ಲಿ ತುರುಕಾಣ್ಯಪರ್ಯ್ಯಂತರ ವೋಲೆಯನಟ್ಟಿ ಸಂಘವ ಬರಿಸಿಕೊಂಡು ಮ
೧೭ ಹಾ ಸಂಭ್ರಮದಲ್ಲಿ ಜೀರ್ನ್ನೋದ್ಧಾರದ ಪ್ರತಿಷ್ಠೆಯನು ಮಾಡ್ಸಿದರು. ಅದಲ್ಲದೆಯು ಯಿೀ ಸಮಂತಭದ್ರದೇವರು ಮಂಜಂಣ
೧೮ ಗಳ ಕಾಲದಲ್ಲಿಯು ಕೂಡದೆ ಹೊರ ಅಂಗಣವ ಚೊಕ್ಕಶುದ್ಧವಾಗಿ ಆಲವ ಮಾಡಿಸಿದರು ಅದರ ವಿವರ ವೊಳ ಅಂ
೧೯ ಗಣದ ಕೋಟೆಯ ಮೂಡದಿಕ್ಕಿನ ದೊಡ್ಡ ಬಾಗಿಲು ತನಕಲು ಕೇರಿಯಾಗಿ ಮನೆಗಳ ಕಟ್ಟಿಕೊಂಡಿದ್ದುದನ್ನು
೨೦ ಯೆಡ ಬಲದಿಂದ ಆರಾರು ೧೨ ಮನೆಗಳನು ಉಪಾಯದಿಂದ ಕೆಡವಿಸಿ ವೊಳಕೋಟೆಯ ದೊಡ್ಡಬಾಗಿಲಿಂ
೨೦ಎ ದ ಮೂಡಲು ೩೦ ಮೂವತ್ತು ಕೋಲುಗಳ ತೆಂಕ ಬಡಗ ೧೨೦ ಕೋಲು ಅಗಲದಲ್ಲಿ ಆ ಮನೆಗಳ ಭೂಮಿಯನ್ನು ಹೊ
೨೧ ರ ಅಂಗಣದ ಭೂಮಿಯಲ್ಲಿ ಮಾಡ್ಸಿ ಆ ಮನೆಗಳ ಕಲ್ಲಿಂದಲೆ ಹೊರಕೋಟೆಯ ಬರಿಸಿ ಮೊದಲ ಹೊರಕೋಟೆಯಲ್ಲಿ
೨೨ ಮಾಡಿಸಿ ಚತುರವಟ್ಟುವ ಶುದ್ಧವ ಮಾಡಿಸಿ ಕಲ್ಲ ದ್ವಾರ ಬಂಧದಿಂದ ಮುಂಭಾಗದಲ್ಲಿ ಬಾಗಿಲನು ಹೂಡಿಸಿ
೨೩ ಹೊರಗೆ ಮತ್ತೊಂದೊಂದು ಮನೆಗಳ ಭೂಮಿಯ ತೆರವುಗೊಂಡು ಮಟ್ಟುಕಟ್ಟಿಸಿದರು ಆ ಹೊರ
೨೪ ಭೂಮಿಯಲ್ಲಿ ಬಾಗಿಲ ಯೆಡ ಬಲದಲ್ಲಿ ಹೊರ ಕೋಟೆಯಷ್ಟು ಅಗಲದಲ್ಲಿ ಯೆಲ್ಲಿಯು ಯಿಂನು ಮನೆಕಟ್ಟ ಬಾ
೨೫ ರದು ಹಿತ್ತಿಲ ಮಾಡಬಾರದು ಮಾಡಿದವರು ಚಂದ್ರನಾಥ ಸ್ವಾಮಿಗೆ ತಪ್ಪಿದವರು. ಇಷ್ಟೆಲ್ಲವನು ವೆಂಕಟಪ್ಪ
೨೬ ನಾಯಕರ ದಯಯಿಂದಲು ದೇವಪ್ಪೊಡೆಯರ ಸಹಾಯದಿಂದಲು ಹಲರು ಸಮಸ್ತರ ಸಂಮತದಿಂದಲು
೨೭ ಸಮಂತಭದ್ರದೇವರು ಸಂಪೂರ್ನ್ನವ ಮಾಡಿಸಿದರು. ಮೊದಲು ಶಾಲಿ ಬಳಿಯಲ್ಲಿದ್ದು ಸೇನಗಣದಲ್ಲಿ ದೀಕ್ಷೆಯ ಮಾಡಿ
೨೮ ಕೊಂಡು ಮಂಜಣಾಗಳು ಲಕ್ಷಾಂತರ ದ್ರವ್ಯವನು ಗೋಷ್ಟಿಯ ತಂದು ೩ ನೆಲೆಯಾಗಿ ಹೊಸಬಸ್ತಿಯ ಕಟ್ಟಿಸಿ
೨೯ ದರು ಮತ್ತೆ ಕೆಲವು ಕಾಲದ ಮೇಲೆ ಮರ ಜೀರ್ನ್ನವಾದರೆ ಸೇನಗಣದ ಪಟ್ಟಾಧಿಕಾರಿಯಾ(ದ)*೭ ಮುನಿಭದ್ರದೇವರು ಹಲರು ಸಹ
೩೦ ಜೀರ್ನ್ನೋದ್ಧಾರವ ಮಾಡಿಸಿದರು. ಮತ್ತೆ ಅದು ಹಳತಾದ ಬಳಿಕ ಸಮಸ್ತಹಲರ ಸಂಮತದಿಂದ ಸೇನಗಣದ ಪಟ್ಟದ
೩೧ ಬಿದುರೆಯ ತುಳು ಸಮಂತಭದ್ರದೇವರು ೨ನೆಯ ಜೀರ್ನ್ನೋದ್ಧಾರವನು ಮಾಡಿಸಿದರು. ಆದಿ ಮೊದಲಾಗಿಯು
೩೨ ಯಿೀ ಬಿದುರೆಯ ನಗರಧರ್ಮಕ್ಕೆ (ಒಳಗಾಗಿ) *೮ ಸೇನಗಣದವರು ಬಹಳ ವುಪಕರಿಸಿ(ಬಂದಿದ್ದಾರೆ) *೯ ಮುಂದಕ್ಕು ಇ
೩೩ ದೇ ಲೆಕ್ಕದಲ್ಲಿ ವುಪಕರಿಸಿ ಬರುವುದು ಮಂಗಲ ಮಹಾ ಶ್ರೀ ಶ್ರೀ ಶ್ರೀ ಯಾಗಿರು(ವುದಕ್ಕೆ) *೧೦ ೨ ಯೆರಡು ಬಾರಿ ಜೀ
೩೪ ರ್ನ್ನೋದ್ಧಾರವಾಯಿತ್ತು. ಶ್ರೀ ಶ್ರೀ

ತಾಮ್ರ ಪತ್ರದ ಕೆಳಭಾಗದಲ್ಲಿ ತಲೆಕೆಳಕಾಗಿ ಇರುವ ಬರಹ

೧ (ಶ್ರೀಮತು ಯಿಕ್ಕೇರಿ ವೆಂಕಟಪ್ಪನಾಯಕನು ತುಳುರಾಜ್ಯವನೆಲ್ಲ ಶಕ್ತಿಯಿಂದ ಕಟ್ಟಿಕೊಂಡು ಮಲೆನಾಡು ಗಡಿಯಾ
೨ ಗಿ ರಾಜ್ಯವನಾಳುವಾಗ ಮಂಗಲೂರ ಪಟ್ಟಡಿಗೆ ಮುದ್ರಾಮನು )

## ಅಡಿ ಟಿಪ್ಪಣಿಗಳು

*೧. 'ಶಾ' ಎಂಬ ಅಕ್ಷರವಿರುವ ಭಾಗದ ಹಲಗೆ ಪಕ್ಕಕ್ಕೆ ಬಾಗಿಕೊಂಡಿದೆ.
*೨. ಸಾಲಿನ ಮೇಲ್ಭಾಗದಲ್ಲಿ ಸಣ್ಣಗೆ ಬರೆಯಲಾಗಿದೆ.
*೩. ಸಾಲಿನ ಮೇಲ್ಭಾಗದಲ್ಲಿದೆ.
*೪. 'ವ' ಕಾರ ಬಿಟ್ಟುಹೋಗಿದೆ.
*೫. 'ಗ' ಎಂಬ ಅಕ್ಷರ ಬಿಟ್ಟುಹೋಗಿದೆ.
*೬. 'ವ' ಎಂಬ ಅಕ್ಷರ ಬಿಟ್ಟುಹೋಗಿದೆ.
*೭. 'ದ' ಎಂಬ ಅಕ್ಷರ ಬಿಟ್ಟುಹೋಗಿದೆ.
*೮. ಕಂಡರಣೆಕಾರ ಕಣ್ತಪ್ಪಿನಿಂದ 'ಬಳಲಿ'ಎಂದು ಕೊರೆದಿದ್ದಾನೆ.
*೯. ಕಂಡರಣೆಕಾರ ಕಣ್ತಪ್ಪಿನಿಂದ 'ಬಂದಧಾರೆ' ಎಂದು ಕೊರೆದಿದ್ದಾನೆ.
*೧೦. ಕಂಡರಣೆಕಾರ ಕಣ್ತಪ್ಪಿನಿಂದ 'ರುದ್ದಕ್ಕೆ' ಎಂದು ಕೊರೆದಿದ್ದಾನೆ.
*೧೧. ಕಂಡರಣೆಕಾರ ಶಾಸನವನ್ನು ಮೊದಲು ಈ ಭಾಗದಲ್ಲಿ ಕೊರೆಯುವುದಕ್ಕೆ ಹೊರಟು ಎರಡು ಸಾಲಿಗೇ ನಿಲ್ಲಿಸಿ ಮತ್ತೆ ಕೆಳಭಾಗದಲ್ಲಿ ಮೊದಲಿನಿಂದ ಕೊರೆದಿದ್ದಾನೆ.

ಎಚ್. ಜಯಮ್ಮ ಕರಿಯಣ್ಣ *

# ಎಳತ್ತೂರಿನ ಅವಶೇಷಗಳು

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲೂಕು, ಕಿನ್ನಿಗೋಳಿ ಸಮೀಪದಲ್ಲಿ ಎಳತ್ತೂರು ಗ್ರಾಮದಲ್ಲಿ ಶ್ರೀ ಮಹಾಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಮೊದಲು ಮುಳಿ ಹುಲ್ಲಿನಿಂದ ನಿರ್ಮಿಸಲಾಗಿತ್ತು. ಆದರೆ ಒಂದು ರಾತ್ರಿ ಈ ಮುಳಿ ಹುಲ್ಲಿನ ದೇವಾಲಯಕ್ಕೆ ಬೆಂಕಿ ಬಿದ್ದು ಸುಟ್ಟು ಹೋದ ನಂತರ ಊರಿನವರೆಲ್ಲರ ಸಹಕಾರದಿಂದ ದೇವಸ್ಥಾನದ ಜೀರ್ಣೋದ್ಧಾರ ವಾಗಿದೆ ಎಂದು ಆ ಊರಿನ ಹಿರಿಯರು ತಿಳಿಸಿದರು. ಬೆಂಕಿ ಬಿದ್ದ ಕಾಲವನ್ನು ಯಾರು ನಿಖರವಾಗಿ ತಿಳಿಸಲಿಲ್ಲ.

ದೇವಾಲಯಕ್ಕೆ ಸೇರಿದ ಗರ್ಭಗುಡಿಯಲ್ಲಿ ಎರಡು ಕೋಣೆ ಯಿದೆ. ಹಿಂದಿನ ಕೋಣೆಯಲ್ಲಿ ಶ್ರೀ ಮಹಾಲಿಂಗೇಶ್ವರ ಸ್ವಾಮಿಯ ಲಿಂಗ ಪ್ರತಿಷ್ಠಾಪಿಸಲಾಗಿದೆ. ಲಿಂಗವು ಸುಮಾರು ೩½ ಅಡಿ ಎತ್ತರವಾಗಿದೆ. ಲಿಂಗದ ಭಾಗವು ವೃತ್ತಾಕಾರವಾಗಿದ್ದು ಬ್ರಹ್ಮ ಸೂತ್ರವು ಪ್ರಾಚೀನ ಲಿಂಗಗಳಲ್ಲಿರುವಂತೆ ಬಾಣದಾಕಾರದಲ್ಲಿದೆ. ಪೀಠ ಚೌಕಾಕಾರವಾಗಿದೆ. ಅಧೋ ಕಮಲ, ಚೌಕಾಕಾರದ ವಿಷ್ಣು ಭಾಗ, ಅನಂತರ ಊರ್ಧ್ವಮುಖ ಕಮಲಾಕಾರವಾಗಿದೆ. ಮುಂದಿನ ಕೋಣೆಯಲ್ಲಿ ಪೂಜಾ ಸಾಮಾನುಗಳನ್ನಿಡುತ್ತಾರೆ.

ದೇವಾಲಯದ ಬಳಿಯಲ್ಲಿ ಗಣೇಶನ ಗುಡಿಯೂ ಇತ್ತಂತೆ. ದೇವಾಲಯಕ್ಕೆ ಬೆಂಕಿ ಬಿದ್ದ ಸಂದರ್ಭದಲ್ಲಿ ಭಗ್ನಗೊಂಡ ಗಣೇಶನ ವಿಗ್ರಹವನ್ನು ಸಮುದ್ರದಲ್ಲಿ ಹಾಕಿದರಂತೆ. ಈಗ ಶಿವಲಿಂಗದ ಮುಂದೆ ಎರಡು ಚಿಕ್ಕದಾಗಿರುವ ಗಣೇಶನ ವಿಗ್ರಹಗಳಿವೆ. ಅವುಗಳಲ್ಲಿ ಒಂದು ಪ್ರಾಚೀನ ಶಿಲ್ಪವಾಗಿದ್ದು ಕ್ರಿ.ಶ. ಸುಮಾರು ೯ನೇ ಶತಮಾನಕ್ಕೆ ಸೇರಿದೆ. ಮತ್ತೊಂದು ಗಣೇಶನ ಮೂರ್ತಿ ಕ್ರಿ.ಶ. ಸುಮಾರು ೧೪ನೇ ಶತಮಾನಕ್ಕೆ ಸೇರಿದ್ದಾಗಿದೆ. ಪಾಣಿ ಪೀಠದ ಬಳಿ ಸಾಲಿಗ್ರಾಮವೂ ಇದೆ. ದೇವಾಲಯದ ಮುಂದೆ ಇರುವ ನಂದಿ ಮಂಟಪ ಇತ್ತೀಚಿನದಾಗಿದ್ದು ನಂದಿ ಶಿಲ್ಪವನ್ನು ಸುಮಾರು ೧೯೩೫ರಲ್ಲಿ ಪ್ರತಿಷ್ಠಾಪಿಸಲಾಗಿದೆ.

ಅನತಿ ದೂರದಲ್ಲಿ ಪ್ರತ್ಯೇಕವಾಗಿ ತೀರ್ಥ ಮಂಟಪವಿದೆ. ನಾಲ್ಕು ಕಂಬಗಳ ಚೌಕಾಕಾರದ ಒಂದು ಮಾಡು ಇದೆ. ಗರ್ಭಗುಡಿ ಮತ್ತು ತೀರ್ಥ ಮಂಟಪಕ್ಕೆ ನಡುವೆ ಪ್ರದಕ್ಷಿಣಾ ಪಥ ವಿಶಾಲವಾಗಿದೆ. ಪ್ರದಕ್ಷಿಣೆ ಬರುವ ಈ ಜಾಗದಲ್ಲಿ ಅಂದರೆ ದೇವಾಲಯದ ಬಲಭಾಗದಲ್ಲಿ ಒಂದು ಎಡಭಾಗದಲ್ಲಿ ಒಂದು ಲಿಂಗವಿದೆ. ಗುಡಿಗೆ ಸುಮಾರು ೧೫ ಅಡಿ ದೂರದಲ್ಲಿ ಒಳ ಪ್ರಾಕಾರವೂ; ದೇವಾಲಯದ ಮುಂದೆ ಸುಮಾರು ೨೦-೩೦ ಅಡಿ ಅಂತರದಲ್ಲಿ ಉತ್ತರ-ದಕ್ಷಿಣಕ್ಕೆ ಹೊರ ಪ್ರಾಕಾರವಿದೆ. ಇವೆರಡರ ನಡುವೆ ಬೃಹದಾಕಾರದ ದಂಬೆ ಕಲ್ಲಿನ ಮೇಲೆ ಧ್ವಜಸ್ತಂಭವಿದ್ದು ಅದಕ್ಕೆ ತಾಮ್ರದ ತಗಡನ್ನು ಹೊದಿಸಲಾಗಿದೆ.



ಪೂರ್ವಾಭಿಮುಖವಾಗಿರುವ ಶ್ರೀ ಮಹಾಲಿಂಗೇಶ್ವರ ದೇವಾಲಯದ ಬಲಭಾಗದಲ್ಲಿ ಒಂದು ಕನ್ನಡ ಲಿಪಿ ಮತ್ತು

* ಆಶೀರ್ವಾದ, ನಂ. ೨೯೩೩, ೧೩ನೇ ಮುಖ್ಯ ರಸ್ತೆ, ವಿಜಯನಗರ ೬ನೇ ಹಂತ, ಬೆಂಗಳೂರು - ೫೬೦ ೦೪೦

ಭಾಷೆಯ ಶಾಸನ ಕಲ್ಲನ್ನು ನಿಲ್ಲಿಸಿದ್ದಾರೆ. ೨೦ ಸಾಲನ್ನು ಹೊಂದಿರುವ ಈ ಶಾಸನದಲ್ಲಿ ಸಾಲಿನಿಂದ ಸಾಲಿಗೆ ಅಡ್ಡಗೆರೆಗಳನ್ನು ಆಳವಾಗಿ ಕೊರೆದಿದ್ದು, ಆ ಅಡ್ಡಗೆರೆಗಳು ಉಳಿದುಕೊಂಡಿವೆ. ಆದರೆ ವಾತಾವರಣದ ನೇರ ಹೊಡೆತಕ್ಕೆ ಸಿಲುಕಿ ಶಾಸನದ ಅಕ್ಷರಗಳು ಹಾಳಾಗಿವೆ. ಪೂರ್ಣವಾಗಿ ಶಾಸನದ ಪಾಠ ಲಭ್ಯವಿಲ್ಲ. ಎಳತೂರ ಪಾಂಡೇಶ್ವರ ಸ್ವಾಮಿ, ತಾಲಪಾಡಿ, ಮಂಗಳಪುರ, ಸಖರಾಯ ಹಾಗೂ ೧೧೧ ಅಡಕೆಯ ಧರ್ಮದ ಉಲ್ಲೇಖವಿದೆ. ಸಖರಾಯ ಎಂಬುವನು ಅರಸನೋ ಅಥವಾ ಪಾಳೆಯಗಾರನೋ ತಿಳಿದು ಬರುವುದಿಲ್ಲವಾದರೂ ಈತನು ದೇವಾಲಯಕ್ಕೆ ದಾನಕೊಟ್ಟಿರುವಂತೆ ಊಹಿಸಬಹುದು.

### ಎಳತ್ತೂರಿನ ಶಾಸನ ಪಾಠ

೧ ಶ್ರೀ ನಮಸ್ತುಂಗ.....
೨ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಸಂಭ . . .
೩ ವೇ ॥ ಸ್ವಸ್ತಿ ಶಕವರುಷ ೧.... ನೆಯ ... ಸಂವತ್ಸರದ ....
೪ ಸೋಮಗ್ರಹಣದೊಳು....ಯ ..... ಶ್ರೀ .......
೫ ದಲೂ....................
೬ ..........................................
೭ ..........................................
೮ .........ಮಂಗಳಪುರವನೂ ಆನಂದ......
೯
೧೦ ..ಗಾಗೆ ......
೧೧ .....ಶ್ರೀ ಪಾ............ಗಂ.......
೧೨ ...ಅಂತು ಆವ ನಾನೂ ........
೧೩ ...ಗೆ ಯಿ ೧೧೧...ಅಡಕೆಯ ಧರ್ಮ....
೧೪ ವನೂ ... ಕೊಟ ಮಾದರ ಸಲುವ ಮಂಗಳ ಪು
೧೫ ರದ ಶ್ರೀ ಸಖರಾಯ . ನೂ....ಗ್ರಾಮ ಎಳತೂರಾ
೧೬ ಶ್ರೀ ಪಾಂಡ್ಯೆಶ್ವರ ಸ್ವಾಮಿ
೧೭ .....ಯಿಂದ ....ಯಿಂತೀ ಪಾಣಂ .... ತಾಲಪಾಡಿ
೧೮ ನಿ
೧೯
೨೦

ಎಳತ್ತೂರಿನಿಂದ ಸುಮಾರು ೩ ಕಿಲೋ.ಮೀಟರ್ ದೂರದಲ್ಲಿ ತಾಳಪಾಡಿ ಗ್ರಾಮವಿದ್ದು. ಅಲ್ಲಿ ಮತ್ತೊಂದು ಶಾಸನದ ಕಲ್ಲಿದೆ. ಈ ಕಲ್ಲಿನ ಅರ್ಧಭಾಗ ಭೂಮಿಯಲ್ಲಿ ಹೂತು ಹೋಗಿದೆ. ಲಭ್ಯವಾದ ಪಾಠದ ಪ್ರಕಾರ ತಳಭಾಗದಲ್ಲಿ ಅಕ್ಷರಗಳು ತುಟಿತವಾಗಿದ್ದು ಪೂರ್ಣ ಪಾಠ ಲಭ್ಯವಿಲ್ಲ.

ಈ ಶಾಸನದಲ್ಲಿ ಶಕ ವರುಷ ೧೫೨೮ ವಿಶ್ವಾವಸು, ಧನುರ್ಮಾಸ ೯, ಆದಿತ್ಯವಾರವೆಂದಿದ್ದು ಇದು ಕ್ರಿ.ಶ. ೮-೧೨-೧೬೦೫ರ ಭಾನುವಾರಕ್ಕೆ ಸರಿಹೊಂದುತ್ತದೆ. ಶಾಸನದಲ್ಲಿ ಉಕ್ತನಾದ ಅರಸ ಬಂಕಿದೇವಾಳುಪೇಂದ್ರನಾಗಿದ್ದು ರಾಜಧಾನಿ ಮಂಗಳಾಪುರದ ಆಚಾರ್ಯರಿಗೆ ದಾನ ನೀಡಿದಂತೆ ತಿಳಿದು ಬರುತ್ತದೆ.

ಕರ್ನಾಟಕ ರಾಜ್ಯ ಗ್ಯಾಜೆಟಿಯರ್ 'ದಕ್ಷಿಣ ಕನ್ನಡ ಜಿಲ್ಲೆ' ಪುಟ ೪೮ರಲ್ಲಿ ಇಮ್ಮಡಿ ವೀರಪಾಂಡ್ಯದೇವನೇ (ಕ್ರಿ. ಶ. ಸುಮಾರು ೧೩೯೦-೧೪೦೦) ಕೊನೆಯ ಅಳುಪ ರಾಜನೆಂದು ತಿಳಿಸಿರುತ್ತಾರೆ. ಆದಾದ ನಂತರ ಕ್ರಿ. ಶ. ೧೪೦೫ರ ಶಾಸನದಲ್ಲಿ ಕೊಮ್ಮ ಎಂಬುವನು ಅಳುಪ ವಂಶದ ಅರಸನಾಗಿ ಇತ್ತಲ ಮಹಾದೇವ ದೇವಸ್ಥಾನಕ್ಕೆ ದಾನ ನೀಡಿರುವಂತೆ ತಿಳಿಯುತ್ತದೆ. ಮುಂದೆ ಕ್ರಿ. ಶ. ೧೫೨೪ರ ವರೆಗೆ ಮಾತ್ರ ಇವನ ಪೀಳಿಗೆಯವರ ಶಾಸನಗಳು ದೊರೆಯುತ್ತವೆ. ಹೀಗಾಗಿ ಈಗ ದೊರೆತಿರುವ ಶಾಸನ ಕ್ರಿ.ಶ. ೧೬೦೫ರ ದಾಗಿದ್ದು ಬಹುಶಃ ಮೂಲ ಅಳುಪ ವಂಶದ (ಪಾಂಡ್ಯ) ಮುಂದುವರಿಕೆಯ ಭಾಗವಿರುವಂತೆ ತೋರುತ್ತದೆ. ಇವರು ರಾಜಧಾನಿಯನ್ನು ಮಂಗಳಪುರವೆಂದು ಹೇಳಿಕೊಂಡಿರುವುದರಿಂದ ಮೂಲ ಅಳುಪರಸರ ಗುಂಪಿಗೆ ಸೇರಿದವರೆಂದು ಹೇಳಬಹುದಾಗಿದೆ.

### ತಾಳಪಾಡಿ ಶಾಸನ ಪಾಠ

೧ ಸ್ವಸ್ತಿ ಶ್ರೀಮತು ಪಾಂಡ್ಯ .... ಮತ್ತರಾಯ ಗಜಾಂ
೨. ಕುಷ ಬಂಕಿದೇವಾ [ಳು?] ಪೇಂದ್ರ ದೇವರ ವಿಜಯ ರಾಜ್ಯ
೩ ಮುತ್ತರೋತ್ತ. ಭಿ ವೃದ್ಧಿ ಪ್ರವರ್ಧಮಾ ಚಂದ್ರರ್ಕತಾರ
೪ ೦ಬರಂ ಸಲುತ್ತಮಿರೆ ....ಪ್ರತಿ .. ಕರಾಗಿ ಸುಖ
೫ ಸಂಕತಾ ವಿನೋದದಿಂ ರಾಜ್ಯಂಗೆಯುತ್ತಮಿರ್ದು
೬ .... ಶಕ ವರಿಷ ೧೫೨೮ನೆಯ ವಿಶ್ವಾವಸು
೭ ಸಂವತ್ಸರದ ಧನುರ್ಮಾಸ ೯ನೆಯ ಆ ಶ್ರೀ ಮತು
೮ ರಾಜಧಾನಿ ಮಂಗಳಾಪುರದ ಚಾರ್ಯರ ಮನೆ
೯ ಯ ಭುವನಾ ಮಾ..... ಧವೊಮಿಸಾ ಆಯಿತು ಮ
೧೦ ....೦ಗ್ರಂದಾ ಊರಲು ಕುಳ..... ಮಹರಿ
೧೧ .... ಬಿಳಿಯಂದಿರು ಕೊಟ್ಟ .....
೧೨ ... ಸಮಸ್ತ ಪ್ರಧಾನರು ....
೧೩ .... ಧಾರಾಪೂರ್ವಕ ....

(ಭೂಮಿಯಲ್ಲಿ ಸೇರಿದೆ )

[ಲೇಖಕರು ಕೊಟ್ಟಿರುವ ಪಾಠವನ್ನು ಪ್ರಕಟಿಸಿದೆ - (ಸಂ.)]

[ಶಾಸನ ಇರುವ ಜಾಗವನ್ನು ತೋರಿಸಿ, ವಿವರಗಳನ್ನು ನೀಡಿ ಸಹಕರಿಸಿದ ಖ್ಯಾತ ಕಾದಂಬರಿಕಾರ್ತಿ ಎಳತ್ತೂರು ಗುತ್ತುವಿನ ಗೆಳತಿ ಶ್ರೀಮತಿ ಇಂದಿರಾ ಹೆಗಡೆಯವರಿಗೆ ಹಾಗೂ ಶಾಸನಗಳ ಪ್ರತಿ ತೆಗೆದು ಓದಲು ನೆರವಾದ ಗುರುಗಳಾದ ಡಾ॥ ದೇವರ ಕೊಂಡಾರೆಡ್ಡಿ ಅವರಿಗೆ ನನ್ನ ಹೃತ್ಪೂರ್ವಕ ನಮಸ್ಕಾರಗಳು.]

ಎ. ಆರ್. ಗುರು *

# ವಾಟಗಾರು ಗ್ರಾಮದ ಮಾಸ್ತಿಕಲ್ಲುಗಳು ಹಾಗೂ ಒಂದು ಅಪ್ರಕಟಿತ ಶಾಸನ

ಚರಿತ್ರೆಯ ಪೂರ್ವಕಾಲದಿಂದ ವಿಶ್ವದ ಅನೇಕ ಭಾಗಗಳಲ್ಲಿ ಇದ್ದಂತಹ ಒಂದು ಪದ್ಧತಿಯೇ ಸತಿ.*೧ ಅಂತೆಯೇ ಭಾರತದಲ್ಲಿಯೂ ಇದ್ದ ಈ ಪದ್ಧತಿಯು ರಾಜಸ್ಥಾನ ಮತ್ತು ಬಂಗಾಳಗಳಲ್ಲಿ ಜನಸಾಮಾನ್ಯರ ಗಮನ ಸೆಳೆದಿದ್ದರೂ, ಕರ್ನಾಟಕದಲ್ಲಿ ದೊರೆಯುವಷ್ಟು ಸತಿಸ್ಮಾರಕಗಳು ಉಳಿದ ರಾಜ್ಯಗಳಲ್ಲಿ ದೊರೆತಿಲ್ಲ.** ಅದರಲ್ಲಿಯೂ ಈ ವಿಷಯದಲ್ಲಿ ಶಿವಮೊಗ್ಗ ಜಿಲ್ಲೆಗೆ ರಾಜ್ಯದಲ್ಲಿಯೇ ಅತ್ಯಂತ ವಿಶಿಷ್ಟವಾದ ಸ್ಥಾನವಿದೆ.

ಸತಿಸ್ಮಾರಕಗಳಲ್ಲಿ ಎರಡು ವಿಧಗಳಿವೆ. ೧) ಶಾಸನ ಸಹಿತ ಸತಿಶಿಲ್ಪಗಳು, ೨) ಶಾಸನ ರಹಿತ ಸತಿಶಿಲ್ಪಗಳು. ಶಿಲ್ಪವಿಲ್ಲದೆ ಶಾಸನವಿರುವ ಸತಿಸ್ಮಾರಕಗಳು ವಿರಳ.*೨ ಶಾಸನವಿಲ್ಲದ ಸತಿಸ್ಮಾರಕಗಳ ಕಾಲಗಣನೆಯು ಕಷ್ಟಕರವೆಂದು ತಿಳಿಯಲಾಗಿದೆ, ಆದರೂ ಕೆತ್ತನೆಯ ಸ್ವರೂಪದ ಆಧಾರದ ಮೇಲೆ ಹಾಗೂ ವಸ್ತ್ರಾಲಂಕರಣದ ವಿನ್ಯಾಸದ ಮೇಲೆ ಕಾಲವನ್ನು ಊಹಿಸುವ ಸಾಧ್ಯತೆಯಿದೆ. ಕರ್ನಾಟಕದಲ್ಲಿ ದೊರೆತ ಶಾಸನವಿರುವ ಅತ್ಯಂತ ಪ್ರಾಚೀನ ಸತಿಸ್ಮಾರಕವು ಕ್ರಿ. ಶ. ಸುಮಾರು ೪೦೦*೩ ಅಥವಾ ಕ್ರಿ. ಶ. ೬ನೇ ಶತಮಾನದ ಪೂರ್ವಾರ್ಧಕ್ಕೆ*೪ ಸೇರುತ್ತದೆ ಎಂದು ತಿಳಿಯಲಾಗಿದೆ. ಸಂಸ್ಕೃತ ಭಾಷೆಯಲ್ಲಿರುವ ಈ ಶಾಸನವು ಸೊರಬ ತಾಲೂಕಿನ ಕವಡಿ ಗ್ರಾಮದಲ್ಲಿ ದೊರೆತಿದೆ.

ಪ್ರಸ್ತುತ ಲೇಖನದ ವಾಟಗಾರು ಗ್ರಾಮವು ನಿಸರ್ಗದತ್ತ ಸೌಂದರ್ಯದಿಂದ ಕೂಡಿದ, ಅಡಿಕೆ ಮತ್ತು ಭತ್ತವನ್ನು ಫಲವತ್ತಾಗಿ ಬೆಳೆಯುವ ಪ್ರದೇಶವಾಗಿದ್ದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಮುತ್ತೂರು ಹೋಬಳಿಯಲ್ಲಿ ತೀರ್ಥಹಳ್ಳಿ - ಕೊಪ್ಪ ಹೆದ್ದಾರಿಯಲ್ಲಿ ತೀರ್ಥಹಳ್ಳಿಯಿಂದ ಸುಮಾರು ೧೨ ಕಿ. ಮೀ. ದೂರದಲ್ಲಿದೆ. ವಾಟಗಾರು ಮತ್ತು ಅದಕ್ಕೆ ಹೊಂದಿಕೊಂಡಿರುವ ಹಿಲೀಕೆರೆ ಊರುಗಳಲ್ಲಿ ದೊರೆತ ಒಂದು ಇಕ್ಕೈ ಮತ್ತು ಆರು ಒಕ್ಕೈ ಮಾಸ್ತಿಕಲ್ಲುಗಳನ್ನು ಈ ಪ್ರಬಂಧದ ಮೂಲಕ ಅಧ್ಯಯನ ಮಾಡಲಾಗಿದೆ.

*ವಾಟಗಾರು :* ಇಲ್ಲಿ ದೊರೆತ ಎರಡು ಒಕ್ಕೈ ಮಾಸ್ತಿ ಶಿಲ್ಪಗಳಲ್ಲಿ ಒಂದು ಶಾಸನಸಹಿತವಾಗಿದೆ. ಇದುವರೆಗೆ ತಿಳಿದು ಬಂದಂತೆ ಈ ಶಾಸನವು ಪ್ರಕಟವಾಗಿಲ್ಲ. ಎರಡು ಕಲ್ಲುಗಳೂ ಪೂರ್ವಾಭಿಮುಖವಾಗಿ ಒಂದರ ಹಿಂದೆ ಇನ್ನೊಂದಿದೆ. ಇವುಗಳ ವಿವರ ಹೀಗಿದೆ :

*ಶಿಲ್ಪ ೧. ಶಾಸನಸಹಿತ ಮಾಸ್ತಿಕಲ್ಲು :* ವಾಟಗಾರು ಶಿವಾನಂದ ಗೌಡರ ಮನೆಯ ಎಡಗಡೆಯ ಹಿಂಭಾಗದ ಮೂಲೆಯಿಂದ ಸುಮಾರು ನೂರು ಅಡಿ ದೂರದಲ್ಲಿರುವ ಈ ಕಲ್ಲು ೪೭'' ಎತ್ತರ ಹಾಗೂ ೧೪'' ನಿಂದ ೨೫'' ಅಗಲವಿದೆ. ಶಾಸನದ ಮೊದಲ ಸಾಲು ತಳಭಾಗದಿಂದ ೫'' ಎತ್ತರದಲ್ಲಿದೆ. ಸಾಧಾರಣ ಗುಣದ ಅಗ್ನಿಶಿಲೆಯ ಚಪ್ಪಡಿಯ ಮೇಲೆ ಶಿಲ್ಪವನ್ನು ಕೆತ್ತಲಾಗಿದೆ.

ಕೆಳಹಂತದಲ್ಲಿ ಅಶ್ವಾರೋಹಿಯಾದ ವೀರನಿಗೆ ಸ್ತ್ರೀಯೊಬ್ಬಳು ಛತ್ರಿಯನ್ನು ಹಿಡಿದಿದ್ದಾಳೆ. ಅಶ್ವದ ಮುಂದೆ ಯೋಧನೊಬ್ಬನಿದ್ದಾನೆ. ಎರಡನೆಯ ಹಂತದಲ್ಲಿ ದಂಪತಿಗಳು ಕೈಲಾಸದೆಡೆಗೆ ಸಾಗುತ್ತಿದ್ದಾರೆ. ಈ ಹಂತವು ಬಲಭಾಗಕ್ಕೆ ಒಕ್ಕೈ ತೋಳಾಗಿ ವಿಸ್ತರಿಸಲ್ಪಟ್ಟಿದೆ. ತೋಳಿನಲ್ಲಿ ಕಡಗ ಕಂಕಣಗಳಿವೆ. ಸ್ತ್ರೀಯು ಹೆಬ್ಬೆರಳು ಮತ್ತು ತೋರು ಬೆರಳಿನ ನಡುವೆ ನಿಂಬೆಹಣ್ಣು ಹಿಡಿದಿದ್ದಾಳೆ. ಹಸ್ತದ ಮಧ್ಯದಲ್ಲಿ ಪದ್ಮವಿದೆ. ಮೂರನೆಯ ಹಂತದಲ್ಲಿ ಸೂರ್ಯ ಚಂದ್ರರ ಕೆಳಗೆ ಲಿಂಗವಿದೆ. ಲಿಂಗದ ಮುಂದೆ ಬಸವನ ಕೆತ್ತನೆಯಿದೆ. ಈ ಹಂತದ ಮೇಲ್ಭಾಗವು ಗುಮ್ಮಟಾಕಾರವಾಗಿದೆ.

---

* ಸಿ-೯, ಬಿಎಚ್‌ಇಎಲ್ ಟೌನ್‌ಶಿಪ್, ವಿಜಯನಗರ, ಬೆಂಗಳೂರು - ೫೬೦ ೦೪೦

[** ಆದರೆ ರಾಜಾಸ್ಥಾನದಲ್ಲಿ ಸತಿಸ್ಮಾರಕಗಳು ಪರ್ಯಾಯರೂಪದಲ್ಲಿ ವಿಪುಲವಾಗಿ ಲಭ್ಯವಾಗುತ್ತವೆ. ಆ ಶಿಲ್ಪಗಳಲ್ಲಿ ಕುದುರೆಯ ಚಿತ್ರವು ಸಾಮಾನ್ಯವಾಗಿ ಸಹಭಾಗಿ ಆಗಿರುತ್ತದೆ. - (ಸಂ.)]



ರಿಂದ ಆತನು ಒಬ್ಬ ಪಾಳೆಯಗಾರ ಅಥವಾ ಅಧಿಕಾರಿಯಾಗಿರಬಹುದು. ಶಾಸನದಲ್ಲಿ ಸತಿ ಕೈಗೊಂಡ ಸ್ತ್ರೀಯ ವಿವರಗಳು ಇಲ್ಲ.

*ಶಿಲ್ಪ ೨. ಶಾಸನರಹಿತ ಮಾಸ್ತಿಕಲ್ಲು* : ಮೇಲೆ ತಿಳಿಸಿದ ಕಲ್ಲಿನಿಂದ ಸುಮಾರು ೩೦೦ ಅಡಿ ಹಿಂದಿರುವ ಈ ಕಲ್ಲಿನ ಅಳತೆ ಎತ್ತರ ೬೧'' ಮತ್ತು ಅಗಲ ೩೩''. ಮೇಲಿನ ೧೨'' ಎತ್ತರ ತ್ರಿಕೋಣಾಕೃತಿಯಲ್ಲಿದೆ. ಈ ಶಿಲ್ಪವನ್ನು ಉತ್ತಮ ಗುಣಮಟ್ಟದ ಅಗ್ನಿಶಿಲೆಯ ಚಪ್ಪಡಿಯ ಮೇಲೆ ಕೆತ್ತಲಾಗಿದೆ.



ಶಿಲ್ಪದ ಮೊದಲನೇ ಹಂತದ ಕೆಳಗಿರುವ ಈ ಮೂರು ಸಾಲಿನ ಶಾಸನದ ಪಾಠ ಹೀಗಿದೆ.

೧ ಸಾಧಾರಣ ಸಂವತ್ಸರದ ಚಯಿತ್ರ ಶು
೨ ೧೦ರಲು ಅಜ್ಜ್ರುನಂ ಸತ್ತನು ಮಾ
೩ ರಯ ಕಲ್ಲನು ನಿಲಿಸಿದನೂ ಮಂಗಳ

ಎಪಿಗ್ರಾಫಿಯಾ ಕರ್ನಾಟಿಕ (ಸಂಪುಟ VII, ಶಿವಮೊಗ್ಗ ಜಿಲ್ಲೆ ಭಾಗ II)ದಲ್ಲಿ ಪ್ರಕಟವಾದ ಮುತ್ತೂರು ಹೋಬಳಿಯ ಯಾವ ಶಾಸನದಲ್ಲೂ ಅರ್ಜುನ ಅಥವಾ ಮಾರಯನ ಪ್ರಸ್ತಾಪವಿಲ್ಲ. ಅಲ್ಲದೆ ಶಾಸನದಲ್ಲಿ ಅರಸರ, ರಾಜ್ಯದ ಅಥವಾ ಊರಿನ ಹಾಗೂ ಮಡಿದ ದಿನದಲ್ಲಿ ವಾರದ ವಿಷಯವಿಲ್ಲ. ಲಿಪಿಯ ಸ್ವರೂಪದಿಂದ ಈ ಶಾಸನದ ಕಾಲ ಕ್ರಿ. ಶ. ೧೫ನೇ ಶತಮಾನದ ಉತ್ತರಾರ್ಧ ಎನ್ನಬಹುದು. ಹಾಗಿದ್ದಲ್ಲಿ ಈ ಶಾಸನದ ಕಾಲ ಕ್ರಿ. ಶ. ೧೪೯೦ (ಮಾರ್ಚ್ ತಿಂಗಳ ೩೧ನೇ ದಿನಾಂಕ, ಬುಧವಾರ) ** ಎನ್ನಬಹುದು. ವೀರನಿಗೆ ಛತ್ರಿ ಹಿಡಿದುದ

ನಾಲ್ಕು ಹಂತವಿರುವ ಈ ಶಿಲ್ಪದ ಕೆಳಹಂತದಲ್ಲಿ ಕೊಂಬನ್ನು ಊದುತ್ತಿರುವ ಪುರುಷನ ಮುಂದೆ ಯೋಧನೊಬ್ಬನು ಕುದುರೆಯನ್ನು ಹಿಡಿದಿದ್ದಾನೆ. ಅವನ ಎದುರಿಗೆ ಕತ್ತಿ ಮತ್ತು ಗುರಾಣಿಯನ್ನು ಹಿಡಿದ ವೀರನೊಬ್ಬ ಆಕ್ರಮಣ ಮಾಡುವಂತೆ ನಿಂತಿದ್ದಾನೆ. ಇನ್ನೊಂದು ಬದಿಗೆ ಬಿಲ್ಲನ್ನು ಹಿಡಿದ ವೀರನೊಬ್ಬ ನಿದ್ದಾನೆ. ಈ ಇಬ್ಬರು ವೀರರ ನಡುವೆ ವೃಕ್ಷದ ಚಿತ್ರಣವಿದೆ. ಎರಡನೇ ಹಂತದಲ್ಲಿ ಪಲ್ಲಕ್ಕಿಯೊಂದರಲ್ಲಿ ಕುಳಿತಿರುವ

ಪುರುಷನನ್ನು ಇಬ್ಬರು ಯೋಧರು ಹೊತ್ತಿದ್ದಾರೆ. ಈತನು ಖಡ್ಗ (ಅಥವಾ ಕಠಾರಿ)ಯನ್ನು ಹಿಡಿದಂತಿದೆ. ಒಂದು ಕಡೆಯಲ್ಲಿ ಛತ್ರಿಯನ್ನು ಹಿಡಿದ ಯೋಧನೂ, ಇನ್ನೊಂದು ಕಡೆಯಲ್ಲಿ ಕಳಸವನ್ನು ಹಿಡಿದ ಯೋಧನೂ ಚಿತ್ರಿತವಾಗಿದ್ದಾರೆ. ಪಲ್ಲಕ್ಕಿಯ ಕೆಳಭಾಗದಿಂದ ಒಕ್ಕೈ ತೋಳಿನ ಕೆತ್ತನೆ ಆರಂಭವಾಗಿದೆ. ಇದರಲ್ಲಿ ಕಂಕಣ ಕಡಗಗಳಿವೆ. ಹಸ್ತದ ಮಧ್ಯಭಾಗದಲ್ಲಿ ಪದ್ಮದ ಕೆತ್ತನೆಯಿದೆ. ಮೂರನೆಯ ಹಂತದಲ್ಲಿ ವೀರನ ಬಲಬದಿಗೆ ಇಬ್ಬರು ಮತ್ತು ಎಡಬದಿಗೆ ಮೂವರು ಸ್ತ್ರೀಯರ ಶಿಲ್ಪಗಳಿವೆ. ಎಲ್ಲರೂ ಕೈಮುಗಿದು ಕುಳಿತಿದ್ದಾರೆ. ವೀರನ ಬಲಭುಜದ ಮೇಲ್ಭಾಗದಲ್ಲಿ ಪ್ರತ್ಯೇಕವಾಗಿ ಕಠಾರಿಯ ಕೆತ್ತನೆಯಿದೆ. ನಾಲ್ಕನೆಯ ಅಥವಾ ಕೊನೆಯ ಹಂತದಲ್ಲಿ ಎರಡು ಆನೆಗಳ ಕೆಳಗೆ ಲಿಂಗದ ಶಿಲ್ಪವಿದೆ. ಲಿಂಗದ ಒಂದು ಕಡೆಯಲ್ಲಿ ಕಾಳಾಮುಖಗುರು ಶಂಖವನ್ನು ಊದುವಂತೆ ಮತ್ತು ಇನ್ನೊಂದು ಕಡೆಯಲ್ಲಿ ನಂದಿಯ ಶಿಲ್ಪಗಳಿವೆ. ಆನೆಗಳ ಹಿಂಭಾಗದಲ್ಲಿ ಸೂರ್ಯ ಚಂದ್ರರ ಕೆತ್ತನೆಯಿದೆ.

ಇಲ್ಲಿ ಮೃತನಾದ ವ್ಯಕ್ತಿ ಒಬ್ಬ ಪಾಳೆಯಗಾರ ಅಥವಾ ಉನ್ನತ ಸ್ಥಾನದ ಅಧಿಕಾರಿ ಎಂದು ಊಹಿಸಬಹುದು. ಕೆಳಹಂತದಲ್ಲಿ ಹೋರಾಟದ ಚಿತ್ರಣವಿದ್ದರೂ, ಆತ ವೀರಮರಣ ಹೊಂದಿದನೇ ಎಂಬುದು ಸ್ಪಷ್ಟವಾಗಿಲ್ಲ. ಮಾಸ್ತಿ ಚಿಹ್ನೆಯಾಗಿ ಶಿಲ್ಪಿಯು ಒಕ್ಕೈ ತೋಳನ್ನು ಚಿತ್ರಿಸಿದ್ದಾನೆಯೇ ಹೊರತು, ಮರಣಹೊಂದಿದ ವ್ಯಕ್ತಿಯ ಐವರು ಪತ್ನಿಯರೂ ಸತಿಯಾದರು ಎಂದು ತಿಳಿಯಬಹುದು.

ಶೈಲಿಯ ದೃಷ್ಟಿಯಿಂದ ಈ ಶಿಲ್ಪವು ಕ್ರಿ. ಶ. ೧೫ನೇ ಶತಮಾನದ ಕೊನೆಯ ಅಥವಾ ೧೬ನೇ ಶತಮಾನದ ಮೊದಲಿಗೆ ಸೇರುತ್ತದೆ. ವಿವರಗಳು ಮತ್ತು ಸೂಕ್ಷ್ಮ ಕೆತ್ತನೆಯ ದೃಷ್ಟಿಯಿಂದ ಇದು ಬಹುಸುಂದರವಾದ ಮಾಸ್ತಿಕಲ್ಲುಗಳಲ್ಲೊಂದು ಎಂದು ತಿಳಿಯಬಹುದು.

*ಹಿಲೀಕೆರೆ :* ಈ ಸ್ಥಳದಲ್ಲಿ ಒಂದು ಇಕ್ಕೈ ಹಾಗೂ ನಾಲ್ಕು ಒಕ್ಕೈ ಮಾಸ್ತಿಕಲ್ಲುಗಳು ದೊರೆತಿವೆ. ಎಲ್ಲಾ ಶಿಲ್ಪಗಳೂ ಪೂರ್ವಾಭಿಮುಖವಾಗಿವೆ. ಸಮೀಪದಲ್ಲಿ ಒಂದು ಚಿಕ್ಕ ತೊರೆಯಿದೆ. ಈ ಊರಿನಲ್ಲಿ ಹಿಂದೆ ವೀರಶೈವ ಮಠವಿತ್ತು ಎನ್ನುತ್ತಾರೆ. ಈ ಐದು ಸತಿಶಿಲ್ಪಗಳು ವಿವರ ಹೀಗಿದೆ :

*ಶಿಲ್ಪ ೧.* ಮೂರು ಹಂತವಿರುವ ಈ ಕಲ್ಲು ಎರಡು ಭಾಗಗಳಾಗಿ ಒಡೆದಿದೆ. ಶಿಲ್ಪದ ಕೆಳ ಹಂತದಲ್ಲಿ ಬಿಚ್ಚಿದ ಜಟೆಯಿಂದಾಗಿ ಕಾಳಾಮುಖ ಗುರುವಿನಂತೆ ಕಾಣುವ ವ್ಯಕ್ತಿಯೊಬ್ಬ ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಲಗೈಯಲ್ಲಿ ಬಾಣವನ್ನು ಹೂಡಿದ್ದಾನೆ. ಆತನೊಡನೆ ಎಡಗೈಯಲ್ಲಿ ಗುರಾಣಿ ಮತ್ತು ಬಲಗೈಯಲ್ಲಿ ಖಡ್ಗವನ್ನು ಹಿಡಿದ ವ್ಯಕ್ತಿ ಹೋರಾಡುತ್ತಿದ್ದಾನೆ. ಎರಡನೇ ಹಂತದಲ್ಲಿ ದಂಪತಿಗಳು ಕೈಮುಗಿದು ಕುಳಿತಿದ್ದಾರೆ. ಪುರುಷನು ಕಿರೀಟ ಇತ್ಯಾದಿಗಳನ್ನು ಧರಿಸಿದ್ದಾನೆ. ಈ ಹಂತದ ಬಲಗಡೆಗೆ ಚಾಚಿದ ಒಕ್ಕೈ ಚಿತ್ರಣವಿದೆ. ಕಡಗ ಕಂಕಣಗಳನ್ನು ಧರಿಸಿರುವ ಈ ಒಕ್ಕೈ ಹಸ್ತದಲ್ಲಿ ಹೆಬ್ಬೆರಳು ಮತ್ತು ತೋರು ಬೆರಳುಗಳ ಮಧ್ಯೆ ನಿಂಬೇ ಹಣ್ಣಿದೆ. ಹಸ್ತದಲ್ಲಿ ಪದ್ಮದ ಚಿಹ್ನೆಯಿಲ್ಲ. ಮೂರನೇ ಹಂತದಲ್ಲಿ ಸೂರ್ಯ ಚಂದ್ರರ ಕೆಳಗೆ ಕಾಳಾಮುಖ ಗುರುವನ್ನು ಹೋಲುವ ವ್ಯಕ್ತಿಯು ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದಾನೆ. ಅವನ ಹಿಂದೆ ಬಸವನನ್ನು ಕೆತ್ತಲಾಗಿದೆ.

ಹೋರಾಟ ಮತ್ತು ಕೈಲಾಸಗಳ ಹಂತದಲ್ಲಿ ಕಾಳಾಮುಖ ಗುರುವಿನಂತೆ ಕಾಣುವ ಯೋಧನು ಮಧ್ಯದ ಹಂತದಲ್ಲಿ ಹಾಗೆ ಕಾಣುವುದಿಲ್ಲ. ಅಲ್ಲದೆ ಕಾಳಾಮುಖ ಗುರುವಿಗೆ ವಿವಾಹವಾಗಿತ್ತೇ ಎಂಬ ಪ್ರಶ್ನೆಗೆ ಉತ್ತರವೂ ಅವಶ್ಯಕವಾಗುತ್ತದೆ.

ಈ ಶಿಲ್ಪದ ಎರಡೂ ಭಾಗಗಳ ಒಟ್ಟು ಎತ್ತರ ೫೯ ೧/೩'' ಮತ್ತು ಅಗಲ ೨೦ ೧/೩'' ದಿಂದ ೨೭''.

*ಶಿಲ್ಪ ೨:* ೪೩'' ಎತ್ತರ ೧೮'' ನಿಂದ ೨೪'' ಅಗಲವಿರುವ ಈ ಶಿಲ್ಪದ ಮೊದಲ ಹಂತದಲ್ಲಿ ಕಾಳಾಮುಖ ಗುರುವಿನಂತೆ ಕಾಣುವ ವ್ಯಕ್ತಿ ಖಡ್ಗ ಹಿಡಿದು ಹೋರಾಡುತ್ತಿದ್ದಾನೆ. ಮೇಲಿನ ಎರಡನೇ ಹಂತದಲ್ಲಿ ಕೈಮುಗಿದ ದಂಪತಿಗಳು ಕೈಲಾಸಕ್ಕೆ ಹೋಗುತ್ತಿದ್ದಾರೆ. ಈ ಹಂತದಲ್ಲಿ ಚಾಚಿದ ತೋಳಿನ ಒಕ್ಕೈ ಚಿತ್ರಣವಿದೆ. ಕೊನೆಯ ಹಂತದಲ್ಲಿ ಸೂರ್ಯ ಚಂದ್ರರ ನಡುವೆ ಶಿವಲಿಂಗವಿದೆ. ಈ ಶಿಲ್ಪದಲ್ಲಿ ವಿಶೇಷವೇನೂ ಕಾಣುವುದಿಲ್ಲ.

*ಶಿಲ್ಪ ೩ :* ಕೆಳಹಂತದಲ್ಲಿ ಕಾಳಾಮುಖ ಗುರುವಿನಂತಿರುವ



ವ್ಯಕ್ತಿ ಬಿಲ್ಲುಬಾಣ ಹಿಡಿದು ಹೋರಾಡುತ್ತಿದ್ದಾನೆ. ಎರಡನೆಯ ಹಂತದಲ್ಲಿ ಚಾಚಿದ ಬಲತೋಳಿನ ಒಕ್ಕೈ, ಅದರಲ್ಲಿ ಹೆಬ್ಬೆರಳು ಮತ್ತು ತೋರು ಬೆರಳುಗಳ ನಡುವೆ ನಿಂಬೇ ಹಣ್ಣಿದೆ. ಇದೇ ಹಂತದಲ್ಲಿ ನೃತ್ಯದ ವೇಷ ಮತ್ತು ನೃತ್ಯದ ಭಂಗಿಯಲ್ಲಿರುವ ದಂಪತಿಗಳನ್ನು ಚಿತ್ರಿಸಿರುವುದು ವಿಶೇಷ. ಮೂರನೆಯ ಹಂತದಲ್ಲಿ ಸೂರ್ಯ ಚಂದ್ರರ ನಡುವೆ ಶಿವಲಿಂಗವಿದೆ. ಈ ಕಲ್ಲಿನ ಆಕಾರವು ಎತ್ತರ ೪೦'', ಅಗಲ ೧೩'' ದಿಂದ ೨೫''.

*ಶಿಲ್ಪ ೪:* ಈ ಕಲ್ಲಿನಲ್ಲಿ ಎರಡು ಹಂತಗಳಿವೆ. ಮೊದಲನೆಯ ಹಂತದಲ್ಲಿ ದಂಪತಿಗಳು ಕೈಲಾಸಕ್ಕೆ ಹೊರಟಿದ್ದಾರೆ. ದಂಪತಿಗಳ ಬಲಭಾಗದಿಂದ ವಿಸ್ತಾರಿತವಾಗಿರುವ ಸತಿಯ ಬಲಗೈಯಲ್ಲಿ ಕಡಗ ಕಂಕಣಗಳಿವೆ. ಹಸ್ತದ ಹೆಬ್ಬೆರಳು ಮತ್ತು ತೋರು ಬೆರಳುಗಳ ನಡುವೆ ನಿಂಬೆ ಹಣ್ಣಿದೆ. ಹಸ್ತ ಮತ್ತು ದಂಪತಿಗಳ ನಡುವಿನ ಭಾಗದಲ್ಲಿ ವೃತ್ತಾಕಾರ ಹಾಗೂ ಮೀನಿನ ಚಿತ್ರವಿರುವುದು ವಿಶೇಷ ಎನ್ನಿಸುತ್ತದೆ. ವೃತ್ತಾಕಾರವು ಸೂರ್ಯನೇ, ಮಾದಳದ ಹಣ್ಣೇ ಅಥವಾ ಕನ್ನಡಿಯೇ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಮೀನಿನ ಚಿತ್ರವು ಸತಿಹೋದ ವ್ಯಕ್ತಿ ಮತ್ತು ಆಕೆಯ ಪತಿಯ ವೃತ್ತಿಯನ್ನು ಸೂಚಿಸಬಹುದೇ? ಕೊನೆಯ ಹಂತದಲ್ಲಿ ಸೂರ್ಯ ಮತ್ತು ಚಂದ್ರರ ನಡುವೆ ಕೆಳಗೆ ಶಿವಲಿಂಗ ಮತ್ತು ನಂದಿಯ ಕೆತ್ತನೆ ಇದೆ. ಈ ಶಿಲ್ಪವಿರುವ ಕಲ್ಲಿನ ಎತ್ತರ ೪೪'' ಅಗಲ ೧೨'' ದಿಂದ ೨೩''.

*ಶಿಲ್ಪ ೫:* ಇದು ಇಕ್ಕೈ ಮಾಸ್ತಿಕಲ್ಲು. ಕೆಳಗಿನ ಹಂತದಲ್ಲಿ ಕಠಾರಿಯನ್ನು ಹಿಡಿದಿರುವ ವೀರನಿಗೆ ಸೇವಕನೊಬ್ಬ ಛತ್ರಿಯನ್ನು ಹಿಡಿದಿದ್ದಾನೆ. ಈತನು ಬಿಲ್ಲು ಹಿಡಿದಿರುವ ವ್ಯಕ್ತಿಯ ಜೊತೆಗೆ ಹೋರಾಡುತ್ತಿದ್ದಾನೆ. ಎರಡನೆಯ ಹಂತದಲ್ಲಿ ವೀರನು ತನ್ನ ಇಬ್ಬರು ಪತ್ನಿಯರೊಂದಿಗೆ ಕೈಲಾಸಕ್ಕೆ ಹೊರಟಿರುವುದನ್ನು ಕಾಣಬಹುದು. ಇದೇ ಹಂತದಲ್ಲಿ ಎರಡು ಬಲ ಒಕ್ಕೈಗಳ ಚಿತ್ರಣವಿದೆ. ಎರಡೂ ಕೈಗಳಲ್ಲಿ ಕಡಗ ಕಂಕಣ ಮತ್ತು ನಿಂಬೇ ಹಣ್ಣುಗಳಿವೆ. ಹಸ್ತಗಳಲ್ಲಿ ಪದ್ಮದ ಮುದ್ರೆ ಇಲ್ಲ. ಕೊನೆಯ ಹಂತದಲ್ಲಿ ಸೂರ್ಯ ಚಂದ್ರರ ಅಡಿಯಲ್ಲಿರುವ ಲಿಂಗಕ್ಕೆ ಭಕ್ತನೊಬ್ಬ ಪೂಜಿಸುತ್ತಿದ್ದಾನೆ. ಈ ಶಿಲೆಯ ಎತ್ತರ ೫೯'' ಹಾಗೂ ಅಗಲ ೨೧'' ನಿಂದ ೩೬''.

ಮೇಲೆ ತಿಳಿಸಿದ ಏಳು ಮಾಸ್ತಿಕಲ್ಲುಗಳ ಕಾಲ ಕ್ರಿ. ಶ. ಸುಮಾರು ೧೪ನೇ ಶತಮಾನದಿಂದ ೧೬ನೇ ಶತಮಾನದವರೆಗಿನ ಅವಧಿ ಎನಿಸುತ್ತದೆ. ಎಲ್ಲಾ ಶಿಲೆಗಳಲ್ಲೂ ಶಿವಲಿಂಗವಿದ್ದರೂ, ಈಗ ಆ ಪ್ರದೇಶದಲ್ಲಿ ಶೈವ ಸಂಪ್ರದಾಯದವರು ಯಾರೂ ಇಲ್ಲ. ಶಿವಲಿಂಗವು ಕೇವಲ ಸ್ವರ್ಗದ ಚಿಹ್ನೆಯನ್ನು ಸೂಚಿಸುತ್ತಿದ್ದರೆ, ಇವರು ಹಿಂದೂ ಧರ್ಮದ ಯಾವ ಸಂಪ್ರದಾಯಕ್ಕಾದರೂ ಸೇರಿರಬಹುದು ಅಥವಾ ಇವರು ನಂತರ ನಾಮಧಾರಿ ಇತ್ಯಾದಿ ಸಂಪ್ರದಾಯಗಳಿಗೆ ಮತಾಂತರ ಹೊಂದಿರಬಹುದು.

ಒಟ್ಟಿನಲ್ಲಿ, ಕರ್ನಾಟಕದ ಎಲ್ಲೆಡೆಯಂತೆ ವಿಜಯನಗರದ ಅರಸರ ಕಾಲದಲ್ಲಿ ಹೆಚ್ಚಿನ ಸತಿಸ್ಮಾರಕಗಳು ನಿರ್ಮಾಣವಾದಂತೆ, ಈ ಗ್ರಾಮದಲ್ಲೂ ಮಾಸ್ತಿಕಲ್ಲುಗಳು ನಿಲ್ಲಿಸಲ್ಪಟ್ಟವು (ವಾಟಗಾರು ಊರಿನ ಶಾಸನ ನೋಡಿ). ಈ ಪದ್ಧತಿಯು ಕೆಳದಿಯ ನಾಯಕರ ಕಾಲದಲ್ಲೂ ಕೊಂಚಕಾಲ ಮುಂದುವರಿದಂತೆ ತೋರುತ್ತದೆ.

*(ಈ ಶಾಸನವು ಕಾಣುವಂತೆ ಮಾಡಲು ಮತ್ತು ಶಿಲ್ಪಗಳ ಛಾಯಾಚಿತ್ರಗಳನ್ನು ತೆಗೆಯಲು ಅನುಕೂಲ ಮಾಡಿದ ವಾಟಗಾರು ಶ್ರೀಮತಿ ಮಂಜಮ್ಮ ಮಂಜಪ್ಪಗೌಡ ಅವರ ಕುಟುಂಬದವರಿಗೆ ಹಾಗೂ ಶಾಸನ ಓದಲು, ಶಿಲ್ಪಗಳ ವಿವರ ಮತ್ತು ಕಾಲಗಣನೆಯನ್ನು ತಿಳಿಸಿದ ಡಾ॥ ಎಚ್. ಎಸ್. ಗೋಪಾಲರಾಯರಿಗೆ ಕೃತಜ್ಞನಾಗಿದ್ದೇನೆ.)*

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧. ಡಾ॥ ಬಸವರಾಜ ಕಲ್ಗುಡಿ; **ಮಹಾಸತಿ ಆಚರಣೆ : ಒಂದು ಅಧ್ಯಯನ**; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೫, ಪುಟ ೩ (ಈ ಪುಸ್ತಕವನ್ನು ಇನ್ನು ಮುಂದೆ 'ಮ. ಆ: ಒಂ. ಅ' ಎಂದಷ್ಟೇ ಹೇಳಿದೆ). ಹಾಗೂ ಡಾ॥ ಬಿ. ಎಸ್. ಶೇಠಿ; ***ಕರ್ನಾಟಕದಲ್ಲಿ ಸತಿಪದ್ಧತಿ***; ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ ೧೯೯೧-ಪುಟ ೧೧(ಈ ಪುಸ್ತಕವನ್ನು ಇನ್ನು ಮುಂದೆ 'ಕ.ಸ.ಪ.' ಎಂದಷ್ಟೇ ಹೇಳಿದೆ)

*೨. ಡಾ॥ ಎಂ. ಎಂ. ಕಲಬುರ್ಗಿ; ***ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು***; ಐಬಿಎಚ್ ಪ್ರಕಾಶನ, ಬೆಂಗಳೂರು ೧೯೮೦-ಪುಟ ೪೪

*೩. ಮ. ಆ : ಒಂ. ಅ-ಪುಟ ೬೩

*೪. ಕ. ಸ. ಪ. - ಪುಟ ೧೩೯

*೫. Diwan Bahadur L. D. Swamikannu Pillai; ***Indian Ephemeris***

ಡಾ॥ ಬೆಂ. ಶಾ. ಶ್ಯಾಮಲಾ ರತ್ನ ಕುಮಾರಿ *

# ಕಿಗ್ಗದಲ್ಲಿ ಇತ್ತೀಚೆಗೆ ದೊರೆತಿರುವ ವೀರಗಲ್ಲು, ಮಾಸ್ತಿಗಲ್ಲುಗಳು

ಈಗ್ಗೆ ಎರಡು ವರ್ಷಗಳ ಹಿಂದೆ ಭದ್ರಾವತಿ ಶೃಂಗೇರಿ ಮತ್ತು ಕಿಗ್ಗಗಳಿಗೆ ಕಾರ್ಯನಿಮಿತ್ತ ಹೋಗಿದ್ದಾಗ ಕಿಗ್ಗದಲ್ಲಿ ದೇವಾಲಯದ ಮುಂಭಾಗದ ಬಲಬದಿ ರಸ್ತೆಯಂಚಿಗೆ ಎರಡು ವೀರಗಲ್ಲುಗಳನ್ನು ಎರಡು ಮಾಸ್ತಿಗಲ್ಲುಗಳನ್ನೂ ನಿಲ್ಲಿಸಿರುವುದು ಕಂಡುಬಂದಿತು. ಈ ನಾಲ್ಕರಲ್ಲಿ ಮೊದಲನೆಯದು ಹಾಗೂ ಕಡೆಯದು ವೀರಗಲ್ಲುಗಳಾಗಿದ್ದು ಮಧ್ಯದಲ್ಲಿ ಎರಡು ಮಾಸ್ತಿಗಲ್ಲುಗಳಾಗಿವೆ. ಕೊನೆಯ ಅಂದರೆ ನಾಲ್ಕನೆಯದು ಅರ್ಧಭಾಗವನ್ನು ಮಾತ್ರ ಹೊಂದಿರುವ ವೀರಗಲ್ಲಾಗಿದೆ. ಮೊದಲನೆಯ ವೀರಗಲ್ಲಿನಲ್ಲಿ ಎರಡು ಹಂತಗಳಲ್ಲಿ ಲಿಪಿಯು ಕಂಡುಬರುತ್ತದೆ. ಈ ನಾಲ್ಕು ವೀರಗಲ್ಲು ಮಾಸ್ತಿಗಲ್ಲುಗಳ ಶಿಲ್ಪ ಮತ್ತು ಶಾಸನದ ಬಗ್ಗೆ ವಿವರಗಳನ್ನು ನೀಡುವುದೇ ಪ್ರಸ್ತುತ ಲೇಖನದ ಉದ್ದೇಶ್ಯವಾಗಿದೆ.

ಆದಿಶಂಕರಾಚಾರ್ಯರ ಅದ್ವೈತ ಪೀಠವಾದ ಶೃಂಗೇರಿಯಿಂದ ಪಶ್ಚಿಮಕ್ಕೆ ಎಂಟು ಕಿಲೋಮೀಟರ್ ದೂರದಲ್ಲಿ ತುಂಗಾನದಿಯ ಉಪನದಿಯಾದ ನಂದಿನೀ ತೀರದಲ್ಲಿದೆ ಕಿಗ್ಗ ಅಥವಾ ಋಷ್ಯ ಶೃಂಗಪುರ ಗ್ರಾಮ. ಕಿಗ್ಗದ ಪ್ರಮುಖ ಆಕರ್ಷಣೆಯೆಂದರೆ ಋಷ್ಯ ಶೃಂಗೇಶ್ವರ ಅಥವಾ ಕೀಟ್ಗಾನೇಶ್ವರ ದೇವಾಲಯ. ಕಿಗ್ಗದ ದೇವಾಲಯ ಕರ್ನಾಟಕದ ಅತಿ ಪ್ರಾಚೀನ ದೇವಾಲಯಗಳಲ್ಲೊಂದು. ಈ ಗ್ರಾಮದ ಪ್ರಾಚೀನತೆಯನ್ನು ಇಲ್ಲಿ ದೊರೆತಿರುವ ಶಿಲಾಶಾಸನಗಳು ಹಾಗೂ ಹಳೆಯ ಕೋಟೆಯ ಅವಶೇಷಗಳು ಸಾರುತ್ತವೆ. ಕ್ರಿ.ಶ. ೭ ನೆಯ ಶತಮಾನಕ್ಕೆ ಸೇರಿಸಬಹುದಾದ ೪ ಶಿಲಾ ಶಾಸನಗಳು ಮತ್ತು ಸುಮಾರು ೧೧ನೆಯ ಶತಮಾನದ ಶಾಸನವೂ ಇಲ್ಲಿ ಉಪಲಬ್ಧವಾಗಿದೆ. ದೇವಾಲಯಕ್ಕೆ ದಾನದತ್ತಿಗಳನ್ನು ನೀಡಿದ ಸಂಗತಿ ಈ ಎಲ್ಲ ಶಾಸನಗಳ ವಸ್ತು. ಈ ಶಾಸನಗಳು ದೇವಾಲಯದ ಆವರಣದಲ್ಲಿ ಇವೆ. ಇವುಗಳು ಪ್ರಕಟಗೊಂಡ ಶಾಸನಗಳಾಗಿವೆ.

ಪ್ರಸ್ತುತ ಲೇಖನದಲ್ಲಿ ಉಲ್ಲೇಖಿಸಲಾಗುತ್ತಿರುವ ವೀರಗಲ್ಲು ಮಾಸ್ತಿಗಲ್ಲು ಶಾಸನಗಳು ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ದೊರೆತವುಗಳಾಗಿವೆ. ೧೯೯೩ರಲ್ಲಿ ಋಷ್ಯಶೃಂಗೇಶ್ವರಸ್ವಾಮಿ ದೇವಾಲಯದ ಮಹಾಕುಂಭಾಭಿಷೇಕದ ಸುಮಹೋತ್ಸವಕ್ಕಾಗಿ ದೇವಾಲಯದ ಸುಣ್ಣಕಾರಣೆ, ರಿಪೇರಿ ಮುಂತಾದುವುಗಳನ್ನು ಕೈಗೊಂಡಾಗ ದೇವಾಲಯದ ತೇರಿನ ಮಂಟಪವು ಶಿಥಿಲಗೊಂಡದ್ದರಿಂದ ತೇರನ್ನು ಪಕ್ಕದಲ್ಲೇ ಇನ್ನೊಂದು ತೇರಿನ ಮಂಟಪ ನಿರ್ಮಿಸಿ ಸ್ಥಳಾಂತರಿಸಲಾದ ಸಂದರ್ಭದಲ್ಲಿ ತೇರನ್ನು ನಿಲ್ಲಿಸಿದ್ದ ಜಾಗದಲ್ಲಿ ಹಾಸಿದ್ದ ಚಪ್ಪಡಿ ಕಲ್ಲುಗಳನ್ನು ತೆಗೆಯಲಾಯಿತು. ಆ ಹಾಸು ಚಪ್ಪಡಿಗಳು ಶಾಸನ ಶಿಲ್ಪಗಳನ್ನು ಹೊಂದಿದ್ದನ್ನು ಗಮನಿಸಿ ಅವುಗಳನ್ನು ದೇವಾಲಯದ ಮುಂದಿರುವ ಬಲಬದಿ ರಸ್ತೆಯ ಅಂಚಿನಲ್ಲಿ ಅಂದರೆ ಈಗಿರುವ ಕಡೆ ನಿಲ್ಲಿಸಲಾಗಿದೆ.

ಈಗ ಈ ಶಿಲ್ಪ ಶಾಸನಗಳ ಬಗ್ಗೆ ವಿವರಗಳನ್ನು ಪರಿಶೀಲಿಸೋಣ. ಮೊದಲನೇ ಕಲ್ಲು ನಾಲ್ಕು ಹಂತಗಳಲ್ಲಿ ಶಿಲ್ಪವನ್ನೂ ಮೊದಲನೇ ಹಂತ ಮತ್ತು ಎರಡನೇ ಹಂತದ ಶಿಲ್ಪಗಳ ಕೆಳಗೆ ಶಾಸನವನ್ನೂ ಹೊಂದಿದೆ. ಮೊದಲ ಹಂತದಲ್ಲಿ ಮೂರು ಸಾಲಿನ ಶಾಸನವೂ ಎರಡನೇ ಹಂತದಲ್ಲಿ ಒಂದು ಸಾಲಿನ ಶಾಸನವೂ ಕಂಡುಬರುತ್ತದೆ. ಇನ್ನುಳಿದ ಮೂರು ಕಲ್ಲುಗಳಲ್ಲಿ ಕೇವಲ ಮಾಸ್ತಿ ಮತ್ತು ವೀರರ ಶಿಲ್ಪವಿದ್ದು ಲಿಪಿಯನ್ನು ಹೊಂದಿಲ್ಲ. ಎರಡನೇ ಕಲ್ಲು ಮಾಸ್ತಿಕಲ್ಲು, ಮೂರು ಹಂತಗಳಲ್ಲಿ ಶಿಲ್ಪವನ್ನು ಹೊಂದಿದೆ. ಮೂರನೇ ಕಲ್ಲು ಮಾಸ್ತಿಕಲ್ಲಾದರೂ ಎರಡನೇ ಹಂತಗಳಲ್ಲಿ ಶಿಲ್ಪವನ್ನು ಹೊಂದಿದೆ. ನಾಲ್ಕನೇ ಕಲ್ಲು ಅರ್ಧಭಾಗ ಮಾತ್ರವಿದ್ದು ಎರಡು ಹಂತಗಳಲ್ಲಿ ಶಿಲ್ಪವನ್ನು ಹೊಂದಿದೆ. ಅದರ ಇನ್ನರ್ಧ ಭಾಗ ದೊರೆತಿಲ್ಲ.

**ಮೊದಲನೇ ವೀರಗಲ್ಲಿನ ಶಿಲ್ಪಗಳ ವಿವರ ಇಂತಿದೆ:**

ಕೆಳಗಿನ ಹಂತದಲ್ಲಿ ಕುದುರೆಯ ಮೇಲೆ ಕುಳಿತ ವೀರನು ಬಲಗೈಯಲ್ಲಿ ಈಟಿ ಹಿಡಿದು ಎದುರಾಳಿಯನ್ನು ತಿವಿಯಲು

* ಪ್ರವಾಚಕರು, ಬಸವೇಶ್ವರ ಪ್ರಥಮ ದರ್ಜೆ ಮಹಾವಿದ್ಯಾಲಯ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಹವಣಿಸುತ್ತಿದ್ದಾನೆ. ಎದುರಾಳಿಯು ನೆಲದ ಮೇಲೆ ನಿಂತು ಎಡಗೈಯಲ್ಲಿ ದುಂಡಾಕಾರದ ಗುರಾಣಿಯನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ಆಯುಧವೊಂದನ್ನು ಹಿಡಿದಿರುವಂತಿದೆ. ಆಯುಧ ಯಾವುದೆಂದು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಕುದುರೆಗೆ ಮೇಲ್ಭಾಗವನ್ನೂ ರಿಕಾಪು ಹಾಗೂ ಜೀನನ್ನು ಅಳವಡಿಸಿ ಶೃಂಗರಿಸಲಾಗಿದೆ. ಕುದುರೆಯ ಮೇಲೆ ಕುಳಿತ ವೀರನು ಅರ್ಧ ತೋಳಿನ ಮೇಲಂಗಿಯನ್ನು ನಡುಪಟ್ಟಿಯನ್ನೂ ಧರಿಸಿದ್ದಾನೆ. ತಲೆಕೂದಲನ್ನು ಬಾಚಿ ಹಿಂದಕ್ಕೆ ಅತ್ಯಂತ ಸುಂದರವಾಗಿ ಜಡೆಹೆಣೆಯಲಾಗಿದೆ. ನೆಲದ ಮೇಲೆ ನಿಂತು ಕಾದುತ್ತಿರುವ ವೀರನ ಕೇಶವನ್ನು ಮೇಲ್ಭಾಗದಲ್ಲಿ ಮುಡಿ ಕಟ್ಟಲಾಗಿದೆ. ಕಾಲಲ್ಲಿ ಅಂದುಗೆಗಳವೆ. ವೈರಿಗಳಿಬ್ಬರೂ ರಭಸದ ಧಾಳಿಯಲ್ಲಿ ತೊಡಗಿರುವಂತಿದೆ. ಈ ವೀರರ ಹಿಂಪಾರ್ಶ್ವದಲ್ಲಿ ಕಹಳೆಯ ನ್ನೂದುತ್ತಿರುವ ಭಟರಿದ್ದಾರೆ. ಸೊಂಟದಲ್ಲಿ ಕಠಾರಿಗಳನ್ನು ಒರೆಗಳಲ್ಲಿ ಸಿಕ್ಕಿಸಿಕೊಂಡಿದ್ದಾರೆ.



ಅದರ ಮೇಲ್ಭಾಗದ ಹಂತದಲ್ಲಿಯೂ ನಾಲ್ಕು ವೀರರ ಶಿಲ್ಪಗಳನ್ನು ಕಾಣಬಹುದಾಗಿದೆ. ಮಧ್ಯದಲ್ಲಿರುವ ವೀರರಿಬ್ಬರೂ ಕೈ ಕೈ ಮಿಲಾಯಿಸಿ ಮಲ್ಲಯುದ್ಧವನ್ನು ನಡೆಸುತ್ತಿರುವಂತಿದೆ. ಇವರ ಕೈಗಳ ನಡುವೆ ಧನುಸ್ಸನ್ನೂ ಕಾಣಬಹುದಾಗಿದೆ. ಈ ಮಲ್ಲರ ಹಿಂಬದಿಯಲ್ಲಿ ಧನುಸ್ಸಿಗೆ ಬಾಣ ಹೂಡಿ ಯುದ್ಧ ಸನ್ನದ್ಧರಾಗಿರುವ ಧನುರ್ವೀರರಿದ್ದಾರೆ. ಈ ನಾಲ್ಕೂ ಶಿಲ್ಪಗಳಲ್ಲಿ ತಲೆಗೂದಲನ್ನು ಚೆನ್ನಾಗಿ ಬಾಚಿ ಅಂದವಾಗಿ ಜಡೆ ಹೆಣೆಯಲಾಗಿದೆ. ಹಿಂಬದಿಯ ವೀರರು ತಮ್ಮ ಸೊಂಟದಲ್ಲಿ ಬಾಕುಗಳನ್ನು ಒರೆಯಲ್ಲಿಟ್ಟು ಧರಿಸಿದ್ದಾರೆ. ಕಿವಿಗಳಲ್ಲಿ ಕರ್ಣಾಭರಣವೂ ಕಾಲುಗಳಲ್ಲಿ ಅಂದುಗೆಗಳೂ ಧರಿಸಲ್ಪಟ್ಟಿವೆ.

ಇದರ ಮೇಲಿನ ಹಂತದಲ್ಲಿ ಮುಡಿಕಟ್ಟಿ ಪದ್ಮಾಸನಸ್ಥನಾಗಿ ಕೈಗಳನ್ನು ಮುಗಿದುಕೊಂಡು ಧ್ಯಾನಮಗ್ನನಾಗಿರುವ ಶಿಲ್ಪವಿದೆ. ಅವನ ಇಕ್ಕೆಲಗಳಲ್ಲಿ ಚಾಮರ ಈ ಧಾರಿಣಿ ಸ್ತ್ರೀಯರಿದ್ದಾರೆ ಈ ಶಿಲ್ಪದ ಕೆಳಗೆ ಒಂದು ಸಾಲಿನ ಶಾಸನವಿದೆ.

ಮೇಲಿನ ಹಂತದಲ್ಲಿ ಮಧ್ಯದಲ್ಲಿ ಶಿವಲಿಂಗವಿದ್ದು ಅದರ ಮುಂಭಾಗದಲ್ಲಿ ಕುಳಿತಿರುವ ನಂದಿಯೂ ಲಿಂಗದ ಹಿಂಬದಿಗೆ ತ್ರಿಶೂಲ ಅದರ ಪಕ್ಕದಲ್ಲಿ ಕೈಮುಗಿದು ನಿಂತಿರುವ ವೀರನ ಶಿಲ್ಪವಿದೆ. ಈ ಶಿಲ್ಪಗಳ ಕೆಳಗೆ ಮೂರು ಸಾಲಿನ ಶಾಸನವಿದೆ

ಶಿಲ್ಪಗಳಲ್ಲಿ ಅಳವಡಿಸಿರುವ ಆ ಭೂಷಣಗಳು, ಭಾವಭಂಗಿ, ಕೇಶಶೃಂಗಾರ ಉಡುಪು ಇವುಗಳು ವೀರ ಸ್ತ್ರೀಯರ ಶಿಲ್ಪಗಳಿರಬಹುದೆಂಬ ಭಾವನೆಯನ್ನು ಮೂಡಿಸುತ್ತವೆ. ಅಲ್ಲದೆ ನಾಲ್ಕನೆ ತುಂಡಾದ ಕಲ್ಲಿನಲ್ಲಿರುವ ವೀರಶಿಲ್ಪಗಳ ವಿಭಿನ್ನವಾದ ಆ ಭೂಷಣ ಭಾವಭಂಗಿಗಳು ಉಡುಪೂ ವೀರಪುರುಷರದೆಂದು ಖಚಿತವಾಗಿ ಹೇಳಬಹುದಾದ್ದರಿಂದ ಮೊದಲಿನ ಕಲ್ಲಿನಲ್ಲಿರುವ ಶಿಲ್ಪಗಳು ಸ್ತ್ರೀಯರದೇ ಎಂದು ಪುಷ್ಟೀಕರಿಸುತ್ತದೆ.

ಎರಡನೇ ಕಲ್ಲು ಒಣ್ಣೆ (ಒಂದು ಕೈ) ಮಾಸ್ತಿಗಲ್ಲು. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳು ಕಂಡರಿಸಲ್ಪಟ್ಟಿದೆ. ಕೆಳಗಿನ ಹಂತದಲ್ಲಿ ಅಲಂಕಾರ ಭೂಷಿತಳಾದ ಸ್ತ್ರೀಯನ್ನು ಪಲ್ಲಕ್ಕಿಯಲ್ಲಿಟ್ಟು ಬೋಯಿಗಳು ಒಯ್ಯುತ್ತಿದ್ದಾರೆ. ಬೋಯಿಗಳ ಬದಿಗಳಲ್ಲಿ ದಂಡಧಾರಿ ಭಟರಿದ್ದಾರೆ. ಪಲ್ಲಕ್ಕಿಯಲ್ಲಿನ ಸ್ತ್ರೀ ರಾಜಕುಟುಂಬಕ್ಕೆ ಸೇರಿದವಳಾಗಿದ್ದಿರಬಹುದೆನಿಸುತ್ತದೆ. ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾಳೆ. ಎಡಕೈಯಲ್ಲಿ ಹಿಡಿದಿರುವುದು ಏನೆಂಬುದು ಸ್ಪಷ್ಟವಾಗಿ ತಿಳಿಯುವುದಿಲ್ಲ ನಡುವಿನ ಹಂತದಲ್ಲಿ ವೀರನು ಅವನ ಎರಡು ಬದಿಗಳಲ್ಲಿ ಅವನ ಇಬ್ಬರು ಪತ್ನಿಯರೊಡನೆ ಕೈಮುಗಿದ ಭಂಗಿಯಲ್ಲಿ ಆಸೀನರಾಗಿದ್ದಾರೆ. ಎಡ ಬದಿಗೆ ಅರಳಿದ ಕಮಲವೂ ಅದರ ಪಕ್ಕದಲ್ಲಿ ಬಲಕೈಯಲ್ಲಿ ನಿಂಬೆಹಣ್ಣನ್ನು ಎತ್ತಿ ಹಿಡಿದ ಕೆತ್ತನೆಯಿದೆ. ವೀರನಿಗೆ (ರಾಜನಿಗೆ) ಇಬ್ಬರು

ಪತ್ನಿಯರಿದ್ದರೂ ಒಂದೇ ಕೈಯನ್ನು ತೋರಿಸಲಾಗಿದೆ. ಅಂದರೆ ಒಬ್ಬ ರಾಣಿ ಮಾತ್ರ ಮಹಾಸತಿಯಾಗಿರಬಹುದೆ? ಮೇಲಿನ ಹಂತದಲ್ಲಿ ಕುಂಭಗಳನ್ನ ಳವಡಿಸಲಾಗಿದೆ. ಅದರ ಮೇಲ್ಭಾಗದಲ್ಲಿ ಮಧ್ಯದಲ್ಲಿ ಶಿವಲಿಂಗ ವಿದ್ದು ಅದರ ಇಕ್ಕೆಡೆಗೆ ಎಡಕ್ಕೆ ಆನೆ ಮತ್ತು ಬಲಕ್ಕೆ ಕುದುರೆಯ ಶಿಲ್ಪಗಳಿವೆ. ಆನೆಯು ಬಾಲವನ್ನು ಸ್ವಲ್ಪ ಮೇಲಕ್ಕೆತ್ತಿದೆ. ಸೊಂಡಿಲು ಶಿವಲಿಂಗದ ಮೇಲಿದೆ. ಕುದುರೆಯ ಬಾಲವೂ ಸ್ವಲ್ಪ ಎತ್ತಿದೆ. ಮುಖವು ಬಾಗಿದೆ. ಆನೆ ಕುದುರೆಗಳಿಗೆ ಗೌಸನ್ನು ಹೊದೆಸಿರುವುದೂ ಕಂಡುಬರುತ್ತದೆ. ಆನೆ ಕುದುರೆಗಳು ಮಾತ್ರವಿದ್ದು ವೀರನ ಶಿಲ್ಪ ಈ ಹಂತದಲ್ಲಿ ಕಾಣಬರುವುದಿಲ್ಲ.



ಕೆಳಗಿನ ಹಂತದಲ್ಲಿ ಪಲ್ಲಕ್ಕಿಯಲ್ಲಿರುವ ಸ್ತ್ರೀ ರಾಣಿಯಾಗಿದ್ದು ತನ್ನ ಪತಿಯು ಪ್ರಾಯಶಃ ಯುದ್ಧದಲ್ಲಿ ಮಡಿದ ನಂತರ ಆಯುಧ ಹಿಡಿದು ರಣಾಂಗಣಕ್ಕೆ ಮುನ್ನಡೆದು ಅಸುನೀಗಿರಬೇಕು. ಮಡಿದ ರಾಜನಿಗೆ ಮತ್ತೊರ್ವ ರಾಣಿಯಿದ್ದು ಅವಳು ತನ್ನ ಪತಿ ಮತ್ತು ಸವತಿಯನ್ನು ಸತಿಯಾಗಿ ಅನುಗಮನಮಾಡಿರಬೇಕು ಹಾಗೂ ಯುದ್ಧದಲ್ಲಿ ಪಟ್ಟದ ಆನೆ ಮತ್ತು ಕುದುರೆಗಳು ಮರಣಿಸಿ ಶಿವಸಾನ್ನಿಧ್ಯವನ್ನು ಸೇರಿದವು ಎಂದು ಈ ಮಾಸ್ತಿಶಿಲ್ಪದ ವಿವರಗಳನ್ನು ಅವಲೋಕಿಸಿದ ನಂತರ ಅರ್ಥೈಸಬಹುದಾಗಿದೆ.

ಮೂರನೇ ಕಲ್ಲು ಎರಡು ಹಂತಗಳಲ್ಲಿ ಶಿಲ್ಪವಿರುವ ಮಾಸ್ತಿಕಲ್ಲಾಗಿದೆ. ಕೆಳಗಿನ ಹಂತದಲ್ಲಿ ವೀರದಂಪತಿಗಳಿದ್ದು ಬಲಗೈಯನ್ನು ಮೇಲಕ್ಕೆತ್ತಿದೆ. ಅಂಗೈಯಲ್ಲಿ ಪದ್ಮವೊಂದನ್ನು ಬಿಡಿಸಲಾಗಿದೆ. ಹಸ್ತ ಮತ್ತು ವೀರದಂಪತಿಗಳ ನಡುವಣ ಸ್ಥಳದಲ್ಲಿ ಅರಳಿದ ಕಮಲವೂ ಅದರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರೂ ಕಂಡರಿಸಲ್ಪಟ್ಟಿದೆ. ಮೇಲಿನ ಹಂತದಲ್ಲಿ ಚೌಕಟ್ಟಿನೊಳಗೆ ಶಿವಲಿಂಗವು ಮಧ್ಯಭಾಗದಲ್ಲಿದ್ದು ಅದರ ಬಲ ಪಾರ್ಶ್ವದಲ್ಲಿ ಕುಳಿತ ಬಸವ ಶಿಲ್ಪವಿದೆ. ಬಸವನ ಮುಂಗಾಲುಗಳಲ್ಲಿ ಒಂದನ್ನು ಮುಂದಕ್ಕೆ ಬಗ್ಗಿರುವಂತೆಯೂ ಇನ್ನೊಂದನ್ನು ಹಿಂದಕ್ಕೆ ಮಡಚಿರುವಂತೆಯೂ ಮತ್ತು ಹಿಂದಿನ ಕಾಲನ್ನು ಮುಂದಕ್ಕೆ ಮಡಿಚಿರುವಂತೆಯೂ ಬಿಡಿಸಲಾಗಿದೆ. ಇದರಿಂದ ಮುಂದಿನ ಕಾಲಿನ ಹಿಂದಕ್ಕೆ ಚಾಚಿದ ಭಾಗವೂ ಹಿಂದಿನ ಕಾಲಿನ ಮುಂದಕ್ಕೆ ಮಡಿಚಿದ ಭಾಗವು ಕೂಡಿಕೊಂಡಂತೆ ತೋರುತ್ತದೆ. ಲಿಂಗದ ಎಡಬದಿಗೆ ತ್ರಿಶೂಲವನ್ನೂ ನಿಲ್ಲಿಸಲಾಗಿದೆ ಅದರ ಪಕ್ಕದಲ್ಲಿ ವೀರನು ಕೈಮುಗಿದುಕೊಂಡು ಮುಮ್ಮುಖನಾಗಿ ನಿಂತಿದ್ದಾನೆ.

ಇನ್ನು ನಾಲ್ಕನೇ ಕಲ್ಲು ಅರ್ಧಭಾಗ ಮಾತ್ರವಿದ್ದು ಎರಡು ಹಂತಗಳನ್ನು ಮಾತ್ರ ಹೊಂದಿದೆ ಇನ್ನುಳಿದ ಎರಡು ಹಂತಗಳು ಒಡೆದು ಹೋದ ಅದರ ಭಾಗದಲ್ಲಿರಬಹುದು. ಆ ಅರ್ಧಭಾಗ ಸಿಕ್ಕಿಲ್ಲ. ಇಲ್ಲಿರುವ ಎರಡೂ ಹಂತಗಳಲ್ಲಿನ ಶಿಲ್ಪಗಳು ಬೇಟೆ ಮತ್ತು ಧನುರ್ಯುದ್ಧಕ್ಕೆ ಸಂಬಂಧಿಸಿವೆ. ಕೆಳಗಿನ ಹಂತದಲ್ಲಿ ಐದು ಜನ ವೀರರಿದ್ದು ಎರಡೂ ಕೊನೆಗಳಲ್ಲಿ ಕಹಳೆಯನ್ನೂದುತ್ತಿರುವ ಬೇಡವೀರರು, ಮಧ್ಯದಲ್ಲಿನ ಇಬ್ಬರು ವೀರರು ಡೋಲನ್ನೂ ತಮಟೆಯನ್ನು ಬಾರಿಸುತ್ತಿರುವರು. ಮತ್ತೊಬ್ಬನು ಬೇಟೆಯಾಡಿದ ಜಿಂಕೆ, ಕಾಡೆಮ್ಮೆಗಳನ್ನು ಕೋಲಿನ ಎರಡು ತುದಿಗಳಲ್ಲಿ ಕಟ್ಟಿ ಕೋಲನ್ನು ತನ್ನ ಭುಜದ ಮೇಲೆ ಅಡ್ಡವಾಗಿಟ್ಟು ಒಯ್ಯುತ್ತಿದ್ದಾನೆ. ಮೇಲಿನ ಹಂತದಲ್ಲಿ ಮಧ್ಯದಲ್ಲಿ ಗುರಾಣಿ ಮತ್ತು ಕತ್ತಿಹಿಡಿದು ನಿಂತ ವೀರನನ್ನು ಹಿಂಬದಿ ಮುಂಬದಿಗಳಿಂದ ಧನುರ್ಬಾಣಗಳಿಂದ ಘಾತಿಸಲು ತೊಡಗಿರುವ ವೀರರ ಶಿಲ್ಪಗಳು ಹಾಗೂ ಬಲಕ್ಕೆ ಕೊನೆಯಲ್ಲಿರುವ ವೀರನು ಖಡ್ಗವನ್ನು ಮೇಲಕ್ಕೆತ್ತಿ ಪ್ರಹಾರ ಮಾಡಲು ಸನ್ನದ್ಧವಾಗಿರುವಂತೆಯೂ ಕಂಡುಬರುತ್ತದೆ.

ಈ ಬೇಟೆಗಾರರ ಉಡುಗೆ ತೊಡಿಗೆಗಳು ಮೊದಲನೇ ವೀರಗಲ್ಲಿನ ಶಿಲ್ಪಗಳ ಉಡುಗೆತೊಡುಗೆಗಳಿಗಿಂತ ಭಿನ್ನವಾಗಿದೆ. ಕಚ್ಚೆಪಂಚೆಯನ್ನುಟ್ಟಿದ್ದಾರೆ. ನಡುಪಟ್ಟಿಯು ಇದೆ. ಪಂಚೆಗಳ ನೆರಿಗೆಗಳನ್ನು ಸ್ಪಷ್ಟವಾಗಿ ಕಂಡರಿಸಲಾಗಿದೆ. ಕೇಶಗಳನ್ನು ಮೇಲಕ್ಕೆತ್ತಿ ಮುಡಿಕಟ್ಟಲಾಗಿದೆ. ಮೇಲ್ವಂಗಿ ತೊಟ್ಟಿದ್ದಂತೆ ಕಾಣುವುದಿಲ್ಲ. ಕಾಲ್ಬಳೆ ಮತ್ತು ಕೈಕಡಗಗಳನ್ನು ಕರ್ಣಾ ಭರಣವನ್ನು ಅಳವಡಿಸಲಾಗಿದೆ. ಶಿಲ್ಪಗಳ ಉಡುಗೆಗಳೂ ಮುಖಭಂಗಿಯೂ ಆತ್ಮಾಕರ್ಷಕವಾಗಿವೆ.

ಮೊದಲನೆ ಕಲ್ಲಿನಲ್ಲಿರುವ ಶಾಸನವನ್ನು ಸ್ಪಷ್ಟವಾಗಿ ಓದಲು ಇನ್ನೂ ಸಾಧ್ಯವಾಗಿಲ್ಲ. ಕೆಲವು ಅಕ್ಷರಗಳನ್ನು ಮಾತ್ರ ಗುರುತು ಹಚ್ಚಲಾಗಿದೆ. ಕೀಟ್ಲಾಣೇಶ್ವರ, ಭಟ, ವೀರಕಲ್ಲು ಮುಂತಾದ ಪದಗಳನ್ನು ಓದಲಾಗಿದ್ದರೂ ಶಾಸನದ ಪಾಠ ಇನ್ನೂ ಅಸ್ಪಷ್ಟವಾಗಿಯೇ ಉಳಿದಿದೆ. ಆದರೆ ಲಿಪಿಯ ದೃಷ್ಟಿಯಿಂದ ವಿಜಯನಗರದ ಕಾಲಕ್ಕೆ (೧೪-೧೫ನೇ ಶ.) ಸೇರಿದುದೆಂದು ಹೇಳಬಹುದಾಗಿದೆ.

*(ಶಾಸನದ ಪಡಿಯಚ್ಚನ್ನು ತೆಗೆಯುವ ಕಾರ್ಯದಲ್ಲಿ ನೆರವು ನೀಡಿದ ವಿದ್ಯಾರ್ಥಿ ಮಿತ್ರರಾದ ಲೋಕೇಶ್ ಮತ್ತು ಮರಿದೇವರು ಕಿಗ್ಗದ ಋಷ್ಯಶೃಂಗೇಶ್ವರ ಕುಂಭಾಭಿಷೇಕ ಮಹೋತ್ಸವದ ಸ್ಮರಣಸಂಚಿಕೆ 'ಋಷ್ಯಶೃಂಗ' ಹಾಗೂ ಶೃಂಗೇರಿ ಕಡತದ ಹೊತ್ತಿಗೆಯೊಂದನ್ನು ನನಗೆ ನೀಡಿದ ಶ್ರೀಮಾನ್ ಶೃಂಗೇರಿಯ ಸಿ. ವಿ. ಗಿರಿಧರ ಶಾಸ್ತ್ರಿಯವರಿಗೂ ಆತಿಥ್ಯ ನೀಡಿದ ಅವರ ಮಾತೃಶ್ರೀಯವರಿಗೂ ಕೃತಜ್ಞತಾ ಪೂರ್ವಕ ವಂದನೆಗಳು.)*

ಡಾ|| ಎಚ್. ಎಸ್. ಗೋಪಾಲರಾವ್ *

# ಸೂರ್ಯದೇವಸ್ಥಾನದ ಸಿಡಿತಲೆ ವೀರಗಲ್ಲು, ಐದು ಸ್ತ್ರೀ ಶಿಲ್ಪಗಳು, ಇತ್ಯಾದಿ

ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನಲ್ಲಿ, ತಾಲ್ಲೂಕು ಕೇಂದ್ರಕ್ಕೆ ಸುಮಾರು ೬ ಕಿ.ಮೀ. ದೂರದಲ್ಲಿರುವ ಊರು ಸೂರ್ಯದೇವಸ್ಥಾನ. ಈಗ ಅಸ್ತಿತ್ವದಲ್ಲಿಲ್ಲದ ಕುಂಬಾರ ಕೊಪ್ಪ ಗ್ರಾಮಕ್ಕೆ ಸೇರಿದ ಒಂದು ಉಪಗ್ರಾಮ ಸೂರ್ಯದೇವಸ್ಥಾನ. ಅದಕ್ಕೆ ಸುಮಾರು. ೦.೫ ಕಿ.ಮೀ. ದೂರದಲ್ಲಿರುವ ಮತ್ತೊಂದು ಉಪಗ್ರಾಮದ ಹೆಸರು ಸೂರೆಕೊಪ್ಪ. ಸೂರ್ಯ ದೇವಸ್ಥಾನದ ದೇವಾಲಯಗಳ ಅರ್ಚಕರಾದ ಶ್ರೀ ಜಗದೀಶ ಶಾಸ್ತ್ರೀಗಳು ತಿಳಿಸಿದ ಪ್ರಕಾರ ಮುಜರಾಯಿ ಇಲಾಖೆಯ ದಾಖಲೆಗಳಲ್ಲಿ ಆ ಊರಿನ ದೇವಾಲಯಗಳು ೧) ಸೂರ್‍ಯದ ಅಶ್ವತ್ಥನಾರಾಯಣ ೨) ಸೂರ್‍ಯದ ಮಹಾಗಣಪತಿ ದೇವಸ್ಥಾನ ೩) ಸೂರ್‍ಯದ ಈಶ್ವರ ದೇವಸ್ಥಾನ ಎಂದೇ ಪ್ರಸ್ತಾಪಿತವಾಗಿವೆ. ಅಂದರೆ ಈಗಿನ ಸೂರ್ಯ ದೇವಸ್ಥಾನವು ಮುಜರಾಯಿ ಇಲಾಖೆಗಳಲ್ಲಿ 'ಸೂರ್‍ಯ' ಎಂದಷ್ಟೇ ದಾಖಲಾಗಿದೆ. ಅಲಿಗೆಯ ಕೊರೋಡಿವಾಸಿ ಶ್ರೀ ಮಂಜಪ್ಪನಾಯಕರ ೧೯೨೮ರ ಲೆಕ್ಕದ ಪುಸ್ತಕದಲ್ಲಿ 'ಸೂರ್‍ಯದ ದೋರಗಲ್ಲುವಾಸಿ ವೆಂಕಟಾಚಲಪತಿ ಭಟ್ಟ'ರ ಉಲ್ಲೇಖವಿದೆ. ಅಂದರೆ ಈ ಸೂರ್‍ಯ ಉಪಗ್ರಾಮಕ್ಕೆ ದೋರಗಲ್ಲು ಎಂಬ ಮತ್ತೊಂದು ಉಪಗ್ರಾಮ ವಿತ್ತು ಎಂದು ಅರ್ಥವಾಗುತ್ತದೆ. ಅಲಿಗೆಯ ಶ್ರೀ ಎ.ವಿ. ರಾಮಯ್ಯನವರ ಮನೆಯಲ್ಲಿ ದೊರೆತ ಓಲೆಗರಿ ಕಟ್ಟಿನಲ್ಲಿ 'ಸೂರ್‍ಯದ ಮಹಗಣೇಶ್ವನ ದೇವರ ಚರಣಾರವಿಂದವೆ ಗತಿ' ಎಂದಿದೆ. ಈ ಉಲ್ಲೇಖವು ಈಗಿನ ಸೂರ್ಯದೇವಸ್ಥಾನದ ಗಣಪತಿ ದೇವಾಲಯಕ್ಕೆ ಸಂಬಂಧಿಸಿದ್ದೇ ಇರಬೇಕು. ಮೇಲಿನ ಮೂರು ಉಲ್ಲೇಖಗಳನ್ನು ಪತ್ತೆಮಾಡಿ ಕೊಟ್ಟವರು ಗೆಳೆಯ ಶ್ರೀ ಎ. ಆರ್. ಗುರು. ಕ್ರಿ.ಶ. ೧೯೨೮ರ ವರೆಗೂ 'ಸೂರ್ಯ' ಎಂಬ ಹೆಸರಿದ್ದ ಊರು ಈಗ 'ಸೂರ್ಯದೇವಸ್ಥಾನ' ವೆಂದು ಕರೆಯಲ್ಪಡುತ್ತಿದೆ. ಈ ಊರಿಗೆ ಸುಮಾರು ೦.೫ ಕಿ.ಮೀ. ದೂರದಲ್ಲಿ 'ಸೂರೆಕೊಪ್ಪ' ಎಂಬ ಮತ್ತೊಂದು ಊರೂ ಇದೆ. ಸೂರ್ಯ, ಸೂರೆಕೊಪ್ಪ ಎಲ್ಲವೂ ಸೇರಿ 'ಸೂರ್‍ಯಪಾಲು' ಎಂದು ಕರೆಯಲ್ಪಡುತ್ತಿತ್ತು ಎಂದು ಇಲ್ಲಿನ ಕೆಲವು ಹಿರಿಯರ ಅಭಿಪ್ರಾಯ. ಕ್ರಿ.ಶ. ೧೯೫೮ರ ಒಂದು ಶಾಸನದಲ್ಲಿ 'ಸೂರ್‍ಯಕೊಪ್ಪ'ದ ಉಲ್ಲೇಖವಿದೆ. ಗೆಳೆಯ ಶ್ರೀ ಎ., ಆರ್. ಗುರು ಅವರೊಡನೆ ಅವರ ಊರು ಅಲಿಗೆಯ ಆಸು ಪಾಸಿನಲ್ಲಿ ಕ್ಷೇತ್ರಾಧ್ಯಯನ ಮಾಡಿದಾಗ, ಕಂಡುಬಂದ ಸೂರ್ಯ ದೇವಸ್ಥಾನಕ್ಕೆ ಸುಮಾರು ೦.೫ ಕಿ.ಮೀ. ದೂರವಿರುವ ಚೌಡೇಶ್ವರಿ ಅಮ್ಮನವರ ದೇವಾಲಯದ ಆವರಣದಲ್ಲಿ ಕಂಡು ಬಂದ ಒಂದು ಶಿಲ್ಪ ಸಹಿತ ಸಿಡಿತಲೆ ವೀರಗಲ್ಲು ಶಾಸನ, ಅದೇ ಶಾಸನ ಫಲಕದಲ್ಲಿನ ಮತ್ತೊಂದು ಬದಿಯ ವೀರಶಾಸನ, ಸಣ್ಣ ಆಕಾರದ ಜೈನ ಪ್ರತಿಮೆಗಳು ಹಾಗೂ ಆ ಸ್ಥಳದಿಂದ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯ ಶಿವಮೊಗ್ಗದ ಶಿವಪ್ಪನಾಯಕರ ಅರಮನೆಯ ವಸ್ತು ಸಂಗ್ರಹಾಲಯದಲ್ಲಿ ತೆಗೆದುಕೊಂಡು ಹೋಗಿರುವ ಐದು ಸ್ತ್ರೀ ಪ್ರತಿಮೆಗಳು ಅಧ್ಯಯನಕ್ಕೆ ಲಭ್ಯವಾದುವು.

## ಆತ್ಮಾಹುತಿ/ಸಿಡಿತಲೆ ಸ್ಮಾರಕ

ಬಳಪದ ಕಲ್ಲನ್ನು ಈ ಶಾಸನ ಸಹಿತ ಸ್ಮಾರಕ ಶಿಲೆಯ ರಚನೆಗೆ ಬಳಸಿಕೊಳ್ಳಲಾಗಿದೆ. ಇದರ ಮೊದಲ ಹಂತದಲ್ಲಿ ಬಲಗೈಯಲ್ಲಿ ಕತ್ತಿಯನ್ನೂ ಎಡಗೈಯಲ್ಲಿ ಕತ್ತರಿಸಿದ ತನ್ನ ಶಿರವನ್ನು ಹಿಡಿದಿರುವ ವೀರನ ಶಿಲ್ಪವಿದೆ. ಎರಡನೆಯ ಹಂತದಲ್ಲಿ ಎದುರುಬದುರಾಗಿ ಕುದುರೆಗಳ ಮೇಲೆ ಕುಳಿತಿರುವ ವೀರರ ಶಿಲ್ಪಗಳಿವೆ. ಇವರು ಹೋರಾಟದಲ್ಲಿ ನಿರತರಾಗಿದ್ದಾರೆ ಎಂದು ಭಾವಿಸಬಹುದಾದರೂ ಇಬ್ಬರ ನಡುವೆ ಇರುವ ಅಡ್ಡಪಟ್ಟಿಯು ಈ ಭಾವನೆಗೆ ಅಡ್ಡಿಬರುತ್ತದೆ. ಇಬ್ಬರು ವೀರರ ಕೈಗಳಲ್ಲೂ ಈಟಿಗಳಿವೆ. ಮೂರನೆಯ ಹಂತದಲ್ಲಿ ಕುದುರೆಯನ್ನು ಹೋಲುವ ಆರು ಪ್ರಾಣಿಗಳು ನಿಂತು ಚಲಿಸುತ್ತಿರುವ ಕೆತ್ತನೆಯಿದೆ. ಮನುಷ್ಯ ಪ್ರಮಾಣದ ಈ ಪ್ರಾಣಿಗಳ ಬಗೆಗಾಗಲೀ, ಶಿಲ್ಪದಲ್ಲಿ ಅವು ಸ್ಥಾನ ಪಡೆದ ಬಗೆಗಾಗಲೀ ಈಗ ಏನನ್ನೂ ಖಚಿತವಾಗಿ ತಿಳಿಸುವುದು ಸಾಧ್ಯವಿಲ್ಲವಾಗಿದೆ. ನಾಲ್ಕನೆಯ ಅಂದರೆ ಮೇಲಿನ ಕೊನೆಯ

* 'ಸ್ವಸ್ತಿಶ್ರೀಸ್ಕಂದ' ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರಜಿಲ್ಲೆ - ೫೬೨ ೧೨೩



ಹಂತದ ಕೆತ್ತನೆ ಸವೆದಿದ್ದು ಅಸ್ಪಷ್ಟವಾಗಿದೆ. ಈ ಶಿಲ್ಪದ ಯಾವ ಮನುಷ್ಯ ಅಥವಾ ಪ್ರಾಣಿಯ ಕೆತ್ತನೆಯೂ ಪ್ರಮಾಣ ಬದ್ಧವಾಗಿಲ್ಲ. ಸೊಂಟದಿಂದ ಕೆಳಭಾಗದ ಪ್ರಮಾಣ ಕಡಿಮೆ ಯಾಗಿದ್ದು, ಮೇಲಿನ ಪ್ರಮಾಣವು ಅಧಿಕವಾಗಿದೆ. ಶಿಲ್ಪದ ಕೆಳಭಾಗದಲ್ಲಿರುವ ಶಾಸನದ ಪಾಠ ಕೆಳಕಂಡಂತಿದೆ.

ಸಾಲು ೧: ಕಮ್ಮಟ ಕಲಿಕ್ಕಾಚಾರಿ ಅಣ

ಸಾಲು ೨: ಯಮನ ಕುರ್ಪಿನ ಕಲ್ಲ ನಿ[ರಿ*] ಸಿದ

ಕಮ್ಮಾರ (!) ಕಲಿಕ್ಕಾಚಾರಿ ಎನ್ನುವವನು ಅಣ್ಣ ಯಮನಿಗಾಗಿ ಸ್ಮಾರಕ (ಕುರುಹು-ಕುರುಪು-ಕುರ್ಪು) ಶಿಲೆಯನ್ನು ನಿಲ್ಲಿಸಿದ್ದನ್ನು ಶಾಸನ ದಾಖಲಿಸಿದೆ. ಕುರ್ಪಿನ ಕಲ್ಲೇ ಕುರುಹಿನ ಅಥವಾ ಗುರುತಿನ ಕಲ್ಲು ಮತ್ತು ಆ ಗುರುತಿನ ಕಲ್ಲೇ ಸ್ಮಾರಕ ಶಿಲೆ. 'ಕುರ್ಪಿನ ಕಲ್ಲು' ಎಂಬ ಪಾರಿಭಾಷಿಕ ಪದವು ಅತ್ಯಂತ ಮಹತ್ವದ್ದು ಮತ್ತು ಅರ್ಥಪೂರ್ಣವಾದುದು ಎಂದು ಅಭಿಪ್ರಾಯ ಪಡಬಹುದಾಗಿದೆ. ವೀರಗಲ್ಲಿನ ಶಿಲ್ಪ ಮತ್ತು ಶಾಸನಗಳೆರಡೂ ವಿಶೇಷ ಗಮನ ಸೆಳೆಯುತ್ತವೆ. ಇದು 'ಕುರ್ಪಿನಕಲ್ಲು' ಎನ್ನುವುದನ್ನು ಒಪ್ಪಬಹುದಾದರೂ, ಪ್ರಮಾಣಬದ್ಧವಲ್ಲದ ಶಿಲ್ಪಗಳ ಪೈಕಿ ಕುದುರೆಯಂತಹ ಪ್ರಾಣಿಗಳು ನಿಂತಿರುವ ದೃಶ್ಯವು ಕುತೂಹಲಕ್ಕೆ ಕಾರಣವಾಗಿದೆ. ಈ ಬಗೆಗೆ ಮುಂದುವರಿದ ಅಧ್ಯಯನ ಮಾಡಲು ಅವಕಾಶಗಳಿವೆ.

ಇದೇ ಕಲ್ಲಿನ ಮತ್ತೊಂದು ಬದಿಯಲ್ಲಿಯೂ ವೀರನ ಶಿಲ್ಪವಿದೆ. ಶಾಸನವಿದೆ. ಒಂದೇ ಕಲ್ಲಿನ ಮೇಲೆ ಎರಡೂ ಬದಿಯಲ್ಲಿ ಪ್ರತ್ಯೇಕ ವೀರಗಲ್ಲು ಶಾಸನಗಳಿರುವುದು ಅಪರೂಪ. ಇಲ್ಲಿರುವ ಎರಡೂ ಬದಿಯ ಶಿಲ್ಪಗಳ ಶೈಲಿ ಮತ್ತು ಶಾಸನಗಳ ಲಿಪಿ ಸ್ವರೂಪದಲ್ಲಿ ಸಾಮ್ಯಗಳಿವೆ. ಸ್ಮಾರಕ ಶಿಲೆಯ ಮತ್ತೊಂದು ಬದಿಯ ಶಿಲ್ಪದ ವಿವರಗಳು ಹೀಗಿವೆ.

ಕೆಳಹಂತದಲ್ಲಿ ಮೃದಂಗವನ್ನು ಬಡಿಯುತ್ತಿರುವ ಪುರುಷನ ಮುಂದೆ ಸ್ತ್ರೀಯೊಬ್ಬಳ ಚಿತ್ರವಿದೆ. ಅವರ ಮುಂಭಾಗದಲ್ಲಿ ಹಸುವಿನ ಶಿಲ್ಪವಿದ್ದು, ಕರು ಹಾಲು ಕುಡಿಯುತ್ತಿದೆ. ಹಸುವಿನ ಕೊರಳಿಗೆ ಗಂಟೆ ಇದೆ. ಹಸುವಿನ ಮೇಲ್ಭಾಗದಲ್ಲಿ ಮೂಲೆಗೆ ಚಿಕ್ಕದಾಗಿ ನವಿಲಿನ ಕೆತ್ತನೆಯಿದೆ. ತಮ್ಮ ಮನೆಯ ಮುಂಭಾಗದಲ್ಲಿ ಗೋವುಗಳ ಎದುರಿಗೆ ಮತ್ತು ನವಿಲಿನ ಜೊತೆಗೆ ಸಂತಸದಿಂದ ಮೃದಂಗ ವಾದನ ಮತ್ತು ನರ್ತನದ ಸವಿಯನ್ನು ಅನುಭವಿಸುತ್ತಿರುವ ತೃಪ್ತ ದಂಪತಿಗಳ ಚಿತ್ರ ಇದು ಎನಿಸುತತ್ತದೆ. ಇಷ್ಟು ಸುಖವಾದ ಜೀವನ ನಡೆಸುತ್ತಿದ್ದ ದಂಪತಿಗಳು ಯಾವುದೋ ಕಾರಣದಿಂದ ಪರಸ್ಪರ ಅಗಲಿ ನೊಂದಿರಬೇಕು ಎನಿಸುತ್ತದೆ. ಈ ಭಾಗದಿಂದ ಮೇಲ್ಭಾಗದ ಜಾಗೆಯಲ್ಲಿ 'ವಾದ' ಎಂದಷ್ಟೇ ಕೆತ್ತಲಾಗಿದೆ. ಎರಡನೆಯ ಹಂತದಲ್ಲಿ ಬಲಗೈಯಲ್ಲಿ ಗುರಾಣಿಯನ್ನೂ ಎಡಗೈಯಲ್ಲಿ ಕತ್ತಿಯನ್ನೂ ಹಿಡಿದು ನಿಂತಿರುವ ವೀರನ ಚಿತ್ರವಿದೆ. ವೀರನ ಸೊಂಟದಲ್ಲಿ ಕಿಗ್ಗ ಡಾರಿ ಇದೆ ಮತ್ತು ಸೊಂಟಕ್ಕೆ ಕಚ್ಚೆಯಂತೆ ಉಡುಪು ಧರಿಸಿರುವ ವೀರನ ಕೇಶಾಂಲಕರಣವು ಆಕರ್ಷಕವಾಗಿದೆ. ಎರಡನೆಯ ಹಂತದಲ್ಲಿ ವೀರನ ಒಂದು ಬದಿಗೆ ಇರುವ ಶಾಸನದ ಪಾಠ ಹೀಗಿದೆ.

ಸಾಲು ೧ : ಅಪುರಾವಟಿಯ

ಸಾಲು ೨ : ಹಡೆವಳ

ಸಾಲು ೩ : ಮದುವಣದ ಹೊದ

ಸಾಲು ೪ : ಡೆರ ಬಿರುದರ್ಗ್ಗೆ ತಾಗಿ

ಸಾಲು ೫ : (ದ)........

ಆ ಊರುಗಳ ಹಡೆವಳ ಮದುವಣ ಹೊದಡೆರ ಎಂಬುವವನು ಪ್ರಖ್ಯಾತ ವೀರರೊಡನೆ ಹೋರಾಡಿ ಮಡಿದಿರುವ ಸೂಚನೆಯನ್ನು ಶಾಸನ ನೀಡಿದೆ. ಮದುವಣ ಎನ್ನುವುದು ಮದುವೆಯ ಮೇಲೆ ಹಾಕುತ್ತಿದ್ದ ತೆರಿಗೆ ಎಂದು ಕನ್ನಡ-ಕನ್ನಡ ನಿಘಂಟುವಿನಲ್ಲಿ ಅರ್ಥೈಸಲಾಗಿದೆ. ಅಂದರೆ 'ಹೊದಡೆರ' ಎಂಬುವುದು ವ್ಯಕ್ತಿ ನಾಮವಾಗಿ ಸೂಚಿತವಾಗಿದೆ. ಆ ವ್ಯಕ್ತಿಯಲ್ಲಿ ಅಧಿಕಾರವನ್ನು ಮದುವಣ ಸೂಚಿಸುತ್ತಿದೆ ಎಂದು ಭಾವಿಸಬಹುದು. ಈ ಮದುವಣದ ಅಧಿಕಾರಿಯು ನಿಸರ್ಗದ ಹಿನ್ನೆಲೆಯಲ್ಲಿ ಹೋರಾಡಿ ಮಡಿದಿರಬಹುದು.

ಒಂದೇ ಶಿಲೆಯ ಮೇಲಿರುವ ಈ ಎರಡೂ ವೀರಗಲ್ಲುಗಳ ಮೇಲಿನ ಶಾಸನಗಳ ಕಾಲವು ಲಿಪಿಯ ಸ್ವರೂಪದಿಂದ ಸುಮಾರು ೧೨ ನೆಯ ಶತಮಾನಕ್ಕೆ ಸೇರುತ್ತದೆ. ಶಿಲ್ಪದ ದೃಷ್ಟಿಯಿಂದ ವಿಶೇಷ ಗಮನ ಸೆಳೆಯುವ ಈ ವೀರಗಲ್ಲಿನ ಆಸುಪಾಸಿನಲ್ಲಿ ರುಂಡ ವಿಲ್ಲದ ಒಂದು ದಿಗಂಬರ ಶಿಲ್ಪ, ರುಂಡವಿಲ್ಲದ ಬಹುತೇಕ ಯಕ್ಷ ಅಥವಾ ಕುಬೇರನ ಶಿಲ್ಪ ಮತ್ತು ಸ್ವತಂತ್ರ ಘಟಕದಂತೆ ಕಾಣುವ ಗೋಮುಖದ ಶಿಲ್ಪಗಳು ಕಂಡುಬಂದಿವೆ. ದಿಗಂಬರ ಮತ್ತು ಯಕ್ಷ ಶಿಲ್ಪಗಳು ಈ ಸ್ಥಳದಲ್ಲಿ ಜೈನ ಧರ್ಮವು ಪ್ರಚಲಿತ ವಿದ್ದುದನ್ನು ಸೂಚಿಸುತ್ತದೆ. ಗೋಮುಖ ಶಿಲ್ಪವು ಹುಸಿಬಲಿಯ ಸಂಕೇತವಿರ ಬಹುದೆ ಎಂಬ ಅನುಮಾನಕ್ಕೆ ಕಾರಣವಾಗಿದೆ.

**ಸ್ತ್ರೀ ಶಿಲ್ಪಗಳು :** ಈಗ ಇಲ್ಲಿ ಪ್ರತಿಷ್ಠೆ ಗೊಂಡಿರುವ ದೇವಿಯು ಚೌಡೇಶ್ವರಿ. ಜೊತೆಗೆ ಪರಿವಾರವಿದೆ. ಪರಿವಾರ ಸಮೇತ ಚೌಡೇಶ್ವರಿ ದೇವಿಯ ಈ ದೇವಾಲಯದ ಒಳಗೆ ಪ್ರಧಾನವಾಗಿ ಚೌಡೇಶ್ವರಿ ಮತ್ತು ಆ ಕೆಯ ಸುತ್ತ ನಾಲ್ಕು ದೇವಿಯರ ವಿಗ್ರಹಗಳು ಪ್ರತಿಷ್ಠಾಪಿತವಾಗಿವೆ. ಇದು ಒಂದು ಶಾಕ್ತ ಪಂಥದ ದೇವಸ್ಥಾನ. ಬಹುತೇಕ ಇಲ್ಲಿ ಪ್ರಾಣಿ ಬಲಿಯೂ ಇರಬಹುದು. ಈಗ, ಜೀರ್ಣೋದ್ಧಾರ ಎನ್ನುವುದಕ್ಕಿಂತಲೂ ಪುನನಿರ್ಮಾಣಗೊಂಡಿರುವ ಈ ದೇವಾಲಯದಲ್ಲಿ ಪ್ರತಿಷ್ಠಾಪಿತಗೊಂಡಿರುವ ಮೂರ್ತಿಗಳೂ ಸಹ ಇತ್ತೀಚಿನ ರಚನೆಗಳು. ಇಲ್ಲಿ ಮೊದಲು ಇದ್ದ ಮೂರ್ತಿಗಳು ಭಗ್ನವಾಗಿದ್ದುವು ಮತ್ತು ಅನಾಥ ಸ್ಥಿತಿಯಲ್ಲಿದ್ದುವು ಎಂಬ ಕಾರಣದಿಂದ ಶಿವಮೊಗ್ಗದ ಶಿವಪ್ಪನಾಯಕನ ಅರಮನೆಯಲ್ಲಿ ಸ್ಥಿತವಾಗಿರುವ ಕರ್ನಾಟಕ ರಾಜ್ಯ ಪುರಾತತ್ತ್ವ ಇಲಾಖೆಯ ವಸ್ತುಸಂಗ್ರಹಾಲಯಕ್ಕೆ ತೆಗೆದುಕೊಂಡು ಹೋಗಲಾಗಿದೆ ಎಂಬ ವಿಷಯವನ್ನು ನಮ್ಮ ಜೊತೆಗೆ ಮಾರ್ಗದರ್ಶಿಗಳಾಗಿ ಬಂದಿದ್ದ ಸೂರ್ಯ ದೇವಸ್ಥಾನದ ಅರ್ಚಕರಾದ ಶ್ರೀ ಜಗದೀಶ ಶಾಸ್ತ್ರಿಗಳು ತಿಳಿಸಿದರು. ಅವರ ನೆನಪಿನ ಪ್ರಕಾರ ಇಲ್ಲಿಂದ ತೆಗೆದುಕೊಂಡು ಹೋಗಿರುವ ಶಿಲ್ಪಗಳೂ ಸಹ ದೇವಿಯರವೇ ಆಗಿದ್ದು, ಅದೇ ಕಾರಣದಿಂದ ಅವುಗಳ ಬದಲಿಗೆ ಹೊಸದಾಗಿ ಐದು ದೇವೀಯರ ವಿಗ್ರಹಗಳನ್ನು ಮಾಡಿಸಿ, ಮೊದಲು ಇದ್ದ ಹೆಸರಿನಲ್ಲೇ ಪ್ರತಿಷ್ಠಾಪಿಸಲಾಗಿದೆ.

ಅಪರೂಪಕ್ಕೆ ಒಂದೇ ಕಲ್ಲಿನ ಎರಡೂ ಬದಿ ಇರುವ ಶಾಸನ ಸಹಿತ ವೀರಗಲ್ಲುಗಳು. ಅವುಗಳಲ್ಲಿನ ಅಪರೂಪ ಅಥವಾ ವಿಶಿಷ್ಟ ಎನಿಸುವ ಕೆತ್ತನೆ, ಅದರ ಆಸುಪಾಸಿನಲ್ಲಿ ದೊರೆತ ಜೈನ ಧರ್ಮಕ್ಕೆ ಸಂಬಂಧಿಸಿದ ಕುರುಹುಗಳು ಹಾಗೂ ಶಾಕ್ತಪರ ಚೌಡೇಶ್ವರಿ ದೇವತೆಯ ದೇವಾಲಯ – ಇತ್ಯಾದಿಗಳಿಂದ ಆ ಸ್ಥಳದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಬಗೆಗೆ ಆಸಕ್ತಿ ಅಧಿಕವಾಗಿದ್ದ ಸಂದರ್ಭದಲ್ಲೇ, ದೊರೆತ ಮಾಹಿತಿಯನ್ನು ಅನುಸರಿಸಿ ಶಿವಮೊಗ್ಗದ ಶಿವಪ್ಪನಾಯಕನ ಅರಮನೆಯಲ್ಲಿರುವ, ೧೯೯೪ರವರೆಗೆ ಸೂರ್ಯ ದೇವಸ್ಥಾನದ ಚೌಡೇಶ್ವರಿ ದೇವಾಲಯದಲ್ಲೇ ಇದ್ದ ಐದು ಸ್ತ್ರೀ ವಿಗ್ರಹಗಳನ್ನೂ ಕಂಡೆವು. ಈ ಶಿಲ್ಪಗಳನ್ನು ನೋಡಿದ ನಂತರ ನಮ್ಮ ಅನುಮಾನ ಹಾಗೂ ಗೊಂದಲಗಳು ನಿವಾರಣೆ ಆಗುವುದರ ಬದಲು ಹೆಚ್ಚಿವೆ.

ಶಿವಪ್ಪನಾಯಕನ ಅರಮನೆಯ ವಸ್ತು ಸಂಗ್ರಹಾಲಯದ ಗೋದಾಮಿನಲ್ಲಿ ಇಡಲ್ಪಟ್ಟಿರುವ ಪ್ರತಿಮೆಗಳ ಬಗೆಗೆ ನೋಂದಣಿ ಪುಸ್ತಕದಲ್ಲಿ ದಾಖಲೆ ಇದೆ. ೧೫-೧-೧೯೯೪ರಂದು ದಾಖಲಾಗಿರುವ ಪ್ರಕಾರ 'ಸೂರ್ಯ ದೇವಸ್ಥಾನ' ದಿಂದ ತೆಗೆದುಕೊಂಡು ಬಂದಿರುವ ಐದು ವಿಗ್ರಹಗಳು ಮತ್ತು ಒಂದು ಪೀಠಗಳು ಪೈಕಿ ಐದು ವಿಗ್ರಹಗಳೂ ದೇವಿಯರವು. ಇವು ಯಾವ ದೇವಿಯರು ಎಂದು ಸ್ಪಷ್ಟವಾಗಿಲ್ಲ. ಬಹುತೇಕ ಪದ್ಮಾಸನದಲ್ಲೇ ಕುಳಿತಿರುವ ಹಾಗೂ ಅಧಿಕವಾಗಿ ಭಿನ್ನವಾಗಿರುವ ಈ ಶಿಲ್ಪಗಳು ಒಂದರಂತೆ ಮತ್ತೊಂದಿಲ್ಲ. ಎಲ್ಲವೂ ದ್ವಿಭುಜ ಪ್ರತಿಮೆಗಳು. ಎರಡು ಪ್ರತಿಮೆಗಳ ಬಲಗೈಗಳಲ್ಲಿ ಖಡ್ಗ ಇದೆ. ಎಲ್ಲಾ ಪ್ರತಿಮೆಗಳೂ ಹಿತ-ಮಿತ ಆಭರಣಗಳಿಂದ ಅಲಂಕೃತವಾಗಿವೆ. ಕಿರೀಟ ಧರಿಸಿರುವ ಇವುಗಳ ತಲೆಗೂದಲ ಅಲಂಕರಣವು ಸಾಮಾನ್ಯವಾಗಿ ಒಂದೇ ರೀತಿ ಇದ್ದರೂ ಆಕರ್ಷಕವಾಗಿದೆ. ಈ ಪ್ರತಿಮೆಗಳಲ್ಲಿ ಅತ್ಯಂತ ಎತ್ತರವಾದುದೆಂದರೆ ೭೧ ಸೆಂ. ಮೀ. ಎತ್ತರವಿರುವ ದೇವಿಯದು. ಬಹು ಭಾಗ ಭಿನ್ನವಾಗಿರುವ ಈ ಸ್ತ್ರೀ ಮೂರ್ತಿಯ ಬಲಹಸ್ತದಲ್ಲಿ ಖಡ್ಗವಿದೆ. ಎಡಹಸ್ತ ಮುರಿದಿದೆ. ವಿರಾಮ ಪದ್ಮಾಸನದಲ್ಲಿ ಕುಳಿತಿರುವ ಮೂರ್ತಿಯ ಎಡಪಾದವು ಬಲಗಾಲಿನ ಮೇಲೆ ಸ್ವಲ್ಪ ಓರೆಯಾಗಿ ವಿರಮಿಸಿದೆ. ಎರಡೂ ಕಾಲುಗಳಲ್ಲಿ ಕಾಲಂದುಗೆ ಇದೆ ಮತ್ತು ಬಲಪಾದ ಮುಕ್ಕಾಗಿದೆ. ಅಲಂಕೃತ ಕಟಿವಸ್ತ್ರವಿದೆ. ಭುಜಕೀರ್ತಿಯೂ ಉಂಟು. ಬಲಸ್ತನ ಮುಕ್ಕಾಗಿದೆ. ಸ್ತನಗಳು ಹೆಚ್ಚು ಉಬ್ಬಿಲ್ಲ. ಎರಡು ಕಂಠೀಹಾರಗಳಿವೆ. ದೃಷ್ಟಿಯು ನೇರವಾಗಿರದೆ, ಸ್ವಲ್ಪ ಮಟ್ಟಿಗೆ ಕೆಳಗೆ ಬಾಗಿದೆ. ಎರಡು ಪಾರ್ಶ್ವಗಳಿಗೂ ವಿಸ್ತರಿಸುವ ತುರುಬನ್ನು ಅಲಂಕರಿಸಲಾಗಿದೆ ಮತ್ತು ಕಿರೀಟ ಮಕುಟವಿದೆ. ಈ ಎಲ್ಲ ಸಾಧಾರಣವೆನಿಸುವ ವಿಷಯಗಳ ಜೊತೆಗೆ ಮಹತ್ವದ ಅಥವಾ ವಿಶೇಷವೆನಿಸುವ ವಿಚಾರವೆಂದರೆ ವಿಗ್ರಹದ ನಾಭಿಯಿಂದ ಸ್ತನಗಳ ಮಧ್ಯದವರೆಗೆ ಬಳ್ಳಿಯಂತಹ ಅಲಂಕರಣವಿದೆ. ನಾಭಿಯ ಬಳಿ ಚೇಳಿನಂತೆ ಕಾಣುವ ಭಾಗವು ನಂತರ ಬಳ್ಳಿಯಂತೆ ಅಥವಾ ಕೊಂಡಿಯಂತೆ ವಿಸ್ತರಿಸಿಕೊಂಡು ಸ್ತನಗಳ ಮಧ್ಯದವರೆಗೆ ಬೆಳೆದು ನಿಂತಿರುವಂತಿದೆ. ಇದು **ಚೇಳಿನೀದೇವಿಯೇ** ಎಂಬ ಅನುಮಾನಬರುತ್ತದೆ. ಆದರೆ ಶಿಷ್ಟ ಸಂಪ್ರದಾಯದಲ್ಲಿ ಚೇಳಿನೀ ದೇವಿಯ ಲಕ್ಷಣಗಳೇನು ಎಂದು ಖಚಿತವಾಗಿ ತಿಳಿಯುವಂತಿಲ್ಲ. ಮಾತೃದೇವತೆಯರಲ್ಲಿ ಅನೇಕ ವರ್ಗಗಳಿದ್ದು ಅವರುಗಳೆಲ್ಲರ ಬಗೆಗೆ ತಿಳಿಯುವುದು ಕಷ್ಟವಾಗಿದೆ. ಸೂರ್ಯ ದೇವಸ್ಥಾನದ ಬಳಿಯ ದೇವಾಲಯದಲ್ಲಿ ಹಿಂದೆ ಇದ್ದುವೆನ್ನಲಾದ ದೇವೀಯರ ಶಿಲ್ಪಗಳಲ್ಲಿ ಇದು ಪ್ರಧಾನವಾಗಿ



ಚಿತ್ರ ೩೫೦ ಚಿತ್ರ ೩೫೧ ಚಿತ್ರ ೩೫೨ ಚಿತ್ರ ೩೫೩ ಚಿತ್ರ ೩೫೪

ಕಾಣುವುದರಿಂದ ಮತ್ತು ಉಳಿದ ನಾಲ್ಕು ಸ್ತ್ರೀ ವಿಗ್ರಹಗಳು ಈ ಶಿಲ್ಪಕ್ಕಿಂತ ಎತ್ತರದಲ್ಲಿ ಕಡಿಮೆ ಇರುವುದರಿಂದ ಹಾಗೂ ಹೆಚ್ಚು ಆಕರ್ಷಕವಲ್ಲದಿರುವ ಕಾರಣದಿಂದ, ಈ ಎತ್ತರದ ಶಿಲ್ಪವೇ ಅಲ್ಲಿನ ಪ್ರಧಾನ ದೇವತೆ ಮತ್ತು ಆಕೆಯ ಹೆಸರನ್ನು ನಿರ್ಧರಿಸಲು ಪ್ರತಿಮಾಶಾಸ್ತ್ರದ ನೆರವು ಅವಶ್ಯಕ. ಈ ಪ್ರತಿಮೆಗಳಿದ್ದ ಸ್ಥಳದಲ್ಲಿ ಈಗ ಇರುವುದು ಪರಿವಾರ ಸಹಿತ ಚೌಡೇಶ್ವರಿ. ಆ ಸ್ಥಳದಲ್ಲಿ ಮೊದಲಿಗೆ ಇದ್ದ ದೇವತೆಯ ಹೆಸರೇ ಈಗ ಪ್ರತಿಷ್ಠಾಪಿತ ವಾಗಿರುವ ದೇವತೆಗೂ ಉಳಿದು ಬಂದಿದೆ ಎನ್ನುವುದಾದರೆ ನಾವು ಪ್ರಸ್ತಾಪಿಸುತ್ತಿರುವ ಪ್ರತಿಮೆಯು ಚೌಡೇಶ್ವರಿಯದಾಗುತ್ತದೆ. ಸಾಮಾನ್ಯವಾಗಿ ಚೌಡೇಶ್ವರಿಯು ಚಾಮುಂಡೇಶ್ವರಿಯೇ ಆಗಿರುತ್ತಾಳೆ. ಚಾಮುಂಡೇಶ್ವರಿಯ ಪ್ರತಿಮಾಲಕ್ಷಣಗಳು ಬಹುತೇಕ ಎಲ್ಲರಿಗೂ ತಿಳಿದಿದೆ. ಆದರೆ ಈ ಪ್ರತಿಮೆಯ ಚಾಮುಂಡೇಶ್ವರಿಯ ಯಾವುದೇ ಲಕ್ಷಣಗಳನ್ನು ಹೊಂದಿಲ್ಲ. ಆದ್ದರಿಂದ ಇದು ಚಾಮುಂಡೇಶ್ವರಿಯ ಪ್ರತಿಮೆಯಂತೂ ಅಲ್ಲ. ಚೇಳಿನೀದೇವಿಯೇ ಎಂಬ ಪ್ರಶ್ನೆಗೂ ಸರಿಯಾದ ಉತ್ತರ ಸದ್ಯಕ್ಕೆ ಲಭ್ಯವಿಲ್ಲ. ಇದು ದೇವಿಯ ವಿಗ್ರಹವೇ ಎಂಬ ಬಗೆಗೇ ಅನುಮಾನಗಳು ಬಂದರೆ ಆಶ್ಚರ್ಯವಲ್ಲ. ಎತ್ತರ ಮತ್ತು ಅಲಂಕರಣದ ಸಾಮಾನ್ಯ ವ್ಯತ್ಯಾಸಗಳ ಜೊತೆಗೆ, ದೈಹಿಕವಾದ ಕೆಲವು ವಿಶಿಷ್ಟ ವ್ಯತ್ಯಾಸಗಳ ಈ ಪ್ರತಿಮೆಗಳೆಲ್ಲವೂ ದ್ವಿಬಾಹುಗಳನ್ನುಳ್ಳವು. ಎರಡು ಪ್ರತಿಮೆಗಳ ಬಲಗೈನಲ್ಲಿ ಖಡ್ಗಗಳಿವೆ. ಉಳಿದ ಪ್ರತಿಮೆಗಳ ಹಸ್ತಗಳು ಭಗ್ನವಾಗಿದೆ. ಆದ್ದರಿಂದ ಆ ಬಗೆಗೆ ಖಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಮೇಲೆ ಪ್ರಸ್ತಾಪಿಸಿದ ಮತ್ತು ಐದು ಪ್ರತಿಮೆಗಳ ಪೈಕಿ ಪ್ರಧಾನವೆನಿಸುವ ಪ್ರತಿಮೆಯು ವಸ್ತು ಸಂಗ್ರಹಾಲಯದ ನೋಂದಣಿಯ ಪ್ರಕಾರ ಕ್ರ.ಸಂ. ೩೫೦ಕ್ಕೆ ಸೇರಿದೆ. ಉಳಿದ ನಾಲ್ಕು ಪ್ರತಿಮೆಗಳ ವಿವರಗಳು ಕೆಳಕಂಡಂತಿವೆ.

ಸಂ. ೩೫೧ : ಪದ್ಮಾಸನದಲ್ಲಿ ಕುಳಿತಿರುವ ಸ್ತ್ರೀ. ಸೊಂಟದಲ್ಲಿ ಅಲಂಕೃತ ವಸ್ತ್ರವಿದೆ. ಪಾದಗಳಲ್ಲಿ ಕಾಲಂದುಗೆ ಯಂತಹ ಆಭರಣ. ಬಲಗೈಯಲ್ಲಿ ಖಡ್ಗ. ಮುಂಗೈಯಗಳಲ್ಲಿ ಕಡಗಗಳಿವೆ. ಭುಜಕೀರ್ತಿಗಳೂ ಇವೆ. ಎಡ ಮುಂಗೈ ಮುರಿದಿದೆ. ಕೊರಳಿನಲ್ಲಿ ಕಂಠೀಹಾರವಿದೆ. ಕರ್ಣಕುಂಡಲಗಳಿವೆ. ಕಿರೀಟ ಮಕುಟ. ಸ್ನಿಗ್ಧ ಮುಖಭಾವ. ತುರುಬು ಎರಡು ಪಾರ್ಶ್ವಗಳಿಗೂ ವಿಸ್ತರಿಸಿದೆ. ಗುಂಡಗೆ ಉಬ್ಬಿದ ಸ್ತನಗಳ ನಡುವಿನ ಭಾಗ ಕಿರಿದು. ಪ್ರತಿಮೆಯ ಹಿಂಭಾಗದ ಕೆತ್ತನೆಯೂ ಸ್ಪಷ್ಟವಾಗಿದೆ. ನೇರ ದೃಷ್ಟಿ. ಬಲಪಾದವು ಎಡಪಾದದ ಮೇಲೆ ಓರೆಯಾಗಿ ವಿಶ್ರಮಿಸಿದೆ.

ಸಂ. ೩೫೨ : ಬಲಗೈಯಲ್ಲಿ ಕಳಶವಿದೆ. ಸ್ತನಗಳು ಉಬ್ಬಿವೆ. ಅವುಗಳ ನಡುವಿನ ಅಂತರವು ಕಡಿಮೆ ಇದೆ. ಅಥವಾ ಎರಡೂ ಸ್ತನಗಳ ನಡುವೆ ಅಂತರವೇ ಇಲ್ಲ. ಎಡ ಮುಂಗೈ ಭಿನ್ನವಾಗಿದೆ. ಬಹುಶಃ ಈ ಕೈಯಲ್ಲಿ ಯಾವುದೋ ಫಲವೊಂದನ್ನು ಹಿಡಿದಿರಬಹುದು. ಕರಂಡ ಮಕುಟ. ಈ ಕಿರೀಟದ ಎತ್ತರ ಕಡಿಮೆ. ಕಾಲಂದುಗೆ ಇಲ್ಲ. ಸೊಂಟದ ಮೇಲಿನ ವಸ್ತ್ರ ಅಲಂಕೃತವಲ್ಲ. ಕಂಠೀಹಾರದ ವಿನ್ಯಾಸವೂ ಅತ್ಯಂತ ಸರಳ. ಸ್ನಿಗ್ಧ ಮುಖಭಾವ. ನೇರದೃಷ್ಟಿ. ಬಲಪಾದವು ಎಡಗಾಲಿನ ಮೇಲೆ ಸ್ವಲ್ಪವೇ ಬಾಗಿದೆ.

ಸಂ. ೩೫೩ : ಬಲತೋಳು ಪೂರ್ಣವಾಗಿ ಮುರಿದಿದೆ. ಎಡಹಸ್ತದಲ್ಲಿ ಯಾವುದೋ ಫಲವೊಂದನ್ನು ಹಿಡಿದಂತಿದೆ. ಸ್ತನಗಳು ಬಿಡಿಬಿಡಿಯಾಗಿವೆ ಮತ್ತು ಚೆನ್ನಾಗಿಯೇ ಉಬ್ಬಿವೆ. ಕಂಠೀಹಾರದ ಅಲಂಕರಣವೂ ಸರಳ. ಅತಿಸಣ್ಣ ಕಿರೀಟ ಮಕುಟ. ಕೇಶಾಲಂಕಾರಕ್ಕೆ ಸಂಬಂಧಿಸಿದಂತೆ ಗಮನಿಸಬೇಕಾದ ಅಂಶವೆಂದರೆ ಜಡೆಯನ್ನು ಸ್ವಲ್ಪ ಇಳಿಬಿಡಲಾಗಿದೆ. ತುರುಬು ದುಂಡಗೆ ಅಲಂಕೃತವಾಗಿದೆ. ಈ ಎಲ್ಲಾ ವಿವರಗಳನ್ನು ಹಿಂಭಾಗದ ಕೆತ್ತನೆಯಿಂದ ಸ್ಪಷ್ಟಪಡಿಸಿ ಕೊಳ್ಳಬಹುದು. ಹಿಂಭಾಗದ ಕೆತ್ತನೆಯೂ ಸ್ಪಷ್ಟವಾಗಿದೆ. ಕಚ್ಚೆ ಹಾಕಿದ ಸೀರೆ ಮತ್ತು ಕಟಿಬಂಧವಿದೆ. ದೃಷ್ಟಿಯು ಕೆಳಗೆ ಬಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಸ್ತ್ರೀಯ ಬಲ ಅಂಗಾಲು ಎಡಗಾಲಿನ ಮೇಲೆ ಮೇಲ್ಮುಖವಾಗಿ ವಿಶ್ರಮಿಸಿದೆ.

ಸಂ. ೩೫೪ : ಪದ್ಮಾಸನದಲ್ಲಿ ಕುಳಿತಿರುವ ಸ್ತ್ರೀಯ ಬಲ ಅಂಗಾಲು ಎಡಮಂಡಿಯ ಮೇಲೆ ಓರೆಯಾಗಿ ವಿಶ್ರಮಿಸಿದೆ. ಕಟಿವಸ್ತ್ರದ ಅಲಂಕರಣವು ಅತ್ಯಂತ ವಿವರಪೂರ್ಣವೂ ಸ್ಪಷ್ಟವೂ ಆಗಿದೆ. ಎಡಗೈಯಲ್ಲಿ ಫಲದಂತಹ ವಸ್ತು ಇದೆ. ಬಲಹಸ್ತವು

ಮುಕ್ಕಾಗಿರುವುದರಿಂದ, ಅದರಲ್ಲಿದ್ದ ವಸ್ತು ಯಾವುದೆಂದು ಸ್ಪಷ್ಟ ವಿಲ್ಲ. ಸ್ತನಗಳು ಕುತ್ತಿಗೆಯಿಂದಲೇ ನೇರವಾಗಿ ಆರಂಭವಾಗಿರುವಂತೆ ಕಾಣುತ್ತವೆ. ಕಂಠೀಹಾರವು ಸ್ತನಗಳ ಮೇಲೆ ವಿಶ್ರಮಿಸಿದೆ. ಕಿರೀಟಮಕುಟ. ಕೇಶವಿನ್ಯಾಸವು ವಿಶೇಷವಾಗಿ ಕಾಣುವುದಿಲ್ಲ. ಮುಖದಲ್ಲಿ ಸೌಂದರ್ಯ ವ್ಯಕ್ತವಾಗಿಲ್ಲ. ಸ್ನಿಗ್ಧತೆಯೇ ಇಲ್ಲದ ಮುಖದ ದೃಷ್ಟಿ ನೇರವಾಗಿದೆ.

ಮೇಲಿನ ವಿವರಗಳು ನನ್ನ ಅಧ್ಯಯನದ ಸಂದರ್ಭದವು. ಪುರಾತತ್ತ್ವ ಇಲಾಖೆಯ ನೋಂದಣಿ ಪುಸ್ತಕದಲ್ಲಿ ಬಹುತೇಕ ದಾಖಲಾಗಿರುವ ವಿವರಗಳು ಪದ್ಮಾಸನದಲ್ಲಿ ಕುಳಿತಿರುವ ದೇವಿ. ಬಲಗೈಲಿ ಖಡ್ಗವಿದೆ. ಎಡಭಾಗ ಭಗ್ನವಾಗಿದೆ. ವಸ್ತ್ರಾಭರಣಗಳಿಂದ ಅಲಂಕೃತವಾಗಿದೆ – ಇತ್ಯಾದಿ ಎಂದೇ ಇವೆ. ಅಂದರೆ ಪುರಾತತ್ತ್ವ ಇಲಾಖೆಯವರ ಪ್ರಕಾರ ಸೂರ್ಯದೇವಸ್ಥಾನದ ಬಳಿ ದೊರೆತ ಸ್ತ್ರೀ ಶಿಲ್ಪಗಳೆಲ್ಲವೂ 'ದೇವಿಯರು'.

ಸ್ತ್ರೀ ದೇವಿಯರ ಬಗೆಗೆ ಪರಿಶೀಲಿಸಿದಾಗ ದೇವಿಯರ ಪ್ರತಿಮೆಗಳು ಸಾಮಾನ್ಯವಾಗಿ ಉಬ್ಬಿದ ಎದೆಗಳನ್ನು ಹೊಂದಿರಬೇಕು ಮತ್ತು ಆಭರಣಗಳಿಂದ ಅಲಂಕೃತವಾಗಿರಬೇಕು ಎಂಬ ಅಭಿಪ್ರಾಯವನ್ನು ಗಮನಿಸಬಹುದು. ಬಹುತೇಕ ದೇವಿಯರು ಚತುರ್ಭುಜೆಯರಾಗಿರುತ್ತಾರೆ. ಇಲ್ಲಿನ ಸ್ತ್ರೀ ಪ್ರತಿಮೆಗಳೆಲ್ಲವೂ ದ್ವಿಭುಜದವು. ದ್ವಿಭುಜದ ದೇವಿಯರೂ ಕೆಲವರಿದ್ದಾರೆ. ದುರ್ಗೆಯ ವಿವಿಧ ರೂಪಗಳು ದ್ವಿಭುಜವನ್ನು ಹೊಂದಿರುತ್ತದೆ. ನೀಲಕಂಠಾರಿ, ಕ್ಷೇಮಂಕಾರಿ, ಹರಸಿದ್ಧಿ, ರುದ್ರಾಂಶದುರ್ಗ, ವನದುರ್ಗಾ, ಅಗ್ನಿದುರ್ಗಾ, ಜಯದುರ್ಗಾ, ವಿಂಧ್ಯವಾಸಿದುರ್ಗಾ, ರಿಪುಮಾರಿ ದುರ್ಗಾ ಇತ್ಯಾದಿಗಳಲ್ಲದೆ ಭೂತಮಾತಾ, ವಾಮಾ, ಜ್ಯೇಷ್ಠಾ, ರೌದ್ರೀ, ಮನೋನ್ಮಣಿ ಇತ್ಯಾದಿ ದೇವಿಯರೂ ದ್ವಿಭುಜೆಯರು. ದೇವಿಯರು ದ್ವಿಭುಜೆಯರಾಗಲಿ ಅಥವಾ ಚತುರ್ಭುಜೆಯರಾಗಲಿ, ಅವರಿಗೆ ನಿರ್ದಿಷ್ಟವಾದ ಲಕ್ಷಣಗಳಿರುತ್ತವೆ. ಆ ಪ್ರತಿಮಾ ಲಕ್ಷಣಗಳ ಆಧಾರದಿಂದ ದೇವಿಯರ ವಿಗ್ರಹಗಳನ್ನು ಗುರುತಿಸಬಹುದು. ಸೂರ್ಯ ದೇವಸ್ಥಾನದಲ್ಲಿದ್ದ ಐದು ವಿಗ್ರಹಗಳೂ ಈ ಯಾವ ಲಕ್ಷಣಗಳನ್ನೂ ಹೊಂದಿರುವಂತೆ ಕಾಣುವುದಿಲ್ಲ. ಕಿರೀಟಗಳನ್ನು ಮರೆತುಬಿಟ್ಟರೆ ಇವೆಲ್ಲವೂ ಸಾಮಾನ್ಯ ಸ್ತ್ರೀಯರ ಪ್ರತಿಮೆಗಳೇ ಆಗಿ ಬಿಡುತ್ತವೆ. ಶಕ್ತಿ ಸ್ವರೂಪಿಣಿಯರಾದ ದೇವಿಯರು ಸಾಮಾನ್ಯವಾಗಿ ರೌದ್ರ ಲಕ್ಷಣಗಳನ್ನು ಹೊಂದಿರುತ್ತಾರೆ. ಖಡ್ಗ ಮತ್ತು ಖೇಟಕಗಳನ್ನು ಕೈಗಳಲ್ಲಿ ಹಿಡಿದು ಸಿಂಹಾಸನದ ಮೇಲೆ ಕುಳಿತಿರುತ್ತಾರೆ. ಭೂತ, ಪ್ರೇತ, ಪಿಶಾಚಗಣಗಳು ಪೀಠಗಳಲ್ಲಾದರೂ ಇರುತ್ತವೆ. ಜ್ಯೇಷ್ಠಾದೇವಿಯಿಂದ ಆರಂಭವಾಗಿ ಮನೋನ್ಮಣಿಯವರೆಗಿನ ಶಕ್ತಿ ದೇವತೆಯರ ಎಲ್ಲಾ ರೂಪಗಳಿಗೂ ನಿರ್ದಿಷ್ಟ ಲಕ್ಷಣಗಳಿವೆ. ಅವುಗಳಲ್ಲಿ ಯಾವ ಲಕ್ಷಣಗಳನ್ನು ಇಲ್ಲಿನ ದೇವಿಯರ ಶಿಲ್ಪಗಳಲ್ಲಿ ಕಾಣಲಾಗುವುದಿಲ್ಲ.

ಸೂರ್ಯದೇವಸ್ಥಾನದಲ್ಲಿದ್ದ ದೇವತೆಯರ ಪೈಕಿ ಒಬ್ಬಳು ಪ್ರಧಾನಳು ಮತ್ತು ಉಳಿದ ನಾಲ್ವರು ಆಕೆಯ ಪರಿವಾರ ಎಂದು ಭಾವಿಸಲು, ಎತ್ತರವಿರುವ ಒಂದು ಪ್ರತಿಮೆ ಮತ್ತು ಅದಕ್ಕಿಂತ ಕಡಿಮೆ ಆಕಾರದ ನಾಲ್ಕು ಪ್ರತಿಮೆಗಳು ಕಾರಣ ಎಂದು ಊಹಿಸಿದರೆ ತಪ್ಪಾಗಲಾರದು. ಪ್ರಧಾನವಾಗಿ ಎದ್ದುಕಾಣುವ ಸ್ತನಗಳಿಂದಾಗಿ ಈ ವಿಗ್ರಹಗಳು ಮಾತ್ರ ದೇವಿಯರಿಗೆ ಸಂಬಂಧಿಸಿವೆ ಎಂದು ಹೇಳಬಹುದಾದರೂ ಸ್ತನಗಳ ಉಬ್ಬು, ಮತ್ತು ಅವುಗಳ ನಡುವಿನ ಅಂತರವನ್ನು ಗಮನಿಸಿದಾಗ, ಪದ್ಮಿನಿ, ಚಿತ್ತಿನಿ, ಹಸ್ತಿನಿ, ಶಂಖಿಣಿ, ಡಾಕಿಣಿ ಇತ್ಯಾದಿ ಲಕ್ಷಣಗಳ ಸ್ತ್ರೀಯರ ನೆನಪಾದರೆ ಆಶ್ಚರ್ಯವಾಗಲಾರದು. ಮೇಲಿನ ಲಕ್ಷಣಗಳ ಸ್ತ್ರೀಯರನ್ನು ಈ ಪ್ರತಿಮೆಗಳ ಮೂಲಕ ಪ್ರತಿನಿಧಿಸುವ ಕೆಲಸವನ್ನು ಯಾರೋ ಶಿಲ್ಪಿಯು ಯಾರಿಗೋಸ್ಕರವೋ ಮಾಡಿರುವ ಸಾಧ್ಯತೆಗಳಿವೆ.

ಈಗಂತೂ ಶಾಕ್ತ ಸ್ವರೂಪದ್ದಾಗಿರುವ 'ಪರಿವಾರ ಸಹಿತ ಚೌಡೇಶ್ವರಿ', ಸಿಡಿತಲೆಯ ವಿಶಿಷ್ಟ ವೀರಗಲ್ಲುಗಳು ಈ ಸ್ಥಳವು ಶಾಕ್ತ ಅಥವಾ ಹಿಂಸಾ ಪ್ರಧಾನ ನೆಲೆಯಾಗಿತ್ತು ಎಂದು ಸೂಚಿಸಿದರೆ. ರುಂಡವಿಲ್ಲದ ದಿಗಂಬರ ಶಿಲ್ಪ ಮತ್ತು ರುಂಡವಿಲ್ಲದ ಯಕ್ಷ ಅಥವಾ ಕುಬೇರನ ಶಿಲ್ಪವು ಈ ಸ್ಥಳದಲ್ಲಿ ಜೈನಧರ್ಮ ಅಸ್ತಿತ್ವದಲ್ಲಿತ್ತು ಎಂದು ಸೂಚಿಸುತ್ತವೆ. ಹಿಂಸೆ ಮತ್ತು ಅಹಿಂಸೆಗಳೆರಡೂ ಒಟ್ಟಿಗೆ ಇರಲು ಸಾಧ್ಯವಿಲ್ಲ. ಜೈನ ಧರ್ಮದಲ್ಲಿ ತಾಂತ್ರಿಕ ವಿಷಯಗಳಿಗೆ ಅವಕಾಶ ಇರುವುದಾದರೂ ಅಲ್ಲಿ ಹಿಂಸೆಗೆ ಅವಕಾಶವಿಲ್ಲ. ಹಿಂಸಾರಹಿತ ತಾಂತ್ರಿಕ ಅಂಶವನ್ನು ಸ್ವತಂತ್ರ ಗೋಮುಖದ ಶಿಲ್ಪ ನೆನಪಿಗೆ ತಂದರೂ, ಅಲ್ಲೇ ಇರುವ ಸಿಡಿತಲೆಯ ವೀರಗಲ್ಲು ಹಿಂಸಾಸ್ವರೂಪದ ಸಂಕೇತವೇ ಆಗುತ್ತದೆ. ಇಲ್ಲಿದ್ದ ಸ್ತ್ರೀ ವಿಗ್ರಹಗಳು ದೇವಿಯರವೇ ಆಗಿದ್ದರೆ, ಅವುಗಳ ಸ್ವರೂಪವನ್ನು ಖಚಿತವಾಗಿ ಅರ್ಥೈಸಲು ಅವಕಾಶಗಳು ಕಡಿಮೆ ಇವೆ. ನಾಭಿಯಿಂದ ಸ್ತನದವರೆಗೆ ಬಳ್ಳಿಯಂತಹ ಅಲಂಕರಣವಿದ್ದು, ನಾಭಿಯ ಬಳಿ ಚೇಳನ್ನು ಹೋಲುವ ಕೆತ್ತನೆಯಿರುವುದರಿಂದ ಆ ಪ್ರಧಾನ ಶಿಲ್ಪವನ್ನು ಚೇಳಿನಿದೇವಿ ಎಂದು ಒಪ್ಪಿದರೆ. ಆಕೆಯ ಪರಿವಾರದ ಉಳಿದ ನಾಲ್ವರು ದೇವತೆಯರು ಯಾರು? ಜೊತೆಗೆ ಈ ಶಿಲ್ಪಗಳೆಲ್ಲವೂ ದ್ವಿಭುಜವನ್ನು ಹೊಂದಿವೆ.

ಇವು ಬಹುತೇಕ ೧೨ನೆಯ ಶತಮಾನದಲ್ಲಿದ್ದ ವಿಶಿಷ್ಟ ಲಕ್ಷಣಗಳ ಸ್ತ್ರೀಯರನ್ನು ಪ್ರತಿನಿಧಿಸುವ ಪ್ರತಿಮೆಗಳಿರಬಹುದೆ? ಎಂಬ ದುರ್ಬಲವಾದ ಒಂದು ಅನುಮಾನವನ್ನಷ್ಟೇ ವ್ಯಕ್ತಪಡಿಸಲು ಸದ್ಯಕ್ಕೆ ಸಾಧ್ಯವಾಗಿದೆ.

ಎಂ. ಜಿ. ಮಂಜುನಾಥ *

# ಕುವರ ಲಕ್ಷ್ಮನ ಶಾಸನ : ಕೆಲವು ಹೊಸ ವಿಷಯಗಳು

ಹಾಸನ ಜಿಲ್ಲೆಯ ಹಳೇಬೀಡಿನ ಹೊಯ್ಸಳೇಶ್ವರ ಶಾಂತಲೇಶ್ವರ ದೇವಾಲಯದ ಆವರಣದಲ್ಲಿರುವ ಕುವರಲಕ್ಷ್ಮನನ್ನು ಕುರಿತ ಶಾಸನವು ಪ್ರಾಚೀನ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಗರುಡ ಪದ್ಧತಿಯನ್ನು ಕುರಿತಂತಹ ವೈಶಿಷ್ಟ್ಯಪೂರ್ಣವಾದ ಶಾಸನ ಎಂಬುದು ಸರ್ವರಿಗೂ ತಿಳಿದ ಸಂಗತಿ.

ಹೊಯ್ಸಳರ ದೊರೆಯಾದ ವೀರಬಲ್ಲಾಳನು ಮರಣಿಸಿದಾಗ ಬಲ್ಲಾಳನ ಮಂತ್ರಿ ಹಾಗೂ ಸೇನಾಧಿಪತಿಯಾಗಿದ್ದ ಕುವರಲಕ್ಷ್ಮ ಮತ್ತು ಅವನ ಪತ್ನಿ ಸುಗ್ಗಲದೇವಿ ಹಾಗೂ ಅವನ ಅನುಚರರಾದ ಒಂದು ಸಾವಿರ ಮಂದಿ ಈ ಎಲ್ಲರೂ ಆತ್ಮಾರ್ಪಣೆ ಮಾಡಿಕೊಂಡು ಮರಣಿಸಿದುದನ್ನು ಆ ಶಾಸನ ದಾಖಲಿಸುತ್ತದೆ ಎಂದು ಹಲವಾರು ಮಂದಿ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಡಾ॥ ಎಂ. ಚಿದಾನಂದಮೂರ್ತಿಯವರು ತಮ್ಮ *ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ* ಎಂಬ ಕೃತಿಯಲ್ಲಿ ''ಕುವರ ಲಕ್ಷ್ಮನು ವೀರಬಲ್ಲಾಳನಿಗೆ ಗರುಡನಾಗಲು ಪ್ರತಿಜ್ಞೆಯನ್ನು ಕೈಗೊಂಡಾಗ ಕುವರಲಕ್ಷ್ಮನಿಗೆ ಅವನ ಹೆಂಡತಿಯೂ, ಅವನ ಒಂದು ಸಾವಿರ ವೀರರೂ ಗರುಡರಾಗಲು ತಾವೂ ಪ್ರತಿಜ್ಞೆಯನ್ನು ಕೈಗೊಳ್ಳುತ್ತಾರೆ. ವೀರಬಲ್ಲಾಳನ ಸಾವಿನ ನಂತರ ಕುವರ ಲಕ್ಷ್ಮನೂ, ಅವನ ಹೆಂಡತಿಯೂ ಪ್ರಾಣ ತ್ಯಾಗ ಮಾಡುತ್ತಾರೆ; ಆಗ ಒಂದು ಸಾವಿರ ವೀರರೂ ಪ್ರಾಣವನ್ನು ತ್ಯಜಿಸುತ್ತಾರೆ. ಇವರನ್ನು ಶಾಸನವು ಲೆಂಕರೆಂದು ಕರೆದಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. *೧

ಡಾ॥ ಎಂ. ಎಂ. ಕಲಬುರ್ಗಿಯವರು ತಮ್ಮ *ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು* ಎಂಬ ಕೃತಿಯಲ್ಲಿ ''ಕುವರಲಕ್ಷ್ಮ ಮೊದಲಾದ ಲೆಂಕರು ಅರಸನ ಮರಣ ಪ್ರಸಂಗ ದಲ್ಲಿ ಪ್ರಾಣಘಾತ ಮಾಡಿಕೊಂಡರೆಂದು'' ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. *೨

ಡಾ॥ ಆರ್. ಶೇಷಶಾಸ್ತ್ರಿಯವರು ತಮ್ಮ *ಕರ್ನಾಟಕದ ವೀರಗಲ್ಲುಗಳು* ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ''ಕುವರಲಕ್ಷ್ಮ ಯುದ್ಧದಲ್ಲಿ ಮಡಿದವನಲ್ಲ. ತನ್ನ ಸ್ವಾಮಿಯು ಸತ್ತಾಗ, ತಾನು ಹಿಂದೆ ಅವನಿಗೆ ಕೊಟ್ಟ ಭಾಷೆಯನ್ನು ಸಲ್ಲಿಸಲು, ಗರುಡರ ಸಮೂಹಕ್ಕೆ ವಿಶೇಷವಾದ ಗೌರವವನ್ನು ತರಲು ಆತ್ಮಹತ್ಯೆಯನ್ನು ಮಾಡಿಕೊಂಡವನು'' ಎಂದು ಅಭಿಪ್ರಾಯ ಪಟ್ಟಿದ್ದಾರೆ. *೩

ಆದರೆ ಇತ್ತೀಚೆಗೆ ನನಗೆ ದೊರೆತ ಒಂದು ಶಾಸನದಲ್ಲಿ ಕುವರಲಕ್ಷ್ಮನು ವೀರಬಲ್ಲಾಳ ಸಾಯುವುದಕ್ಕಿಂತಲೂ ನಾಲ್ಕು ವರ್ಷಗಳಷ್ಟು ಮೊದಲೇ ಮರಣಿಸಿದನೆಂದು ಖಚಿತವಾಗಿ ತಿಳಿದು ಬರುತ್ತದೆ.

ಈ ಶಾಸನವು ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೯. ಹಳೇಬೀಡು ೩೭೨ ಎಂಬ ಸಂಖ್ಯೆಯ ಶಾಸನವಾಗಿ ೧೯೯೦ರಲ್ಲಿಯೇ ಪ್ರಕಟವಾಗಿದೆ. ಆದರೂ ಸಹ ಈ ಶಾಸನವು ಯಾರ ಗಮನವನ್ನೂ ಸೆಳೆಯದಿದ್ದುದು ಆಶ್ಚರ್ಯವೆನಿಸುತ್ತದೆ.

**ಶಾಸನ ಪಾಠ**

*ಹಳೇಬೀಡಿನ ವಸ್ತುಸಂಗ್ರಹಾಲಯದಲ್ಲಿರುವ ವೀರಗಲ್ಲು ಶಾಸನ ಒಂದನೆಯ ಪಟ್ಟಿ*

೧ ನ[ಮಸ್ತುಂಗ ಶಿರಶ್ಚುಂಬಿ ಚಂದ್ರ ಚಾ] ಮರ ಚಾರವೇ ತ್ರೈಲೋಕ್ಯ ನಗರಾರಂಭಮೂ

೨ ಲ ಸ್ತಂಭಾಯ [ಶಂಭವೇ] ಶ್ರೀಮತು ಪ್ರತಾಪ ಚಕ್ರವರ್ತ್ತಿ ಹೊಯ್ಸ

೩ ಳ ವೀರಬಲಾಳದೇವರು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರಲು

---

* ಕನ್ನಡ ಉಪನ್ಯಾಸಕ, ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಕೋಲಾರ

೪ ಭಾಷೆಗೆ ತಪ್ಪುವ ಲೆಂಕರ ಗಂಡಂ ಬಿಲ್ಲ ಬೇಟೆಯ ಕಬ್ಬಿಲ ಜೋಗೆಯ ನಾಯಕನು

೫ ವೀರ ಬಲ್ಲಾಳನ ಕುಮಾರ ಲಕ್ಷ್ಮೀಧರ ದಣ್ಣಯಕಂಗೆ

**ಎರಡನೆಯ ಪಟ್ಟ**

೬ ಉದ್ದಂಡ ಪಂನಗ ವೈನತೇಯಂ ವೀರಾಗ್ರಣಿ ಕೊಟ್ಟ ಭಾಷೆಯಂತೆಂದಡೆ ಮೂಱು [ದಿನ]

೭ ದೊಳಗೆ ಲಕ್ಷ್ಮೀಧರ ದಣ್ಣಯಕ್ಕನೊಡನೆ ಸಾವನ್ತಾಗಿ ನುಡಿ(ದ) ಭಾಷೆಯಂ ನೆಱಪಿದ

೮ ಯಾತನ ಮದವಳಿಗೆ ಸೌಭಾಗ್ಯಲಕ್ಷ್ಮಿ ಪ[ತಿಭ]ಕ್ತೆ ಗುಡ್ಡವ್ವೆಯುಂ ತಲೆಯಂ ಹ

೯ [ರಿಯಿ]ಸಿ ಕೊಂಡಳ . ಯುವ ಸಂವತ್ಸರದ . [ಬಾ] ಷೆಯ ನೆಱಪಿ ನಿಲಿಸಿ

೧೦. [ದಂ] ಆ ಜೋಗಯ ನಾಯಕನಳಿಯ ಲಖುಮೆಯನಾಯಕ ಜಕೆಯ ನಾ[ಯ]ಕಂ ನಿ

**ಮೂರನೆಯ ಪಟ್ಟ**

೧೧ ಲಿಸಿದ ಕಲ್ಲು ॥......ಬಲಕ್ಕೆ ಬಱಿಸಿಡಿಲು......

೧೨ ಶಿ....ಮ.......ಕನಲ್ಲನೆ ಕಲಿ [ಜೋ] ಗೆಯ ನಾಯಕಂ

೧೩ [ಮಂಡಳ] ದೊಳು ॥*೪

ಪ್ರಸ್ತುತ ಶಾಸನದಲ್ಲಿ ಉಕ್ತವಾಗಿರುವ ''ವೀರಬಲ್ಲಾಳ ದೇವರು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರಲು'' ಎಂಬುದನ್ನು ವಿಶೇಷವಾಗಿ ಗಮನಿಸಬೇಕು. ವೀರಬಲ್ಲಾಳನು ರಾಜ್ಯವನ್ನು ಆಳುತ್ತಾ ಇರುವಾಗ ಈ ಶಾಸನವನ್ನು ಹಾಕಿಸಲಾಗಿದೆ.

ಕುವರಲಕ್ಷ್ಮನು ಸತ್ತ ಮೂರು ದಿನದೊಳಗೆ ತಾನೂ ಸಾಯುತ್ತೇನೆ ಎಂದು ಕುವರಲಕ್ಷ್ಮನಿಗೆ ಭಾಷೆಯನ್ನು ಕೊಟ್ಟಿದ್ದ ಆತನ ಗರುಡನಾದ ಬಿಲ್ಲ ಬೇಟೆಯ ಕಬ್ಬಿಲ ಜೋಗೆಯ ನಾಯಕನು ತಾನು ಕೊಟ್ಟ ಮಾತನ್ನು ನೆರವೇರಿಸಿಕೊಂಡನು. ಆಗ ಆತನ ಪತ್ನಿ ಗುಡ್ಡವ್ವೆಯೂ ಸಹ ತನ್ನ ತಲೆಯನ್ನು ಕಡಿಸಿಕೊಂಡು ಮರಣಿಸುತ್ತಾಳೆ. ಆಗ ಆ ಜೋಗೆಯನಾಯಕನ ಅಳಿಯಂದಿರಾದ ಲಖುಮೆಯನಾಯಕ ಜಕೆಯನಾಯಕ ಇಬ್ಬರೂ ಸೇರಿ ಈ ವೀರಗಲ್ಲು ಶಾಸನವನ್ನು ಹಾಕಿಸಿದ್ದಾರೆ.

ಪ್ರಸ್ತುತ ಶಾಸನವನ್ನು ಹಾಕಿಸಿದಾಗ ವೀರಬಲ್ಲಾಳನು ಬದುಕಿದ್ದುದು ಸ್ಪಷ್ಟವಾಗಿ ತಿಳಿಯುತ್ತದೆ. 'ವೀರಬಲ್ಲಾಳ ದೇವರು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರಲು' ಎಂಬ ಹೇಳಿಕೆಯೇ ವಿರಬಲ್ಲಾಳನು ಇನ್ನೂ ಅಧಿಕಾರದಲ್ಲಿದ್ದುದಕ್ಕೆ ಅತ್ಯಂತ ಪ್ರಮುಖ ಆಧಾರವೆಂದು ಹೇಳಬಹುದು. ಈ ಶಾಸನದ ಕಾಲ ಕ್ರಿ. ಶ. ೧೨೧೬ ಯುವ ಸಂವತ್ಸರ. ವೀರಬಲ್ಲಾಳನು ಶಾಲಿವಾಹನ ಶಕ ಸಂವತ್ಸರ ೧೧೪೨ನೆಯ ವಿಕ್ರಮ ಸಂವತ್ಸರದ ಚೈತ್ರಮಾಸದವರೆಗೆ ಅಂದರೆ ಕ್ರಿ. ಶ. ೧೨೨೦ರ ವರೆಗೂ ಬದುಕಿದ್ದು ರಾಜ್ಯಭಾರ ಮಾಡುತ್ತಿದ್ದುದು ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ.

ಹಾಸನ ಜಿಲ್ಲೆ ಬೇಲೂರು ತಾಲ್ಲೂಕಿನ ಕ್ರಿ. ಶ. ೧೨೧೭ರ ಒಂದು ಶಾಸನದಲ್ಲಿ ವೀರಬಲ್ಲಾಳನು ಆಳ್ವಿಕೆಯಲ್ಲಿದ್ದಾಗ ವೀರಬಲ್ಲಾಳನ ಪಸಾಯಿತ ಶಿವನಯ್ಯ ಒಂದು ಶೈವ ದೇವಾಲಯವನ್ನು ನಿರ್ಮಿಸಿ ಆ ದೇವಾಲಯಕ್ಕೆ ಭೂದಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. *೫

ಬೇಲೂರು ತಾಲ್ಲೂಕಿಗೇ ಸೇರಿದ ಇಬ್ಬೀಡು ಎಂಬ ಗ್ರಾಮದ ಕ್ರಿ. ಶ. ೧೨೧೭ರ ಮತ್ತೊಂದು ಶಾಸನದಲ್ಲಿ ವೀರಬಲ್ಲಾಳನು ಶಕವರುಷ ೧೧೩೯ನೆಯ ಈಶ್ವರ ಸಂವತ್ಸರದ ಪುಷ್ಯ ಶುದ್ಧ ದ್ವಾದಶಿ ಸೋಮವಾರ ಮಕರ ಸಂಕ್ರಮಣದ ಕಾಲದಲ್ಲಿ ತಗರೆನಾಡು ಎಪ್ಪತ್ತರೊಳಗಣ ಆಲೂರು ಎಂಬ ಗ್ರಾಮವನ್ನು ಜನಾರ್ಧನ ದೇವಾಲಯಕ್ಕೆ ದಾನವಾಗಿ ನೀಡಿದ ಉಲ್ಲೇಖ ದೊರೆಯುತ್ತದೆ. *೬

ಹೀಗೆ ಹಲವಾರು ಶಾಸನಗಳು ವೀರಬಲ್ಲಾಳನು ಕ್ರಿ. ಶ. ೧೨೧೬ರ ನಂತರವೂ ಬದುಕಿದ್ದು ರಾಜನಾಗಿ ಆಳ್ವಿಕೆ ನಡೆಸುತ್ತಿದ್ದುದನ್ನು ದಾಖಲಿಸುತ್ತವೆ.

ಬೇಲೂರಿನ ಒಂದು ಶಾಸನದ ಪ್ರಕಾರ ವೀರಬಲ್ಲಾಳನ ಮಗನಾದ ವೀರನರಸಿಂಹನು ಶಕವರ್ಷ ೧೧೪೨ನೆಯ ವಿಕ್ರಮ ಸಂವತ್ಸರದ ಚೈತ್ರ ಬಹುಳ ಚತುರ್ದಶಿ ಶುಕ್ರವಾರದ ವೇಳೆಗೆ ಅಂದರೆ ಕ್ರಿ. ಶ. ೧೨೨೦ ಏಪ್ರಿಲ್ ಮೂರನೆಯ ದಿನಾಂಕದ ವೇಳೆಗಾಗಲೇ ಚಕ್ರವರ್ತಿಯಾಗಿ ಅಧಿಕಾರಾರೂಢನಾಗಿದ್ದನೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. *೭

ಬಹುಶಃ ವೀರಬಲ್ಲಾಳನು ಅಂದಿಗೆ ತೀರಾ ಕೆಲವು ದಿನಗಳ ಹಿಂದೆ ಮರಣಿಸಿರಬಹುದೆಂದು ಊಹಿಸಬಹುದು. ಒಟ್ಟಾರೆ ವೀರಬಲ್ಲಾಳನು ಕ್ರಿ. ಶ. ೧೨೨೦ರ ವರೆಗೂ ಬದುಕಿದ್ದು ರಾಜ್ಯವಾಳುತ್ತಿದ್ದುದಂತೂ ಖಚಿತ.

ಆದ್ದರಿಂದ ವೀರಬಲ್ಲಾಳನು ಮರಣಿಸಿದಾಗ ಕುವರಲಕ್ಷ್ಮ ಅವನ ಪತ್ನಿ ಸುಗ್ಗಲೆ ಹಾಗೂ ಸಾವಿರ ಮಂದಿ ವೀರಭಟರು ಆತ್ಮಾಹುತಿ ಮಾಡಿಕೊಂಡರೆಂಬ ಉಪರೋಕ್ತ ವಿದ್ವಾಂಸರ ಹೇಳಿಕೆಗಳನ್ನು ಒಪ್ಪುವುದಕ್ಕಾಗುವುದಿಲ್ಲ. ವೀರಬಲ್ಲಾಳನು ೧೨೨೦ರಲ್ಲಿ ಮರಣಿಸಿದರೆ ಕುವರಲಕ್ಷ್ಮನು ೧೨೧೬ರಲ್ಲಿಯೇ ಅಂದರೆ ವೀರಬಲ್ಲಾಳನು ಮರಣಿಸುವುದಕ್ಕಿಂತಲೂ ನಾಲ್ಕು ವರ್ಷ ಮೊದಲೇ ಮರಣಿಸಿದ್ದಾನೆ. ಆಗ ಅವನ ಪತ್ನಿ ಸುಗ್ಗಲೆ ಹಾಗೂ

ಅವನ ಗರುಡರಾದ ಸಾವಿರ ಮಂದಿ ಅನುಚರರು ಎಲ್ಲರೂ ಆತ್ಮಾಹುತಿ ಮಾಡಿಕೊಂಡಿದ್ದಾರೆ ಎಂದು ಹೇಳಬಹುದು. ಹಾಗೆ ಆತ್ಮಾಹುತಿ ಮಾಡಿಕೊಂಡ ಸಾವಿರ ಮಂದಿ ಗರುಡರಲ್ಲಿ ಪ್ರಸ್ತುತ ಶಾಸನೋಕ್ತ 'ಬಿಲ್ಲಬೇಟೆಯ ಕಬ್ಬಿಲಜೋಗೆಯನಾಯಕ'ನೂ ಒಬ್ಬನಿರಬಹುದೆಂದು ತೋರುತ್ತದೆ. ಕುವರಲಕ್ಷ್ಮನ ಸಾವಿರ ಮಂದಿ ಅನುಚರರೆಲ್ಲರೂ ಒಂದೇ ಸ್ಥಳದಲ್ಲಿ ಒಂದೇ ವೇಳೆಯಲ್ಲಿ ಆತ್ಮಾಹುತಿ ಮಾಡಿಕೊಂಡಿರಲಾರರು. ಈ ಶಾಸನದಲ್ಲಿ ಉಲ್ಲೇಖ ವಾಗಿರುವಂತೆ ಬೇರೆ ಬೇರೆಯವರು ಬೇರೆ ಬೇರೆ ಸ್ಥಳಗಳಲ್ಲಿ ಆತ್ಮಾಹುತಿ ಮಾಡಿಕೊಂಡಿರಬಹುದು. ಅವರ ಸ್ಮಾರಕ ಶಿಲೆಗಳು ಸಹ ಕಾಲಾಂತರದಲ್ಲಿ ದೊರೆತರೂ ದೊರೆಯಬಹುದು.

ಪ್ರಸ್ತುತ ಶೋಧದಿಂದ ಹಳೇಬೀಡಿನ ಸುಪ್ರಸಿದ್ಧವಾದ ಕುವರಲಕ್ಷ್ಮನ ಶಾಸನವೂ ಸಹ ಕ್ರಿ. ಶ. ೧೨೧೬ರಲ್ಲಿಯೇ ರಚಿತವಾಗಿರಬಹುದು ಹಾಗೂ ಅದನ್ನು ವೀರಬಲ್ಲಾಳನೇ ಬರೆಸಿರಬಹುದೆಂದು ಹೇಳಬಹುದು. ಆ ಶಾಸನದ "ದಂಡೇಶ ಲಕ್ಷ್ಮೀವರಂ ಸುದತೀಸಂಯುತಮೇಱಿದಂ ಪತಿಹಿತ ವ್ಯಾಪಾರ ಮಂ ತೋಱಿದಂ"*೮ ಎಂಬ ಸಾಲನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕುವರಲಕ್ಷ್ಮನು ವೀರಬಲ್ಲಾಳನಿಗೆ ಶುಭವಾಗಲಿ ಎಂದು ಹಾರೈಸಿ ಹರಕೆ ಹೊತ್ತುಕೊಂಡು ಆತ್ಮಾಹುತಿ ಮಾಡಿಕೊಂಡಿರ ಬಹುದೆಂದು ಹೇಳಬಹುದು.



ಡಾ|| ಎಂ. ಎಂ. ಕಲಬುರ್ಗಿಯವರು ತಮ್ಮ 'ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು' ಎಂಬ ಕೃತಿಯಲ್ಲಿ "ಹೊಯ್ಸಳರ ಕಾಲದಲ್ಲಿ ಹೀಗೆ ಪ್ರಾಣಘಾತ ಮಾಡಿಕೊಳ್ಳು ತ್ತಿದ್ದವರನ್ನು ಗರುಡ ಹೆಸರಿನಿಂದ ಕರೆಯಲಾರಂಭಿಸಿದರೆಂದು ವಿದ್ವಾಂಸರು ಹೇಳುತ್ತ ಬಂದಿರುವರು. ಇವರು ದೊರೆ ಪತಿಭಕ್ತಿಗೆ ತನ್ನೊಳ್ ಗರುಡಂ, ಗರುಡಂಗೆ ತಾನೆ ದೊರೆ" ಎಂಬ, "ಗಜಮಸ್ತಕದಲ್ಲಿ ಆರು ಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದರ್" ಎಂಬ ಹಳೇಬೀಡು ಮತ್ತು ಬಾಚಹಳ್ಳಿ ಶಾಸನೋಕ್ತ ವಾಕ್ಯಗಳಲ್ಲಿಯ 'ಗರುಡ' ಪದಗಳನ್ನು ಪ್ರಾಣಘಾತ ಸಂಪ್ರದಾಯದ ವ್ಯಕ್ತಿಗಳಿಗೆ ಅಂಟಿಸಿದುದು ಸರಿಯಲ್ಲವೆಂದು ತೋರುತ್ತದೆ. ಈ ಸಂಪ್ರದಾಯವನ್ನು ಕಥಿಸುವ ಹಳೇಬೀಡು, ಬಾಚಹಳ್ಳಿ ಶಾಸನಗಳೂ ಸಮಕಾಲೀನ ಕೃತಿಗಳಾದ ಅನಂತನಾಥ ಪುರಾಣ ಮೊದಲಾದವೂ ಇವರಿಗೆ ಲೆಂಕ, ಲೆಂಕವಾಳಿ ಪದಗಳನ್ನು ಪದೇ ಪದೇ ಬಳಸಿದ್ದು ತಪ್ಪಿಯಾದರೂ ಗರುಡ ಪದವನ್ನು ಬಳಸಿಲ್ಲವೆಂಬುದನ್ನು ಇಲ್ಲಿ ನೆನೆಯಬೇಕು. ಕಾರಣ ಹೊಯ್ಸಳರ ಕಾಲದಲ್ಲಿಯೂ ಆ ಸಂಪ್ರದಾಯ 'ಗರುಡ' ಹೆಸರಿನಿಂದಲ್ಲ. ಲೆಂಕ-ಲೆಂಕವಾಳಿ ಹೆಸರಿನಿಂದಲೇ ಮುಂದುವರಿಯಿತೆಂದು ಹೇಳ ಬೇಕಾಗುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ.*೯

ಆದರೆ ಕಲಬುರ್ಗಿಯವರ ಅಭಿಪ್ರಾಯವನ್ನು ಪೂರ್ಣವಾಗಿ ಒಪ್ಪಲು ಸಾಧ್ಯವಿಲ್ಲ. ಈ ಪದ್ಧತಿಯನ್ನು 'ಗರುಡ' ಎಂದು ಕರೆಯುವುದೇ ಸರಿ. ಈ ಸಂಪ್ರದಾಯವನ್ನು ಉಲ್ಲೇಖಿಸುವ ಹಾಗೂ 'ಗರುಡ' ಎಂದೇ ಉಲ್ಲೇಖಿಸಲ್ಪಟ್ಟ ಹಲವಾರು ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಅತ್ಯಂತ ಪ್ರಮುಖವಾದ ಶಾಸನವೆಂದರೆ ಹಾಸನ ಜಿಲ್ಲೆ ಬೇಲೂರು ತಾಲ್ಲೂಕು ಹಳೇಬೀಡಿನ ಹೊಯ್ಸಳ ವಿಷ್ಣುವರ್ಧನನ ಪುತ್ರ ೧ನೇ ನರಸಿಂಹನ ಕಾಲದ ಒಂದು ಶಾಸನ.*೧೦

ಈ ಶಾಸನದಲ್ಲಿ ನರಸಿಂಹನ ಗರುಡನಾದ ಚನ್ನಮಲ್ಲನ ರವಳ ಬೋವ ಹಾಗೂ ಆತನ ಪತ್ನಿ ಚಟ್ಟಲೆಯರು ನರಸಿಂಹನಿಗೆ ಶುಭವಾಗಲಿ ಎಂದು ಆತ್ಮಾಹುತಿ ಮಾಡಿಕೊಂಡದ್ದನ್ನು ದಾಖಲಿಸಿದೆ.

ಗರುಡರು ಹೇಗೆ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದರು ಎಂಬುದನ್ನು ಕುರಿತು ವಿದ್ವಾಂಸರು ವಿವರಣೆಯನ್ನು ಇದುವರೆಗೂ ನೀಡಿರಲಿಲ್ಲ.



ಅಗ್ರಹಾರ ಬಾಚಹಳ್ಳಿಯ ಶಾಸನದಲ್ಲಿ ಗರುಡರು ''ಗಜಮಸ್ತಕದಲ್ಲಿ ಆರು ಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದರು'' ಎಂಬ ವಾಕ್ಯಕ್ಕೆ ಸರಿಯಾದ ಅರ್ಥವನ್ನೂ ನೀಡಿರಲಿಲ್ಲ.

ಆದರೆ ಹಳೇಬೀಡಿನ ೧ನೇ ನರಸಿಂಹನ ಶಾಸನದಲ್ಲಿ ನರಸಿಂಹನ ಗರುಡನಾದ ಚೆನ್ನಮಲ್ಲನ ರವಳಬೋವ ಹಾಗೂ ಆತನ ಪತ್ನಿ ಚಟ್ಟಲೆ ಹೇಗೆ ಆತ್ಮಾಹುತಿ ಮಾಡಿಕೊಂಡರೆಂಬುದು ವಿವರವಾಗಿ ತಿಳಿಯುತ್ತದೆ.

> ''ಆ ಭೂಪನ ಬೀರಮಂ ಭೂಭುವನಂ ನೋಡೆ ಚೆಂನಮಲ್ಲನ ರವಳಂ ಶೋಭಿಸುವ ಗರುಡನಲಗಂ. ಬೆಸದಿಂದಪ್ಪಿಕೊಳ್ವ ಬಗೆಯಂ ಬಗೆದಂ ॥ ಅದೆಂತೆಂದೊಡೆ ॥ ಪರಿಕಿಸಿ ವಕ್ಷದೊಳು ಮಸಗಿ ಕೂರಲಗಾವುರದಲ್ಲಿಯುಗ್ಮ ಮೊಪ್ಪಿರೆ ನಿಶಿತಾಸಿಯಾ ಮಸದ ಕೂರತೆಗೆಂಟು[ಮ] ವೆಯ್ದ ನಾಂಟಲಾ ಪಿರಿಯುರ ಮೆಂಬಿವಂ ರವಳಬೋ[ವ] ನಧೀಶನ ಲೀಲೆ ಸಲ್ವಿನಂ ಗರುಡನನಪ್ಪಿದಂ ನಿಜಮನಪ್ರಿಯೆ ಚಟ್ಟಲೆ ಕೂಡೆಮ......'' *೧೧

ಈ ಪದ್ಯಗಳ ಭಾವಾರ್ಥವನ್ನು ಹೀಗೆ ಸಂಗ್ರಹಿಸಬಹುದು: ಚೆನ್ನಮಲ್ಲನ ರವಳ ಭೋವನು ಗರುಡನ ಅಲಗನ್ನು ಅಪ್ಪಿಕೊಂಡನು. ಹೇಗೆಂದರೆ ಚನ್ನಮಲ್ಲನ ರವಳಬೋವನು ಗರುಡನನ್ನು ಅಪ್ಪಿಕೊಂಡಾಗ ಚೂಪಾದ ಎರಡು ಅಲಗುಗಳು (ಎರಡು ಕತ್ತಿಗಳು) ವಕ್ಷಸ್ಥಲದಲ್ಲಿ ಚುಚ್ಚಿಕೊಂಡವು. ಅದೇ ರೀತಿ ರವಳಬೋವನ ಮನಃ ಪ್ರಿಯೆ ಚಟ್ಟಲೆಯೂ ಗರುಡನ ಅಲಗುಗಳನ್ನು ಅಪ್ಪಿಕೊಂಡು ಪ್ರಾಣ ತ್ಯಜಿಸಿದಳು. ಈ ಶಾಸನದ ವರ್ಣನೆಯಿಂದ ಎರಡು ಚೂಪಾದ ಖಡ್ಗಗಳನ್ನು (ಜೋಡಿ) ಅವು ತಮ್ಮ ಎದೆಗೆ ಚುಚ್ಚಿಕೊಳ್ಳುವಂತೆ ಬಾಚಿತಬ್ಬಿಕೊಂಡು ಗರುಡರು ಪ್ರಾಣ ತ್ಯಜಿಸುತ್ತಿದ್ದರೆಂದು ತಿಳಿಯುತ್ತದೆ. ಅಗ್ರಹಾರ ಬಾಚಹಳ್ಳಿಯ ಶಾಸನವು ಸಹ ಮೇಲಿನ ವಿವರಣೆಗೆ ಪೂರಕವಾಗಿದೆ.

''ಗಜಮಸ್ತಕದಲ್ಲಿ ಆರು ಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದರು'' ಎಂದು ಅಗ್ರಹಾರ ಬಾಚಹಳ್ಳಿಯ ಶಾಸನದಲ್ಲಿ ಉಲ್ಲೇಖಿತವಾಗಿದೆ *೧೨

ಆರು ಸಾರಿ ಆ ಅಲಗುಗಳನ್ನು ಅಪ್ಪಿಕೊಂಡು ಅವರು ಆತ್ಮಾಹುತಿ ಮಾಡಿಕೊಂಡುದು ಆ ಶಾಸನದಿಂದ ತಿಳಿದು ಬರುತ್ತದೆ. ಆ ಶಾಸನ ಸ್ತಂಭದ ಮೇಲಿನ ಶಿಲ್ಪಗಳಲ್ಲಿ ಆನೆಯ ಮೇಲೆ ಕುಳಿತ ವ್ಯಕ್ತಿಗಳು ಗರುಡನೊಂದಿಗೆ ಹೋರಾಡುತ್ತಿರುವ ಶಿಲ್ಪಗಳಿವೆ. ಅಗ್ರಹಾರ ಬಾಚಹಳ್ಳಿಯ ಮೂರು ಶಾಸನಗಳಲ್ಲಿ ಹಲವು ದೋಷಗಳಿವೆ. ಆ ಶಾಸನಗಳನ್ನು ಮತ್ತೊಮ್ಮೆ ಸರಿಯಾಗಿ ಓದಿದರೆ (ಪುನಃ ಪಡಿಯಚ್ಚುಗಳನ್ನು ತೆಗೆದು ಸ್ಪಷ್ಟವಾಗಿ ಓದಿದರೆ) ಇನ್ನಷ್ಟು ಹೆಚ್ಚಿನ ಮಾಹಿತಿ ದೊರೆಯಬಹುದೆಂದು ತೋರುತ್ತದೆ.

ಹಳೇಬೀಡಿನಲ್ಲಿರುವ ಕುವರಲಕ್ಷ್ಮನ ಶಾಸನ ಸ್ತಂಭದ ಸುತ್ತಲೂ ಇರುವ ಚಿಕಣಿ ಶಿಲ್ಪಗಳಲ್ಲಿ ಗರುಡರು ಆತ್ಮಾಹುತಿ ಮಾಡಿಕೊಳ್ಳುತ್ತಿರುವ ಶಿಲ್ಪಗಳಿವೆ. ಆ ಶಿಲ್ಪಗಳಲ್ಲಿ ಸಿಡಿದಲೆ ಮಾಡಿಸಿಕೊಳ್ಳುತ್ತಿರುವ, ತಮ್ಮ ತಲೆಯನ್ನು ತಾವೇ ಕತ್ತರಿಸಿಕೊಂಡು ತಮ್ಮ ಎಡಗೈಯಲ್ಲಿ ಹಿಡಿದುಕೊಂಡಿರುವ, ತಮ್ಮ ಕಠಾರಿಯಿಂದ ತಮ್ಮ ಹೊಟ್ಟೆಯನ್ನು ತಾವೇ ಇರಿದುಕೊಳ್ಳುತ್ತಿರುವ, ತಮ್ಮ ಕರುಳನ್ನು ತಾವೇ ಬಗೆದು ಹೊರತೆಗೆಯುತ್ತಿರುವ ಗರುಡರ ಶಿಲ್ಪಗಳಿವೆ. ಬಹುಶಃ ಕುವರಲಕ್ಷ್ಮನು ಮರಣಿಸಿದಾಗ ಆತನ ಅನುಚರರಾದ ಸಾವಿರ ಮಂದಿ ಗರುಡರಲ್ಲಿ ಹಲವಾರು ಮಂದಿ ಈ ವಿಧಾನಗಳಿಂದ ಮರಣಿಸಿರಬಹುದೆಂದು ಈ ಶಿಲ್ಪಗಳಿಂದ ತಿಳಿದು ಬರುತ್ತದೆ.

ಕುವರ ಲಕ್ಷ್ಮನ ಈ ಶಾಸನದ ಅಂತ್ಯದ ಭಾಗ ದೊರೆತಿದ್ದರೆ ಇದನ್ನು ಬರೆದ ಕವಿಯ ಬಗ್ಗೆ ಹಾಗೂ ಬರೆಸಿದವರ ಬಗ್ಗೆ ಸ್ಪಷ್ಟವಾಗಿ ತಿಳಿಯುತ್ತಿತ್ತು. ಆದರೆ ಈ ಶಾಸನದಲ್ಲಿ ಅಂತ್ಯದ ಭಾಗ ಉಪಲಬ್ಧವಿಲ್ಲ. ಶಾಸನವು ದಿಢೀರನೆ ಇದ್ದಕ್ಕಿದ್ದಂತೆ ಕೊನೆಯಾಗಿದೆ.

ಈ ಶಾಸನವು ರಚನೆಯಾದಾಗ ವೀರಬಲ್ಲಾಳನು ಚಕ್ರವರ್ತಿಯಾಗಿದ್ದುದರಿಂದ ತನಗೆ ಅತ್ಯಂತ ಆಪ್ತನಾಗಿದ್ದು ಪುತ್ರಸಮಾನನಾಗಿದ್ದ ಕುವರಲಕ್ಷ್ಮ ದಂಡನಾಯಕನನ್ನು ಕುರಿತ ಶಾಸನ ಕಾವ್ಯವನ್ನು ತನ್ನ ಆಸ್ಥಾನ ಕವಿಯಾದ ಕವಿಚಕ್ರವರ್ತಿ ಜನ್ನನಿಂದ ಬರೆಸಿರಬಹುದೆಂದು ತೋರುತ್ತದೆ.

ಅನಂತನಾಥಪುರಾಣ, ಯಶೋಧರ ಚರಿತೆ ಎಂಬ ಕಾವ್ಯಗಳನ್ನಲ್ಲದೆ ಅಮೃತಾಪುರ ಹಾಗೂ ತರೀಕೆರೆಯ ಶಾಸನಗಳನ್ನೂ ಸಹ ರಚಿಸಿದ ಶಾಸನ ಕವಿಯೂ ಆಗಿದ್ದ ಜನ್ನ ಈ ಶಾಸನವನ್ನೂ ಬರೆದಿದ್ದಾನೆಂದು ಹೇಳಬಹುದು. ಜನ್ನನಿಂದ ರಚಿತವಾದ ಅಮೃತಾಪುರದ ಶಾಸನ ಹಾಗೂ ತರೀಕೆರೆಯ ಶಾಸನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಪ್ರಸ್ತುತ ಹಳೇಬೀಡಿನ ಕುವರಲಕ್ಷ್ಮನ ಶಾಸನದೊಡನೆ ಹೋಲಿಸಿ ನೋಡಿದರೆ ಜನ್ನನ ಶೈಲಿಯ ವಿಶೇಷತೆಗಳೆಲ್ಲಾ ಗೋಚರಿಸುತ್ತವೆ. ಮೂರೂ ಶಾಸನಗಳಲ್ಲಿ ಜನ್ನನ ಕೈವಾಡದ ಪ್ರಭಾವ ಅಚ್ಚಳಿಯದೆ ಕಂಡು ಬರುತ್ತದೆ. ಆದ್ದರಿಂದ ಶೈಲಿಶಾಸ್ತ್ರದ ಆಧಾರದಿಂದ ಜನ್ನನೇ ಕುವರಲಕ್ಷ್ಮನ ಶಾಸನದ ಕರ್ತೃವೆಂಬುದಾಗಿ ಹೇಳಬಹುದು.

[ಗರಡನಾಗಲು ಬೇಕಾದ ನಿಯಮಗಳ ಬಗ್ಗೆ ಶಾಸನದಲ್ಲಿಯೇ ಸೂಚನೆ ಇದೆ. ಹೊಯ್ಸಳರ ಕಾಲದ ಗರುಡತನ ಲೆಂಕರಿಗಿಂತ ನೈತಿಕ ಶೀಲದಲ್ಲಿ ಹೆಚ್ಚಿನದು ಎಂಬ ಸಂಕೇತವನ್ನು ಸೂಚಿಸುವ ಬಹುಶಃ ಮೊದಲ ಪದವಾಗಿ ಕಾಣಿಸಿಕೊಂಡಿರಬಹುದು.'ಗರುಡ' ಕುವರ ಲಕ್ಷ್ಮನಿಗೆ 'ಲೆಂಕರಗಂಡ' ಎಂಬ ಬಿರುದಿರುವುದನ್ನು ಗಮನಿಸಬಹುದು. 'ತೊರೆದಾಳ್ದವನೊಡನೆ' ಸಾಯುವುದು ಗರುಡರಿಗೂ ಇದ್ದ ಒಂದು ನಿಯಮ. ಅಂತಾಗಿ ತನ್ನೊಡನೆ ತೊರೆದ ಸುಭಟರ, ತನ್ನ ಮನಃ ಪ್ರಿಯೆಯ ಹಾಗೂ ತನ್ನ ಪರಮಾಯುಷ್ಯವನ್ನು ತಂನ್ನಾಳ್ದಂಗಾಯ್ತೆನಿಸಿ ಇತ್ಯಾದಿ ಮಾತುಗಳು ಶಾಸನದಲ್ಲಿರುವುದರಿಂದ, ಬಹುಶಃ ವೀರಬಲ್ಲಾಳನ ಆರೋಗ್ಯ ಹದಗೆಟ್ಟ ಸಂದರ್ಭದಲ್ಲಿ ತನ್ನ ಮತ್ತು ತನ್ನವರೆಲ್ಲರ ಆಯುಷ್ಯವನ್ನು ಎರೆಯುವ ಭಾವನಾತ್ಮಕ ನಂಟು ಕುವರ ಲಕ್ಷ್ಮನ ಆತ್ಮಬಲಿಯಲ್ಲಿ ಕಾಣಬರುವುದು. ಸು. ೯೨ನೇ ಸಾಲಿನವರೆಗೆ ಬಳಸಿರುವ ಶಾಸನದ ಭಾಷೆಯ ಕಾಲಕ್ಕೂ (Tense) ಆನಂತರ ಬಳಸಿರುವ ಕಾಲಕ್ಕೂ ವ್ಯತ್ಯಾಸ ಕಾಣಬರುವಂತಿದೆ. ಹೀಗಾಗಿ ಶಾಸನದ ಮೊದಲ ಭಾಗವನ್ನು ಕುವರ ಲಕ್ಷ್ಮ ಆತ್ಮಬಲಿ ಮಾಡಿಕೊಂಡ ನಂತರ ಹಾಕಿಸಿದ್ದು ನಂತರದ ಭಾಗವನ್ನು ವೀರಬಲ್ಲಾಳನ ಮರಣಾನಂತರ ಕ್ರಿ.ಶ. ೧೨೨೦ರಲ್ಲಿ ಹಾಕಿಸಿರಬಹುದಾದ ಸಾಧ್ಯತೆಯಿದೆ. ಒಂದು ರೀತಿಯಲ್ಲಿ ಶಾಸನವೂ ಪೂರ್ಣವೂ ಹೌದು, ಅಪೂರ್ಣವೂ ಹೌದು. ಚಿಕಣಿ ಶಿಲ್ಪದಲ್ಲಿ ಕುವರ ಲಕ್ಷ್ಮನ ಶಾಸನದ ಬಳಿ ಬಂದಿರುವ ಆತ್ಮಬಲಿಯ ಪ್ರಾಕಾರಗಳನ್ನು ನೋಡಿದರೆ. ಕತ್ತಿಯ ಹಲಗುಗಳನ್ನು ಎದೆಗೆ ಚುಚ್ಚಿಕೊಂಡು ಆತ್ಮಬಲಿ ಆಗುವ ವಿಧಾನವು ಗರುಡ ಪದ್ಧತಿಯಲ್ಲಿ ಒಂದಾಗಿದ್ದಿತ್ತೆನ್ನಬಹುದು. ಬಲ್ಲಾಳನ 'ಪೊರೆದ ಮಗ, ಪ್ರಿಯ ಪುತ್ರ, ವೀರಭಟ, ದಂಡಾಧೀಶ, ಮಂತ್ರಿವರ' ಆಗಿದ್ದ ಕುವರ ಲಕ್ಷ್ಮನಂತಹವನು 'ಗರುಡತನ' ಸ್ವೀಕರಿಸಿದ್ದ ಕಾರಣವೂ ಆ ಹೊತ್ತಿಗೆ ಶಿಥಿಲಗೊಂಡಿದ್ದಿರಬಹುದಾಗಿದ್ದ ಲೆಂಕತನಕ್ಕಿಂತ 'ಗರುಡತನ'ಕ್ಕೆ ಮೌಲ್ಯ ಹೆಚ್ಚು ಒದಗಿರಬೇಕು. - (ಸಂ)]

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. ಡಾ || ಎಂ. ಚಿದಾನಂದ ಮೂರ್ತಿ: *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪುಟ ೩೮೯

*೨. ಡಾ || ಎಂ. ಎಂ. ಕಲಬುರ್ಗಿ: *ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು*, ಪುಟ ೫೯

*೩. ಡಾ || ಆರ್. ಶೇಷಶಾಸ್ತ್ರಿ : *ಕರ್ನಾಟಕದ ವೀರಗಲ್ಲುಗಳು*, ಪುಟ ೧೦೩

*೪. EC. ೯ ಬೇಲೂರು ೩೭೨, ಹಳೇಬೀಡು, ಕ್ರಿ. ಶ. ೧೨೧೬, ಪುಟ ೩೩೪

*೫. EC. ೯ ಬೇಲೂರು ೨೪೩ (V. ಬೇ ೧೩೬) ಶಿವನೇನಹಳ್ಳಿ, ಕ್ರಿ. ಶ. ೧೨೧೭, ಪುಟ ೨೩೧

*೬. EC. ೯ ಬೇಲೂರು ೪೭೭ (V. ಬೇ ೨೨೪) ಇಬ್ಬೀಡು, ಕ್ರಿ. ಶ. ೧೨೧೭, ಪುಟ ೪೩೬

*೭. EC. ೯ ಬೇಲೂರು ೧೫೬ (V; XV ಬೇ ೮೫) ಬೇಲೂರು, ಕ್ರಿ. ಶ. ೧೨೨೦, ಪುಟ ೧೧೪

*೮. EC. ೯ ಬೇಲೂರು ೩೦೦ (V ಬೇ ೧೧೨) ಹಳೇಬೀಡು ಕ್ರಿ. ಶ. ೧೨೨೦, ಪುಟ ೨೭೯

*೯. ಡಾ || ಎಂ. ಎಂ. ಕಲಬುರ್ಗಿ : *ಸಮಾಧಿ - ಬಲಿದಾನ - ವೀರಮರಣ ಸ್ಮಾರಕಗಳು*, ಪುಟ ೫೯

*೧೦. EC. ೯ ಬೇಲೂರು ೨೬೮ (V; XV ಬೇ ೯೩) ಹಳೇಬೀಡು, ಕ್ರಿ. ಶ. ಸು. ೧೨ನೆಯ ಶತಮಾನ, ಪುಟ ೨೫೮

*೧೧. EC. ೯ ಪೂರ್ವೋಕ್ತ, ಪುಟ. ೨೬೧

*೧೨. EC. ೬ ಕೃಷ್ಣರಾಜ ಪೇಟೆ ೮೨ (IV ಕೃಪೇ ೯) ಕ್ರಿ. ಶ. ೧೨೫೬, ಪುಟ. ೬೮, ಅಗ್ರಹಾರ ಬಾಚಹಳ್ಳಿ

ಡಾ ॥ ಬಿ. ಎಸ್. ಸುಭದ್ರಾ *

# ಕಲ್ಲೇಶ್ವರ ದೇವಾಲಯದ ಶಾಸನ : ಒಂದು ಚಾರಿತ್ರಿಕ ಅಧ್ಯಯನ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಉಡುಗಣಿ ಹೋಬಳಿಯ ಒಂದು ಗ್ರಾಮ ಚಿಕ್ಕ ಜಂಬೂರು ಗ್ರಾಮ. ಇಲ್ಲಿರುವ ಕಲ್ಲೇಶ್ವರ ದೇವಾಲಯದ ಶಾಸನವು ಕ್ರಿ.ಶ. ೧೬೯೧ರಲ್ಲಿ ಕೆಳದಿ ಚೆನ್ನಮ್ಮಾಜಿ ಕಳುಹಿಸಿದ ನಿರೂಪ ಪ್ರತಿಗೆ ಸಂಬಂಧಿಸಿದ್ದಾಗಿದೆ. *[೧] ನಿರೂಪದ ವಿಷಯ ಉಡುಗಣಿ ಶೀಮೆಯ ಚಿಕ್ಕ ಜಂಬೂರ ಗ್ರಾಮದ ಕಲ್ಲೇಗೌಡನಿಗೂ, ಅವನ ಗುರು ಹರಸೂರಲಿಂಗಪ್ಪನಿಗೂ, ಕಲ್ಲೇಗೌಡನ ತಂದೆ ಕಟ್ಟಿಸಿದ ವಿರಕ್ತ ಮಠಕ್ಕೂ ನೀಡಿದ ಉಂಬಳಿ - ಉತ್ತಾರದ ವಿವರ. ಆದರೆ ಈ ಶಾಸನವು ಹಲವು ದೃಷ್ಟಿಯಿಂದ ನಮ್ಮ ಗಮನ ಸೆಳೆಯುತ್ತದೆ.

ಎಪಿಗ್ರಾಫಿಯಾ ಕರ್ನಾಟಿಕಾದಲ್ಲಿ (p. 43) ಈ ಶಾಸನದ ಬಗ್ಗೆ ವಿವರಿಸುವಾಗ, "during the oppression of the Mogals he had erected cattlefolds at his own expense and taken great pains to protect the cattle" *[೨] ಎಂದಿದ್ದಾರೆ. ಡಾ ॥ ಅ. ಸುಂದರವರು ''ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪ''ದಲ್ಲಿ ''ಚಿಕ್ಕಜಂಬೂರಿನ ಕಲ್ಲೇಗೌಡರು ತಮ್ಮ ಸ್ವಂತ ವೆಚ್ಚದಿಂದ ಜಾನುವಾರುಗಳಿಗೆ ಮೇವಿನ ವ್ಯವಸ್ಥೆಯನ್ನು ಮಾಡಿದ ಉಲ್ಲೇಖ'' *[೩] ಎಂದಿದ್ದಾರೆ.

ಶಾಸನದ ೭ ರಿಂದ ೯ನೆಯ ಸಾಲುಗಳಲ್ಲಿ ಕಲ್ಲೇಗೌಡನು *ಶುಕ್ಲ ಸಂವತ್ಸರದಲ್ಲಿ ( ಕ್ರಿ. ಶ. ೧೬೯೦ ) ಮೊಗಲರ ರಾಜಕದಲ್ಲಿ ತನ್ನ ಕೈಯಿಂದ ಸಂಬಳವಕೊಟ್ಟು, ಮಂದಿ ಕಟ್ಟಿ ಮಸಲತ್ತಿಯಲ್ಲಿ ಕಷ್ಟವ ಮಾಡಿದ್ದೇನೆ* *[೪] ಎಂದು ಕೆಳದಿ ಚೆನ್ನಮ್ಮಾಜಿಗೆ ಹೇಳುತ್ತಾನೆ. ಇಲ್ಲಿ ಮೊಗಲರ ದಂಡು ಕೆಳದಿ ಸೈನ್ಯದೊಡನೆ ಹೋರಾಡಿದ ಸೂಚನೆಯಿದೆ. ಮರಾಠಾ ದೊರೆ ಶಿವಾಜಿಯ ಮಗ ರಾಜಾ ರಾಮನನ್ನು ಔರಂಗಜೇಬನ ಸೈನ್ಯ ಬೆನ್ನಟ್ಟಿದ್ದಾಗ, ಚೆನ್ನಮ್ಮಾಜಿ ರಕ್ಷಣೆ ಕೊಟ್ಟಿದ್ದು, ಆತನನ್ನು ತನ್ನ ರಾಜ್ಯದ ಮೂಲಕ ಸುರಕ್ಷಿತವಾಗಿ ಜಿಂಜಿಗೆ ಕಳುಹಿಸಿ, ನಂತರ ಔರಂಗಜೇಬನ, ಸೈನ್ಯದೊಡನೆ ಧೈರ್ಯದಿಂದ ಹೋರಾಡಿದ್ದು ಕೆಳದಿ ಇತಿಹಾಸದಲ್ಲಿ ಪ್ರಮುಖವಾದ ಘಟನೆಯಾಗಿದೆ. ಕೆಳದಿ ಇತಿಹಾಸದ ಆಕರ ಗ್ರಂಥಗಳಾದ 'ಶಿವತತ್ತ್ವ ರತ್ನಾಕರ' ಹಾಗೂ 'ಕೆಳದಿ ನೃಪವಿಜಯ'ದಲ್ಲೂ ಈ ವಿಷಯ ವರ್ಣಿತವಾಗಿದೆ. *[೫]

ಕೆಳದಿ ನೃಪವಿಜಯದಲ್ಲಿ (ಪು. ೨೩೪) 'ಔರಂಗಜೇಬನ ಮಗ ಅಜಮತಾರನು ಶಾಲಿವಾಹನ ಶಕವರ್ಷ ೧೬೧೨ನೆಯ ಶುಕ್ಲ ಸಂವತ್ಸರದ ವೈಶಾಖ ಬಹುಳದಲ್ಲಿ ವೇಣುಪುರಕ್ಕೆ ಬಂದಿಳಿದನು'' *[೬] ಎಂದೂ, ''ಕೆಳದಿ ಚೆನ್ನಮ್ಮಾಜಿಯವರ್ ಶುಕ್ಲ ಸಂವತ್ಸರದಲ್ಲಿ ಏಕಚ್ಛತ್ರಾಧಿಪತಿಯಾದ ಡಿಲ್ಲಿಯವ ರಂಗಜೇಬ ಪಾತುಶಾಹನ ಮೇಲೆ ಕೈಗೆಯ್ದು, ಸಮರ ಸಂಧಾನದ ಮೇಲೆ ತತ್ಪಾತುಶಾಹ ಸೈನ್ಯಮಂ ಪಿಂದೆಗೆಸಿ, ತನ್ನಂ ಮರೆವೊಕ್ಕ ಆರೆಯರ್ಗಧಿರಾಜನಾದ ಶಿವಾಜಿಯ ಪುತ್ರನಾದ ರಾಮರಾಜನಂ ಕಡೆದಾಂಟಿಸಿ, ಮನ್ನೆಯರ್ಕಳೊಳ್ ಪರಮ ಪ್ರಖ್ಯಾತಿಯಂ ಪಡೆದು ವಿರಾಜಿಸುತಿರ್ದಳ್'' *[೭] (ಪುಟ. ೨೪೦) ಎಂದೂ ಈ ಘಟನೆ ವರ್ಣಿತವಾಗಿದೆ. ಹೀಗೆ ಸಮಕಾಲೀನ ಸಾಹಿತ್ಯಕ ದಾಖಲೆಗಳೂ ಈ ಶಾಸನವೂ ಒಂದಕ್ಕೊಂದು ಪೂರಕವಾಗಿವೆ.

''ರಾಜ್ಯಕ'' ಎಂದರೆ ರಾಜ್ಯವನ್ನು ಆಳುವವನು, ದೊರೆ, ಈ 'ರಾಜ್ಯಕ'ವೇ ರಾಜಕವಾಗಿರಬೇಕು. ''ಮೊಗಲರ ರಾಜಕ'' ಎಂದರೆ ಮೊಗಲರ ದೊರೆ; ಮೊಗಲರ ಸೈನ್ಯ. ಸೈನ್ಯವು ಕೆಳದಿ ರಾಜ್ಯವನ್ನು ಪ್ರವೇಶಿಸಿ, ರಾಜಧಾನಿ ಬಿದನೂರನ್ನು ಆಕ್ರಮಿಸಿದ ಸೂಚನೆಯನ್ನು ಈ ಸಾಲುಗಳು ನೀಡುತ್ತಿವೆ.

ಶಾಸನದ ಕೇಂದ್ರ ವ್ಯಕ್ತಿ ಕಲ್ಲೇಗೌಡನೊಬ್ಬ ಸಾಮಾನ್ಯ ಪ್ರಜೆ. ತನ್ನ ಕೈಯಿಂದಲೇ ಹಣ ಹಾಕಿ, ಮಂದಿ ಕಟ್ಟಿ (ಜನರನ್ನು ಸೇರಿಸಿ) ಮಸಲತ್ತಿಯಲ್ಲಿ (ಉಪಾಯದಿಂದ/ಯುಕ್ತಿಯಿಂದ/ಹಂಚಿಕೆಯಿಂದ ಅಥವಾ ಪಿತೂರಿಯಿಂದ) ಕಷ್ಟವ (ಕೆಲಸವ) ಮಾಡಿದ್ದಾನೆ. ಈ ಸಾಲುಗಳು (ಶಾಸನದ ೮-೯ನೆಯ ಸಾಲುಗಳು) ''ತಾನೇ ಕೈಯಿಂದ ಸಂಬಳ ಕೊಟ್ಟು, ಜನರನ್ನು ಸೇರಿಸಿ, ಮೊಗಲರ ವಿರುದ್ಧ

* ನಂ. ೬೧೧, 'ಚಂದನ', ೭ನೇ ಅಡ್ಡರಸ್ತೆ, ಅನಿಕೇತನ ರಸ್ತೆ, ಕುವೆಂಪು ನಗರ, ಮೈಸೂರು- ೫೭೦ ೦೨೩

ಮಸಲತ್ತಿಯಲ್ಲಿ ಕೆಲಸ ಮಾಡಿದ್ದೇನೆ'' ಎನ್ನುವಲ್ಲಿ ಅವನು ಮರಮೋಸದ ಗೆರಿಲ್ಲಾ ರೀತಿಯ ಯುದ್ಧ ಮಾಡಿರಬಹುದಾದ ಸಾಧ್ಯತೆಯನ್ನು ಸೂಚಿಸುತ್ತವೆ. ಗೆರಿಲ್ಲಾ ರೀತಿಯ ಯುದ್ಧ ಆ ಸಂದರ್ಭದಲ್ಲಿ ನಡೆದುದನ್ನು ಕೆನ್ನವಿ ಸಹ ಸೂಚಿಸುತ್ತದೆ- ''ಕಂಡಿ, ಕಣಿವೆ ಪಥಗಳ ನುರೆ ಬಂಧಿಸಿ ಬಲೆಯೊಳ್ ಸಿಲುಂಕಿದ ತೆರದಿ ಮತ್ಸ್ಯೋತ್ಕರ ಮೆನಲಾಗಿಸಿ ತದ್ಯವನರ ಸೈನ್ಯವನಾಜಿರಂಗದೊಳ್ ಬರಿಕೈದಳ್''*೮

ಈ ಶಾಸನ ಇನ್ನೊಂದು ದೃಷ್ಟಿಯಿಂದಲೂ ಗಮನಾರ್ಹ ವಾಗಿದೆ. ರಾಜ್ಯಕ್ಕೆ ಆಪತ್ತು ಬಂದಾಗ, ಸಾಮಾನ್ಯ ಜನರೂ ಸಹ ತಮ್ಮ ತನುಮನ-ಧನವನ್ನು ಮೀಸಲಾಗಿಟ್ಟು ರಾಜ್ಯಕ್ಕೆ ತಮ್ಮ ಅಳಿಲು ಸೇವೆ ಸಲ್ಲಿಸುತ್ತಿದ್ದರು ಎನ್ನುವುದು ಅಂದಿನ ರಾಜ-ಪ್ರಜೆಗಳ ನಿಕಟ ಸಂಬಂಧಕ್ಕೆ ಸಾಕ್ಷಿಯಾಗಿದೆ.

ಪ್ರಸ್ತುತ ಶಾಸನದಲ್ಲಿ ಕಲ್ಲೇಗೌಡನು ತನಗೆ ಉಂಬಳಿ ಬೇಕೆಂದು ಕೇಳುವುದರ ಜೊತೆಗೆ, ಚಿಕ್ಕಜಂಬೂರ ಮಠದ ಆರಾಧ್ಯ ತನ್ನ ಗುರು ಹರಸೂರಲಿಂಗಪ್ಪ ದೇವರಿಗೂ, ತನ್ನ ತಂದೆ ಗಂಗೆಗೌಡ ಕಟ್ಟಿಸಿದ ವಿರಕ್ತ ಮಠಕ್ಕೂ ಸ್ವಾಸ್ತೆ ಪಾಲಿಸಬೇಕೆಂದು ಚೆನ್ನಮ್ಮಾಜಿ ಯಲ್ಲಿ ಅರಿಕೆ ಮಾಡಿಕೊಳ್ಳುತ್ತಾನೆ. ಹೀಗೆ ತನ್ನ ರಾಜ್ಯ ನಿಷ್ಠೆಗೆ ಪ್ರತಿಯಾಗಿ ಉಂಬಳಿ ಪಡೆಯುವಾಗ ಮಠಕ್ಕೆ ಮಾನ್ಯ ಮೊದಲಾದ ಧಾರ್ಮಿಕ ಕಾರ್ಯಗಳಿಗೂ ತನ್ನ ಗುರುವಿಗೂ ಸ್ವಾಸ್ತೆ ಕೇಳುವುದು ಅಂದಿನ ಜನರ ಧಾರ್ಮಿಕ ಮನೋಭಾವನೆಯನ್ನು ತೋರುತ್ತದೆ.

ಈ ಶಾಸನದ ಚಿಕ್ಕ ಜಂಬೂರಿನ ವಿರಕ್ತ ಮಠ, ಕೆಳದಿ ನೃಪ ವಿಜಯದಲ್ಲಿ ಅಥವಾ ಶಿವತತ್ವರತ್ನಾಕರದಲ್ಲಿ ಉಲ್ಲೇಖ ಗೊಂಡಿಲ್ಲ. ಪ್ರೊ॥ ಅ. ಸುಂದರ ಅವರ ಕೆಳದಿ ಅರಸರ ಶಾಸನ ಸಂಗ್ರಹವಾದ ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪ ದಲ್ಲೂ ಉಲ್ಲೇಖಗೊಂಡಿಲ್ಲ. ಡಾ॥ ಕೆಳದಿ ವೆಂಕಟೇಶ ಜೋಯಿಸರ *ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ**೧೦ದಲ್ಲೂ ಉಕ್ತಗೊಂಡಿಲ್ಲ, ಪ್ರಾಯಶಃ ಬಿಟ್ಟು ಹೋಗಿದೆ. ಹೀಗೆ ಈ ಶಾಸನವನ್ನು ಕೂಲಂಕಷವಾಗಿ ಪರಿಶೀಲಿಸುವಾಗ ಅನೇಕ ಸಂಗತಿಗಳು ಬೆಳಕಿಗೆ ಬರುತ್ತವೆ.

ಪ್ರೊ॥ ಜಿ. ಎಸ್. ದೀಕ್ಷಿತ್‌ರವರು ತಮ್ಮ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನದ ಭಾಷಣದಲ್ಲಿ (೧೪-೧೧-೯೪ ರಂದು) ತಿಳಿಸಿದಂತೆ, ''*ಕಡತ ಹಾಗೂ ಶಾಸನಗಳು ಆಡಳಿತದ ದಾಖಲೆಗಳಾಗಿದ್ದು, ಒಂದಕ್ಕೊಂದು ಪೂರಕ ವಾಗಿರುತ್ತವೆ*'' ಎಂಬುದಕ್ಕೂ ಇಲ್ಲಿ ದಾಖಲೆಯಿದೆ. ಈ ಶಾಸನದ ೪ನೆಯ ಸಾಲಿನಲ್ಲಿ ''ನಿರೂಪಪ್ರತಿ'' ಎಂದು ಸ್ಪಷ್ಟವಾಗಿ ಬರೆದಿದ್ದು, ಶಾಸನದ ವಿವರವೆಲ್ಲ ಮುಗಿದಾಗ, ೨೯ನೆಯ ಸಾಲಿನಲ್ಲಿ ''*ನಿರೂಪ ಬಂದು*'' ಅಂದರೆ ''*ನಿರೂಪ ಮುಕ್ತಾಯವಾಯಿತು*'' ಎಂದು ತಿಳಿಸಿದೆ. ಅಂದರೆ ಈ ಶಾಸನ ಚೆನ್ನಮ್ಮಾಜಿಯ ಒಂದು ನಿರೂಪದ ಯಥಾ ಪ್ರತಿ ಎಂಬುದು ಸ್ಪಷ್ಟವಾಗುತ್ತದೆ. ನಿರೂಪಗಳೇದರ ಆಡಳಿತ ವ್ಯವಸ್ಥೆಯ ದಾಖಲೆಗಳು. ಈ ಶಾಸನವು ಚೆನ್ನಮ್ಮಾಜಿಯ ನಿರೂಪದ ಯಥಾ ಪ್ರತಿಯಾಗಿ ಇಲ್ಲಿ ಕಲ್ಲಿನಲ್ಲಿ ಕೊರೆಯಲ್ಪಟ್ಟಿದ್ದು, ರಾಜಾಜ್ಞೆಯ ರೀತಿಯನ್ನು (official order) ತಿಳಿಸುವ ಕುತೂಹಲಕಾರಿಯಾದ ಮಾದರಿಯಾಗಿದೆ. ''ಶಾಲಿವಾಹನ ಶಕವರುಷ ೧೬೧೩ನೆಯ ಪ್ರಜೋತ್ಪತ್ತಿಸಂವತ್ಸರದಲ್ಲು (ಕ್ರಿ.ಶ. ೧೬೯೧) ಎಂದು ವರ್ಷವನ್ನು ತಿಳಿಸಿದ್ದು. ಇದು ಕೆಳದಿ ಚೆನ್ನಮ್ಮಾಜಿ (ಕ್ರಿ. ಶ. ೧೬೭೨-೧೬೯೭) ಮೊಗಲರೊಡನೆ ಹೋರಾಡಿದ ಕಾಲಕ್ಕೆ ಸರಿಹೊಂದುವಂತಿದೆ. ''ಸ್ವಸ್ತಿಶ್ರೀ'' ಎಂಬ ಶುಭ ವಾಚಕ ಮಾತ್ರವಿದ್ದು, ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಾರ್ಥನಾ ಪದ್ಯ ಅಥವಾ ದೇವತಾಸ್ತುತಿ ಇಲ್ಲಿಲ್ಲ.

ಕೆಳದಿ ರಾಜ್ಯದಲ್ಲಿ ಆಡಳಿತ ವ್ಯವಸ್ಥೆ ಕೇಂದ್ರದಿಂದ ಹಿಡಿದು, ಗ್ರಾಮಮಟ್ಟದವರೆಗೂ ಹೇಗೆ ದಕ್ಷವಾಗಿ ಕಾರ್ಯ ನಿರ್ವಹಿಸುತ್ತಿತ್ತು ಎಂಬುದಕ್ಕೆ ಈ ಶಾಸನ ಉತ್ತಮ ನಿದರ್ಶನವಾಗಿದೆ. ಭೂಮಿಯನ್ನು ಉಂಬಳಿ - ಉತ್ತಾರವಾಗಿ ಕೊಡುವಾಗ, ರಾಜನ ಅಧಿಕಾರಿ ಯೊಬ್ಬರು ಬಂದು, ಸುತ್ತಲ ನಾಲ್ಕೂ ದಿಕ್ಕಿನ ಗ್ರಾಮಗಳವರ ಎದುರಿಗೆ ಭೂಮಿಯನ್ನು ಅಳೆದು, *ಗಡಿ ತತ್ಪರ ಬಾರ್ದ ರೀತಿಯಲ್ಲಿ* ರೇಖೆ ಹಾಕಿ, ಭೂವಿಂಗಡನೆ ಮಾಡಿ, ಲಿಂಗ ಮುದ್ರೆ ಕಲ್ಲುಗಳನ್ನು ಸ್ಥಾಪಿಸಿಕೊಡಬೇಕಿತ್ತು. ಇಲ್ಲಿ ಊಳಿಗದ ಚಂನಮಲ್ಲನ ಎಂಬ ವ್ಯಕ್ತಿ ಹುಜೂರಿಂದ ಬಂದು, ಈ ಕಾರ್ಯ ನೆರವೇರಿಸುತ್ತಾನೆ.

ಸ್ಥಳದ ಸೇನಬೋವರ ಕಡಿತಕ್ಕೆ ಈ 'ಕಾಗದ'ದ ವಿವರ ನೀಡಿ, ಬರೆಸಿದ ನಂತರ, ದಾನ ನೀಡಿದ ವ್ಯಕ್ತಿಗೆ ಈ ಕಾಗದವನ್ನು ಅಧಿಕಾರಿ ಕೊಡಬೇಕಿತ್ತು. ಇದು ಕಂದಾಯ ವ್ಯವಸ್ಥೆ ಸುಸೂತ್ರವಾಗಿ ನಡೆಯಲು ಮಾಡಿದ ಸಮರ್ಪಕ ವ್ಯವಸ್ಥೆಯಾಗಿತ್ತು. ಯಾವ ಭೂಮಿ ಯಾರ ಹೆಸರಲ್ಲಿದೆ, ಯಾರಿಗೆ ನೀಡಲಾಯಿತು ಎಂಬ ವಿವರ ಶಾನುಭೋಗರ ಕಡತದಲ್ಲಿದ್ದು, ಆಗಾಗ್ಗೆ ಹೊಸ ಬದಲಾವಣೆಗಳೂ ಸೇರ್ಪಡೆಗೊಂಡು, ಭೂ ಕಂದಾಯ ನಿಗದಿ ಮಾಡುವಲ್ಲಿ ಹಾಗೂ ವಸೂಲು ಮಾಡುವಲ್ಲಿ ಸಹಕಾರಿಯಾಗುತ್ತಿತ್ತು.

ಕೊನೆಯದಾಗಿ, ಸ್ಥಳೀಯ ಅಧಿಕಾರಿಗಳ ಹೆಸರುಗಳೂ ಇಲ್ಲಿ ಕಂಡುಬರುತ್ತವೆ- ನಾಡಿಗ ರಂಗಣ, ಸ್ಥಳದ ಜೋಯಿಸ ಲಿಂಗಾಭಟ್ಟರು, ಗ್ರಾಮದ ಶೇನಬೋವ, ತಾರಕದ ಶಿವರಾಮಂಣ. ಯಾವುದೇ ನಿರೂಪ ಬಂದಾಗಲೂ ಸ್ಥಳೀಯ ಅಧಿಕಾರಿಗಳು ಹಾಜರಿದ್ದು, ಭೂ ಮಾಪನ ಕಾರ್ಯದಲ್ಲಿ ಸಹಕರಿಸುತ್ತಿದ್ದರು ಎಂಬುದು ಪ್ರಸ್ತುತ ಶಾಸನದಿಂದ ಕಂಡು ಬರುತ್ತದೆ.

ಹೀಗೆ ಪ್ರಸ್ತುತ ಶಾಸನ ರಾಜಕೀಯ, ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ವಿಶಿಷ್ಟವಾಗಿದೆ.

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು


*೧. ***ಎಪಿಗ್ರಾಫಿಯಾ ಕರ್ನಾಟಿಕಾ***, ಸಂ. ೭, ಭಾಗ ೧, ೧೦೨, ಶಿಕಾರಿಪುರ ೭೯

*೨. ಅದೇ, ಪು. ೪೩

*೩. ಡಾ॥ ಅ. ಸುಂದರ: ***ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪ*** ; ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ಸಂಪುಟ ೧, ೧೯೮೬, ಪು. ೧೧೧ ಮತ್ತು ೧೫೬

*೪. ಎ. ಕ. ಅದೇ

*೫. ***ಕೆಳದಿ ನೃಪ ವಿಜಯ*** : (ಸಂ) ಕೆಳದಿ ಗುಂಡಾಜೋಯಿಸ್, ನವಮಾಶ್ವಾಸ, ಪು. ೧೯೬, ೨೩೧-೨೩೫, ೨೪೦; ***ಶಿವತತ್ತ್ವರತ್ನಾಕರ*** - ಆನೆಯ ಕಲ್ಲೋಲ, ಆನೆಯ ತರಂಗ

*೬. ಕೆ.ನೃವಿ., ಅದೇ

*೭. ಕೆ.ನೃ.ವಿ., ಅದೇ

*೮. ಕೆ.ನೃ.ವಿ., ಪುಟ, ೨೩೫

*೯. Dr. (Smt) Radha Krishnamurthy : ***Sivatattva Ratnakara of Keladi Basavaraja - A Cultural Study.*** Keladi Museum and Historical Research Bureau, Keladi 1995.

*೧೦. ಡಾ॥ ಕೆ. ಜಿ. ವೆಂಕಟೇಶ ಜೋಯಿಸ್ : ***ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ*** - ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು -- ೫೬೦ ೦೧೮, ೧೯೯೬, ಪು. ೧೦೨

ಸಂತೇಬೆನ್ನೂರು ಸುಮತೀಂದ್ರ ನಾಡಿಗ್ *

# ಸಂತೇಬೆನ್ನೂರು ನಾಯಕರ ಶಾಸನಗಳು

ನಮ್ಮ ರಾಜ್ಯದ ನೂತನ ದಾವಣಗೆರೆ ಜಿಲ್ಲೆಗೆ ಸೇರಿದ ಚನ್ನಗಿರಿ ತಾಲ್ಲೂಕಿನ ಹೋಬಳಿ ಕೇಂದ್ರ ಸಂತೇಬೆನ್ನೂರು. ಈ ಊರನ್ನು ಕೇಂದ್ರವಾಗಿಟ್ಟುಕೊಂಡು ಆಡಳಿತ ನಡೆಸಿದ ಪಾಳೇಗಾರರನ್ನು ಸಂತೇಬೆನ್ನೂರು ಪಾಳೇಗಾರರೆಂದು ಕರೆಯಲಾಗುತ್ತಿದ್ದು ೧೬ನೇ ಶತಮಾನದ ಆದಿಭಾಗದಲ್ಲಿ ವಿಜಯನಗರ ಸಾಮಂತರಾಗಿದ್ದ ಇವರು ಆ ಸಾಮ್ರಾಜ್ಯದ ಪತನಾನಂತರ ತಾವೇ ಸ್ವತಂತ್ರರಾಗಿ ನಂತರ ಬಿಜಾಪುರದ ಆದಿಲ್‌ಷಾಹಿ, ಕೆಳದಿ, ಚಿತ್ರದುರ್ಗ ಪಾಳೇಗಾರರ ಕೆಲಕಾಲ ಹೈದರ್ ಟಿಪ್ಪು ಮೈಸೂರು ಅರಸರ ಅಧೀನರಾಗಿ ನಂತರ ಬ್ರಿಟಿಷ್ ಆಧಿಪತ್ಯ ಆರಂಭವಾದಾಗ ಅವರ ವಿರುದ್ಧವೂ ಹೋರಾಡಿ ಭಾರತದ ಸ್ವಾತಂತ್ರ್ಯಾನಂತರ ತಮ್ಮ ಅಸ್ತಿತ್ವ ಕಳೆದುಕೊಂಡ ಈ ನಾಯಕರು ಮೂರು ಶತಮಾನಕಾಲ ಆಳ್ವಿಕೆ ನಡೆಸಿದರು. ಬಹಳ ಕಾಲ ಸ್ವತಂತ್ರರಾಗಿಯೇ ತಮ್ಮ ರಾಜ್ಯಭಾರ ನಡೆಸಿದ ಈ ನಾಯಕರನ್ನು ಮೈಸೂರು ವಿಶ್ವವಿದ್ಯಾನಿಲಯದ ಕರ್ನಾಟಕ ವಿಷಯ ವಿಶ್ವಕೋಶ, ಮತ್ತಿತರ ಚಾರಿತ್ರಿಕ ದಾಖಲೆಗಳಲ್ಲಿ ಸಂತೇಬೆನ್ನೂರು ಅರಸರೆಂದೇ ಕರೆಯಲಾಗಿದೆ.

ಇದೇ ತಾಲ್ಲೂಕಿನ ಬಸವಾಪಟ್ಟಣದಲ್ಲಿ ತಮ್ಮ ವಂಶದ ಪಾಳೇಪಟ್ಟು ಆರಂಭಿಸಿದ ಈ ನಾಯಕರು ತಮ್ಮ ಆಡಳಿತವನ್ನು ವಿಜಯನಗರ ಅರಸರಿಂದ ಮಾಗಣಿ ಪಡೆದ ಸಂತೇಬೆನ್ನೂರಿನಿಂದ ಬಹಳ ಕಾಲ ನಿರ್ವಹಿಸಿದರು. ನಂತರ ತರೀಕೆರೆ, ಬಾಣಾವರ ಗಳಿಂದಲೂ ತಮ್ಮ ರಾಜಧಾನಿಯನ್ನು ಬದಲಾಯಿಸಿ ಆಡಳಿತ ನಡೆಸಿ, ಪೂರ್ವದ ಚಿತ್ರದುರ್ಗದಿಂದ ಪಶ್ಚಿಮದ ಕಾವಲು ದುರ್ಗದವರೆಗೂ, ದಕ್ಷಿಣದ ಬಾಬಾ ಬುಡನ್ ಗಿರಿಯಿಂದ ಉತ್ತರದ ಹರಿಹರದ ಆಚೆಯವರೆಗೂ ರಾಜ್ಯ ವಿಸ್ತರಿಸಿ ಆಡಳಿತ ನಡೆಸಿದರೆಂದು ಚಾರಿತ್ರಿಕ ದಾಖಲೆಗಳು ಹೇಳುತ್ತಿದ್ದು ಅವರು ಬರೆಯಿಸಿದ ಶಾಸನಗಳು ಇದಕ್ಕೆ ಪುಷ್ಟಿ ಕೊಡುತ್ತವೆ.

ಈ ನಾಯಕರು ಬರೆಯಿಸಿದ ೨೬ ಶಾಸನಗಳನ್ನು ಬಿ. ಎಲ್. ರೈಸ್‌ರು ತಮ್ಮ ಶಾಸನ ಸಂಪುಟದಲ್ಲಿ ದಾಖಲಿಸಿದ್ದು ಈಚೆಗೆ ಪೂನಾದ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯಲ್ಲಿ ಈ ನಾಯಕರ ಒಂದು ತಾಮ್ರಶಾಸನ ಇರುವುದನ್ನು ಹಿರಿಯ ಸಂಶೋಧಕ ಕೆಳದಿ ಗುಂಡಾಜೋಯ್ಸ್‌ರವರು ಪತ್ತೆ ಮಾಡಿದ್ದಾರೆ. ಹಾಗೆಯೇ ನೂತನ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕು ಕದರ ಮಂಡಲಗಿ ಗ್ರಾಮದ ಆಂಜನೇಯ ದೇವಸ್ಥಾನದ ಮುಂದಿರುವ ಗರುಡಗಂಬದಲ್ಲಿಯೂ ಒಂದು ಕಂಭ ಶಾಸನ ಇರುವುದು ಬೆಳಕಿಗೆ ಬಂದಿದೆ. ಒಟ್ಟು ೨೧ ಶಿಲಾ ಶಾಸನಗಳು ಮತ್ತು ೭ ತಾಮ್ರ ಶಾಸನಗಳು ಈವರೆವಿಗೆ ಸಂತೇಬೆನ್ನೂರು ನಾಯಕರ ಬಗ್ಗೆ ದೊರೆತಿದ್ದು ಅವುಗಳಿಂದ ಅವರ ಕಾಲ, ಆಡಳಿತ ನಡೆಸಿದ ಈ ನಾಯಕರ ಹೆಸರು, ವಂಶಾವಳಿ, ಲಾಂಛನ, ಮುದ್ರೆ, ಅಂಕಿತ, ಅವರು ಕಟ್ಟಿಸಿದ ದೇವಾಲಯಗಳು, ಕೈಕೊಂಡ ಜೀರ್ಣೋದ್ಧಾರ ಕಾರ್ಯ, ಕೊಟ್ಟ ದತ್ತಿ, ದಾನ, ಬಳಸಿದ ನಾಣ್ಯ, ಅಳತೆ, ಆಡಳಿತ ವ್ಯಾಪ್ತಿ ಮುಂತಾದ ಅನೇಕ ವಿವರಗಳು ತಿಳಿಯಬಹುದಾಗಿದ್ದು ಇದುವರೆವಿಗೂ ತಿಳಿಯದ ಬಹಳಷ್ಟು ವಿಚಾರಗಳನ್ನು ಇವುಗಳಿಂದ ತಿಳಿಯಬಹುದಾಗಿದೆ.

ಚಾರಿತ್ರಿಕ ದಾಖಲೆಗಳಲ್ಲಿ ಈ ನಾಯಕರು ಬಸವಾಪಟ್ಟಣ, ತರೀಕೆರೆ, ಬಾಣಾವರಗಳಿಂದ ಆಡಳಿತ ನಡೆಸುತ್ತಿದ್ದಾಗಿ ತಿಳಿದು ಬಂದರೂ ಲಭ್ಯವಿರುವ ಈ ನಾಯಕರ ಎಲ್ಲಾ ಶಾಸನಗಳಲ್ಲಿಯೂ ಅವರು ತಮ್ಮನ್ನು ಸಂತೇಬೆನ್ನೂರು ನಾಯಕರೆಂದೇ ಕರೆದು ಕೊಂಡಿದ್ದಾರೆ ಹಾಗು ಹೆಚ್ಚು ಕಾಲ ಸಂತೇಬೆನ್ನೂರಿನಿಂದಲೇ ಆಡಳಿತ ನಿರ್ವಹಿಸುತ್ತಿದ್ದರಿಂದ ಅವರನ್ನು ಬಸವಾಪಟ್ಟಣ, ತರೀಕೆರೆ ಪಾಳೇಗಾರರೆಂದು ಗುರುತಿಸುವ ಬದಲು ಸಂತೇಬೆನ್ನೂರು ನಾಯಕರೆಂದೇ ಗುರುತಿಸುವುದು, ಕರೆಯುವುದು ಯೋಗ್ಯವೂ ಸಮಂಜಸವೂ ಆಗಿದೆ.

ಒಟ್ಟು ಈ ನಾಯಕರದೆನ್ನಲಾಗಿದ್ದ ೨೮ ಶಾಸನಗಳಲ್ಲಿ

* ವರದಿಗಾರ, 'ಪ್ರಜಾವಾಣಿ ದೈನಿಕ', ಸಂತೇಬೆನ್ನೂರು - ೫೭೭ ೫೫೨

ಶಿವಮೊಗ್ಗ ಶಾಸನ ೧೯೭-೧೦೮, ಹೊನ್ನಾಳಿ ಶಾಸನ-೩೪ಗಳಲ್ಲಿ ಸಂತೇಬೆನ್ನೂರು ನಾಯಕರ ಹೆಸರುಗಳನ್ನು ಹೋಲುವ ನಾಯಕರ ಹೆಸರು ಬಂದಿದ್ದರೂ, ರೈಸ್‌ರವರೇ ಅಭಿಪ್ರಾಯ ಪಡುವಂತೆ ಅವರು ಸಂತೇಬೆನ್ನೂರು ನಾಯಕರಾಗಿರುವುದು ಅನುಮಾನ. ಅಲ್ಲದೆ ಅವುಗಳ ಭಾಷೆ, ಒಕ್ಕಣೆ, ಸಿಕ್ಕಿರುವ ಆ ನಾಯಕರ ಇತರ ಶಾಸನಗಳಿಗಿಂತ ಅವು ಸಂಪೂರ್ಣ ಭಿನ್ನವಾಗಿರುವುದರಿಂದಲೂ, ಅವುಗಳಲ್ಲಿ ದಾಖಲಾಗಿರುವ ವರ್ಷ, ಕಾಲ, ಹೆಸರು ಸಂಶಯಕ್ಕೆ ಒಳಪಡುವುದರಿಂದಲೂ ಅವುಗಳಲ್ಲಿ ಸಂತೇಬೆನ್ನೂರು ನಾಯಕರೆಂದು ಇತರೆ ಶಾಸನದಲ್ಲಿಯಂತೆ ದಾಖಲೆ ಇಲ್ಲದಿರುವುದರಿಂದಲೂ ಅವುಗಳು ಕೂಟಶಾಸನವೆಂದು ಹೇಳಲಡ್ಡಿಯಿಲ್ಲ. ಅದರಂತೆ ಚನ್ನಗಿರಿ ೬೭ ಮತ್ತು ೩೫ನೇ ಶಾಸನಗಳಲ್ಲಿ ಸಂತೇಬೆನ್ನೂರು ಎಂಬ ಹೆಸರಿಲ್ಲದಿದ್ದರೂ ಆ ವಂಶದ ನಾಯಕರ ಹೆಸರು, ಕಾಲ ಇತರ ಅವರ ಶಾಸನಗಳಿಗೆ ತಾಳೆಯಾಗುವುದರಿಂದ ಅವು ಧಾರಾಳವಾಗಿ ಸಂತೇಬೆನ್ನೂರು ನಾಯಕರಿಗೆ ಸಂಬಂಧಿಸಿದ್ದೆಂದು ಹೇಳಬಹುದು. ಅದರಂತೆಯೇ ಚನ್ನಗಿರಿ ಶಾಸನ - ೪೭ರಲ್ಲಿ ಈ ನಾಯಕರ ಹೆಸರು, ಸ್ಥಳ, ಕಾಲ ಯಾವುದೂ ದಾಖಲಾಗದಿದ್ದರೂ ಸಂತೇಬೆನ್ನೂರು ನಾಯಕರ ಶಾಸನವೆಂದು ಇದನ್ನು ರೈಸರು ಹೆಸರಿಸಿದ್ದಾದರೂ ಹೇಗೆ ಎಂದು ತಿಳಿದುಬರುವುದಿಲ್ಲ. ಅದು ಸಹ ಮೇಲ್ಕಂಡ ಶಾಸನಗಳ ಗಣನೆಯಂತೆ ಸಂತೇಬೆನ್ನೂರು ನಾಯಕರ ಶಾಸನವಾಗಿಲ್ಲ ಎಂದೇ ಹೇಳಬಹುದು. ಅಲ್ಲದೆ ತರೀಕೆರೆ ೨೪ನೇ ಶಾಸನ ಶಾಸನ ೨೧ರ ನಕಲಾಗಿದ್ದು, ಅದೇ ತರೀಕೆರೆ ಶಾಸನ-೨೩, ಶಾಸನ ೨೨ರ ನಕಲೂ ಆಗಿದೆ. ಹೀಗೆ ೨೮ ಶಾಸನಗಳಲ್ಲಿ ೪ ಈ ನಾಯಕರದ್ದು ಅಲ್ಲ ಎಂದು ತೀರ್ಮಾನಕ್ಕೆ ಬಂದು, ೨ ಶಾಸನಗಳು ಅದರ ಯಥಾ ನಕಲೆಂದು ಗುರುತಿಸಿ ಉಳಿದ ೨೨ ಶಾಸನಗಳಿಂದ ಆ ನಾಯಕರ ವಿವಿಧ ವಿಚಾರಗಳನ್ನು ಸ್ಪಷ್ಟವಾಗಿ ನಾವು ತಿಳಿಯಬಹುದಾಗಿದೆ.

ಈ ರೀತಿ ಸಂತೇಬೆನ್ನೂರು ನಾಯಕರದೆಂದು ಸ್ಪಷ್ಟವಾಗಿ ಗುರುತಿಸಲ್ಪಟ್ಟ ೨೨ ಶಾಸನಗಳಲ್ಲಿ ನಾಲ್ಕು ತಾಮ್ರಶಾಸನಗಳಾಗಿದ್ದು ಉಳಿದ ೧೮, ಶಿಲಾ ಶಾಸನಗಳಾಗಿವೆ. ಶಿಲಾಶಾಸನಗಳು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಚಿಕ್ಕಗಂಗೂರು, ಗೊಪ್ಪೇನಹಳ್ಳಿ, ಹೊಸಹಳ್ಳಿ, ಹಿರೇಕೋಗಲೂರು, ಅಂಣಾಪುರ, ಮಂಟರಗಟ್ಟ ಹಾಗೂ ಹಿರೇಮಾಡಾಳಿನಲ್ಲಿ ಎರಡು ಶಾಸನಗಳೂ, ದಾವಣಗೆರೆ ಜಿಲ್ಲೆಯ ವಡೇರಹಳ್ಳಿ, ಬಳ್ಳಾಪುರ ಗ್ರಾಮದಲ್ಲೂ, ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕು ಕೋಡಿಹಳ್ಳಿ, ಹೊಸದುರ್ಗ ತಾಲ್ಲೂಕಿನ ಬಾಗೂರು, ಕೆಲ್ಲೋಡು ಈಗಿನ ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಆಲದಹಳ್ಳಿ, ತರೀಕೆರೆ ತಾಲ್ಲೂಕಿನ ಹುಲಿತಿಮ್ಮಾಪುರ, ಚಿಕ್ಕಮಗಳೂರು ತಾಲ್ಲೂಕಿನ ಬೆಂಡಗ, ತುಮಕೂರು ಜಿಲ್ಲೆಯ ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಗರಗ ಹಾಗೂ ನೂತನ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕದರ ಮಂಡಲಗಿ ಗ್ರಾಮದಲ್ಲಿ ಇರುತ್ತವೆ. ಅವರ ರಾಜಧಾನಿ ಕೇಂದ್ರಗಳಾಗಿದ್ದ ಸಂತೇಬೆನ್ನೂರಿನಲ್ಲಾಗಲೀ, ಬಸವಾಪಟ್ಟಣ ತರೀಕೆರೆ, ಬಾಣಾವರಗಳಲ್ಲಾಗಲೀ ಆ ನಾಯಕರ ಒಂದೂ ಶಾಸನಗಳಿಲ್ಲದಿರುವುದು ಗಮನಾರ್ಹ. ಲಭ್ಯವಿರುವ ಅವರ ಎಲ್ಲಾ ಶಿಲಾಶಾಸನಗಳು ಒಕ್ಕಣಿಕೆ, ಭಾಷೆ-ಕನ್ನಡವಾಗಿದ್ದರೂ ಅವುಗಳಲ್ಲಿ ಬಳಸಿದ ಲಿಪಿ ಬಹಳಷ್ಟು ದೋಷಗಳಿಂದ ಕೂಡಿದೆ ಮತ್ತು ಅವುಗಳು ಸಂಕ್ಷಿಪ್ತವಾಗಿವೆ. ಅದೇ ಅವರು ಬರೆಯಿಸಿ ಕೊಟ್ಟಿರುವ ತಾಮ್ರ ಶಾಸನಗಳು ಸ್ಪಷ್ಟವಾಗಿಯೂ, ನಿಖರವಾಗಿಯೂ ಇದ್ದು ಅವರ ಸಂಪೂರ್ಣ ವಂಶಾವಳಿ, ಹೆಸರು, ಕಾಲ, ಲಾಂಛನ, ಅಂಕಿತದೊಂದಿಗೆ ಶಾಸನದ ಉದ್ದೇಶವನ್ನು ಸವಿವರವಾಗಿ ತಿಳಿಸುತ್ತದೆ. ಹೆಚ್ಚು ಪತ್ರಗಳಿರುವ ತಾಮ್ರ ಶಾಸನಗಳನ್ನು ವರಾಹ ಲಾಂಛನದ ಬಳೆಗಳಿಂದ ಬಂಧಿಸಿರುವುದರಿಂದ ವಿಜಯನಗರದ ಅರಸರ ಸಾಮಂತರಾಗಿದ್ದ ಇವರೂ ಅವರ ಲಾಂಛನವನ್ನೆ ತಮ್ಮ ಲಾಂಛನವಾಗಿ ಮುಂದುವರೆಸಿಕೊಂಡು ಬಂದಿರುವುದನ್ನು ಗುರ್ತಿಸಬಹುದಾಗಿದೆ. ಹಾಗೆಯೇ ಈ ತಾಮ್ರ ಶಾಸನಗಳ ಕೊನೆಯಲ್ಲಿ ತಮ್ಮ ಆರಾಧ್ಯ ದೈವ 'ಶ್ರೀರಾಮ'ನ ಅಂಕಿತ ಬಳಸಿರುವುದನ್ನು ಕಾಣಬಹುದು. ಕೆಲವು ಇತಿಹಾಸ ದಾಖಲೆಗಳಲ್ಲಿ ಸಂತೇಬೆನ್ನೂರಿನಲ್ಲಿ ಅವರು ನಿರ್ಮಿಸಿದ ದೇವಸ್ಥಾನ ಶ್ರೀ ರಂಗನಾಥನೆಂದು ದಾಖಲಾಗಿದ್ದರೂ ಅವರು ತಮ್ಮ ತಾಮ್ರ ಶಾಸನಗಳಲ್ಲಿ ಪ್ರಸ್ಥಾಪಿಸಿರುವಂತೆ ಅವರು ಇಲ್ಲಿ ನಿರ್ಮಿಸಿದ್ದು ರಾಮಚಂದ್ರ ದೇವಸ್ಥಾನವೇ ಹೊರತು ರಂಗನಾಥನೆಂದಲ್ಲ ಎಂದು ಸ್ಪಷ್ಟವಾಗುತ್ತದೆ.

ಪಿಲ್ಲಪ್ಪ ನಾಯಕ, ಕೆಂಗಪ್ಪ ನಾಯಕ, ಮುಮ್ಮಡಿ ಹನುಮಪ್ಪ ನಾಯಕ, ರಾಜಪ್ಪ ನಾಯಕ, ದಳನಾಯಕ, ಚಿಕ್ಕಣ್ಣ ನಾಯಕ, ಸರ್ಜಾ ಹನುಮಪ್ಪ ನಾಯಕ, ಸೀತಾರಾಮಪ್ಪ ನಾಯಕ ಮತ್ತು ಹನುಮಪ್ಪ ನಾಯಕ ಎಂಬ ಈ ನಾಯಕರ ಸಂತತಿ ನಾಯಕರು ತಮ್ಮ ಹೆಸರಿನಲ್ಲಿ ಶಾಸನಗಳನ್ನು ಬರೆಯಿಸಿದ್ದು ಅವುಗಳಲ್ಲಿ ಇಮ್ಮಡಿ ಹನುಮಪ್ಪ ನಾಯಕ, ಬಾಲ ನಾಯಕ, ಬಾಲಗಿರಿ ನಾಯಕ, ಶರಜಾ ಹನುಮಪ್ಪ ನಾಯಕ, ಹಿರೇ ಹನುಮಪ್ಪ ನಾಯಕ, ಚಿಕ್ಕ ಕೆಂಗಪ್ಪ ನಾಯಕ, ನಿಚ್ಚ ಮದುವಣಿಗ ಹನುಮಪ್ಪ ನಾಯಕ ಮುಂತಾದ ತಮ್ಮ ಹಿರಿಯರ ಹೆಸರನ್ನೂ ಉಲ್ಲೇಖಿಸಿರುವುದರಿಂದ ಅವರೂ ಸಹ ಈ ವಂಶಾವಳಿಯಲ್ಲಿ ಆಡಳಿತ ನಡೆಸಿರುವುದಾಗಿ ತಿಳಿಯಬಹುದು. ಹನುಮಿ, ಹನುಮಪ್ಪ ಎಂಬ ಹೆಸರುಗಳುಳ್ಳ ಹಲವಾರು ಶಾಸನಗಳು ದೊರಕಿದ್ದು ಹನುಮಪ್ಪ ನಾಯಕ ಎಂಬ ಹೆಸರಿನ ಬೇರೆ ಬೇರೆ ನಾಯಕರು ಈ ಕುಟುಂಬದಲ್ಲಿ ಬಹಳ ಜನ

ಇರುವುದು ಕಂಡುಬರುತ್ತದೆ. ಇವರು ತಮ್ಮ ಶಾಸನದಲ್ಲಿ ಹೇಳಿಕೊಂಡಿರುವಂತೆ ಆಂಜನೇಯನ ಪರಮ ಭಕ್ತರಾಗಿದ್ದು ಆಗಿನ ರೂಢಿಯಂತೆ ತಮ್ಮ ಮನೆ ದೇವರ ಹೆಸರಲ್ಲಿ ತಮ್ಮ ಹೆಸರನ್ನು ಇಟ್ಟುಕೊಂಡಿರುವುದು ಸಹಜವೇ ಆಗಿದೆ. ಹಾಗೆಯೇ ಕೆಂಗಪ್ಪ ಎಂಬ ಹೆಸರಿನ ನಾಯಕರೂ ಈ ವಂಶಾವಳಿಯಲ್ಲಿ ಹಲವಾರು ಜನ ಇದ್ದಂತೆ ಕಂಡುಬರುತ್ತದೆ.

ನಮಗೆ ಲಭ್ಯ ಇರುವ ಸಂತೇಬೆನ್ನೂರು ನಾಯಕರ ಶಾಸನಗಳಲ್ಲಿ ಮೊದಲ ಶಾಸನ ಚಿಕ್ಕಗಂಗೂರಿನಲ್ಲಿರುವ ಚನ್ನಗಿರಿ- ೬೯ ಶಾಸನ ಆಗಿದೆ. ಇದೊಂದು ವೀರನಿಗೆ ನೆತ್ತರು ಕೊಡಿಗೆಯಾಗಿ ಕೊಟ್ಟ ವೀರಗಲ್ಲು ಶಾಸನ. ಹೀಗೆ ಕೊಟ್ಟು ಈ ನಾಯಕರ ಶಾಸನ ಇದೊಂದೇ ಆಗಿರುವುದನ್ನು ಇಲ್ಲಿ ಗಮನಿಸಬಹುದು. ಇದು ಶಾ.ಶ. ೧೪೮೫ರಲ್ಲಿ ಪಿಲ್ಲಪ್ಪ ನಾಯಕರು ಬರೆಯಿಸಿ ಕೊಟ್ಟದ್ದು. ಇದರಂತೆ ಅವರು ವಿಜಯನಗರ ಸಾಮ್ರಾಜ್ಯದ ಅಧೀನರಾಗಿದ್ದುದು ತಿಳಿದುಬರುತ್ತದೆ. ಈಚೆಗೆ ಪೂನಾದಲ್ಲಿ ದೊರೆತಿರುವ ತಾಮ್ರ ಶಾಸನವೇ ಈ ನಾಯಕರ ಲಭ್ಯ ಇರುವ ಕಡೆಯ ಶಾಸನವಾಗಿದ್ದು ಅದು ಶಾ. ಶ. ೧೬೦೪ರಲ್ಲಿ ಈ ವಂಶದ ಶರಜಾ ಸೀತಾರಾಮಪ್ಪ ಬರೆಯಿಸಿದ್ದಾಗಿದೆ. ಇದರಲ್ಲಿ ಶ್ರೀಮತ್ಸಂಥೇಬೆನ್ನೂರು ರಾಮಚಂದ್ರ ಸ್ವಾಮಿ ಪಾದಪದ್ಮಾರಾಧಕರಾದ ಹನುಮಂತ ದೇವರ ನಿಜಭಕ್ತರಾದ ಪೂಪ್ವಲಾನ್ವಯದ ನಿಚ್ಚಮದುವಣಿಗ ಹನುಮಪ್ಪ ನಾಯಕರ ಪೌತ್ರರಾದ ಶರ್ಜಾ ಹನುಮಪ್ಪ ನಾಯಕರ ಪುತ್ರರಾದ ಸೀತಾರಾಮಪ್ಪ ನಾಯಕರು ಬರೆಯಿಸಿಕೊಟ್ಟ ತಾಮ್ರ ಶಾಸನ ಎಂಬ ಉಲ್ಲೇಖವಿದ್ದು ಅವರ ವಂಶದ ಬಿರುದು, ಶರ್ಜಾ ಎಂದಿರುವುದನ್ನು ಇಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಬಹುದು. ಈ ಬಿರುದು ಬಿಜಾಪುರದ ಸುಲ್ತಾನರು ಈ ವಂಶದವರಿಗೆ ಕೊಟ್ಟಿದ್ದರೆನ್ನಲಾಗಿದೆ. ಕದರ ಮಂಡಳಿಗೆ ಶಾಸನ SII -VII ಪುಟ ೪೨೭ ಸಂತೇಬೆನ್ನೂರು ನಾಯಕರ ಆಡಳಿತ ಹರಿಹರದ ತುಂಗಾಭದ್ರಾ ನದಿ ದಾಟಿ ಹಿಂದಿನ ಧಾರವಾಡ ಜಿಲ್ಲೆಯ ಭಾಗವನ್ನು ಈ ವಂಶದ ನಾಯಕರು ಆಡಳಿತ ನಡೆಸಿದ ಹೆಗ್ಗುರುತಾಗಿದೆ. ಹಾಗೆಯೇ ತುಮಕೂರು ಜಿಲ್ಲೆ ಗರಗದಲ್ಲಿ ಸಿಕ್ಕಿರುವ ಶಾಸನ ಚಿಕ್ಕನಾಯಕನ ಹಳ್ಳಿ-೧೯ ಶಾಸನ ತುಮಕೂರು ಜಿಲ್ಲೆ ವ್ಯಾಪ್ತಿಯಲ್ಲಿ ಈ ನಾಯಕರು ಆಡಳಿತ ನಡೆಸಿದ ದಾಖಲೆ ಒದಗಿಸುತ್ತದೆ. ತರೀಕೆರೆ ಶಾಸನ ೨೨-೨೩ರಂತೆ ತೀರ್ಥರಾಜಪುರ ಅಂದರೆ ಈಗಿನ ತೀರ್ಥಹಳ್ಳಿಯಲ್ಲಿ ವೆಂಕಟೇಶ್ವರ ದೇವಸ್ಥಾನ ಪ್ರತಿಷ್ಠಾಪಿಸಿ ದತ್ತಿ, ದಾನ ಬಿಟ್ಟಿರುವ ವಿವರ ತಿಳಿಸುವುದರಿಂದ ಇವರು ತೀರ್ಥಹಳ್ಳಿ ಪ್ರಾಂತ್ಯದ ಆಡಳಿತ ನಡೆಸುತ್ತಿರುವ ವಿಚಾರ ತಿಳಿದುಬರುತ್ತದೆ.

ಸಂತೇಬೆನ್ನೂರು ನಾಯಕರ ಶಾಸನಗಳನ್ನು ಸ್ವತಃ ಆ ನಾಯಕರಲ್ಲದ ಅವರ ಕಾರ್ಯಕರ್ತರಾಗಿದ್ದ ಆಡುಗೆರ ಮಲ್ಲಣ್ಣ (ದಾವಣಗೆರೆ ಶಾಸನ - ೧೫೮) ಮಾಯಕೊಂಡದ ವೀರಪ್ಪ (ದಾವಣಗೆರೆ ಶಾಸನ -೧೪೪) ಹಾಕಿಸಿರುವುದಾಗಿ ತಿಳಿದು ಬರುತ್ತದೆ. ಚಿಕ್ಕನಾಯಕನಹಳ್ಳಿ ಶಾಸನ- ೨೩ ಪ್ರಧಾನಿ ಕಳಸಪ್ಪಯ್ಯ ಹನುಮಸಾಗರದಲ್ಲಿ ಪ್ರತಿಷ್ಠಾಪಿಸಿದ ಸದಾಶಿವಸ್ವಾಮಿಯ ಅಂಗರಂಗ ವೈಭೋಗ ನೈವೇದ್ಯ, ದೀಪ್ತಿ, ಮಂತ್ರ ಪುಷ್ಪ-ಸಮಸ್ತ ವಿನಿಯೋಗಕ್ಕೆ ಮಾಡಿಕೊಟ್ಟ ಹೊಲಗದ್ದೆಯನ್ನು ನಿಚ್ಚಮದುವಣಿಗ ವೀರಹನುಮಪ್ಪ ನಾಯಕರು ದತ್ತಿ ಬಿಟ್ಟ ಬಗ್ಗೆ ವಿವರಗಳಿದ್ದು ಈ ಶಾಸನದಿಂದ ಈ ನಾಯಕ ಪ್ರಧಾನಿಯಾಗಿ ಕಳಸಪ್ಪಯ್ಯ ಎಂಬುವರು ಇದ್ದ ವಿಚಾರ ತಿಳಿದುಬರುತ್ತದೆ. ಕಡೂರು ಶಾಸನ - ೧೬೩ರಲ್ಲಿ ಹೆಸರಿಸಿರುವ ಪ್ರಾಣಪ್ಪನಾಯಕ-ಕಿಟ್ಟಪ್ಪನಾಯಕರು ಈ ಸಂತೇಬೆನ್ನೂರು ನಾಯಕರ ಸಾಮಂತರಾಗಿದ್ದರೆಂದು ಊಹಿಸ ಬಹುದಾಗಿದೆ. ತರೀಕೆರೆ-೨೧ನೇ ಶಾಸನದಲ್ಲಿ ವಿಜಯನಗರದ ಅರಸು ವೀರವೆಂಕಟಪತಿ ದೇವರ ಮಹಾರಾಯರು ಪೆನಗೊಂಡದಲ್ಲಿ ಪೃಥ್ವಿಯನ್ನು ಪಾಲಿಸುತ್ತಿದ್ದ ಸಮಯದಲ್ಲಿ ಅವರ 'ದಕ್ಷಿಣ ಭುಜದಂಡರಾದ' ಸಂಥೇಬೆನ್ನೂರ ಪುವ್ವಲಿ ಕೆಂಗಪ್ಪ ನಾಯಕರ ಪುತ್ರರಾದ ಹಿರೇ ಹನುಮಪ್ಪ ನಾಯಕರ ಸಹೋದರ ಬಾಲಗಿರಿ ನಾಯಕರು ಎಂದು ಹೇಳಿರುವುದರಿಂದ ಇವರು ವಿಜಯನಗರದ ದಕ್ಷಿಣ ಭಾಗದ ಅವರ ಅಗ್ರಗಣ್ಯ ಸಾಮಂತರಾಗಿದ್ದರೆಂದೂ 'ದಕ್ಷಿಣ ಭುಜದಂಡರಾದ' ಎಂಬ ಹಿರಿಮೆಗೆ ಪಾತ್ರರಾಗಿದ್ದರೆಂದೂ ತಿಳಿದುಬರುತ್ತದೆ.

ಇವರ ಶಾಸನಗಳಿಂದ ಉಚ್ಚಂಗಿ, ಚಂದ್ರಗುತ್ತಿ, ಗರಗ ಮುಂತಾದ ವೇಂಠಗಳು, ಸಂತೇಬೆನ್ನೂರು, ಕಾತೂರು, ಆಲದಹಳ್ಳಿ, ಆಟವಳ್ಳಿ, ಬಾಡ, ದುಮ್ಮಿ ಮುಂತಾದ ಶೀಮೆಗಳನ್ನು ಇವರು ಆಳುತ್ತಿದ್ದುದಾಗಿ ತಿಳಿಯುತ್ತ ಇವರ ಶಾಸನಗಳಿಂದ ಇವರು ಭೂಮಿ ಅಳತೆ, ನಾಣ್ಯಪದ್ಧತಿಯಲ್ಲಿ ವರಾಹ, ಖಂಡುಗ ಮುಂತಾದ ಪದ ಬಳಕೆ ಕಾಣಬರುತ್ತದೆ.

ಇವರು ಸಂತೇಬೆನ್ನೂರು ಶಿದ್ಧಲಿಂಗ ಮಠಕ್ಕೆ, ಮಹಂತಿ ಮಠಕ್ಕೆ ದತ್ತಿ, ದಾನ ಬಿಟ್ಟಿರುವುದು ಶಾಸನಗಳಿಂದ ತಿಳಿಯಬಹುದು. ಮೆಕೆಂಜಿ ಕೈಫಿಯತ್ತಿನಲ್ಲಿ ಈ ನಾಯಕರು ಕೂಡಲಿ ಆರ್ಯ ಅಕ್ಷೋಭ್ಯತೀರ್ಥಮಠಕ್ಕೆ ಮತ್ತು ಕೂಡಲಿ ಶೃಂಗೇರಿ ಮಠಕ್ಕೆ ಅನೇಕ ದಾನಗಳನ್ನು ಶಾಸನೋಕ್ತವಾಗಿ ಕೊಟ್ಟಿರುವುದಾಗಿ ಉಲ್ಲೇಖಿಸಲಾಗಿದ್ದು ಆ ಶಾಸನ ಈಗ ಎಲ್ಲಿ ಲಭ್ಯವಿದೆ ಎಂದು ತಿಳಿಯದೆ ಅವುಗಳ ಬಗ್ಗೆ ಮಾಹಿತಿ ಒದಗಿಸಲಾಗಿಲ್ಲ. ಇದಲ್ಲದೆ ಇನ್ನೂ ಹಲವಾರು ಶಾಸನಗಳು ಸಂತೇಬೆನ್ನೂರು ನಾಯಕರ ಬಗ್ಗೆ ಸಿಗುವ ಸಾಧ್ಯತೆ ಇದ್ದು ಅವುಗಳ ಸಂಪೂರ್ಣ ಅಧ್ಯಯನದಿಂದ ಮೂರು ಶತಮಾನಗಳ ಕಾಲ ಆಳಿದ ಈ ರಾಜವಂಶದ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ, ಸಾಂಸ್ಕೃತಿಕ ಅಧ್ಯಯನ ನಡೆಸಿ ಹೊಸ ವಿಚಾರಗಳನ್ನು ಬೆಳಕಿಗೆ ತರಬೇಕಿದೆ.

## ಆಧಾರ ಸೂಚಿ


೧. ಎಫಿಗ್ರಾಫಿಯಾ ಕರ್ನಾಟಕ ಸಂಪುಟ ೬, ೭, ೧೧, ೧೨

೨. ಕರ್ನಾಟಕದ ಕೈಫಿಯತ್ತುಗಳು

೩. ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಷನ್ಸ್, ಸಂಪುಟ VIII

೪. ಭಾರತೀಯ ಸಂಶೋಧನಾ ಮಂಡಳಿ, ಪೂನಾದ ತ್ರೈಮಾಸಿಕ BISM Vol. XVIII NO. 2

ಡಾ॥ ಎ. ಕೆ. ಶಾಸ್ತ್ರಿ*

# ಮಂಜುಗುಣಿಯ ತಿರುಮಲ ದೇವರಿಗೆ ಉತ್ತಾರವಾದ ಶಿಲಾಶಾಸನದ ಪ್ರತಿ

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಮಂಜುಗುಣಿ[*೧] ಒಂದು ಪುರಾತನ ಹಾಗೂ ಪವಿತ್ರ ಯಾತ್ರಾಸ್ಥಳ. ಶ್ರೀವಾದಿರಾಜ ಸ್ವಾಮಿಗಳು ರಚಿಸಿದ 'ತೀರ್ಥಪ್ರಬಂಧ'ದಲ್ಲಿ ಶ್ರೀ ವೆಂಕಟರಮಣ ದೇವರು ಮಂಜುಗುಣಿಯಲ್ಲಿ ಬಂದು ನೆಲೆಸಿದ ವರ್ಣನೆಯಿದೆ.[*೨] ವಿಜಯನಗರ ಕಾಲಕ್ಕಿಂತಲೂ ಪೂರ್ವದ್ದಾಗಿರಬಹುದಾದ ಮತ್ತು ವಿಜಯನಗರ ಕಟ್ಟಡ ಶೈಲಿಯುಳ್ಳ ಮಂಜುಗುಣಿಯ ತಿರುಮಲ (ವೆಂಕಟರಮಣ) ದೇವಾಲಯ ವಿಶಾಲವಾಗಿದ್ದು, ಮುಖಮಂಟಪ, ನವರಂಗ, ಆರ್ಧಮಂಟಪ, ಗರ್ಭಗೃಹ ಮತ್ತು ಅನೇಕ ಸುಂದರ ಕೆತ್ತನೆಗಳನ್ನೊಳಗೊಂಡಿದೆ. ನವರಂಗದಲ್ಲಿಯ ಒಳಮಾಳಿಗೆಯ ಮೇಲೆ ವೈಷ್ಣವ ಪೌರಾಣಿಕ ದೃಶ್ಯಗಳನ್ನು ಮತ್ತು ಹೊರ ಪ್ರಾಕಾರಗಳ ಮೇಲೆ ರಾಮಾಯಣ ಮತ್ತು ಮಹಾಭಾರತದ ಸುಂದರ ದೃಶ್ಯಗಳ ಕೆತ್ತನೆಯಿದೆ.

ಮಂಜುಗುಣಿಯಲ್ಲಿ ಸಹಸ್ರಾರು ಚಾರಿತ್ರಿಕ ದಾಖಲೆಗಳು ಲಭ್ಯವಾಗಿವೆ. ಲೇಖಕರು 'ಶ್ರೀ ಮಂಜುಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು'[*೩] ಎಂಬ ಗ್ರಂಥದಲ್ಲಿ ಒಟ್ಟೂ ೨೦೯ ಆಯ್ದ ದಾಖಲೆಗಳನ್ನು ಸಂಕಲಿಸಲಾಗಿದೆ. ಪ್ರಸ್ತುತ ಲೇಖನ ವಿಜಯನಗರ ಕಾಲಕ್ಕೆ ಸೇರಿದ ಮಂಜುಗುಣಿಯ ತಿರುಮಲ ದೇವರಿಗೆ ಉತ್ತಾರವಾದ ಶಿಲಾಶಾಸನದಲ್ಲಿಯ ಅಂಶಗಳನ್ನು ಮಾತ್ರ ಬೆಳಕಿಗೆ ತರುತ್ತದೆ.

ದಾನಶಾಸನದ ಪ್ರತಿ, ಶಿರಸ್ಸಿನಲ್ಲಿ ಚಂದ್ರನಿಂದ ಭೂಷಣನಾದ ಮತ್ತು ಮೂರೂ ಲೋಕಗಳಿಗೆ ಕಾರಣೀಕರ್ತನಾದ ಈಶ್ವರ ಮತ್ತು ವರಾಹ ರೂಪದಲ್ಲಿ ಭೂಮಿಯನ್ನು ಸಂರಕ್ಷಿಸಿದ ವಿಷ್ಣುದೇವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಶಾಸನದ ಪಾಠದಲ್ಲಿಯ ಕೆಲವು ಮಹತ್ವದ ಸಾಲುಗಳು ಇಂತಿವೆ:

"..... ಸ್ವಸ್ತಿ ಶ್ರೀ ಜಯಾಭ್ಯುದಯ ನೃಪ ಶಾಲ್ಲಿವಾಹನ ಶಖವರುಷ ೧೩೪೧ನೆಯ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ೧೫ ಮಿ ಚಂದ್ರೋಪರಾಗ ಪುಣ್ಯಕಾಲದಲ್ಲು... ಶ್ರೀ ವಿರ್‍ರಪ್ರತಾಪ ಶ್ರೀ ಬುಕ್ಕರಾಯ ಮಹಾರ್‍ರಾಯರ್‍ರು ಶ್ರೀ ವಿದ್ಯಾನಗರ್‍ರಿ ನೆಲವಿಡನೊಳಿರ್ದು..... ರಾಜ್ಯವಂನು ಸಧರ್ಮದಿಂದ ಪ್ರತ್ರಿಪಾಲಿಸುತ್ತಯಿದ ಸಮಯದೊಳ ತತ್ಪಾದ ಪದ್ಮೋಪ ಜಿವಿ ಶ್ರೀ ಮನ್ಮಹಾಪ್ರಧಾನ ಮಾಧವಾಂಕನು ಗುತ್ತಿ ವೆಂಟೆಕ್ಕೆ ಸಲ್ಲುವ ಬನವಾಶಿ ಪಂನಿಛಾಶಿರ್‍ರವಂನಾಳ್ವುತ್ತಮಿರ್ದ ಸಮಯದೊಳ ಶ್ರೀ ಬುಕರ್‍ರಾಯ ಮಹಾರಾಯರ್‍ರು ಸಮುಖಕ್ಕೆ ಕರ್ಶಿ ಶ್ರೀ ತ್ರಿರ್‍ರಮಲ್ಲದೆವ್ರ ಸಪರ್ಯಾದಿ ಸೆವೆಗೆ ಸಾಕಾಗುವಷ್ಟು ಗ್ರಾಮಗಳಂನು ಶ್ರೀ ಸ್ವಾಮಿ ಸಂನಿಧಿಯಲ್ಲಿ ಸಮರ್ಪಿಶಿ ಶಿಲ್ಲಾಸ್ತಾಪನ ಮಾಡಿಸಿಕೊಟ್ಟು ಅರ್‍ರಿಕೆ ಮಾಡಿಕೊಳ್ಳುವ ಹಾಂಗೆ ಚಿತ್ತೈಶಿದ್ದರ್‍ರಿಂದ್ದ ಶ್ರೀ ಬುಕ್ಕರಾಯ ಮಹಾರಾಯರ್‍ರಿಗೆ ಯಿತ್ತೊಧಿಕ ಐಶ್ವರ್ಯವಾಗಿ ಆಚಂದ್ರಾರ್ಕ ಸ್ಥಾಯಿಗಳಾಗಿ ಸ್ಥಿರ ಸಾಂಬ್ರಾಜ್ಯವಾಗಬೇಕೆಂದು ಯಿಾ ಮಂಜುಗುಣಿ ಶಿಮೆ ವಳಗುಳ್ಳ ಗ್ರಾಮಗಳಂನ್ನು ಸಮರ್ಪಿಶಿದ್ದು ಕಲ್ಲಹಳಿ ಗ್ರಾಮ ೧ ಕಳವಗಾರ್‍ರ ಗ್ರಾಮ ೧ ಸವಲ್ಲಿಗ್ರಾಮ ೧ ಬರ್‍ಸಗುಣಿ ಗ್ರಾಮ ೧ ಬಡಗಿಗ್ರಾಮ೧ ಮುಖ್ಯವಾದ ಮಂಜುಗುಣಿ ಗ್ರಾಮ ಅಂತ್ತು ಗ್ರಾಮ ೬ನು... ಸಪರ್ಯಗಳಿಗೆ... ಶ್ರೀಮನ್ಮಹಾ ಪ್ರಧಾನ ಮಾಧವಾಂಕನು ಶ್ರೀಮಂನ್ಮಹಾರಾಯರ್‍ರ ಅಪಣೆಯ ಚಿತ್ತೈಶಿದ ಪ್ರಕಾರ್‍ರ ಸಹಿರಂಣ್ಯೊದಕದಾನ ಧಾರ್‍ರಾಪೂರ್ವಕವಾಗಿ ಸರ್ವಮಾಂನ್ಯವಾಗಿ ಸಮರ್ಪಿಶಿದ ಧರ್ಮಸಾಧನ....."

ಶಾಸನ, ಶಾಲಿವಾಹನ ಶಕ ೧೩೪೧ನೆಯ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ಪೂರ್ಣಿಮೆ (ಸೋಮವಾರ, ೧೦-೪-೧೪೧೯) ಯದಾಗಿದ್ದು, "ಶ್ರೀಮದೆವಾದಿದೆವ ದೇವತಾ ಸಾರ್ವಭೌಮ ಸುರ್‍ರಗಣಮಣಿ ಮುಕುಟ ರತ್ನರಂಜಿತ ಪಾದಪಿಟ.... ಸಕಲ ಮನೋಭಿಷ್ಟಪ್ರದಾಯಕ.... ಶ್ರೀಮನ್ಮಂಜುಗುಣಿ ಪುರ್‍ರವರಾಧಿಶ್ವರ್‍ರ......" ಇತ್ಯಾದಿ ಬಿರುದಾಂಕಿತ ಮಂಜುಗುಣಿಯ ಶ್ರೀ ತಿರುಮಲ ದೇವರ ಮತ್ತು ವಿಜಯನಗರ ಸಾಮ್ರಾಜ್ಯವನ್ನಾಳುತ್ತಿದ್ದ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ

* ಟಿ. ಎಸ್. ಎಸ್. ರೈಸ್ ಮಿಲ್ ಕೆಳಗೆ, ಶಿರಸಿ ( ಉ. ಕ.) ೫೮೧ ೪೦೨

ಶ್ರೀವೀರಪ್ರತಾಪ ಬುಕ್ಕರಾಯ ಮಹಾರಾಯರು ಶ್ರೀ ವಿದ್ಯಾನಗರಿಯಲ್ಲಿ ಸಧರ್ಮದಿಂದ ರಾಜ್ಯವನ್ನು ಪ್ರತಿಪಾಲಿಸುತ್ತಿದ್ದ ಸಂಗತಿ ಉಲ್ಲೇಖವಾಗಿದೆ. ಮಹಾಪ್ರಧಾನ ಮಾಧವಾಂಕನು ಗುತ್ತಿವೆಂಟೆಗೆ ಸಲ್ಲುವ ಬನವಾಶಿ (ಬನವಾಸಿ) ಪನ್ನಿಛಾಸಿರವನ್ನು ಆಳುತ್ತಿದ್ದ ಕಾಲದಲ್ಲಿ ಬುಕ್ಕರಾಯ ಮಹಾರಾಯರು ತಮ್ಮ ಸಮ್ಮುಖಕ್ಕೆ ಮಾಧವಾಂಕನನ್ನು ಕರೆಸಿ, ಮಂಜುಗುಣಿಯ ತಿರುಮಲ ದೇವರ ಸರ್ವಯಾದಿ ಸೇವೆಗೆ ಸಾಕಾಗುವಷ್ಟು ಗ್ರಾಮಗಳನ್ನು ಶ್ರೀ ಸ್ವಾಮಿಯ ಸನ್ನಿಧಿಯಲ್ಲಿ ಸಮರ್ಪಿಸಿ, ಶಿಲಾಸ್ಥಾಪನ ಮಾಡಿಸಿಕೊಟ್ಟು, ಅರಿಕೆ ಮಾಡಿಕೊಳ್ಳುವ ಹಾಗೆ ಆಜ್ಞಾಪಿಸಿದ್ದರಿಂದ, ಶ್ರೀ ಬುಕ್ಕರಾಯ ಮಹಾರಾಯರಿಗೆ ಇನ್ನೂ ಐಶ್ವರ್ಯ ಪ್ರಾಪ್ತಿಯಾಗಿ, ಆಚಂದ್ರಾರ್ಕ ಸ್ಥಾಯಿಗಳಾಗಿ, ಸ್ಥಿರ ಸಾಮ್ರಾಜ್ಯವಾಗಬೇಕೆಂದು ಚಂದ್ರೋಪರಾಗ (ಚಂದ್ರಗ್ರಹಣ) ಪುಣ್ಯಕಾಲದಲ್ಲಿ ಮಂಜುಗುಣಿ ಸೀಮೆಯೊಳಗಿನ ಕಲ್ಲಹಳಿ (ಕಲ್ಲಹಳ್ಳಿ), ಕಳವಗಾರ (ಕಳುಗಾರ), ಸವಲ್ಲಿ (ಸವಲೆ), ಬರ್ಸಗುಣಿ, ಬಡಗಿ ಮತ್ತು ಮುಖ್ಯವಾದ ಮಂಜುಗುಣಿ ಎಂಬ ಆರು ಗ್ರಾಮಗಳನ್ನು, ಬುಕ್ಕರಾಯರು ನಿರೂಪಿಸಿದ ಪ್ರಕಾರ, ಶ್ರೀಮನ್ಮಹಾಪ್ರಧಾನ ಮಾಧವಾಂಕನು, ಶ್ರೀಮನ್‌ಮಹಾಸ್ವಾಮಿ ತಿರುಮಲ ದೇವರ, ಮಹಾಲಕ್ಷ್ಮಿ, ಆಂಜನೇಯ, ಆದಿ ಮಂಜುಗುಣಿ ಸೋಮೇಶ್ವರ ದೇವರ ಅಂಗರಂಗ ವೈಭವ, ನಿತ್ಯ *೪-ನೈಮಿತ್ಯಕ *೫, ಪಕ್ಷೋತ್ಸವ *೬, ಮಾಸೋತ್ಸವ *೭, ಸಂವತ್ಸರೋತ್ಸವ *೮, ಲಕ್ಷದೀಪಾರಾಧನೆ, ವನಭೋಜನ *೯ ಮೊದಲಾದ ಪಂಚಕಾಲ ಅವಸರಗಳಿಗೆಂದು ಮೇಲ್ಕಾಣಿಸಿದ ಗ್ರಾಮಗಳನ್ನು ಸಹಿರಣ್ಯೋದಕ ದಾನ ಧಾರಾಪೂರ್ವಕವಾಗಿ ಮತ್ತು ಸರ್ವಮಾನ್ಯವಾಗಿ ಸಮರ್ಪಿಸಿದನೆಂದು ಧರ್ಮಸಾಧನ (ಶಾಸನ)ದಿಂದ ತಿಳಿದು ಬರುತ್ತದೆ.

ಮೇಲೆ ವಿವರಿಸಿದ ಆರು ಗ್ರಾಮಗಳ ಶಿಧಾಯ (ಸಿದ್ದಾಯ-ತೆರಿಗೆ, ಕಂದಾಯ)ದ ಕಾನು(ಕಾಡು), ಕಾಡಾರಂಭ (ಮಳೆಯ ನೀರಿನಿಂದ ಮಾಡುವ ವ್ಯವಸಾಯ; ಕುಷ್ಕಿ) ನೀರಾರಂಭ (ನೈಸರ್ಗಿಕವಾಗಿ ಹರಿಯುವ ನೀರಿನ ಸಂಪತ್ತು), ಅಕ್ಷಿಣಿ (ಕಣ್ಣಿಗೆ ಕಾಣುವ ಸಂಪತ್ತು), ಆಗಾಮಿ (ಭವಿಷ್ಯದಲ್ಲಿ ಬೆಳೆಯಬಹುದಾದ ಸಂಪತ್ತು), ಸಿದ್ಧ (ನೈಸರ್ಗಿಕವಾಗಿ ಹುಟ್ಟಿದ್ದು), ಸಾಧ್ಯ (ಪ್ರಯತ್ನ ಪೂರ್ವಕವಾಗಿ ಮಾಡಿದ್ದು), ಜಲ (ಬಾವಿ, ಕೆರೆ, ಸರೋವರಗಳಲ್ಲಿ ನಿಂತಿದ್ದು), ತರು (ದೇವೋಪಯೋಗಿ ವೃಕ್ಷ), ಪಾಷಾಣ (೧. ಕಲ್ಲು: ಬಂಡೆ, ೨. ವಿಷ: ಪ್ರಸ್ತುತದಲ್ಲಿ, ಔಷಧಿರೂಪವಾದ ಎಂಬರ್ಥ), ಮೊದಲಾದ ಅಷ್ಟಭೋಗ ತೇಜಸ್ವಾಮ್ಯ (ಕೀರ್ತಿಯುತ ಮತ್ತು ಸ್ವತ್ವಯುತ ಒಡೆತನ), ಮೊದಲಾದ್ದನ್ನು ಮತ್ತು ಈ ಗ್ರಾಮಗಳ ಚತುಃಸೀಮೆಯೊಳಗಿನ ಗದ್ದೆ, ಬೆದ್ದಲು (ಕರಡ), ಪೂಗಾರಾಮ (ಅಡಕೆ ತೋಟ), ಹಲಸು, ತೆಂಗು, ಮಾವು ಮುಂತಾದ ಸಂಪತ್ತುಗಳ ಒಡೆತನವನ್ನು ನೀಡಲಾದ ಸಂಗತಿ ಧರ್ಮಸಾಧನದಿಂದ ತಿಳಿದುಬರುತ್ತದೆ. ಸಾಮಾನ್ಯವಾಗಿ, ಧರ್ಮ ಸಾಧನಗಳ ಅಂತ್ಯದಲ್ಲಿ ಸಾಕ್ಷಿಗ್ರಂಥಗಳನ್ನು ನಮೂದಿಸಿರುವಂತೆ, ಪ್ರಸ್ತುತ ಧರ್ಮಸಾಧನದ ಅಂತ್ಯದಲ್ಲಿಯೂ, ''.... ಆದಿತ್ಯ ಚಂದ್ರಾವನಿಲೋ ನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ॥ ಅಹಶ್ಚ ರಾತ್ರಿಶ್ಚ ಉಭೆಚ ಸಂಧ್ಯೆ ಧರ್ಮಶ್ಚ ಜಾನಾತ್ತಿ ನರಸ್ಯ ವೃತ್ತಂ ॥೧॥ ದಾನಪಾಲನಯೊರ್ಮಧ್ಯೆ ದಾನಾಛ್ರೆ ಯೊನು ಪಾಲನಂ। ದಾನಾತ್ಸರ್ಗಮವಾಪ್ನೊತ್ರಿ ಪಾಲನಾದ ಚ್ಯುತಂಪದಂ ॥೨॥ ಸ್ವದತ್ತಾ ಪುತ್ರಿಕಾ ಧಾತ್ರಿ ಅನ್ಯದತ್ತಾ ಸಹೋದರ್ರಿ ॥ ಪ್ರಭುದತ್ತಾ ಸ್ವಯಂ ಮಾತ್ರ ದಾನ ಭೂತ್ತ ವಸುಂಧರಾ ॥ ೩ ॥ ಸ್ವದತ್ತಾಂ ಪರದತ್ತಾಂ ವಾ ಯೊಗಕೆತ ವಸುಂಧರಾ । ಷಷ್ಠಿರ್ವರ್ಷ ಸಹಸ್ರಾಣಿ ವಿಷ್ಟಯಾಂ ಜಾಯತೆ ಕ್ರಿಮಿಃ ॥ ೪ ॥ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ'', ಎಂದು ಉಲ್ಲೇಖಿಸಲಾಗಿದೆ.

ಒಟ್ಟಿನಲ್ಲಿ, ಮಂಜುಗುಣಿಯ ತಿರುಮಲ ದೇವಸ್ಥಾನದ ಚರಿತ್ರೆಯ ಮೇಲೆ ವಿಶೇಷ ಬೆಳಕು ಚೆಲ್ಲುವ ಪ್ರಸ್ತುತ ಧರ್ಮಶಾಸನ, ವಿಜಯನಗರದ ಚರಿತ್ರೆಯ ಮೇಲೂ ಬೆಳಕು ಬೀರುವದರ ಜೊತೆಗೆ, ಬುಕ್ಕರಾಯರ ಕಾಲಕ್ಕೆ ಸಂಬಂಧಿಸಿ ಹೆಚ್ಚಿನ ಜಿಜ್ಞಾಸೆಗೆ ಎಡೆಮಾಡಿಕೊಡುತ್ತದೆ. ಶಾಸನದಲ್ಲಿ ನಮೂದಿತ ವಾದ ಗ್ರಾಮಗಳು ಇಂದಿಗೂ ಮಂಜುಗುಣಿಯ ಪರಿಸರದಲ್ಲಿಯೇ ಇವೆ. ಧರ್ಮಸಾಧನದಲ್ಲಿ ನಮೂದಿತವಾದ ಉತ್ಸವಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಸಾಗಿ ಬಂದಿವೆ. ಭೂಮಿಯ ಸ್ವಾಮ್ಯಕ್ಕೆ ಸಂಬಂಧಿಸಿ, ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಭೂಸುಧಾರಣೆ ಕಾಯದೆಗೆ ಅನುಗುಣವಾಗಿ ಬದಲಾವಣೆ ಗಳಾಗಿದ್ದನ್ನು ಇನ್ನುಳಿದ ಸ್ಥಳಗಳಲ್ಲಿಯಂತೆ ಮಂಜುಗುಣಿ ಯಲ್ಲಿಯೂ ಕಾಣಬಹುದು. ಶಾಸನದಲ್ಲಿ ನಮೂದಿಸಲಾದ ಕಾಲ *೧೦ ಬುಕ್ಕರಾಯರ ಕಾಲಕ್ಕೆ ಸರಿಹೊಂದುವದಿಲ್ಲವಾದರೂ, ಶಾಸನದಲ್ಲಿಯ ಅಂಶಗಳು ಐತಿಹಾಸಿಕ ಸತ್ಯ. ಶಾಸನದ ಪ್ರತಿಮಾಡುವಾಗ ಲಿಪಿಕಾರನು ತಪ್ಪಾಗಿ ಬರೆದಿರಲು ಸಾಕು.

### ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಶಿರಸಿ-ಕುಮಟಾ ಮಾರ್ಗದ ಬಲ ಭಾಗದಲ್ಲಿ, ಶಿರಸಿಯಿಂದ ೨೬ ಕಿ. ಮೀ. ಅಂತರದಲ್ಲಿ ಮಂಜುಗುಣಿ ಇದೆ

*೨. ಪೂರ್ವದಲ್ಲಿ, ತಿರುಮಲ ಯೋಗಿಯೆಂಬ ಶ್ರೀ ವೆಂಕಟೇಶ ದೇವರ ಭಕ್ತಾಗ್ರೇಸರನು ಶ್ರೀ ವೆಂಕಟೇಶನಿಂದ ಅನುಗ್ರಹಿಸಲ್ಪಟ್ಟು, ಅವನ ಆದೇಶದ

ಮೇರೆಗೆ ಮಂಜುಗುಣಿಯಲ್ಲಿ ಶ್ರೀವೆಂಕಟೇಶನನ್ನು ಸ್ಥಾಪಿಸಿದನೆಂದೂ, ಅಂದಿನಿಂದ ಶ್ರೀ ವೆಂಕಟೇಶನಿಗೆ ''ಶ್ರೀ ತಿರುಮಲ ದೇವ'' ಎಂಬ ಅಭಿಧಾನವು ರೂಢಿಯಲ್ಲಿ ಬಂದಿತೆಂದೂ, 'ವೆಂಕಟೇಶ ಮಹಾತ್ಮ್ಯ' ಎಂಬ ಸಂಸ್ಕೃತ ಕಾವ್ಯದಿಂದ ತಿಳಿದುಬರುತ್ತದೆ.

*೩. ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ೧೯೯೭

*೪. ನಿತ್ಯೋತ್ಸವ : ನಿತ್ಯ ಫಲ ಪಂಚಾಮೃತ, ಆಭರಣಗಳಿಂದ ಅಲಂಕಾರ, ಭಕ್ಷ್ಯ ಸಮರ್ಪಣೆ (ಅತ್ರರಸ [ಅತಿರಸ], ಮಧ್ಯಾಹ್ನ ಮತ್ತು ರಾತ್ರ ಒ(ವ)ಡೆ ೧೩, ದೋಸೆ ೧೪, ಅಪ್ಪಾಲು ೬, ಅನ್ನ) ಮತ್ತು ನೀರಾಜನ (ನೀಲಾಂಜನ, ಆರತಿ)

*೫. ಚೈತ್ರ ಮಾಸದಲ್ಲಿ ಪ್ರತಿಪದೆ (ಚಾಂದ್ರಯುಗಾದಿ)ಯಂದು ಮಹಾರಥ ಪೂಜೆ ಮತ್ತು ಚೈತ್ರ ಶು. ಪೌರ್ಣಿಮೆಯಂದು ಮಹಾರಥೋತ್ಸವ. ಅದರ ಹಿಂದಿನ ದಿನ ಶ್ರೀ ದೇವರ ವರ್ಧಂತಿ (ಮಹಾಬಲಿ ಪ್ರದಾನ ಮತ್ತು ಸಂತರ್ಪಣೆ)

*೬. ಕಾರ್ತಿಕ ಶು. ಪೌರ್ಣಿಮೆಯಿಂದ ವೈಶಾಖ ಬ. ಅಮಾವಾಸ್ಯೆವರೆಗೆ ಪ್ರತಿ ಹುಣ್ಣಿಮೆಯಂದು ಬಿರಿ ಪ್ರದಾನ ಮತ್ತು ತೇರು

*೭. ಆಶ್ವಿಜ ಶು. ಏಕಾದಶಿಯಿಂದ ಕಾರ್ತಿಕ ಶು. ಏಕಾದಶಿಯವರೆಗೆ ಸೂರ್ಯ ಉದಯಕ್ಕೆ 'ಪಶ್ಚಿಮ ಜಾಗರ' (ಭಾಗವತ ಸಂಪ್ರದಾಯ) ಪಾದುಕಾ ಉತ್ಸವ.

*೮. ನೈಮಿತ್ತಿಕ ಮತ್ತು ಸಂವತ್ಸರೋತ್ಸವಕ್ಕೆ ಸಂಬಂಧಿಸಿ ಚೈತ್ರ ಶು. ಪೌರ್ಣಿಮೆಯಂದು ಮಹಾರಥೋತ್ಸವ

*೯. ಕಾರ್ತಿಕ ಪೌರ್ಣಿಮೆಯಂದು ಲಕ್ಷದೀಪೋತ್ಸವ ಮತ್ತು ಪಕ್ಷೋತ್ಸವ ಪ್ರಾರಂಭ ಮತ್ತು ನೆಲ್ಲಿಗಿಡದ ಬುಡದಲ್ಲಿ ವನಭೋಜನ

*೧೦. ಈಗಾಗಲೇ ತಿಳಿದಂತೆ, ಬುಕ್ಕರಾಯರ ಕಾಲ ಇಂತಿದೆ- ಮೊದಲನೆಯ ಬುಕ್ಕ (ಕ್ರಿ. ಶ. ೧೩೫೬-೧೩೭೭), ಇಮ್ಮಡಿ ಬುಕ್ಕ (ಕ್ರಿ. ಶ. ೧೪೦೫-೧೪೦೬), ವಿಜಯ ಮುಮ್ಮಡಿ ಬುಕ್ಕ (ಕ್ರಿ. ಶ. ೧೪೨೨-೧೪೨೪) ಶಾಸನದಲ್ಲಿ ನಮೂದಿತವಾದ ಕಾಲ (ಕ್ರಿ. ಶ. ೧೪೮೯)

**ಕೆ. ನಂಜುಂಡ ಪ್ರಸಾದ್ ***

# ಚಿಕ್ಕನಾಯಕನ ಹಳ್ಳಿಯ ಎರಡು ಬೆಳ್ಳಿ ನಾಣ್ಯಗಳು

ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯ ಪುಟ್ಟಣ್ಣ ಎಂಬುವರ ಬಳಿ ಇದ್ದ ಎರಡು ಬೆಳ್ಳಿ ನಾಣ್ಯಗಳು ಇತ್ತೀಚೆಗೆ ನನ್ನ ಗಮನಕ್ಕೆ ಬಂದವು. ಆ ನಾಣ್ಯಗಳ ಬಗ್ಗೆ ಪ್ರಸ್ತುತ ಸಂಪ್ರಬಂಧ ರಚಿಸಲಾಗಿದೆ.

ಈ ಬೆಳ್ಳಿ ನಾಣ್ಯಗಳು ಪುಟ್ಟಣ್ಣ ಅವರ ತಾತ-ಮುತ್ತಾತಂದಿರ ಕಾಲದಿಂದಲೂ ಪೂಜಿಸಲ್ಪಡುತ್ತಾ ಇವೆಯೆಂದು ತಿಳಿದು ಬರುತ್ತದೆ. ಆ ನಾಣ್ಯಗಳಲ್ಲಿ ಒಂದು ಚಿಕ್ಕದು ಹಾಗೂ ಮತ್ತೊಂದು ಸ್ವಲ್ಪ ದೊಡ್ಡದು. ಚಿಕ್ಕ ನಾಣ್ಯವು ೨ ಮಿಲಿಮೀಟರ್ ಮಂದ, ೨.೭ ಸೆಂಟಿಮೀಟರ್ ಅಗಲ ಹಾಗೂ ೧೧ ೧/೩ ಗ್ರಾಂ ತೂಕವನ್ನು ಹೊಂದಿದೆ. ದೊಡ್ಡ ನಾಣ್ಯವು ೩ ಮಿಲಿಮೀಟರ್ ಮಂದ, ೩ ೧/೩ ಸೆಂಟಿಮೀಟರ್ ಅಗಲ ಹಾಗೂ ೨೩ ಗ್ರಾಂ ತೂಕವನ್ನು ಹೊಂದಿದೆ.

ನಾಣ್ಯಗಳ ಎರಡೂ ಬದಿಯಲ್ಲಿ ಉಬ್ಬು ಶಿಲ್ಪದಂತಹ (ಕ್ಯಾಲಿಗ್ರಫಿ) ಚಿತ್ರಗಳಿವೆ. ದೊಡ್ಡ ನಾಣ್ಯದ ಮೊದಲನೆಯ ಬದಿಯಲ್ಲಿ ಶ್ವೇತ ಛತ್ರಿಯ ಕೆಳಭಾಗದಲ್ಲಿ ಸಿಂಹ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತ ದಂಪತಿಗಳಿಬ್ಬರ ಚಿತ್ರಗಳಿವೆ. ಅವರ ಎಡಬಲಗಳಲ್ಲಿ ಎರಡೂ ಬದಿಯಲ್ಲಿ ಇಬ್ಬಿಬ್ಬರಂತೆ ಒಟ್ಟು ನಾಲ್ಕು ಮಂದಿ ನಿಂತಿದ್ದಾರೆ. ಕುಳಿತ ದಂಪತಿಗಳು ಹಾಗೂ ನಿಂತ ನಾಲ್ವರ ತಲೆಯ ಮೇಲೂ ಕಿರೀಟಗಳಿವೆ. ಸಿಂಹಪೀಠದ ಕೆಳಭಾಗದಲ್ಲಿ ಗದಾಧಾರಿಯಾದ ಆಂಜನೇಯನು ಹಾರುತ್ತಿರುವ ಭಂಗಿಯಲ್ಲಿರುವ ಚಿತ್ರವಿದೆ. ಆದ್ದರಿಂದ ಆಂಜನೇಯನ ಮೇಲಿರುವ ವ್ಯಕ್ತಿಗಳು ರಾಮ, ಸೀತೆ, ಲಕ್ಷ್ಮಣ, ಭರತ, ಶತ್ರುಘ್ನರೆಂದು ಹೇಳಬಹುದು. ನಾಣ್ಯದ ಮತ್ತೊಂದು ಬದಿಯಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಬಿಲ್ಲು ಬಾಣಗಳಿಂದ ಅಲಂಕೃತರಾದ ರಾಮ, ಲಕ್ಷ್ಮಣರ ಚಿತ್ರಗಳಿವೆ. ನಾಣ್ಯದ ಎರಡೂ ಬದಿಯಲ್ಲಿರುವ ವ್ಯಕ್ತಿಗಳು ಧರಿಸಿರುವ ಕಿರೀಟ ಹಾಗೂ ವಸ್ತ್ರಗಳು ಸಹಾ ಸುಸ್ಪಷ್ಟವಾಗಿ ಕಾಣುವಂತೆ ಎರಕ ಹೊಯ್ದು ಈ ನಾಣ್ಯವನ್ನು ನಿರ್ಮಿಸಲಾಗಿದೆ.



ಮುಂಭಾಗ ಹಿಂಭಾಗ

ಚಿಕ್ಕ ನಾಣ್ಯವೂ ಸಹ ಬಹುತೇಕ ಇದೇ ಚಿತ್ರವನ್ನು ಹೋಲುತ್ತಿದ್ದರೂ ಸಹ ಸಿಂಹಪೀಠ, ಶ್ವೇತಛತ್ರಿ, ಕಿರೀಟಗಳು ಹಾಗೂ ಅವರು ಕುಳಿತ ಭಂಗಿಯಲ್ಲಿ ಸ್ವಲ್ಪ ಬದಲಾವಣೆಯಿದೆ. ಹನುಮಂತನ ಚಿತ್ರವೂ ಸ್ವಲ್ಪ ಬೇರೆ ರೀತಿಯಲ್ಲಿ ಚಿತ್ರಿತವಾಗಿದೆ. ದೊಡ್ಡ ನಾಣ್ಯದಲ್ಲಿ ಹನುಮಂತನು ಬಲದಿಂದ ಎಡಕ್ಕೆ ಹಾರುವಂತಿದ್ದರೆ ಚಿಕ್ಕನಾಣ್ಯದಲ್ಲಿ ಎಡದಿಂದ ಬಲಕ್ಕೆ ಹಾರುವಂತೆ ಶಿಲ್ಪಿತವಾಗಿದೆ.

ದೊಡ್ಡನಾಣ್ಯ ಹಾಗೂ ಚಿಕ್ಕನಾಣ್ಯ ಎರಡರಲ್ಲಿಯೂ ಬರಹವಿದೆ. ದೊಡ್ಡ ನಾಣ್ಯದಲ್ಲಿ ರಾಮಲಕ್ಷ್ಮಣರ ಚಿತ್ರದ ಸುತ್ತಲೂ ದೇವನಾಗರಿ ಲಿಪಿಯಲ್ಲಿ ''ರಾಮಲಕ್ಷಮನ ಜಾನಕಿ ಹರಹರ ಜಾವಾಲ ಹನುಮಾನ'' ಎಂಬ ಬರಹವಿದೆ.

ಚಿಕ್ಕ ನಾಣ್ಯದಲ್ಲಿ ಅದೇ ರೀತಿ ದೇವನಾಗರಿ ಲಿಪಿಯಲ್ಲಿ ''ರಾಮಲಕ್ಷಮನ ಜಕಜವಲ ಹನಮ'' ಎಂಬ ಬರಹವಿದೆ.

ಬೆಂಗಳೂರಿನ ವಿಶ್ವೇಶ್ವರಯ್ಯ ಮ್ಯೂಸಿಯಂನಲ್ಲಿ ಸಂಪೂರ್ಣವಾಗಿ ಇದೇ ರೀತಿಯ ಚಿತ್ರ ಹಾಗೂ ಬರಹವಿರುವ ಎರಡು ಚಿನ್ನದ ನಾಣ್ಯಗಳನ್ನು ಇಟ್ಟಿದ್ದಾರೆ. ಆ ನಾಣ್ಯಗಳ

---

* ನಂ. ೧೭ ಕೆ, ೧೭ನೇ ಮುಖ್ಯರಸ್ತೆ, ಮುನೇಶ್ವರ ಬ್ಲಾಕ್, ಬನಶಂಕರಿ, ಮೂರನೆಯ ಹಂತ, ಬೆಂಗಳೂರು – ೫೬೦ ೦೨೬



ಮುಂಭಾಗ ಹಿಂಭಾಗ

ಕೆಳಭಾಗದಲ್ಲಿ ತಜ್ಞರು ನೀಡಿರುವ ವಿವರಗಳ ಪ್ರಕಾರ ಅವು ವಿಜಯನಗರದ ಅರಸರ ನಾಣ್ಯಗಳೆಂದು ತಿಳಿದುಬರುತ್ತದೆ. ಪ್ರಸ್ತುತ ನನಗೆ ದೊರೆತಿರುವ ಈ ಬೆಳ್ಳಿ ನಾಣ್ಯಗಳು ಸಂಪೂರ್ಣವಾಗಿ ಆ ಚಿನ್ನದ ನಾಣ್ಯಗಳನ್ನೇ ಎಲ್ಲ ರೀತಿಯಲ್ಲಿಯೂ ಹೋಲುವುದರಿಂದ ಇವೂ ಸಹ ವಿಜಯನಗರದ ಅರಸರ ನಾಣ್ಯಗಳೆಂದು ಹೇಳಬಹುದು. ಬಹುಶಃ ಇವು ಸು. ೧೫ನೆಯ ಶತಮಾನಕ್ಕೆ ಸೇರಿದ ನಾಣ್ಯಗಳಿರಬಹುದೆಂದು ತೋರುತ್ತದೆ.

*(ಅಧ್ಯಯನದ ಉದ್ದೇಶಕ್ಕಾಗಿ ಈ ನಾಣ್ಯಗಳನ್ನು ನೀಡಿದ ಶ್ರೀ ಪುಟ್ಟಣ್ಣನವರಿಗೆ ಧನ್ಯವಾದಗಳು. )*

ಡಾ॥ ಎಫ್. ಟಿ. ಹಳ್ಳಿಕೇರಿ *

# ಉತ್ತಂಗಿಯ ಶ್ರೀ ಶಂಕರಮಠದ ಹಸ್ತಪ್ರತಿಗಳು

ಕಷ್ಟೇನ ಲಿಖಿತಂ ಮಯಾ, ಯತ್ನೇನ ಪರಿಪಾಲಯೇತ್'' ಅಂದರೆ ''ಕಷ್ಟಪಟ್ಟು ಬರೆದಿದ್ದೇನೆ, ಪ್ರಯತ್ನಪೂರ್ವಕವಾಗಿ ರಕ್ಷಿಸಿರಿ'' ಎಂದು ಹಲವಾರು ಲಿಪಿಕಾರರು ಹಸ್ತಪ್ರತಿಗಳಲ್ಲಿ ಹೇಳಿಕೊಂಡಿದ್ದಾರೆ. ಹಸ್ತಪ್ರತಿಗಳ ರಕ್ಷಣೆಯೆಂದರೆ ಕೃತಿಗಳ ರಕ್ಷಣೆ, ಕೃತಿಗಳ ರಕ್ಷಣೆಯೆಂದರೆ ಅಕ್ಷರ ರೂಪದಲ್ಲಿ ಸಂಸ್ಕೃತಿಯನ್ನು ಸಂರಕ್ಷಿಸುವುದಾಗಿದೆ. ಇಂಥ ಅಮೂಲ್ಯವಾದ ಹಸ್ತಪ್ರತಿಗಳನ್ನು ನಾಡಿನ ಹಲವು ವಿದ್ಯಾಸಂಸ್ಥೆಗಳು, ಮಠ ಮಾನ್ಯಗಳು, ವ್ಯಕ್ತಿಗಳು ಸಂರಕ್ಷಣೆ ಮಾಡಿಕೊಂಡು ಬಂದಿರುವುದನ್ನು ನಾವು ಕಾಣುತ್ತೇವೆ. ಮಠಗಳಂಥ ಧಾರ್ಮಿಕ ಕೇಂದ್ರಗಳು ಈ ಕಾರ್ಯವನ್ನು ತುಂಬ ವ್ಯಾಪಕವಾಗಿ ಮಾಡಿವೆ. ಅಂಥ ಮಠಗಳಲ್ಲಿ ಉತ್ತಂಗಿಯ ಶ್ರೀ ಶಂಕರ ಮಠವು ಪ್ರಮುಖ ವಾಗಿದೆ.

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಉತ್ತಂಗಿಯು ಒಂದು ಚಿಕ್ಕಗ್ರಾಮ. ಇಲ್ಲಿರುವ ಶಂಕರ ಮಠವು ಈ ಭಾಗದಲ್ಲಿಯೇ ತುಂಬ ಪ್ರಸಿದ್ಧವಾದುದು. ಹೊಳಗುಂದಿ, ಉಜ್ಜಯಿನಿ, ಕೊಟ್ಟೂರು, ಹನಸಿ, ಎಂ. ಬಿ. ಅಯ್ಯನಹಳ್ಳಿ-ಹೀಗೆ ಐದು ಗ್ರಾಮಗಳಲ್ಲಿ ಶಾಖಾಮಠಗಳನ್ನು ಹೊಂದಿದ ಸಂಸ್ಥಾನಮಠ ಇದಾಗಿದೆ. ತರಿಕೇರಿ ಚರವರೇಣ್ಯ ಶ್ರೀ ಶಂಕರ ಮಹಾಸ್ವಾಮಿಗಳು ಈ ಮಠಗಳ ಪೀಠಾಧಿಪತಿಗಳು.

''ಬಳ್ಳಾರಿ ಜಿಲ್ಲೆಯ ಹಸ್ತಪ್ರತಿಗಳ ಸರ್ವೇಕ್ಷಣೆ ಮತ್ತು ಸಂಗ್ರಹ'' ಎಂಬ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಸಾಂಸ್ಥಿಕ ಯೋಜನೆಯನ್ವಯ (Department Project) ನಾನು ಮತ್ತು ನನ್ನ ಸಹೋದ್ಯೋಗಿ ಮಿತ್ರರಾದ ಡಾ॥ ಕೆ. ರವೀಂದ್ರನಾಥ್ ಅವರೊಂದಿಗೆ (Field Work) ಕೈಕೊಂಡಿದ್ದೆವು. ಆ ಸಂದರ್ಭದಲ್ಲಿ ಉತ್ತಂಗಿಯ ಶ್ರೀ ಶಂಕರ ಸ್ವಾಮಿ ಮಠಕ್ಕೆ ಭೇಟಿಕೊಟ್ಟಾಗ, ಹೊಳಗುಂದಿಯ ನಮ್ಮ ಶಾಖಾಮಠದಲ್ಲಿ ಪ್ರಾಚೀನ ಕಾಲದ ತಾಳೆಗರಿ, ಕಾಗದ ಪ್ರತಿಗಳನ್ನೊಳಗೊಂಡ ಹಸ್ತಪ್ರತಿ ಗಳಿವೆ. ಅವುಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಕೊಡುಗೆಯಾಗಿ ನೀಡುತ್ತೇವೆಂದು ಸ್ವಾಮೀಜಿಯವರು ಹೇಳಿದರು. ಶ್ರೀಗಳ ಸೂಚನೆಯಂತೆ ಹೊಳಗುಂದಿಗೆ ಹೋಗಿ, ಅಲ್ಲಿರುವ ಹಸ್ತಪ್ರತಿಗಳನ್ನು ಶೋಧಿಸಲಾಯಿತು. ಅವುಗಳ ವಿಶೇಷತೆಯನ್ನು ಗುರಿತಿಸುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ತಾಳೆಗರಿ, ಕಾಗದ ಪ್ರತಿಗಳನ್ನೊಳಗೊಂಡಂತೆ ಒಟ್ಟು ೩೪ ಹಸ್ತಪ್ರತಿಗಳು ಲಭ್ಯವಿದ್ದು, ಅವು ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿವೆ. ಅವುಗಳ ವಿವರ ಹೀಗಿದೆ :

### ೧. ಕನ್ನಡ ಕೃತಿಗಳು

೧. ಚೆನ್ನಬಸವ ಪುರಾಣ ೨. ಶರಣ ಹಸಿಗೆ ೩. ಅನುಭವ ರಸಾಯನ ೪. ಕೊಟ್ಟೂರು ಬಸವೇಶ್ವರ ಪುರಾಣ ೫. ಶರಣ ಹಸಿಗೆಯ ವಾಚ್ಯಾರ್ಥ ೬. ಮಿಶ್ರಾರ್ಪಣ ೭. ಪಂಜೀಕರಣದ ಪದ ೮. ಸೃಷ್ಟಿಯ ವಚನಗಳು ೯. ಸೃಷ್ಟಿಯ ವಚನಗಳು (ಪ್ರಭು ದೇವ) ೧೦. ನೂರೊಂದು ಸ್ಥಲದ ವ್ಯಾಖ್ಯಾನ ೧೧. ಹಿರಿಯ ಮಂತ್ರಗೋಪ್ಯ ೧೨. ಛಂದಸ್ಸಾರ ೧೩. ಪಾದಪೂಜೆ ೧೪. ಶಿವ ಕವಚ ೧೫. ರುದ್ರಕವಚ ೧೬. ಮಣ್ಣೇಶ್ವರ ಕಾವ್ಯದ ನಾಂದ್ಯ ೧೭. ಕರಸ್ಥಲದ ನಾಗಲಿಂಗ ದೇವರ ತ್ರಿವಿಧಿ ೧೮. ಲಿಂಗ ಸ್ತೋತ್ರದ ಷಟ್ಪದಂಗಳು ೧೯. ಪ್ರಭುದೇವರ ಪುರಾಣದ ನಾಂದ್ಯ ೨೦. ಶಿವ ಮಹಿಮೆ ಶತಕ ೨೧. ಬಸವೇಶ್ವರನ ಪಂಚಸ್ತೋತ್ರ ೨೨. ಬಸವ ಪುರಾಣ ೨೩. ಭೈರವೇಶ್ವರನ ಕಾವ್ಯ ೨೪. ಭಾವಚಿಂತಾರತ್ನ ೨೫. ಗಿರಿಜಾಕಲ್ಯಾಣ ೨೬. ಮಿಶ್ರ ಷಟ್ಪದಿಯ ಸ್ತೋತ್ರ ೨೭. ಶಾಂತಿ ತ್ರಯ ಪದಕ ೨೮. ಸುಖಮುನಿ ಚಾರಿತ್ರ ೨೯. ಪದಗಳು ೩೦. ಸ್ವರ ವಚನಗಳು ೩೧. ಶೀಲ ಸಂಪಾದನೆಯ ವಚನಗಳು ೩೨. ಪ್ರಭು ಲಿಂಗ ಲೀಲೆ ೩೩. ಪ್ರಭು ದೇವರ ಟೀಕಿನ ವಚನಗಳು ೩೪. ಗುರು

* ರೀಡರ್, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ರಗಳೆ ೩೫. ಷಡಕ್ಷರಿ ರಗಳೆ ೩೬. ಶರಣು ಬಸವ ರಗಳೆ ೩೭. ಭೀಮ ಕವೀಶ್ವರ ರಗಳೆ ೩೮. ಜಯಸಿದ್ಧಲಿಂಗ ರಗಳೆ ೩೯. ಜಯತು ರಗಳೆ ೪೦. ಲಿಂಗ ರಗಳೆ ೪೧. ವಿಭೂತಿಯ ರಗಳೆ ೪೨. ರುದ್ರಾಕ್ಷಿಯ ರಗಳೆ ೪೩. ಪಂಚಾಕ್ಷರಿಯ ರಗಳೆ ೪೪. ನಮಃ ಶಿವಾಯ ರಗಳೆ ೪೫. ಪುನರ್ದೀಕ್ಷೆಯ ರಗಳೆ ೪೬. ಮನೋವಿಕಾರ ನಿರಸನ ರಗಳೆ ೪೭. ಭಕ್ತಿ ಬಿನ್ನಹದ ರಗಳೆ ೪೮. ಬಸವ ಸ್ತೋತ್ರದ ತ್ರಿವಿಧಿ ೪೯. ಮಿಶ್ರಸ್ತೋತ್ರದ ತ್ರಿವಿಧಿ ೫೦. ಅಷ್ಟಾವರಣ ತ್ರಿವಿಧಿ ೫೧. ಆತ್ಮ ಲಿಂಗ ಪ್ರಣಮ ಸಂಯೋಗ ಸ್ಥಲದ ತ್ರಿವಿಧಿ ೫೨. ಸರ್ವಜ್ಞ ದೇವರ ತ್ರಿವಿಧಿ ೫೩. ಶಂಕರದೇವರ ಕಂದ ೫೪. ಮಂತ್ರ ಮಹತ್ವದ ಕಂದ ೫೫. ಮರುಳು ದೇವರು ನಿರೂಪಿಸಿದ ಕಂದ ೫೬. ಭಾಷಾ ಮಂಜರಿಯ ಟೀಕು ೫೭. ಅಕ್ಷರ ಮಾಲಿಕಾ ಗದ್ಯ ೫೮. ನಮಸ್ಕಾರ ಗದ್ಯ ೫೯. ಪಂಚಪ್ರಕಾರದ ಗದ್ಯ ೬೦. ಅಷ್ಟೋತ್ತರ ಶತನಾಮ ಗದ್ಯ ೬೧. ಷಟ್ಸ್ಥಲ ಗದ್ಯ ೬೨. ಬಸವೇಶ್ವರ ದೇವರ ಉದಾಹರಣೆ ೬೩. ಅಕ್ಷರಾಂಗನ ಗದ್ಯ ೬೪. ಶಂಕರ ಶತಕ ೬೫. ಶಿವ ಕಾರುಣ್ಯಾಹ್ವಾನ ಶತಕ ೬೬. ಶಿವಲಿಂಗಾವಸ್ಥೆ ಅರ್ಚನೆ ಪೂಜನೆ ಶತಕ ೬೭. ಶಿವಕೀರ್ತ್ಯಾ ಶತಕ ೬೮. ಮಹಿಮ ಶತಕ ೬೯. ಅಷ್ಟಾವರಣ ಸ್ತೋತ್ರ ಶತಕ ೭೦. ನಿಜಾಚರಣೆ ಶತಕ ೭೧. ಶರಣ ಮಹಿಮೆ ಶತಕ ೭೨. ಸರ್ವ ಮಂಗಳ ಶತಕ ೭೩. ವೃಷಭ ಶತಕ ೭೪. ಆದಯ್ಯಗಳ ಕಾವ್ಯದ ನಾಂದ್ಯ ೭೫. ಪ್ರಭು ದೇವರ ಪುರಾಣದ ಸ್ತೋತ್ರದ ನಾಂದ್ಯ ೭೬. ಚೆನ್ನ ಬಸವೇಶ್ವರ ಪುರಾಣದ ನಾಂದ್ಯ ೭೭. ಷಟ್ಸ್ಥಲ ತಿಲಕ ೭೮. ಚೇರಮ ಕಾವ್ಯದ ನಾಂದ್ಯ ೭೯. ಸಿದ್ಧೇಶ್ವರ ಪುರಾಣದ ನಾಂದ್ಯ ೮೦. ಯೋಗಾಂಗ ಭೂಷಣ ೮೧. ಸದ್ಗುರು ರಹಸ್ಯ ೮೨. ಕಲ್ಯಾಣೇಶ್ವರ ೮೩. ಸ್ವರೂಪಾಮೃತ ೮೪. ವೃಷಭ ಗೀತೆ ೮೫. ಅವಧೂತ ಗೀತೆ ೮೬. ಮನೋವಿಜಯ ೮೭. ಲಿಂಗ (ಲಾ) ಲೀಲಾವಿಕಾಸ ಚಾರಿತ್ರ ೮೮. ಆಚರಣೆಯ ವಚನಗಳು (ಚೆನ್ನಂಜೆದೇವ) ೮೯. ಬಸವ ಸ್ತೋತ್ರದ ವಚನಗಳು (ಚೆನ್ನಂಜೆದೇವ) ೯೦. ಮಿಶ್ರಸ್ತೋತ್ರದ ವಚನಗಳು (ಚೆನ್ನಂಜೆದೇವ) ೯೧. ಶರಣ ಸ್ತೋತ್ರದ ವಚನಗಳು (ಎಳಮಲೆಯ ಗುರು ಶಾಂತದೇವ) ೯೨. ಲಿಂಗಸ್ತೋತ್ರದ ವಚನಗಳು (ಸಿದ್ಧವೀರದೇವರು) ೯೩. ಲಿಂಗ ವಿಕಳಾವಸ್ಥೆಯ ವಚನಗಳು(ಎಳಮಲೆಯ ಗುರುಶಾಂತ ದೇವ) ೯೪. ಷಡುಸ್ಥಲ ಸ್ತೋತ್ರ (ಎಳಮಲೆಯ ಗುರುಶಾಂತದೇವ) ೯೫. ಅಷ್ಟಾವರಣ ಸ್ತೋತ್ರ (ಎಳಮಲೆಯ ಗುರುಶಾಂತದೇವ).

**೨. ಸಂಸ್ಕೃತ ಕೃತಿಗಳು**

೧. ವಾತುಲಾಗಮ ತಂತ್ರ ೨. ಕವಿಕರ್ಣ ರಸಾಯನ ೩. ಅಥಃ ಸ್ವರ ಪ್ರಕರಣ ೪. ಮನೋರಮಾ ೫. ವಿಶ್ವಗುಣೌದರ್ಶನಂ ೬. ನೈಷಧ ವ್ಯಾಖ್ಯಾನ ೭. ಸಿದ್ಧಾಂತ ಕೌಮುದಿ ೮. ರಘುವಂಶ ೯. ಪ್ರಕೃತಿಯ ಸರ್ಗ ೧೦. ಶಿವಾನಂದಲಹರಿ ಶ್ಲೋಕಾರ್ಥ ೧೧. ವೀರಶೈವ ತಂತ್ರ ೧೨. ಅಥಃಗುರು ಮಹಾತ್ಮೆ - ಹೀಗೆ ಶಂಕರಮಠದ ಹಸ್ತಪ್ರತಿಗಳಲ್ಲಿ ೯೫ ಕನ್ನಡ ೧೨ ಸಂಸ್ಕೃತ ಭಾಷೆಯ ಕೃತಿಗಳು ಒಳಗೊಂಡಿವೆ.

**೩. ಶಂಕರಮಠದ ಹಸ್ತಪ್ರತಿ-ಪ್ರಶಸ್ತಿ (Colophins)ಗಳು**

ಅ. "ಅನುಭವ ರಸಾಯನ ಎಂಬ ಆಧ್ಯಾತ್ಮಶಾಸ್ತ್ರ ವಿವರಣೆಯುಳ್ಳ ಗ್ರಂಥವನ್ನು ಶ್ರೀಮನ್ನೃಪ ಶಾಲಿವಾಹನ ಶಕ ೧೭೮೭ನೆ ಕ್ರೋಧನ ಸಂವತ್ಸರ ಚೈತ್ರ ಕೃಷ್ಣಪಕ್ಷ ನಾಲ್ಕನೆ ಪ್ರಹರಕ್ಕೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ ಶ್ರೀ"

ಆ. "ಕಾಳಯುಕ್ತಿ ಸಂವತ್ಸರದ ಚೈತ್ರ ಶುದ್ಧ ೭ ಮಂಗಳವಾರವು ಪ್ರಕೃತಿಯ ಸರ್ಗಮಯ ಲಿಖ್ಯತೆ ಶುಭಮಸ್ತು"

ಇ. "ತಪ್ಪಂ ಬರೆದವಂ ಕಡು ಜಡನಪ್ಪಾತಂಬರನೆಂದು ಬಯ್ಯಲ್ವೇಡಂ ತಪ್ಪಕ್ಕು ಶುದ್ಧಮಕ್ಕುಂ ತಪ್ಪುಳ್ಳೊಡೆ ತಿದ್ದಿಯೆರೆವುದುತ್ತಮ ಪುರುಷರ್" (ನೂರೊಂದು ಸ್ಥಲ ವ್ಯಾಖ್ಯಾನ)

ಈ. "ಗಂಗಾಧರಪ್ಪನವರ ಸಂಗಪ್ಪನವರು ಸ್ವತಃ ಪುಸ್ತಕ ಬರೆದದ್ದು" (ಅಥಃ ಗುರುಮಹಾತ್ಮೆ)

ಉ. "ಹೇವಳಂಬಿ ಸಂವತ್ಸರದ ಪುಷ್ಯ ಮಾಸದ ಚೋಳ ಪಾಂಡ್ಯದ ಶುಕ್ರವಾರದಲ್ಲು ೨೪ ಗಳಿಗೆಯಲ್ಲಿ ಬಸವಪುರಾಣ ಬರೆದು ಸಂಪೂರ್ಣವಾಯಿತು.

ಊ. "ಶ್ರೀಮತ್ ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪಿಗಳಾದ ಗಜ್ಜಿನವರ ಭಕ್ತಿಯಲ್ಲಿರುವಂಥ ಬಸವಲಿಂಗ ಸ್ವಾಮಿಯವರು ತಮ್ಮ ಭಕ್ತಿಯಿಂದ ತರಿಕೆರೆ ಕೊಟ್ಟೂರಪ್ಪನವರಿಗೆ ಬರೆಸಿಕೊಟ್ಟ ಶ್ರೀ ಗಿರಿಜಾಕಲ್ಯಾಣ ಸಮಾಪ್ತಮಂಗಳ ಮಹಾ ಶ್ರೀ ಶ್ರೀ ಶ್ರೀ"

ಋ. "ಕೀಲಕ ಸಂವತ್ಸರದ ಫಾಲ್ಗುಣ ಬಹುಳ ಅಮಾವಾಸ್ಯೆ ಶುಕ್ರವಾರದಲ್ಲು ಭೈರವೇಶ್ವರನ ಕಾವ್ಯ ಬರೆದು ಸಮಾಪ್ತಿಯಾಯಿತ್ತು ಭಕ್ತಮಹಾತ್ಮರಿಗೆ ಶರಣಾರ್ಥಿ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ"

ೠ. "ಶ್ರೀ ಗಂಗಾಧರ ಸಾತುವಾನ ಕೀಲಕ ಸಂವತ್ಸರ ಪುಷ್ಯ ಬಹುಳ ದಶಮಿಯಲ್ಲಿ ಪ್ರಭುಲಿಂಗಲೀಲೆ ಬರೆದು ಸಮಾಪ್ತಿಯಾಯಿತ್ತು. ಮರುತ್ತ ದೇವರು ಬರೆದರು ಚೆನ್ನಬಸಪ್ಪದೇವರಿಗೆ ಬರೆದುಕೊಟ್ಟರು."

ಎ. "ಕೀಲಕ ಸಂವತ್ಸರದ ವೈಶಾಖ ಮಾಸ ಬಹುಳ ತ್ರಯೋದಶಿ ಶುದ್ಧ ವೇಶಾಕೆಯಲ್ಲು ಸೋಮವಾರ ಉದಯ ಆರು ಘಳಿಗೆಯಲ್ಲಿಯು ಪ್ರಭುದೇವರ ಟೀಕಿನ ಪುಸ್ತಕ ಸಮಾಪ್ತವಾಯಿತ್ತು."

ಏ. "ವಿಳಂಬಿನಾಮ ಸಂವತ್ಸರದ ಫಾಲ್ಗುಣ ಶುದ್ಧ ೭ ಶುಕ್ರವಾದ ದಿವಸ ಲಿಂಗಲೀಲಾವಿಲಾಸ ಚಾರಿತ್ರ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಶ್ರೀ"

ಐ. "ತರಿಕೆರೆ ಚರದ ರುದ್ರಸ್ವಾಮಿಯವರ ಮರಿದೇವರು ಮುದ್ದುಬಸಪ್ಪನ ಹಳ್ಳಿಯಲ್ಲಿರುವಂಥ ಶಂಕರದೇವರಿಗೆ ನಿಂಬಲಗೇರಿಯಲ್ಲಿರುವ ವಾರಸ್ತಾಪುರದ ಶೀಲವಂತ ಶಿವಲಿಂಗಪ್ಪನ ಗರ್ಭೋತ್ಪತ್ಯನಾದಂಥ ನೀಲಕಂಠಪ್ಪನ ಪುತ್ರನಾದ ಬಸಪ್ಪನು ಬರಕೊಟ್ಟ ಚೆನ್ನಬಸವೇಶ್ವರ ಸ್ವಾಮಿಯವರ ಪುರಾಣಕ್ಕೆ ಶುಭಮಸ್ತು"

ಒ. "ಧಾತುನಾಮ ಸಂವತ್ಸರದ ಶ್ರಾವಣ ಶುದ್ಧ ೮ ರಲ್ಲು ಸ್ವಾತಿ ನಕ್ಷತ್ರದಲ್ಲಿ ಕಾಳಬಸವಲಿಂಗದೇವರಿಗೆ ಮುತ್ತಿಗೆ ಅರಸಪ್ಪನು ಬರಕೊಟ್ಟ ನವಸ್ತೋತ್ರದ ವಚನಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ"

ಈ ಹಸ್ತ ಪ್ರತಿ-ಪ್ರಶಸ್ತಿಗಳಲ್ಲಿ ಶ್ರೀ ಶಂಕರ ಮಠದ ಹಸ್ತಪ್ರತಿ ಲಿಪಿಕಾರರು, ಲಿಪಿಗೈದ ಸಮಯ, ಸ್ಥಳ, ಲಿಪಿಕಾರರ ತಂದೆ-ತಾಯಿ, ವಂಶಾವಳಿ, ಅವರ ಮನೋಧರ್ಮ, ಪ್ರಾಮಾಣಿಕತೆ-ಮುಂತಾದ ವಿವರಗಳನ್ನು ಗುರುತಿಸಬಹುದು.

೪. ಗಿರಿಜಾ ಕಲ್ಯಾಣ, ಪ್ರಭುಲಿಂಗ ಲೀಲೆ, ಬಸವಪುರಾಣ, ಚೆನ್ನಬಸವ ಪುರಾಣ, ಭೈರವೇಶ್ವರನ ಕಾವ್ಯ, ಲಿಂಗಲೀಲಾ ವಿಲಾಸ ಚಾರಿತ್ರ ಮುಂತಾದ ನಡುಗನ್ನಡ ಸಾಹಿತ್ಯದ ಪ್ರಮುಖ ಕಾವ್ಯಗಳು ಈ ಸಂಗ್ರಹದಲ್ಲಿವೆ.

೫. ವೀರಶೈವ ಲಘು ಸಾಹಿತ್ಯ ಪ್ರಕಾರಗಳಾದ ರಗಳೆ, ಕಂದ, ಸ್ತೋತ್ರ, ತ್ರಿವಿಧಿ, ಗದ್ಯ, ಟೀಕೆ, ಸ್ವರವಚನ, ವ್ಯಾಖ್ಯಾನ ಗಳಲ್ಲಿ ಹಲವಾರು ಕೃತಿಗಳ ಹಸ್ತಪ್ರತಿಗಳು ಇಲ್ಲಿವೆ.

೬. ಒಂದೇ ಹಸ್ತಪ್ರತಿ ಕಟ್ಟಿನಲ್ಲಿ ೪೭ ಕೃತಿಗಳಿರುವುದು ಈ ಸಂಗ್ರಹದ ವಿಶೇಷತೆಯಾಗಿದೆ.

ಇಂಥ ಅಮೂಲ್ಯವಾದ ಮಾಹಿತಿಯನ್ನೊಳಗೊಂಡ ಹಸ್ತ ಪ್ರತಿಗಳನ್ನು ಸಂರಕ್ಷಿಸಿಕೊಂಡು ಬಂದ ಶ್ರೇಯಸ್ಸು ಶ್ರೀ ಶಂಕರ ಮಠಕ್ಕೆ ಸಲ್ಲುತ್ತದೆ. ಈ ಎಲ್ಲ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಕಾರ್ಯ ಇಷ್ಟರಲ್ಲಿಯೇ ಮುಕ್ತಾಯವಾಗುತ್ತದೆ.

ಪ್ರೊ॥ ಕ. ವೆಂ. ರಾಜಗೋಪಾಲ*

# ಶೃಂಗೇರಿ ಪಂಚಾಂಗ
# ( ಒಂದು ಟಿಪ್ಪಣಿ )

**ಪಂಚಾಂಗ :**

೧. ಇಂತಪ್ಪ ತಿಥಿವಾರ ನಕ್ಷತ್ರ ಯೋಗಕರಣ ಪಂಚಾಂಗದಿಂ ಯುಕ್ತಮಾದ ಎಂದು 'ನಿಜಗುಣ ಶಿವಯೋಗೀಂದ್ರ ವಿರಚಿತಮಾದ' ವಿವೇಕ ಚಿಂತಾಮಣಿಯೆಂಬ ಗ್ರಂಥವು - ತಿಳಿಸುತ್ತದೆ.

೨. *ತಿಥಿವಾರ ನಕ್ಷತ್ರ ಯೋಗಕರಣಗಳೆಂಬ ಐದು ಅಂಶಗಳು* "*ನಾಡಿಯ ಆವತ್ತಕ್ಕೆ ಒಂದು ತಿಥಿಯಕ್ಕುಂ... ಭವಾದಿಗಳು ಕರಣ ವಕ್ಕವು ಕ್ರಮದಿಂ ಕೂಡೆ ನವಗ್ರಹದ ಸಂಚಾರಕ್ಕೆಡೆಯಪ್ಪ ಪಂಚಾಂಗಮೆಂದಕ್ಕುಂ*".... - ಎಂದು ಮಂಗರಾಜ ನಿಘಂಟು (೨೧-೯) ಹೇಳುತ್ತದೆ.

೩. ಶಾಂತಿನಾಥನ ಸುಕುಮಾರಚರಿತಂ (*ಕಾಲ ಕ್ರಿ.ಶ.ಸು. ೧೦೬೮*) - *ಗ್ರಂಥದಲ್ಲಿ - ವೈದ್ಯನಂತೆ ಪಂಚಾಂಗ ಶುದ್ಧಿಯಂ ನೋಡಿ ಮಂತ್ರವಾದಿಯಂತೆ ಗ್ರಹಗತಿಯಂ ಕಂಡು ತಿಥಿವಾರ ನಕ್ಷತ್ರ ಯೋಗ ಕರಣಂ.... ಜ್ಯೋತಿಷ್ಯ.*

೪. ಚಂದ್ರಪ್ರಭಾಪುರಾಣಂ -(೨.೯)-೧೮ ಕಾಲ ಕ್ರಿ. ಶ. ಸು. ೧೧೮೯

*-ಸಮಮಂ ಮಾಡೆ ಸಮಂತ್ರಿವರ್ಗಮರಿಷಡ್ವರ್ಗಕ್ಕೆ ಪಂಚಾಂಗಂ ಮತ್ರಮನೆ ಸ್ಪಾಂಗ ಸಮೃದ್ಧಿಯಂ ಕಡೆ ನಿಚ್ಚಕಂ....*

ಇಲ್ಲಿ ಪಂಚಾಂಗ ಮಂತ್ರಂ - ಎಂದರೆ ಕಾರ್ಯೋಪಾಯ, ಸಾಧನೋಪಾಯ, ದೇಶಕಾಲವಿಭಾಗ, ವಿನಿಪಾತ ಪ್ರತೀಕಾರ ಮತ್ತು ರಾಜ್ಯಸುಖಸಿದ್ಧಿ- ಎಂಬವು ೫ ಮಂತ್ರಗಳು.

೫. ಚಿಕ್ಕುಪಾಧ್ಯಾಯನ ದಿವ್ಯಸೂರಿ ಚರಿತೆಯಲ್ಲಿ (೭-೫೭) *ಕ್ರಿ. ಶ. ಸು. ೧೭೦೦- ಇವನದೇಂ ಪಂಚಾಂಗಮಂ ಪೇಟಿಮಾ/ ವಿನಪಚ್ ಬೀಟ್ಟುದೇ ಕೊಲ್ಲಿ ಮಂಬನಿತಜೊಳ್.*

ಮೇಲಿನ ಆಧಾರಗಳಿಂದ 'ಪಂಚಾಂಗ'ವು ಬಳಕೆಯಲ್ಲಿ ಬಂದಿರುವುದನ್ನು ಕಾಣುತ್ತೇವೆಯಾದರೂ ಈ ೫ ಅಂಶಗಳ ಗಣನೆಯು ಎಂದು ಮೊದಲಾಯಿತೆಂಬುದು ಖಚಿತವಾಗುವುದಿಲ್ಲ. ಆದರೂ ಈ ೫ ಅಂಶಗಳನ್ನು ಕುರಿತ **ಜಾತಕತಿಲಕಂ** - (ಕಾಲ ಕ್ರಿ. ಶ. ಸು. ೧೦೫೦) ಎಂಬ ಶ್ರೀಧರಾಚಾರ್ಯ ವಿರಚಿತ ಕೃತಿಯಲ್ಲಿ ಕೂಡ 'ಪಂಚಾಂಗ' ಪದ ಪ್ರಯೋಗವು ಕಂಡುಬರುವುದಿಲ್ಲ. ವಾಸ್ತವವಾಗಿ ಇದೊಂದು ಅಧಿಕೃತ ಗ್ರಂಥವಾಗಿ ಯೋಗ ಮತ್ತು ಕರಣಗಳ ಬಗ್ಗೆ ವಿಶೇಷ ಬೆಳಕು ಚೆಲ್ಲುತ್ತದೆ. ಕ್ರಮವಾಗಿ ಇದರಲ್ಲಿ ರಾಜಯೋಗ, ನಾಭಾಸಯೋಗ, ಚಾಂದ್ರಯೋಗ, ದ್ವಿತ್ರಿಗ್ರಹಯೋಗ, ಪ್ರವ್ರಜ್ಯಾಯೋಗ ಮತ್ತು ಅನಿಷ್ಟ ಯೋಗಗಳೆಂದು ಒಂದೊಂದಕ್ಕೂ ಪ್ರತ್ಯೇಕ ಪ್ರಕರಣವನ್ನು ರಚಿಸಲಾಗಿದೆ-

'ಯೋಗ'ವೆಂದರೆ ಕಮಲ ಆಕೃತಿ ಯೋಗಗಳಲ್ಲೊಂದು, ಅಂದರೆ ಏಳುಗ್ರಹಗಳೂ ನಾಲ್ಕು ಕೇಂದ್ರಸ್ಥಾನಗಳಲ್ಲಿರುವುದು.

'ಕರಣ'ವೆಂದರೆ ತಿಥಿಯ ಅರ್ಧಭಾಗ.

ಮುಖ್ಯವಾಗಿ ಈ ಗ್ರಂಥವು ಕನ್ನಡ ಶಾಸ್ತ್ರ ಗ್ರಂಥಗಳಲ್ಲಿ ವಿಶಿಷ್ಟವಾದುದಾಗಿದೆ. ಸಂಸ್ಕೃತದ ಬೃಹಜ್ಜಾತಕ, ಲಘುಜಾತಕ ಮತ್ತು ಸಾರಾವಳಿಗಳ ಆಧಾರದಿಂದ ಇದು ರಚಿತವಾಗಿದೆ.

ಇದನ್ನು ಕರ್ತೃವು 'ಜೋಯಿಸಗಬ್ಬಂ' (ಅಧಿ ೧-೮) ಜ್ಯೋತಿಜ್ಞಾನಂ (ಅಧಿ ೧-೧೯) ಎಂದು ಕರೆದಿದ್ದಾನಾದರೂ '**ಪಂಚಾಂಗಂ**' ಎಂದು ಎಲ್ಲಿಯೂ ಹೇಳಿರುವುದಿಲ್ಲ.

ಇದರಲ್ಲಿ ರಾಶಿಗಳ ಸ್ಥಾನ ನಿರ್ದೇಶವಿದೆ - ಮೇಷ-ಸಿಂಹ-ಧನುಸ್ಸು, ಪೂರ್ವಕ್ಕೆ; ವೃಷಭ-ಕನ್ಯಾ-ಮಕರ, ದಕ್ಷಿಣಕ್ಕೆ; ಮಿಥುನ-ತುಲಾ-ಕುಂಭ, ಪಶ್ಚಿಮಕ್ಕೆ; ಮತ್ತು ಕರ್ಕಾಟಕ-ವೃಶ್ಚಿಕ-ಮೀನ, ಉತ್ತರಕ್ಕೆ - ಅಲ್ಲದೆ ಗ್ರಹಗಳ ನವಾಂಶ ವಿವರವೂ ಇದೆ. ಹಾಗೆಯೇ 'ಯೋಗ' ವಿಚಾರವನ್ನು ವಿವರಿಸಲಾಗಿದೆ; ಇದಕ್ಕಾಗಿ ಬೃಹಜ್ಜಾತಕವನ್ನು ಬಳಸಿಕೊಂಡಿರುತ್ತಾನೆ - ಉತ್ತರಾಯಣಕ್ಕೆ

* ಎಂ. ಐ. ಜಿ. ೪೧, ೮೦ ಅಡಿ ರಸ್ತೆ ಕೆಂಗೇರಿ ಉಪನಗರ, ೨ನೇ ಹಂತ, ಬೆಂಗಳೂರು - ೫೬೦ ೦೬೦

ಶಿರ ಮೊದಲಾಗಿ ೩ ಋತುಗಳೂ ದಕ್ಷಿಣಾಯನಕ್ಕೆ ವರ್ಷ ಮೊದಲಾಗಿ ೩ ಋತುಗಳೂ - ಎಂಬ ವಿವರ ದೊರಕುತ್ತಿದೆ.

- ಆದುದರಿಂದ ಈ ಗ್ರಂಥವು *[7] ರಾಶಿಕುಂಡಲಿಯ ರಚನೆಗೆ ಉಪಯುಕ್ತವಾದುದಾಗಿದೆ. ಜನನವನ್ನು ಕುರಿತಂತೆ ಗ್ರಹಬಲಗಳನ್ನು ಗುರುತಿಸುವಲ್ಲಿ 'ರಾಜಯೋಗ'ದ ಪೂರ್ಣ ವಿವರ ದೊರಕುತ್ತದೆ. ಸಿಂಹಮಾಸದಲ್ಲಿ ಕೃಷ್ಣ ಪಕ್ಷ-ಅಶ್ವಿನಿ, ಭರಣಿ, ಕೃತ್ತಿಕ ೧ನೇ ಪಾದ: ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ 'ರಾಜಯೋಗ' ಎಂಬುದರ 'ಕುಂಡಲಿ'ಸಹಿತ ವಿವರವಿದೆ. (ರಾಜಯೋಗ ಪ್ರಕರಣದಿಂದ)

ಈ ಜಾತಕದಂತೆ ರಾಶಿಸ್ತಂಭಗಳಿರುವ ಶೃಂಗೇರಿಯ

| | | | |
|---|---|---|---|
| | ಕುಜ ಚಂದ್ರ | | |
| | ಮೇಷ ಲಗ್ನ | | |
| ಶನಿ | | | ರವಿ |
| ಗುರು | | | |

ವಿದ್ಯಾಶಂಕರ ದೇಗುಲದ ಮುಂಭಾಗದ ಭೋಗಮಂಟಪವನ್ನು ಪರಿಶೀಲಿಸಬಹುದು (ಇಲ್ಲಿ ಭೋಗ ಮಂಟಪ - ಎಂಬುದನ್ನು ಮತ್ತೆ ವಿವರಿಸಲಾಗುತ್ತದೆ.)

ಈಗ ಪರಿಶೀಲಿಸಬೇಕಾದ ಮತ್ತೊಂದು ಗ್ರಂಥವೆಂದರೆ ಲೋಕೋಪಕಾರ. ರಚನೆ ಚಾಮುಂಡರಾಯ (ಕಾಲ ಕ್ರಿ. ಶ. ಸು. ೧೦೪೭). ಈತನು ಕಲ್ಯಾಣಿ ಚಾಲುಕ್ಯರ ಜಯಸಿಂಹನ ಆಸ್ಥಾನದಲ್ಲಿದ್ದವನು ಕೃತಿಯ ಮೊದಲೆರಡು ಅಧಿಕಾರಗಳನ್ನು ಜ್ಯೋತಿಷ್ಯಕ್ಕಾಗಿ ಮೀಸಲಿರಿಸಿದ್ದಾನೆ. ಮೊದಲನೆಯದೇ *'ಪಂಚಾಂಗಫಲ ವರ್ಣನಂ'*. ತಿಥಿ-ವಾರ-ನಕ್ಷತ್ರ-ಯೋಗ ಮತ್ತು ಕರಣಗಳನ್ನು ಕುರಿತ ವಿವರಗಳು ಸಂಗ್ರಹವಾಗಿದೆ. ಯೋಗ ಗಳಲ್ಲಿ ೧) ಹಾನಿಯೋಗ, ೨) ಮೃತ್ಯುಯೋಗ ೩) ವಧೈತಯೋಗ ಮತ್ತು ೪) ಯೋಗ ಅಮೃತ ಯೋಗ ಎಂದು ಹೇಳಿರುವುದಲ್ಲದೆ ಹನ್ನೊಂದು ಕರಣಂಗಳೊಳಗೆ ಭದ್ರಾಕರಣವನ್ನು ಬಿಡುವುದು. ಉಳಿದ ಹತ್ತು ಕರಣಂಗಳುಂ ಶುಭಂಗಳಕ್ಕುಂ (ಕಂದಪದ್ಯ. ೨೫) ಎಂದಿದೆ. *[3]

ಒಟ್ಟಿನ ಮೇಲೆ 'ಪಂಚಾಂಗ' ಎಂಬುದು ಕಾಲಮಾನದಲ್ಲಿ ಕೇವಲ ಒಂದು ದಿನದ ಅಂದರೆ ಗಣಿತಜ್ಞರು ಗುರುತಿಸುವಂತೆ ಇದೇ ೨೪ ಗಂಟೆಗಳ ಒಂದು ತುಂಡು ಅವಧಿಯನ್ನು ಖಚಿತ ಪಡಿಸುತ್ತದೆ - ಆದರೆ ಇದು ಒಂದು ಯುಗದಲ್ಲಿನ ಶಕವರ್ಷ, ಸಂವತ್ಸರ, ಅಯನ, ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕರಣಗಳ ಕೊನೆಯ ೫ ಅಂಶಗಳಾಗುತ್ತದೆಯಷ್ಟೆ. ಆದರೆ ಇಷ್ಟನ್ನು ಗುರುತಿಸುವುದಕ್ಕೂ ಉಳಿದ ಹಿಂದಿನ ಯುಗ-ಶಕವರ್ಷ ಮೊದಲಾದುವನ್ನು ಸರಿಯಾಗಿ ಅಳತೆಮಾಡಿದಂತೆ ಗುರುತಿಸಬೇಕಾಗುತ್ತದೆ ಮತ್ತು ಇದಕ್ಕೆಲ್ಲಾ ನಿಶ್ಚಿತಸಾಧನ (Tools) ಬೇಕಾಗುತ್ತದೆ. ಇಂತಹ ಒಂದು ಕೇಂದ್ರವು ಇಂದಿಗೂ ಶೃಂಗೇರಿ ಯಲ್ಲಿ ಮೂಕ ವಿಸ್ಮಯವನ್ನುಂಟು ಮಾಡುತ್ತಾ ಉಳಿದಿದೆ. ಇದೇ 'ವಿದ್ಯಾಶಂಕರ ದೇಗುಲ'ವೆಂಬುದು. ಇದರ ಲಕ್ಷಣಗಳು ಮತ್ತು ಬಳಕೆಯನ್ನು ಕುರಿತು ಪರಿಶೀಲಿಸುವುದೇ ಈ ಲೇಖನದ ಗುರಿಯಾಗಿದೆ.

ನಮ್ಮ ಶಾಸನಗಳಲ್ಲಿ ಸಾಮಾನ್ಯವಾಗಿ ಕೊನೆಯ ಎರಡು ಅಂಶಗಳನ್ನು ಅಂದರೆ ಯೋಗ ಮತ್ತು ಕರಣಗಳನ್ನು ಬಿಟ್ಟಂತೆ ಕಂಡುಬರುತ್ತದೆ.

ವೈದಿಕ ಸಂಪ್ರದಾಯದಲ್ಲಿ ಯಾವುದೇ ಕಾರ್ಯ ವನ್ನು ನಡೆಸುವುದಕ್ಕೂ ಮೊದಲು 'ಸಂಕಲ್ಪ' ಎಂಬ ಒಕ್ಕಣೆಯು ಬರುತ್ತದೆ. ಇದೇ ಕಾಲಮಾನದ 'ಅರಿವು' ಎನ್ನಬಹುದು.

- ಇದರಲ್ಲಿ ಶಕವರ್ಷ(?....) ಸಂವತ್ಸರ(?), ಅಯನ (?), ಋತು(?), ಮಾಸ(?), ತಿಥಿ(?), ವಾಸರ(?), ಉಕ್ತಾಯಾಂ ಶುಭಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭ ತಿಥೇ.... ಎಂದು ಬಹಳ ಹಿಂದಿನಿಂದ ಅಂದರೆ ಶಾತವಾಹನ(?) ಮೊದಲಾದಂತೆ ಶಾಲಿವಾಹನ ಶಕೆಯನ್ನು ಶಾಸನಗಳಲ್ಲಿ ಗುರುತಿಸುವುದನ್ನು ಕಾಣುತ್ತೇವೆ. ಈ ಬಗೆಯು ಆರ್ಯಭಟ ಮತ್ತು ವರಾಹ ಮಿಹಿರರಿಂದ ಖಚಿತವಾಗಿ ರೂಢಿಗೆ ಬಂದಂತಿದೆ - ಇದಕ್ಕೆ ಆರ್ಯಭಟೀಯಂ ಮತ್ತು ಸೂರ್ಯಸಿದ್ಧಾಂತ (ವರಾಹಮಿಹಿರ)ಗಳು ಬಳಕೆಯಾಗಿರುವಂತಿದೆ. ಬಹಳ ಹಿಂದೆ 'ಕರಣ' ಎಂದರೆ ಲೆಖ್ಖಾಚಾರ (Calculation) ಎಂದಾಗಿದ್ದಿರ ಬಹುದು. ಮೇಲೆ ಗುರುತಿಸಿದಂತೆ ಒಟ್ಟು ೯ ಅಂಶಗಳನ್ನು ಗುರುತಿಸುವಲ್ಲಿ 'ಕಾಲಮಾನ'ವು ನಿಗದಿಯಾಗುತ್ತದೆ. ಇವುಗಳಲ್ಲಿ 'ಬೃಹಜ್ಜಾತಕಂ' ಎಂಬ ಕೃತಿ, ಉಜ್ಜಯಿನಿಯಲ್ಲಿದ್ದವನೆಂದು ತಿಳಿದು ಬರುವ ವರಾಹಮಿಹಿರನಿಂದ ರಚಿತವಾಗಿದೆ. ಇದರಲ್ಲಿ ಗ್ರಹಚಾರ ಫಲವನ್ನು ಗುರುತಿಸಲು 'ರಾಶಿಕುಂಡಲಿ'ಯ ವಿಚಾರವೂ ಇರುತ್ತದೆ. ಇದಕ್ಕೆ ಅವಶ್ಯವಾದಂತೆ ಗ್ರಹಗಳ ಸ್ಥಾನಮಾನವನ್ನು ನಿರ್ದೇಶಿಸುವುದು ಮತ್ತು ಅದಕ್ಕಾಗಿ 'ಸೂತ್ರ' ರಚನೆಗಾಗಿ ಕಟಪಯಾದಿ. ಅಕ್ಷರ ಸಂಜ್ಞೆಯನ್ನು ಬಳಸುವುದು ಕಂಡುಬರುತ್ತಿದೆ.

ಇದನ್ನು ಸಾಧಿಸಲು ಸೂರ್ಯನ ಮತ್ತು ನಕ್ಷತ್ರಗಳ ಚಲನೆಯನ್ನು ಗುರುತಿಸುತ್ತಾ, ಗುಣಿಸುತ್ತಾ, ಕಾಲಮಾನವನ್ನು

ನಿರ್ಧರಿಸಲಾಗುತ್ತಿದೆ - ಆದುದರಿಂದ 'ಪಂಚಾಂಗ'ದಲ್ಲಿ ದೃಗ್ಗಣಿತವು ಮುಖ್ಯವಾಗಿ ಬಳಕೆಯಾಗುತ್ತಿದೆ - ಇದರ ಫಲವಾಗಿ ಈಗಲೂ ಅಚ್ಚಾಗಿ ದೊರಕುವ 'ಪಂಚಾಂಗ'ವು ಒಂದು ವರ್ಷದ ವಿವರಗಳನ್ನು ಕೊಡುತ್ತದೆ. ಸೂರ್ಯನ ಚಲನೆಯಿಂದ ಒಂದು 'ವರ್ಷ'ವನ್ನೂ ಒಂದು ದಿನವನ್ನು ಗುರುತಿಸಿದರೆ ಚಂದ್ರ ಮತ್ತು ತಾರಾ(ಮಂಡಲ)ಗಳ ಚಲನೆಯಿಂದ ತಿಂಗಳು(ಮಾಸ), ಪಕ್ಷ, ವಾರ, ನಕ್ಷತ್ರ ತಿಥಿಗಳನ್ನು ಗುರುತಿಸುತ್ತಾರೆ. ಇದನ್ನೇ ಸೂರ್ಯಮಾನ ಮತ್ತು ಚಂದ್ರಮಾನ-ಎಂಬ ಇಬ್ಬಗೆಯಿಂದ ಇಂದಿನ ಪಂಚಾಂಗವು ಸಿದ್ಧವಾಗುತ್ತಿದೆ ಇಂತಹ ಸಿದ್ಧತೆಗಾಗಿಯೇ ಶೃಂಗೇರಿಯಲ್ಲಿ ಒಂದು ಸಾಧನಸಂಪತ್ತು - ರಚಿತವಾದಂತೆ ಕಂಡುಬರುತ್ತಿದೆ.

ಶಾಸನಗಳಲ್ಲಿ ಕಾಲಮಾನವನ್ನು ಗುರುತಿಸುತ್ತಾ ಬಂದಿದ್ದಾರೆಯಷ್ಟೆ- ಇದರ ರೀತಿನೀತಿಗಳನ್ನು ಈಗ ಪರಿಶೀಲಿಸ ಬಹುದು-

ವರಾಹಮಿಹಿರನ ಕಾಲವನ್ನು ಕ್ರಿ. ಶ. ೫೦೫ ಎಂದು ಆತನ ಕೃತಿಗಳಾದ ೧) ಬೃಹಜ್ಜಾತಕ ೨) ಲಘುಜಾತಕ ಮತ್ತು ಬೃಹತ್ ಸಂಹಿತೆ ಹಾಗೂ ಪಂಚಸಿದ್ಧಾಂತಿಕಾಗಳ ಆಧಾರದಿಂದ ಗುರುತಿಸಲಾಗಿದೆ. ಕಾಲವನ್ನು ಗುರುತಿಸುವಲ್ಲಿ ಗ್ರಹಣಗಳು ಗುಣಾಕಾರಕ್ಕೆ ತಕ್ಕಂತೆ ಪ್ರಕೃತಿಯಲ್ಲಿ ಒದಗಿಬರುತ್ತಿರುವುದರಿಂದ 'ದೃಗ್ಗಣಿ'ತವು ಪ್ರಾಯಶಃ ಗ್ರಹಣಗಳ (ಸೂರ್ಯ ಮತ್ತು ಚಂದ್ರ ಗ್ರಹಣಗಳು) ಪರಿಶೀಲನೆಯಿಂದ ಪ್ರಾರಂಭವಾಗಿರಬಹುದು. ಅದಕ್ಕೆ ಹೊಂದಿದಂತೆ ಒಂದೊಂದು ದಿನವೂ ಅಳತೆಗೆ ಸಿಗಬೇಕಾಗುತ್ತದೆ.

ಮೊದಲನೆಯ ಉದಾಹರಣೆಯಾಗಿ ಐಹೊಳೆ ಶಾಸನ - ಇಮ್ಮಡಿಪುಲಕೇಶಿಯದು - ಇದರಲ್ಲಿ ಕಾಲಮಾನವು ಒಗಟಿನಂತೆ ರೂಪಿತವಾಗಿದೆ.

> ಚಂಜನ್ನೀರಚ ನೀಲ ನೀರ ಪರಿಖಾಮ್ ಸತ್ಯಾಶ್ರಯೋ ಶಾಸತಿ ॥
> ತ್ರಿಂಶತ್ಸು ತ್ರಿಸಹಸ್ರೇಷು ಭಾರತಾದಾಹವಾದಿತಃ।
> ಸಪ್ತಾಬ್ದ ಶತಯುಕ್ತೇಷು ಶತೇಷ್ವಬ್ದೇಷು ಪಂಚಸು ॥
> ಪಂಚಾಶತ್ಸು ಕಲೌಕಾಲೇ ಷಟ್‌ಸು ಪಂಚಾತಾಸು ಚ।
> ಸಮಾಸು ಸಮತೀತಾಸು ಶಕಾನಾಮಪಿ ಭೂಭುಜಾಮ್ ॥
> ತಸ್ಯಾಂಬುದ್ಧಿತ್ರಯನಿವಾರಿತ ಶಾಸನಸ್ಯ ತ್ಯಾಶ್ರಯಸ್ಯ.... ಇತ್ಯಾದಿ

ಇದು ಸತ್ಯಾಶ್ರಯನ ದಿಗ್ವಿಜಯ ಪ್ರಶಸ್ತಿಯ ಶಾಸನ - ಇವರ ಕಾಲ - ಶಕ ೫೫೬. ಭಾರತ ಯುದ್ಧದಿಂದ ೩೭೩೫ ವರ್ಷಗಳು ಸಂಧಿಸಿದ ಕಲಿಕಾಲದಲ್ಲಿ ಅಂದರೆ ಕಲಿಯುಗ ೩೭೩೫ನೇ ವರ್ಷ : ಕ್ರಿ. ಶಕ ೬೩೪.

ಈ ವಿವರದಿಂದಾಗಿ ವರಾಹಮಿಹಿರನ ಲೆಖ್ಖಾಚಾರದ ಅರಿವು ಬಾದಾಮಿ ಚಾಲುಕ್ಯರ ಈ ಶಾಸನದ ವೇಳೆಗೇ ಇದ್ದಿರಬಹುದಾಗಿದೆ-ಏಕೆಂದರೆ ಇಂಥ ಲೆಖ್ಖಾಚಾರವನ್ನು ಆತನು ತನ್ನ ಬೃಹಜ್ಜಾತಕದಲ್ಲಿ ಗುರುತಿಸುತ್ತಾನೆ ಮತ್ತು ಆರ್ಯಭಟನು ರಚಿಸಿದ್ದ ಆರ್ಯಭಟೀಯಂ-ದಂತೆ ಕಟಪಯಾದಿ ಕಾಲನಿರ್ಣಯ ರೀತಿಗೆ ತೊಡಗುತ್ತಾನೆ.

ಆದರೆ ವರ್ಷಕ್ಕೆ ಎರಡು ಅಯನಗಳೆಂದು ಆತನು ಗುರುತಿಸಿದ್ದರೂ ಕೂಡ ಚಾಲಕ್ಯ ಶಾಸನಗಳಲ್ಲಿ ಅದರ ಗುರುತು ಕಾಣುವುದಿಲ್ಲ - ತಿಥಿವಾರ ನಕ್ಷತ್ರ ಕೂಡ ಮೇಲಿನ ಶಾಸನ ದಲ್ಲಿಲ್ಲ !

ನಮ್ಮ ಶಾಸನಗಳು ಮುಖ್ಯವಾಗಿ ದಾನಶಾಸನಗಳು - ವೀರಗಲ್ಲುಗಳು ಕೂಡ ಇದಕ್ಕೆ ಹೊರತಲ್ಲ-ಆದುದರಿಂದ ದಾನಮಾಡುವ ಸಂದರ್ಭವನ್ನು ದಾನಶಾಸನಗಳಲ್ಲಿ ಗುರುತಿಸಲು ಗ್ರಹಣ (ಸೂರ್ಯ ಅಥವಾ ಚಂದ್ರ ಗ್ರಹಣಗಳು) ಮತ್ತು ಸಂಕ್ರಮಣಗಳನ್ನು ಕಾಯುತ್ತಿದ್ದಿರಬಹುದಾಗಿದೆ ಉತ್ತರಾಯಣ ಅಥವಾ ದಕ್ಷಿಣಾಯನಗಳು ಇದಕ್ಕೆ ಗುರುತಾಗಿರುವಂತೆ ಕಂಡು ಬರುತ್ತದೆ. ಉತ್ತರಾಯಣವಾದಲ್ಲಿ 'ಸಂಕ್ರಾಂತಿ'ಯ ಗುರುತು ಮುಖ್ಯ. ಇಂತಹ ಒಂದು ಶಾಸನವನ್ನು ಹಿರೇಹಡಿಗೋಳ್ - ಗದಗ, ಧಾರವಾಡ ಜಿಲ್ಲಾ-ಉಡಚವ್ವನ ದೇಗುಲದ ಬೊಟ್ಟಿಗ ದೇವನ ಶಾಸನ ಕ್ರಿ. ಶ. ೯೭೦ - ಇದೇ ಮೊದಲಿನದಾದೀತು. ಇದರಲ್ಲಿ ೧ ಶಕವರ್ಷ ೮೯೩ನೆಯ ಪ್ರಮಾದಿ ಸಂವತ್ಸರ

ವುತ್ತರಾಯಣ ಸಂಕ್ರಾನ್ತಿಯನ್ನು

ಇಲ್ಲಿ ಪುಲಿಕೇಶಿಯ ಶಾಸನಕ್ಕೂ ಇದಕ್ಕೂ ಕಾಲ ಸೂಚಿಯಲ್ಲಿ ಒಂದು ವಿಶೇಷವನ್ನು ಗುರುತಿಸಬಹುದು. ಅದು 'ವುತ್ತರಾಯಣ ಸಂಕ್ರಾನ್ತಿ' ಎಂಬುದು ಅಂದರೆ ಕಾಲಗಣನೆಗೆ ಇಲ್ಲಿಂದ ಮುಂದೆ 'ಅಯನ'ವು ಸೇರುತ್ತದೆ ಆದುದರಿಂದ ಬೊಟ್ಟಿಗ ದೇವನ ಕಾಲದಲ್ಲಿ 'ಅಯನ'ವನ್ನು ಗುರುತಿಸುವ ಪದ್ಧತಿ ಜಾರಿಗೆ ಬಂದಂತೆ ಎನ್ನುವಾಗ ಅಂಥ ಸಾಧನವೊಂದು ಇರ ಬಹುದಷ್ಟೆ- ಏಕೆಂದರೆ ಸೂರ್ಯ ಚಲನೆಯನ್ನು ಆತನ ಉದಯ ಕಾಲದಲ್ಲಿ ಗುರುತಿಸದೇ ಈ ಕಾಲ ನಿರ್ಣಯವು ಸಾಧ್ಯ ವಾಗಲಾರದು- ಇಂಥ ಅವಕಾಶವನ್ನು ಶೃಂಗೇರಿಯ ವಿದ್ಯಾಶಂಕರ ದೇಗುಲದಲ್ಲಿ ಗುರುತಿಸಬಹುದು - ಇಂದಿಗೂ ಶೃಂಗೇರಿಯ ಪಂಚಾಂಗವು ಉತ್ತರಾಯನ ಮತ್ತು ದಕ್ಷಿಣಾಯನಗಳನ್ನು ಕುರಿತದ್ದಾಗಿದೆ ಎಂದ ಮೇಲೆ ಇಂದಿನ ಪಂಚಾಂಗವು ಅಚ್ಚು ಕೂಟದಿಂದ ಸಾಧ್ಯವಾಗಿರುವಲ್ಲಿ ಕೂಡ ಈ ಹಳೆಯ ಪದ್ಧತಿಯು ಉಳಿದುಬಂದಿದೆ. **

ಹೀಗೆ ಅಯನ ಮತ್ತು ಸೂರ್ಯಗ್ರಹಣಗಳನ್ನು ಗುರುತಿಸುವ ಪದ್ಧತಿಯನ್ನು ಮುಂದೆ ಕಲ್ಯಾಣಿ ಚಾಲುಕ್ಯರ ಶಾಸನಗಳಲ್ಲಿ ಗುರುತಿಸಬಹುದಾಗಿದೆ.

i. ಈಗ ಕಲ್ಯಾಣಿ ಚಾಲುಕ್ಯರ ೧ನೇ ಸೋಮೇಶ್ವರನ ಕ್ರಿ. ಶ. ೧೦೩೨ ಶಾಸನದಲ್ಲಿ :

-ಸಕವರ್ಷ ೯(೫)೫ ನೆಯ ಅಂಗೀ(ರಸ) ಸಂವತ್ಸರದ ಪೌಷ್ಯ, ಸುದ್ದ ದಸಮಿ ಆದಿತ್ಯವಾರ ಉತ್ತರಾಯಣ ಸಂಕ್ರಾಂತಿಯುಳ್....

ii. ಇಮ್ಮಡಿ ಸೋಮೇಶ್ವರನ ಕ್ರಿ. ಶ. ೧೦೭೧ರ ತಮ್ಮಡಿ ಕಲ್ಲಾಳದ ಶಾಸನ : ಇದನ್ನು ಬನವಾಸಿಯ ದಾಳಿಯ ಶಾಸನವೆನ್ನು ವುದೂ ಉಂಟು.

– ಸಕವರ್ಷ ೯೯೩ನೆಯ ವಿರೋಧಿಕೃತ್ಸಂವತ್ಸರದ ಆಶಾಢ ಶುದ್ದ ೫ ಆದಿ.......

ಕೊನೆಗೆ ಶಾಸನ ಬರೆದವನು – ಬರೆದಂ ಸನ್ಧಿವಿಗ್ರಹಿ ರಾ(ಧಿ) ಮಯ್ಯಂ

iii. ಇಮ್ಮಡಿ ಸೋಮೇಶ್ವರನ ಕ್ರಿ. ಶ. ೧೦೭೪ (ನರಗುಂದದ ಶಾಸನ.)

– ಸಕವರ್ಷ (೯೯೬)ನೆಯ ಆನನ್ದ ಸಂವತ್ಸರದ ಸುದ್ದ ೫ ಬುಧವಾರ ಮುತ್ತರಾಯಣ ಸಂಕ್ರಾನ್ತಿ...

iv. ಆರನೇ ವಿಕ್ರಮಾದಿತ್ಯನ ಕ್ರಿ. ಶ. ೧೦೭೮ರ (ನರಗುಂದ ಶಾಸನ)

(ಮೂಲಸ್ಥಾನ ದೇವರಿಗೆ ದಾನ) .... ಕಾಳಯುಕ್ತ ಸಂವತ್ಸರಮಾಗೆ ಪುಷ್ಯ ಮಾಸೋತ್ತರಾಯಣ ಸಂಕ್ರಮಣ ಮಹೋತ್ತಮ ತಿಥಿಯೊಳ್

–ಹೀಗೆಯೇ ಮುಖ್ಯ ಶಾಸನಗಳಲ್ಲಿ ಉತ್ತರಾಯಣವನ್ನು ಗುರುತಿಸುತ್ತಾ ಹೋಗುವುದನ್ನು ಕಾಣಬಹುದು.

ಆದುದರಿಂದ ಇಂಥ ಒಂದು ಬಗೆಯು ಸೋಮೇಶ್ವರ ಒಂದನೇ ಕಾಲದಿಂದ ನಿಶ್ಚಿತವಾದಂತಿದೆ.

ಹೀಗೆ ಉತ್ತರಾಯಣವನ್ನು ಗುರುತಿಸುವ ಪದ್ಧತಿಯು ಬನವಾಸಿ ಕದಂಬರಲ್ಲಾಗಲಿ ರಾಷ್ಟ್ರಕೂಟರಲ್ಲಾಗಲಿ ಕಂಡು ಬರುವುದಿಲ್ಲ. ಇಲ್ಲಿ ಖೊಟ್ಟಿಗದೇವನೇ ಮೊದಲನೆಯವನೆಂದು ಬೇಕಾದರೆ ಹೇಳಬಹುದು.

ರಾಷ್ಟ್ರಕೂಟರ ಕಾಲಕ್ಕೆ ಅಂಟಿದಂತೆ ಅರಿಕೇಸರಿಯ ಕಾಲದ ಪಂಪನು ತನ್ನ ಆದಿಪುರಾಣಂ ಕಾವ್ಯದಲ್ಲಿ ಕಾಲವನ್ನು–

ಶಕವರ್ಷಮೆಂಟುನೂಱ
ಕ್ಕೆ ಕಡೆಯಾಳಱುವತ್ತು ಮೂರು ಸಂದುದು ಜಗತ್- ॥
ಪ್ರಕಟ ಪ್ಲವ ಸಂವತ್ಸರ -
ದಕಾರ್ತ್ತಿಕಂ ಮುದಮನೀಯೆ ನಂದೀಶ್ವರದೊಳ್ ॥ ೭೬ ॥
ಸಿತಪಕ್ಷದ ಪಂಚಮಿ ದಿನ -
ಪತಿವಾರಂ ಶುಭದ ಮೂಲನಕ್ಷತ್ರದೊಳ - ।
ನ್ನಿತಮಾಗೆ ನೆಗಟ್ಟುದೀಮ - ।
ತ್ಕೃತಿ ಜಗದೊಳ್‌ಪುದಿದು ಸಾಗರಾಂತಕ್ಷಿತಿಗೊಳ್ ॥ ೭೭ ॥

– ಇಲ್ಲಿ ಶಕವರ್ಷ ೮೬೩, ಪ್ಲವಸಂವತ್ಸರ, ಕಾರ್ತಿಕ ಮಾಸ, ಸಿತಪಕ್ಷ, ಪಂಚಮಿ, ದಿನಪತಿವಾರ, ಮೂಲನಕ್ಷತ್ರದೊಳ್, ಎಂದಿರುವುದರಿಂದ 'ಯೋಗ' ಮತ್ತು 'ಕರಣ'ಗಳನ್ನುಳಿದು ಕಾಲದ ವಿವರವಿದೆ. ಏಕೆಂದರೆ ಯೋಗ ಮತ್ತು ಕರಣಗಳ ಬಗ್ಗೆ ನಿಶ್ಚಿತವಾದ ನಿಲುವನ್ನು ಶಾಸನ ತಜ್ಞರು ಇನ್ನೂ ತಳೆದಂತೆ ಕಾಣುವುದಿಲ್ಲ. (ಇದರ ವಿವರಕ್ಕೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿದ್ದ ಭಾಸ್ಕರಾಚಾರ್ಯ II ನ 'ಗಣಿತ'ವನ್ನು ಗಮನಿಸಬೇಕಾಗುತ್ತದೆ.)

ವಿವೇಕ ಚಿಂತಾಮಣಿ (ನಿಜಗುಣ ಯೋಗಿವಿರಚಿತ)ಯಲ್ಲಿ ಕಾಲಮಾನವೆಂದರೆ 'ಕಲಿಯುಗೇ ಪ್ರಥಮಪಾದೆ' ಎಂದು ಹೇಳುವಲ್ಲಿ ಜಂಬೂದ್ವೀಪೇ- ಭರತವರ್ಷೆ ಭರತಖಂಡೇ ಇತ್ಯಾದಿ ಭೌಗೋಲಿಕ ವೆನ್ನಬಹುದಾದ ಒಕ್ಕಣೆಯೂ ಸೇರುತ್ತದೆಯಷ್ಟೆ ಅಂದರೆ 'ಕಾಲಮಾನದ ಒಕ್ಕಣೆ'ಯು ಇದರಿಂದ ನಿಶ್ಚಿತರೂಪ ತಾಳಿತೆಂದು ಹೇಳಬಹುದು- ಆದರೆ ಇದಕ್ಕೆ ಕಲ್ಯಾಣ ಚಾಲುಕ್ಯರ ಕಾಲದ ಬಿಜ್ಜಳನ ಸಹವಾಸಿ ಗಣಿತಜ್ಞ ಎರಡನೆಯ ಭಾಸ್ಕರಾಚಾರ್ಯನದೇ ಮುಖ್ಯವಾಗಿ ಗಣಿತದ ವಿವರಗಳು ಅಧಿಕವಾಗಿರುವಂತೆ ಕಂಡುಬರುತ್ತದೆ. ಇದಕ್ಕಾಗಿ ಅವರು ಸಿದ್ಧಾಂತ ಶಿರೋಮಣಿ ಮತ್ತು ಕರಣ ಕುತೂಹಲ - ಎಂಬ ಎರಡು ಗ್ರಂಥಗಳನ್ನು ರಚಿಸಿರುತ್ತಾರೆ. ಸಿದ್ಧಾಂತ ಶಿರೋಮಣಿಯಲ್ಲಿ ಬರುವ ಈ ಶ್ಲೋಕವನ್ನು ಗಮನಿಸಿರಿ–

ಆಸೀತ್ಸಹ್ಯ ಕುಲಾಚಲಾಶ್ರಿತ ಪುರೇ ತ್ರೈವಿದ್ಯ ವಿದ್ವಜ್ಜನೇ
ನಾನಾ ಸಜ್ಜನಧಾಮ್ನಿ ಬಿಜ್ಜಡಬಿಡೇ ಶಾಂಡಿಲ್ಯ ಗೋತ್ರೋ ದ್ವಿಜ
ಶ್ರೌತ ಸ್ಮಾರ್ತಕ ವಿಚಾರಸಾರ ಚತುರೋ ನಿಃಶ್ಶೇಷ ವಿದ್ಯಾನಿಧಿಃ
ಸಾಧೂನಾ ಮವಧಿರ್ಮಹೇಶ್ವರ ಕೃತೀ ದೈವಜ್ಞ ಚೂಡಾಮಣಿಃ ॥

–ಹೀಗೆ ಅದನ್ನು ತನ್ನ 'ಪ್ರವರ ಸಮೇತ' ವಿವರಗಳನ್ನು ನೀಡಿದ್ದಾನೆ. ತಾನು ರಚಿಸುದುದು 'ಬೀಜಗಣಿತ'ವೆಂದೂ 'ವಿದಗ್ಧ ಗಣಕ ಪ್ರೀತಿಪ್ರದಂ ಪ್ರಸ್ಫುಟಂ। ಎಂದೂ ಹೇಳಿರುವುದಲ್ಲದೆ ಕಾಲಮಾನವನ್ನು ಕೊಡುವಲ್ಲಿ

'ರಸಗಣಪೂರ್ಣ ಮಹೀಸಮಶರ ನೃಪ ಸಮಯ್ಯೇಽ ಭವನ್ಮ ಮೋತ್ಪತ್ತಿಃ॥

ರಸಗಣ ವರ್ಷೇಣ ಮಯಾ ಸಿದ್ಧಾಂ ಶಿರೋಮಣೀ ರಚಿತಃ ॥

ಎಂದಿದ್ದಾನೆ - ಇದರಿಂದ ಈ ಗ್ರಂಥದ ಹಾಗೂ ಈತನ ಕಾಲವನ್ನು ಕ್ರಿ.ಶ.ಸು. ೧೧೫೦ ಎಂದು ಗುರುತಿಸಲಾಗಿದೆ.

–ಸಂವತ್ಸರದ ಅಳತೆಯನ್ನು ಭಾಸ್ಕರರು ಬಹಳ ಸ್ಫುಟವಾಗಿ (accurate) ಹೇಳಿದ್ದಾರೆ. ಪಂಚಾಂಗ ರಾಮಾಸ್ಥಿತಯಃ ಬರಾಮಃ ಸಾರ್ಧ ದ್ವಿದಸ್ರಾಃ ಕುದಿನಾದ್ಯ ಮಬ್ದೇ ಎಂಬುದರಿಂದ

ಸಂವತ್ಸರಗಳಲ್ಲಿ ೩೬೫ ದಿನಗಳೂ ೧೫ ನಾಡಿ ೩೦ ಪಲ ೩೩% ವಿಪಲಗಳು ಇರುವುವು (೬೦ ವಿಪಲಗಳಿಗೊಂದು ಪಲ, ೬೦ ಪಲಗಳಿಗೆ ೧ ನಾಡಿ, ೬೦ ನಾಡಿಗಳಿಗೆ ೧ ದಿನ) – ಇದನ್ನು ಕಂಡು ಹಿಡಿಯುವ ರೀತಿಯನ್ನು ಗ್ರಹಗಣಿತದಲ್ಲಿ (ಹೀಗೆ) ವಿವರಿಸಿದ್ದಾರೆ.

– ಚಾಂದ್ರಮಾಸದ ಪ್ರಮಾಣವನ್ನು ತಿಳಿಸುವಲ್ಲಿ

ಕಾಲೇನಯೇನ್ಯತಿ ಪುನಃ ಶಶೀನಂ ಕ್ರಾಮನ್ ಭಚಕ್ರಂ
ವಿರೇಣಗತ್ಯೋಃ।
ಮಾಸಃ ಸಚಾಂದ್ರೋಂಕ ಮಮಾಃ ಕುರಾಮಾಃ
ಪೂರ್ಣೇಷವಸ್ತತ್ಕುದಿನ ಪ್ರಮಾಣಂ॥

ತಾತ್ಪರ್ಯ – ಚಂದ್ರನು ಆಕಾಶದಲ್ಲಿ ಸಂಚರಿಸುತ್ತಾ ಸೂರ್ಯನ ಜೊತೆಗೆ ಬಂದು, ಗತಿ ವ್ಯತ್ಯಾಸದಿಂದ ಪೂರ್ವದ ಕಡೆ ಚಲಿಸಿ, ಪುನಃ ಸೂರ್ಯನ ಜೊತೆಗೆ ಬರಲು ಹಿಡಿಯುವ ಕಾಲವೇ ಚಾಂದ್ರಮಾಸ (ಎರಡು ಅಮಾವಾಸ್ಯೆಗಳ ಕಾಲಾಂತರ) ಈ ಮಾಸದಲ್ಲಿ ೨೯ ದಿನಗಳು ೩೧ ನಾಡಿ (ಘಳಿಗೆ) ೫೦ ವಿ ಘಳಿಗೆಗಳೂ ಇರುವುವು..

ಸ್ಥಳೀಯ ಕಾಲವನ್ನು ತಿಳಿಯಲು ದೇಶಾಂತರಾನಯನವನ್ನು ಮಾಡಬೇಕಾಗುತ್ತದೆ. ಭಾರತ ಭೂಮಿಗೆ ಮುಖ್ಯವಾದ ಮಧ್ಯರೇಖೆ ಉಜ್ಜನಿಯ ಮೇಲಿರುವುದು. ಅಲ್ಲಿಂದ ಇತರ ಪ್ರದೇಶಗಳ ರೇಖಾಂಶಗಳನ್ನು ಕಂಡುಹಿಡಿಯುವರು.

– ಹೀಗೆ ರಾಹುಕೇತು ವಿಚಾರ; ಋತುವರ್ಣನೆಯಲ್ಲಿ ಆರು ಋತುಗಳನ್ನು (ಇತ್ಯಾದಿ ವಿವರ ಸಮೇತ) ಪ್ರಾಚೀನ ಶಾಸ್ತ್ರಗಳನ್ನು ಕಾಲಾನುಗುಣವಾಗಿ ಸ್ಫುಟಮಾಡಿ, ಭರತಖಂಡದಲ್ಲಿ ಹುಟ್ಟಿದ ಶಾಸ್ತ್ರಗಳು ಇಲ್ಲಿಯೇ ನಷ್ಟವಾಗದಂತೆ ಅವುಗಳ ಸಾರವನ್ನುದ್ಧರಿಸಿ, ಜೀರ್ಣೋದ್ಧಾರ ಮಾಡಿದ ಕೀರ್ತಿಯು ಭಾಸ್ಕರಾಚಾರ್ಯರಿಗೆ ಸಲ್ಲುವುದು– (ಈ ಒಕ್ಕಣೆಯನ್ನು ವಿವರಗಳೊಡನೆ 'ನಾಲ್ವರು ಸಿದ್ಧಾಂತಿಗಳು' ಎಂಬ ಎನ್. ಕೆ. ನರಸಿಂಹಮೂರ್ತಿ ಎಂ.ಎಸ್ ಸಿ. ಇಂಟರ್‌ಮೀಡಿಯೆಟ್ ಕಾಲೇಜ್, ಮೈಸೂರು ಇವರ ಗ್ರಂಥದಿಂದ ಉದ್ಧರಿಸಲಾಗಿದೆ – ಇದರ ಕಾಲ ೧೯೩೫).

ಇಲ್ಲಿಂದ ಮುಂದಕ್ಕೆ ಶಾಸನಗಳ ಕಾಲಮಾನ ವಿವರಗಳು ಖಚಿತವಾಗಿ ಬಂದಿರುವಂತಿದೆ. ಇದರ ಜೊತೆಗೆ ಸೂರ್ಯ (ವಿಗ್ರಹ) ಆರಾಧನೆಯು ವಿಪುಲವಾದಂತೆ ಕಂಡಬರುತ್ತದೆ. ಬಳ್ಳಿಗಾವೆಯಲ್ಲಿ ಸೂರ್ಯವಿಗ್ರಹಗಳ ವಿಶೇಷವನ್ನು ಇಂದಿಗೂ ಗುರುತಿಸ ಬಹುದಾಗಿದೆ.

ಇಂತಹ ಶಾಸ್ತ್ರಗಳ ರಚನೆ ಮತ್ತು ಓಲೆಗಳಲ್ಲಿ ರಕ್ಷಣೆಯನ್ನು ಅಗ್ರಹಾರಗಳಲ್ಲಿ ಕಾಣಬಹುದಾಗಿದ್ದಿತು. ಈ ಸ್ಥಳಗಳಲ್ಲಿ ಒಂದು ಮುಖ್ಯ ದೇಗುಲ ಮತ್ತು ಬ್ರಾಹ್ಮಣರ ವಸತಿಗಳು ಇರುತ್ತಿದ್ದುವು. ಅಲ್ಲದೆ ನೀರಿನ ಆಸರೆಯಾಗಿ ಒಂದು ತಟಾಕವೂ ಇರುತ್ತಿದ್ದಿತು. ಗುರುಕುಲಗಳು ಇಲ್ಲಿ ವಿದ್ಯಾಭ್ಯಾಸವನ್ನು ನೀಡುತ್ತಿದ್ದುವು. ಆದುದರಿಂದ ಕಾಲಮಾನಕ್ಕೆ ಅವಶ್ಯವಾದ ಸಾಧನಗಳನ್ನು ಇಲ್ಲಿಯೇ ಕಾಣಬಹುದಾಗಿದ್ದಿತು. ಪ್ರತಿದಿನದ 'ಸಮಯ'ವನ್ನು ಗುರುತಿಸುವಲ್ಲಿ ಯಾರೇ ಆಗಲಿ ನೆರಳಿನ ಅಳತೆಯನ್ನು ಆತನ ಹೆಜ್ಜೆಗಳಿಂದ ಅಳೆದು ನಿರ್ಧರಿಸುವುದೂ 'ಘಟಕ'ಗಳಿಂದ ಘಳಿಗೆಗಳನ್ನು ಅಧಿಕೃತವಾಗಿ ನೀರುತುಂಬಿದ ಮಡಕೆಗಳ ಸಾಧನದಿಂದ ಅಳೆಯುತ್ತಾ ಹೋಗುವುದು ಇತ್ಯಾದಿ 'ಸಂಕಲ್ಪ'ದ ವಿವರಗಳನ್ನು ಯಾವುದೇ ಶುಭ (ಅಶುಭ) ಕಾರ್ಯಗಳಲ್ಲಿ ಒಕ್ಕಣೆಯಾಗಿ ಹೇಳುವುದೂ ನಿಶ್ಚಿತವೂ ನಿಖರವೂ ಆಗಿರುವಂತೆ ನೋಡಿಕೊಳ್ಳುವುದೂ – ಈ ಅಗ್ರಹಾರಗಳಿಗೆ ಹಿರಿಮೆಯನ್ನು ತಂದುಕೊಟ್ಟಂತೆ ಕಂಡುಬರುತ್ತದೆ. ಇಂಥ ಕೇಂದ್ರಗಳು ವಿದ್ಯಾಭ್ಯಾಸಕ್ಕೆ (ಗುರುಕುಲ ಮುಖೇನ) ನಿಶ್ಚಿತವಾದಂತೆಯೇ 'ಓಲೆ ಭಂಡಾರ'ಗಳಿಗೂ ಆಗರವಾಗಿದ್ದುವು. ಇಂಥ ಒಂದು ಕೇಂದ್ರವು ಶೃಂಗೇರಿಯಾಗಿದ್ದಿತು.

★ ★ ★

ಶೃಂಗೇರಿಗೆ ಸು. ಕ್ರಿ. ಶ. ಸು. ೧೨೬೪ರ ಶಾಸನವೊಂದು ಸಿಂಗೇರಿ– ಎಂದು ಹೆಸರಿಸಿದೆ– (ಆಂಜನೇಯ ಸ್ವಾಮಿ ಗುಡಿಯ ಶಾಸನ ಶೃಂಗೇರಿ) ಅದಕ್ಕೂ ಹಿಂದಿನ ಶಾಸನಗಳು ನಷ್ಟವಾಗಿವೆ. ಆಗ ಈ ಭಾಗವು ಸಾಂತಳಿಗೆ ನಾಡಿಗೆ ಸೇರಿದ್ದಿರಬೇಕೆಂಬುದಕ್ಕೆ ಹುಂಬಚದ ಶಾಸನಗಳು ಸೂಚಿಸುತ್ತವೆ.

ಕಿಗ್ಗದ ಶೃಂಗೇಶ್ವರ ದೇವಸ್ಥಾನದ ಸು. ಕ್ರಿ. ಶ. ೬೭೫ರ [(ಪಟಗನ್ನಡ) – ಕವಿರಾಜಮಾರ್ಗಕಾರನು ಸೂಚಿಸುವಂತೆ)] ಶಾಸನವು – ಇದರಲ್ಲೊಂದು 'ಅರಮನೆ ತಾಣ'ವೂ ಇದ್ದು 'ಸೇನಪರ ಸುರುಂ ಧರ್ಮಗರಣಿಗೆಗರುಂ' ಎಂಬ ಹೆಸರುಗಳು ಬರುವುದರಿಂದ ತಿಳಿಯುವುದಲ್ಲದೆ ಅದೇ ಶಾಸನದಲ್ಲಿ ''ಆಳು ಅರಸರ್, ಗುಣಸಾಗರಾದ್ವಿತೀಯ ನಾಮಧೇಯನ್ ಕದಂಬ ಮಂಡಲಮನಾಳುತ್ತುಂ ಆಳು ಅರಸರುಂ ಮಹಾದೇವಿಯರುಂ ಚಿತ್ರವಾಹನರುಂಕುನ್ದವರ್ಮ್ಮರಸಂ ಮುದಿಮೆಗೆಯೆ ಕಿಟ್ಗಾನ ದೇವಕೆ…'' ಎಂಬ ವಿವರಗಳ ದೊರಕುವುದನ್ನೂ ಗಮನಿಸ ಬಹುದು… ಆದುದರಿಂದ ಈ ಭಾಗವು ಕದಂಬರು, ಆಳುಅರಸರು ಮತ್ತು ಸೇನ್ವರೂ ಸೇರಿದಂತೆ ಪ್ರಸಿದ್ಧಿಗೆ ತಂದ – ಇತಿಹಾಸದ ವಿಷಯಗಳೂ ಸೇರುತ್ತವೆ.

ಹೊಂಬುಜದ ಸಾಂತರಸಾ ಎಂಬ ಅರಸು ಕ್ರಿ. ಶ. ಸು. ೭೦೦ರ–EC. VI, ಮರಿಕೊಪ್ಪ ೩೯– ಶಾಸನದಲ್ಲಿ ೧೫ ಪಾಶುಪತ ಮರಿಯುದೆಯಾ ಎಂಬ ವಿಚಾರವೂ ಬರುವುದನ್ನು ಮರೆಯುವಂತಿಲ್ಲ–

–ಬನವಾಸಿಯ ಕದಂಬರು ಸೂರ್ಯರಾಧಕರೆಂಬುದಕ್ಕೆ ಬೇರೆಯ ಆಧಾರಗಳು ಬನವಾಸಿಯಲ್ಲಿ ಸಿಕ್ಕುತ್ತವೆ……

– ಹೊಂಬುಜದ ೨೫ VIII ನಗರ ಕ್ರಿ. ಶ. ೧೦೬೬ರ ಶಾಸನವು (ಚಂದ್ರಪ್ರಭ ಬಸ್ತಿಯ ಹೊರ ಭಿತ್ತಿಯ ಮೇಲೆ). ತ್ರೈಲೋಕ್ಯಮಲ್ಲದೇವ – ಸಕವರ್ಷ ೯೮೭ನೆಯ ವಿಶ್ವಾವಸು ಸಂವತ್ಸರಂ ಪ್ರವರ್ತಿಸುತುಮಿರೆ.... ಮಾಘಮಾಸದ ಶುದ್ಧ ಪಂಚಮಿ ಸೋಮವಾರ ಮುತ್ತರಾಯಣ ಸಂಕ್ರಮಣದಂದು....

– ಮತ್ತೊಂದು ಹೊಂಬುಜದ ಶಾಸನ VII ನಗರ ಕ್ರಿ. ಶ. ೮೯೮.ದಲ್ಲಿ: ವಿಕ್ರಮಾದಿತ್ಯ ಶಾನ್ತರಂ ಶಕವರ್ಷ ಮೆಣ್ನುನೂ ಱಿಪ್ಪತ್ತನೆಯ ವರ್ಷಂ...

ಎಂಬ ಒಕ್ಕಣೆ ಯಿರುವುದನ್ನೂ ಗಮನಿಸಿದಲ್ಲಿ ಕಾಲಮಾನಕ್ಕೆ ಸಲ್ಲುತ್ತಿದ್ದ ಪ್ರಾಮುಖ್ಯವನ್ನೂ ಗುರುತಿಸಬೇಕಾಗುತ್ತದೆ. ಅಲ್ಲದೆ ಶೃಂಗೇರಿಗೆ ನೇರ ಸಂಬಂಧಿಸಿದಂತೆ ಉಳಿವೆ ಗ್ರಾಮದ ಕ್ರಿ. ಶ. ೧೪೧೯ರ ಒಂದು ಶಾಸನದಲ್ಲಿ 'ಉತ್ತರಾಯಣ ಸಂಕ್ರಾಂತಿ'ಯ ಒಕ್ಕಣೆ ಬರುತ್ತದೆ....

ಹೀಗೆ ಶೃಂಗೇರಿಯ ಪರಿಸರ ಸಮೇತ ಉತ್ತರಾಯಣ ಸಂಕ್ರಾಂತಿಯ ವಿಚಾರವು ಬರುವುದನ್ನು ಕುರಿತಲ್ಲಿ ಅಂತಹ ಸಾಧನವೊಂದು ಶೃಂಗೇರಿಯಲ್ಲೇ ಉಲ್ಲೇಖ ಇದ್ದಿರಬಹುದೆಂದು ಹೇಳಿದರೆ ತಪ್ಪಾಗಲಾರದು.

ಈಗ ಶೃಂಗೇರಿಯ ವಿದ್ಯಾಶಂಕರ (ದೇಗುಲ)ಕ್ಕೆ ಸೇರಿದಂತೆ ವಿವರಗಳನ್ನು ಅರಸಬಹುದು– ತುಂಗಾ ತೀರದಲ್ಲಿ ಈ ದೇಗುಲವು ಪೂರ್ವಾಭಿಮುಖವಾಗಿದೆ. ಬಾದಾಮಿ ಚಾಲುಕ್ಯರ ಶೈಲಿಯ ತೋರಣಗಳಿಂದ ವಿಶೇಷವಾಗಿ ಗಮನ ಸೆಳೆಯುವ ಮೂರು ಹಂತದಲ್ಲಿನ ಗೋಪುರದಂತೆ ಇವರ ವಿಮಾನವಿದೆ. ಇದಕ್ಕೆ ಎಂದರೆ ಕೆಳಗಿನ ಭಾಗಕ್ಕೆ ಆರು ಬಾಗಿಲುಗಳಿವೆ. ಗೋಪುರದಲ್ಲಿ ಕೂಡ ಪೂರ್ವ ದಿಕ್ಕಿಗೆ ತೆರೆದ ಮೂರು ಬಾಗಿಲುಗಳಿವೆ. ಮೇಲುಗಡೆಗೆ ಸೂರ್ಯನ ಪ್ರತಿಮೆಯೂ ಇದೆ:

೧. *ಇದು ಭೋಗಮಂದಿರವಿದ್ದಿರಬೇಕೆಂಬುದಕ್ಕೆ ಮುಂದಿನ ಮಂಟಪವು ಸಮಾನ ಚೌಕಗಳಿಂದ ಹಿಂದಿನ ಭಾಗಕ್ಕೆ ಅಂಟಿಕೊಂಡಿದೆ. ಹಿಂದಿನ ಭಾಗದಲ್ಲಿ ಗರ್ಭಗುಡಿ ಮತ್ತು ಅಂತರಾಳಗಳಿದ್ದು ಮುಂದಿನ ಭಾಗವನ್ನು ಸೇರಿಸಲಾಗಿದೆ ಎನ್ನುವಂತೆ ಒಂದು ಪ್ರದಕ್ಷಿಣಾ ಪಥವು ಗರ್ಭಗುಡಿಯನ್ನು ಬಳಸುತ್ತದೆ. (ಒಟ್ಟನಲ್ಲಿ ರಚನೆಯ 8ನ್ನು ಹೋಲುತ್ತದೆ).*

೨. *ಮುಂದಿನ ಬಾಗಿಲಿಂದ ಸೂರ್ಯೋದಯದಲ್ಲಿ (ನಂತರ ಸುಮಾರು ೧½ ಗಂ. ಕಾಲ) ಸೂರ್ಯ 'ಕಿರಣ'ವು ಹರಿದು ಗರ್ಭಗುಡಿಯ ಬಾಗಿಲು ದಾಟಿ (ಸ್ವಲ್ಪ ಕಾಲ ಮಾತ್ರ) ಪ್ರತಿಮೆ(ಈಶ್ವರ)ಯಿರುವ ಪಾನಬಟ್ಟಲನ್ನೂ ಮುಟ್ಟುತ್ತದೆ. ಆದರೆ ಹೀಗೆ ನೇರವಾಗಿ ಗರ್ಭಗುಡಿಯನ್ನು ಸೂರ್ಯಕಿರಣವು ಪ್ರವೇಶಿಸುವುದು ವರ್ಷದಲ್ಲಿ ಎರಡು ಬಾರಿ ಮಾತ್ರ. ಮೊದಲು ಉಗಾದಿಯಲ್ಲಾದರೆ (ಅಂದರೆ ಸಂಕ್ರಾಂತಿಗೆ ಮುಂಚೆ) ಮತ್ತೊಮ್ಮೆ ಆರು ತಿಂಗಳ ಅವಧಿಗೆ ಸರಿಯಾಗಿ – ಒದಗಿಬರುತ್ತದೆ.*

೩. *ವಿಶೇಷವೆಂದರೆ ಸಂಕ್ರಾಂತಿಗೆ (ಮಕರ ಸಂಕ್ರಮಣ) ಮಕರಸ್ತಂಭದ ಮೇಲೆ ಸೂರ್ಯೋದಯದ ಕಿರಣಗಳು ನೇರವಾಗಿ, ಮುಂದಿನ ಬಾಗಿಲ ಮೂಲಕ ಹರಿದು, ಬೀಳುತ್ತದೆ.*

೪. *ಗರ್ಭಗುಡಿಯು ಬಾಗಿಲುವಾಡದಲ್ಲಿ 'ಲಲಾಟದಲ್ಲಿ' ಬಾದಾಮಿ ಚಾಲುಕ್ಯರ ಕಾಲದ ಲಕ್ಷ್ಮಿಯ' ಗುರುತಿದೆ.... ಅದೇ ಅಂತರಾಳದ ಮುಂದಿನ ಬಾಗಿಲ ಲಲಾಟದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಗಜಲಕ್ಷ್ಮಿಯ ಕೆತ್ತನೆಯಿದೆ. ಅದೇ ಮುಂದಿನ ಭೋಗಮಂಟಪದ ಬಾಗಿಲಿನ ಲಲಾಟದಲ್ಲಿ ಖಚಿತವಾದ ಕಲ್ಯಾಣ ಚಾಲುಕ್ಯರ ಕಾಲದ ಗಜಲಕ್ಷ್ಮಿಯ ಕೆತ್ತನೆ ಸೇರಿದೆ. ಈ ಮೂರೂ ಬೇರಬೇರೆಯ ಕಾಲದವೆಂಬುದನ್ನು ಯಾರು ಬೇಕಾದರೂ ಗುರುತಿಸಬಹುದಾಗಿದೆ.*

೫. *ಭೋಗಮಂಟಪದ ಒಳಗಡೆಗೆ ರಾಶಿ ಸ್ತಂಭಗಳು ಹನ್ನೆರಡು ಆಯತಾಕಾರದಲ್ಲಿ ನಿಂತಿವೆ. ಒಂದೊಂದಕ್ಕೂ ರಾಶಿಯ, ಅಧಿದೇವತೆಯ ಹಾಗೂ ಮೇಲುಗಡೆಗೆ ಆದಿತ್ಯರ ಉಬ್ಬು ಶಿಲ್ಪಗಳಿವೆ. ಪ್ರತಿಕಂಬದ ಮಧ್ಯದಲ್ಲಿ ನವಗ್ರಹಗಳನ್ನು ಕ್ರಮವಾಗಿ ಕೆತ್ತಲಾಗಿದೆ. ಮಕರ ಸ್ತಂಭದಲ್ಲಿ ಶನಿ (ನಗ್ನ) ದೇವರ ಪ್ರತಿಮೆ (ಉಬ್ಬುಶಿಲ್ಪ)ಯಿದೆ.*

*ಉಗಾದಿಗೆ ನೇರ ಭೂಮಧ್ಯ ರೇಖೆಯನ್ನು ನೆನೆಯುವಂತೆ ಗರ್ಭಗುಡಿಯು ಪಾನಬಟ್ಟಲಿನವರೆಗೂ ಬೀಳುವುದರಿಂದ ಒಂದು ವರ್ಷವನ್ನು ಎರಡು ಅಯನಗಳಾಗಿ ಗುರುತಿಸಲು ಅನುಕೂಲವಿದೆ.*

೬. *ರಾಶಿ ಸ್ತಂಭಗಳು ಮಾನಸ್ತಂಭಗಳೂ ಆಗಿವೆ. ಪ್ರತಿ ಸಂಕ್ರಮಣಕ್ಕೂ ಈ ಸ್ತಂಭಗಳಿಗೂ ಉದಯ ಕಾಲದ ಸೂರ್ಯನ ಸಂಬಂಧವೂ ಇರುತ್ತದೆಯಷ್ಟೆ.*

೭. *ಇಡೀ ದೇಗುಲವನ್ನು ಒಂದು ವಿಶಾಲ ಚಾಚುಬಂಡೆಯ ಮೇಲೆ ನಿಲ್ಲಿಸಲಾಗಿದೆ (ರಚಿಸಲಾಗಿದೆ). ವಿದ್ಯಾರಣ್ಯರ ಕಾಲಕ್ಕೂ ಮುಂಚಿತವಾದ ರಚನೆಯೆಂಬುದು ಖಚಿತವಾಗಿದೆ. ಶೃಂಗೇರಿಯ ಪಂಚಾಂಗವು ಇದನ್ನು ಸೂಚಿಸುತ್ತಿದೆ. ಇಂಥ ಪಂಚಾಂಗಗಳು, ಉಳಿದ ಶಂಕರ ಸ್ಥಾಪಿತ ಮಠಗಳಲ್ಲಿಯೂ ಬಳಕೆಯಿದ್ದರೂ ಅವರಾರೂ ಅದನ್ನು 'ಪಂಚಾಂಗ'ವೆನ್ನದೆ 'ಜ್ಯೋತಿಷ' ವೆನ್ನುತ್ತಾರೆ. ಉಜ್ಜಯಿನಿಯಲ್ಲಿ ಕೂಡ ಈ ಮಾತು ಬಳಕೆಯಾಗಿದೆ. 'ಪಂಚಾಂಗ'ವೆಂದರೆ ಅಲ್ಲಿಯ ವಿದ್ವಾಂಸರಿಗೂ ತಿಳಿಯುವುದಿಲ್ಲ. ಕ್ಯಾಲೆಂಡರ್ ಎಂದರೆ ತಿಳಿಯುತ್ತದೆ. 'ಜ್ಯೋತಿಷ'ವೆಂದರೆ ಪ್ರಶ್ನೆಯೇ ಬರುವುದಿಲ್ಲ. (ಇದನ್ನು ಸ್ವತಃ ಜಗನ್ನಾಥ ಮತ್ತು ಉಜ್ಜಯಿನಿಗಳಲ್ಲಿ ಪರಿಶೀಲಿಸಿದ್ದೇನೆ).*

೮. *ಪಂಚಾಂಗ ಶ್ರವಣವೆಂಬ ಕಾರ್ಯಕ್ರಮವು ಶೃಂಗೇರಿಯ ಸ್ವಾಮಿಗಳಿಂದ ಉಗಾದಿಯ ದಿನ ಜರುಗುತ್ತದೆ. ಅದರ ಬಿಡುಗಡೆಯು 'ಪೂಜೆ'ಯಿಂದ ಕೂಡಿರುತ್ತದೆಯಷ್ಟೆ.*

*ಈ ಪಂಚಾಂಗದಲ್ಲಿ ಇಂದಿಗೂ ಉತ್ತರಾಯಣ ದಕ್ಷಿಣಾಯನಗಳನ್ನು ಮಠದ ಸದುಪಯೋಗಕ್ಕಾಗಿ ಗುರುತಿಸಲಾಗುತ್ತದೆ. ಇದನ್ನು ಮುಖ್ಯವಾಗಿ ಗುರುತಿಸುವ ಸಾಧನವೇ ವಿದ್ಯಾರಣ್ಯ*

ದೇಗುಲವಾಗಿದೆಯಷ್ಟೆ. (ಈಗ ಗರ್ಭಗುಡಿ ಯಲ್ಲಿ ಒಂದು ಲಿಂಗವಿದೆ - ವಾಸ್ತವವಾಗಿ ಸೂರ್ಯನ ಪ್ರತಿಮೆಯಿರ ಬೇಕಾಗಿದ್ದಿತು.)

೯. ಶೃಂಗೇರಿಯಲ್ಲಿ ಇಂದಿಗೂ ಒಂದು ಸೂರ್ಯ ವಿಗ್ರಹವು ಮಠದ ಕಡೆಯ 'ಮೆಣಸೆ' ಎಂಬ ಗ್ರಾಮಕ್ಕೆ ಸೇರಿದ ಒಂದು ತೋಟದಲ್ಲಿ ಈಗ ಉತ್ತರಾಭಿಮುಖವಾಗಿದೆ.

ಇದು ಬಹಳ ಹಳೆಯದೆನ್ನುವುದಕ್ಕೆ ಒಂದು ಪಾನಿ ಬಟ್ಟಲಿನಲ್ಲಿ ಕಮಲದ ಮೇಲೆ ಕುಳಿತ ಪ್ರತಿಮೆಯ ಎರಡೂ ಕೈಗಳಲ್ಲಿ ತಾವರೆಯ (ಅರಬಿರಿದ) ಹೂಗಳಿವೆ. ಕೆಳಗೆ ಪಾಣಿಬಟ್ಟಲ ಮೇಲಿರುವ ಶಾಸನವು ಈಗ್ಗೆ ಪೂರಾ ಸವೆದು ಯಾವುದೋ ಹೆಸರಿದ್ದಿರಬೇಕೆಂಬ ಅನುಮಾನವೂ ಮೂಡುತ್ತದೆ. ಅದಕ್ಕೂ ಕೆಳಗೆ ಈ ವಿಗ್ರಹವು ಸೂರ್ಯನೇ ಎಂಬುದನ್ನು ಸಮರ್ಥಿಸಲು ಸಪ್ತಾಶ್ವದ ಮೇಲೆ ಅರುಣನ (ಗೀರಿನಂಥ ಕೆತ್ತನೆ) ಉಬ್ಬು ಶಿಲ್ಪವಿದೆ. ಸೂರ್ಯನ ಪ್ರತಿಮೆಗೆ ಪ್ರಭಾವಳಿಯಿದೆ (ಇದು ಕುಳಿತ ಬುದ್ಧನ ಪ್ರತಿಮೆಯನ್ನು ನೆನಪಿಗೆ ತರಬಹುದಾಗಿದೆ). ವಿಗ್ರಹವು ಕೆಳಗಿನಿಂದ ಮೇಲುತುದಿಗೆ ನಾಲ್ಕು ಅಡಿಗಳಿರುವಂತಿದೆ.

ಈ ಸೂರ್ಯನಿಗೆ ಈಗ ಒಂದು ಮನೆಯನ್ನು (ಸಣ್ಣದು)ಕಟ್ಟಿದ್ದಾರೆ. ಇದಕ್ಕೆ ರಥಸಪ್ತಮಿಯಂದು ಸ್ವಾಮಿಗಳು ಸ್ವತಹ ಬಂದು ಪೂಜೆ ಸಲ್ಲಿಸುತ್ತಾರೆ. ಉಳಿದ ಕಾಲದಲ್ಲಿ ಒಬ್ಬರು ಮುಜರಾಯಿ ಇಲಾಖೆಯಿಂದ ಸಂಬಳ ಪಡೆಯುವ ಶಾಸ್ತ್ರಿಗಳಿದ್ದಾರೆ. ಈ ದೇಗುಲದ ಉತ್ಪತ್ತಿಗೆಂದು ಒಂದು ತೋಟವೇ ಇದೆ.

೧೦. ಈ ದೇಗುಲವು ಕೊರಡ್ಕಲ್ ಮನೆತನಕ್ಕೆ ಮೊದಲಿಗೆ ಸೇರಿದ್ದು ಈಗ ಅವರಾರೂ ಆ ಸ್ಥಳದಲ್ಲಿರುವುದಿಲ್ಲ. ಸುಮಾರು ೮೦ ವರ್ಷಗಳ ಹಿಂದೆ ಶಾಪಗ್ರಸ್ತವೆಂದು. ನಂಬಲಾದ ಈ ದೇಗುಲವನ್ನು ತೋಟದ ಸಮೇತ ಕೊರಡ್ಕಲ್ ಮನೆತನದವರು 'ಮಠ'ಕ್ಕೆ ವಹಿಸಿಕೊಟ್ಟರಂತೆ. (ಏತಕ್ಕೆಂದರೆ ಈ ಮನೆತನಕ್ಕೆ ಸಂತಾನದ ಲಾಭವಿರುವುದಿಲ್ಲ ಎಂಬ ಪ್ರತೀತಿಯಿದೆ. ಆದುದರಿಂದ ಈಗಿನ ಪೂಜಾರಿಗಳಿಗೆ ಇದು ತಿಳಿದಿದ್ದೂ ಆತಂಕವಾಗಿರಲಾರದು. ಅವರು ನೆಮ್ಮದಿಯಿಂದ ಬಾಳುತ್ತಿದ್ದಾರೆ. ಆದರೆ ಪೂಜೆಯಲ್ಲಿ ಅವರಿಗೆ ತುಂಬಾ ವಿಶ್ವಾಸವಿದೆ).

ಇನ್ನು ಕೊರಡ್ಕಲ್ ಎಂಬ ಸ್ಥಳನಾಮವು ಬಹಳ ಹಳೆಯದು. (ಶ್ರೀನಿವಾಸರಾಯರೆಂಬವರು ಬಹಳ ಪ್ರಸಿದ್ಧರಿದ್ದವರು ಈ ಮನೆತನದವರು) ಆದರೆ ಯಾವುದೇ ಶಾಸನದಲ್ಲೂ ಈ ಬಗ್ಗೆ ಸೂಚನೆ ದೊರಕುವುದಿಲ್ಲ. ಈ ವಿಗ್ರಹವು ನಾನು ಕಂಡಿರುವ ಸೂರ್ಯ ವಿಗ್ರಹಗಳಲ್ಲೆಲ್ಲಾ ಹಳೆಯದು. ಬಳ್ಳಿಗಾವೆಯ ಸೂರ್ಯ ವಿಗ್ರಹಗಳು ಸುಂದರವಾಗಿ ನಿಂತದ್ದವಾಗಿ ಉಷೆ, ಪ್ರತ್ಯುಷೆ, ಅಶ್ವಿನೀ ದೇವತೆಗಳು - ಪ್ರಭಾವಳಿಗೆ ಸೇರಿರುವಂತೆ ಇರುವಂಥವು (ಹಂಪೆಯಲ್ಲಿರುವ ಸೂರ್ಯನಿಗೆ ಕೂಡ ಈ ಬಗೆಯ ಸಣ್ಣ ಸಣ್ಣ ಪ್ರತಿಮೆಗಳು ಪ್ರಭಾವಳಿಗೆ ಸೇರಿಕೊಂಡಿವೆ).

ಈ ಪ್ರತಿಮೆಯು ಕಿಗ್ಗದ ಮೂಲ ದೇವರ ಶೈಲಿಯಲ್ಲಿ ಉಬ್ಬು ಶಿಲ್ಪವಾಗಿದೆ. ಬಳಕೆಯಾಗಿರುವ ಶಿಲೆಯು ಈ ಸುತ್ತಿನದಲ್ಲ. ಕಂದುಬಣ್ಣದ್ದಾಗಿದೆ. ಬೇರೆಡೆಯಿಂದ ತಂದ ಪ್ರತಿಮೆಯೂ ಆಗಿರಬಹುದು.

ಇಲ್ಲಿ ಹಲವು ಉತ್ತರವಿಲ್ಲದ ಪ್ರಶ್ನೆಗಳು ಕಾಣುತ್ತವೆ. ಈ ಸೂರ್ಯನು ಹೀಗೇಕೆ ಬಂದಿದ್ದಾನೆ? - ರಾಶಿಮಂಡಲದ ಭೋಗಮಂಟಪದಲ್ಲಿ ಹಿಂದಕ್ಕೆ ಗರ್ಭಗುಡಿಯಲ್ಲಿರಬೇಕಾಗಿದ್ದು ಹೀಗೇಕಾಯಿತು-ಇತ್ಯಾದಿ ಅಲ್ಲದೆ 'ಸಿಂಗೇರಿ'ಯ ಸಂಬಂಧವೇ ಇಲ್ಲದಂತೆ ಒಂದು ಪುರಾತನ ಸ್ಥಳನಾಮದ ಮನೆದೇವರು ಏತಕ್ಕಾಗಿದೆ? ಎಂಬುದೂ ಮುಖ್ಯವೆ!

೧೧. ವಿದ್ಯಾಶಂಕರ ದೇಗುಲದಲ್ಲಿನ ರಾಶಿಸ್ತಂಭಗಳ ಮಂಟಪವು ವರಾಹಮಿಹಿರನ 'ಬೃಹಜ್ಜಾತಕ'ದ ಅವಶ್ಯಕತೆಗೆ ಅನುಗುಣವಾಗಿ ರಚಿತವಾದಂತಿದೆ. ಅಲ್ಲದೆ ಇದರ ಮುಂದೆ ಒಂದು ಸುಮಾರು ೧೩-೧೪ ಅಡಿ ಎತ್ತರ ಒಂದು ಸ್ತಂಭವು ಪ್ರತಿದಿನದ ಸೂರ್ಯನ ಕಾಲಮಾನ 'ನೆರಳ'ನ್ನು ಗುರುತಿಸಲು ಅನುಕೂಲವಾಗಿದೆ. ಇದನ್ನು ಅರುಣಸ್ತಂಭವೆಂದು ಕರೆಯುವ ರೂಢಿಯಿದೆ. ಇದರ ನೆತ್ತಿಯಲ್ಲಿ ಇರಬೇಕಾಗಿದ್ದ ಒಂದು ದುಂಡು ಚಪ್ಪಡಿಯು ಈಗ ಇರುವುದಿಲ್ಲ. ಸೂರ್ಯನು ಪ್ರತಿದಿನ ನಡುಮಧ್ಯಾನ್ಹಕ್ಕೆ ಬಂದು ನಿಂತಾಗ ನೆತ್ತಿಯ ಕಲ್ಲಿನ ನೆರಳು ನೇರವಾಗಿ ಸ್ತಂಭದ ಬುಡದಲ್ಲಿ ನೆರಳನ್ನು ಮಾಡುತ್ತದೆ. ಇದನ್ನು ಅಪರಾಹ್ನದ ಗುರುತೆಂದೂ ಕರೆಯುವುದು 'ಪಂಚಾಂಗ'ಕ್ಕೆ ಸೇರುತ್ತದೆ.

ವಿದ್ಯಾಶಂಕರ ದೇಗುಲದ ಗೋಪುರವು ಮೇಲೆ ಮೂರು ಹಂತದ ರಚನೆಯನ್ನು ಗಮನಿಸಿದಲ್ಲಿ ಅದನ್ನು ಚಂದ್ರ ಮತ್ತು ತಾರಾಮಂಡಲಗಳನ್ನು ಪರಿಶೀಲಿಸುತ್ತಿರಬಹುದಾದ ರಚನೆಯಂತೆ ಕಂಡುಬರುತ್ತದೆ. ಈಗ ಇಂಥ ಯಾವುದೇ ಪ್ರಯೋಜನವನ್ನೂ ಬಳಕೆಯಲ್ಲಿ ಕಾಣುತ್ತಿಲ್ಲವಾದ ಕಾರಣ ಕೇವಲ ಊಹೆಯಿಂದಷ್ಟೇ ಹೇಳಬೇಕಾಗುತ್ತದೆ. ಆದರೆ ಅಂಥ ಪ್ರಯೋಜನದ ಅವಶ್ಯಕತೆಯಂತೂ ಪಂಚಾಂಗಕ್ಕೆ ಬೇಕಾದೀತು. ಉದಯ ಅಸ್ತ-ಮಧ್ಯಾನ್ಹ-ಚಲನೆ ಮೊದಲಾದವು ಜ್ಯೋತಿಷ್ಯಕ್ಕೆ ಅತ್ಯವಶ್ಯವೆಂಬುದನ್ನು ಉತ್ತರಭಾರತದಲ್ಲಿ ಉಜ್ಜಯಿನಿ ಮೊದಲಾಗಿ ಆರು ಸ್ಥಳಗಳಲ್ಲಿ ಕಂಡುಬರುತ್ತಿರುವ ಜಂತರ್-ಮಂತರ್ ಸಾಧನಗಳನ್ನು ಗಮನಿಸಿದಲ್ಲಿ ಅರಿವಾಗುತ್ತಿದೆ. ಆದರೆ ಅವು, ಉಜ್ಜಯಿನಿಯನ್ನು ಬಿಟ್ಟು, ಸು. ಕ್ರಿ. ಶ. ೧೭೦೦ರ ನಂತರ ರಾಜಮಾನಸಿಂಗ್ ಎಂಬಾತನಿಂದ ರಚಿತವಾದುವೆಂದೂ ತಿಳಿದುಬರುತ್ತವೆ.

ಆದುದರಿಂದ ಶೃಂಗೇರಿಯು 'ಪಂಚಾಂಗ'ಕ್ಕೆ ಈಗ ಈ ಮಂದಿರದ ಪ್ರಯೋಜನವಿರುವುದಿಲ್ಲ. ಬದಲು ದೃಗ್ಗಣಿತವು ಸಿದ್ಧವಾಗಿದೆ. ಇದರ ಬಳಕೆಯಿಂದ ಯಾವ ಸಾಧನವೂ ಬೇಕಾಗುವುದಿಲ್ಲ !!!

-ಶಂಕರಾಚಾರ್ಯರು ಸೂರ್ಯನ ಆರಾಧನೆಯನ್ನು 'ಪಂಚಾಯತನ'ಕ್ಕೆ ಸೇರಿಸಿರುತ್ತಾರೆ. ಆದುದರಿಂದ ಅವರ ಕಾಲದಿಂದಲೂ ಸೂರ್ಯಾರಾಧನೆಯಿರಬೇಕಷ್ಟೆ. ಅವರು ವಿಗ್ರಹಾರಾಧಕರಲ್ಲವೆಂಬ ಅನುಮಾನವೂ ಬರುತ್ತದೆ. ಏಕೆಂದರೆ

ಶಾರದಾಂಬೆಯ ಪೀಠವು ತಾಂತ್ರಿಕಮಂಡಲದಿಂದ ವಿಷ್ಣುವು, ನರಸಿಂಹ ಸಾಲಿಗ್ರಾಮದಿಂದ, ಶಿವನು ಚಂದ್ರಮೌಳೀಶ್ವರ ಎಂಬ ಲಿಂಗ( ಸಣ್ಣದು )ದಿಂದ, ವಿನಾಯಕನು ಉದ್ಭವ ಮೂರ್ತಿಯಿಂದ, ಸೂರ್ಯನು ಸೂರ್ಯಮಣಿಯಿಂದ - ಹೀಗೆ ವಿಗ್ರಹಗಳಲ್ಲದ ರೂಪ ಗಳಿಂದ-ಶಂಕರಾಚಾರ್ಯರು ಪೂಜಿಸುತ್ತಿದ್ದಿರ ಬೇಕೆಂದು ಕಂಡುಬರುತ್ತದೆ. ಆದುದರಿಂದ ಕೊರಡ್ಕಲ್ 'ಸೂರ್ಯ'ನು ಮಠಕ್ಕೆ ಈಚೆಗೆ ಸೇರಿದುದೆನ್ನುವುದರಲ್ಲಿ ಸರಿಯಾಗಿದೆ. ದಾಖಲೆಗಳೂ ಇವೆ, ಮುಜರಾಯಿಯಲ್ಲಿ.

- ಮುಖ್ಯವಾಗಿ ಸಾಂತರ ಕಾಲದಲ್ಲಿ (ಅಥವಾ ಕದಂಬರ ಕಾಲದಲ್ಲಿ) ಕಾಲನಿರ್ಣಯಕ್ಕಾಗಿ ಪ್ರತಿದಿನದ ಬಳಕೆಗಾಗಿ 'ರಾಶಿ ಮಂಟಪ'ದ (ಕುಂಡಲಿಯೆಂದರೂ ಸರಿಯೆ) ರಚನೆಯಾಗಿದ್ದುದಾಗಿರಬಹುದು. ಉತ್ತರಾಯಣದ ಹೆಗ್ಗುರುತು ಮುಖ್ಯವಾಗಿರುವಂತೆ ಇಂದಿಗೂ ಮಕರ ಸಂಕ್ರಮಣದ ಸ್ತಂಭವು ಇರುವಂತೆ ಕಂಡಬರುತ್ತಿದೆ.

- ಮತ್ತೊಂದು ವಿಷಯವೆಂದರೆ ಈ ಮಕರ ಸಂಕ್ರಮಣದ ಸ್ತಂಭದಲ್ಲಿ (ನಗ್ನ) ಶನಿಯ ಉಬ್ಬುಶಿಲ್ಪವು ಇರುವುದಲ್ಲದೆ ಉಳಿದ ಗ್ರಹಗಳೂ ಸೇರಿದಂತೆ 'ರಾಜಯೋಗ'ದ ಜಾತಕವನ್ನು ಈ ಮಂಟಪ ತೋರಿಬರುತ್ತಿದೆ. ಈ ವಿಶೇಷವೇ ಇದರ ರಚನೆಯ ಅವಶ್ಯಕತೆಯನ್ನು ಸೂಚಿಸುತ್ತದೆ.

(ಈ ಸಂಶೋಧನೆಯ ಲೇಖನಕ್ಕೆ ಅನೇಕ ಗ್ರಂಥಗಳ ಋಣ ಸಲ್ಲುತ್ತದೆ. ಅಲ್ಲದೆ ಒಂದು ವರ್ಷಕಾಲ ಪ್ರತಿ ಸಂಕ್ರಮಣದಲ್ಲೂ ಶೃಂಗೇರಿಗೆ ಹೋಗಿ ಫೀಲ್ಡ್‌ವರ್ಕ್ ಮಾಡಿ ಅನೇಕರನ್ನು ಕಂಡು ವಿವರಗಳನ್ನು ಸಂಗ್ರಹಿಸಲಾಗಿದೆ. ಅವರೆಲ್ಲರಿಗೂ ನನ್ನ ವಂದನೆಗಳು ಸಲ್ಲುತ್ತವೆ).

ಕೊನೆಯದಾಗಿ ಈ ವೀಕ್ಷಣೆ ವಿಧಾನಕ್ಕಾಗಿ ಕಟ್ಟಿರ ಬಹುದಾದ ವಿದ್ಯಾಶಂಕರದೇಗುಲದ ರಚನಾ ಕ್ರಮದ ಬಗ್ಗೆ ಒಂದು ಹೊಸ ವಿಚಾರವನ್ನು ಇಲ್ಲಿ ಸೂಚಿಸುತ್ತಿದ್ದೇನೆ. ವರಾಹಮಿಹಿರನ ಕೃತಿಗಳು ಈ ದೇಗುಲಕ್ಕೆ ಆಧಾರ ವಾಗುತ್ತವೆ ಮತ್ತು ಆತನ ಕಾಲದಲ್ಲಿ ಸೂರ್ಯ-ಚಂದ್ರ ಮತ್ತು ಗ್ರಹಗಳಲ್ಲದೆ ತಾರಮಂಡಲಗಳ ಸಂಚಾರ ವೀಕ್ಷಣೆಯನ್ನು ಒಂದು ವಿಜ್ಞಾನ ಕ್ರಮದಂತೆ 'ಜ್ಯೋತಿಷ್ಯ' ವೆಂದು ಕರೆದು ಗ್ರಂಥರಚನೆ ಮಾಡಿರುವುದರಲ್ಲಿ-

*ಸುಮಾರು ಕ್ರಿ. ಪೂ. ೧೫೦೦ ವರ್ಷಗಳ ಹಿಂದಿನವೆಂದು ವಿಜ್ಞಾನಿಗಳು ಗುರುತಿಸುತ್ತಿರುವ ಇಂಗ್ಲೆಂಡ್‌ನಲ್ಲಿ ಈಗಲೂ ಕುತೂಹಲಕಾರಿಯಾಗಿ ಉಳಿದಿರುವ 'ಸ್ಟೋನ್ ಹೆಂಜ್' ಎಂಬ ಬೃಹತ್ ಶಿಲಾಯುಗದ ರಚನೆಗಳು ಈ ಶೃಂಗೇರಿಯು 'ವೀಕ್ಷಣಾ ಮಂದಿರ'ವೆಂದು ಕರೆಯ ಬಹುದಾದ ರಚನೆಯಲ್ಲಿ ಗುರುತಿಸಬಹುದಾಗಿದೆ. ಋತುಮಾನವನ್ನು ಅಳೆಯುವು ದಕ್ಕಾಗಿಯೇ ನಮ್ಮ ಪುರಾತನರು ಬೃಹತ್ ಶಿಲಾಯುಗದವರು 'ಸ್ಟೋನ್ ಹೆಂಜ್'ನ್ನು ರಚಿಸಿದ್ದಿರಬೇಕೆಂದು ಗುರುತಿಸುವುವಲ್ಲಿ ನಮ್ಮ ದೇಶದಲ್ಲಿ ಸುಮಾರು ೬ನೇ ಶತಮಾನ (ಕ್ರಿ. ಶ.)ದ ಗ್ರಂಥಗಳಿಂದಲೂ ಶೃಂಗೇರಿಯ ವಿದ್ಯಾಶಂಕರ ದೇಗುಲದ ಆಧಾರದಿಂದಲೂ ನೆನೆಯಬಹುದಾಗಿದೆ. ಇದರ ತಥ್ಯವನ್ನು ಸಂಶೋಧನೆಗೆ ಒಳಪಡಿಸಬೇಕಾಗಿದೆ. (ಇತರ ವಿವರಕ್ಕೆ ಈ ಲೇಖನವು ದೊಡ್ಡದಾಗಿರುವುದರಿಂದ ಸಂಕ್ಷೇಪಿಸಲಾಗಿದೆ).*

**ಕೊನೆಯ ಮಾತು :** ಉತ್ತರಾಯಣವನ್ನು ಮಠದ ಸ್ವಾಮಿಗಳು ಮತ್ತು ವಿದ್ಯಾಪೀಠದ ನಿವಾಸಿಗಳಿಗಾಗಿ ಗುರುತಿಸಬೇಕಾದ ಅಗತ್ಯವು ಪ್ರತಿದಿನದ ವಿಷಯವಾಗಿದ್ದಿರಬೇಕು. ಶೃಂಗೇರಿ ಎಂಬ ಹೆಸರು ಇನ್ನೂ ಈ ಕೇಂದ್ರಕ್ಕೆ ಇರದ ಕಾಲದಲ್ಲಿದ್ದ ಹೆಸರು ಬಹುಶ ಕೊರಡ್ಕಲ್ ಮತ್ತು ಕಿಗ್ಗದ ಸಂಬಂಧದಲ್ಲಿ ಈ ವಿದ್ಯಾಶಂಕರ ದೇಗುಲ ಎಂಬ ವೀಕ್ಷಣಾಲಯ (Observatory)ವು ಸಿದ್ಧವಾಗಿ ಕೇವಲ ಮಂಟಪಗಳಂತೆ ಇದ್ದು ಕ್ರಮೇಣ ಅಂದರೆ ಸುಮಾರು ಕ್ರಿ. ಶ. ೧೦೦೦ ದಿಂದ ಮುಂದಕ್ಕೆ ಕಟ್ಟಡವೂ ಮೂರು ಬಾರಿ ಪುನಾರಚನೆ ಗೊಂಡಂತೆ ಈಗಿರುವುದು ಸಿದ್ಧವಾಗಿರಬಹುದಾಗಿದೆ. ಶಂಕರರು ಈ ಸ್ಥಳವನ್ನು ಆಯ್ದು 'ಶಾರದಾ ಪೀಠ'ವನ್ನು ಸ್ಥಾಪಿಸಿರುವುದೇ ಒಂದು ವಿಶಿಷ್ಟ ಸಾಧನೆಯಾಗಿದೆ - ಅಂದಿನಿಂದಲೂ ಶೃಂಗೇರಿಯ 'ಜ್ಯೋತಿಷ್ಯ'ವು, ಪಂಚಾಂಗ ವಾಗುತ್ತಾ ಬಂದಿದೆ. ಇದರ ಮೂಲ ರಚನೆಯು ಚಿತ್ರಣವು ಅಂದರೆ ಆಯು ಸಮೇತ ಮಂಟಪದ ಚಿತ್ರವು ಈ ದೇಗುಲದ ಅಂದರೆ ಹಿಂದಿನ ಭಾಗದ ಎಡಗಡೆಗೆ ಗುರುತು ಮಾಡಲಾಗಿದೆ.

*ಮತ್ತೊಂದು ಮುಖ್ಯ ವಿಚಾರವೆಂದರೆ ಈ ಮಂಟಪಕ್ಕಾಗಿ ಹುಡುಕಿರುವ ಈಗಿನ ಸ್ಥಳದಿಂದ ಇಡೀ ವರ್ಷದಲ್ಲಿ ಪ್ರತಿ ಬೆಳಗಿನ ಸೂರ್ಯನ ಉದಯವು ತಪ್ಪದೆ ಇದರ ಬಾಗಿಲ ಮೂಲಕ ಒದಗಿಬರುವಂತೆ ಮುಂದಿನ ಬೆಟ್ಟಸಾಲುಗಳಲ್ಲಿ ಕೂಡ ಅವಕಾಶವಿರುವುದು ತುಂಬ ಸೋಜಿಗದ ಶೋಧನೆಯೂ ಆಗಿದೆ.*

ಭಾರತದಲ್ಲಿ ಬೇರೆಡೆ ಎಲ್ಲಿಯೂ ಇಂಥ ರಚನೆ ಮತ್ತು ಪ್ರಕೃತಿದತ್ತವಾದ ಅವಕಾಶವು ಕಂಡುಬರುತ್ತಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಈ ಗ್ರಂಥವನ್ನು ದಿ. ಪ್ರೊ॥ ದೇವೀರಪ್ಪನವರು ಸಂಪಾದಿಸಿದ್ದಾರೆ.

*೨. ಉಲ್ಲೇಖನೀಯ ಆಕರಗ್ರಂಥ ಚಾವುಂಡರಾಯನ *ಲೋಕೋಪಕಾರ*/೧ ಡಾ॥ ಜಿ. ಎಸ್. ದೀಕ್ಷಿತ್, ಇತಿಹಾಸ ದರ್ಶನ ನಂ. ೧– ಸಂ. ೧ : ೧೯೮೬–; ಈ ಎರಡು ಅಧ್ಯಾಯಗಳು ಜ್ಯೋತಿಶ್ಯಾಸ್ತ್ರವನ್ನು ಅವಲಂಬಿಸಿವೆ. ಮುಂತಾಚಾರ್ಯರು ಶೌನಕ, ಗಾರ್ಗ್ಯ, ವರಾಹ ಇವರ ಬರವಣಿಗೆಗಳ ಮೇಲೆ ಆಧರಿಸಿವೆ.'' ಡಾ॥ ಜಿ. ಎಸ್. ದೀಕ್ಷಿತ್ ಅದೇ.)

*೩. i. ಶೃಂಗೇರಿಯ ಪಂಚಾಂಗವನ್ನು ಅದಕ್ಕೆ ಸಮೀಪದ ಹಾಲಾಡಿಯ ಒಂದು ಭಟ್ಟರ ಮನೆತನವು ದೃಗ್ಗಣಿತದ ಆಧಾರದಿಂದ, ರಚಿಸುತ್ತಾ ಬಂದಿದೆ.

*೪. ii. ಆದರೆ ಕಾಗದವು ಇರದಿದ್ದಾಗ (ಅಚ್ಚುಕೂಟವೂ ಇರದಿದ್ದಾಗ) ಈ ಪಂಚಾಂಗವು ಇದ್ದಿರಬೇಕೆಂದು ಹೇಳಲು ವಿಜಯನಗರದ ಕಾಲದ ಕಡತಗಳಲ್ಲಿ ಪ್ರತಿದಿನದ 'ಗುರುತು' ಕಂಡುಬರುತ್ತದೆ – ಇದನ್ನು ಸ್ವತಹ ಶೋಧಿಸಿರುವ ಶಾಸ್ತ್ರಿಗಳಲ್ಲಿ ತಿಳಿಯಬಹುದು. ಆದುದರಿಂದ ವಿದ್ಯಾರಣ್ಯರ ಕಾಲದಿಂದಲೂ 'ಪಂಚಾಂಗ'ದ ಅರಿವು ದೊರಕುತ್ತದೆ. ಅಲ್ಲದೆ ಈ ಸಾಧನವನ್ನು ಇಂದಿಗೂ ಗುರುತಿಸಬಹುದಾಗಿದೆ. 'ಈ ಮಂಟಪದ' ವಿವರಗಳನ್ನು ಲೇಖನದಲ್ಲಿ ಕೊಡಲಾಗಿದೆ.

ಎಂ. ಎನ್. ಪ್ರಭಾಕರ್ *

# ದೇವಾಲಯಗಳಿಗೊಂದು ವರ್ಗೀಕರಣ ಶಾಸ್ತ್ರ

ಸೀತಾಫಲ ಮತ್ತು ರಾಮಫಲ ಎಂಬ ಹಣ್ಣುಗಳು ನಮ್ಮಲ್ಲಿವೆ. ಈ ಗಿಡಗಳನ್ನು ಸಸ್ಯಶಾಸ್ತ್ರಿಗಳು "ಅನೋನಾ ಸ್ಕ್ವಾಮೋಸಾ" ಮತ್ತು "ಅನೋನಾ ರೆಟಿಕ್ಯುಲೇಟಾ" ಎಂದು ಕ್ರಮವಾಗಿ ಗುರುತಿಸುತ್ತಾರೆ. ಈ ಹಣ್ಣುಗಳಲ್ಲಿ ಸೀತಾ, ರಾಮರ ಭೇದವನ್ನು ನಾವು ಎಣಿಸಿದ್ದೇವೆ. ಇದನ್ನೇ ಸಸ್ಯಶಾಸ್ತ್ರಿಗಳು ಕೆಲವು ಲಕ್ಷಣಗಳನ್ನಾಧರಿಸಿ ಇವು "ಅನೋನೇಸಿ" ಕುಟುಂಬಕ್ಕೆ ಸೇರಿದ ಸಸ್ಯಗಳೆಂದಿದ್ದಾರೆ. ಸೀತಾಫಲ ಮತ್ತು ರಾಮಫಲ ಎಂಬ ಹೆಸರುಗಳು ನಮಗೆ ಮಾತ್ರ ಸೀಮಿತ. ಆದರೆ ಸಸ್ಯಶಾಸ್ತ್ರಿಗಳು ಕೊಟ್ಟ ಹೆಸರುಗಳು ಪ್ರಪಂಚ ವ್ಯಾಪ್ತಿಯುಳ್ಳದ್ದು. ಇದಕ್ಕೆ ದ್ವಿಪದೀಯ ನಾಮಕರಣ ಪದ್ಧತಿ ಎಂದು ಹೆಸರು. ಸಸ್ಯಶಾಸ್ತ್ರೀಯ ಹೆಸರಿನಲ್ಲಿ ಪ್ರಪಂಚದ ಯಾವ ಮೂಲೆಯಲ್ಲಾದರೂ ಗುರುತಿಸಬಹುದು. ಇದೊಂದು ವ್ಯವಸ್ಥಿತ ಅಧ್ಯಯನದ ಫಲಶ್ರುತಿ.

"ಅನೋನೇಸಿ" ಕುಟುಂಬ (ಫ್ಯಾಮಿಲಿ) ಎಂದಲ್ಲಿ, ಅದಕ್ಕೆ ಖಚಿತವಾದ ಲಕ್ಷಣಗಳಿವೆ. ಅದರ ಅಡಿಯಲ್ಲಿ 'ಅನೋನಾ' ಎನ್ನುವುದು ಒಂದು ಪ್ರಭೇದ (ಜೆನಿರಾ); ಇದಕ್ಕೆ ಸೀಮಿತವಾದ ಲಕ್ಷಣಗಳಿವೆ. ನಂತರ "ಸ್ಕ್ವಾಮೋಸಾ" ಎನ್ನುವುದು ಪುಟ್ಟ ಜಾತಿ (ಸ್ಪೀಷಿ); "ರೆಟಿಕ್ಯುಲೇಟಾ" ಎನ್ನುವುದು ಮತ್ತೊಂದು ಪುಟ್ಟ ಜಾತಿ. ಈ ಸಸ್ಯಗಳಲ್ಲಿ ಸಾಮಾನ್ಯವಾದ ಹೋಲಿಕೆ ಇದ್ದರೂ, ಕೆಲವು ವ್ಯತ್ಯಾಸಗಳುಂಟು. ಅದರಲ್ಲಿ ಹಣ್ಣಿನ ಬಣ್ಣವೂ ಒಂದು. ಹೀಗೆ ಕುಟುಂಬ, ಪ್ರಭೇದ, ಜಾತಿ ಮುಂತಾದ ಹಂತಗಳಲ್ಲಿ ಲಕ್ಷಣಗಳನ್ನು ಗುರುತಿಸುವುದು ಒಂದು ಶಾಸ್ತ್ರೀಯ ವಿಧಾನ. ಇದಕ್ಕೆ ವರ್ಗೀಕರಣ ಶಾಸ್ತ್ರ (ಟ್ಯಾಕ್ಸಾನಮಿ) ಎಂದು ಹೆಸರು.

ಸಸ್ಯಗಳ ವರ್ಗೀಕರಣ ಶಾಸ್ತ್ರದ ಬಗ್ಗೆ, ಮೇಲೆ ತಿಳಿಸಿದ ಉದ್ದೇಶದ ಮೂಲ ಆಶಯ, ಇಂತಹ ವರ್ಗೀಕರಣ ಶಾಸ್ತ್ರ ಪ್ರಾಚೀನ ದೇವಾಲಯಗಳಿಗೂ ಸಾಧ್ಯವೇ ಎಂದು ಪರಿಶೀಲಿಸುವುದು. ಸಸ್ಯಗಳು ನಿಸರ್ಗದ ಕೊಡುಗೆ; ದೈವದತ್ತ ಎಂದರೂ ಸರಿಯೇ; ಇವುಗಳ ರಚನೆಯಲ್ಲಿ ಮನುಷ್ಯನ ಕೈವಾಡವಿಲ್ಲ. ದೇವಾಲಯಗಳು ಮಾನವನಿರ್ಮಿತಿ; ಮನುಷ್ಯನ ಬುದ್ಧಿಮತ್ತೆಯ ಕೂಸು. ದೇವಾಲಯಗಳ ರಚನೆ ಪೂರ್ವನಿಯೋಜಿತ. ದೇವಾಲಯಗಳ ಲಕ್ಷಣಗಳನ್ನು ಮಾನವ ವ್ಯವಸ್ಥಿತವಾಗಿ ಸೃಷ್ಟಿಸಿದ್ದಾನೆ. ಅದರ ಅರಿವೇ ಮುಂದಿನ ವರ್ಗೀಕರಣಕ್ಕೆ ದಾರಿದೀಪ. ದೇವಾಲಯ ರಚನೆಯನ್ನು ಕುರಿತಂತೆ ವಾಸ್ತುಗ್ರಂಥಗಳು ಪ್ರಾಚೀನ ಋಷಿಗಳ ಹೆಸರಿನಲ್ಲಿವೆ. ಮಯಮತ, ಮಾರೀಚ ಸಂಹಿತಾ, ಕಾಶ್ಯಪ ಶಿಲ್ಪ, ಈಶಾನಶಿವಗುರುದೇವಪದ್ಧತಿ ಇತ್ಯಾದಿ, ಇವೆಲ್ಲವೂ ಋಷಿಗಳಿಂದ ರಚನೆಗೊಂಡದ್ದು ಎಂದು ಪ್ರತೀತಿ. ಈ ಋಷಿಗಳ ಪೂರ್ವಾಪರಗಳು ಲಭ್ಯವಿಲ್ಲದಿದ್ದರೂ ಹೆಸರುಗಳಿಂದ ಈ ಗ್ರಂಥಗಳಿಗೆ ಪೂಜ್ಯಸ್ಥಾನ ಪ್ರಾಪ್ತವಾಗಿದೆ.

> ಯದುಕ್ತಂ ಶಂಭುನಾ ಪೂರ್ವಂ ವಾಸ್ತುಶಾಸ್ತ್ರಂ ಪುರಾತನಂ
> ಪರಾಶರಃ ಪ್ರಾಹ ಬೃಹದ್ರಥಾಯ ಬೃಹದ್ರಥಃ ಪ್ರಾಹ ಚ
> ವಿಶ್ವಕರ್ಮಣೇ।
> ಸ ವಿಶ್ವಕರ್ಮ ಜಗತಾಂ ಹಿತಾಯ ಪ್ರೋವಾಚ ಶಾಸ್ತ್ರ
> ಬಹುಭೇದಯುಕ್ತಂ॥
> ವಿಶ್ವಕರ್ಮೋವಾಚ। ವಾಸ್ತುಶಾಸ್ತ್ರಂ ಪ್ರವಕ್ಷ್ಯಾಮಿ ಲೋಕಾನಾಂ
> ಹಿತಕಾಮ್ಯಯಾ॥

ಬೃಹತ್ ಸಂಹಿತೆಯ ಕರ್ತೃವು, ಶಿವೋಕ್ತವಾದ ವಾಸ್ತುಶಾಸ್ತ್ರವು ಲೋಕದ ಹಿತಕ್ಕಾಗಿ ವಿಶ್ವಕರ್ಮನ ಮೂಲಕ ಧರೆಗಿಳಿಯಿತು ಎಂದು ವಿವರಿಸಿದ್ದಾನೆ. ತರ್ಕ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ ಮುಂತಾದ ವಿಷಯಗಳಲ್ಲಿ ಪರಿಣಿತರಾದ ವಿದ್ವಾಂಸರು ಹಲವರಿದ್ದಾರೆ. ಆದರೆ ವಾಸ್ತುಶಾಸ್ತ್ರವನ್ನು ಬಲ್ಲವರು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಈ ಶಾಸ್ತ್ರವನ್ನು ತಿಳಿದವರನ್ನು ಎರಡು ಹಂತಗಳಲ್ಲಿ ಗುರುತಿಸ ಬಹುದು. ಶಾಸ್ತ್ರವನ್ನು ತಿಳಿದ ವಿದ್ವಾಂಸರು ಒಂದೆಡೆಯಾದರೆ, ಶಾಸ್ತ್ರವನ್ನು ಬಳಸುವ ಸ್ಥಪತಿಗಳು ಮತ್ತೊಂದೆಡೆ ಸೇರುತ್ತಾರೆ. ಕೆಲವೊಮ್ಮೆ ಸ್ಥಪತಿಗಳಿಗೆ ಈ ಜ್ಞಾನವು ತಲೆ ತಲಾಂತರದಿಂದ ಹರಿದು ಬಂದದ್ದು; ತಂದೆಯಿಂದ ಮಗನಿಗೆ,

---

* 'ಪದ್ಮಪ್ರಭ', ೪೨, ಬ್ಲಾಕ್ : ೧೭, ಶ್ರೀರಾಂಪುರ ಎರಡನೇ ಹಂತ, ಮೈಸೂರು - ೫೭೦ ೦೨೩

ಗುರುವಿನಿಂದ ಶಿಷ್ಯನಿಗೆ ಹರಿದು ಬಂದ ವಿದ್ಯೆ ಎನಿಸಿದೆ. ಇಲ್ಲಿ ಕೆಲವರಿಗೆ ಶಾಸ್ತ್ರಗ್ರಂಥಗಳ ಅರಿವಿಲ್ಲದಿರಬಹುದು. ಇವರಿಗೆ ದೇವಾಲಯ ರಚನೆ, ಅಲಂಕಾರ ಎಲ್ಲವೂ ತಿಳಿದಿದೆ. ಇದು ಏಕೆ? ಹೀಗೆ? ಇದರ ಮೂಲವೇನು? ಎಂದಲ್ಲಿ ಈ ಪ್ರಶ್ನೆಗಳಿಗೆ ಉತ್ತರಿಸಲಾರರು.

ವರ್ಗೀಕರಣ ವಿಧಾನಕ್ಕೆ ಪ್ರಾಚೀನ ಹಾಗೂ ಪಾಶ್ಚಾತ್ಯ ಎರಡೂ ರೀತಿ ವಿಧಾನಗಳನ್ನು ಅಳವಡಿಸಿಕೊಳ್ಳಬಹುದು. ಯಾವುದೇ ಲಕ್ಷಣವನ್ನು ಗುರುತಿಸುವಲ್ಲಿ ಅರ್ಥ ಖಚಿತತೆ ಅಗತ್ಯ. ಪ್ರಾಚೀನ ಎಂದಲ್ಲಿ ವಾಸ್ತುಶಾಸ್ತ್ರಗಳನ್ನಾಧರಿಸಿದ ಗುರುತಿಸುವಿಕೆ. ಪಾಶ್ಚಾತ್ಯ ಎಂದಲ್ಲಿ ಪಾಶ್ಚಾತ್ಯರು ತೋರಿದ ಹಾದಿ. ವಾಸ್ತುಗ್ರಂಥಗಳನ್ನು ಪೂರ್ಣವಾಗಿ ಅರ್ಥೈಸಿ ಲಕ್ಷಣಗಳನ್ನು ಗುರುತಿಸಲು ಸಾಧ್ಯವಾಗಿಲ್ಲ. ಆದ್ದರಿಂದ ಸ್ಪಷ್ಟೀಕರಣಕ್ಕಾಗಿ ಪಾಶ್ಚಾತ್ಯ ವಿದ್ವಾಂಸರು ತೋರಿದ ಹಾದಿಯನ್ನೂ ಕೆಲವೊಮ್ಮೆ ತುಳಿಯಬೇಕು. ಸಸ್ಯಶಾಸ್ತ್ರದಲ್ಲಿದ್ದಂತೆ ದ್ವಿಪದೀಯ ನಾಮಕರಣ ಪದ್ಧತಿ ಇಲ್ಲಿ ಅಗತ್ಯವಿಲ್ಲ. ದೇವಾಲಯಗಳಿಗೆ ಸ್ಥಳೀಯವಾಗಿ ಗುರುತಿಸುವ ಹೆಸರುಗಳುಂಟು. ಈ ಹೆಸರುಗಳು ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳಲ್ಲಿ ಗುರುತಿಸಿರುವ ಹೆಸರುಗಳಿಗಿಂತ ಭಿನ್ನವಾಗಿರುತ್ತವೆ. ಕೆಲವೊಮ್ಮೆ ಮೂಲದೇವರಿಗಿಂತ ಮರಿದೇವರ ಹೆಸರೇ ಪ್ರಧಾನವಾಗಿ ಗುರುತಿಸಲ್ಪಡುತ್ತದೆ. ಮರಿದೇವರ ಹೆಸರಿನಲ್ಲಿ ಜಾತ್ರೆ ಪರಿಷೆಗಳು ನಡೆಯುತ್ತವೆ.

ದೇವಾಲಯದ ಕಾಲವನ್ನು ಗುರುತಿಸುವಲ್ಲಿ ಲಭ್ಯವಿರುವ ಶಾಸನಗಳು ನೇರವಾಗಿ ನೆರವಾಗುವ ಸಾಧ್ಯತೆಗಳಿವೆ. ವಾಸ್ತು ರಚನೆಯನ್ನಾಧರಿಸಿ ಸಮಕಾಲೀನ ದೇವಾಲಯಗಳೊಂದಿಗೆ ಸಮೀಕರಿಸಿ ಕಾಲಮಾನವನ್ನು ನಿರ್ಧರಿಸಬಹುದು. ಶಾಸನಗಳಲ್ಲದೆ ಇನ್ನಿತರ ದೇವಾಲಯಗಳ ದಾಖಲೆಗಳೂ ನೆರವಾಗಬಹುದು. ಇದರೊಂದಿಗೆ ದೇವಾಲಯ ರಚನೆಯ ಕಾಲದಲ್ಲಿದ್ದ ಧಾರ್ಮಿಕ ಪರಿಸರ, ಒದಗಿಬಂದ ರಾಜಾಶ್ರಯ ಮುಂತಾದ ಮಾಹಿತಿಗಳೂ ಲಭ್ಯವಾಗಬಹುದು. ಕೆಲವೊಮ್ಮೆ ದೇವಾಲಯಗಳಿಗೆ ಸಂಬಂಧಿಸಿದ ಶಾಸನಗಳು ಪುಟ್ಟಕಾವ್ಯಗಳಂತಿರುವುದನ್ನು ಗಮನಿಸಬಹುದು.

ದೇವಾಲಯಗಳ ಸಂಪ್ರದಾಯ ಶೈಲಿಗಳನ್ನು ನಂತರ ಗುರುತಿಸಬೇಕು. ಇದಕ್ಕೆ ವಾಸ್ತುಗ್ರಂಥಗಳಿಂದ ಪಡೆದ ಜ್ಞಾನವೇ ಮುಖ್ಯ. ಕರ್ನಾಟಕದಲ್ಲಿ ಔತ್ತರೇಯ ಹಾಗೂ ದಾಕ್ಷಿಣಾತ್ಯ ಸಂಪ್ರದಾಯಗಳೆರಡೂ ಬೆರತಿವೆ. ಬಾದಾಮಿ ಚಾಳುಕ್ಯರ ಕಾಲದ ಪ್ರಮುಖ ದೇವಾಲಯಗಳು ದಾಕ್ಷಿಣಾತ್ಯ ಸಂಪ್ರದಾಯಕ್ಕೆ ಸೇರಿವೆ. ಆದರೆ ಲಭ್ಯವಿರುವ ಗ್ರಂಥಸ್ಥ ವಿವರಣೆಗಳಿಗೂ ಈ ದೇವಾಲಯ ಗಳಿಗೂ ಹೆಚ್ಚು ಹೊಂದಾಣಿಕೆ ಇಲ್ಲ. ದಾಕ್ಷಿಣಾತ್ಯ ಸಂಪ್ರದಾಯ ಎನ್ನುವುದು ಖಚಿತ. ಈ ದೇವಾಲಯವನ್ನು ಸಂಪೂರ್ಣವಾಗಿ ಗುರುತಿಸಲು ಸಾಧ್ಯವಾಗುವ ಗ್ರಂಥಗಳು ಕರ್ನಾಟಕದಲ್ಲಿ ದೊರೆಯ ಬೇಕಾಗಿತ್ತು. ಆದರೆ ಲಭ್ಯವಿಲ್ಲ; ಆದರೂ ಬಾಧಕವಿಲ್ಲ.

ರಾಷ್ಟ್ರಕೂಟರ ಕಾಲದಲ್ಲಿ ಕರ್ನಾಟಕದ ದೇವಾಲಯಗಳಲ್ಲಿ ಔತ್ತರೇಯ ಸಂಪ್ರದಾಯವು ತನ್ನ ಪ್ರಭಾವ ಬೀರಿ ನಿಧಾನವಾಗಿ ತನ್ನ ತೋಳ್ತೆಕ್ಕೆಗೆ ಎಳೆದುಕೊಂಡಿದ್ದನ್ನು ಕಾಣಬಹುದು. ಭವನಾಸೀ ಸಂಗಂನಲ್ಲಿರುವ ಭುಜಂಗೇಶ್ವರ ದೇವಾಲಯ ಇದಕ್ಕೊಂದು ಉದಾಹರಣೆ. ಕಲ್ಯಾಣದ ಚಾಲುಕ್ಯರ ಹಾಗೂ ಹೊಯ್ಸಳರ ಕಾಲದಲ್ಲಿ ಔತ್ತರೇಯ ಸಂಪ್ರದಾಯದ ದೇವಾಲಯಗಳೇ ಹೆಚ್ಚು ಕಾಣಸಿಗುತ್ತವೆ. ಹಳೆಯ ಮೈಸೂರಿನ ದಕ್ಷಿಣಭಾಗದಲ್ಲಿ ಗಂಗ ನೊಳಂಬರ ಕಾಲದಲ್ಲಿ ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳೇ ಮುಂದುವರೆಯಿತು. ಹೊಯ್ಸಳರ ಕಾಲದಲ್ಲಿ ದಾಕ್ಷಿಣಾತ್ಯ ದೇವಾಲಯಗಳು ಕೇವಲ ಬೆರಳಣಿಕೆಯಷ್ಟು ಸಿಗ ಬಹುದು. ಇಕ್ಕೇರಿ ಅರಸರ ಕಾಲದಲ್ಲಿ ಔತ್ತರೇಯ ಸಂಪ್ರದಾಯದಲ್ಲಿ ಬೆಳೆದ ದೇವಾಲಯಗಳು ಪುನಃ ದಾಕ್ಷಿಣಾತ್ಯಕ್ಕೆ ತಲೆ ಬಾಗುತ್ತವೆ. ವಿಜಯನಗರ ಅರಸರ ಕಾಲಕ್ಕೆ ಕರ್ನಾಟಕದಲ್ಲಿ ಔತ್ತರೇಯ ಸಂಪ್ರದಾಯವು ಪೂರ್ಣವಾಗಿ ಅಸ್ತಂಗತವಾಯಿತು. ಇದು ಏಕೆ, ಹೀಗೆ? ಎಂಬುದಕ್ಕೆ ಸದ್ಯಕ್ಕೆ ಉತ್ತರವಿಲ್ಲ.

ದಾಕ್ಷಿಣಾತ್ಯ ಶೈಲಿಗಳಾದ ನಾಗರ, ದ್ರಾವಿಡ ಮತ್ತು ವೇಸರಗಳನ್ನು ಸರಿಯಾಗಿ ಅರ್ಥಮಾಡಿಕೊಂಡಲ್ಲಿ ಮಾತ್ರ ಕರ್ನಾಟಕದ ಔತ್ತರೇಯ ದೇವಾಲಯಗಳ ಶೈಲಿಗಳನ್ನು ಗುರುತಿಸಲು ಸಾಧ್ಯ. ಶಿಖರದ ಆಕಾರದಿಂದಲೇ ಶೈಲಿಗಳ ವರ್ಗೀಕರಣ. ದಾಕ್ಷಿಣಾತ್ಯ ದೇವಾಲಯವನ್ನು ಷಡ್ವರ್ಗ ದೇವಾಲಯವೆಂದು ಗುರುತಿಸುವುದುಂಟು. *ಅಧಿಷ್ಠಾನ, ಪಾದ, ಪ್ರಸ್ತರ, ಕಂಠ, ಶಿಖರ ಮತ್ತು ಸ್ತೂಪಿ ಇವೇ ಷಡ್ವರ್ಗಗಳು. ಇವುಗಳಲ್ಲಿ ಕಂಠ ಹಾಗೂ ಶಿಖರವೇ ನಿರ್ಣಾಯಕ ಅಂಶಗಳು. ಅಧಿಷ್ಠಾನ, ಪಾದ ಪ್ರಸ್ತರ ಯಾವ ಆಕಾರದಲ್ಲಿದ್ದರೂ ಹೆಚ್ಚು ಒತ್ತು ಲಭಿಸಿಲ್ಲ. ಕಂಠ ಹಾಗೂ ಶಿಖರಗಳು ಚತುರಶ್ರ ಅಥವಾ ಶಾಲಾಕಾರವಾಗಿದ್ದಲ್ಲಿ ನಾಗರ, ವೃತ್ತಾಕಾರವಿದ್ದಲ್ಲಿ ವೇಸರ, ಷಡಶ್ರ ಅಥವಾ ಅಷ್ಟಾಶ್ರ ಎನಿಸಿದಲ್ಲಿ ದ್ರಾವಿಡ ಶೈಲಿಗಳೆನಿಸುತ್ತವೆ.* ಮಲೆನಾಡಿನ ಪರಿಸರದಲ್ಲಿ ಲುಘಾ ಮಾದರಿಯ ದೇವಾಲಯಗಳಿವೆ. ಇವುಗಳ ರಚನೆಯಲ್ಲಿ ಅಧಿಷ್ಠಾನ, ಪಾದ, ಶಿಖರ ಮತ್ತು ಸ್ತೂಪಿ ವರ್ಗಗಳಿವೆ. ಶಿಖರವು ಇಳಿಜಾರಾಗಿದ್ದು ಪಾದ ಅಥವಾ ಭಿತ್ತಿಯಿಂದ ಹೊರಕ್ಕೆ ಚಾಚಿದೆ. ಇಲ್ಲಿಯೂ ಶಿಖರದ ಆಕಾರದಿಂದ ಶೈಲಿಗಳ ವರ್ಗೀಕರಣ. ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯಗಳ ನಡುವೆ ನಿಂತ ರಚನೆ ಮೆಟ್ಟಿಲು ಮೆಟ್ಟಿಲಾಗಿ ಮೇಲೇರುತ್ತದೆ. ಪ್ರಸ್ತರದ ನಂತರ ಕಂಠ ಹಾಗೂ ಕಪೋತ ರಚನೆ ಪುನರಾವರ್ತನೆ ಗೊಂಡು ಮೇಲ್ಭಾಗದಲ್ಲಿ ಶಿಖರ ಮತ್ತು ಸ್ತೂಪಿಯನ್ನು ಹೊಂದಿದೆ. ಔತ್ತರೇಯ ಸಂಪ್ರದಾಯದಲ್ಲಿ ಘಂಟಾ, ಕಲಶ ರಚನೆಯಿದ್ದು ಘಾಂಸನಾಕಾರ ಎಂದು ಗುರುತಿಸುವುದುಂಟು.

ಔತ್ತರೇಯ ಶೈಲಿಗಳಲ್ಲಿ ದ್ರಾವಿಡ, ಭೂಮಿಜ, ಲತಿನ, ವಿಮಾನ-ನಾಗರ ಶೈಲಿಗಳು ಕರ್ನಾಟಕದಲ್ಲಿ ಪ್ರಕಟಗೊಂಡಿವೆ. ಇವುಗಳಲ್ಲಿ ದ್ರಾವಿಡ ಶೈಲಿಯನ್ನು ದಾಕ್ಷಿಣಾತ್ಯ ರಚನೆಗಳಿಂದ ಪ್ರತ್ಯೇಕಿಸುವ ಸಲುವಾಗಿ ಔತ್ತರೇಯ-ದ್ರಾವಿಡ ಎಂದು ಗುರುತಿಸಲಾಗಿದೆ. ಈ ಶೈಲಿಗಳನ್ನು ಛಾಧ್ಯದ ನಂತರದ ಮೇಲ್ಕಟ್ಟಡದಿಂದ ಗುರುತಿಸಬೇಕು. ಔತ್ತರೇಯ-ದ್ರಾವಿಡ ಶೈಲಿಯೂ ದಾಕ್ಷಿಣಾತ್ಯ ರಚನೆಗಳಂತೆ ಭೂಮಿರಚನಾ ಕ್ರಮದಲ್ಲಿ ಕಿರಿದಾಗುತ್ತಾ ಸಾಗುತ್ತದೆ. ಭೂಮಿಜ ಶೈಲಿಯು ಮೂಲತಃ ಬಾಗಿದ ಶಿಖರ ಮತ್ತು ಆಮಲಸಾರವನ್ನು ಹೊಂದಿದೆ. ಕರ್ನಾಟಕದಲ್ಲಿ ದ್ರಾವಿಡ ಶೈಲಿಯಂತೆ ಕಿರಿದಾಗುತ್ತಾ ಮೇಲೇರಿದ್ದು ಘಂಟಾ ಮತ್ತು ಕಲಶವನ್ನು ಹೊಂದಿದೆ. ಲತಿನ ಮತ್ತು ವಿಮಾನ-ನಾಗರ ಶೈಲಿಗಳು ಶೃಂಗ ಹಾಗೂ ಆಮಲಸಾರ ರಚನೆಯನ್ನು ಹೊಂದಿವೆ. ಲತಿನವು ಏಕಶೃಂಗವೆನಿಸಿದರೆ, ವಿಮಾನ-ನಾಗರವು ಬಹುಶೃಂಗವುಳ್ಳದ್ದು.

ಸಂಪ್ರದಾಯ ಶೈಲಿಗಳ ಗುರುತಿಸುವಿಕೆಯ ನಂತರ ಈ ದೇವಾಲಯಗಳಲ್ಲಿ ಕಾಣುವ ವಿಶೇಷ ರಚನೆಗಳನ್ನು ಉಲ್ಲೇಖಿಸ ಬೇಕು. ಉದಾಹರಣೆಗೆ ಬೇಲೂರಿನ ಚೆನ್ನಕೇಶವ ದೇವಾಲಯ ದಲ್ಲಿರುವ ಶಿಲಾಬಾಲಿಕೆಯರು, ಹಳೇಬೀಡಿನ ಗರ್ಭಗೃಹದ ಹಿಂಭಾಗದ ಭಿತ್ತಿಯಲ್ಲಿರುವ ಲೀಲಾವಿಗ್ರಹಗಳು, ಕಲ್ಯಾಣದ ಚಾಲುಕ್ಯರ ಕಾಲದ ಕೆಲವು ದೇವಾಲಯಗಳಲ್ಲಿ ಅಂತರಾಳ ಮತ್ತು ಮಂಡಪದ ನಡುವಣ ಸ್ತಂಭ ತೋರಣ ರಚನೆಗಳು, ಹಾನುಗಲ್ಲಿನ ತಾರಕೇಶ್ವರ ದೇವಾಲಯದ ನೃತ್ಯಮಂಡಪದ ಮೇಲ್ಗಡೆ ಕಾಣುವ ಸಂವರಣರಚನೆ, ಅರಸೀಕೆರೆಯ ಶಿವಾಲಯದಲ್ಲಿರುವ ನಕ್ಷತ್ರಾಕಾರ ವಿನ್ಯಾಸದ ನೃತ್ಯಮಂಡಪ, ಗರ್ಭಗೃಹದ ಹೊರಭಾಗದಲ್ಲಿ ಪ್ರದರ್ಶನಗೊಂಡ ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು ಇತ್ಯಾದಿಗಳನ್ನು ಹೆಸರಿಸಬಹುದು. ಎಲ್ಲಾ ದೇವಾಲಯಗಳಲ್ಲಿ ವಿಶೇಷ ರಚನೆಗಳನ್ನು ಕಾಣಲು ಸಾಧ್ಯವಾಗದು.

ಈಗ ದೇವಾಲಯದ ವಿಸ್ತೃತ ವಿವರಣೆಗೆ ಅವಕಾಶ, ಮೊದಲಿಗೆ ಊರ್ಧ್ವಕ್ರಮ; ನಂತರ ತಿರ್ಯಕ್ರಮ. ದೇವಾಲಯದ ವಿವಿಧ ಅಂಗಗಳನ್ನು ಪ್ರತ್ಯೇಕವಾಗಿ ಗುರುತಿಸಿ ವೈವಿಧ್ಯವಿದ್ದಲ್ಲಿ ವಿವರಿಸ ಬೇಕು. ದಾಕ್ಷಿಣಾತ್ಯ ದೇವಾಲಯಗಳಲ್ಲಿ ಉಪಪೀಠ, ಅಧಿಷ್ಠಾನ, ಪಾದ, ಪ್ರಸ್ತರ, ತಲರಚನೆ, ಕಂಠ, ಶಿಖರ, ಸ್ತೂಪಿಗಳಂತೆ ಔತ್ತರೇಯ ದೇವಾಲಯಗಳಲ್ಲಿ ಜಗತಿ, ಪೀಠ, ಜಂಘಾ, ಛಾದ್ಯ, ಭೂಮಿ ರಚನೆ, ಘಂಟಾ, ಕಲಶಗಳನ್ನು ಕಾಣಬಹುದು. ಬಾಗಿದ ಶಿಖರವುಳ್ಳ ದೇವಾಲಯಗಳಲ್ಲಿ, ಛಾದ್ಯದ ನಂತರ ಶೃಂಗ, ಉರುಶೃಂಗ ಪ್ರತ್ಯಂಗಗಳ ಜೋಡಣೆಯೊಂದಿಗೆ, ಅಮಲಸಾರ ಮತ್ತು ಕಲಶಗಳಿವೆ.

ತಿರ್ಯಕ್-ಕ್ರಮದಲ್ಲಿ ವಿಮಾನ / ಪ್ರಾಸಾದ, ಅಂತರಾಳ / ಅರ್ಧಮಂಡಪ, ನವರಂಗ / ಪ್ರತಿಮಾ ಮಂಡಪ, ನೃತ್ಯ ಮಂಡಪ / ನೃತ್ಯಶಾಲಾ, ಮುಖಮಂಡಪ, ಪ್ರಾಕಾರ, ಗೋಪುರ ಹಾಗೂ ಇನ್ನಿತರ ರಚನೆಗಳಿವೆ. ಈ ರಚನೆಗಳೊಂದಿಗೆ, ದೇವಾಲಯದ ಅವಿಭಾಜ್ಯ ಅಂಗವೆನಿಸುವ ಮೂರ್ತಿ ಶಿಲ್ಪವನ್ನೂ ಗಮನಿಸಬೇಕು. ದೇವಾಲಯಗಳಲ್ಲಿ ಮೂಲವಿಗ್ರಹವಲ್ಲದೆ, ಸ್ನಪನ ಬೇರ, ಕೌತುಕಬೇರ, ಬಲಿಬೇರ, ಉತ್ಸವ ಬೇರ, ಮುಂತಾದ ವಿಗ್ರಹಗಳಿಗೂ ಅವಕಾಶವಿದೆ. ಸಾಮಾನ್ಯವಾಗಿ ಮೂಲವಿಗ್ರಹ ಮತ್ತು ಉತ್ಸವ ಮೂರ್ತಿಗಳೇ ಹೆಚ್ಚು ಬಳಕೆಯಲ್ಲಿವೆ. ಉತ್ಸವಮೂರ್ತಿಗೇ ಸ್ನಪನ, ಬಲಿ ಮುಂತಾದ ಕಾರ್ಯಕ್ರಮಗಳು ನೆರವೇರಿಸಲ್ಪಡುತ್ತದೆ. ನವರಂಗ ಹಾಗೂ ಭಿತ್ತಿಯ ಹೊರಭಾಗದಲ್ಲಿ ಶಿಲಾಮೂರ್ತಿಗಳನ್ನು ಪ್ರದರ್ಶಿಸಲಾಗುತ್ತವೆ. ಇವೆಲ್ಲವೂ ಸುಂದರ ವಾಗಿ ಕಡೆದು ನಿಲ್ಲಿಸಿದ ಶಿಲ್ಪಗಳೆನಿಸಿವೆ. ದೇವಾಲಯದ ಶಿಖರದಲ್ಲಿ, ತಲ ಭೂಮಿ ರಚನೆಗಳಲ್ಲಿ, ಶುಕನಾಸದ ಮುಂಭಾಗದಲ್ಲಿ, ದೇವ ದೇವತೆಗಳ ಗಮನಾರ್ಹವಾದ ಶಿಲ್ಪಗಳಿರುತ್ತವೆ. ಇವನ್ನು ವಿಮಾನ ದೇವತೆ ಅಥವಾ ವಿಮಾನತಲ ದೇವತೆಗಳೆನ್ನುತ್ತಾರೆ. ಇವುಗಳ ಲಕ್ಷಣಗಳನ್ನೂ ಗುರುತಿಸಬೇಕು.

ಮೇಲ್ಕಾಣಿಸಿದ ವಿವರಗಳನ್ನು ವ್ಯವಸ್ಥಿತವಾಗಿ ಗ್ರಹಿಸಿ, ಕ್ರೋಢೀಕರಿಸಿ, ಪ್ರತಿಯೊಂದು ದೇವಾಲಯಗಳಿಗೆ ಪ್ರತ್ಯೇಕವಾಗಿ ನೀಡಿದಲ್ಲಿ ಶಾಸ್ತ್ರೀಯ ವರ್ಗೀಕರಣ ಹಾಗೂ ವಿವರಣೆಗೆ ನಾಂದಿ ಯಾಗಬಲ್ಲದು. ಈ ವಿವರಗಳನ್ನು ಮತ್ತೊಮ್ಮೆ ಹಂತ ಹಂತವಾಗಿ ಕೆಳಕಂಡಂತೆ ಗುರುತಿಸಲಾಗಿದೆ. ಈ ವ್ಯವಸ್ಥೆ ದೇವಾಲಯಗಳ ತೌಲನಿಕ ಅಧ್ಯಯನಕ್ಕೆ ಸಹಕಾರಿಯಾಗಬಲ್ಲದು.

| | | | |
|---|---|---|---|
| ೧. | ದೇವಾಲಯದ ಹೆಸರು | : | ಸ್ಥಳೀಯ / ಜನಪ್ರಿಯ / ಶಾಸನಸ್ಥ |
| ೨. | ಸ್ಥಳ | : | ಊರು /ತಾಲ್ಲೂಕು /ಜಿಲ್ಲಾ ಇತ್ಯಾದಿ., ದೇವಾಲಯ ಗಳು ಸಂಕೀರ್ಣದಲ್ಲಿದ್ದರೆ ಪ್ರತ್ಯೇಕ ಉಲ್ಲೇಖ |
| ೩. | ಕಾಲಮಾನ | : | ಶಾಸನಾಧಾರಿತ /ವಾಸ್ತುರಚನೆಗಳನ್ನಾಧರಿಸಿ ಅಥವಾ ಇನ್ನಿತರ ದಾಖಲೆಗಳಂತೆ ದೇವಾಲಯಗಳು ಹಂತ ಹಂತವಾಗಿ ಬೆಳೆದಿರುವ ಸಾಧ್ಯತೆ |
| ೪. | ಚಾರಿತ್ರಿಕ ಹಿನ್ನೆಲೆ | : | ದೇವಾಲಯ ನಿರ್ಮಾಣಕ್ಕೆ ಶಾಸನಾಧಾರಿತ ಪುರಾವೆ, ಅಂದಿನ ಧಾರ್ಮಿಕ, ಸಾಂಸ್ಕೃತಿಕ ಪರಿಸರ, ಒದಗಿಬಂದ ರಾಜಾಶ್ರಯ ಇತ್ಯಾದಿ., |

೫. ಸಂಪ್ರದಾಯ, ಶೈಲಿ : ಶಿಖರವನ್ನಾಧರಿಸಿದ ವರ್ಗೀಕರಣ

ದಾಕ್ಷಿಣಾತ್ಯ : ನಾಗರ / ದ್ರಾವಿಡ / ವೇಸರ / ಶಾಲಾಕಾರ/ ಲುಪಾಕಾರ / ಘಾಂಸನಾಕಾರ

ಔತ್ತರೇಯ : ಕಳಿಂಗ / ದ್ರಾವಿಡ / ಭೂಮಿಜ / ಲತಿನ / ವಿಮಾನ-ನಾಗರ / ತಲ ರಚನೆ / ಭೂಮಿ ರಚನೆ

೬. ವಿಶೇಷ ಲಕ್ಷಣಗಳು : ದೇವಾಲಯ ರಚನೆಯಲ್ಲಿ ಅಪರೂಪದ ಲಕ್ಷಣಗಳಿದ್ದಲ್ಲಿ ಅವುಗಳ ಉಲ್ಲೇಖ

೭. ದೇವಾಲಯಗಳ ವಿಸ್ತೃತ ವಿವರಣೆ

: ಊರ್ಧ್ವಕ್ರಮ

| ದಾಕ್ಷಿಣಾತ್ಯ | ಔತ್ತರೇಯ |
|---|---|
| ಉಪಪೀಠ | ಜಗತಿ |
| ಅಧಿಷ್ಠಾನ | ಪೀಠ |
| ಪಾದ/ಭಿತ್ತಿ/ ಹಾಗೂ ಅಲಂಕಾರ | ಜಂಘಾ ಹಾಗೂ ಅಲಂಕಾರ |
| ಪ್ರಸ್ತರ | ಛಾದ್ಯ |
| ತಲ ರಚನೆ | ಭೂಮಿ ರಚನೆ |
| ಶಿಖರ | ಘಂಟಾ |
| ಸ್ತೂಪಿ | ಕಲಶ |

: ತಿರ್ಯಕ್-ಕ್ರಮ

ವಿಮಾನ/ಪ್ರಾಸಾದ, ಅಂತರಾಳ/ ಅರ್ಧಮಂಡಪ, ಸುಕನಾಸಿ/ಶುಕನಾಸ, ನವರಂಗ / ಮಂಡಪ, ನೃತ್ಯಶಾಲಾ/ನೃತ್ಯಮಂಡಪ, ಮುಖಮಂಡಪ, ಪ್ರಾಕಾರ, ಗೋಪುರ ಇತ್ಯಾದಿ.

೮. ಮೂರ್ತಿ ಶಿಲ್ಪ : ಮೂಲ ವಿಗ್ರಹ, ನವರಂಗ / ಮಂಡಪವನ್ನಾವರಿಸಿದ ವಿಗ್ರಹಗಳು ತಲ/ ಭೂಮಿ ರಚನೆಯಲ್ಲಿ ವಿಮಾನತಲ ದೇವತೆಗಳು, ಪ್ರಾಕಾರಗಳಲ್ಲಿ ಪರಿವಾರ ದೇವತೆಗಳು ಉತ್ಸವ ಮೂರ್ತಿ ಇತ್ಯಾದಿ.

ಕೂ. ಸ. ಅಪರ್ಣ *

# ಶಾಸ್ತ್ರಗ್ರಂಥಗಳ ದೃಷ್ಟಿಯಲ್ಲಿ ದೇವಾಲಯದ ಪ್ರಾಕಾರ - ಗೋಪುರಗಳು

ಪ್ರಾಕಾರವನ್ನು ಪೂರ್ಣ ನಗರದ ಸುತ್ತ ನಿರ್ಮಿಸಬಹುದಾದರೂ (ಅಗ್ನಿ CVI ೧-೨), ದೇವಾಲಯಕ್ಕೆ ಸಂಬಂಧಿಸಿದಂತೆಯೇ ಪ್ರತ್ಯೇಕ ಪ್ರಾಕಾರವು ಸಾಮಾನ್ಯವಾಗಿರುವುದುಂಟು. ಪರಿವಾರ ದೇವತೆಗಳಿಗೆ ಸ್ಥಾನ, ಬಲಿಹರಣ, ಆಲಯದ ರಕ್ಷಣೆ, ಮತ್ತು ಶೋಭೆಯ ದೃಷ್ಟಿಯಿಂದ ದೇವಾಲಯದ ಸುತ್ತಲಿರುವ ರಚನೆಯೇ 'ಪ್ರಾಕಾರ'. ಆವರಣ ನಿಹಾರ, ಕೋಶ - ಎಂಬುವು ಪ್ರಾಕಾರದ ಪರ್ಯಾಯ ಪದಗಳು.

ಪ್ರಾಕಾರದ ಭಿತ್ತಿಯ ಎತ್ತರವು ಮೂಲ ದೇವಾಲಯದ ಉತ್ತರದವರೆಗೆ ಅಥವಾ (ಸ್ತಂಭದ) ಕುಂಭ-ಮಂಡಿಯವರೆಗೆ ಇರಬೇಕೆಂದು ಮಯಮತವು ಹೇಳಿದೆ. ಹೆಚ್ಚೆಂದರೆ, ಖಂಡಹರ್ಮ್ಯ ಅಥವಾ ಶಿಖರದವರೆಗಿರಬಹುದೆಂದು ಇದರಲ್ಲಿದ್ದರೂ ಇಲ್ಲಿ 'ಕಲಶದವರೆಗೆ' ಎಂದು ಹೇಳಿಲ್ಲವಾದ್ದರಿಂದ ಪ್ರಾಕಾರ ಭಿತ್ತಿಯ ಎತ್ತರವು ದೇವಾಲಯದ ಎತ್ತರಕ್ಕಿಂತ ಕಡಿಮೆಯಿರಬೇಕು ಎಂಬ ಸೂಚನೆ ಇದೆ. ಆದರೆ ಸುಪ್ರಭೇದಾಗಮವು ಪ್ರಾಕಾರ ಭಿತ್ತಿಯು ಪ್ರಾಸಾದದಷ್ಟೇ ಪ್ರಮಾಣದಲ್ಲಿರಬೇಕೆಂದು ಹೇಳಿದೆ ಪ್ರಾಕಾರವು ದೇವಾಲಯದಿಂದ ಎಷ್ಟು ದೂರದಲ್ಲಿರಬೇಕೆಂದು ದೇವಾಲಯದ ಅಳತೆಗೆ ಹೊಂದಿಸಿ ಗ್ರಂಥವೊಂದರಲ್ಲಿ ಹೇಳಲಾಗಿದೆ. ಪ್ರಾಕಾರವು, ಪ್ರಾಸಾದದ ನಾಲ್ಕನೇ ಒಂದರಷ್ಟು ಎತ್ತರದಲ್ಲಿರಬೇಕೆಂದು ಅಗ್ನಿಪುರಾಣವು ಹೇಳಿದೆ (XLII ೧೨).

ಸಾಮಾನ್ಯವಾಗಿ ಎಲ್ಲ ಗ್ರಂಥಗಳೂ ಒಂದರಿಂದ ಐದು ಪ್ರಾಕಾರಗಳನ್ನು ಹೇಳಿವೆಯಲ್ಲದೆ, ಒಂದೊಂದು ಪ್ರಾಕಾರಕ್ಕೂ ಬೇರೆ ಬೇರೆ ಹೆಸರುಗಳನ್ನು ನೀಡಿವೆ. ಇವುಗಳು ಕ್ರಮವಾಗಿ (ಒಳಗಿನಿಂದ)- ಅಂತರ್ಮಂಡಲ, ಅಂತರ್ಹಾರಾ, ಮಧ್ಯ ಮಹಾರಾ, ಮರ್ಯಾದಾ ಮತ್ತು ಮಹಾಮರ್ಯಾದಾ. ನಾಲ್ಕನೇ ಪ್ರಾಕಾರವನ್ನು ಕಾಶ್ಯಪಶಿಲ್ಪವು 'ಮಧ್ಯ' ಎಂದೂ ಮಾನಸಾರವು 'ಪ್ರಾಕಾರ' ಎಂದೂ ಶಿಲ್ಪರತ್ನವು 'ಬಾಹ್ಯಹಾರ' ಎಂದೂ ಗುರುತಿಸಿವೆ. ಕಾಮಿಕಾಗಮ ಮಾನಸಾರ ಮತ್ತು ಮಯಮತಗಳಲ್ಲಿ ಮೂರನೆಯ ಪ್ರಾಕಾರವನ್ನು 'ಮಧ್ಯಹಾರ' ಎನ್ನಲಾಗಿದೆ. ಐದನೆಯ ಪ್ರಾಕಾರವನ್ನು ಶಿಲ್ಪರತ್ನವು 'ಮರ್ಯಾದಾ' ಎಂದೂ ಮಯಮತವು 'ಮಹಾಮರ್ಯಾದಾ' ಅಥವಾ 'ಮರ್ಯಾದಿ ಭಿತ್ತಿ' ಎಂದೂ (ಅದೊ) ಕರೆದಿವೆ. (ಮಯಮತದಲ್ಲಿ ಈ ಹೆಸರುಗಳನ್ನು ಒಂದೆಡೆ ಕ್ರಮವಾಗಿ ನೀಡಿಲ್ಲ). ಸುಪ್ರಭೇದಾಗಮವು ಈ ಐದು ಪ್ರಾಕಾರಗಳನ್ನು ಕ್ರಮವಾಗಿ ಅಂತರ್ಮಾಲಾ, ಅಂತರ್ಭಾರಾ (=ಅಂತರ್ಹಾರ?), ಮಧ್ಯಭಾರಾ (=ಮಧ್ಯರ್ಯಾಹಾ?), ಮರ್ಯ್ಯಾದಿ ಮತ್ತು ಮಹಾಮರ್ಯ್ಯಾದಿ ಎಂದು ಹೆಸರಿಸಿದೆಯಲ್ಲದೆ, ಇದರ ಅಳತೆಯನ್ನು ಮೂಲ ಪ್ರಾಸಾದಕ್ಕೆ ಹೊಂದಿಸಿ ಹೇಳಿದೆ. ಮಾನಸಾರದಲ್ಲಿ ಐದು ಪ್ರಾಕಾರಗಳನ್ನು ಒಟ್ಟಿಗೇ ಹೆಸರಿಸಿದ್ದರೂ, ಐದನೇ ಪ್ರಾಕಾರ ದ್ವಾರದಿಂದ ಹೊರಗೆ ಆರು ಮತ್ತು ಏಳನೇ ಪ್ರಾಕಾರಗಳನ್ನು ನಿರ್ಮಿಸಬೇಕೆಂದೂ ಒಂದೆಡೆ ಹೇಳಿದೆ. ದೇವಾಲಯದಲ್ಲಿ ಒಂದೇ ಪ್ರಾಕಾರವಿದ್ದಾಗ ಅದು 'ಅಂತರ್ಹಾರ' ವೆಂದೂ, ಮೂರು ಪ್ರಾಕಾರಗಳಿದ್ದಾಗ ಅದು ಕ್ರಮವಾಗಿ ಅಂತರ್ಹಾರ, ಮಧ್ಯ ಮಹಾರ ಮತ್ತು ಮರ್ಯಾದಿ ಭಿತ್ತಿ ಎಂದೂ ಮಯಮತವು ಹೆಸರಿಸಿದೆ. ಮಾನಸಾರವು ಐದು ಪ್ರಾಕಾರಕ್ಕೂ ಬೇರೆ ಬೇರೆ ಅಳತೆಗಳನ್ನು ಹೇಳಿದೆ

ಪ್ರಾಕಾರವು, ಅಧಿಷ್ಠಾನಾದಿವರ್ಗಗಳು, ಖಂಡಹರ್ಮ್ಯಗಳಿಂದ ಕೂಡಿರಬೇಕೆಂದೂ, ಮೇಲ್ಭಾಗದಲ್ಲಿ ಉತ್ತರ, ವಾಜನ, ಅಬ್ಜ, ಕ್ಷೆಪಣಗಳಿರಬೇಕೆಂದೂ ಋಜು ಭಿತ್ತಿಯಾಗಿದ್ದಲ್ಲಿ, ಶೀರ್ಷಕವು ಅರ್ಧವೃತ್ತ ಅಥವಾ ವೃತ್ತಾಕಾರದಲ್ಲಿರಬೇಕೆಂದೂ ಮಯಮತವು ಹೇಳಿದೆ. ಮಾನಸಾರದಲ್ಲಿ, ಪ್ರಾಕಾರ ಗೋಡೆಯ ಮೇಲ್ತುದಿಯ ಅಲಂಕರಣ ವನ್ನು ಹೇಳಿದ್ದು, ಕೋಟೆ ತೆನೆಯಂತಹ ಈ ಅಲಂಕರಣವನ್ನು ಮಯಮತವು ಛತ್ರಶೀರ್ಷ/ಸಾಲಶೀರ್ಷ ಎಂದು ಕರೆದಿದೆ. ಛತ್ರಶೀರ್ಷವನ್ನು ನಂದಿ, ಭೂತ, ಕುಬ್ಜ ಶಿಲ್ಪಗಳಿಂದ ಅಲಂಕರಿಸಬೇಕೆಂದೂ ಕಾಮಿಕಾಗಮಾದಿ ಗ್ರಂಥಗಳಲ್ಲಿದೆ

* ೩೫೬, ೧೧ನೇ ಮುಖ್ಯರಸ್ತೆ, ಶ್ರೀನಿವಾಸನಗರ ಎರಡನೇ ಹಂತ, ಬನಶಂಕರಿ ಮೊದಲನೇ ಹಂತ, ಬೆಂಗಳೂರು - ೫೬೦ ೦೫೦

ಪ್ರಾಕಾರದ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ದ್ವಾರಗಳನ್ನು ರಚಿಸಬೇಕೆಂದು ಮಾನಸಾರವು ಹೇಳಿದ್ದು, ಇದನ್ನು 'ಮಹಾದ್ವಾರ' ಎಂದು ಕರೆದಿದೆ.

ಪ್ರಾಕಾರದ ಒಳಮುಖದಲ್ಲಿ ಸುತ್ತಲಿರುವ ಮೊಗಸಾಲೆಯನ್ನು 'ಆವೃತಮಂಟಪ' ಎಂದು ಮಯಮತವೂ 'ಆವೃತಮಾಲಿಕಾ' ಎಂದು ಮಾನಸಾರವೂ ಕರೆದಿದೆ. ಒಂದು ಅಥವಾ ಎರಡು ತಲಗಳಿರುವ ಆವೃತ ಮಂಟಪವ ಸುತ್ತಲೂ ಇರಬಹುದೆಂದೂ ಇದನ್ನು ಭಿತ್ತಿಯ ಒಳಮುಖದಲ್ಲಿ ರಚಿಸಬೇಕೆಂದೂ ಹೇಳಲಾಗಿದೆ. ಇದು ವೇದಿಕಾ ಉಪಪೀಠ, ಪಾದ, ಪ್ರಸ್ತರಗಳಿಂದ ಕೂಡಿರಬೇಕು ಈ ಆವೃತಮಾಲಿಕಾವನ್ನು ಪರಿವಾರಕ್ಕಾಗಿ ರಚಿಸಬೇಕೆಂದು ಹೇಳಿರುವ ಮಾನಸಾರವು, ಅಲ್ಲಿ ಸೋಪಾನದಿಂದ ಕೂಡಿದ 'ಭದ್ರ'ವನ್ನು ರಚಿಸಬೇಕೆಂದಿದೆ. ಈ ಮಾಲಿಕಾದ ಮೇಲೆ ಕೈಪಿಡಿಗೋಡೆಯನ್ನು ರಚಿಸಬೇಕೆಂದೂ ಇದರಲ್ಲಿದ್ದು, ಅದನ್ನು 'ವಪ್ರ' ಎಂದು ಕರೆದಿದೆ. ಈ 'ವಪ್ರ'ವು ವಜ್ರಾಕಾರ / ಛತ್ರಾಕಾರದಲ್ಲಿದ್ದು, ಇದರ ಮೇಲೆ ಪ್ರಸ್ತರವೂ ಇದ್ದು, ಕರ್ಣ ಹರ್ಮ್ಯದಿಂದ ಅಲಂಕೃತಗೊಂಡಿರಬೇಕೆಂದು ಹೇಳಿದೆ, ಆವೃತಮಂಟಪವು ಮಾಲಿಕಾಕೃತಿ ಅಥವಾ ಮಹಾವಾರ ರೀತಿಯಲ್ಲಿರಬಹುದೆಂದು ಮಯಮತವು ಹೇಳಿದೆ: ಸುತ್ತಲೂ ಪರಿವಾರಾಲಯಗಳಿಂದ ಕೂಡಿದ ಆವೃತಮಂಟಪವು 'ಮಾಲಿಕಾ ರಚನೆ' ಎನಿಸಿದರೆ, ಈ ರೀತಿ ಸಾಲು ಗುಡಿಗಳಿಲ್ಲದ ರಚನೆಯು 'ಮಹಾವಾರ' ಎನಿಸುತ್ತದೆ. ಮಧ್ಯಹಾರಾ ಮತ್ತು ಅಂತರ್ಹಾರಾದಲ್ಲಿ (ಮೂರು ಮತ್ತು ಎರಡನೇ ಪ್ರಾಕಾರದಲ್ಲಿ) ಒಂದರಿಂದ ಐದು ತಲಗಳ ಮಾಲಿಕಾಪಂಕ್ತಿಯನ್ನು ರಚಿಸಬಹುದೆಂದೂ, ಇದು ಷಡ್ವರ್ಗಗಳಿಂದ ಕೂಡಿರಬಹುದೆಂದೂ ಮಯಮತದಲ್ಲಿ ಹೇಳಿದೆಯಲ್ಲದೆ, ಇದು ಕೂಟ ಕೋಷ್ಠಗಳಿಂದ ಕೂಡಿದ್ದು, ಜಾಲಕಗಳಿಂದ ಅಲಂಕೃತ ಗೊಂಡಿರಬೇಕೆಂದೂ ಇದರಲ್ಲಿ ಹೇಳಿದೆ. ಮಾಲಿಕಾಪಂಕ್ತಿಯ ಶಿಖರವು ಛತ್ರಾಕಾರ, ಸಭಾಕಾರ ಅಥವಾ ಲುಫಾ ರೀತಿಯಲ್ಲಿರಬಹುದೆಂದು ಕಾಶ್ಯಪಶಿಲ್ಪವೂ ಶಾಲಾ, ಮಂಟಪ ಅಥವಾ ಸಭಾಕಾರದಲ್ಲಿರಬಹುದೆಂದು ಮಯಮತವೂ ಹೇಳಿದೆ. ಮಾನಸಾರದ ಪ್ರಕಾರ, ಪರಿವಾರ ವಿಮಾನವು ೧-೨ ಅಂತಸ್ತುಗಳಿಂದ ಕೂಡಿರಬಹುದು ಅಥವಾ ಮೂಲ ದೇವಾಲಯದಂತೇ ಇರಬಹುದು.

ಮಯಮತದಲ್ಲಿರುವ ಇತರ ವಿವರಗಳೆಂದರೆ, ಮಾಲಿಕಾ ಪಂಕ್ತಿಯಲ್ಲಿರುವ ಪರಿವಾರ ಗುಡಿಗಳನ್ನು ಶಾಸ್ತ್ರದಲ್ಲಿ ಹೇಳಿರುವಂತೆ ರಚಿಸಬೇಕಲ್ಲದೆ, ಅವು ದೇವಾಲಯಕ್ಕೆ ಅಭಿಮುಖವಾಗಿರಬೇಕು; ಈ ಗುಡಿಗಳ ಮುಂದೆ ಹೊರಭಾಗದಲ್ಲಿ ನೃತ್ತಮಂಟಪ, ಬಲಿಪೀಠಗಳಿರಬೇಕು; ಸ್ನಾನಮಂಟಪ ಮತ್ತು ನೃತ್ತಮಂಟಪಗಳನ್ನು ಈ ಪರಿವಾರಾಲಯಗಳ ಮಧ್ಯೆಯೂ ರಚಿಸಬಹುದು; ಬಲಿಪೀಠವು ಪ್ರಾಕಾರದ ಒಳಗಿರಬೇಕು, ಪೈಶಾಚ ಪೀಠವು ಪ್ರಾಕಾರದ ಹೊರಗಿರಬೇಕು; ಬಲಿಪೀಠವು ಪೈಶಾಚಪೀಠ ಮತ್ತು ದೇವಾಲಯದ ಮಧ್ಯೆ ಇರಬೇಕು. ಪ್ರಾಕಾರ ದೊಳಗೆ ವೃಷಭದ ಮುಂದೆ ದೇವಾಲಯದಿಂದ ದೂರದಲ್ಲಿ ಧ್ವಜಸ್ಥಾನವಿರಬೇಕು ಮತ್ತು ಅದರ ಮುಂದೆ ತ್ರಿಶೂಲವಿರಬೇಕು. ಇವು ಪ್ರಾಕಾರದೊಳಗೆ, ಮಹಾದ್ವಾರದಿಂದ ದೇವಾಲಯದೆಡೆಗೆ ಬರುವಲ್ಲಿ ಎಡಗಡೆಗಿರಬೇಕು.

ಪ್ರಾಕಾರದ ಮೇಲೆ ಕಟ್ಟುವ ಗೋಪುರದ ಬಗ್ಗೆ ಹೇಳುವಾಗ, ಮೂಲ ದೇವಾಲಯವು ಚಿಕ್ಕದಿರಲಿ, ದೊಡ್ಡದಿರಲಿ ಅದಕ್ಕೆ ತಕ್ಕಂತೆ ಗೋಪುರವಿರಬೇಕೆಂದು ಮಯಮತ, ಮಾನಸಾರ ಗ್ರಂಥಗಳು ಹೇಳಿವೆ. ಗೋಪುರವು ಪ್ರಾಕಾರದ ಮಧ್ಯದಲ್ಲಿರಬೇಕೆಂದೂ, ನಾಲ್ಕು ದಿಕ್ಕಿನಲ್ಲಿರಬೇಕೆಂದೂ ಗ್ರಂಥಗಳಲ್ಲಿದೆ.

ಐದು ಪ್ರಾಕಾರಗಳ ಮೇಲೆ ಕ್ರಮವಾಗಿರುವ ಗೋಪುರಗಳ ಹೆಸರುಗಳೆಂದರೆ - ದ್ವಾರ ಶೋಭ, ದ್ವಾರಶಾಲಾ, ದ್ವಾರ ಪ್ರಾಸಾದ, ದ್ವಾರಹರ್ಮ್ಯ ಮತ್ತು ದ್ವಾರಗೋಪುರ. ಕೊನೆಯದಾದ 'ದ್ವಾರ ಗೋಪುರ'ವನ್ನು ಮಾನಸಾರವು 'ಮಹಾಗೋಪುರ' (೩೩.೪-೫) ಎಂದು ಕರೆದಿದೆ. ಅಜಿತಾಗಮವು, ಮೊದಲ ಪ್ರಾಕಾರದ ಗೋಪುರವನ್ನು 'ದ್ವಾರಗೋಪುರ' ಎಂದೂ ಕೊನೆಯದನ್ನು 'ಮಹಾಗೋಪುರ' ಎಂದೂ, ಉಳಿದ ಮೂರನ್ನು 'ಗೋಪುರ' ಎಂದೂ ಕರೆದಿದೆ. ಸುಪ್ರಭೇದಾಗಮದಲ್ಲಿ ಈ ಗೋಪುರಗಳ ಹೆಸರುಗಳನ್ನು ಕ್ರಮವಾಗಿ ಹೇಳಿದ್ದರೂ, ವಿಸ್ತಾರದ ಆಧಾರದ ಮೇಲೆ ಗೋಪುರಗಳಿಗೆ ಈ ಹೆಸರನ್ನು ನೀಡಿದಂತಿದೆ. ಮೂಲ ದೇವಾಲಯಕ್ಕೆ ಸಂಬಂಧಿಸಿದಂತೆ ಗೋಪುರದ ವಿವಿಧ ಅಳತೆಗಳನ್ನು ಮಯಮತವು ಹೇಳಿದೆ. ಮಾನಸಾರವು, ಪ್ರತಿಗೋಪುರಕ್ಕೂ ಪ್ರತ್ಯೇಕವಾಗಿ ಐದು ರೀತಿಯ ವಿಸ್ತಾರವನ್ನು ಹೇಳಿದೆ ಮತ್ತು ಈ ಎಲ್ಲ ರೀತಿಯ ಗೋಪುರದಲ್ಲೂ ಎತ್ತರವು ವಿಸ್ತಾರಕ್ಕಿಂತಲೂ ಹೆಚ್ಚಾಗಿರಬೇಕೆಂದು ಹೇಳಿದೆ ಗೋಪುರದ ಎತ್ತರವು ಮೂಲ ಪ್ರಾಸಾದಕ್ಕಿಂತಲೂ ಕಡಿಮೆ ಇರಬೇಕೆಂದು ಅಗ್ನಿಪುರಾಣವೂ ಹೇಳಿದೆ. (XLII. ೨೨ ಉದ್ಧೃತ)

ಗೋಪುರಗಳ ಬಗ್ಗೆ ಹೇಳುವಾಗ ಗ್ರಂಥಗಳು, ಊರ್ಧ್ವಮುಖದಲ್ಲಿ ಷಡ್ವರ್ಗಗಳನ್ನೂ, ಕೂಟ-ಶಾಲಾಗಳನ್ನೂ ಹೇಳಿದ್ದರೆ (ಕಾಮಿ ೩೦-೩೨) ಮಾನಸಾರದಲ್ಲಿ ಈ ಕುರಿತು ಸುದೀರ್ಘ ವಿವರಗಳಿವೆ. ಮಯಮತದಲ್ಲಿ ಗೋಪುರಕ್ಕೆ ಪಾದಬಂಧ ಅಧಿಷ್ಠಾನವನ್ನು ಹೇಳಿದೆ. ರೌರವಾಗಮದಲ್ಲಿ, ಶಿಖರಭಾಗವು ಶಾಲಾಕಾರ, ಮಂಡಪಾಕಾರ, ಲುಫಾಕಾರ ಅಥವಾ ಛತ್ರಾಕಾರದಲ್ಲಿರಬಹುದೆಂಬ ಸೂಚನೆ ಇದೆ. ಮಯಮತವೂ ಬಹುಪಾಲು ಇದನ್ನೇ ಅನುಮೋದಿಸಿದ್ದು, ಸಭಾ, ಶಾಲಾ ಅಥವಾ ಮಂಟಪಾಕಾರ ರೀತಿಯ ಶೀರ್ಷಭಾಗವನ್ನು ಹೇಳಿದೆ (೨೪.೧೩೭). ಈ ಎಲ್ಲ

ವಿವರಗಳೂ, ರೌರವಾಗಮದಲ್ಲಿ ಹೇಳಿರುವಂತೆ, ಮೂಲ ದೇವಾಲಯದ ಮೇಲ್ಕಟ್ಟಡದ ರಚನೆಯನ್ನು ಹೋಲುತ್ತಿರುವುದು ಗಮನಾರ್ಹವಾಗಿದೆ. ಈ ಗೋಪುರದಲ್ಲಿ ಮಧ್ಯೆ (ಒಳಗಡೆ) ಇರುವ ತೆರೆದ ಸ್ಥಳವನ್ನು 'ನಾಲಿಗೇಹ' ಎಂದು ಮಯಮತವೂ ನಾಲಿಗೇಹ, ಗರ್ಭಗೇಹ ಎಂದು ಮಾನಸಾರವೂ ಹೇಳಿದೆ. ಮಾನಸಾರದಲ್ಲಿ ಗೋಪುರದ ಅಂಗಗಳ ಬಗ್ಗೆ ಅನೇಕ ವಿವರಗಳಿವೆಯಾದರೂ ಆ ರೀತಿಯ ರಚನೆಯನ್ನು ಗುರುತಿಸುವುದು ಕಷ್ಟವೇ ಆಗಿದೆ. ನಾಲಿಗೇಹ / ಗರ್ಭಗೇಹ (Central hall) ದ ಸುತ್ತ ಭಿತ್ತಿಯೂ, ಅದರ ಸುತ್ತಲೂ ತೆರೆದ ಸ್ಥಳವೂ (ಶಿಖರದಲ್ಲಿರುವಂತೆ) ಇದ್ದು, ಈ ಸ್ಥಳವನ್ನು ಈ ಗ್ರಂಥವು ಅಲ್ಲಿಂದ, ಅಂತರಾಳ (Corridor) ಎಂದು ಕರೆದಿದೆ. ಈ ಭಾಗದಲ್ಲಿ 'ಅನುಶಾಲಾ'ವನ್ನು (ante-chamber - ಪಿಕೆಆ) ರಚಿಸಬಹುದೆಂದು ಇದರಲ್ಲಿದ್ದು, ಈ ತೆರೆದ ಸ್ಥಳ (ಅಂತರಾಳ)ದ ಸುತ್ತ ಕೂಟಕೋಷ್ಠಗಳನ್ನು ರಚಿಸಬಹುದಾಗಿದೆ. ಮಧ್ಯಕೋಷ್ಠದ (inner chamber) ಶಾಲಾದಲ್ಲಿ ಭದ್ರಶಾಲಾ (? Opening hall - ಪಿಕೆ ಆ) ಅಥವಾ ಪಕ್ಷಶಾಲಾ (Side hall), ಅಥವಾ ಊರ್ಧ್ವ ಶಾಲಾ ಅಥವಾ ಅರ್ಧ ಶಾಲಾ (nest-like - ಪಿಕೆ ಆ)ವನ್ನು ರಚಿಸಬಹುದಾಗಿದೆ. ಗೋಪುರದಲ್ಲಿ ಮಧ್ಯೆ ಇರುವ ದ್ವಾರವನ್ನು 'ಮಧ್ಯಭದ್ರ' ಎಂದು ಈ ಗ್ರಂಥವು ಕರೆದಿದ್ದು, ಅಕ್ಕಪಕ್ಕದಲ್ಲಿರುವ ದ್ವಾರಗಳನ್ನು (?) 'ನೇತ್ರಭದ್ರ' ಎಂದಿದೆ. ಇದರ ಪ್ರಕಾರ ಹಂತಹಂತದಲ್ಲೂ ಕಾಣಬರುವ ಶಾಲಾಗೆ 'ಮುಖಶಾಲಾ' ಎಂದೂ ಅಂತ್ಯದಲ್ಲಿರುವ ದೊಡ್ಡ ಶಾಲಾಗೆ 'ಮಹಾಶಾಲಾ' ಎಂದೂ ಹೆಸರು; ಈ ಮಹಾಶಾಲಾದ ಮೇಲೆ ಎರಡೂ ಕಡೆ ('ದ್ವಿಲಲಾಟೀ') ಇರುವ ದೊಡ್ಡ ನಾಸಿಗೆ 'ಮಹಾನಾಸಿ' ಎಂದೂ, ಇವೆರಡರ ಮಧ್ಯೆ ಇರುವ ನಾಸಿಗೆ 'ಮಧ್ಯನಾಸಿ' ಎಂದೂ ಹೆಸರು. ಗೋಪುರವನ್ನು ಜಾಲಕಗಳಿಂದ ಅಲಂಕರಿಸಬೇಕೆಂಬ ವಿಷಯವೂ ಈ ಗ್ರಂಥದಲ್ಲಿದೆ.

ಚಿಕ್ಕ ದೇವಾಲಯಗಳಲ್ಲಿ ಗೋಪುರಕ್ಕೆ ಒಂದರಿಂದ ಐದು ತಲಗಳಿರಬೇಕು; ಮಧ್ಯಮ ದೇವಾಲಯಗಳಲ್ಲಿ ಗೋಪುರವು ಎರಡರಿಂದ ಆರು ತಲಗಳನ್ನು ಹೊಂದಿರಬೇಕು; ದೊಡ್ಡ ದೇವಾಲಯಗಳ ಗೋಪುರವು ಮೂರರಿಂದ ಏಳು ತಲಗಳನ್ನು ಹೊಂದಿರಬೇಕು ಎಂದು ಮಯಮತವು ಹೇಳಿದೆ. ಕಾಮಿಕಾಗಮ ದಲ್ಲಿ, ಗೋಪುರಕ್ಕೆ ಏಳು ತಲಗಳನ್ನು ಹೇಳಿದ್ದು, ಏಳು ತಲಗಳಿರುವುದು ಶ್ರೇಷ್ಠ ಎಂದಿದೆ ಮಾನಸಾರವು, ಮೊದಲ ಪ್ರಾಕಾರದ ಗೋಪುರಕ್ಕೆ, ಅಂದರೆ, 'ದ್ವಾರಶೋಭಾ'ಗೆ ಒಂದು ತಲ, ದ್ವಾರಶಾಲಾಗೆ ಎರಡು ತಲ, ದ್ವಾರಪ್ರಾಸಾದಕ್ಕೆ ಮೂರು ತಲ, ದ್ವಾರಹರ್ಮ್ಯಕ್ಕೆ ನಾಲ್ಕು ತಲ ಮತ್ತು ಮಹಾಗೋಪುರಕ್ಕೆ ಐದು ತಲಗಳು ಇರಬೇಕೆಂದು ಹೇಳಿದೆಯಾದರೂ, ಇದರಲ್ಲೂ ಮತ್ತೆ ಬೇರೆ ಬೇರೆ ತಲಗಳನ್ನು ಹೇಳಿದ್ದು, ದೊಡ್ಡ ದೇವಾಲಯ ಗಳಿಗೆ ಹದಿನೇಳು ತಲಗಳಿರಬಹುದೆಂದೂ ಹೇಳಿದೆ ಈ ತಲಗಳನ್ನು ಹೇಗೆ ರಚಿಸಬೇಕೆಂದೂ ಇದರಲ್ಲಿ ವಿವರಗಳಿವೆ. ಕಾಶ್ಯಪಶಿಲ್ಪದ ಪ್ರಕಾರ, 'ದ್ವಾರಶೋಭಾ'ದಲ್ಲಿ ೨-೪ ತಲಗಳೂ, 'ದ್ವಾರಶಾಲಾ' ಮತ್ತು ದ್ವಾರಪ್ರಾಸಾದಗಳಲ್ಲಿ ೩-೫ ತಲಗಳೂ, ದ್ವಾರ ಹರ್ಮ್ಯಕದಲ್ಲಿ ೪-೬ ತಲಗಳೂ, ದ್ವಾರಗೋಪುರದಲ್ಲಿ ೫-೭ ತಲಗಳೂ ಇರಬಹುದಾಗಿದೆ; ಅಥವಾ ಎಲ್ಲಾ ಪ್ರಾಕಾರದಲ್ಲೂ ೧-೩ ತಲದವರೆಗೆ ಇರಬಹುದಾಗಿದೆ.

ಗೋಪುರದ ಆಕಾರದ ಬಗ್ಗೆಯೂ ಕೆಲವು ಗ್ರಂಥಗಳು ಹೇಳಿವೆ. ಗೋಪುರವು ಮಾಲಿಕಾಕಾರ ಅಥವಾ ಗೋಪುರಾಕೃತಿ ಯಲ್ಲಿರಬೇಕೆಂದು ಸುಪ್ರಭೇದಾಗುವು ಹೇಳಿದೆ. ಮಯಮತ ಮತ್ತು ಕಾಮಿಕಾಗಮಗಳಲ್ಲಿ, 'ದ್ವಾರಶೋಭಾ'ವು ಮಂಟಪ ದಂತೆಯೂ, ದ್ವಾರಶಾಲಾವು 'ಶಾಲಾ'ದಂತೆಯೂ, ದ್ವಾರ ಪ್ರಾಸಾದವು ಪ್ರಾಸಾದದಂತೆಯೂ, ದ್ವಾರಹರ್ಮ್ಯವು ಮಾಲಿಕಾದಂತೆಯೂ, ದ್ವಾರಗೋಪುರವು ಶಾಲಾಗಳಿಂದ ಕೂಡಿದ ಕಟ್ಟಡದಂತೆಯೂ ಇರಬೇಕೆಂದು ಹೇಳಿದೆ. ಕಾಶ್ಯಪಶಿಲ್ಪದಲ್ಲಿಯೂ ಇದೇ ರೀತಿ ಹೇಳಲಾಗಿದ್ದು, ದ್ವಾರಶಾಲಾ ಮತ್ತು ದ್ವಾರ ಪ್ರಾಸಾದಗಳನ್ನು ಮಾತ್ರ ಕ್ರಮವಾಗಿ 'ಮಂಡ'ದಂತೆ ಮತ್ತು ಸದನಾಕೃತಿಯಲ್ಲಿ ನಿರ್ಮಿಸಬೇಕೆಂದಿದೆ.

ಗೋಪುರದ ವಿವಿಧ ರೀತಿಗಳನ್ನು ಹೇಳುತ್ತಾ, ಮಯಮತವು, ಮೊದಲಿನ 'ದ್ವಾರಶೋಭಾ' ಗೋಪುರದಲ್ಲಿ ಶ್ರೀಕರ, ರತಿಕಾಂತ, ಕಾಂತವಿಜಯಗಳನ್ನೂ, 'ದ್ವಾರಶಾಲಾ'ದಲ್ಲಿ ವಿಜಯಕಾಲಕ, ವಿಶಾಲಾಲಯ, ವಿಪ್ರತೀಕಾಂತಗಳನ್ನೂ, 'ದ್ವಾರಪ್ರಾಸಾದ'ದಲ್ಲಿ ಶ್ರೀಕಾಂತ, ಶ್ರೀಕೇಶ, ಕೇಶವಿಶಾಲಕಗಳನ್ನೂ, 'ದ್ವಾರಹರ್ಮ್ಯ'ದಲ್ಲಿ ಸ್ವಸ್ತಿಕ, ದಿಶಾವಸ್ತಿಕ, ಮಾರ್ದಲ ರೀತಿಗಳನ್ನೂ, ಕೊನೆಯದಾದ 'ದ್ವಾರಗೋಪುರ'ದಲ್ಲಿ ಮಾತ್ರಕಾಂಡ, ಶ್ರೀವಿಶಾಲ ಮತ್ತು ಚತುರ್ಮುಖ ರೀತಿಗಳನ್ನೂ ಹೇಳಿದೆ. ಇವುಗಳ ಅಳತೆ ಮತ್ತು ಅದರಲ್ಲಿರಬೇಕಾದ ಉಪಾಂಗಗಳು ಅಂದರೆ, ಕೂಟ, ಶಾಲಾ, ಪಂಜರ, ಕುಂಭಲತಾ ತಲಗಳು ಇತ್ಯಾದಿಗಳ ಬಗ್ಗೆಯೂ ಸಾಕಷ್ಟು ವಿವರಗಳು ಈ ಮಯಮತದಲ್ಲಿದೆ. ಇದೇ ರೀತಿಯಾಗಿ ಬೇರೆ ಬೇರೆ ವಿಧಗಳನ್ನು ಕಾಶ್ಯಪಶಿಲ್ಪವೂ ಗುರಿತಿಸಿದೆ.

ಐದು ಅಂತಸ್ತಿನ ಗೋಪುರದ ಬಗ್ಗೆ ವಿವರ ನೀಡುವಾಗ ಮಾನಸಾರವು, ಒಂಭತ್ತು ರೀತಿಯ 'ಶಾಲಾಕಾರ ಶಿಖರ'ವನ್ನು ಹೇಳಿದೆ. ಇದರಂತೆ, ೪ ಕ್ಷುದ್ರನಾಸಿಗಳ ಗುಂಪಿನಿಂದ ಕೂಡಿದ್ದು, (ಗಳಕೂಟದೊಂದಿಗೆ ಸೇರಿದ) ವೃತ್ತಾಕಾರದ 'ಶಿಖಾ' ಇರುವ ಗೋಪುರವನ್ನು 'ಶ್ರೀಭೋಗ' ಎಂದು ಕರೆದಿದೆ; ಅಂತೇ, ೮ ಕ್ಷುದ್ರನಾಸಿಗಳಿದ್ದರೆ ಅದನ್ನು 'ಜಯ' ಎಂದೂ, ೧೨ ಕ್ಷುದ್ರ ನಾಸಿಗಳಿದ್ದರೆ 'ಶ್ರೀವಿಶಾಲ' ಎಂದೂ, ೧೬ ಕ್ಷುದ್ರನಾಸಿಗಳಿದ್ದರೆ 'ವಿಷ್ಣುಕಾಂತ' ಎಂದೂ, ೨೦ ಕ್ಷುದ್ರನಾಸಿಗಳಿದ್ದರೆ 'ಇಂದ್ರಕಾಂತ'

ಎಂದೂ, ಕ್ಷುದ್ರನಾಸಿಗಳಿಲ್ಲದಿದ್ದರೆ ಅದನ್ನು 'ಬ್ರಹ್ಮಕಾಂತ' ಎಂದೂ, ಗಳಕೂಟವಿಲ್ಲದಿದ್ದಲ್ಲಿ ಅದನ್ನು 'ಸ್ಕಂದಕಾಂತ' ಎಂದೂ ಕರೆದಿದೆ; ಅಲ್ಲದೆ, ಮಧ್ಯನಾಸಿಯು ಉತ್ತರವಾಗಿದ್ದು, ನಾಸಿಕವು ಪಂಜರದಿಂದ, 'ಕೂಸಿದ್ದರೆ' ಅಂತಹ ಗೋಪುರವನ್ನು ಶ್ರೀಕರ ಎಂದೂ ಹೇಳಲಾಗಿದೆ. (ಸೌಮ್ಯಕಾಂತ ರೀತಿ ಸ್ಪಷ್ಟವಿಲ್ಲ).

ಈಗ ಉಳಿದಿರುವ ದೇವಾಲಯಗಳನ್ನು ಗಮನಿಸಿದಲ್ಲಿ, ಪಟ್ಟದಕಲ್ಲಿನ ವಿರೂಪಾಕ್ಷ, ನಂದಿಯ ಭೋಗನಂದಿ, ಕಂಬದ ಹಳ್ಳಿಯ ಪಂಚಕೂಟ ಬಸದಿ ಮುಂತಾದ ಪ್ರಾಚೀನ ದೇವಾಲಯ ಗಳಲ್ಲೇ ಪ್ರಾಕಾರದ ರಚನೆಯನ್ನು ಗಮನಿಸಬಹುದಾಗಿದೆ. ಗ್ರಂಥಗಳು ಐದು ಪ್ರಾಕಾರಗಳನ್ನು ಹೇಳಿದ್ದರೂ, ಸಾಮಾನ್ಯವಾಗಿ ಒಂದು ಪ್ರಾಕಾರವಿರುವ ದೇವಾಲಯಗಳೇ ಹೆಚ್ಚಾಗಿವೆ. ಹಂಪೆಯ ವಿರೂಪಾಕ್ಷ, ಶ್ರೀರಂಗಪಟ್ಟಣದ ರಂಗನಾಥ, ನಂಜನಗೂಡಿನ ನಂಜುಂಡೇಶ್ವರ ದೇವಾಲಯಗಳಲ್ಲಿ ಎರಡು ಪ್ರಾಕಾರಗಳಿವೆ. ಐದಕ್ಕಿಂತ ಹೆಚ್ಚಿನ ಸಂಖ್ಯೆಯ ಪ್ರಾಕಾರಗಳಿದ್ದ ಸಂದರ್ಭದಲ್ಲಿಯೂ ದೇವಾಲಯಕ್ಕೆ ಸಂಬಂಧಿಸಿದಂತೆ ಇಷ್ಟನ್ನು ಮಾತ್ರ ಗುರುತಿಸ ಬಹುದಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲೇ ಪರಿವಾರಾಲಯಗಳಿಂದ ಕೂಡಿದ ಪ್ರಾಕಾರವಿದ್ದರೆ, ಗಂಗವಾರದ ಸೋಮೇಶ್ವರ ದೇವಾಲಯದಲ್ಲಿ ಮಹಾವಾರ ರೀತಿಯ ಆವೃತ ಮಂಟಪವನ್ನೂ, ಹಂಪೆಯ ವಿರೂಪಾಕ್ಷ, ಸೋಮನಾಥಪುರದ ಕೇಶವ ದೇವಾಲಯಗಳಲ್ಲಿ ಮಾಲಿಕಾ ರೀತಿಯ ರಚನೆಯನ್ನೂ ಕಾಣಬಹುದಾಗಿದೆ. ಎಲ್ಲೋರದ ಕೈಲಾಸ, ಹಂಪೆಯ ಹಜಾರರಾಮ ದೇವಾಲಯಗಳಲ್ಲಿ ಪ್ರಾಕಾರಕ್ಕೆ ಛತ್ರ ಶೀರ್ಷಾಲಂಕರಣವೂ ಇದೆ. ಮೂಲ ದೇವಾಲಯದಂತೇ ರಚಿಸಲ್ಪಟ್ಟ ಉಪಪೀಠ, ಅಧಿಷ್ಠಾನ, ಭಿತ್ತಿಯಿಂದ ಕೂಡಿದ ಸುಂದರ ಪ್ರತೋಲಿ(?)ಯು ಬನ್ನೇರುಘಟ್ಟದ ಚಂಪಕಧಾಮ ದೇವಾಲಯದಲ್ಲಿದೆ.

ಪ್ರಾಕಾರದ ಮೇಲಿನ ಗೋಪುರಕ್ಕೆ ಹದಿನೇಳು ತಲಗಳಿರ ಬಹುದೆಂದು ಗ್ರಂಥಗಳಲ್ಲಿದ್ದರೂ, ಕರ್ನಾಟಕದಲ್ಲಿ ಒಂಭತ್ತಕ್ಕಿಂತ ಹೆಚ್ಚು ತಲಗಳಿರುವ ಗೋಪುರಗಳು ಸದ್ಯಕ್ಕೆ ನನ್ನ ಗಮನಕ್ಕೆ ಬಂದಿಲ್ಲ. ಸಾಮಾನ್ಯವಾಗಿ, ಒಂದರಿಂದ ಮೂರು ತಲಗಳಿರುವ ಗೋಪುರಗಳೇ ಹೆಚ್ಚಾಗಿದ್ದು, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಗೋಪುರದಲ್ಲಿ ನಾಲ್ಕು ತಲಗಳೂ, ಬೇಲೂರಿನ ಚನ್ನಕೇಶವ ದೇವಾಲಯದ ಗೋಪುರದಲ್ಲಿ ಐದು ತಲಗಳೂ, ಹಂಪೆಯ ವಿರೂಪಾಕ್ಷ ದೇವಾಲಯದ ಗೋಪುರದಲ್ಲಿ ಒಂಭತ್ತು ತಲಗಳೂ ಇವೆ. ಗ್ರಂಥಗಳಲ್ಲಿ ಹೇಳಿರುವಂತೆ ಇವು ಷಡ್ವರ್ಗಗಳಿಂದ ಕೂಡಿದ್ದು, ತಲಗಳಲ್ಲಿ ಕೂಟ - ಶಾಲಾ - ಪಂಜರಗಳಿವೆ. ಈ ಶಾಲಾಕೂಟಗಳಲ್ಲಿ ದೇವತಾ ಬಿಂಬ ಮತ್ತು ಲೌಕಿಕ ಬಿಂಬಗಳನ್ನೂ ಬಿಡಿಸಲಾಗಿರುತ್ತದೆ (ಬಹುಶಃ ಗ್ರಂಥಗಳಲ್ಲಿ ಈ ಬಗ್ಗೆ ಹೇಳಿಲ್ಲ) ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಪ್ರತಿಯೊಂದು ತಲದಲ್ಲಿ ಮಧ್ಯದ ಸ್ಥಳವು ತೆರೆದದ್ದಾಗಿರದೆ, ಮಧ್ಯೆ 'ಶಾಲಾ' ಇದೆ. ಗ್ರಂಥಗಳಲ್ಲಿ ಬೇರೆ ಬೇರೆ ಆಕಾರದ ಶಿಖರಗಳನ್ನು ಹೇಳಿದ್ದರೂ, ಸಾಮಾನ್ಯವಾಗಿ 'ಶಾಲಾ'ಕಾರದ ಶಿಖರವೇ ಹೆಚ್ಚಾಗಿದೆ.

ಹೀಗೆ, ಪ್ರಾಚೀನ ಕಾಲದಲ್ಲೇ ದೇವಾಲಯಗಳಲ್ಲಿ ಪ್ರಾಕಾರ ಗೋಪುರಗಳ ರಚನೆಯಾಗಿದ್ದರೂ, ಅವು ದೇವಾಲಯದ ಅವಶ್ಯಕತೆ ಮತ್ತು ನಿರ್ಮಾಪಕನ ಆರ್ಥಿಕ ಶಕ್ತಿಯನ್ನವಲಂಬಿಸಿ ರಚನೆ ಯಾಗಿರುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಶ್ರೀನಿವಾಸನ್ ಅವರು ಗುರುತಿಸಿರುವಂತೆ (ಪು. ೮೫), ಕ್ರಿ.ಶ.ಹನ್ನೊಂದನೇ ಶತಮಾನ ದಿಂದ, ದೇವಾಲಯದಲ್ಲಿ ನಡೆಯುವ ಪೂಜಾವಿಧಿಗಳು ಹೆಚ್ಚಿದಂತೆ, ಅವುಗಳನ್ನು ಆಚರಿಸುವ ಮಂಟಪಗಳ ಸಂಖ್ಯೆಯೂ ಹೆಚ್ಚಾಯಿತು. ಅಂತೇ ಅವುಗಳೆಲ್ಲವನ್ನೂ ಒಳಗೊಂಡಂತೆ ಸುತ್ತಲೂ ಪ್ರಾಕಾರ ರಚಿಸುವ ಅವಶ್ಯಕತೆಯುಂಟಾಗಿ, ಪ್ರಾಕಾರ - ಗೋಪುರ ಗಳ ರಚನೆಯೂ ವ್ಯಾಪಕವಾಯಿತೆನ್ನಬಹುದು. ಇದರೊಂದಿಗೆ, ಗ್ರಂಥಗಳಲ್ಲೇ ಹೇಳಿರುವಂತೆ ದೇವಾಲಯದ ರಕ್ಷಣೆಯ ಉದ್ದೇಶವೂ, ವಿಜಯನಗರ ಕಾಲದಲ್ಲಿ ಈ ರಚನೆಗೆ ಹೆಚ್ಚು ಒತ್ತು ನೀಡಿರಬಹುದು. ಈ ಕಾರಣವಾಗಿಯೇ ಗೋಪುರಗಳಲ್ಲಿ ತಲಗಳ ಸಂಖ್ಯೆಯೂ ಹೆಚ್ಚಿ. ಅವು ಮೂಲ ದೇವಾಲಯದ ಶಿಖರಕ್ಕಿಂತಲೂ ಹೆಚ್ಚು ಎತ್ತರವಾಗಿ ರೂಪುಗೊಂಡಿತೆನ್ನಬಹುದು.

## ಗ್ರಂಥ ಋಣ


***ಮಯಮತಂ*** - ಬ್ರೂನೋ ಡಗೆನ್ಸ್ (ಸಂ), ನವದೆಹಲಿ, ೧೯೯೪

***ಮಾನಸಾರ ಸೀರೀಸ್*** - ಪಿ. ಕೆ. ಆಚಾರ್ಯ (ಸಂ), ಸಂ. ಸಂ. III, IV, VII ನವದೆಹಲಿ, ೧೯೭೯, ೧೯೮೦, ೧೯೭೯

***ರೌರವಾಗಮ*** - ಎನ್. ಆರ್. ಭಟ್ (ಸಂ), ಪಾಂಡಿಚೆರಿ, ೧೯೭೨

***ಅಜಿತಾಗಮ*** - ಎನ್. ಆರ್. ಭಟ್ (ಸಂ) ಪಾಂಡಿಚೆರಿ - ೧೯೬೪

***ಕಾಮಿಕಾಗಮ*** (ಪೂರ್ವಭಾಗ) - ಸಿ. ಸ್ವಾಮಿನಾಥ ಶಿವಾಚಾರ್ಯ (ಸಂ) ಮದ್ರಾಸು, ೧೯೭೫

***ಕಾಶ್ಯಪಶಿಲ್ಪ*** - ಕೃಷ್ಣರಾಯ ಡಿ. ಮತ್ತು ವಿನಾಯಕ ಗಣೇಶ ಆಪ್ಟೆ, ೧೯೨೬

***ಪಾದ್ಮಸಂಹಿತಾ*** - ಜಿ. ಆರ್. ಜೋಸ್ಯರ್, ಮೈಸೂರು, ೧೯೬೯

- ಇವಲ್ಲದೆ ಸುಪ್ರಭೇದಾಗಮ (ಉದ್ಧೃತ ಮಾನಸಾರ) ಪಾದ್ಮ ಸಂಹಿತೆ (ಕ್ರಿಯಾ ಪಾದ) ಕಾಶ್ಯಪ ಶಿಲ್ಪ; ಮಯಮತ; ಮಾನಸಾರ; ಕಾಮಿಕಾಗಮ; ರೌರವಾಗಮ (ಕ್ರಿಯಾಪಾದ) ಹಾಗು ಅಗ್ನಿಪುರಾಣ, ಮತ್ಸ್ಯಪುರಾಣ ಮತ್ತು ಗರುಡ ಪುರಾಣಗಳಲ್ಲೂ (ಉದ್ಧೃತ) ಪ್ರಾಕಾರದ ಉಲ್ಲೇಖಗಳಿವೆ.

ಡಾ॥ ರು. ಮ. ಷಡಕ್ಷರಯ್ಯ *

# ಗುಲ್ಬರ್ಗಾ ಪ್ರದೇಶದ ಹೆಚ್ಚಿನ ಪುರಾತತ್ವ ಶೋಧನೆಗಳು

ಗುಲ್ಬರ್ಗಾ ಪ್ರದೇಶದಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಮುಖಾಂತರ (ಕವಿವಿ) ಹಳ್ಳಿಹಳ್ಳಿಗಳ ಪುರಾತತ್ವ ಅನ್ವೇಷಣೆಯನ್ನು ವಿವಿಧ ಕಾರಣಗಳಿಂದ ಲೇಖಕರು ನಡೆಸಿದಾಗ ಅನೇಕ ಪುರಾತತ್ವ ನೆಲೆಗಳು, ದೇವಾಲಯಗಳು, ಮಠಗಳು, ಮಸೀದಿ, ದರ್ಗಾಗಳು, ಕೋಟೆ, ಊರಗಸಿ, ಕಲ್ಯಾಣಿ, ಬಾವಿ, ಶಿಲ್ಪ ಶಾಸನಗಳು ಕಂಡುಬಂದವು. ಈ ಕುರಿತು ಈಗಾಗಲೇ ಕೆಲವು ಲೇಖನಗಳು ಸಂಶೋಧನ ವ್ಯಾಸಂಗ, ಇತಿಹಾಸದರ್ಶನ ಮತ್ತು ಪತ್ರಿಕಾ ವರದಿಗಳು ಹೊರಗಡೆ ಬಂದಿವೆ. ಇನ್ನು ಕೆಲವು ಹೊರಬರಲಿವೆ. ಉಳಿದ ವಿವರಗಳ ದಾಖಲಾತಿ, ಅಧ್ಯಯನ ಈ ಪ್ರಸ್ತುತ ಲೇಖನದಲ್ಲಿದೆ. ಶಾಸನಗಳು (ಸೇಡಂ ತಾ). ಒಂದು ಪ್ರತ್ಯೇಕ ಸಂಪುಟ ಹೊರಬರಲಿದೆ. ಪ್ರಾಗಿತಿಹಾಸ ಮತ್ತು ಪ್ರಾಗೈತಿಹಾಸಿಕ ಹೊಸ ನೆಲೆಗಳ ಕುರಿತು ಪ್ರತ್ಯೇಕ ಲೇಖನವನ್ನು ತಯಾರಿಸಲಾಗಿದೆ.

ಈಗಾಗಲೇ ಸೇಡಂ ತಾಲೂಕಿನ ಸಮಗ್ರ ಹಳ್ಳಿಗಳ ಪುರಾತತ್ವ ಅನ್ವೇಷಣೆ ಸಂಪೂರ್ಣಗೊಂಡಿದೆ. ಚಿತಾಪುರ ತಾಲೂಕಿನಲ್ಲಿ ಈ ಅನ್ವೇಷಣೆ ಈಗ ಮುಂದುವರಿದಿದೆ. ದೇವಾಲಯ ಮತ್ತು ಶಿಲ್ಪಗಳ ಲಕ್ಷಣಗಳನ್ನು ಪರಿಶೀಲಿಸಲಾಗಿದೆ. ಈ ರೀತಿಯ ಪ್ರಯತ್ನದಿಂದ ಕ್ರಿ.ಶ. ೧೧ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನ ಮಾದರಿಯ ವಾಸ್ತುಶಿಲ್ಪ ಲಕ್ಷಣಗಳ ಪ್ರಭೇದವನ್ನು ವರ್ಗೀಕರಿಸಲು ಸಹಕಾರಿಯಾದಂತೆ ಕಾಣುತ್ತದೆ. ಈ ಕುರಿತು ಪ್ರತ್ಯೇಕ ಅಧ್ಯಯನ ಅತ್ಯವಶ್ಯವಾಗಿದೆ. ಏಕೆಂದರೆ ಈ ಪ್ರದೇಶದ ಈ ಕಾಲದ ರಾಜಕೀಯ ಚರಿತ್ರೆಯಲ್ಲಿ ಸುಮಾರು ಒಂದುವರೆ ಶತಮಾನ ಕಲ್ಯಾಣ ಚಾಲುಕ್ಯರ ಆಳ್ವಿಕೆ. ಅವರ ನಂತರ ಕಳಚುರಿಯರು, ಸೇವುಣರು ಮತ್ತು ಕಾಕತೀಯರು ಒಂದುವರಿ ಶತಮಾನ ಆಳಿದ್ದಾರೆ. (ಕುರುಹುಗಳಿವೆ). ಸೇವುಣರ ಸಮಕಾಲೀನರಾದ ಹೊಯ್ಸಳರ ಕೆಲ ವಾಸ್ತುಲಕ್ಷಣಗಳು ಈ ಭಾಗದಲ್ಲಿವೆ! ಇದೇ ರೀತಿ ಪೂರ್ವದ ನೆರೆಗಡಿಯಲ್ಲಿ ಆಳಿದ ಕಾಕತೀಯರ ಕೆಲ ವಾಸ್ತುಲಕ್ಷಣಗಳು ಇಲ್ಲಿ ಧ್ವನಿಸುತ್ತವೆ. ಈ ಹಿನ್ನೆಲೆಯಲ್ಲಿ ಸುಮಾರು ಮುನ್ನೂರು ವರ್ಷಗಳ ಅವಧಿಯಲ್ಲಿ ಜೀರ್ಣೋದ್ಧಾರ ಅಥವಾ ನಿರ್ಮಿತಗೊಂಡ ದೇವಾಲಯಗಳ ವಾಸ್ತು ವೈವಿಧ್ಯತೆಯನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ಇಲ್ಲಿ ಇವುಗಳನ್ನು ವಿವಿಧ ಧರ್ಮಗಳ ಹಿನ್ನೆಲೆಯಲ್ಲಿ ವರ್ಗೀಕರಿಸಲಾಗಿದೆ.

### ಶೈವ ದೇವಾಲಯಗಳು

**ಕಾಳಿಕಾ ದೇವಾಲಯ :** ನಿಡಗುಂದಿಯ (ಚಿಂಚೊಳ್ಳಿ ತಾ.) ಕಾಳಿಕಾಗುಡಿಗೆ ಶಾಲಾ ಮಾದರಿ ಶಿಖರ ಮತ್ತು ಸ್ವತಳ ತಳಪಾಯವುಳ್ಳ ಲಕ್ಷಣಗಳು ಅಪೂರ್ವವೆನಿಸಿದೆ. ತಳಪಾಯದಲ್ಲಿ ಎರಡು ಗರ್ಭಗೃಹಗಳು ಮತ್ತು ಏಕಸಭಾಮಂಟಪಕ್ಕೆ ಪ್ರವೇಶಗಳು ಎರಡು ಕಡೆಗಳಲ್ಲಿವೆ. ಈ ದೇವಾಲಯದ ನೆಲಮಟ್ಟ ಸುತ್ತಲಿನ ನೆಲಮಟ್ಟದಿಂದ ಸ್ವಲ್ಪ ಕೆಳಗಿದೆ.

ಒಂದೇ ಸಾಲಿನ ಎರಡು ಗರ್ಭಗೃಹಗಳಲ್ಲಿ ಕಾಳಿಕ ಮತ್ತು ಶಿವಲಿಂಗಗಳಿದ್ದು ಪ್ರತ್ಯೇಕ ದ್ವಾರಗಳಿವೆ. ದ್ವಾರ ಪಟ್ಟಿಯ ನಾಲ್ಕು ಶಾಖೆಗಳಲ್ಲಿ ಲತಾಸುರುಳಿ, ರತ್ನಪಟ್ಟಿ, ಅರ್ಧಗಂಬ ಮತ್ತು ಪತ್ರಗಳ ಅಲಂಕರಣವಿದೆ. ಗಜಲಕ್ಷ್ಮಿ ಲಲಾಟದಲ್ಲಿರುವಳು ಕೆಳಗಡೆ ದ್ವಾರಪಾಲಕರಿದ್ದು ಕೈಗಳಲ್ಲಿ ಗದೆ ಮತ್ತು ಪುಷ್ಪಗಳಿವೆ. ಬದಿಗಳಲ್ಲಿ ಪೂರ್ಣಕುಂಭಗಳಿವೆ. ಸಭಾಮಂಟಪದಲ್ಲಿನ ಎಂಟು ಕಂಬಗಳು ಎರಡು ಸಾಲಿನಲ್ಲಿವೆ. ಈ ಕಂಬಗಳ ಚೌಕ ಪಟ್ಟಿಗಳಲ್ಲಿ ರಾಮಾಯಣ ಇತ್ಯಾದಿ ವೈವಿಧ್ಯಮಯ ಚಿತ್ರಗಳು ತುಂಬಾ ಆಕರ್ಷಣೀಯವಾಗಿವೆ.

ಒಂದೇ ಕಂಬದ ಒಂದು ಮುಖದಲ್ಲಿ ಬಲಿ(?)ಯಿದ್ದಾನೆ. ಆತನು ಛತ್ರಿಯ ಕೆಳಗಡೆ ನಿಂತಿದ್ದಾನೆ. ಇನ್ನೊಬ್ಬ ಕೈಯಲ್ಲಿ ಕುಂಭವನ್ನು ಹಿಡಿದಿದ್ದಾನೆ. ಎರಡು ಅಲಂಕೃತ ಮಾಲೆಗಳಲ್ಲಿ ಇವರನ್ನು ಚಿತ್ರಿಸಲಾಗಿದೆ. ಎರಡನೇ ಪಟ್ಟಿಯಲ್ಲಿ ತ್ರಿವಿಕ್ರಮನಿದ್ದಾನೆ. ಒಬ್ಬನು ಇನ್ನೊಬ್ಬನನ್ನು ಹಿಡಿದಿದ್ದಾನೆ. ಇಳಿಬಿಟ್ಟ ಎರಡು ಹಾರಗಳಲ್ಲಿ ಇವರಿದ್ದಾರೆ. ಮೂರನೇ ಪಟ್ಟಿಯಲ್ಲಿ ವರಾಹ ಮತ್ತು ಲಕ್ಷ್ಮಿಯನ್ನು ಎರಡು ಮಾಲೆಗಳ ಮಧ್ಯ ಚಿತ್ರಿಸಲಾಗಿದೆ. ನಾಲ್ಕನೇ

* ಪ್ರಭಾರಿ ನಿರ್ದೇಶಕ, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩

ಪಟ್ಟಿಕೆಯಲ್ಲಿ ಎರಡು ಮಾಲೆಗಳ ಮಧ್ಯ ಉಗ್ರ ನರಸಿಂಹ ಮತ್ತು ಸ್ಥಾನಕ ಪ್ರಣಾಮ ಭಂಗಿಯ ಇಬ್ಬರು ಸ್ತ್ರೀಯರನ್ನು ತೋರಿಸಲಾಗಿದೆ.

ಎರಡನೇ ಕಂಬದ ಒಂದನೇ ಪಟ್ಟಿಯಲ್ಲಿ ಬಿಲ್ಲು, ಬಾಣ ಹಿಡಿದ ಬಲರಾಮ ಮತ್ತು ಮಲಗಿದ ವ್ಯಕ್ತಿಯರಿಬ್ಬರನ್ನು ಎರಡು ಹಾರಗಳ ಮಧ್ಯ ತೋರಿಸಲಾಗಿದೆ. ಎರಡನೇ ಮುಖದಲ್ಲಿ ಕುಳಿತ ವ್ಯಕ್ತಿ ಹಾಗೂ ಕೈಮುಗಿದು ನಿಂತ ದಂಪತಿಗಳನ್ನು ಎರಡು ಹಾರಗಳ ಮಧ್ಯೆ ಚಿತ್ರಿಸಲಾಗಿದೆ. ಮೂರನೇ ಮುಖದಲ್ಲಿ ವಿಷ್ಣು (?) ಮತ್ತು ಆಕಳು-ಕರುಗಳನ್ನು ಎರಡು ಹಾರಗಳ ಮಧ್ಯ ಚಿತ್ರಿಸಲಾಗಿದೆ. ನಾಲ್ಕನೇ ಮುಖದಲ್ಲಿ ರಾಮ(?) ಮತ್ತು ವಿವಿಧ ಹಸ್ತಗಳನ್ನು ಇಪ್ಪತ್ತು ಕೈಗಳಲ್ಲಿ ಹಿಡಿದು ನಿಂತ ಹಾರಗಳ ಮಧ್ಯೆಯಿರುವರು.

ಮೂರನೇ ಕಂಬದ ಮೊದಲನೇ ಮುಖದಲ್ಲಿ ಕುಬ್ಜ ಮತ್ತು ವೀಣಾಧಾರಿಯರನ್ನು ಹಾರಗಳೆರಡರ ಮಧ್ಯ ಚಿತ್ರಿಸಲಾಗಿದೆ. ಎರಡನೇ ಮುಖದಲ್ಲಿ ಸಿಂಹ ಮತ್ತು ಗದಾ-ಚಕ್ರಗಳನ್ನಿಡಿದ ವಿಷ್ಣು (?) ಇವರನ್ನು ಎರಡು ಹಾರಗಳ ಮಧ್ಯ ತೋರಿಸಲಾಗಿದೆ. ಮೂರನೇ ಮುಖದಲ್ಲಿ ಎರಡು ಹಾರಗಳ ಮಧ್ಯ ಶ್ರೀನಿಧಿ ಮತ್ತು ಪದ್ಮನಿಧಿಯರಿದ್ದಾರೆ. ನಾಲ್ಕನೇ ಮುಖದಲ್ಲಿ ಎರಡು ಹಾರಗಳ ಮಧ್ಯ ಅಶ್ವಮುಖ ಯಕ್ಷ ಮತ್ತು ಪದ್ಮನಿಧಿಯರಿದ್ದಾರೆ.

ನಾಲ್ಕನೇ ಕಂಬದ ಮೊದಲನೇ ಮುಖದಲ್ಲಿ ಎರಡು ಹಾರಗಳ ಮಧ್ಯ ಶಿಶುವಿಗೆ ತಾಯಿ ತನ್ನ ಮೊಲೆಹಾಲನ್ನು ಕುಳಿತು ಕುಡಿಸುತ್ತಿರುವುದನ್ನು ಮತ್ತು ಶಿಶು ತೊಟ್ಟಿಲಲ್ಲಿ ಮಲಗಿರುವುದನ್ನು ಚಿತ್ರಿಸಲಾಗಿದೆ. ಎರಡನೇ ಮುಖದಲ್ಲಿ ಎರಡು ಹಾರಗಳ ಮಧ್ಯ ನಂದಗೋಪಾಲ ದನಗಳನ್ನು ಕಾಯುತ್ತಿರುವುದನ್ನು ಹಾಗೂ ಒಬ್ಬ ವ್ಯಕ್ತಿ ಆಶ್ಚರ್ಯದಿಂದ ವೀಕ್ಷಿಸುತ್ತಿರುವನು. ಮೂರನೇ ಮುಖದಲ್ಲಿ ಎರಡು ಹಾರಗಳ ಮಧ್ಯ ಬೆಣ್ಣೆ ಕದಿಯಲು ಕೃಷ್ಣ ಮಜ್ಜಿಗೆ ಕೋಲಿನ ಹತ್ತಿರ ನಿಂತಿರುವುದನ್ನು ಮತ್ತು ಡಮರು ರೀತಿಯ ಕಂಬಕ್ಕೆ ಕೃಷ್ಣನನ್ನು ಕಟ್ಟಲಾಗಿದೆ. ನಾಲ್ಕನೇ ಮುಖದಲ್ಲಿ ಎರಡು ಹಾರಗಳ ಮಧ್ಯ ತಾಯಿ-ಮಗು ಮತ್ತು ನಾಯಿ ಹಾಗೂ ಅಷ್ಟಭುಜ ದೇವಿ ಹಾಗು ಸುರರಿದ್ದಾರೆ.

ಎರಡನೇ ಸಾಲಿನ ಮೊದಲನೇ ಕಂಬದ ಮೊದಲನೇ ಮುಖದಲ್ಲಿ ರಾಮ-ಲಕ್ಷ್ಮಣರು ಬಿಲ್ಲು ಬಾಣ ಹಿಡಿದು ನಿಂತಿದ್ದಾರೆ. ಮತ್ತು ಮಂಗ, ಕೈ ಮುಗಿದು ನಿಂತಿದೆ . ಇವರನ್ನು ತಲಾ ಒಂದರ ಹಾರದಲ್ಲಿ ಚಿತ್ರಿಸಲಾಗಿದೆ. ಅದರ ಎರಡನೇ ಮುಖದಲ್ಲಿ ಎರಡು ಹಾರಗಳಲ್ಲಿ ಒಂದು ಕಡೆ ಬಿಲ್ಲು ಬಾಣ ಹಿಡಿದು ರಾಮ ಲಕ್ಷ್ಮಣರು ನಿಂತಿದ್ದಾರೆ. ಇನ್ನೊಂದರ ಹಾರದಲ್ಲಿ ಎರಡು ಮಂಗಗಳಿವೆ. ಮೂರನೇ ಮುಖದಲ್ಲೂ ಒಂದನೇ ಹಾರದಲ್ಲಿ ರಾಮ ಲಕ್ಷ್ಮಣರಿದ್ದಾರೆ. ಇನ್ನೊಂದರಲ್ಲಿ ಏಳು ಕಬ್ಬುಗಳನ್ನು ಬಾಣದಿಂದ ಕತ್ತರಿಸುವುದನ್ನು ತೋರಿಸಲಾಗಿದೆ. ನಾಲ್ಕನೇ ಮುಖದಲ್ಲಿ ಎರಡು ಹಾರಗಳ ಮಧ್ಯ ಬಿಲ್ಲು-ಬಾಣ ಹಿಡಿದ ರಾಮ ಲಕ್ಷ್ಮಣರನ್ನು ಚಿತ್ರಿಸಲಾಗಿದೆ.

ಎರಡನೇ ಕಂಬದ ಮೊದಲನೇ ಮುಖದಲ್ಲಿ ಕಿರಾತಾರ್ಜುನರ ದೃಶ್ಯವಿದೆ. ಇದರಲ್ಲಿ ಒಂದು ಹಾರದಲ್ಲಿ ಬೇಡರ ವೇಶದಲ್ಲಿ ಶಿವ ಮತ್ತು ಅರ್ಜುನರಿದ್ದು ಒಬ್ಬನನ್ನು ಹಿಡಿದ ಹಂದಿಯು ಶಿವಲಿಂಗವನ್ನು ಹತ್ತಿದೆ. ಇನ್ನೊಂದರ ಹಾರದ ಮಧ್ಯ ಶಿವಲಿಂಗದಲ್ಲಿ ಬೇಡರ ರೂಪದಲ್ಲಿ ಶಿವ-ಪಾರ್ವತಿಯರು ಪ್ರತ್ಯಕ್ಷರಾಗಿದ್ದಾರೆ. ಎರಡನೇ ಮುಖದಲ್ಲಿ ಶಿವಲಿಂಗವು ಐದು ಮಗಿಗಳ ಮೇಲಿದೆ. ಹಂದಿಯೊಂದು ತನ್ನ ಮುಂದಿನ ಕಾಲುಗಳನ್ನು ಲಿಂಗಪೀಠದ ಮೇಲಿಟ್ಟು ಬಾಯಿಂದ ಲಿಂಗವನ್ನು ಮುಟ್ಟದೆ. ಇನ್ನೊಂದರ ಹಾರದ ಮಧ್ಯ ಶಿವ (?) ನಿಂತಿದ್ದಾನೆ. ಮೂರನೇ ಮುಖದಲ್ಲಿ ತಲಾ ಒಂದರ ಹಾರದಲ್ಲಿ ದಂಪತಿಗಳಿದ್ದಾರೆ. ಅವರ ಮಧ್ಯ ಭಕ್ತನೂ ಒಬ್ಬ ಕೈಮುಗಿದು ಕುಳಿತಿದ್ದಾನೆ. ನಾಲ್ಕನೆ ಮುಖದಲ್ಲಿ ಶಿವ-ಪಾರ್ವತಿಯರು ಬೇಡರ ವೇಷದಲ್ಲಿದ್ದಾರೆ. ಎರಡನೇ ಹಾರದ ಮಧ್ಯ ಅರ್ಜುನ ಬಿಲ್ಲು ಹಿಡಿದು ನಿಂತಿದ್ದಾನೆ. ಅವರ ಮಧ್ಯ ಹಂದಿ ಚಿತ್ರವಿದೆ. (ಕಿರಾತಾರ್ಜುನ ದೃಶ್ಯ).

ಮೂರನೇ ಕಂಬದ ಮೊದಲನೇ ಮುಖದಲ್ಲಿ ಸಮುದ್ರ ಮಥನ ಚಿತ್ರವಿದೆ. ಎರಡನೇ ಪಟ್ಟಿಯಲ್ಲಿ ಆನೆ ಕೆಳಗಡೆ ಹಸು ಮತ್ತು ಕುದುರೆ ಇವುಗಳ ಮೇಲೆ ಲಕ್ಷ್ಮಿಯಿರುವಳು. ಲಕ್ಷ್ಮಿಯ ಬದಿಗಳಲ್ಲಿ ಸ್ತ್ರೀಯರಿಬ್ಬರು ಕಳಿತಿದ್ದಾರೆ. ಇವರನ್ನು ಎರಡು ಹಾರಗಳ ಮಧ್ಯ ಚಿತ್ರಿಸಲಾಗಿದೆ. ಮೂರನೇ ಪಟ್ಟಿಯಲ್ಲಿ ಶೇಷಶಯನ ವಿಷ್ಣು ಆತನ ನಾಭಿಯಿಂದ ಬಂದ ಕಮಲದಲ್ಲಿ ಬ್ರಹ್ಮ ಪಾದದ ಹತ್ತಿರ ಲಕ್ಷ್ಮಿ ದೇವತೆಯರಿದ್ದಾರೆ, ಮೇಲೆ ದೈತ್ಯರು ಕೈಮುಗಿದು ಹಾರುತ್ತಿರುವರು. ನಾಲ್ಕನೇ ಮುಖದಲ್ಲಿ ತ್ರಿಮೂರ್ತಿಗಳಿದ್ದಾರೆ. ಉದ್ಭವ ಲಿಂಗದ ಬದಿಗಳಲ್ಲಿ ಬ್ರಹ್ಮ ಮತ್ತು ವಿಷ್ಣು ಕೈಮುಗಿದುಕೊಂಡು ನಿಂತಿದ್ದಾರೆ. ಈ ದೃಶ್ಯದ ಮೇಲೆ ಕಿರಿದಾದ ಗೂಡಿನಲ್ಲಿ ಗಣೇಶನಿದ್ದಾನೆ.

ನಾಲ್ಕನೇ ಕಂಬದ ಮೊದಲನೇ ಮುಖದಲ್ಲಿ ಎರಡು ಹಾರಗಳಲ್ಲಿ ಕುಳಿತ ಗಡ್ಡದಾರಿ ಋಷಿ ಮತ್ತು ನಿಂತ ಹೆಂಗಸಿದ್ದಾರೆ ಎರಡನೇ ಮುಖದಲ್ಲಿ ಶಿವ -ದ್ವಿಭುಜದಾರಿ ಮತ್ತು ಅಸ್ಥಿ ದೇಹಾಂಗವುಳ್ಳ ಕುಳಿತ ಬೃಂಗಿ ಬಾಲಕನ ರೂಪದಲ್ಲಿರುವನು. ತಲಾ ಒಬ್ಬರನ್ನು ಎರಡು ಹಾರಗಳ ಮಧ್ಯೆ ಚಿತ್ರಿಸಲಾಗಿದೆ. ಮೂರನೇ ಮುಖದಲ್ಲಿ ತಲಾ ಒಂದರ ಹಾರದ ಮಧ್ಯ ಖಡ್ಗ ಮತ್ತು ಮೋದಕ ಹಿಡಿದು ನಿಂತ ದೇವರ ಚಿತ್ರಗಳಿವೆ. ನಾಲ್ಕನೇ ಮುಖದಲ್ಲಿ ಬಿಲ್ಲು ಹಿಡಿದು ನಿಂತ ರಾಮ (?)ನನ್ನು ಮತ್ತು ಅಶ್ವತ್ಥ ಮರವನ್ನು ಎರಡು ಹಾರಗಳ ಮಧ್ಯ ಚಿತ್ರಿಸಲಾಗಿದೆ.

ಗರ್ಭಗೃಹ ದ್ವಾರ ಬದಿಗಿನ ಗೋಡೆಗಳಲ್ಲಿರುವ ಅರ್ಧ

ಗಂಬಗಳಲ್ಲಿ ಆರು ದೃಶ್ಯಗಳಿವೆ. ಅವುಗಳು ೧ ಮಿಥುನ ಭಂಗಿಯಲ್ಲಿಯ ಪ್ರೇಮಿಗಳನ್ನು ಇಬ್ಬರು ವೀಕ್ಷಿಸುತ್ತಿರುವುದು, ತಲಾ ಒಂದರ ಹಾರದಲ್ಲಿವೆ. ೨. ತಲಾ ಒಂದರ ಹಾರದಲ್ಲಿ ನಾಯಿ ಮತ್ತು ನರಿಗಳು ಅರ್ಧವೃತ್ತಾಕಾರದ ಪೀಠದ ಮೇಲೆ ನಿಂತಿವೆ. ೩. ತಲಾ ಒಂದರ ಹಾರದಲ್ಲಿ ಮಂಗ ಮತ್ತು ಮಂಗ ತಾನು ಸೀಳಿದ ಬಡ್ಡಿಯಲ್ಲಿ ಸಿಗಿಸಿಕೊಂಡು ಭಾಗವನ್ನು ಬಿಡಿಸಿಕೊಳ್ಳಲು ಒದ್ದಾಡುತ್ತಿದೆ. ೪. ತಲಾ ಒಂದರ ಹಾರದಲ್ಲಿ ಆಮೆ ಮತ್ತು ಎರಡು ಮೀನುಗಳಿವೆ. ೫. ತಲಾ ಒಂದರ ಹಾರದಲ್ಲಿ ಪೂರ್ಣ ಕುಂಭಗಳ ಮೇಲೆ ಶ್ರೀನಿಧಿ ಮತ್ತು ಪದ್ಮನಿಧಿಯರಿದ್ದಾರೆ. ೬. ತಲಾ ಒಂದರ ಹಾರದಲ್ಲಿ ಎರಡು ಮೀನುಗಳಿವೆ.

ಇನ್ನೊಂದು ಅರ್ಧಗಂಬ ಪಟ್ಟಿಕೆಯಲ್ಲಿ ಆರು ಚಿತ್ರಗಳಿವೆ, ಅವುಗಳು ೧. ತಲಾ ಒಂದರ ಹಾರದಲ್ಲಿ ಕುಬ್ಜ ಮತ್ತು ಉದ್ದ-ಗಿಡ್ಡವ್ಯಕ್ತಿ ಇದ್ದಾನೆ. ೨. ತಲಾ ಒಂದರ ಹಾರದಲ್ಲಿ ಎರಡು ಮೀನುಗಳಿವೆ. ೩. ತಲಾ ಒಂದರ ಹಾರದಲ್ಲಿ ಶ್ರೀನಿಧಿ ಮತ್ತು ಪದ್ಮ ನಿಧಿಯರಿದ್ದಾರೆ. ೪. ತಲಾ ಒಂದರ ಹಾರದಲ್ಲಿ ಕಮಲದ ಮೇಲೆ ಹಂಸ ಪಕ್ಷಿ ಮತ್ತು ಮೀನುಗಳ ಗುಂಪಿದೆ. ೫. ತಲಾ ಒಂದರ ಹಾರದಲ್ಲಿ ಕಾಲಿಂದ ಹೊಡೆದಾಡುತ್ತಿರುವ ಮಂಗ ಮತ್ತು ಆನೆ ಸವಾರಿ ಮಾಡುವ ಮಂಗವಿದೆ. ೬. ತಲಾ ಒಂದರ ಹಾರದಲ್ಲಿ ಮೀನುಗಳಿವೆ. ಇನ್ನೊಂದರ ಲಲಾಟ ಪಟ್ಟಿಕೆಯಲ್ಲಿ ಶಾಖೆಗಳು ಹರಿದಿವೆ. ಮಧ್ಯ ಗಜಲಕ್ಷ್ಮಿ ಈ ದೇವತೆಯ ಕೆಳಗೆ ಮತ್ತು ಮೇಲೆ ಕಮಲಗಳಿವೆ. ಇನ್ನೊಂದರ ಲಲಾಟ ಸ್ವಲ್ಪ ಭಿನ್ನವಾಗಿದೆ.

ಬದಿಗೋಡೆಯ ಅರ್ಧಗಂಬದ ಚಿತ್ರಗಳು ಹೀಗಿವೆ: ೧. ರೆಕ್ಕೆಯುಳ್ಳ ಗರುಡ ಅಮೃತ ಕುಂಡಲ ಹಿಡಿದಿದ್ದಾನೆ. ಇನ್ನೊಂದರಲ್ಲಿ ಭಕ್ತರು ನಿಂತು ವೀಕ್ಷಿಸುತ್ತಿರುವರು. ಈ ಎರಡನ್ನು ತಲಾ ಒಂದರ ಹಾರದಲ್ಲಿ ತೋರಿಸಲಾಗಿದೆ. ೨. ತಲಾ ಒಂದರ ಹಾರದಲ್ಲಿ ದಶಬಾಹು ರಾವಣ ಮತ್ತು ಎರಡು ಪಕ್ಷಿಗಳಿವೆ. ಎಡಗಡೆಯ ಅರ್ಧಗಂಬದಲ್ಲಿ ನಿಂತ ಹುಡುಗನ ಕೈಮೇಲೆ ಇನ್ನೊಬ್ಬ ಹುಡುಗ ನಿಂತಿದ್ದಾನೆ ಮತ್ತು ದಂಪತಿಗಳಿಬ್ಬರು ನಿಂತಿದ್ದಾರೆ. ಗಂಡನು ಬಿಲ್ಲಿನಿಂದ ಬಾಣ ಹೊಡೆಯುತ್ತಿದ್ದಾನೆ. ಈ ಎರಡನೆ ತಲಾ ಒಂದರ ಹಾರದಲ್ಲಿವೆ. ೨. ಒಬ್ಬನು ಕೈಮುಗಿದು ಬಾಗಿ ಇನ್ನೊಬ್ಬನ ಮೇಲೆ ಕುಳಿತಿದ್ದಾನೆ ಹಾಗೂ ಚತುರ್ಭುಜಧಾರಿ ವಿಷ್ಣು ಕೈಗಳಲ್ಲಿ ಅಭಯ, ಶಂಖ, ಚಕ್ರ ಮತ್ತು ಗದೆಗಳನ್ನು ಹಿಡಿದಿದ್ದಾನೆ. ತಲಾ ಒಂದರ ಹಾರದಲ್ಲಿ ಈ ಎರಡು ದೃಶ್ಯಗಳಿವೆ.

ಈ ಕಂಬ ಮತ್ತು ಅರ್ಧಗಂಬಗಳಲ್ಲಿರುವ ದೃಶ್ಯಗಳು ಪಂಚತಂತ್ರ, ರಾಮಾಯಣ ಇನ್ನಿತರ ಕಥೆಗಳಿಗೆ ಸೇರಿವೆ ಪ್ರತಿಯೊಂದರ ಮುಖಪಟ್ಟಿಯಲ್ಲಿ ಇಳಿಬಿಟ್ಟ ಎರಡು ಹಾರಗಳ ಮಧ್ಯ ಒಂದೊಂದು ಚಿತ್ರಗಳಿರುವುದು ಗಮನೀಯ.

ದಕ್ಷಿಣ ಪ್ರವೇಶದ್ವಾರ ಫಲಕದಲ್ಲಿ ನಾಲ್ಕು ಶಾಖೆಗಳಿದ್ದು ಕ್ರಮವಾಗಿ ಪತ್ರ, ಅರ್ಧಗಂಬ ಸಿಂಹ ಮತ್ತು ಪತ್ರಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಆಕೆಯ ಬದಿಗಳಲ್ಲೂ ಶಾಖೆಗಳು ಹರಿದಿವೆ. ಕಪೋತದ ಮೇಲೆ ಒಂದೇ ಸಾಲಿನಲ್ಲಿ ನಾಲ್ಕು ದೈತ್ಯಾಕಾರಗಳಿವೆ. ಇನ್ನುಳಿದ ದ್ವಾರಪ್ರವೇಶಗಳು ಇತ್ತೀಚಿನ ಮಾದರಿಯಲ್ಲಿವೆ. ಶೈವ ದ್ವಾರಪಾಲಕರ ಚಿತ್ರಗಳ ಕೆಳಗಿನ ಭಾಗ ಮಣ್ಣಿನಲ್ಲಿ ಮುಚ್ಚಿವೆ.

ಈ ದೇವಾಲಯದ ಭಿತ್ತಿಯು ಸರಳವಾಗಿದೆ. ಶಿಖರ ಶಾಲಾ ಮಾದರಿಯಲ್ಲಿದ್ದು ಅದರ ಸ್ತೂಪಿಭಾಗ ಶಿಥಿಲವಾಗಿದೆ ಸರಳ ಪಟ್ಟಿಕೆಯುಳ್ಳ ಶಿಖರದ ತಳದ ಮೇಲೆ ಕಪೋತದ ಕೆಳಗಡೆ ಹಂಸಪಕ್ಷಿಗಳ ಸಾಲಿದೆ. ಕಾಲ ಸು. ಕ್ರಿ.ಶ. ೧೧ನೇ ಶತಮಾನ ಮಧ್ಯಭಾಗ. ಶಾಲಾ ಶಿಖರವುಳ್ಳ ಈ ಕಾಲದ ದೇವಾಲಯ ಸುರೇಬಾನದಲ್ಲಿದೆ. ವಿಜಯನಗರ ಕಾಲದ ಮಾದರಿಯ ಈ ಅನಂತಶಯನ ಗುಡಿ ಈ ಕಾಲದ್ದು.

***ಈಶ್ವರ ದೇವಾಲಯ* :** ಮುಗುಟ (ಚಿತಾಪುರ ತಾ.) ಗ್ರಾಮದ ಈಶ್ವರ ದೇವಾಲಯಕ್ಕೆ ಮೂರು ಗರ್ಭಗೃಹಗಳು, ಮೂರು ಅರ್ಧ ಮಂಟಪಗಳು, ಒಂದು ನವರಂಗ ಮತ್ತು ಒಂದು ಮುಖ ಮಂಟಪವಿದೆ. ಅದರ ಒಂದು ಗರ್ಭಗೃಹ ಸಂಪೂರ್ಣ ಶಿಥಿಲಗೊಂಡಿದೆ. ಉಳಿದ ಗರ್ಭಗೃಹಗಳಲ್ಲಿ ಪೀಠದಲ್ಲಿ ನಾಗ ಹಾಗೂ ಶಿವಲಿಂಗವಿದೆ. ಶಿವಲಿಂಗಕ್ಕೆ ಬ್ರಹ್ಮಸೂತ್ರವಿದೆ. ನಾಗಶಿಲ್ಪವಿರುವ ಗರ್ಭಗೃಹದ ದ್ವಾರ ಬದಲಾವಣೆ ಹೊಂದಿದೆ. ಪಶ್ಚಿಮ ಗರ್ಭಗೃಹ ದ್ವಾರಕ್ಕೆ ಮೂರು ಶಾಖೆಗಳು ಲಲಾಟದಲ್ಲಿ ಗಣೇಶನಿರುವನು. ಪೂರ್ವ-ಪಶ್ಚಿಮದ ಅರ್ಧ ಮಂಟಪಗಳ ಗೋಡೆಗಳಲ್ಲಿ ಗೂಡುಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಮಧ್ಯವತ್ತಿಗೆ ಕಮಲದ ಅಲಂಕರಣ ನವರಂಗ ದ್ವಾರ ಪಟ್ಟಿ ಮೇಲೆ ರತ್ನಗಳ ಅಲಂಕರಣ ಅವುಗಳ ಮೇಲೆ ರೇಖಾ ನಾಗರ ಶಿಖರ ಮಾದರಿಗಳು. ಈ ಮಾದರಿಗಳ ಮಧ್ಯ ಯೋಧನ ಚಿತ್ರವಿದೆ. ಶೈವ ದ್ವಾರಪಾಲಕನ ಕೈಗಳಲ್ಲಿ ಗದೆ, ಡಮರು, ನಾಗ ಮತ್ತು ಅಭಯಗಳಿವೆ. ಹೊಸ್ತಿಲಲ್ಲಿ ರತ್ನ ಮುತ್ತು ಕೀರ್ತಿಮುಖಗಳಿವೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ.

***ಈಶ್ವರ ದೇವಾಲಯ* :** ಗುಂಡಗರ್ತಿಯ (ಚಿತಾಪುರ ತಾ.) ಈಶ್ವರ ದೇವಾಲಯಕ್ಕೆ ಗರ್ಭಗೃಹ ಮತ್ತು ಸಭಾಮಂಟಪವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹ ದ್ವಾರಕ್ಕೆ ಮೂರು ಶಾಖೆಗಳಿದ್ದು ಅದರಲ್ಲಿ ರತ್ನಗಳು, ಅರ್ಧಗಂಬ ಜಾಲಂದರದಲ್ಲಿ ರತ್ನ ಅಲಂಕರಣಗಳಿವೆ. ಲಲಾಟದಲ್ಲಿ ಗಜೇಂದ್ರ ಮೋಕ್ಷವಿದೆ. ಕೆಳಗಡೆ ಮಕರ ತೋರಣದಲ್ಲಿ ಗಣೇಶ, ನಂದಿ, ವಾದ್ಯಮೇಳವಿದೆ. ನವರಂಗ ಭಿತ್ತಿನಲ್ಲಿ ಗೊಮ್ಮಟಾಕಾರದ ಪದ್ಮ ಅಲಂಕರಣವಿದೆ. ಈ ಮಾದರಿ ಸೇಡಂನ ಪಂಚಲಿಂಗೇಶ್ವರ ಇನ್ನಿತರ ನವರಂಗ ಭಿತ್ತಿನಲ್ಲಿ ಕಾಣಬಹುದು. ಕಾಲ ಸು. ಕ್ರಿ.ಶ. ೧೧ನೇ ಶತಮಾನ.

ಭೂತೇಶ್ವರ ದೇವಾಲಯ : ಮೇದಕ (ಸೇಡಂ ತಾ.) ಗ್ರಾಮದಲ್ಲಿ ಭೂತೇಶ್ವರ ದೇವಾಲಯವಿದ್ದು ಅದರ ಶಿಲ್ಪಕಲಾ ವೈಭವವು ಈ ಪ್ರದೇಶದಲ್ಲಿ ವಿರಳ. ಈ ದೇವಾಲಯದ ನವರಂಗ ಮುಂದಿನ ಭಾಗ ಮುಖ ಮಂಟಪ ಭಾಗಗಳು ಮತ್ತು ಉತ್ತರ ಗರ್ಭಗೃಹದ ಬಿತ್ತಿ ಇನ್ನಿತರ ಭಾಗಗಳು ಹಾಳಾಗಿವೆ.

ಈ ದೇವಾಲಯ ಪೂರ್ವಕ್ಕೆ ಮುಖಮಾಡಿದ್ದು ತಳಪಾಯಕ್ಕೆ ಮೂರುಗರ್ಭಗೃಹಗಳು, ಮೂರು ಅರ್ಧ ಮಂಟಪಗಳು ಮತ್ತು ಒಂದು ನವರಂಗಗಳಿವೆ. ಮಧ್ಯದ ಗರ್ಭಗೃಹದಲ್ಲಿ ಶಿವಲಿಂಗ, ದಕ್ಷಿಣದ ಗರ್ಭಗೃಹದಲ್ಲಿ ಶಿವಲಿಂಗ. ಪೀಠ ಉಳಿದಿದೆ. ಉತ್ತರ ಗರ್ಭಗೃಹದಲ್ಲಿ ಶ್ರೀದೇವಿಯ ಶಿಲ್ಪವಿದೆ ಶ್ರೀದೇವಿ ಕುಳಿತ ಭಂಗಿಯಲ್ಲಿದ್ದು ಕೈಗಳಲ್ಲಿ ಅಭಯ, ಚಕ್ರ, ಶಂಖ ಮತ್ತು ಮೋದಕಗಳಿವೆ.

ಮಧ್ಯ ಗರ್ಭಗೃಹದ ದ್ವಾರ ಚೌಕಟ್ಟಿನಲ್ಲಿ ರತ್ನ, ಅರ್ಧಗಂಬ ಮತ್ತು ಸರಳ ಪಟ್ಟಿಯ ಮೂರು ಶಾಖೆಗಳಿವೆ. ಕೆಳಗಡೆ ವೈಷ್ಣವರ ದ್ವಾರಪಾಲಕರಿದ್ದು ಕೈಗಳಲ್ಲಿ ಅಭಯ, ಶಂಖ, ಚಕ್ರ ಮತ್ತು ಗದೆಗಳಿವೆ. ಬದಿಗಳಲ್ಲಿ ಸೇವಕ, ಸೇವಕಿಯರಿದ್ದಾರೆ. ಹೊಸ್ತಿಲಲ್ಲಿ ರತ್ನ ಸಾಲಿದೆ. ಕಪೋತ ಸರಳವಾಗಿದೆ ಉತ್ತರಾಂಗದಲ್ಲಿ ಕೀರ್ತಿ ಮುಖಗಳು ಹಾರದಲ್ಲಿವೆ. ಎಡಗಡೆಯಲ್ಲಿ ಕಾಮನಬಿಲ್ಲು ಬಾಣ ಹಿಡಿದಿದ್ದಾನೆ. ಬದಿಗೆ ಸೇವಕ ಕತ್ತಿ, ಪಲ ಹಿಡಿದಿದ್ದಾನೆ. ದಕ್ಷಿಣ ಗರ್ಭಗೃಹ ಚೌಕಟ್ಟಿನಲ್ಲಿ ಶೈವ ದ್ವಾರಪಾಲಕರಿದ್ದು ಕೈಗಳಲ್ಲಿ ಅಭಯ, ನಾಗ, ಡಮರು ಮತ್ತು ಗದೆಗಳಿವೆ. ಬಲಗಡೆಯ ದ್ವಾರಪಾಲಕನು ನಾಗ, ಬದಲಿಗೆ ತ್ರಿಶೂಲವಿಡಿದಿರುವನು. ಉತ್ತರ ಗರ್ಭಗೃಹ ಚೌಕಟ್ಟಿನಲ್ಲಿ ರತ್ನ ಸಾಲು, ಅರ್ಧಗಂಬ ಮತ್ತು ಪತ್ರ ಶಾಖೆಗಳಿವೆ.

ಪೂರ್ವಮುಖದ ಅರ್ಧಮಂಟಪ ಬದಿಯ ಎಡ ಗೋಡೆಯಲ್ಲಿ ದಕ್ಷಿಣ ಅರ್ಧಮಂಟಪದ ಬದಿಗಿನ ಗೋಡೆಯಲ್ಲಿ ಒಂದೊಂದು ಗೂಡುಗಳಿವೆ. ಈ ಗೂಡುಗಳಲ್ಲಿ ಈಗ ವಿಗ್ರಹಗಳು ಉಳಿದಿಲ್ಲ. ಮೊದಲನೇ ಗೂಡಿನ ಬಲಗಡೆ ಕಥಾನಕ ದೃಶ್ಯಫಲಕಗಳಿವೆ. ಮೇಲೆ ಸಾಲಾಗಿ ಆನೆ, ಬಿಲ್ಲು-ಬಾಣ ಹಿಡಿದ ವೀರ, ಮೂವರು ಕುದುರೆ ಸವಾರರಿದ್ದಾರೆ. ಕೆಳಗಡೆ ಆನೆ ಸಾಲು ಮತ್ತು ಸಮುದ್ರ ಮಥನ ದೃಶ್ಯವಿದೆ. ಉತ್ತರದ ಅರ್ಧಮಂಟಪ ಬಲಬದಿಯ ಗೋಡೆಯಲ್ಲಿ ಕಿರಾತಾರ್ಜುನೀಯದ ಹಂದಿಯ ಬೇಟೆ, ಮಂಗಗಳು ಶಿವಲಿಂಗ ಹಿಡಿದ ದೃಶ್ಯ, ಆನೆಗಳು ಮತ್ತು ಮಿಥುನ ಶಿಲ್ಪಗಳಿವೆ. ಅರ್ಧಮಂಟಪದ ಬಲಬದಿಯ ಗೋಡೆಯಲ್ಲಿ ರಾಮಾಯಣದ ಸ್ಥೂಲಚಿತ್ರ, ಮಂಗಗಳು, ಶಿವಲಿಂಗ ಹಿಡಿದ ದೃಶ್ಯ ಮತ್ತು ವಾದ್ಯ ಮೇಳದವರ ಚಿತ್ರಗಳಿವೆ. ದಕ್ಷಿಣದ ಅರ್ಧಮಂಟಪದ ಎಡಗೋಡೆಯಲ್ಲಿ ನಾಲ್ಕಾರು ವಾದ್ಯಮೇಳ, ಒಬ್ಬ ನೃತ್ಯಗಾರ್ತಿ, ನಾಲ್ವರ ವಾದ್ಯಮೇಳ ಮತ್ತು ಮೂವರ ಕುದುರೆ ಸವಾರರ ಚಿತ್ರಗಳಿವೆ.

ನವರಂಗ ಮಧ್ಯದಲ್ಲಿ ನಂದಿ, ಪೂರ್ವಕ್ಕೆ ಮುಖಮಾಡಿದ ಗರ್ಭಗೃಹದ ಕಡೆ ಮುಖ ಮಾಡಿ ಕುಳಿತಿದೆ. ಆ ಮಂಟಪದಲ್ಲಿ ನಾಲ್ಕು ಕಂಬಗಳಿವೆ. ಕಂಬಗಳಿಗೆ ಪೀಠ, ಕಾಂಡ, ಕಳಸ, ತಾಡಿ ಬೋದಿಗೆಗಳಿವೆ. ಕಾಂಡದಲ್ಲಿ ಮಧ್ಯ ಎರಡು ಚೌಕಗಳಿದ್ದು, ಅವುಗಳ ಮಧ್ಯ ರತ್ನಪಟ್ಟಿಯ ಸಾಲಿದೆ. ಈ ದೇವಾಲಯದ ಪ್ರವೇಶದ ಬದಿಗೆ ಸಿಂಹವುಳ್ಳ ಬ್ಯಾಲುಸ್ಟ್ರೇಡ್‌ಗಳಿವೆ.

ಅಧಿಷ್ಠಾನಕ್ಕೆ ಉಪಾನ, ಜಗತಿ, ಕುಮುದ, ಕಂಠಗಳು, ಎಂಟು ರತ್ನಗಳಿದ್ದು ಉಪಾನ ಬಿಟ್ಟು ಉಳಿದ ತಳಗಳಿಗೆ ಕ್ರಮವಾಗಿ ರತ್ನಪಟ್ಟಿ ಲಲಾಸುರುಳಿ, ಕೀರ್ತಿಮುಖ, ರತ್ನಪಟ್ಟಿ, ಕಚ್ಚುಗಳಿವೆ. ಮುಖಮಂಟಪದ ಐದನೇ ತರದಲ್ಲಿ ದಂಪತಿಗಳು ಮನುಷ್ಯ-ಪ್ರಾಣಿ ರೂಪದ ನಾಗಗಳಿವೆ, ಅವುಗಳ ಮಧ್ಯ ಕೆಳಗಡೆ ಒಬ್ಬ ವ್ಯಕ್ತಿ ತನ್ನ ಎಡಗಾಲನ್ನು ಎತ್ತಿ ಹಿಡಿದು ನಿಂತಿದ್ದಾನೆ. ಉದ್ದಜಡೆಯ ಇಬ್ಬರು ಯತಿಗಳು ಇದ್ದಾರೆ. ಆರನೇ ತರದಲ್ಲಿ ಕುದುರೆ ಸವಾರರಿದ್ದು ಅವರ ವೇಷ ಭೂಷಣ ಹಾವೇರಿಯ ಮಹಾಸತಿ ಕಲ್ಲಿನಂತಿದೆ. ದಕ್ಷಿಣದ ಗರ್ಭಗೃಹ ಅಧಿಷ್ಠಾನಕ್ಕೆ ತರಗಳು, ಮಧ್ಯ ಗರ್ಭಗೃಹದ ಅಧಿಷ್ಠಾನದಂತೆ ಸರಳವಿದ್ದು ಭಿತ್ತಿಯ ಕೆಳಭಾಗದಲ್ಲಿ ರೇಖಾ, ನಾಗರ ಮಾದರಿಯ ಶಿಖರ ನಮೂನೆಗಳಿವೆ. ನವರಂಗದ ಅಧಿಷ್ಠಾನದ ಏಳೂ ತರಗಳಲ್ಲಿ ನಾಲ್ಕನೇ ತರವು ದಕ್ಷಿಣದ ಗರ್ಭಗೃಹ ಮತ್ತು ಪೂರ್ವಕ್ಕೆ ಮುಖ ಮಾಡಿದ ಅರ್ಧಮಂಟಪಕ್ಕಿಂತ ಈಶಾನ್ಯ ಉತ್ತರ ಭಾಗದ ಅಧಿಷ್ಠಾನಕ್ಕೆ ಆರು ತರಗಳಿವೆ. ಐದು ಮತ್ತು ಆರನೆಯ ತರಗಳಲ್ಲಿ ಆನೆ ಕುದುರೆ ಸವಾರರು ಹಾಗೂ ಉತ್ತರ ಮುಖದ ಆರನೇ ತರದಲ್ಲಿ ಕಥಾನಕ ದೃಶ್ಯಗಳಿವೆ.

ಭಿತ್ತಿಯಲ್ಲಿ ವೈವಿಧ್ಯಮಯ ಎಪ್ಪತ್ತೆರಡಕ್ಕಿಂತ ಹೆಚ್ಚು ಶಿಲ್ಪಗಳನ್ನು ಈ ದೇವಾಲಯದ ಮೂರು ಗರ್ಭಗೃಹ ಮತ್ತು ಅರ್ಧಮಂಟಪಗಳ ಹೊರಭಿತ್ತಿಗಳು ಹೊಂದಿವೆ. ಈ ಭಿತ್ತಿಗಳಿಗೆ ಹಿಂಚಾಚು ಮುಂಚಾಚುಗಳಿದ್ದು ಅಲ್ಲಿ ಈ ಶಿಲ್ಪಗಳನ್ನು ಜೋಡಿಸಲಾಗಿದೆ.

ಮಧ್ಯದ ಗರ್ಭಗೃಹ, ದಕ್ಷಿಣ ದಿಕ್ಕಿನ ಭಿತ್ತಿಯಲ್ಲಿ ಬಲಗಡೆಯಿಂದ ಕ್ರಮವಾಗಿ ೧. ಕಮಲ-ಫಲ ಹಿಡಿದ ಹೆಂಗಸು, ೨. ಚೌರಿ-ಫಲ ಹಿಡಿದ ಹೆಂಗಸು ೩. ಗುಪ್ತಾಂಗ ಹಿಡಿದು ಬಲಗಾಲನ್ನು ತೊಡೆಯವರೆಗೆ ಎತ್ತಿ, ಎಡಗಾಲನ್ನು ಅಡ್ಡವಾಗಿ ಬಗ್ಗಿಸಿದ ಮಹಿಳೆಯು ತೋಳಲ್ಲಿ ರುದ್ರಾಕ್ಷಿ ಧರಿಸಿರುವಳು ೪. ಈ ಹೆಂಗಸು ಈ ಮೇಲಿನ ೩ನೆಯದರಂತಿದ್ದಾಳೆ (ರುದ್ರಾಕ್ಷಿ ಧರಿಸಿಲ್ಲ) ೫. ಕಮಲ ಹಿಡಿದ ಮಹಿಳೆ ತನ್ನ ಎಡಗೈಯನ್ನು ತೊಡೆ ಮೇಲಿಟ್ಟಿದ್ದಾಳೆ. ೬. ಬತ್ತಲೆಯ ಮಹಿಳೆ ಕೋಲಿಗೆಯಿಂದ ಅವಳ ಸೀರಿ ಎಳೆಯುವ ಮಂಗನನ್ನು ಹೊಡೆಯುತ್ತಿದ್ದಾಳೆ. ೭. ಮಹಿಳೆ ಡಮರನ್ನು ಹಿಡಿದು ನಿಂತಿದ್ದಾಳೆ. ೮. ಮಹಿಳೆ ಕಮಲ ಮತ್ತು ಫಲಗಳನ್ನು ಹಿಡಿದಿದ್ದಾಳೆ. ೯. ಮಹಿಳೆ ಆಯತಾಕಾರದ ಗಿಟಾರ

ಬಾರಿಸುತ್ತಿರುವಳು. ೧೦. ಮಹಿಳೆ ಕಮಲ ಮತ್ತು ಫಲ ಹಿಡಿದು ನಿಂತಿದ್ದಾಳೆ. ೧೧. ಗರುಡ ಕೈಮುಗಿದು ನಿಂತಿದ್ದಾನೆ, ೧೨. ಮಹಿಳೆ ಕಮಲ ಹಿಡಿದು ನಿಂತಿದ್ದಾಳೆ. ಅಡ್ಡಗಾಲನ್ನಿಟ್ಟು ನಿಂತಿದ್ದಾಳೆ. ಇನ್ನೊಂದು ಕೈಯನ್ನು ತೊಡೆ ಮೇಲಿಟ್ಟಿರುವಳು. ೧೩. ವಿಷ್ಣು (?) ಅಡ್ಡಗಾಲನ್ನಿಟ್ಟು ನಿಂತಿದ್ದು ಕೈಗಳಲ್ಲಿ ಕಮಲ ಮತ್ತು ಚಕ್ರಗಳಿವೆ. (ಈ ಚಿತ್ರಗಳು ಮುಖ್ಯ ಗರ್ಭಗೃಹದ-ಅರ್ಧಮಂಟಪ ಭಿತ್ತಿಯಲ್ಲಿವೆ).

*ದಕ್ಷಿಣ ಗರ್ಭಗೃಹದ ಪಶ್ಚಿಮ ಮುಖದ ಭಿತ್ತಿಯಲ್ಲಿರುವ ಅನೇಕ ಶಿಲ್ಪಗಳು:* ೧೪. ಕೊಳಲನ್ನು ಊದುತ್ತ ನಿಂತ ಕೃಷ್ಣ, ೧೫. ಮಹಿಳೆ ತ್ರಿಭಂಗಿಯಲ್ಲಿ ನಿಂತಿದ್ದು ಬಲಗೈ ಅಭಯದಲ್ಲಿದೆ. ಎಡಗೈಯಲ್ಲಿ ಕಮಂಡಲವಿದೆ. ೧೬. ಮಹಿಳೆ ಕಮಲ-ಫಲಹಿಡಿದು ನಿಂತಿದ್ದಾಳೆ. ೧೭. ಬತ್ತಲೆ ನಿಂತ ಮಹಿಳೆ ತೊಡೆಗೆ ನಾಗರ ಹಾವನ್ನು ಸುತ್ತಿದ್ದಾಳೆ. ಕಾಲಲ್ಲಿ ಪಾದುಕೆಗಳಿವೆ (ವಿಷಕನ್ಯೆ) ೧೮. ಮಹಿಳೆ ಕಮಲ-ಫಲ ಹಿಡಿದಿದ್ದಾಳೆ. ೧೯. ಮಹಿಳೆ ನಾಗರ ಹಾವನ್ನು ಹಿಡಿದು ನಿಂತಿದ್ದಾಳೆ. ತೊಡೆಗೆ ನಾಗರ ಹಾವನ್ನು ಕಟ್ಟಿದ್ದಾಳೆ. ಯಜ್ಞೋಪವೀತವಾಗಿ ನಾಗರ ಹಾವನ್ನು ಧರಿಸಿದ್ದಾಳೆ. ೨೦. ನೃತ್ಯ ಭಂಗಿಯ ಮಹಿಳೆಯು ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿದ್ದಾಳೆ.

*ಮುಖ್ಯ ಗರ್ಭಗೃಹದ ಭಿತ್ತಿಯ ಪಶ್ಚಿಮ ಮುಖದಲ್ಲಿ ಕ್ರಮವಾಗಿ* ೨೧. ನೃತ್ಯಗಾರ್ತಿ ಕೈಗಳೆರಡನ್ನು ಎತ್ತಿ ನಿಂತಿದ್ದಾಳೆ, ೨೨. ಮಹಿಳೆ ಎಡಗೈಯಲ್ಲಿ ಲೇಖಣಿ ಬಲಗೈ ಎತ್ತಿ ಹಿಡಿದು ನಿಂತಿದ್ದಾಳೆ. ೨೩. ಮಹಿಳೆ ಕಮಲ-ಫಲಗಳನ್ನು ಹಿಡಿದು ನಿಂತಿದ್ದಾಳೆ. ೨೪. ಭಕ್ತನೊಬ್ಬ ಕೈಮುಗಿದು ನಿಂತಿದ್ದಾನೆ (ಬಹುಶಃ ಇವನೇ ಈ ದೇವಾಲಯ ಕಟ್ಟಿಸಿದವನಿರಬಹುದು). ೨೫. ಬತ್ತಲೆ ಮಹಿಳೆಯು ಕೈಗಳನ್ನು ಮತ್ತು ತೊಡೆಗಳನ್ನು ನಾಗರ ಹಾವಿನಿಂದ ಕಟ್ಟಿಸಿಕೊಂಡು ನಿಂತಿದ್ದಾಳೆ. ೨೬. ಮಹಿಳೆ ಕಮಲ ಮತ್ತು ಆಯತಾಕಾರದ ತಾಳಗಳನ್ನು ಹಿಡಿದು ನಿಂತಿದ್ದಾಳೆ.

*ಮುಖ್ಯ ಗರ್ಭಗೃಹದ ಪಶ್ಚಿಮ ಮುಖದಲ್ಲಿ ಅನೇಕ ಶಿಲ್ಪಗಳಿವೆ:* ೨೮. ಮಹಿಳೆ ನಿಂತು ವೀಣೆ ಬಾರಿಸುತ್ತಿರುವಳು. ೨೯. ಬತ್ತಲೆ ಮಹಿಳೆ ಡಮರು, ತಾಳಹಿಡಿದು ನಿಂತಿದ್ದು ಮೇಲಕ್ಕೆ ಎತ್ತಿದ ಬಲಗಾಲು ಒಡೆದಿದೆ. ತೊಡೆಗೆ ನಾಗಗಳಿಂದ ಕಟ್ಟಿದ್ದಾಳೆ. ೩೦. ಮಹಿಳೆ ಕೈಗಳಲ್ಲಿ ಕತ್ತಿ (?) ಮತ್ತು ಫಲ ಹಿಡಿದು ನಿಂತಿದ್ದಾಳೆ. ೩೧. ಬತ್ತಲೆ ಮಹಿಳೆ ವಿಷತುಂಬಿದ (?) ಲೋಟವನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾಳೆ. ೩೨. ಭೈರವನು ಬತ್ತಲೆಯಲ್ಲಿದ್ದು ರುಂಡಮಾಲೆ ಧರಿಸಿ ನಿಂತಿದ್ದಾನೆ. ತೊಡೆಗೆ ನಾಗಗಳನ್ನು ಕಟ್ಟಿದ್ದಾನೆ. ೩೩. ನೃತ್ಯ ಗಣೇಶನು ಕೈಗಳಲ್ಲಿ ದಂತ ಮತ್ತು ಫಲಗಳನ್ನು ಹಿಡಿದಿದ್ದಾನೆ. ೩೪. ಬತ್ತಲೆ ಮಹಿಳೆ ಕೈಗಳಲ್ಲಿ ನಾಗರ ಹಾವನ್ನು ಕಟ್ಟಿದ್ದಾಳೆ. ೩೫. ಮಹಿಳೆ ಅಡ್ಡಗಾಲನ್ನಿಟ್ಟು ನಿಂತುಕೊಂಡು ಕನ್ನಡಿಯನ್ನು ನೋಡುತ್ತಿರುವಳು. ೩೬. ಹನುಮನು ಕೈಮುಗಿದು ನಿಂತಿದ್ದಾನೆ. ೩೭. ಮಹಿಳೆ ಬಲಗೈಯಲ್ಲಿ ಕಮಲ ಹಿಡಿದು ಅಡ್ಡಗಾಲನ್ನಿಟ್ಟುಕೊಂಡು ನಿಂತಿದ್ದಾಳೆ. ಎಡಗೈಯನ್ನು ಸೊಂಟದಲ್ಲಿಟ್ಟಿದ್ದಾಳೆ. ೩೮. ಕಾಮನು ಬಿಲ್ಲು-ಬಾಣಹಿಡಿದು ನಿಂತುಕೊಂಡಿದ್ದಾನೆ.

*ಗರ್ಭಗೃಹ ಮತ್ತು ಅರ್ಧಮಂಟಪಗಳ ಉತ್ತರ ಮುಖದಲ್ಲಿರುವ ಶಿಲ್ಪಗಳು ಕ್ರಮವಾಗಿ ಹೀಗಿವೆ:* ೩೯. ಕಾಮ (?) ಬಿಲ್ಲು-ಬಾಣ ಹಿಡಿದು ನಿಂತಿದ್ದಾನೆ. ೪೦. ಯುವತಿಯೊಬ್ಬಳು ಬಿಲ್ಲು-ಬಾಣ ಹಿಡಿದು ನಿಂತಿದ್ದಾಳೆ. ಪ್ರಿಯತಮನೊಬ್ಬ ಅವಳು ಸ್ವಲ್ಪ ಮೇಲಕ್ಕೆತ್ತಿದ ತನ್ನ ಬಲಗಾಲಿಗೆ ನೆಟ್ಟ ಮುಳ್ಳನ್ನು ತೆಗೆಯುತ್ತಿರುವನು. ಕಾಲುಗಳನ್ನು ಅಡ್ಡಗಾಲಲ್ಲಿಟ್ಟಿರುವಳು. ೪೧. ಒಬ್ಬ ದೇವತಾ ಪುರುಷನು ಎಡಗೈಯಲ್ಲಿ ನಾಗರಹಾವನ್ನು ಬಲಗೈಯನ್ನು ಸೊಂಟಕ್ಕಿಟ್ಟು ಅಡ್ಡಗಾಲುಗಳನ್ನಿಟ್ಟು ನಿಂತಿದ್ದಾನೆ, ೪೨. ಮಹಿಳೆಯ ಬಲಗೈಯಲ್ಲಿ ಹಿಡಿದ ಉಪಕರಣ ಮುಂದಿದೆ. ತಲೆ ಮೇಲೆತ್ತಿದ ಎಡಗೈಯಲ್ಲಿ ಮಾವಿನ ಹಣ್ಣಿನ ಗೊಂಚಲನ್ನು ಹಿಡಿದು ಅಡ್ಡಗಾಲನ್ನಿಟ್ಟು ನಿಂತಿದ್ದಾಳೆ. ೪೩. ಮಹಿಳೆಯು ಕಮಲ ಮತ್ತು ಫಲ ಹಿಡಿದು ನಿಂತಿದ್ದಾಳೆ. ೪೪. ಈ ಚಿತ್ರವು ೪೩ ರಂತಿದೆ. ೪೫. ಬತ್ತಲೆ ಅಡ್ಡಗಾಲನ್ನಿಟ್ಟು ನಿಂತ ಮಹಿಳೆ ಕೈಗಳಲ್ಲಿ ವಸ್ತುವನ್ನಿಡಿದು ತಲೆ ಮೇಲೆ ಎತ್ತಿದ್ದಾಳೆ. ತೊಡೆಗೆ ನಾಗರಹಾವನ್ನು ಕಟ್ಟಿದ್ದಾಳೆ. ಕಾಲಲ್ಲಿ ಪಾದುಕೆಗಳನ್ನು ಮೆಟ್ಟಿದ್ದಾಳೆ, ೪೬. ಮಹಿಳೆ ಅಡ್ಡಗಾಲನ್ನಿಟ್ಟು ನಿಂತು ಕೈಗಳಲ್ಲಿ ಬಲಗೈಯಲ್ಲಿ ಫಲ ಹಿಡಿದಿದ್ದಾಳೆ. ಎಡಗೈಯನ್ನು ನಡಕ್ಕಿಟ್ಟಿದ್ದಾಳೆ. ೪೭. ಬಲಗೈಯನ್ನು ಮೇಲಕ್ಕೆತ್ತಿ ನಿಂತ ಮಹಿಳೆಯು ತನ್ನ ಎಡಗೈಯನ್ನು ನಡಕ್ಕಿಟ್ಟಿದ್ದಾಳೆ. ಒಂದು ಮಂಗ ಆಕೆಯ ಸೀರಿಯ ನೆರಿಗೆ ಹಿಡಿದು ಎಳೆಯುತ್ತಿದೆ, ೪೮. ವೀರಭದ್ರ ಕತ್ತಿ ಮತ್ತು ಕಪಾಲಗಳನ್ನು ಹಿಡಿದು ನಿಂತಿದ್ದಾನೆ, ೪೯. ಮಹಿಳೆ ಕಮಲ-ಫಲ ಹಿಡಿದು ನಿಂತಿದ್ದಾಳೆ. ೫೦. ಮಹಿಳೆಯು ಅಡ್ಡವಾಗಿಟ್ಟ ಬಲಗಾಲನ್ನು ಕೈಗಳಿಂದ ಹಿಡಿದು ಮೇಲಕ್ಕೆತ್ತುವ ಭಂಗಿಯಲ್ಲಿದ್ದಾಳೆ. ಕೆಳಗಡೆ ಬಲಕ್ಕೆ ಒಬ್ಬನು ಮೃದಂಗ ಹಿಡಿದುಕೊಂಡು ಕುಳಿತಿದ್ದಾನೆ. ೫೧. ಮಹಿಳೆ ಎಡಗೈಯಲ್ಲಿ ಫಲ ಹಿಡಿದು ಬಲಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿದ್ದಾಳೆ.

*ನವರಂಗದ ಭಿತ್ತಿಯ ಪಶ್ಚಿಮ ಮುಖದ ಶಿಲ್ಪಗಳು ಕ್ರಮವಾಗಿ ಹೀಗಿವೆ:* ೫೨. ಮಹಿಳೆ ತಾಳಗಳನ್ನಿಡಿದು ನಿಂತಿದ್ದಾಳೆ. ೫೩. ಬತ್ತಲೆ ನಿಂತ ನಾಗಕನ್ಯೆಯ ಬಲಗೈ ಅಭಯ ಮುದ್ರೆಯಲ್ಲಿದೆ. ಎಡಗೈಯನ್ನು ಕುಚದವರೆಗೆ ಎತ್ತಿದ್ದಾಳೆ. ನಾಗರಹಾವನ್ನು ತೊಡೆಗೆ ಕಟ್ಟಿದ್ದಾಳೆ. ೫೪. ಮಹಿಳೆ ಕಮಲ ಮತ್ತು ಫಲ ಹಿಡಿದು ನಿಂತಿದ್ದಾಳೆ. ೫೫. ಬತ್ತಲೆ ನಿಂತ ಮಹಿಳೆ ಕೈಯಲ್ಲಿ ತಾಳಗಳಿವೆ. ತೊಡೆಗೆ ನಾಗರ ಹಾವನ್ನು ಧರಿಸಿರುವಳು, ೫೬. ಮಹಿಳೆ ಬಲಗೈಯಲ್ಲಿ ಕಮಲ ಹಿಡಿದು ನಿಂತಿದ್ದಾಳೆ. ೫೭. ಮಹಿಳೆ ಕಮಲ-ಫಲಹಿಡಿದು ನಿಂತಿದ್ದಾಳೆ. ೫೮. ಶಿವನು ಸಮಭಂಗಿಯಲ್ಲಿದ್ದಾನೆ. ಕೈಗಳಲ್ಲಿ ಅಭಯ, ಡಮರು, ತ್ರಿಶೂಲಗಳಿವೆ. ಉಳಿದ ಒಂದು ಕೈ ಒಡೆದಿದೆ.

*ನವರಂಗದ ಭಿತ್ತಿಯ ಉತ್ತರ ಮುಖದ ಶಿಲ್ಪಗಳು ಕ್ರಮವಾಗಿ ಹೀಗಿವೆ. :* ೫೯. ಪರಶುರಾಮ ತ್ರಿಭಂಗಿಯಲ್ಲಿದ್ದು ಬಲಗೈಯಲ್ಲಿ ಪರಶುವನ್ನು ಹಿಡಿದಿದ್ದಾನೆ. ಎಡಗೈಯನ್ನು ಸೊಂಟಕ್ಕಿಟ್ಟಿದ್ದಾನೆ, ೬೦. ಮಹಿಳೆ ಕಮಲ-ಫಲ ಹಿಡಿದು ನಿಂತಿದ್ದಾಳೆ. ೬೧. ಮಹಿಳೆಯು ಅಭಯ ಹಸ್ತ ಮತ್ತು ಫಲ ಹಿಡಿದು ನಿಂತಿದ್ದಾಳೆ. ೬೨. ಭೈರವ ತ್ರಿಭಂಗಿಯಲ್ಲಿದ್ದಾನೆ. ಕತ್ತಿ-ಕಪಾಲಗಳನ್ನು ಹಿಡಿದಿದ್ದಾನೆ, ೬೩. ಮಹಿಳೆ ಚೌರಿ ಮತ್ತು ತಾಳಗಳನ್ನಿಡಿದು ಅಡ್ಡಗಾಲನ್ನಿಡಿದು ನಿಂತಿದ್ದಾಳೆ. ೬೪. ವಿಷ್ಣು ತ್ರಿಭಂಗಿಯಲ್ಲಿದ್ದಾನೆ. ಕೈಗಳಲ್ಲಿ ಕಮಲ ಮತ್ತು ಚಕ್ರಗಳಿವೆ. ೬೫. ಮಹಿಳೆ ಚೌರಿ-ಫಲಗಳನ್ನಿಡಿದು ನಿಂತಿದ್ದಾಳೆ.

*ಈ ದೇವಾಲಯದ ಭಿತ್ತಿ ಶಿಲ್ಪಗಳು ಅಲ್ಲಲ್ಲಿ ಚದುರಿದವು ಹೀಗಿವೆ:* ೬೬. ಭೈರವ ಕತ್ತಿ-ಕಪಾಲ ಹಿಡಿದು ನಿಂತಿದ್ದಾನೆ: ೬೭. ಕಾಮ (?) ಬಿಲ್ಲು-ಬಾಣ ಹಿಡಿದು ನಿಂತಿದ್ದಾನೆ. ೬೮. ಮಹಿಳೆ ಕಮಲ-ಫಲಹಿಡಿದು ನಿಂತಿದ್ದಾಳೆ. ೬೯. ಮಹಿಳೆ ಡಮರು ಮತ್ತು ತಾಳ ಹಿಡಿದು ನಿಂತಿದ್ದಾಳೆ. ೭೦. ಮಹಿಳೆ ಡಮರನ್ನು ಬಾರಿಸುತ್ತ ನಿಂತಿದ್ದಾಳೆ. ೭೧. ಮಹಿಳೆ ಬಲಗೈಯನ್ನು ತಲೆ ಮೇಲಿಟ್ಟಿರುವಳು. ಎಡಗೈಯಿಂದ ಕೊರಳ ಸರವನ್ನು ಹಿಡಿದು ನಿಂತಿದ್ದಾಳೆ. ೭೨. ವಿಷ್ಣು ಮೀನಿನ ಮೇಲೆ ನಿಂತಿದ್ದು ಬಲಗೈಯಲ್ಲಿಡಿದ ಆಯುಧ ಒಡೆದಿದೆ. ಎಡಗೈಯಲ್ಲಿ ಕಮಲ ಹಿಡಿದಿದ್ದಾನೆ. ೭೩. ವಿಷ್ಣು ನಿಂತಿದ್ದು ಕೈ ಕಾಲುಗಳ ಭಾಗ ಮುರಿದು ಹೋಗಿದೆ. ೭೪. ಭಕ್ತನೊಬ್ಬ ತಾಳಹಿಡಿದು ನಿಂತಿದ್ದಾನೆ. ಈ ಎಲ್ಲಾ ಭಿತ್ತಿ ಶಿಲ್ಪಗಳಿಗೆ ಪ್ರತ್ಯೇಕ ಪೀಠಗಳಿವೆ.

ಈ ದೇವಾಲಯಕ್ಕೆ ಸೇರಿದ ಇನ್ನಿತರ ಶಿಲ್ಪಗಳು ಹೀಗಿವೆ. ಅಲ್ಲಿಯ ಹತ್ತಿರದ ಬಸವಣ್ಣನ ಗುಡಿಯಲ್ಲಿ ೧. ನಾಗ ಮಂಡಲವಿರುವ ಉಬ್ಬು ಶಿಲ್ಪವಿದೆ. ೨. ಪದ್ಮ ಪೀಠದಲ್ಲಿ ಕುಳಿತ ದೇವತಾ ಪುರುಷನ ಕೆಳಗಿನ ಕೈಗಳಲ್ಲಿ ಕಮಲ-ಫಲಗಳಿವೆ. ಉಳಿದ ಭಾಗ ಮುರಿದು ಹೋಗಿದೆ. ೩. ಸಪ್ತಮಾತೃಕೆಯರ ಶಿಲ್ಪವಿದೆ. ೪. ಶೈವ ದ್ವಾರ ಪಾಲಕರ ದ್ವಾರಪಟ್ಟಿಯಿದೆ. ೫. ಮಾರುತಿ ಗುಡಿಯಲ್ಲಿ ನಂದಿ ೬. ಕಮಲ ಹಿಡಿದು ನಿಂತ ಸೂರ್ಯ ೭. ಗಣೇಶನು ಕುಳಿತ ಭಂಗಿಯಲ್ಲಿದ್ದು ಕೈಗಳಲ್ಲಿದಂತ (ಕಮಲ ದಂತಿದೆ), ಪರಶು (ಮುರಿದಿದೆ). ಕಮಲ ಮತ್ತು ಮೋದಕಗಳಿವೆ. ಸೊಂಡಿಲು ಮೋದಕವನ್ನು ಸುತ್ತಿದೆ. ಉದರಕ್ಕೆ ಗಂಟೆಹಾರ ಧರಿಸಿದ್ದಾನೆ. ಉದರದ ಇನ್ನಿತರ ಭಾಗಗಳು ತುಟಿತವಾಗಿವೆ, ೮. ಪ್ರಾಣಿ-ಮನುಷ್ಯರೂಪದ ನಾಗ, ದೇವಾಲಯದ ಹೊರ ಆವರಣದಲ್ಲಿ ಮುರಿದ ಕಂಬಗಳು, ವೀರಗಲ್ಲು, ಕ್ಯಾಪಿಟಲ್ ಭಾಗ ಇತ್ಯಾದಿಗಳಿವೆ.

*ಈಶ್ವರ ದೇವಾಲಯ :* ಮಳಖೇಡ (ಸೇಡಂ ತಾ.)ದ ಈಶ್ವರ ದೇವಾಲಯದ ತಳಪಾಯದಲ್ಲಿ ಗರ್ಭಗೃಹ, ಸುಕನಾಶಿ, ನವರಂಗಗಳಿದ್ದು ನವರಂಗಕ್ಕೆ ಮೂರು ಪ್ರವೇಶ ದ್ವಾರಗಳಿವೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ದ್ವಾರ ಚೌಕಟ್ಟಿನಲ್ಲಿ ಗಜಲಕ್ಷ್ಮಿ, ಉತ್ತರಾಂಗದಲ್ಲಿ ಶಿಖರ ನಮೂನೆಗಳಿವೆ. ಫಲಕದಲ್ಲಿ ಪಂಚಶಾಖೆ ಗಳಿದ್ದು ರತ್ನ ಹಾರ ಹಿಡಿದವರು, ಅರ್ಧಗಂಬ, ಮನುಷ್ಯ, ಪತ್ರಗಳಿವೆ. ಶೈವದ್ವಾರಪಾಲಕರ ಬದಿಗಳಲ್ಲಿ ಸೇವಕರಿದ್ದಾರೆ. ಸುಕನಾಶಿಯ ಲಲಾಟದಲ್ಲಿ ನಟರಾಜ, ಬದಿಗಳಲ್ಲಿ ವಾದ್ಯ ಮೇಳದವರಿದ್ದಾರೆ. ಸುಕನಾಶಿ ದ್ವಾರಚೌಕಟ್ಟಿನ ಗುಡಿಗಳ ಗೋಡೆಗಳಲ್ಲಿ ದೇವಕೋಷ್ಠಗಳಿವೆ. ಈ ದ್ವಾರ ಫಲಕದಲ್ಲಿ ಮೂರು ಶಾಖೆಗಳಿದ್ದು ಅವು ರತ್ನಮಾಲಾ, ಅರ್ಧಗಂಬ ಮತ್ತು ಜಾಲಂಧ್ರ ವುಳ್ಳ ಭಾಗಗಳಿವೆ. ಬಲಗಡೆ ಗೂಡಿನಲ್ಲಿ ನವರಂಗದಲ್ಲಿ ನಾಲ್ಕು ಕಂಬಗಳಿವೆ ಮತ್ತು ಗಣೇಶ ವಿಗ್ರಹವಿದೆ. ಈ ದೇವಾಲಯ ಪೂರ್ವಕ್ಕೆ ಭಿತ್ತಿನಲ್ಲಿ ಕಮಲದ ಸುತ್ತ ನಾಲ್ಕು ಕೀರ್ತಿಮುಖಗಳಿವೆ. ದೇವಾಲಯ ಪೂರ್ವಕ್ಕೆ ಮುಖ ಮಾಡಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ.

*ಈಶ್ವರ ಗುಡಿ :* ಮಳಖೇಡ ನದಿ ದಂಡೆ ಬದಿಗೆ ಒಂದು ಕಿರಿದಾದ ಈಶ್ವರ ದೇವಾಲಯವಿದೆ. ಏಕಕೂಟವುಳ್ಳ ದೇವಾಲಯ ಅದರಲ್ಲಿ ಶಿವಲಿಂಗವಿದೆ. ದ್ವಾರಚೌಕಟ್ಟಿನಲ್ಲಿ ನಾಲ್ಕು ಶಾಖೆಗಳಲ್ಲಿ ಹೂಬಳ್ಳಿ, ಅರ್ಧಗಂಬ, ನಾಲ್ಕು ಹುಡುಗರು ನಿಂತ ಸಾಲು ಮತ್ತು ಪತ್ರಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯಿರುವಳು. ಅದರ ಕಾಲ ಸು. ಕ್ರಿ. ಶ. ೧೧ನೇ ಶತಮಾನ. ಈ ಕಾಲದ ಬಾಗಿಲು ಚೌಕಟ್ಟು ಈ ಭಾಗದಲ್ಲಿ ಅನೇಕ ಕಡೆಗಳಲ್ಲಿವೆ (ಹಂದರಕಿ, ಕುರುಕಂಟ ಇತ್ಯಾದಿ).

## ದೇವಾಲಯಗಳು-ತೀರ್ಥಗಳು

ಮುದ್ನೂರಿನಲ್ಲಿ (ಸುರಪುರ ತಾ.) ಅನೇಕ ದೇವಾಲಯಗಳ ತಳಪಾಯಗಳು ಅಲ್ಲಲ್ಲಿವೆ. ಅವುಗಳ ಅಧಿಷ್ಠಾನದ ಮೇಲೆ ಮನೆಗಳನ್ನು ಕಟ್ಟಲಾಗಿದೆ. ಶೈಲಿಯಿಂದ ಅವುಗಳ ಕಾಲದ ಸು. ಕ್ರಿ.ಶ. ೧೧ ರಿಂದ ೧೩ನೇ ಶತಮಾನ. ಆದರೆ ಸ್ಥಳೀಯ ಎರಡು ತೀರ್ಥಗಳು, ಪ್ರಾಚೀನ ದೇವಾಲಯ ಸಂಕೀರ್ಣಗಳು ಮತ್ತು ಶಿಲ್ಪಗಳು ಪ್ರಮುಖವೆನಿಸಿವೆ. ರಾಮತೀರ್ಥ ದಂಡೆಯ ಮೇಲೆ ಒಂದು ಪ್ರಾಚೀನ ವಾಸಸ್ಥಾನದ ದೇವಾಲಯದ ಕಟ್ಟಡವಿದ್ದು ಅದನ್ನು ಅಲ್ಲಲ್ಲಿ ಬದಲಾಯಿಸಿ ವಾಸಸ್ಥಾನವನ್ನಾಗಿ ಪರಿವರ್ತಿಸಲಾಗಿದೆ. ಅದರ ಕಾಲ ಸು. ಕ್ರಿ. ಶ. ೧೧ನೇ ಶತಮಾನ ಆರಂಭಭಾಗ.

*ರಾಮತೀರ್ಥ :* ಈ ತೀರ್ಥವು ನೀರಿನ ಬುಗ್ಗೆಗಳಿಂದ ಸದಾ ನೀರು ಅದರಲ್ಲಿರುತ್ತದೆ. ಈ ತೀರ್ಥದ ತಳಪಾಯ ಚೌಕಾಗಿದ್ದು ನಾಲ್ಕು ಕಡೆಗಳಲ್ಲಿ ನಾಲ್ಕು ಪ್ರವೇಶಗಳಿವೆ. ಈ ಪ್ರವೇಶಗಳಿಗೆ ಮೆಟ್ಟಲು ಗಳಿವೆ. ಪಶ್ಚಿಮ ಮತ್ತು ಉತ್ತರ ಪ್ರದೇಶಗಳ ಎಡ ಬದಿಗಳಲ್ಲಿ ಸಮಕಾಲೀನದಲ್ಲಿ ಸ್ಥಾಪಿಸಿದ ಎರಡು ಶಿವಲಿಂಗ ಪೀಠಗಳಿವೆ. ಈ ತೀರ್ಥದ ಒಳಮಗ್ಗಲಿನ ಮಧ್ಯದ ಹಂತದ

ಗೋಡೆಗಳಲ್ಲಿ ಸುತ್ತಲೂ ಒಂದೇ ಸಾಲಿನಲ್ಲಿ ರಾಮಾಯಣ ಭಾಗವತ ಮತ್ತು ಮಹಾಭಾರತದ ಕಥಾನಕ ದೃಶ್ಯಗಳುಳ್ಳ ಶಿಲ್ಪಫಲಕಗಳನ್ನು ಕೂಡಿಸಲಾಗಿದೆ. ಮೂಲೆಗಳಲ್ಲಿ ಗೂಡುಗಳಿದ್ದು ಅವುಗಳಲ್ಲಿ ನಟರಾಜ, ಮಹಿಷಾಸುರಮರ್ದಿನಿ ಇನ್ನಿತರ ವಿಗ್ರಹಗಳನ್ನು ಕೂಡಿಸಲಾಗಿದೆ. ಒಟ್ಟಾರೆ ಈ ತೀರ್ಥದ ಕಾಲ ಸು. ಕ್ರಿ.ಶ. ೯ನೇ ಶತಮಾನ ಕೊನೆ ಭಾಗ.

ಈ ಗ್ರಾಮದ ಪಶ್ಚಿಮ ಅಂಚಿಗೆ ವಿಶಾಲವಾದ *ಲಕ್ಷ್ಮಣ ತೀರ್ಥವಿದೆ*. ಅದರ ಒಂದು ಮಗ್ಗಲಿಗೆ ಗೋಡೆಯಿದು ಅದರ ಒಂದೆರಡು ಗೂಡುಗಳಲ್ಲಿ ನಾಗಶಿಲ್ಪಗಳನ್ನು ಕೂಡಿಸಲಾಗಿದೆ. ಅದರ ದಂಡೆಯ ಮೇಲಿನ ಕೆಲವು ಶಿಲ್ಪಗಳು ಮತ್ತು ದ್ವಾರ ಚೌಕಟ್ಟುಗಳು ಪ್ರಮುಖವೆನಿಸಿವೆ.

***ರಾಮಲಿಂಗ ದೇವಾಲಯ :*** ಮುಧೋಳ (ಸೇಡಂ ತಾ.) ಗ್ರಾಮದ ರಾಮಲಿಂಗ ದೇವಾಲಯ ತಳಪಾಯದಲ್ಲಿ ಗರ್ಭಗೃಹ, ಅರ್ಧಮಂಟಪ, ತೆರೆದ ನವರಂಗಗಳಿದ್ದು ನವರಂಗಕ್ಕೆ ಕಕ್ಷಾಸನವಿದೆ. ಗರ್ಭಗೃಹದಲ್ಲಿರುವ ಶಿವಲಿಂಗವು ಹಂಪೆಯ ವಿರೂಪಾಕ್ಷನ ದಂತಿರುವುದೆಂದು ಸ್ಥಳೀಕರು ಹೇಳಿರುವರು. ಅದರ ಸುತ್ತ ಐದು ಹೊಂಡಗಳಿದ್ದವು. ಈಗ ಅವುಗಳನ್ನು ಮುಚ್ಚಿ ಮನೆ ಕಟ್ಟಿದ್ದಾರೆ ಎನ್ನುವರು. ಗರ್ಭಗೃಹ ದ್ವಾರ ಚೌಕಟ್ಟು ಸರಳವಾಗಿದೆ. ಅರ್ಧಮಂಟಪ ಬದಿಗಿನ ಗೋಡೆಗಳಲ್ಲಿ ಗೂಡುಗಳಿದೆ. ಕಾಲ ಸು. ಕ್ರಿ.ಶ. ೧೩ನೇ ಶತಮಾನ.

***ಈಶ್ವರ ಗುಡಿ:*** ಗುಂಡಗರ್ತಿಯ ಜೀರ್ಣೋದ್ಧಾರಗೊಂಡ ಈಶ್ವರ ದೇವಾಲಯಕ್ಕೆ ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ದ್ವಾರಚೌಕಟ್ಟಿನ ಮೂರು ಶಾಖೆಗಳಿದ್ದು ರತ್ನ ಅರ್ಧಗಂಬ ಮತ್ತು ರತ್ನವುಳ್ಳ ಜಾಲಂದರಗಳಿವೆ. ಲಲಾಟ ಪಟ್ಟಿಕೆಯಲ್ಲಿ ಗಜೇಂದ್ರ ಮೋಕ್ಷ ನಂದಿ, ವಾದ್ಯಮೇಳ, ಮಕರ ತೋರಣ ಮಧ್ಯ ಇವೆ. ಸಭಾಮಂಟಪದ ಛತ್ತಿನಲ್ಲಿರುವ ಗುಮ್ಮಟಾಕಾರದ ಕಮಲವು ಸೇಡಂನ ಪಂಚಲಿಂಗೇಶ್ವರ ದೇವಾಲಯದಂತಿದೆ. ಇವುಗಳು ವಿವಿಧ ಕಾಲದ ದೇವಾಲಯ ಭಾಗಗಳಾಗಿವೆ.

***ಈಶ್ವರ ಗುಡಿ :*** ಕಾಳಿಯ (ಚಿತಾಪುರ ತಾ.) ಕಾಳೇಶ್ವರ ದೇವಾಲಯದ ಬದಿಯ ಹಳ್ಳದ ಪಕ್ಕದ ಸದಾ ನೀರುಳ್ಳ ಹಂತ ಬದಿಗೆ ಒಂದು ಗುಡಿಯಿದೆ (ಈಶ್ವರ ಗುಡಿ). ಅದಕ್ಕೆ ಒಂದೇ ಗರ್ಭಗೃಹವಿದ್ದು ನಾಲ್ಕು ಮುಖವುಳ್ಳ ನಾಲ್ಕು ಪ್ರವೇಶದ್ವಾರಗಳಿವೆ. ಆದುದರಿಂದ ಇದೊಂದು ಸರ್ವತೋಭದ್ರ ಮಾದರಿಯ ವಿಶಿಷ್ಟ ದೇವಾಲಯ. ಈ ಮಾದರಿ ಉಣಕಲ್ಲಿನ ಚಂದ್ರಮೌಳೇಶ್ವರ ದೇವಾಲಯಕ್ಕಿದೆ. ಆದರೆ ಅದಕ್ಕಿರುವ ಪ್ರದಕ್ಷಿಣಾ ಪಥ ಇದರಲ್ಲಿರುವುದಿಲ್ಲ. ಅದರ ತಳಪಾಯ ನಕ್ಷತ್ರಾಕಾರ ಮಾದರಿಯನ್ನು ಹೋಲುತ್ತದೆ. ಅದರ ಒಳಗಡೆ ಒಂದು ಆಯತಾಕಾರದ ಪೀಠವಿದೆ. ಅದರ ಮೂಲ ವಿಗ್ರಹಗಳು ಸ್ಥಾನಪಲ್ಲಟವಾಗಿವೆ. ಕಾಲ ಸು. ಕ್ರಿ. ಶ. ೧೧ನೇ ಶತಮಾನ.

***ದೇವಾಲಯ ಅವಶೇಷಗಳು :*** ದೇವಾಲಯದ ವಿವಿಧ ಭಾಗಗಳು ಅನೇಕ ಗ್ರಾಮಗಳಲ್ಲಿ ಚದುರಿಹೋಗಿವೆ. ದಂಡಾಪುರದ ದ್ವಾರ ಚೌಕಟ್ಟಿನ ಲಲಾಟದಲ್ಲಿ ಶಿವಲಿಂಗ ಚಿತ್ರವಿದೆ. ಕೆಳಗಡೆ ಪೂರ್ಣ ಕುಂಭವಿದೆ. ಮೂರು ಶಾಖೆಗಳಿವೆ. ಕಾಲ ಸು. ೧೧ನೇ ಶತಮಾನ. ಈ ಮಾದರಿ ಬಳ್ಳಾರಿ ಜಿಲ್ಲೆಯ ಕೋಗಳಿಯ ಹನುಮಂತ ದೇವಾಲಯದ ಇತ್ಯಾದಿ ಕಡೆಗಳಲ್ಲಿವೆ.

***ಬಸವಣ್ಣ ದೇವಾಲಯ :*** ಏವೂರಿನ ಶೈವ ದೇವಾಲಯಗಳೆರಡು ವಿಶಾಲವಾದ ಕಲ್ಯಾಣಿಯ ಪಶ್ಚಿಮದಡದಲ್ಲಿವೆ. ಅದಕ್ಕೆ ಸುತ್ತಲೂ ಪ್ರಾಕಾರವಿದೆ. ಪೂರ್ವಕ್ಕೆ ಮುಖ ಮಾಡಿದೆ. ತಳಪಾಯ ದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿದ್ದು ಅವುಗಳ ಭಿತ್ತಿಯಲ್ಲಿ ಒಂದರಲ್ಲಿ ಗರ್ಭಗೃಹದ ಮೂರು ಮುಖಗಳ ಮಧ್ಯ ಶಿಲ್ಪವುಳ್ಳ ಪಂಜರಗಳ ಅಲಂಕರಣ ಮತ್ತು ಪಂಜರ, ಅರ್ಧಗಂಬಗಳ ಸಾಲಿದೆ. ಇನ್ನೊಂದರಲ್ಲಿ ಅದು ವಿಭಿನ್ನವಾಗಿದೆ.

ಅವುಗಳ ಮೂಲ ಶಿಖರಗಳು ಜೀರ್ಣೋದ್ಧಾರಗೊಂಡಿವೆ. ಅವುಗಳ ಪರಿಸರದಲ್ಲಿ ಸಮುದ್ರ ಮಥನ, ಅಂಬಿಕಯಕ್ಷಿ, ದ್ವಾರಪಾಲಕ ಇತ್ಯಾದಿ ಶಿಲ್ಪಗಳಿವೆ. ಕಾಲ ಸು. ಕ್ರಿ. ಶ. ೧೧ನೇ ಶತಮಾನ. ಕುತೂಹಲ ಸಂಗತಿಯೆಂದರೆ ಈ ದೇವಾಲಯ ಎದುರಿಗಿನ ಸಮಕಾಲೀನ ವಿಶಾಲ ಕಲ್ಯಾಣಿಯ ನೀರನ್ನೂ ವಿಷ ಜಂತು ಚೇಳು ಕಚ್ಚಿದಾಗ ಅದನ್ನು ಕುಡಿದು ವಿಷ ಪರಿಹರಿಸಿ ಕೊಳ್ಳುತ್ತಿದ್ದರಂತೆ ! ಈ ಕುರಿತು ಈ ಕಲ್ಯಾಣಿಯ ನೀರನ್ನು ವೈಜ್ಞಾನಿಕ ವಾಗಿ ಪರಿಶೀಲಿಸಬೇಕಾಗಿದೆ.

### ವಿಶಿಷ್ಟ ಶೈವ ಶಿಲ್ಪಗಳು

ಗಣೇಶ, ಭೈರವ, ಶಿವಲಿಂಗ, ಶಿವ - ಪಾರ್ವತಿ, ಶೈವ ದ್ವಾರಪಾಲಕರು, ಕಾರ್ತಿಕೇಯ, ನಂದಿ ಪ್ರಮುಖವಾಗಿವೆ. ಈ ಶಿಲ್ಪಗಳಲ್ಲಿ ಕೆಲವುಗಳ ಲಕ್ಷಣ ವಿಶಿಷ್ಟವೆನಿಸಿವೆ.

***ಶಿವಲಿಂಗ:*** ಕ್ರಿ. ಶ. ೧೧-೧೨ನೇ ಶತಮಾನದ ಬ್ರಹ್ಮಸೂತ್ರವುಳ್ಳ ಶಿವಲಿಂಗಗಳು ಗುರು ಮಡಕಲ್ (ಯಾದಗೀರ ತಾ.) ದಂಡಾಪುರ ಮುಗುಟ (ಚಿತಾಪುರ ತಾ.) ಮುದೋಳ ಚಿತಾಪುರ, ಕಾಳ್ಗಿ, ಮಳಖೇಡ, ಮೇರಕ ಇತ್ಯಾದಿ ಕಡೆಗಳಲ್ಲಿವೆ. ಚಂದಾಪುರ (ಸೇಡಂ ತಾ.)ನ ಈಶ್ವರ ಗುಡಿಯಲ್ಲಿ ಐದು ಲಿಂಗವುಳ್ಳ ಪಂಚಲಿಂಗೇಶ್ವರವಿದೆ (ಕ್ರಿ. ಶ. ೧೭-೧೮ನೇ ಶತಮಾನ) ಆದರೆ ಕೆಲವು ಕಡೆಗಳಲ್ಲಿ ಬ್ರಹ್ಮಸೂತ್ರದ ನಾಡಿಗಳು ಶಿವಲಿಂಗದ ಮುಖದ ಮೇಲೆ ಅರ್ಧವೃತ್ತಾಕಾರದಲ್ಲಿ ಸಂಧಿಸಿವೆ. ಅದು ಪ್ರತ್ಯೇಕವಾಗಿದೆ. ಅಂತಹ

ಲಿಂಗಗಳು ಸೇಡಂ ಚಿತಾಪುರ, ಯಾದಗೀರ ಇತ್ಯಾದಿ ತಾಲೂಕಿನ ಕೆಲಗ್ರಾಮಗಳಲ್ಲಿವೆ (ಕುರುಕುಂಟ, ಮೆದಕಲ್, ಸೇಡಂ ಇತ್ಯಾದಿ).

*ಗಣೇಶ :* ಗಣೇಶನ ಕುಳಿತ ಮತ್ತು ನೃತ್ಯಭಂಗಿಯ ಶಿಲ್ಪಗಳಿವೆ. ಕುಳಿತ ಭಂಗಿಯ ಶಿಲ್ಪಗಳಲ್ಲಿ ಕೆಲವು ದ್ವಿಭುಜದಲ್ಲಿ ಇನ್ನುಳಿದವುಗಳು ಚತುರ್ಭುಜದಲ್ಲಿವೆ. ದಂತ-ಪರಶು ಹಿಡಿದು ಕುಳಿತ ಗಣೇಶ ಶಿಲ್ಪಗಳೆರಡು ಮಳಖೇಡದ ಮಾರುತಿ ಗುಡಿಯಲ್ಲಿ, ಒಂದು ಮುಗುಟ (ಸೇಡಂ ತಾ.) ದಲ್ಲಿವೆ. ಮಳಖೇಡದ ಮಾರುತಿಶಿಲ್ಪದಲ್ಲಿ ಉದರಕ್ಕೆ ನಾಗನನ್ನು ಕಟ್ಟಲಾಗಿದೆ. ಗಂಟೆಸರ ಧರಿಸಲಾಗಿದೆ. ಚತುರ್ಭಜ ಗಣೇಶನ ಕೈಗಳಲ್ಲಿ ದಂತ, ಪರಶು, ಕಮಲ ಮತ್ತು ಫಲಗಳಿವೆ. ಇವುಗಳು ಮಳಖೇಡ (೪, ಚಂದಾಪುರ, ಬುರುಕಪಳ್ಳಿ, ಗುಂಡಗರ್ತಿ, ಐವೂರ, ದಂಡಾಪುರ, ಮುದನೂರ, ಜೇವರ್ಗಿ ಶಿರಿವಾಳ, ಬನ್ನೂರ, ರಿಬ್ಬನಪಳ್ಳಿ, ರಾಜೊಳ್ಳಿ, , ಮುದೋಳ, ಕೊಂತನಪಳ್ಳಿ ಇತ್ಯಾದಿ ಗ್ರಾಮಗಳಲ್ಲಿವೆ. ಕಾಲ ಸು. ಕ್ರಿ.ಶ. ೧೦ರಿಂದ ೧೨ನೇ ಶತಮಾನ. ಕಾರ್ತಿಕೇಯನ ನವಿಲು ಸವಾರಿಯ ಶಿಲ್ಪ ದಂಡಾಪುರದಲ್ಲಿದೆ (ಕ್ರಿ.ಶ. ೧೦ನೇ ಶತಮಾನ).

ಶಿವ ಪಾರ್ವತಿಯರ ಶಿಲ್ಪಗಳು ನಾಡಪಳ್ಳಿ (ಇತ್ತೀಚಿನದು) ಇದನ್ನು ಪಾರ್ವತಿ ಪರಮೇಶ್ವರನೆನ್ನುವರು: ಶಿವದೇವಾಲಯದ ಪರಿಸರದಲ್ಲಿ ನಂದಿಯ ವಿಗ್ರಹಗಳು ಸಾಮಾನ್ಯ. ಈ ಭಾಗದ ಅನೇಕ ಗ್ರಾಮಗಳಲ್ಲಿವೆ. ಕಾಲ ಕ್ರಿ. ಶ. ೧೧-೧೨ನೇ ಶತಮಾನ. ನಂದಿಯ ಲೊಂಕಬಸವೇಶ್ವರ ಗುಡಿ (ಇತ್ತೀಚಿನ ಕಾಲ) ರಿಬ್ಬನ ಪಳ್ಳಿಯಲ್ಲಿದೆ.

*ಶಿವ :* ಮುದ್ನೂರಿನ ರಾಮತೀರ್ಥ ಬದಿಗಿನ ಈಶ್ವರ ಗುಡಿ ಗೋಡೆಯಲ್ಲಿ ಒಂದು ಸುಂದರ ಶಿವನ ಶಿಲ್ಪವಿದೆ. ಕುಳಿತ ಭಂಗಿ. ಚತುರ್ಭುಜಧಾರಿ. ಮೇಲೆ ಕೈಗಳಲ್ಲಿ ತ್ರಿಶೂಲ ಮತ್ತು ನಾಗಗಳಿವೆ. ಕೆಳಗಿನ ಕೈಗಳು, ತಲೆ, ಮುಖ ಪಾದಭಾಗಗಳು ಶಿಥಿಲಗೊಂಡಿವೆ. ಶಿವನ ಬದಿಗಳಲ್ಲಿ ಸೇವಕಿಯರು ನಿಂತಿದ್ದಾರೆ. ಕಾಲ ಸು. ಕ್ರಿ.ಶ. ೧೦ನೇ ಶತಮಾನ. ವಸ್ತ್ರಾಭರಣಧಾರಿ.

*ಭೈರವ :* ಭೈರವನ ಶಿಲ್ಪಗಳು ದಂಡಾಪುರ, ರಿಬ್ಬನಪಳ್ಳಿ ಇತ್ಯಾದಿ ಗ್ರಾಮಗಳಲ್ಲಿವೆ. ಚತುರ್ಭುಜದಾರಿ ಕೈಗಳಲ್ಲಿ ಕತ್ತಿ, ಡಮರು, ತ್ರಿಶೂಲ ಮತ್ತು ಕಪಾಲಗಳಿವೆ, ತ್ರಿಬಂಗಿಯಲ್ಲಿರುವನು ಎಡಗಡೆ ನಾಯಿ ಬದಿಗಳಲ್ಲಿ ಸೇವಕರಿರುವ ಶಿಲ್ಪ ದಂಡಾಪುರದಲ್ಲಿದೆ. ರುಂಡಮಾಲೆಯನ್ನು ಧರಿಸಿರುವನು ಕಿರೀಟ ಮುಕುಟಧಾರಿ ಕಾಲ. ಕ್ರಿ.ಶ. ೧೨ನೇ ಶತಮಾನ.

ನಂದಿ, ಸೂರ್ಯ, ಮಾಧವ, ಶಿವನ ಇತ್ತೀಚಿನ ಶಿಲ್ಪಗಳು ಬಂದಿಪಳ್ಳಿ ಇತ್ಯಾದಿ ಗ್ರಾಮಗಳಲ್ಲಿವೆ. ಕುದುರೆ ಸವಾರಿ ಮಾಡುವ ಖಂಡೋಬನ ಇತ್ತೀಚಿನ ಶಿಲ್ಪಗಳು ಕರ್ಚಲ (೩) ದಲ್ಲಿವೆ.

ಶೈವ ದ್ವಾರಪಾಲಕರ ಭವ್ಯವಾದ ವಿಗ್ರಹಗಳು ನಿಡಗುಂದಿ (೨), ಶಿರಿವಾಳ(೨), ಇನ್ನಿತರ ಕಡೆಗಳಲ್ಲಿದ್ದು ಅವುಗಳು ಸು. ಕ್ರಿ. ಶ. ೧೦ನೇ ಶತಮಾನದ್ದಾಗಿವೆ. ನಿಡಗುಂದಿ ದ್ವಾರಪಾಲಕನ ಜಟಾಮುಕುಟದಲ್ಲಿ ನಾಗಬಂಧ, ನಾಲ್ಕು ಕೈಗಳಲ್ಲಿ ಅಭಯ, ಡಮರು, ತ್ರಿಶೂಲ, ಗದೆ ವಸ್ತ್ರಾಭರಣಗಳ ವೈವಿಧ್ಯ ಗಮನೀಯ.

*ನಟರಾಜ :* ಮುದ್ನೂರಿನ ಲಕ್ಷ್ಮಣತೀರ್ಥ ದಂಡೆಯ ಮೇಲೆ ಕೆಲ ಶಿಲ್ಪಗಳಲ್ಲಿ ಸುಕನಾಶಿ ಭಾಗದ ನಟರಾಜ ಶಿಲ್ಪ ವಿಶಿಷ್ಟ ವಾದುದು. ಎಂಟು ಭುಜವುಳ್ಳ ನಟರಾಜನು ಅಸುರನ ಮೇಲೆ ನೃತ್ಯ ಭಂಗಿಯಲ್ಲಿದ್ದಾನೆ. ಆರು ಕೈಗಳಲ್ಲಿ ತ್ರಿಶೂಲ, ನಾಗ, ಡಮರು, ಅಭಯ, ಗಂಟೆ, ನಾಗಗಳನ್ನು, ಉಳಿದೆರಡು ಕೈಗಳು ನೃತ್ಯ ಭಂಗಿಯಲ್ಲಿ ಒಂದನ್ನು ಬಗ್ಗಿಸಿದ್ದಾನೆ ಇನ್ನೊಂದನ್ನು ಬಲಗಡೆ ಕೈಕೆಳಗೆ ಬಾಗಿಸಿ ಹಿಡಿದಿದ್ದಾನೆ. ಈತನನ್ನು ವೃತ್ತಾಕಾರದಲ್ಲಿ ಚಿತ್ರಿಸಲಾಗಿದೆ. ಈ ವೃತ್ತ ಪಟ್ಟಿಯ ಸುತ್ತ ಅಷ್ಟದಿಕ್‌ಪಾಲಕರು ತಮ್ಮ ವಾಹನಾರೂಢರಾಗಿದ್ದಾರೆ. ಅಲ್ಲಲ್ಲಿ ವಾದ್ಯಮೇಳ, ನೃತ್ಯ ಮೇಳದವರಿದ್ದಾರೆ. ದೇವಗಣರಿದ್ದಾರೆ. ಈ ಮಾದರಿ ಶಿಲ್ಪ ವಿರಳ. ಕಾಲ ಸು. ಕ್ರಿ.ಶ. ೧೦ನೇ ಶತಮಾನ.

*ಮಕರ ತೋರಣ :* ಈ ಮೇಲಿನ ಶಿಲ್ಪದ ಬದಿಯ (ಮುದ್ನೂರು) ಹಳೆದಾದ ದೇವಾಲಯದ ಬಾಗಿಲು ಚೌಕಟ್ಟಿನಲ್ಲಿ ಸುಂದರ ಮಕರ ತೋರಣವಿದೆ. ಅದರಲ್ಲಿ ನೃತ್ಯ, ವಾದ್ಯಮೇಳ, ತ್ರಿಮೂರ್ತಿಗಳ ಚಿತ್ರಗಳಿವೆ. ಆಕಾಶದಲ್ಲಿ ಹಾರುವ ದೇವತೆಯರು ಇದ್ದಾರೆ. ಕಾಲ ಸು. ಕ್ರಿ.ಶ. ೧೦ನೇ ಶತಮಾನ.

*ಭುವನೇಶ್ವರ ಪಟ್ಟಿ :* ಮಳಖೇಡದ ಮಾರುತಿ ಗುಡಿ ಗೋಡೆಯಲ್ಲಿಟ್ಟು ಕಟ್ಟಿದ ಭುವನೇಶ್ವರ ಒಂದು ಪಟ್ಟಿಕೆಯಲ್ಲಿ ಇಬ್ಬರು ದಿಕ್ಪಾಲಕರ ಮಧ್ಯ ನಟರಾಜನ ಸುಂದರ ಶಿಲ್ಪ ಕ್ರಿ.ಶ. ೧೧ನೇ ಶತಮಾನದ್ದು.

*ನಾಗಗಳು :* ನಾಗ -ನಾಗಿಣಿಯರ ಮನುಷ್ಯ-ಪ್ರಾಣಿಗಳ ರೂಪದ ಅನೇಕ ಶಿಲ್ಪಗಳು ಈ ಭಾಗದಲ್ಲಿವೆ. ಹಾವಿನ ರೂಪದ ನಾಗ ಮತ್ತು ನಾಗ ದಂಪತಿಗಳ ಶಿಲ್ಪಗಳು ಗುಂಡಗರ್ತಿ (೬), ಬಂದೀಪಳ್ಳಿ, ಮಳಖೇಡ, ಗುಂಡೇಪಳ್ಳಿ (ಬದಿಗಳಲ್ಲೂ ನಾಗಗಳಿವೆ), ಮುದ್ನೂರು (ಏಳುಹೆಡೆ ಸರ್ಪಗಳು-೩) ಇತ್ಯಾದಿ ಸ್ಥಳಗಳಲ್ಲಿವೆ. ಮೇಲಿನ ಭಾಗ ಮನುಷ್ಯ ಮತ್ತು ಕೆಳಗಿನ ಭಾಗ ಹಾವಿನ ರೂಪವಿದೆ. ಇವರು ಕತ್ತಿ ಮತ್ತು ಗುರಾಣಿ ಹಿಡಿದಿದ್ದಾರೆ. ವಸ್ತ್ರಾಭರಣ ಧರಿಸಿವೆ. ಅವುಗಳು ಅಂದೋಲ, ಇಟಕಲ್, ಬುರುಕಪಳ್ಳಿ ಇತ್ಯಾದಿ ಕಡೆಗಳಲ್ಲಿವೆ. ಕಾಲ ಸು. ಕ್ರಿ. ಶ. ೧೧ ರಿಂದ ೧೨ನೇ ಶತಮಾನ. ಮುದೋಳ ಶಿಲ್ಪ ರುಂಡಾಕೃತಿಯಲ್ಲಿದೆ. ತಲೆ ಭಾಗ ಒಡೆದಿದೆ. ಮುದ್ನೂರಿನ ಏಳು ಹೆಡೆ ನಾಗ ಶಿಲ್ಪದಲ್ಲಿ ಕುತ್ತಿಗೆಗೆ ಸರವನ್ನು ಕಟ್ಟಲಾಗಿದೆ. ಕುತ್ತಿಗೆಯ ಸರದ ಮೂರು ಪಟ್ಟಿಕೆಗಳ ಅಲಂಕಾರ ಶಾತವಾಹನರ ಲಕ್ಷಣವನ್ನು ನೆನಪು ಮಾಡಿಕೊಡುತ್ತದೆ.

**ಶಕ್ತಿ ದೇವತೆಯರು:** ಈ ಭಾಗದಲ್ಲಿ ದೇವತೆಯರ ವಿಗ್ರಹಗಳಾದ ಮಹಿಷಾಸುರವರ್ದಿನಿ, ಕಾಳಿಕ ಶಿಲ್ಪಗಳು ಪ್ರಮುಖವಾಗಿವೆ. ಮಹಿಷಾಸುರಮರ್ದಿನಿಯ ಎಂಟು ಅಥವಾ ನಾಲ್ಕು ಕೈವುಳ್ಳ ಶಿಲ್ಪಗಳಿವೆ. ಮೊದಲನೇ ರೀತಿಯ ಶಿಲ್ಪಗಳು ಮುದ್ನೂರು, ಅಂದೋಲ, ಶಹಪುರ ಇತ್ಯಾದಿ ಕಡೆಗಳಲ್ಲಿವೆ.

**ಮಹಿಷಾಸುರ ಮರ್ದಿನಿ :** ಶಹಪೂರ ಶಿಲ್ಪದಲ್ಲಿ ದೇವಿ ತಲೆಯ ಕೇಶವನ್ನು ಉಂಗುರಾ ಕೃತಿಯಲ್ಲಿ ಅಲಂಕರಿಸಿರುವುದು ವಿಶಿಷ್ಟವೆನಿಸಿದೆ. ಕಿರೀಟ ಮುಕುಟವಿಲ್ಲ. ಎಂಟುಭುಜಗಳು ಬಲಗೈಯಲ್ಲಿ ಹಿಡಿದ ತ್ರಿಶೂಲದಿಂದ ಸುರನ ಹೊಟ್ಟೆಗೆ ಇರಿಯುತ್ತಿದ್ದಾಳೆ. ಕೈಗಳಲ್ಲಿ ಬಾಣ, ಗದಾ, ಚಕ್ರ, ಶಂಖ, ಬಿಲ್ಲು, ಕಪಾಲ, ಗುರಾಣಿ ಹಿಡಿದಿದ್ದಾಳೆ. ಒಂದು ಕೈಯಿಂದ ಸುರನನ್ನು ಒತ್ತಿ ಹಿಡಿದಿದ್ದಾಳೆ. ಹಣೆ ಮಧ್ಯ ಮೂರನೇ ಕಣ್ಣಿದೆ. ಮಾವಿನ ಕಾಯಿಯಂತಹ ಲೋಪದ ಸರ ಧರಿಸಿದ್ದಾಳೆ. ಕುಂಡಲ, ಬಳೆ, ಸರ, ಪಟ್ಟಿ, ವಸ್ತ್ರ, ಕಡಗಗಳನ್ನು ಧರಿಸಿದ್ದಾಳೆ. ಈ ಹಿಂದೆ ಈ ವಿಗ್ರಹ ಬೆಳಕಿಗೆ ಬಂದಾಗ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದಿತಂತೆ! ಶಹಪೂರ ಶಿಲ್ಪದ ಕಾಲ ಸು ಕ್ರಿ.ಶ. ೧೧ನೇ ಶತಮಾನ.

ಇನ್ನೊಂದರ ಕಾಲ ಸು. ಕ್ರಿ.ಶ. ೧೨ನೇ ಶತಮಾನ. ಎರಡನೇ ರೀತಿಯ ಶಿಲ್ಪಗಳು ದಂಡಾಪುರ, ಬುರುಕಪಳ್ಳಿ, ನಿಡಗುಂದಿ, ಏಪೂರ, ಗೋಪನಹಳ್ಳಿ. ಇತ್ಯಾದಿ ಕಡೆಗಳಲ್ಲಿವೆ. ಸಾಮಾನ್ಯವಾಗಿ ದೇವಿಯು ಕೋಣದ ಮುಖದಿಂದ ಸುರನನ್ನು ಹೊರಬರುವುದನ್ನು ಸುರನನ್ನು ತ್ರಿಶೂಲದ ತುದಿಯಿಂದ ತಿವಿದು ಕೊಲ್ಲುತ್ತಿರುವುದು, ಒಂದು ಕಾಲನ್ನು ಕೋಣದ ಮೇಲಕ್ಕಿಟ್ಟಿರುವುದು ಸಾಮಾನ್ಯ. ಸಿಂಹವನ್ನು ಕೆಳಗಡೆ ತೋರಿಸಲಾಗಿದೆ (ಮುದ್ನೂರು ಇತ್ಯಾದಿ) ವಸ್ತ್ರಾಭರಣ ಕೂಡ ಉಂಟು.

**ಪಾರ್ವತಿ :** ಪಾರ್ವತಿಯ ಶಿಲ್ಪವೊಂದು ಗುರುಮಠಕಲ್ಲಿನ ನಗರೇಶ್ವರ ದೇವಾಲಯ ಸಂಕಿರಣದಲ್ಲಿದೆ. ಕುಳಿತ ಭಂಗಿಯಲ್ಲಿದ್ದು ಬಲಗೈ ಅಭಯ ಮುದ್ರೆಯಲ್ಲಿದೆ. ಎಡಗೈಯಲ್ಲಿ ಇಷ್ಟಲಿಂಗ ಹಿಡಿದಿರುವುದು ಗಮನೀಯ. ಕಾಲ ಸು. ಕ್ರಿ.ಶ. ೧೫ನೇ ಶತಮಾನ, ಇಷ್ಟಲಿಂಗ ಹಿಡಿದ ಪಾರ್ವತಿಯ ಶಿಲ್ಪ ಬಳ್ಳಾರಿ ಜಿಲ್ಲೆಯ ಸೋಂಡೂರಿನ ಹತ್ತಿರದ ಕುಮಾರಸ್ವಾಮಿ ಗುಡ್ಡದ ಮೇಲಿನ ಪಾರ್ವತಿ ದೇವಾಲಯದಲ್ಲಿದೆ. ಅದರ ಕಾಲ ಸು. ಕ್ರಿ. ಶ. ೭ನೇ ಶತಮಾನ.

**ಕಾಳಿಕ:** ಕಾಳಿಕೆಯ ಶಿಲ್ಪಗಳು ಬುರುಕಪಳ್ಳಿ, ಬನ್ನೂರ, ನಿಡಗುಂದಿ (ಮೋಸಮ್ಮನ ಗುಡಿ) ಇತ್ಯಾದಿ ಕಡೆಗಳಲ್ಲಿವೆ. ಕಾಳಿಕೆಯು ಕುಳಿತ ಭಂಗಿಯಲ್ಲಿದ್ದು ತನ್ನ ನಾಲ್ಕು ಕೈಗಳಲ್ಲಿ ಕತ್ತಿ, ಡಮರು, ತ್ರಿಶೂಲ ಮತ್ತು ಕಪಾಲಗಳನ್ನು ಹಿಡಿದಿರುವಳು. ವಸ್ತ್ರಾಭರಣ, ಧರಿಸಿರುವಳು. ಇವುಗಳ ಕಾಲ ಸು. ಕ್ರಿ.ಶ. ೧೩ನೇ ಶತಮಾನ.

ನಿಡಗುಂದಿಯ (ಚಿಂಚೋಳ್ಳಿ ತಾ.) ಕಾಳಿಕ ಗುಡಿಯಲ್ಲಿರುವ ಕಾಳಿಕ ವಿಗ್ರಹ (?) ದಲ್ಲಿ ಹಲವು ಹೊಸ ಲಕ್ಷಣಗಳಿವೆ. ಈಕೆಯು ಕುಳಿತ ಭಂಗಿಯಲ್ಲಿದ್ದು ಚತುರ್ಭುಜೆ. ಕೈಗಳಲ್ಲಿ ಕತ್ತಿ, ಅಭಯ, ಕಮಲ ಮತ್ತು ಶಿವಲಿಂಗಗಳಿವೆ. ಪೀಠದಲ್ಲಿ ಎರಡು ನಂದಿ (?) ಗಳ ಮಧ್ಯ ಪಕ್ಷಿಯಿದೆ. ಎಡ ತೊಡೆ ಬದಿಗೆ ಗರುಡ(?) ಕೈಮುಗಿದು ಕುಳಿತಿದ್ದಾನೆ. ಬದಿಗಳಲ್ಲಿ ಹನುಮ (ಬಲಗಡೆ) ಮತ್ತು ಗಣಪತಿ (ಎಡಗಡೆ)ಯರಿದ್ದಾರೆ. ಹನುಮ, ಗಣಪತಿ, ಗರುಡ, ಇಷ್ಟಲಿಂಗಗಳ ಲಕ್ಷಣಗಳು ಶೈವ-ವೈಷ್ಣವ ಚಿನ್ಹೆಗಳಾಗಿ ರುವುದರಿಂದ ಹಾಗೂ ನಂದಿ ಮಧ್ಯ ಪಕ್ಷಿಯಿರುವುದರಿಂದ ಈಕೆಯು ಶ್ರೀ ವೈಷ್ಣವಿ ಯೆಂದಾಗಲೀ ಅಥವಾ ಪಾರ್ವತಿ ಎಂದಾಗಿ ಗುರುತಿಸಲು ಈ ಸದ್ಯ ಕಷ್ಟವೆನಿಸಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ ಇದರ ಮೂಲ ಸ್ಥಳವನ್ನು ಬದಲಾಯಿಸಲಾಗಿದೆ.

**ಸಪ್ತಮಾತೃಕೆಯರು :** ಸಪ್ತಮಾತೃಕೆಯರ ಶಿಲ್ಪಗಳು ಇಟಕಲ್, ಜೇವರ್ಗಿ, ಮೇದಕೆ, ಚಂದಾಪುರ, ದಂಡಾಪುರ ಇತ್ಯಾದಿ ಗ್ರಾಮಗಳಲ್ಲಿವೆ. ಅವುಗಳಲ್ಲಿ ಏಳು ದೇವತೆಯರ ಬದಿಗೆ ವೀರಭದ್ರ ಮತ್ತು ಗಣೇಶರು ಕುಳಿತ ಚಿತ್ರಗಳಿವೆ. ಕಾಲ ಸು. ಕ್ರಿ. ಶ. ೧೧-೧೨ನೇ ಶತಮಾನ.

### ವೈಷ್ಣವ ದೇವಾಲಯಗಳು

**ಸೂರ್ಯನಾರಾಯಣ ದೇವಾಲಯ :** ನಿಡಗುಂದಿ (ಚಿಂಚೋಳ್ಳಿ ತಾ.) ಯ ವೀರಭದ್ರ ದೇವಾಲಯ ಸಂಕಿರಣಕ್ಕೆ ಹೊಂದಿದ ವಿಶಾಲ ದೇವಾಲಯ ವೀರನಾರಾಯಣ. ಈ ದೇವಾಲಯದ ತಳಪಾಯದಲ್ಲಿ ಮೂರು ಗರ್ಭಗೃಹಗಳು, ಪೂರ್ವಕ್ಕೆ ಮುಖ ಮಾಡಿದ ಮಧ್ಯದ ಗರ್ಭಗೃಹಕ್ಕೆ ಮಾತ್ರ ಅರ್ಧ ಮಂಟಪವಿದೆ. ಒಂದು ನವರಂಗವಿದೆ. ಅದರ ಮುಂದೆ ವಿಶಾಲ ಮುಖಮಂಟಪದ ದ್ವಾರವಿದೆ. ಮಧ್ಯದ ಗರ್ಭಗೃಹದಲ್ಲಿ ಅಶ್ವಗಳ ಪೀಠದ ಮೇಲೆ ವಿಷ್ಣುವಿನ ಶಿಲ್ಪವಿದೆ. ಅದರ ಮೂಲ ಶಿಲ್ಪ ಸ್ಥಳಾಂತರಗೊಂಡಿದೆ. ಅರ್ಧಮಂಟಪದಲ್ಲಿ ಎರಡು ದುಂಡಾಕಾರದ ಕಂಬಗಳ ಮೇಲೆ ಸುಂದರ ಮಕರ ತೋರಣವಿದೆ. ಈ ತೋರಣದಲ್ಲಿ ಜಿಕಣೆ ಆಕಾರದ ಕುಳಿತ ನಿಧಿಗಳು, ದೇವಾನುದೇವತೆಗಳು, ಮಕರಸುವಾರರು ಅದರ ಮಧ್ಯ ಸೂರ್ಯನ ಚಿತ್ರ ತುಂಬಾ ಆಕರ್ಷಣೀಯವಾಗಿದೆ. ಉಳಿದ ಗರ್ಭಗೃಹಗಳಲ್ಲಿ ಶಿವಲಿಂಗ ಮತ್ತು ಭೈರವ ಶಿಲ್ಪಗಳಿವೆ. ಅವುಗಳ ದ್ವಾರಗಳಿಗೆ ಶೈವ ದ್ವಾರಪಾಲಕರು ಮತ್ತು ಲಲಾಟದಲ್ಲಿ ಗಜಲಕ್ಷ್ಮಿ ಇರುವಳು, ನವರಂಗದಲ್ಲಿ ನಾಲ್ಕು ಕಂಬಗಳು ಅದಕ್ಕೆ ಸರಳ ಭಿತ್ತಿಯಲ್ಲಿ ಅರ್ಧಗಂಬಗಳ ಸಾಲಿದೆ. ನವರಂಗ ಪಂಚ ಶಾಖೆಗಳು, ಕಪೋತದಲ್ಲಿ ಹಂಸ ಪಕ್ಷಿಗಳು, ಉತ್ತರಾಂಗದಲ್ಲಿ ಸೂರ್ಯ ಬದಿಗೆ ಉಪಾಸಕ ದಂಪತಿಗಳಿರುವರು. ಮುಖ ಮಂಟಪ ದ್ವಾರ ಮುಚ್ಚಿದ್ದರೂ ಅದು ಭವ್ಯವೆನಿಸಿದೆ. ಅದರಲ್ಲಿ ಶೈವ ದ್ವಾರಪಾಲಕರಿದ್ದಾರೆ. ಈ ದ್ವಾರಪಾಲಕರ ಕೈಗಳಲ್ಲಿ ಅಭಯ,

ಡಮರು, ತ್ರಿಶೂಲ ಮತ್ತು ಗದೆಗಳಿವೆ. ಜಟಾಮುಕುಟಧಾರಿಗಳಾಗಿದ್ದಾರೆ. ನಾಗಬಂಧ, ಹಾರ, ಸರ, ಬಳೆ ಇತ್ಯಾದಿ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಕಾಲ ಸು. ಕ್ರಿ.ಶ. ೧೧ನೇ ಶತಮಾನ.

ಈ ದೇವಾಲಯದ ಬದಿಗೆ ಕಿರಿದಾದ ಸುಂದರ ಏಕಕೂಟ ದೇವಾಲಯವಿದೆ ಶಿಖರವು ಕದಂಬ ನಾಗರ ಮಾದರಿ. ಭಿತ್ತಿಯಲ್ಲಿ ಅರ್ಧಗಂಭಗಳ ಸಾಲಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ದ್ವಾರಪಟ್ಟಿಯಲ್ಲಿ ನಾಲ್ಕು ಶಾಖೆಗಳಾದ ಲತಾಸುರುಳಿ, ಅರ್ಧಗಂಭ, ನಿಂತ ಸಿಂಹಸಾಲು ಮತ್ತು ಪತ್ರಗಳಿವೆ, ಲಲಾಟದಲ್ಲಿ ಗಜಲಕ್ಷ್ಮಿ, ಕೆಳಗಡೆ ಶೈವದ್ವಾರಪಾಲಕರು, ಬದಿಗೆ ಸೇವಕರಿದ್ದಾರೆ. ಬಾಗಿಲು ಪಾದಗಳಲ್ಲಿ ಆನೆಮುಖಗಳಿವೆ. ಕಾಲ ಸು. ಕ್ರಿ. ಶ. ೧೧ನೇ ಶತಮಾನ.

ಬದಿಗಿನ ವೀರಭದ್ರ ದೇವಾಲಯ ಅಲ್ಲಲ್ಲಿ ಜೀರ್ಣೋದ್ಧಾರಗೊಂಡಿದೆ. ಅದಕ್ಕೆ ಗರ್ಭಗೃಹ ಮತ್ತು ವಿಶಾಲ ಸ್ತಂಭ ಮಂಟಪವಿದೆ. ಗರ್ಭಗೃಹದಲ್ಲಿ ವೀರಭದ್ರನಿರುವನು. ಕಾಲ ಸು. ಕ್ರಿ.ಶ. ೧೨ನೇ ಶತಮಾನ.

*ಚೆನ್ನಕೇಶವ ದೇವಾಲಯ:* ಮೇದಕ (ಸೇಡಂ ತಾ.) ಗ್ರಾಮದ ಚೆನ್ನಕೇಶವ ದೇವಾಲಯ ಈ ಪ್ರದೇಶದಲ್ಲಿ ಒಂದು ಮೂಲೆಯಲ್ಲಿದೆ. ಈ ದೇವಾಲಯ ವಿಶಾಲವಾಗಿದ್ದು ಅದರ ತಳಪಾಯದಲ್ಲಿ ಗರ್ಭಗೃಹ, ಅರ್ಧ ಮಂಟಪ, ಮೂರು ಸಾಲಿನಲ್ಲಿ ಕಮಾನುವುಳ್ಳ ೧೮ ಸ್ಥಂಭ ಮಂಟಪವಿದ್ದು ಅದು ಪೂರ್ವಕ್ಕೆ ಮುಖಮಾಡಿದೆ. ಸುತ್ತಲೂ ಎತ್ತರದ ಪ್ರಾಕಾರ ಗೋಡೆಯಿದೆ. ವಿಶಾಲ ದ್ವಾರಕ್ಕೆ ಮೂರು ಉಪ್ಪರಿಗೆಗಳಿವೆ.

ಚೆನ್ನಕೇಶವನು (ವೆಂಕಟೇಶ) ಸಮಭಂಗದಲ್ಲಿದ್ದು ದ್ವಿಮೊಗ ನಾಲ್ಕು ಕೈಗಳಿವೆ. ಮೊದಲನೇ ಕೆಳಗಿನ ಕೈ ವರದ ಮುದ್ರೆಯಲ್ಲಿದೆ ಅದರಲ್ಲಿ ಕಮಲದ ಚಿಹ್ನೆಯಿದೆ. ಮೇಲಿನ ಕೈಗಳಲ್ಲಿ ಚಕ್ರ ಮತ್ತು ಶಂಖಗಳಿವೆ. ಕೆಳಗಿನ ಕೈಯನ್ನು ನಡುವಿಡಕ್ಕಿಟ್ಟು ನಿಂತಿದ್ದಾನೆ. ವಸ್ತ್ರಾಭರಣ ಭೂಷಿತನಾಗಿದ್ದಾನೆ. ಬದಿಗಳಲ್ಲಿ ಭೂದೇವಿ ಮತ್ತು ಶ್ರೀದೇವಿ ಯರಿದ್ದಾರೆ. ತ್ರಿಕೋನಾಕಾರದ ಪ್ರಭಾವಳಿಯ ಮಧ್ಯ ಕೀರ್ತಿಮುಖವಿದೆ ಪೀಠದಲ್ಲಿ ಗರುಡನಿರುವನು. ಪೀಠ ತ್ರಿಕೋನದಲ್ಲಿದೆ. ಕಾಲ ಸು. ಕ್ರಿ. ಶ. ೧೬ನೇ ಶತಮಾನ. ಈ ವಿಗ್ರಹದ ಮುಂದೆ ಒಂದು ಉತ್ಸವಮೂರ್ತಿ ತೊಟ್ಟಿಲಲ್ಲಿದೆ. ಪ್ರತಿವರ್ಷ ವೈವಿಧ್ಯಮಯ ಜಾತ್ರೆ, ಉತ್ಸವಗಳು ವಿಜೃಂಭಣೆಯಿಂದ ಸಾಗುತ್ತಿವೆ! ಈ ಸ್ವಾಮಿಯ ರಥೋತ್ಸವ ಆಗಿ ಮೂರು ದಿವಸಗಳ ನಂತರ ಸಮಕಾಲೀನ ಗೊಲ್ಲಭಾಮಿನಿಯರ ಗುಡಿಗಳ ಸುತ್ತ ಬಂಡಿಕಟ್ಟಿ ತಿರುಗುವ ಸಂಪ್ರದಾಯವಿದೆ. ಆ ಗುಡಿಗಳು ಈ ಗ್ರಾಮ ಪೂರ್ವಕ್ಕೆ ಸುಮಾರು ೧ ಕಿ. ಮಿ. ಅಂತರದಲ್ಲಿವೆ. ಒಂದರಲ್ಲಿ ಹಾಲಿನ ಮೊಗೆಯನ್ನು ಹೊತ್ತ ಗೊಲ್ಲಭಾಮಿನಿಯರು ಇನ್ನೊಂದರಲ್ಲಿ ಯಶೋದೆ ಗಡಿಗೆಯಲ್ಲಿ ಮಜ್ಜಿಗೆ ಕಡೆಯುವ ಶಿಲ್ಪಗಳಿವೆ .

ಒಂದರಲ್ಲಿ ಮೂವರು ಗೊಲ್ಲಭಾಮಿನಿಯರು (ಕೃಷ್ಣನ ಹೆಂಡಂದಿರು) ತಲೆಮೇಲೆ ಕೊಡಗಳನ್ನು ಹೊತ್ತು ನಿಂತಿದ್ದಾರೆ. ಯಶೋದೆಯು ಮಜ್ಜಿಗೆ ಕಡೆಯುವ ಕಡೆಗೋಲನ್ನು ಹಗ್ಗದಿಂದ ಎರಡು ಭಾಗದಲ್ಲಿ ಅಶ್ವತ್ಥ ಮರಕ್ಕೆ ಕಟ್ಟಲಾಗಿದೆ. ಮಡಿಕೆಯಲ್ಲಿ ಕಡಗೋಲನ್ನು ಇಡಲಾಗಿದೆ. ಆಕೆಯು ಎಡಗೈಯಿಂದ ಕಡಗೋಲನ್ನು ಮತ್ತು ಬಲಗೈಯಿಂದ ಕಡಗೋಲಿಗೆ ಕಟ್ಟಿದ ಹಗ್ಗವನ್ನು ಹಿಡಿದಿದ್ದಾಳೆ. ಕೆಳಗಡೆ ಗರುಡ (?) ಕುಳಿತಿದ್ದಾನೆ. ವಸ್ತ್ರಾಭರಣ ಭೂಷಿತರಾಗಿದ್ದಾರೆ. ಕಲಾತ್ಮಕವಾದ ಈ ಶಿಲ್ಪಗಳು ಸು. ಕ್ರಿ.ಶ. ೧೬ನೇ ಶತಮಾನದ್ದಾಗಿವೆ.

*ನಗರೇಶ್ವರ ದೇವಾಲಯ :* ಗುರುಮಠಕಲ್ (ಯಾದಗಿರಿ ತಾಲೂಕ) ಪಟ್ಟಣದಲ್ಲಿ ನಗರೇಶ್ವರ ದೇವಾಲಯ ಪ್ರಸಿದ್ಧವಾಗಿದೆ. ಅದಕ್ಕೆ ಗರ್ಭಗೃಹ, ಅಂತರಾಳ, ತೆರೆದ ನವರಂಗವಿದೆ. ಗರ್ಭಗೃಹದಲ್ಲಿರುವ ಶಿವ ಲಿಂಗಕ್ಕೆ ಬ್ರಹ್ಮಸೂತ್ರವಿದೆ. ಎತ್ತರವಾದ ಅಧಿಷ್ಠಾನ ಹೊಂದಿದೆ. ದಕ್ಷಿಣಕ್ಕೆ ಮುಖಮಾಡಿದೆ. ಸುತ್ತಲೂ ಎತ್ತರ ಪ್ರಾಕಾರ ಗೋಡೆಯಿದ್ದು ಪೂರ್ಣಗೋಡೆಗೆ ಹೊಂದಿ ಕೋದಂಡರಾಮ, ಪಾರ್ವತಿ ಮತ್ತು ಉತ್ತರಗೋಡೆಯಲ್ಲಿ ಸೂರ್ಯರ ಶಿಲ್ಪಗಳಿರುವ ಕೋಣೆ ಮತ್ತು ಗೂಡುಗಳಿವೆ. ದೇವಾಲಯದ ಹೊರಗಡೆ ಒಂದು ವಿಶಾಲ ಬಾವಿಯಿದೆ. ಈ ದೇವಾಲಯದ ಕಾಲ ಸು. ಕ್ರಿ. ಶ. ೩ನೇ ಶತಮಾನ.

*ಬಲಭೀಮಸ್ವಾಮಿ ದೇವಾಲಯ :* ಪೋತಂಪಲ್ಲಿ (ಸೇಡಂ ತಾ.) ಯ ಬಲಭೀಮಸ್ವಾಮಿ ದೇವಾಲಯ ಖ್ಯಾತಿಯನ್ನು ಹೊಂದಿದೆ. ಈ ದೇವಾಲಯಕ್ಕೆ ಗರ್ಭಗೃಹ, ವಿಶಾಲ ಸ್ತಂಭ ಮಂಟಪ, ವಿಶಾಲ ಪ್ರವೇಶ ದ್ವಾರ ಮತ್ತು ಪ್ರಾಕಾರವಿದೆ. ಗರ್ಭಗುಡಿಯಲ್ಲಿ ಬಲಭೀಮ ಸ್ವಾಮಿ ವಿಗ್ರಹವಿದೆ. ಮಾರುತಿಯ ಮತ್ತೊಂದು ಹೆಸರನ್ನು ಬಲ ಭೀಮ ಗದೆ ಎಂದು ಕರೆಯುವರು. ಎತ್ತರ ಅಧಿಷ್ಠಾನವಿದೆ. ಗರ್ಭಗೃಹಕ್ಕೆ ಗಾರೆ ಇಟ್ಟಿಗೆಯ ಎತ್ತರದ ಶಿಖರವಿದೆ, ಕಳಶವಿದೆ.

ಬಲಭೀಮಸ್ವಾಮಿಯ ಕೊರಳಲ್ಲಿ ಶಾಲಿಗ್ರಾಮಗಳ ಸರವನ್ನು ಧರಿಸಲಾಗಿದೆ. ಅದನ್ನು ಸ್ಥಳೀಕರು ಸಾಲಿಗ್ರಾಮ ನರಸಿಂಹನೆಂದು ಕರೆಯುವರು. ಈ ದೇವಾಲಯದ, ಶಿಲ್ಪಗಳ ಕಾಲ ಸು. ಕ್ರಿ. ಶ. ೧೬ನೇ ಶತಮಾನ.

*ಪಂಚಮುಖಿ ಮಾರುತಿ :* ಮುಧೋಳ (ಸೇಡಂ ತಾ.) ಗ್ರಾಮದಲ್ಲಿ ಪಂಚಮುಖವುಳ್ಳ ಮಾರುತಿಯ ವಿಗ್ರಹ ಮಾರುತಿ ಗುಡಿಯಲ್ಲಿದೆ. ಅದಕ್ಕೆ ಐದು ಮುಖಗಳಿವೆ ಹತ್ತು ಕೈಗಳು ಪ್ರಭಾಮಂಡಳ ಮಧ್ಯ ಕೀರ್ತಿ ಮುಖವಿದೆ. ಕಾಲ ಸು. ಕ್ರಿ.ಶ. ೧೬ನೇ ಶತಮಾನ.

*ಗೋಪಾಲಸ್ವಾಮಿ ಗುಡಿ :* ಮುಧೋಳ (ಸೇಡಂ ತಾ.)

ಗ್ರಾಮದಲ್ಲಿ ಪ್ರಸಿದ್ಧ ಗೋಪಾಲ ಸ್ವಾಮಿಯ ದೇವಸ್ಥಾನವಿದೆ. ಸ್ಥಳೀಕರು ಗೋಪಾಲಸ್ವಾಮಿಯು ಇಲ್ಲಿ ಒಡಮೂಡಿದ್ದಾನೆಂದು ಹೇಳುವರು. ಇಲ್ಲಿ ಈ ಸ್ವಾಮಿಯ ಜಾತ್ರೆ ಖ್ಯಾತಿಯನ್ನು ಪಡೆದಿದೆ. (ಈ ಭಾಗದಲ್ಲಿ ಯುರೇನಿಯಂ ದೊರೆಯುವುದೆಂದು ಸ್ಥಳೀಕರು ಹೇಳುತ್ತಾರೆ. ಈ ಸ್ಥಳದ ಹಿಂದೂ-ಮುಸ್ಲಿಂರ ಸಾಮರಸ್ಯ ಜೀವನ ಈ ಭಾಗದಲ್ಲಿ ಖ್ಯಾತಿಯನ್ನು ಪಡೆದಿದೆ).

ವಿಶಾಲವಾದ ಈ ಮಂದಿರದ ವಿಷ್ಣು ಮತ್ತು ರುಕ್ಮಿಣಿಯರ ವಿಗ್ರಹಗಳು ಮುಖ್ಯವೆನಿಸಿವೆ. ಈ ಮಂದಿರದಲ್ಲಿ ಅನೇಕ ಕಮಾನುಳ್ಳ ಸ್ತಂಭ ಮಂಟಪವಿದೆ. ಅದರಲ್ಲಿರುವ ವಿಷ್ಣುವು ಚತುರ್ಭುಜ; ಕೈಗಳಲ್ಲಿ ಅಭಯ, ಶಂಖ, ಚಕ್ರ ಮತ್ತು ಗದೆಗಳಿವೆ. ವಸ್ತ್ರಾಭರಣ ಭೂಷಿತನಾಗಿದ್ದಾನೆ. ಅದರ ಹೊರ ಗೋಡೆಯ ಮೇಲ್ಭಾಗದಲ್ಲಿ ದೇವಕೋಷ್ಠಗಳಿವೆ. ಆ ಗೂಡುಗಳಲ್ಲಿ ವಿಷ್ಣುವಿನ ದಶಾವತಾರ ವಿಗ್ರಹಗಳಿದ್ದು ಅವುಗಳನ್ನು ಗಾರೆ ಇಟ್ಟಂಗಿಯಿಂದ ನಿರ್ಮಿಸಲಾಗಿದೆ. ಈ ದೇವಾಲಯದ ಕಟ್ಟಡ ಸು. ಕ್ರಿ.ಶ. ೧೭ನೇ ಶತಮಾನದ್ದು.

ಈ ಕಾಲದ ಬೃಹತ್ ಕೋಟೆ ಈ ಸ್ಥಳದಲ್ಲಿದ್ದು ಆ ಕೋಟೆ ಒಳಗಡೆ, ಲಕ್ಷ್ಮಿದೇವ, ನರಸಪ್ಪ ದೇಗುಲಗಳು ಮತ್ತು ಮಸೀದಿಗಳಿವೆ.

***ಕಥಾನಕ ಕಂಬಗಳು*** : ಮಳಖೇಡ ಜೈನ ಬಸದಿಯ ಎದುರು ಮಂಟಪದ ಎರಡು ಸಾಲಿನ ಕಂಬಗಳಲ್ಲಿ ಕಥಾನಕ ದೃಶ್ಯಗಳು ಈಗಾಗಲೇ ಖ್ಯಾತಿ ಗೊಂಡಿವೆ. ಈ ಕಂಬಗಳಲ್ಲಿ ಹೆಚ್ಚು ವೈಷ್ಣವ ದೇವತೆಗಳ ದೃಶ್ಯಗಳಿರುವುದರಿಂದ ಈ ಕಂಬಗಳು ವೈಷ್ಣವ ದೇವಾಲಯಕ್ಕೆ ಸೇರಿದ್ದಾಗಿವೆಂದು ತರ್ಕಿಸಬಹುದು. ಈ ಕಂಬಗಳ ಕಾಂಡ ಭಾಗದ ಚೌಕಾದ ನಾಲ್ಕು ಮುಖಗಳ ಮೇಲೆ ಕಥಾನಕ ದೃಶ್ಯಗಳು ಹೀಗಿವೆ:

ಒಂದನೇ ಕಂಬದ ಮೊದಲನೇ ಮತ್ತು ಎರಡನೇ ಮುಖಗಳಲ್ಲಿ ರಾಮ ಮತ್ತು ಲಕ್ಷ್ಮಣರನ್ನು ತಲಾ ಒಂದರ ಎರಡು ಹಾರಗಳಲ್ಲಿರುವರು. ಮೂರನೇ ಮುಖದಲ್ಲಿ ಕಾಮ-ರತಿಯರನ್ನು, ಹಾರಗಳಲ್ಲಿ ತೋರಿಸಲಾಗಿದೆ. ಎರಡನೇ ಕಂಬದ ಮೊದಲನೇ ಮುಖದಲ್ಲಿ ನಾಲ್ಕು ಹೂ-ಬಳ್ಳಿಗಳ ಅಲಂಕಾರವಿದೆ. ಎರಡನೇ ಮುಖದಲ್ಲಿ ಶಿವನನ್ನೂ ಎರಡೂ ಹಾರಗಳ ಮಧ್ಯ ಚಿತ್ರಿಸಲಾಗಿದೆ. ನಾಲ್ಕನೇ ಮುಖದಲ್ಲಿ ಹೂಬಳ್ಳಿ ಅಲಂಕಾರವಿದೆ. ಮೂರನೇ ಕಂಬದಲ್ಲಿ ಮೊದಲನೇ ಮುಖದಲ್ಲಿ ಎರಡು ಜೋಡಿ ದಂಪತಿಗಳಿದ್ದಾರೆ. ಎರಡನೇ ಮುಖದಲ್ಲಿ ದೇವತೆಗಳಿಬ್ಬರ ನಡುವೆ ತ್ರಿವಿಕ್ರಮನಿರುವನು. ಮೂರನೇ ಮುಖದಲ್ಲಿ ಶ್ರೀನಿಧಿ ಮತ್ತು ಪದ್ಮನಿಧಿಯರು ಪೂರ್ಣಕುಂಭದ ಮೇಲೆ ಕುಳಿತಿದ್ದಾರೆ. ನಾಲ್ಕರಲ್ಲಿ ಗಜೇಂದ್ರ ಮೋಕ್ಷದ ದೃಶ್ಯವಿದೆ. ನಾಲ್ಕನೇ ಮೊದಲನೇ ಮುಖದಲ್ಲಿ ಶ್ರೀನಿಧಿ ಮತ್ತು ಪದ್ಮನಿಧಿಯರು ಪೂರ್ಣಕುಂಭದ ಮೇಲೆ ಕುಳಿತಿರುವರು. ಎರಡನೇ ಮುಖದಲ್ಲಿ ವಿಷ್ಣುವಿದ್ದು ಬದಿಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರಿದ್ದಾರೆ. ಈ ದೇವತೆಗಳು ಪೂರ್ಣಕುಂಭಗಳನ್ನು ಹಿಡಿದಿದ್ದಾರೆ. ಮೂರನೇ ಮುಖದಲ್ಲಿ ರಾವಣ ಮತ್ತು ನಾಲ್ಕನೇ ಮುಖದಲ್ಲಿ ನಟರಾಜನಿದ್ದಾನೆ. ಐದನೆ ಕಂಬದ ಮೊದಲನೇ ಮುಖದಲ್ಲಿ ಲಕ್ಷ್ಮಿಯಿದ್ದಾಳೆ. ಎರಡನೇ ಮುಖದಲ್ಲಿ ಒಬ್ಬ ವೀರ ಕತ್ತಿ ಹಿಡಿದಿದ್ದಾನೆ ಹಾಗೂ ಮನುಷ್ಯ ಪ್ರಾಣಿ ರೂಪದ ನಾಗ ಪೂರ್ಣ ಕಂಬದ ಮೇಲೆ ಕುಳಿತಿದ್ದಾನೆ. ಮೂರನೇ ಮುಖದಲ್ಲಿ ಗಜಮರ್ದನನಿದ್ದು ಬದಿಗಳಲ್ಲಿ ಗಣೇಶ ನಂದಿ ಮತ್ತು ದೇವ ಗಣರಿದ್ದಾರೆ. ನಾಲ್ಕನೇ ಮುಖದಲ್ಲಿ ಇಬ್ಬರು ಸೂರ್ಯರಿದ್ದಾರೆ. ಆರನೇ ಕಂಬದ ಮೊದಲನೇ ಮುಖದಲ್ಲಿ ಸೂರ್ಯ ಬದಿಗಳಲ್ಲಿ ಉಷಾ ಪ್ರತ್ಯುಷೆಯರು ಬಿಲ್ಲು ಹಿಡಿದು ನಿಂತಿದ್ದಾರೆ. ಎರಡನೇ ಮುಖದಲ್ಲಿ ಶ್ರೀನಿಧಿ-ಪದ್ಮನಿಧಿಯರು ಪೂರ್ಣಕುಂಬಗಳ ಮೇಲೆ ಕುಳಿತಿದ್ದಾರೆ. ಮೂರನೇ ಮುಖದಲ್ಲಿ ಇಬ್ಬರು ಯತಿಯರಿದ್ದು ಬದಿಗೆ ಕುದುರೆ ಸವಾರನಿದ್ದಾನೆ. ನಾಲ್ಕನೇ ಮುಖದಲ್ಲಿ ಎರಡು ಹೂಬಳ್ಳಿ ಅಲಂಕರಣವಿದೆ. ಏಳನೇ ಕಂಬದ ಮೊದಲನೇ ಮುಖದಲ್ಲಿ ನೃತ್ಯ ಮತ್ತು ವಾದ್ಯ ಮೇಳವಿದೆ. ಎರಡನೇ ಮುಖದಲ್ಲಿ ರಾವಣ ಕೈಲಾಸವನ್ನು ಅಲುಗಾಡಿಸುತ್ತಿರುವನು. ಕೈಲಾಸದಲ್ಲಿ ಶಿವ-ಪಾರ್ವತಿಯರು ಹಾಗೂ ದೇವಗಣಗಳು ಇದ್ದಾರೆ (ರಾವಣಾನುಗ್ರಹ - ೧) ಮೂರನೇ ಮುಖದಲ್ಲಿ ಹೂಬಳ್ಳಿ ಅಲಂಕರಣವಿದೆ. ನಾಲ್ಕನೇ ಮುಖದಲ್ಲಿ ಗದೆ, ಚಕ್ರ, ಶಂಖ ಮತ್ತು ಅಭಯ ಹಸ್ತವುಳ್ಳ ವಿಷ್ಣುವಿದ್ದು ಬದಿಗೆ ಸೂರ್ಯ ಕೆಳಗಡೆ ಗರುಡನಿದ್ದಾನೆ. ಎರಡನೇ ಕಂಬದ ಮೊದಲನೇ ಮುಖದಲ್ಲಿ ಕಾಮ-ರತಿಯರಿದ್ದಾರೆ. ಎರಡನೇ ಮುಖದಲ್ಲಿ ಗಜಲಕ್ಷ್ಮಿ ಬದಿಗಳಲ್ಲಿ ಹಾರಹಿಡಿದು ಹಾರುತ್ತಿರುವ ಯಕ್ಷರಿದ್ದಾರೆ. ಮೂರನೇ ಮುಖದಲ್ಲಿ ಶಿವ-ಪಾರ್ವತಿಯರಿದ್ದಾರೆ. ಶಿವನು ಅಭಯ, ತ್ರಿಶೂಲ, ಡಮರುಗಳನ್ನು ಹಿಡಿದಿದ್ದಾನೆ. ನಾಲ್ಕನೇ ಮುಖದಲ್ಲಿ ಕುಳಿತ ಗಣೇಶನಿದ್ದಾನೆ. ದಂತ, ಪರಶು, ಕಮಲ, ಫಲ ಹಿಡಿದಿದ್ದಾನೆ.

ಅಲ್ಲಿಯ ಮಾರುತಿ ಗುಡಿಯ ಒಂದು ಕಂಬದ ಮೊದಲನೇ ಮುಖದಲ್ಲಿ ಎರಡು ಗರುಡರನ್ನೂ ಮತ್ತು ಉಳಿದ ಮುಖದಲ್ಲಿ ಹೂಬಳ್ಳಿ ಹಾರಗಳ ಅಲಂಕರಣವಿದೆ. ಇನ್ನೊಂದು ಕಂಬದ ಮೊದಲನೇ ಮುಖದಲ್ಲಿ ಉಗ್ರನರಸಿಂಹ, ಬದಿಗಳಲ್ಲಿ ಸೇವಕಿಯರು ಚೌರಿ ಬೀಸುತ್ತಿರುವುದು ಹಾಗೂ ಭಕ್ತರಿದ್ದಾರೆ.

### ವೈಷ್ಣವ ಶಿಲ್ಪಗಳು

***ಕೋದಂಡರಾಮ*** : ಗುರುಮಠಕಲ್ಲಿನ ನಗರೇಶ್ವರ ದೇವಾಲಯ ಸಂಕಿರಣದಲ್ಲಿ ಕೋದಂಡರಾಮ (೬ಅಡಿ ಎತ್ತರ) ಶಿಲ್ಪವಿದೆ. ಅದನ್ನು ಅಡ್ಡವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಮೇಲಿನ ಭಾಗದಲ್ಲಿ ರಾಮ, ಸೀತಾ ಹನುಮನ ಮೇಲೆ ಆಸೀನರಾಗಿದ್ದಾರೆ. ಎಡಬದಿಗೆ ಸೇವಕ, ಲಕ್ಷ್ಮಣ, ಬಲಗಡೆಗೆ

ಸೇವಕ ನಿಂತಿದ್ದಾನೆ. ಕೆಳಗಿನ ಭಾಗದಲ್ಲಿ ಎಡಗಡೆ ನಳ ಕೈಮುಗಿದು ನೀಲ ಸಂಗಡ ನಿಂತಿದ್ದಾರೆ. ಬಲಕ್ಕೆ ಜಾಂಬವಂತ ಮತ್ತು ಸುಗ್ರೀವ ಕೈಮುಗಿದು ನಿಂತಿದ್ದಾರೆ. ಮಧ್ಯ ರಾಮಸೀತೆಯರನ್ನು ಹೊತ್ತ ಹನುಮನಿರುವನು. ರಾಮ-ಸೀತೆ ಅಭಯಹಸ್ತ ಹಿಡಿದಿದ್ದಾರೆ. ಲಕ್ಷ್ಮಣನು ಬಿಲ್ಲು, ಬಾಣ ಹಿಡಿದುಕೊಂಡಿದ್ದಾನೆ. ಎಲ್ಲರೂ ವಾಸ್ತ್ರಾಭರಣಧಾರಿಗಳಾಗಿದ್ದಾರೆ (ಚಿತ್ರ ನಂ. ೮). ಈ ಶಿಲ್ಪದ ಕಾಲ ಸು. ಕ್ರಿ.ಶ. ೧೫ನೇ ಶತಮಾನ. ಈ ಕಾಲದ ಶಿಲ್ಪಗಳು ಈ ಭಾಗದಲ್ಲಿ ಅಪರೂಪವಾಗಿ ಕಾಣಿಸುತ್ತಿರುವುದು ಗಮನೀಯ.

*ಸೂರ್ಯ :* ಸೂರ್ಯನ ಶಿಲ್ಪಗಳು ನಿಡಗುಂದಿ, ಗುರುಮಠಕಲ್ ಇನ್ನಿತರ ಕಡೆಗಳಲ್ಲಿವೆ. ನಿಡಗುಂದಿಯ ಮಾರುತಿ ಮಂದಿರ ಎದುರಿಗಿನ ಸೂರ್ಯ ಪೀಠದ ಎರಡು ಬದಿಗಳಲ್ಲಿ ರಥದ ಗಾಲಿಗಳನ್ನು ಮುಂದೆ ಅರುಣ ಅಶ್ವಗಳನ್ನು ನಡೆಸುವುದರನ್ನು ಚಿತ್ರಿಸಲಾಗಿದೆ. ಇದು ವಿಶೇಷವಾಗಿದೆ. ಕಾಲ ಸು. ಕ್ರಿ.ಶ. ೧೧ನೇ ಶತಮಾನ. ಆದರ ಗುರುಮಠಕಲ್ಲಿನ ನಗರೇಶ್ವರ ಗುಡಿ ಸಂಕಿರಣದ ಸೂರ್ಯವಿಗ್ರಹದಲ್ಲಿ ಪೀಠದ ಬದಿಗಳಲ್ಲಿ ಚಿತ್ರಗಳಿವೆ. ಅರುಣ ಏಳು ಅಶ್ವಗಳನ್ನು ನಡೆಸುತ್ತಿರುವನು. ಈ ಪೀಠಕ್ಕೆ ಎತ್ತರದ ಕಮಲ ಪುಷ್ಪದ ಪೀಠವಿದ್ದು ಅದರ ಮೇಲೆ ಸೂರ್ಯ ಕಮಲಗಳನ್ನಿಡಿದು ನಿಂತಿದ್ದಾನೆ. ಈ ಭಾಗ ವೃತ್ತಾಕಾರವಾಗಿದೆ. ಮೇಲಿನ ಬಲಗೈ ಚಕ್ರ ಮತ್ತು ಎಡಗೈಯಲ್ಲಿ ಶಂಖ ಹಿಡಿದಿದ್ದಾನೆ. ಇದು ಗಮನೀಯ. ಕೆಳಗಿನ ಕೈಗಳಲ್ಲಿ ಕಮಲಗಳಿವೆ. ವಸ್ತ್ರಾಭರಣ ಗಳನ್ನು ಧರಿಸಿದ್ದು ಕಿವಿಗಳಲ್ಲಿ ಮಕರ ಮತ್ತು ಸಿಂಹಕುಂಡಲಗಳಿವೆ. ಕಾಲ ಸು. ಕ್ರಿ.ಶ. ೧೫ನೇ ಶತಮಾನ. ಈ ಕಾಲದ ಈ ರೀತಿಯ ಶಿಲ್ಪವೊಂದು ರಾಯಚೂರು ಜಿಲ್ಲೆಯ ಕನಕಗಿರಿಯಲ್ಲಿದೆ.

*ಅನಂತಶಯನ :* ನಿಡಗುಂದಿಯ ಸೂರ್ಯನಾರಾಯಣ ದೇವಾಲಯ ಬದಿಗೆ ಅನಂತಶಯನ ಶಿಲ್ಪದಲ್ಲಿ ವಿಷ್ಣು ಸರ್ಪದ ಹಾಸಿಗೆ ಮೇಲೆ ಮಲಗಿದ್ದಾನೆ. ಬಲಗೈಯನ್ನು ತಲೆಗೆ ಹಾನಿಸಿಯಿಟ್ಟಿದ್ದಾನೆ. ದೇವತೆಯರು ಸೇವೆಸಲ್ಲಿಸುತ್ತಿರುವರು. ಕಿರೀಟದ ಸುತ್ತ ಸಾಗ ಸರ್ಪದ ಐದು ಹೆಡೆಗಳಿವೆ. ಉಳಿದ ವಿವರಗಳು ಸಾಮಾನ್ಯ. ಕಾಲ ಸು. ಕ್ರಿ.ಶ. ೧೧ನೇ ಶತಮಾನ

*ಸಮುದ್ರಮಥನ:* ಈ ಮಥನದ ಶಿಲ್ಪದಲ್ಲಿ ಮಧ್ಯಭಾಗದಲ್ಲಿ ವಿಷ್ಣು ಪ್ರತ್ಯಕ್ಷನಾಗಿದ್ದನ್ನು ಐವೂರ ಶಿಲ್ಪದಲ್ಲಿ ಚಿತ್ರಿಸಲಾಗಿದೆ. ಆದರೆ ಶಿರಿವಾಳದ ಶಿದ್ಧಲಿಂಗೇಶ್ವರ ದೇವಾಲಯದ ಸ್ತಂಭದಲ್ಲಿ ಸಮುದ್ರವನ್ನು ಕಿರುನುಗಿ (ಗಡಿಗೆ) ಮಾಡಿ ಅದಕ್ಕೆಲ್ಲ ಕಡಗವಿಟ್ಟು ಅದಕ್ಕೆ ಸುತ್ತಿದ ಸರ್ಪವನ್ನು ಶ್ರೀ ಎರಡೂಕಡೆ ಎಳೆಯುತ್ತಿರುವರು. ಕಡಗದ ಮೇಲೆ ವಿಷ್ಣುವನ್ನು ಚಿತ್ರಿಸಲಾಗಿದೆ. ಈ ಚಿತ್ರದ ವೈವಿಧ್ಯತೆ ಗಮನೀಯ.

### ಜೈನ ಬಸದಿಗಳು

ಈ ಜಿಲ್ಲೆಯಲ್ಲಿ ಅನೇಕ ಜೈನ ಬಸದಿಗಳು ಸೇಡಂ, ಮಳಖೇಡ, ಜೇವರ್ಗಿ, ಚಿತಾಪುರ, ಕಾಳ್ಗಿ, ದಂಡಾಪುರ ಇನ್ನಿತರ ಸ್ಥಳಗಳಲ್ಲಿವೆ. ತ್ರಿಕೂಟ ಮಾದರಿಯ ಬಸದಿಗಳು, ದಂಡಾಪುರ, ಕಾಳ್ಗಿ ಇತ್ಯಾದಿ ಕಡೆಗಳಲ್ಲಿವೆ. (ಚಿತಾಪುರ ತಾ.) ಈ ಬಸದಿಗಳಿಗೆ ಸಾಮಾನ್ಯವಾಗಿ ಮೂರು ಗರ್ಭಗೃಹಗಳು, ಮೂರು ಅರ್ಧ ಮಂಟಪಗಳು, ಒಂದು ನವರಂಗ ಮತ್ತು ಒಂದು ಮುಖಮಂಟಪ ಗಳಿವೆ. ಕಾಳ್ಗಿ, ಸೇಡಂ, ಜೇವರ್ಗಿ ಇನ್ನಿತರ ಸ್ಥಳಗಳ ಬಸದಿಗಳು ಉತ್ತರಕ್ಕೆ ಮುಖಮಾಡಿವೆ.

ದಂಡಾಪುರ ಬಸದಿ ಪೂರ್ವಕ್ಕೆ ಮುಖ ಮಾಡಿದೆ. ದಂಡಾಪುರ ಬಸದಿಯ ಒಂದು ಗರ್ಭಗೃಹದಲ್ಲಿ ಮಹಾವೀರನ ವಿಗ್ರಹ ಉಳಿದಿದೆ. ಉಳಿದ ಗರ್ಭಗೃಹದಲ್ಲಿ ಯಾವ ಶಿಲ್ಪ ಉಳಿದಿಲ್ಲ. ಒಂದು ಗರ್ಭಗೃಹ ಶಿಥಿಲಾವಸ್ಥೆಯಲ್ಲಿದೆ. ಒಂದರ ಗರ್ಭಗೃಹ ದ್ವಾರಪಟ್ಟಿಯಲ್ಲಿ ಮೂರು ಶಾಖೆಗಳಿದ್ದು ಅದರಲ್ಲಿ ಎರಡು ಸರಳಪಟ್ಟಿ ಮಧ್ಯ ಅರ್ಧಗಂಬಗಳಿವೆ. ಕೆಳಗಡೆ ಪೂರ್ಣ ಕಂಬಗಳಿವೆ. ಲಲಾಟದಲ್ಲಿ ಜಿನಬಿಂಬವಿದೆ. ಉತ್ತರಾಂಗದಲ್ಲಿ ಮೂರು ಶಿಖರ ಮಾದರಿಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳು, ಭತ್ತಿನಲ್ಲಿ ಕಮಲ ಅಲಂಕರಣವಿದೆ. ಸರಳ ಭಿತ್ತಿಯಿದೆ. ಕಾಲ ಸು. ಕ್ರಿ.ಶ. ೧೧ನೇ ಶತಮಾನ. ಕಾಳ್ಗಿಯ ತ್ರಿಕೂಟ ಬಸದಿಯಲ್ಲಿ ಎರಡು ಗರ್ಭಗೃಹಗಳು ಶಿಥಿಲಾವಸ್ಥೆಯಲ್ಲಿವೆ. ಮಧ್ಯ ಗರ್ಭಗೃಹದಲ್ಲಿ ತೀರ್ಥಂಕರನ ಶಿಲ್ಪವಿದೆ. ಉಳಿದ ಭಾಗ ದಂಡಾಪುರ ಬಸದಿಯಂತಿದೆ.

ಏಕಕೂಟ ಬಸದಿಗಳು ಸೇಡಂ, ಮಳಖೇಡ, ಚಿತಾಪುರ, ಜೇವರ್ಗಿ ಇನ್ನಿತರ ಸ್ಥಳಗಳಲ್ಲಿವೆ. ಒಂದು ಗರ್ಭಗೃಹವುಳ್ಳ ಈ ಬಸದಿಗಳಿಗೆ ಒಂದು ಅಂತರಾಳ, ಒಂದು ನವರಂಗ ಮತ್ತು ಒಂದು ಮುಖಮಂಟಪವಿದೆ. ಚಿತಾಪುರ ಬಸದಿಯ ಗರ್ಭಗೃಹದಲ್ಲಿ ಪಾರ್ಶ್ವನಾಥ, ನವರಂಗ ಗೋಡೆಯ ಗೂಡುಗಳಲ್ಲಿ ಯಕ್ಷಿ ಸರಸ್ವತಿಯ ವಿಗ್ರಹವಿದೆ. ಕಮಲ, ಪಾಶ, ಅಂಕುಶ, ಫಲ ಹಿಡಿದಿದ್ದಾಳೆ. ಅಲ್ಲಿಯ ಇನ್ನೊಂದರಲ್ಲಿ ಸರಸ್ವತಿಯ ಕೈಗಳಲ್ಲಿ ಕಮಲ, ಜಪಮಾಲ, ಅಂಕುಶ ಮತ್ತು ಪುಸ್ತಕಗಳಿವೆ. ಈ ಎರಡರ ಕಿರೀಟ ಮುಕುಟದಲ್ಲಿ ಜಿನಬಿಂಬಗಳಿವೆ. ಬದಿಗಳಲ್ಲಿ ಸೇವಕಿ ಯರಿದ್ದಾರೆ. ಮಕರ ತೋರಣವಿದೆ. ಅಲ್ಲಿ ಎರಡು ತೀರ್ಥಂಕರರ ಶಿಲ್ಪಗಳಿವೆ. ಜೇವರ್ಗಿ ಬಸದಿಯಲ್ಲಿ ತೀರ್ಥಂಕರ (೫), ಚೌವಿಸ್ ತೀರ್ಥಂಕರ, ಯಕ್ಷಿ, ಸರಸ್ವತಿ, ಪದ್ಮಾವತಿ, ಪಾರ್ಶ್ವನಾಥ ಇತ್ಯಾದಿ ಶಿಲ್ಪಗಳಿವೆ. ಅದಕ್ಕೆ ಗರ್ಭಗೃಹ, ಸಭಾ ಮಂಟಪವಿದೆ. ಮೂಲ ತಳಪಾಯ ಪರಿವರ್ತನೆಯಾಗಿದೆ.

ಮಳಖೇಡದ ಜೈನಬಸದಿ ಪೂರ್ವಕ್ಕೆ ಮುಖ ಮಾಡಿದ್ದು ಅದನ್ನು ಅಲ್ಲಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಈ ಬಸದಿಯ

ಎದುರಿನ ಮಂಟಪದ ಕಂಬಗಳು ಶೈವ ದೇವಾಲಯಕ್ಕೆ ಸೇರಿವೆ. ಅದರಲ್ಲಿ ರಾಮಾಯಣ ಇತ್ಯಾದಿ ಕಥಾನಕ ಚಿತ್ರಗಳಿವೆ. ಈ ಬಸದಿಯ ತಳಪಾಯದಲ್ಲಿ ಗರ್ಭಗೃಹ, ನವರಂಗ ಮತ್ತು ಮುಖಮಂಟಪಗಳಿವೆ. ಗರ್ಭಗೃಹದಲ್ಲಿ ಚೌವೀಸ್ ತೀರ್ಥಂಕರ ಮೂರು ಪಾರ್ಶ್ವನಾಥರ ಶಿಲ್ಪಗಳಿವೆ. ಅದರ ದ್ವಾರಪಟ್ಟಿಯಲ್ಲಿ ನಾಲ್ಕು ಶಾಖೆಗಳಿದ್ದು ಅದರಲ್ಲಿ ಲತಾ ಸುರುಳಿ, ಅರ್ಧಗಂಬ, ಸಿಂಹಗಳ ಸಾಲು, ಪತ್ರಗಳಿವೆ. ಶೈವ ದ್ವಾರಪಾಲಕರು ಕೈಗಳಲ್ಲಿ ಗಧ, ತ್ರಿಶೂಲ, ನಾಗ ಮತ್ತು ತೊಡೆಗೆ ಕೈಯಿಟ್ಟಿರುವರು. ಬದಿಗಳಲ್ಲಿ ಸೇವಕರಿದ್ದಾರೆ. ಲಲಾಟದಲ್ಲಿ ಜಿನನಿರುವನು. ಒಳಗಡೆ ಐದು ಕಂಚಿನ ಚತುಷ್ಕೂಟಗಳಿವೆ. ಅವುಗಳಲ್ಲಿ ಜಿನಯಕ್ಷ, ಯಕ್ಷಿಯ ರಿದ್ದಾರೆ. ಒಂದರಲ್ಲಿ ನಾಲ್ಕು ತಳವುಳ್ಳ ಕಂಚಿನ ಉಪಕರಣವಿದೆ. ಹೀಗೆ ಒಟ್ಟು ಒಂಬತ್ತು ಶಿಲ್ಪಗಳಿವೆ. ನವರಂಗ ಮುಂದಿನ ಭಾಗ ಮುಖಮಂಟಪವಾಗಿದೆ. ಅದರ ಎದುರಿನ ಸ್ಥಂಭ ಮಂಟಪದಲ್ಲಿ ವಿವಿಧ ಕಾಲದ ಹದಿಮೂರು ಪಾರ್ಶ್ವನಾಥ, ಒಂದು ಚೌವೀಸ್ ತೀರ್ಥಂಕರ, ಒಂದು ಧರಣೇಂದ್ರ, ಯಕ್ಷ, ಅಂಬಿಕ, ಸರಸ್ವತಿ, ಚತುಷ್ಕೂಟ ಯಕ್ಷ, ನಿಧಿ ಶಿಲ್ಪಗಳಿವೆ.

ಕುರುಕುಂಟ (ಸೇಡಂ ತಾ.) ಗ್ರಾಮದ ದಕ್ಷಿಣಕ್ಕೆ ಒಂದು ಶಿಥಿಲಾವಸ್ಥೆಯಲ್ಲಿರುವ ಜೈನ ಬಸದಿ ಮಹತ್ವವೆನಿಸಿದೆ. ಅದನ್ನು ದೇಗುಲವೆಂದು ಕರೆಯುವರು. ಅದರ ಗರ್ಭಗೃಹ ಅರ್ಧಮಂಟಪ ಮತ್ತು ತೆರೆದ ನವರಂಗ ಮಾತ್ರ ಉಳಿದಿವೆ. ಗೋಡೆ ಭಾಗಗಳು ಬಿದ್ದುಹೋಗಿವೆ. ಅಲ್ಲಲ್ಲಿ ಈ ಬಸದಿಯ ಅಧಿಷ್ಠಾನ ಭಾಗ ಹೊರಬಂದಿದೆ. ಗರ್ಭಗೃಹದ ಮಧ್ಯದ ಪೀಠದ ಮುಖದಲ್ಲಿ ಎರಡು ಸಿಂಹಗಳ ಮಧ್ಯ ಒಂದು ಸಿಂಹದ ಚಿತ್ರವಿದೆ. ಗರ್ಭಗೃಹದ್ವಾರ ಚೌಕಟ್ಟಿನಲ್ಲಿ ಮೂರು ಶಾಖೆಗಳಿದ್ದು ಅವುಗಳು ಲತಾಸುರುಳಿ ಅರ್ಧಗಂಬ ಮತ್ತು ನಾಲ್ಕು ಸಿಂಹಗಳ ಸಾಲಿದೆ. ದ್ವಾರಪಾಲಕರ ಚಿತ್ರಗಳಲ್ಲಿ ಲಲಾಟದಲ್ಲಿ ಗಜಲಕ್ಷ್ಮಿಯಿರುವಳು. ಕಕ್ಷಾಸನದ ಫಲಕಗಳು ಅಲ್ಲಲ್ಲಿದ್ದು ಅವುಗಳ ಹಿಂದೆ ಹಂಸಪಕ್ಷಿಗಳಿವೆ. ಈ ಪಕ್ಷಿ ಸಾಲಿನ ಕೆಳಗಡೆ ಆನೆಗಳಿವೆ. ನವರಂಗದಲ್ಲಿ ಉಳಿದಿರುವ ನಾಲ್ಕು ಕಂಬಗಳ ಚೌಕ ಪಟ್ಟಿಗಳಲ್ಲಿ ಜೈನಧರ್ಮದ ಚಿತ್ರಗಳೆ (?) ಅಪರೂಪವೆನಿಸಿದೆ.

ಒಂದನೇ ಕಂಬದ ಮೊದಲನೆಯ ಮುಖದಲ್ಲಿ ಎರಡು ಇಳಿಬಿಟ್ಟ ಹಾರಗಳಲ್ಲಿ ಪಾರ್ಶ್ವನಾಥರ ಚಿತ್ರಗಳಿವೆ. ಎರಡನೇ ಮುಖದಲ್ಲಿ ತಲಾ ಒಂದರ ಹಾರದಲ್ಲಿ ಪ್ರಾಣಿ-ಮನುಷ್ಯ ರೂಪದ ನಾಗ-ನಾಗಿಣಿಯರನ್ನು ತೋರಿಸಲಾಗಿದೆ. ಮೂರನೇ ಮುಖದಲ್ಲಿ ತಲಾ ಒಂದರ ಹಾರದಲ್ಲಿ ಲತಾ, ಬಳ್ಳಿಯ ಚಿತ್ರಗಳಿವೆ. ನಾಲ್ಕು ಮುಖದಲ್ಲಿ ತಲಾ ಒಂದರ ಇಳಿಬಿಟ್ಟ ಹಾರದಲ್ಲಿ ಕೀರ್ತಿ ಮುಖಗಳ ಚಿತ್ರಗಳಿವೆ.

ಎರಡನೇ ಕಂಬದ ಮೊದಲನೇ ಮುಖದಲ್ಲಿ ತಲಾ ಒಂದರ ಹಾರದಲ್ಲಿ ಎರಡು ಸಿಂಹಗಳಿವೆ. ಎರಡನೇ ಮುಖದಲ್ಲಿ ನಿಂತ ಭಂಗಿಯ ಮೂವರು ಪಾರ್ಶ್ವನಾಥರರಿದ್ದಾರೆ. ತಲಾ ಒಬ್ಬರನ್ನು ತಲಾ ಒಂದರ ಇಳಿಬಿಟ್ಟ ಹಾರದ ಮಧ್ಯ ಚಿತ್ರಿಸಲಾಗಿದೆ. ಮೂರನೇ ಮುಖದಲ್ಲಿ ತಲಾ ಒಂದರ ಹಾರದಲ್ಲಿ ಪಾರ್ಶ್ವನಾಥ ಮತ್ತು ಒಬ್ಬ ಸ್ತ್ರೀ ಬದಿಗೆ ಸೇವಕಿಯಿದ್ದಾಳೆ, ನಾಲ್ಕನೇ ಮುಖದಲ್ಲಿ ತಲಾ ಒಂದರ ಎರಡು ಹಾರದಲ್ಲಿ ಯಕ್ಷ ಮತ್ತು ಯಕ್ಷಿಣಿಯರಿದ್ದಾಳೆ,

ಮೂರನೇ ಕಂಬದ ಮೊದಲನೇ ಮುಖದಲ್ಲಿ ಪಾರ್ಶ್ವನಾಡ ಮತ್ತು ಜಾಲಾಮಾಲಿನಿ (?) ಯಕ್ಷಿ ತಲಾ ಒಬ್ಬರನ್ನು ತಲಾ ಒಂದರ ಹಾರದಲ್ಲಿ ತೋರಿಸಲಾಗಿದೆ. ಎರಡನೇ ಮುಖದಲ್ಲಿ ಕೀರ್ತಿಮುಖಗಳು ಹಾರಗಳಲ್ಲಿವೆ. ಮೂರನೇ ಮುಖದಲ್ಲಿ ಯಕ್ಷಿ ಅಂಬಿಕೆ ಮಗುವನ್ನು ಹಿಡಿದು ಕುಳಿತಿದ್ದಾಳೆ ಮತ್ತು ಯಕ್ಷನಿದ್ದಾನೆ. ಈ ಇಬ್ಬರು ಎರಡು ಹಾರಗಳ ಮಧ್ಯ ತೋರಿಸಲಾಗಿದೆ. ನಾಲ್ಕನೇ ಮುಖದಲ್ಲಿ ಕೀರ್ತಿ ಮುಖಗಳನ್ನು ಇಳಿಬಿಟ್ಟ ಎರಡು ಹಾರಗಳಲ್ಲಿವೆ. ನಾಲ್ಕನೇ ಕಂಬದ ಮೊದಲನೇ ಮುಖದಲ್ಲಿ ಇಳಿಬಿಟ್ಟ ಹಾರಗಳಲ್ಲಿ ಕೀರ್ತಿ ಮುಖಗಳಿವೆ. ಎರಡನೇ ಮುಖದಲ್ಲಿ ಇಳಿಬಿಟ್ಟ ಹಾರಗಳಲ್ಲಿ ಪಾರ್ಶ್ವನಾಥರ ಚಿತ್ರಗಳಿವೆ. ಮೂರನೇ ಮುಖದ ಎರಡು ಹಾರಗಳಲ್ಲಿ ಕೀರ್ತಿ ಮುಖಗಳಿವೆ. ನಾಲ್ಕನೇ ಮುಖದಲ್ಲಿ ಇಬ್ಬರು ಯಕ್ಷಿಯರಿದ್ದಾರೆ. ಒಬ್ಬರಿಗೆ ಅಶ್ವಮುಖವಿದೆ.

*ಬಸದಿ ಅವಶೇಷಗಳು :* ಜೇವರ್ಗಿ ಗ್ರಾಮದ ಶಣ್ಮುಖಸ್ವಾಮಿ ಮಠದ ಎದುರುಗಿನ ಮಾರುತಿ ಮಂದಿರದಲ್ಲಿ ಪ್ರಾಚೀನ ಬಸದಿಯ ಅವಶೇಷಗಳನ್ನು ಬಳಸಲಾಗಿದೆ. ಈ ಗುಡಿಯ ಸಭಾಮಂಟಪದಲ್ಲಿ ಆರು ಶಿಲಾಸ್ತಂಭಗಳು, ಲಲಾಟಪಟ್ಟಿ ಮತ್ತು ದ್ವಾರಪಟ್ಟಿಗಳಿವೆ. ಆ ಸ್ತಂಭಗಳಲ್ಲಿ ಎರಡು ಸ್ತಂಭಗಳು ಮಹತ್ವಪೂರ್ಣವೆನಿಸಿವೆ. ಈ ಕಂಬಗಳ ಬುಡಭಾಗದಲ್ಲಿ ದುಂಡಾಕೃತಿಯಲ್ಲಿ ಕುಳಿತ ಸಿಂಹಗಳಿವೆ. ಸಿಂಹಗಳು ತಮ್ಮ ಮುಂದಿನ ಕಾಲುಗಳನ್ನು ಮೇಲಕ್ಕೆತ್ತಿ ಕುಬ್ಜರ ಮೇಲಿಟ್ಟು ಕುಳಿತಿವೆ. ಒಂದು ಕಬ್ಬ ಕಂಬದಲ್ಲಿ, ಒಬ್ಬ ಇನ್ನೊಂದು ಕಂಬದಲ್ಲಿ ಇಬ್ಬರು ಕುಬ್ಜರಿದ್ದಾರೆ. ಸಿಂಹಗಳ ದೇಹಾಂಗ ಕಲಾತ್ಮಕವಾಗಿವೆ. ತಲೆಯ ಮೇಲ್ಭಾಗ ದುಂಡಾಕೃತಿಯ ನಾಲ್ಕು ಮೈಗಳಲ್ಲಿ ಕೀರ್ತಿಮುಖವುಳ್ಳ ಚೈತ್ಯಾಕಾರಗಳಿವೆ. ಅದರ ಮೇಲೆ ಚೌಕಾಕಾರದ ದಿಂಬಿನಂತಹ ಕಳಸವಿದೆ. ಅದರ ಮೇಲೆ ಬೋದುಗೆಯಿದೆ. ಈ ಸಿಂಹಕಂಬಗಳಿಗೆ ಮಕರ ತೋರಣ ಪಟ್ಟಿಯಿದೆ. ಲಲಾಟದ ಮಧ್ಯ ಜಿನನಿದ್ದಾನೆ. ತಲಾ ಒಂದು ಕಡೆ ಮೂವರ ವಾದ್ಯ ಮೇಳವಿದೆ. ಈ ಅವಶೇಷಗಳು ಕ್ರಿ.ಶ. ೧೧ನೇ ಶತಮಾನದ ಜೈನ ಬಸದಿಗೆ ಸೇರಿದ್ದವಾಗಿವೆ.

ಸಿಂಹವುಳ್ಳ ಕಂಬಗಳು ಈ ಪ್ರದೇಶದ ಶಿರಿವಾಳ ಭೀಮ ರಾಯನ ಗುಡಿ ಇಂಗಳಗಿಗಳಲ್ಲಿ ಬೆಳಕಿಗೆ ಬಂದಿವೆ. ಅವುಗಳಲ್ಲಿ ಕುಬ್ಜರ ಚಿತ್ರಗಳಿಲ್ಲ. ಈ ಹಿನ್ನೆಲೆಯಲ್ಲಿ ಸ್ಥಳೀಯ ಸಿಂಹ ಕಂಬಗಳು ಕರ್ನಾಟಕದಲ್ಲೇ ವಿರಳವೆಂದು ತರ್ಕಿಸಬಹುದು ಹಾಗೂ ಈ

ಮಾದರಿಯ ಅವಶೇಷಗಳು ಹೆಚ್ಚಾಗಿ ಶಿರಿವಾಳದಲ್ಲಿರುವುದರಿಂದ ಅಲ್ಲಿಂದ ಜೇವರ್ಗಿ ಗ್ರಾಮಕ್ಕೆ ಸ್ಥಳಾಂತರಗೊಂಡಿರಬೇಕು! ಸಿಂಹಕಂಬ ಲಕ್ಷಣಗಳು ಪಲ್ಲವರ ವಾಸ್ತುವಿನ ಒಂದು ಲಕ್ಷಣ ವೆಂಬುದನ್ನು ಸ್ಮರಿಸಬಹುದು.

*ಜೈನ ಶಿಲ್ಪಗಳು :* ಜೈನ ಧರ್ಮದ ವೈವಿಧ್ಯಮಯ ಶಿಲ್ಪಗಳು ಜೇವರ್ಗಿ, ಕೊಡ್ಲ, ಮಳಖೇಡ, ಸೇಡಂ, ಚಿತಾಪುರ, ಕಾಳ್ಗಿ, ಅಡಕಿ ಇತ್ಯಾದಿ ಸ್ಥಳಗಳಲ್ಲಿದ್ದು ಅವುಗಳಲ್ಲಿ ಮಳಖೇಡದ ಜೈನ ಬಸದಿಯಲ್ಲಿರುವ ವಿಗ್ರಹಗಳನು ವೈವಿಧ್ಯಮಯವಾಗಿದೆ. ಆ ಶಿಲ್ಪಗಳನ್ನು ಈ ಮೇಲೆ ತಿಳಿಸಲಾಗಿದೆ. ಈ ಶಿಲ್ಪಗಳ ಕಾಲ ಸು. ಕ್ರಿ.ಶ. ೧೦ರಿಂದ ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿವೆ.

ಮಳಖೇಡದ ಜೈನ ಬಸದಿಯ ಒಂದು ಚೌವೀಸ್ ತೀರ್ಥಂಕರ ವಿಗ್ರಹದಲ್ಲಿ ಅದರ ನಿರ್ಮಾಣಕ್ಕೆ ಪ್ರಾಯಶಃ ಕಾರಣೀ ಭೂತ ಭಕ್ತರ ಮೂರು ಚಿತ್ರಗಳು ಪೀಠದಲ್ಲಿವೆ.

ಶ್ರೀ ಸಹನಿಧಿಗಳು ಕಾಳ್ಳ (ರೇಖಾ ಚಿತ್ರ), ಅಡರೆ, ಮಳಖೇಡ ಇತ್ಯಾದಿ ಕಡೆಯಿವೆ. ಯಕ್ಷಿ ಅಂಬಿಕೆಯ ಎರಡು ವಿಗ್ರಹವು ವೂರಿನಲ್ಲಿವೆ.

### ಮಠಗಳು

ವೀರಶೈವರ ಮಠಗಳು ಈ ಭಾಗದ ಪ್ರತಿಯೊಂದು ಗ್ರಾಮದಲ್ಲಿವೆ. ಅವುಗಳಲ್ಲಿ ಗುರುಮಠಕಲ್ (ಯಾದಗೀರ ತಾ.) ಜೇವರ್ಗಿ (ತಾ.) ಇತ್ಯಾದಿ ಪ್ರಮುಖವಾಗಿದೆ. ಗುರುಮಠಕಲ್ಲಿನ ಶಾಂತವೀರಸ್ವಾಮಿಮಠ ಮತ್ತು ಗಂಡಾಮಠಗಳಿವೆ. ಎರಡನೇ ಮಠ ಈಗ ಶಿಥಿಲಾವಸ್ಥೆಯಲ್ಲಿದೆ. ಆ ಮಠದ ಸ್ವಾಮಿಗಳು ಬೇರೆಡೆಯಲ್ಲಿದ್ದಾರೆಂದು (ಗುಲ್ಬರ್ಗಾ) ಸ್ಥಳೀಕರು ಹೇಳುತ್ತಾರೆ ಶಾಂತವೀರಸ್ವಾಮಿ ಮಠ ಈ ಗ್ರಾಮ ಪೂರ್ವಕ್ಕಿದೆ. ಅದನ್ನು ಖಾಸಾಮಠವೆನ್ನುವರು. ಅದರ ಇತಿಹಾಸ ಸುಮಾರು ಇನ್ನೂರು ವರ್ಷಗಳಷ್ಟು ಪ್ರಾಚೀನದ್ದಾಗಿದೆ. ಆ ಮಠವು ಚಿತ್ರದುರ್ಗ ಬೃಹನ್‌ಮಠದ ಒಂದು ಶಾಖೆ. ಈ ಮಠದಲ್ಲಿರುವ ಸಂಗಮೇಶ್ವರ ಸ್ವಾಮಿಗಳು ಬಹುದಶಕಗಳಿಂದ ಅಲ್ಲಿಯ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೋಡಿಕೊಂಡು ಹೋಗುತ್ತಿರುವರು. ಮುಖ್ಯದ್ವಾರ ಮಂಟಪಕ್ಕೆ ಒಂದು ಅಂತಸ್ತಿದೆ. ಒಳಗಡೆ ವಿಶಾಲ ತೆರೆದ ಮಂಟಪವಿದೆ. ಪಶ್ಚಿಮ ಭಾಗಕ್ಕೆ ಹೊಂದಿ ಅನೇಕ ಕೊಠಡಿಗಳಿದ್ದು, ಅದರ ಮೇಲೆ ಒಂದು ಉಪ್ಪರಿಗೆಯಿದೆ. ಒಳಗಡೆ ಬಾವಿ ಪೂಜಾ ಮಂದಿರ, ಅಡಿಗೆಕೋಣೆ ಇತ್ಯಾದಿ ಕೋಣೆಗಳಿವೆ. ಈ ಮಠದ ವಾಸ್ತುರಚನೆಯಲ್ಲಿ ಎರಡು ಶತಮಾನ ಪ್ರಾಚೀನದ ಉಪಕರಣಗಳನ್ನೊಳಗೊಂಡಿರುವುದು ಗಮನೀಯ.

*ಶಣ್ಮುಖಮಠ :* ಜೇವರ್ಗಿಯ ಶಣ್ಮುಖಮಠ ವಿಶಾಲವಾಗಿದ್ದು ಶಣ್ಮುಖ ಸ್ವಾಮಿಗಳ ಗದ್ದುಗೆಯುಳ್ಳ ಕಟ್ಟಡಕ್ಕೆ ಎತ್ತರದ ಗೊಮ್ಮಟಿದೆ. ಅದಕ್ಕೆ ಎತ್ತರ ಅಧಿಷ್ಠಾನವಿದ್ದು ಅದು ಮಂಚ ಬಂಧ ಮಾದರಿಯಲ್ಲಿದೆ. ಬಿತ್ತಿ ಸರಳ, ಎತ್ತರ ಗೋಲಾಕಾರದ ಗುಮ್ಮಟನ ತುದಿಯಲ್ಲಿ ಕಳಸವಿದೆ. ಹೊರಗಡೆ ಸುತ್ತಲೂ ಪ್ರದಕ್ಷಿಣ ಪಥವಿದೆ. ಅಲ್ಲಿ. ಮುಖವಾಡರುವ ದೇವತಾ ವಿಗ್ರಹವಿದೆ. ಹಿಂಬದಿ ಯಲ್ಲಿರುವ ಕಟ್ಟಡಗಳಲ್ಲಿ ಶಿವಪೂಜಾಮಂದಿರ, ಅಡಿಗೆ ಕೋಣೆ, ಬಚ್ಚಲು ಇತ್ಯಾದಿ ಕೋಣೆಗಳಿವೆ. ಈ ಅಖಂಡೇಶ್ವರ ಸ್ವಾಮಿಗಳ ವಚನಗಳು ಖ್ಯಾತಿಯನ್ನು ಗಳಿಸಿವೆ.

ಈ ಮಠದ ಬೆಳವಣಿಗೆಗೆ ಸುರಪುರ ನಾಯಕರು ಪ್ರೋತ್ಸಾಹ ನೀಡಿದರೆಂದು ಅಲ್ಲಿಯ ಸ್ವಾಮಿಗಳು ಹೇಳುತ್ತಾರೆ. ಸುರಪುರ ಮನೆತನದ ಕ್ರಿ.ಶ. ೧೭ನೇ ಶತಮಾನ ವೆಂಕಟಪ್ಪ ನಾಯಕ, ಪಿಡ್ಡಪ್ಪನಾಯಕರ ಆಳ್ವಿಕೆಯಲ್ಲಿ ಶಣ್ಮುಖಸ್ವಾಮಿಗಳನ್ನು ಪಲ್ಲಕ್ಕಿಯಲ್ಲಿ ರಾಜದರ್ಬಾರಿಗೆ ಭಯ ಭಕ್ತಿ, ಗೌರವದಿಂದ ಒಯ್ಯಲಾರಿಯಿತಂತೆ! ಈ ಹಿನ್ನೆಲೆಯನ್ನು ತಿಳಿಸುವ ಕೆಲವು ಕಥಾನಕ ಫಲಕಗಳನ್ನು ಈ ಮಠದ ಪ್ರವೇಶದ್ವಾರದ ಒಳಗೋಡೆಯಿಲ್ಲಿವೆ. ಆ ಶಿಲ್ಪಗಳಲ್ಲಿ ಸ್ವಾಮಿಗಳನ್ನು ಪಲ್ಲಕ್ಕಿಯಲ್ಲಿ ಭಕ್ತರಿಬ್ಬರು ಹೊತ್ತಿರುವರು. ಅವರ ಮುಂದೆ ಕಹಳೆ ಊದುವವರಿದ್ದಾರೆ ಮತ್ತು ಆರು ಭಕ್ತರಿದ್ದಾರೆ. ಒಂದರ ಶಿಲ್ಪದಲ್ಲಿ ಒಂಟಿ ಸವಾರರಿದ್ದಾರೆ. ಇನ್ನೊಂದು ಶಿಲ್ಪದಲ್ಲಿ ವೀರನೊಬ್ಬ ಸಿಂಹವನ್ನು ಈಟಿಯಿಂದ ಕೊಲ್ಲುತ್ತಿರುವನು.

ಅಲ್ಲಿಯ ಒಬ್ಬ ಸ್ವಾಮಿಗಳ ಪವಾಡದಲ್ಲಿ ಪರಿಶಿಷ್ಟ ಜಾತಿಯ ಭಕ್ತನಿಗೆ ಆಶ್ರಯ ನೀಡಿ ಆತನನ್ನು ತನ್ನ ಎತ್ತರಕ್ಕೆ ಒಯ್ದು ಸ್ಥಳೀಯವಾಗಿ ಆತನ ಓಣಿಯಲ್ಲಿ ಒಂದು ಮಠವನ್ನೇ ಕಟ್ಟಿಸಿಕೊಂಡರಂತೆ. ಇಂತಹ ಸಾಮಾಜಿಕ ಅನಿಷ್ಟ ಪದ್ಧತಿಗಳಿಗೆ ಹೊಸ ಚಾಲನೆ ನೀಡಿ ಅಲ್ಲಿ ಸಮಾಜ ಸುಧಾರಕರೆಂದು ಖ್ಯಾತಿ ಗಳಿಸಿದರಂತೆ. ಹೀಗೆ ಈ ಭಾಗದ ಪ್ರತಿಯೊಂದು ಗ್ರಾಮದಲ್ಲಿ ವೀರಶೈವರ ಪಂಚಪೀಠಗಳಿಗೆ ಸಂಬಂಧಿಸಿದ ಕಿರುಮಠಗಳಿವೆ. ಅವುಗಳ ಮತ್ತು ಶಿಲ್ಪದ ಬಗ್ಗೆ ಹೆಚ್ಚಿನ ಮಾಹಿತಿ ತಿಳಿದು ಬರುವುದಿಲ್ಲ. ಅವುಗಳಲ್ಲಿ ಅನೇಕ ಮಠಗಳು ವಾಸಸ್ಥಳವಾಗಿವೆ.

### ವೀರಗಲ್ಲುಗಳು

ಈ ಭಾಗದಲ್ಲಿ ವೈವಿಧ್ಯಮಯ ವೀರಗಲ್ಲುಗಳಿವೆ. ಕತ್ತಿ ಗುರಾಣಿ ಹಿಡಿದ ವೀರರ ವೀರಗಲ್ಲುಗಳು ಇಮಡಾಪುರ, ಬಿಲ್ಲು-ಬಾಣ ಹಿಡಿದ ವೀರರ ವೀರಗಲ್ಲು ಮುಗುಟಪಲ್ಲಿ ಮತ್ತು ಕುದುರೆ ಸೂರಿ ಮಾಡುವ ವೀರರ ವೀರಗಲ್ಲುಗಳು (೩) ಕರ್ಚಲ ಮತ್ತು ಈಟಿ ಹಿಡಿದು ನಿಂತ ವೀರರ ವೀರಗಲ್ಲು ಗಂಡೇಪಲ್ಲಿ (೬) ಯ ಮಾರುತಿ ಗುಡಿ ಹತ್ತಿರವಿದೆ. ಕುರುಕುಂಟ ದೇವಾಲಯದ ಪ್ರಾಕಾರ ಹೊರಗೋಡೆ ಬದಿಗೆ ಎಂಟು ವೀರಗಲ್ಲುಗಳಿವೆ. ಅವುಗಳಲ್ಲಿ

ಸಾಮಾನ್ಯವಾಗಿ ಎಂಟು ಭಾಗಗಳಲ್ಲಿ ದೃಶ್ಯಗಳಿವೆ. ಕೆಳಗಡೆ ಹೋರಾಡುವ ಯೋಧನದಲ್ಲಿ ಬಹುದೊಡ್ಡದಾಗಿ ವೈರಿಯನ್ನು ಕಿರುದಾಗಿ ತೋರಿಸಲಾಗಿದೆ. ಎರಡನೇ ದೃಶ್ಯ ವಿಮಾನದ ಮಧ್ಯ ಮಡಿದ ವೀರನು ಕುಳಿತಿದ್ದು ಬದಿಗಳಲ್ಲಿ ಚೌರಿ ಬೀಸುವ ಸೇವಕರನ್ನು ಚಿತ್ರಿಸಲಾಗಿದೆ. ಕಾಲ ಸು. ಕ್ರಿ. ಶ. ೧೦ನೇ ಶತಮಾನ. ಗೋಗ್ರಹಣ ಕುರಿತು ವೀರಗಲ್ಲಿನಲ್ಲಿ ನಾಲ್ಕು ಹಸುಗಳನ್ನು ಚಿತ್ರಿಸಲಾಗಿದೆ. ಎಲ್ಲಾ ಮೇಲೆ ಮಡಿದ ವೀರನನ್ನು ಅಪ್ಸರೆಯರು ಒಯ್ಯುವ ದೃಶ್ಯದ ವೀರಗಲ್ಲು ಗುಂಡೇಪಲ್ಲಿಯಲ್ಲಿದೆ. ಮುಧೋಳದ ರಾಮಲಿಂಗ ಗುಡಿ ಮುಂದೆ ಮೂರು ವೀರಗಲ್ಲುಗಳಿವೆ. ಒಂದರಲ್ಲಿ ಛತ್ರಿ ಕೆಳಗಡೆ ಕುದುರೆ ಸುವರಿಸಿದ್ದಾನೆ. ಮೇಲೆ ಮಡಿದ ವೀರನನ್ನು ಅಪ್ಸರೆಯರು ಒಯ್ಯುತ್ತಿರುವರು. ಮತ್ತು ವೀರ ಶಿವಲಿಂಗದ ಮುಂದೆ ನಿಂತಿದ್ದಾನೆ. ಎರಡನೇ ವೀರಗಲ್ಲಿನಲ್ಲಿ ವೀರನು ಕುದುರೆ ಸವಾರರ ಸಂಗಡ ಹೋರಾಡುವ ದೃಶ್ಯವಿದೆ. ಮೇಲೆ ಮೂರು ಆಕಳುಗಳು, ಮೇಲೆ ಶಿವಲಿಂಗ, ಆಕಳು ಕರುಗಳಿವೆ. ಇನ್ನೊಂದರಲ್ಲಿ ವೀರನು ವೈರಿಯನ್ನು ಈಟಿಯಿಂದ ಇರಿದಿದ್ದಾನೆ. ಇನ್ನೊಂದು ಶೈಲಿಯಲ್ಲಿ ಗುರಾಣಿ ಹಿಡಿದಿದ್ದಾನೆ. ಮೇಲೆ ಲಿಂಗದ ಮುಂದೆ ವೀರನಿದ್ದಾನೆ. ಇನ್ನೊಂದರಲ್ಲಿ ಮೂರು ದೃಶ್ಯಗಳಿವೆ. ಈ ಸ್ಥಳದ ಅಂಬಾ ಭವಾನಿ ಗುಡಿ ಮುಂದಿನ ವೀರಗಲ್ಲಿನಲ್ಲಿ ವೀರನನ್ನು ಅಪ್ಸರೆಯರು ಒಯ್ಯುತ್ತಿರುವುದು ಮತ್ತು ವೀರನು ಲಿಂಗದ ಮುಂದೆ ಕುಳಿದ ದೃಶ್ಯ ಮಾತ್ರ ಉಳಿದಿದೆ. ನಡಗುಂದಿಯ ವೀರಗಲ್ಲಿನಲ್ಲಿ ವೀರನು ಕುದುರೆ ಸವಾರನ ಸಂಗಡ ಹೋರಾಡುವ ದೃಶ್ಯವಿದೆ. ಅಪ್ಸರೆಯರು ವೀರನನ್ನು ಒಯ್ಯುವ ದೃಶ್ಯ ಮತ್ತು ಮೇಲೆ ಶಿವ ಲಿಂಗ ಯತಿಯರಿದ್ದಾರೆ. ಜೇವರ್ಗಿ ವೀರಗಲ್ಲಿನಲ್ಲಿ ಯುದ್ಧ ದೃಶ್ಯದಲ್ಲಿ ಇಬ್ಬರು ವೀರರನ್ನು ತೋರಿಸಲಾಗಿದೆ. ಕಾಲ ಸು. ಕ್ರಿ.ಶ. ೧೦ನೇ ಶತಮಾನ. ಕಾಳ್ಗಿಯ ಒಂದು ಗುಡಿ ಹತ್ತಿರ ಸತಿ ಮತ್ತು ವೀರಗಲ್ಲಿದೆ. ಸತಿಕಲ್ಲಿನಲ್ಲಿ ಈಟಿ ಹಿಡಿದ ಕುದುರೆ ಸವಾರ ನಿದ್ದಾನೆ. ಕುದುರೆ ಹಿಡಿದು ವೈರಿ ನಿಂತಿದ್ದಾನೆ. ಮೇಲೆ ಸೂರ್ಯ – ಚಂದ್ರರಿದ್ದಾರೆ. ಅದರ ಮೇಲೆ ಎರಡು ಕೈಗಳ ಚಿತ್ರಗಳು ಇಬ್ಬರು ಸತಿ ಹೋದವರ ಚಿನ್ಹೆಗಳಾಗಿವೆ. ಈ ರೀತಿಯ ಲಕ್ಷಣಗಳು ವಿಳ. ಕಾಲ ಸು. ಕ್ರಿ.ಶ. ೧೩ನೇ ಶತಮಾನ.

ಹೀಗೆ ವೀರಗಲ್ಲುಗಳಲ್ಲಿ ಮೂರು ಭಾಗಗಳನ್ನಾಗಿ ವಿಂಗಡಿಸಿ ಸಂಬಂಧಿಸಿದ ಮೂರು ದೃಶ್ಯಗಳನ್ನು ತೋರಿಸುವ ಲಕ್ಷಣಗಳು ಈ ಭಾಗಗಳಲ್ಲಿ ಕಡಿಮೆ, ಗೋಗ್ರಹಣ ಶಿಲ್ಪಗಳಲ್ಲಿ ಗೋವುಗಳನ್ನು ಪ್ರತ್ಯೇಕ ಸಾಲಿನಲ್ಲಿ ತೋರಿಸುವುದು ವಿಶೇಷವೆನ್ನಬಹುದು.

*ಸ್ಮಾರಕಕಲ್ಲು :* ಜೇವರ್ಗಿ ಪಟ್ಟಣದ ಜೈನ ಮಂದಿರ ಸಂಕಿರಣದಲ್ಲಿ ಶಾತವಾಹನರ ಕಾಲದ ಒಂದು ಶಿಲಾಫಲಕದ ತುಂಡೊಂದು ಕಂಡು ಬಂದಿದೆ. ಆ ಫಲಕದ ಉದ್ದಗಲ ೯೮× ೭೭ ಸೆ.ಮಿ. ಅದರಲ್ಲಿ ನಿಂತ ಮನುಷ್ಯ ಮತ್ತು ಕುದುರೆಯ ಚಿತ್ರಗಳಿವೆ. ಅದರ ಮೇಲಿನ ಎರಡನೇ ಫಲಕದಲ್ಲಿ ಉಳಿದ ಚಿತ್ರದಲ್ಲಿ ಪ್ರಮುಖವಾಗಿ ವ್ಯಕ್ತಿಗಳ ಕಾಲುಗಳು ಕಂಡು ಬರುತ್ತವೆ. ಈ ಫಲಕವು ಸುಣ್ಣದ ಶಿಲೆಯಿಂದ ನಿರ್ಮಿಸಿದ್ದು ಇಂತಹ ಮಾದರಿಯ ಈ ಕಾಲದ ಶಿಲಾ ಫಲಕಗಳು ಈ ಸ್ಥಳ ಹಾಗೂ ಈ ಜಿಲ್ಲೆಯ ಸನ್ನತಿ ಇತ್ಯಾದಿ ಸ್ಥಳಗಳಲ್ಲಿವೆ. ಈ ಕಾಲದ ಈ ರೀತಿಯ ಕೆಲ ಶಿಲ್ಪಗಳಲ್ಲಿ ಕುದುರೆ-ಮನುಷ್ಯನಲ್ಲದೆ ನೊಗಹಾರಿದ ಬಂಡಿ ಎತ್ತುಗಳ ಚಿತ್ರಗಳಿವೆ. ಕಾಲ ಸು. ಕ್ರಿ.ಶ. ೧–೨ನೇ ಶತಮಾನ.

### ಬೌದ್ಧ ಶಿಲ್ಪಗಳು

ಈ ಪ್ರದೇಶ ಶಾತವಾಹನರ ಕಾಲದಲ್ಲೂ ಬೌದ್ಧಧರ್ಮ ಪ್ರಮುಖ ತಾಣ ಸನ್ನತಿ ಪ್ರದೇಶವಾಗಿದೆ. ಬೌದ್ಧಧರ್ಮದ ಸುತ್ತ ಶಿಲ್ಪ ಶಾಸನ ಇತ್ಯಾದಿ ಕುರುಹುಗಳು ಅಲ್ಲಿವೆ. ತದನಂತರ ಅದರ ಕುರುಹುಗಳು ಕಾಣಿಸುವುದಿಲ್ಲ. ಆದರೆ ಸುರಪುರ ತಾಲೂಕಿನವ ವೂರಿನ ಮಾರುತಿ ಗುಡಿ ಹಿಂದಿನ ಭಿತ್ತಿಯಲ್ಲಿ ಬುದ್ಧನ ಶಿಲ್ಪವೊಂದು ಇತ್ತೀಚೆಗೆ ಕಂಡುಬಂದಿದೆ. ಅದರ ಬದಿಯಲ್ಲಿ ಶೈವ ವೈಷ್ಣವ ಧರ್ಮದ ಶಿಲ್ಪಗಳನ್ನು ಗೋಡೆಯಲ್ಲಿಟ್ಟು ಕೂಡಿಸಲಾಗಿದೆ. ಆತನನ್ನು ಎರಡು ಅರ್ಧಗಂಬಗಳ ಮಧ್ಯ ಚಿತ್ರಿಸಲಾಗಿದೆ. ಆತನ ಬಲಬದಿಗೆ ಒಂದು ದಂಡವನ್ನು ನಿಲ್ಲಿಸಲಾಗಿದೆ. ಅದರ ಎತ್ತರ ಸುಮಾರು ಎರಡು ಅಡಿ ಬುದ್ಧನು ಪದ್ಮ ಪೀಠದ ಮೇಲೆ ಪದ್ಮಾಸನದಲ್ಲಿ ಶಾಂತಚಿತ್ತದಲ್ಲಿ ಕುಳಿತಿರುವನು. ಎರಡೂ ಕೈಗಳು ಶಿಥಿಲವಾಗಿವೆ. ಆತನ ತಲೆಕೂದಲು ಗುಂಗುರಲಿ ಗುಂಗುರದಲ್ಲಿದ್ದು ಮಧ್ಯ ಸ್ವಲ್ಪ ಎತ್ತರದ ಉಕ್ಷೀಣಶವನ್ನು ಚಿತ್ರಿಸಲಾಗಿದೆ. ರುಂಡ ಭಾಗ ಸುತ್ತ ಸರಳ ಪ್ರಭಾಮಂಡಲವಿದೆ. ದೇಹದ ಮೇಲೆ ಧರಿಸಿದ ಉತ್ತರೀ ಮತ್ತು ಉಕ್ಷಿಗಳ ಲಕ್ಷಣಗಳಿಂದ ಈ ಶಿಲ್ಪ ಬುದ್ಧನ ದೆಂದು ಗುರುತಿಸಲಾಗಿದೆ. ಈತನ ಬದಿಗೆ ನಿಲ್ಲಿಸಿದ ದಂಡದ ಹಿನ್ನೆಲೆ ತಿಳಿದಿಲ್ಲ. ಶೈಲಿಯಿಂದ ಈ ಶಿಲ್ಪದ ಕಾಲ ಸು. ಕ್ರಿ. ಶ. ೧೦ನೇ ಶತಮಾನ ಅಂದರೆ ರಾಷ್ಟ್ರಕೂಟರ ಅಂತ್ಯ ಕಾಲ ಈ ಬುದ್ಧನ ಶಿಲ್ಪವು ಸ್ಥಳೀಯ ಸಮಕಾಲೀನ ವಿಷ್ಣು ದೇವಾಲಯದ ಭಿತ್ತಿಯ ದಶಾವತಾರ ಶಿಲ್ಪಗಳಲ್ಲಿ ಒಂದಾಗಿರುವ ಸಾಧ್ಯತೆಯೂ ಹೆಚ್ಚು.

ಕಲ್ಯಾಣ ಚಾಲುಕ್ಯರ ಕಾಲದ (ಕ್ರಿ.ಶ. ೧೧–೧೨ನೇ ಶತಮಾನ) ಬೌದ್ಧವಿಗ್ರಹಗಳಾದ ತಾರಾ ಭಗವತಿ ಧಾರವಾಡ ಜಿಲ್ಲೆಯ ಕೋಳಿವಾಡ, ಗದಗ ಜಿಲ್ಲೆಯ ಡಂಬಳ ಮತ್ತು ಉತ್ತರ ಕನ್ನಡ ಜಿಲ್ಲೆಯ ಬನವಾಸಿ, ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಇತ್ಯಾದಿ ಸ್ಥಳಗಳಲ್ಲಿ ಮಾತ್ರ ಇಲ್ಲಿಯವರೆಗೆ ಬೆಳಕನ್ನು ಕಂಡಿದ್ದವು ಉತ್ತರ ಕರ್ನಾಟಕದಲ್ಲಿ ಈ ಕಾಲದ ಈ ಪ್ರಮಾಣದ ಬುದ್ಧನ ಶಿಲ್ಪವು ಬಾದಾಮಿ ಚಾಲುಕ್ಯರ ಅಂತ್ಯ ಕಾಲದಿಂದ ಶೋಧವಾಗಿಲ್ಲ ವೆಂದು ಹಿರಿಯ ಪುರಾತತ್ವ ತಜ್ಞ ಡಾ॥ ಅ. ಸುಂದರ ಅವರ ಅಭಿಪ್ರಾಯ ಪಡುತ್ತಾರೆ. ಅದರ ಮುಂಭಾಗದಲ್ಲಿ ಪಶ್ಚಿಮಕ್ಕೆ ಎರಡು ಕಡೆಗಳಲ್ಲಿ ಅವುಗಳ ಮಧ್ಯ ಮುಂಭಾಗದಲ್ಲಿ ಕೋಣೆಗಳಿವೆ.

ಆದರೆ ಮುಂಭಾಗ ಪ್ರತೀಕ ದ್ವಾರವಾಗಿದೆ. ಬಲಭಾಗದ ಕಟ್ಟಡ ಬಿದ್ದಿದೆ. ಗೋರೆವುಳ್ಳ ಗುಮ್ಮಟದ ಬಲಗಡೆ ಒಂದು ಎತ್ತರವಾದ ಕಂಬವಿದ್ದು ಅದರ ಮೇಲೆ ಗುಮ್ಮಟವಿದೆ. ಈ ಗುಮ್ಮಟ ಮತ್ತು ಸಂಕಿರಣದ ಒಳಗಡೆ ಅನೇಕ ಗೋರಿಗಳಿವೆ. ಸುತ್ತಲಿನ ಗೋಡೆಯಲ್ಲಿ ಕಮಾನುಳ್ಳ ಗೂಡುಗಳ ಸಾಲಿದೆ. ಪೂರ್ವ ಗೋಡೆಯಲ್ಲಿ ಒಂಬತ್ತು, ದಕ್ಷಿಣಗೋಡೆಯಲ್ಲಿ ೧೬ ಮತ್ತು ಉತ್ತರ ಗೋಡೆಯಲ್ಲಿ ೧೧ ಕಮಾನುಳ್ಳ ಗೂಡುಗಳಿವೆ. ಉತ್ತರ ಗೋಡೆಗೆ ಹೊಂದಿ ಒಂದು ದೊಡ್ಡ ಆವರಣವಿದ್ದು ಅದರಲ್ಲಿ ಒಂದು ದೊಡ್ಡ ಗೋರಿ ಇದೆ. ಆದರೆ ಪಶ್ಚಿಮ ಗೋಡೆಗೆ ಈ ಮಾದರಿಯ ಕಮಾನುಳ್ಳ ಗೂಡುಗಳಿಲ್ಲ. ದಕ್ಷಿಣ ಗೋಡೆಯಲ್ಲಿ ಒಂದು ಕಿರಿದಾದ ದಾರಿಯಿದೆ. ಈ ಗೋರಿಗಳು ಸ್ಥಳೀಕ ಮುಸ್ಲಿಂ ಅಧಿಕಾರಿ ವರ್ಗದವರದಿರಬೇಕು.

*ಕೋಟೆ, ಹುಡೆ, ಊರಗಸಿ ಮತ್ತು ಬಾವಿಗಳು :* ಈ ಭಾಗದ ಅನೇಕ ಗ್ರಾಮಗಳಿಗೆ ಊರಗಸಿ, ಕೋಟೆ ಮತ್ತು ಹುಡೆಗಳಿವೆ. ಅವುಗಳಲ್ಲಿ ಮಳಖೇಡದ ಕೋಟೆ ಭವ್ಯವೆನಿಸಿದೆ. ಬನ್ನೂರಿನಲ್ಲಿ ಆಯತಾಕಾರದ ಎರಡು ಹುಡೆಗಳಿದ್ದು ಅವುಗಳಿಗೆ ಹೊಂದಿ ತೆರೆದ ಕಿಡಿಕಿಗಳಿವೆ. ಬಂದೆಪಳ್ಳಿಯ ಹುಡೆ ಮತ್ತು ಊರಗಸಿ ಉತ್ತರ ದಿಕ್ಕಿನಲ್ಲಿದೆ. ಗುಂಡೇಪಳ್ಳಿಯಲ್ಲಿ ಒಂದು ದುಂಡಾಕಾರದ ಏಕ ಹುಡೆ ಊರ ಪೂರ್ವಕ್ಕಿದೆ, ಮುಧೋಳ (ಸೇಡಂ ತಾ.) ಗ್ರಾಮದ ಹಳೆಯ ಕೋಟೆ ಗೋಡೆಗೆ ನಾಲ್ಕು ಹುಡೆಗಳಿವೆ. ಅದರ ಗೋಡೆ ಮಣ್ಣಿನಿಂದ ನಿರ್ಮಿತವಾಗಿದೆ. ಇಮಡಾಪುರ (ಸೇಡಂ ತಾ. ಗ್ರಾಮದ ಸುತ್ತ ಭವ್ಯ ಕೋಟೆಯಿದ್ದು ಅದರ ಊರ ಅಗಸಿ ಪೂರ್ವಕ್ಕೆ ಮುಖಮಾಡಿದೆ. ಈ ಕೋಟೆ ಒಳಗಿನ ವಿವಿಧ ಜಾತಿಯ ಜನ ವರ್ಗದವರ ವಸತಿಯು ಗಮನೀಯ. ಆ ಕೋಟೆ ಗೋಡೆಗೆ ಹೊಂದಿ ಎರಡು ಕಡೆಗಳಲ್ಲಿ ಹುಡೆಗಳಿವೆ. ಮದನ (ಸೇಡಂ ತಾ.) ದ ಅರಮನೆ ದೇಶಮುಖರದಾಗಿದೆ. ಗುರುಮಠಕಲ್ಲಿನ ಅರಮನೆ ಕಾಕಲವಾರದ ರಾಜ ಲಕ್ಷ್ಮಣರದ್ದಾಗಿದೆ. ಇವು ರಾಜ ವಂಶಕ್ಕೆ ಸೇರಿದ ಮನೆಗಳು. ದಂಡಾಪುರ ಇತ್ಯಾದಿ ಗ್ರಾಮಗಳಲ್ಲಿ ಭವ್ಯವಾದ ಮನೆಗಳಿವೆ. ಇಟಕಲ್ಲಿನಲ್ಲಿ (ಸೇಡಂ ತಾ.) ಮಣ್ಣಿನ ಭವ್ಯಕೋಟೆ ಈ ಗ್ರಾಮ ಸುತ್ತಲಿದ್ದು ಅದಕ್ಕೆ ನಾಲ್ಕು ಮೂಲೆಗಳಲ್ಲಿ ನಾಲ್ಕು ಹುಡೆಗಳಿವೆ. ಅದು ಅಲ್ಲಲ್ಲಿ ಶಿಥಿಲಗೊಂಡಿದೆ. ಪಾಕಲ (ಸೇಡಂ ತಾ.) ದಲ್ಲಿ ಒಂದು ಹುಡೆಯಿದೆ. ಹಾಳು ಹನುಮನಳ್ಳಿಯಲ್ಲಿ ಹಾಳಾದ ಕೋಟೆಗೋಡೆಗಳ ಮೂಲೆಗಳಲ್ಲಿ ನಾಲ್ಕು ಹುಡೆಗಳಿವೆ. ಒಳಗಡೆ ಕಣಜ, ಬಿದ್ದ ಮನೆಗಳಿವೆ. ಹಳೆಕಾಲದ ಬಾವಿಗಳು ಗುರುಮಠಕಲ್, ಇಮಡಾಪುರ, ಕಡ್ಡಾಪುರ ಇತ್ಯಾದಿ ಕಡೆಗಳಲ್ಲಿವೆ. ಆದರೆ ಪ್ರಾಚೀನ ಕಾಲದ ಕಲ್ಯಾಣಿಗಳು ಮೂರು ಕಡೆಗಳಲ್ಲಿವೆ. ಅವು ಮುದ್ನೂರು, ಏವೂರು (ಸರುಪುರ ತಾ.), ಯಡ್ರಾವಿ (ಜೇವರ್ಗಿ ತಾ.) ಇನ್ನಿತರ ಕಡೆಗಳಲ್ಲಿವೆ. ಯಡ್ರಾವಿಯ ಕಲ್ಯಾಣಿ ಮಧ್ಯ ಒಂದು ದೇವಾಲಯ ಕಟ್ಟಡವಿದೆ. ಅದರ ಪೂರ್ವ ಭಾಗದಲ್ಲಿ ಪ್ರವೇಶವನ್ನು ಕಲ್ಪಿಸಲಾಗಿದೆ.

## ಮುಸ್ಲಿಂ ಸ್ಮಾರಕಗಳು

ಈ ಪ್ರದೇಶದ ಅನೇಕ ಮುಸ್ಲಿಂ ಸ್ಮಾರಕಗಳಿದ್ದು ಅವುಗಳ ಸಾಂಸ್ಕೃತಿಕ ಚಟುವಟಿಕೆಗಳು ಸಮಾಜದ ಧರ್ಮ ಸಹಿಷ್ಣತೆಯನ್ನು ಕಾಪಾಡಲು ಸಹಾಯಕವಾಗಿವೆ. ಅವುಗಳಲ್ಲಿ ಅಂದೋಲ (ಜೇವರ್ಗಿ ತಾ.), ಮುಧೋಳ, ಕಡ್ಡಾಪುರ ಮತ್ತು ಕೊಂತನಪಳ್ಳಿ (ಸೇಡಂ ತಾ.) ಇತ್ಯಾದಿಗಳ ದರ್ಗಾಗಳು ಹಾಗೂ ಮಳಖೇಡ, ಇಟಕಲ್ ಇತ್ಯಾದಿಗಳ ಮಸೀದಿಗಳು ಮುಖ್ಯವೆನಿಸಿವೆ.

*ಮಸೀದಿಗಳು :* ಇಟಕಲ್‌ನ ಹಸನ್-ಹುಸೇನಿ ಮಸೀದಿಯ ಪೀಠ ಹಬ್ಬವನ್ನು ಹಿಂದೂ-ಮುಸ್ಲಿಂ ಮರು ಸಡಗರ ಸಂಭ್ರಮದಿಂದ ಆಚರಿಸುವರು. ಮಳಖೇಡದ ಕೋಟೆ ಒಳಗಿನ ಮಸೀದಿಯನ್ನು ಕಾಳೀಮಜೀದ್ ಎನ್ನುವರು. ಅವುಗಳಲ್ಲಿ ಮಳಖೇಡದ ಮಸೀದಿ ಭವ್ಯವೆನಿಸಿದ್ದು ಅದು ಪೂರ್ವಕ್ಕೆ ಮುಖಮಾಡಿದೆ.

*ದರ್ಗಾಗಳು :* ಕೊಂಟನ ಪಳ್ಳಿಯಲ್ಲಿ ಭವ್ಯ ಕಟ್ಟಡವುಳ್ಳ ಎರಡು ದರ್ಗಾಗಳು ಒಂದರ ಪಕ್ಕದಲ್ಲೊಂದಿವೆ. ಇವುಗಳಿಗೆ ಒಂದೇ ದ್ವಾರ ಪಶ್ಚಿಮಕ್ಕಿದೆ. ಅವುಗಳನ್ನು ಮಹಸುಭಾನಿ ಮತ್ತು ಜಿಂಜನ್ ಪೀರ್ ಎನ್ನುವರು. ಈ ಎರಡಕ್ಕೂ ಪ್ರತ್ಯೇಕ ಭವ್ಯ ಚೌಕಾದ ಕೋಣೆಗಳಿದ್ದು ಅವುಗಳ ಮಾಳಿಗೆ ಈಗ ಉಳಿದಿಲ್ಲ. ಮುಂದಿನ ಗೋಡೆಗೆ ಹೊಂದಿ ಎತ್ತರದ ಅರ್ಧಗಂಬಗಳಿಂದ ಅರ್ಧವೃತ್ತಾಕಾರದ ಕಮಾನನ್ನು ನಿರ್ಮಿಸಿರುವುದು ಅದರ ಭವ್ಯತೆಯನ್ನು ಹೆಚ್ಚಿಸಿವೆ. ಅವುಗಳನ್ನು ಸ್ವಲ್ಪ ಎತ್ತರದ ಕಟ್ಟೆಯ ಮೇಲೆ ಕಟ್ಟಲಾಗಿದೆ. ಅದರಲ್ಲಿ ಗೋರಿಗಳಿವೆ. ಮುಂದೆ ವಿಶಾಲ ಆವರಣವಿದೆ. ಜಿಂಜನ ಪೀರ್ ದರ್ಗಾದ ಕಟ್ಟಡ ಶಿಥಿಲಾವಸ್ಥೆಯಲ್ಲಿದೆ. ಕಾಲ ಸು. ಕ್ರಿ.ಶ. ೧೭ನೇ ಶತಮಾನ.

ಕಡ್ಡಾಪುರದ ಬಂದೇ ನವಾಜ್ ದರ್ಗಾ ಸುಮಾರು ಒಂದುವರೆ ಶತಮಾನ ಪ್ರಾಚೀನದ್ದೆಂದು ಹೇಳುವರು. ಅದು ಕೇವಲ ತೆರೆದ ಕಿರು ಕಟ್ಟಡವಾಗಿದೆ. ಸ್ಥಳೀಕರು (ಹಿಂದೂ-ಮುಸ್ಲಿಂ) ಸಂಭ್ರಮ ದಿಂದ ಅದರ ಹಬ್ಬವನ್ನು ಆಚರಿಸುವರು. ಆಂದೋಲನದ ದರ್ಗಾವನ್ನು ಎತ್ತರದ ಜಗಲಿ ಮಧ್ಯ ನಿರ್ಮಿಸಲಾಗಿದೆ. ಏಕ ಕೋಟೆಯುಳ್ಳ ಚೌಕಾಕಾರದ ಕಟ್ಟಡಕ್ಕೆ ಎತ್ತರದ ಗುಮ್ಮಟವಿದ್ದು ಅದರ ಮೇಲಿನ ಭಾಗ ಉಳಿದಿರುವುದಿಲ್ಲ. ಕಾಲ ಸು. ಕ್ರಿ.ಶ. ೧೬ನೇ ಶತಮಾನ.

ದಂಡಾಪುರ ಗ್ರಾಮದ ಸಮೀಪ ಅನೇಕ ಗೋರಿಗಳುಳ್ಳ ಒಂದು ವಿಶಾಲ ಸಂಕಿರಣವಿದೆ. ಅದರ ಸುತ್ತ ಪ್ರಾಕಾರ ಗೋಡೆಯಿದೆ. ಪೂರ್ವ ಮುಖದಲ್ಲಿ ಮಧ್ಯ ಏಕಕೋಣೆಯುಳ್ಳ ಒಂದು ಗೋರಿ ಕಟ್ಟಡವಿದೆ. ಅದೂ ಎತ್ತರ ಪೀಠದ ಮೇಲಿದೆ. ಅದಕ್ಕೊಂದು ಗುಮ್ಮಟವಿದೆ. ಸುತ್ತಲೂ ನೀರಿದೆ. ಅದರ ದಂಡೆಯ ಸುತ್ತ ಮೇಲೆ ಎತ್ತರದ ಪ್ರಾಕಾರ ಗೋಡೆಯಿದ್ದು ಆ ಗೋಡೆಗಳಲ್ಲಿ ತೆರೆದ



ನಿಡುಗುಂದಿ : ಶಾಲಾ ಮಾದರಿ ಶಿಖರ



ಕಲ್ಯಾಣಿ ಮುದ್ನೂರು



ಮೇಧಕ: ಗೊಲ್ಲಭಾಮಿನಿ



ಮೇಧಕ : ಗೊಲ್ಲಭಾಮಿನಿ



ವವೂರು - ಬುದ್ಧ



ಮೇಧಕ : ವೆಂಕಟೇಶ್ವರ


ಮೇಡಕ : ದೇವಾಲಯ ನಿರ್ಮಾಪಕ


ಗುರುಮಠಕಲ್ : ಕೋದಂಡರಾಮ


ಮುದ್ನೂರು : ನಟರಾಜ


ಮುದ್ನೂರು ನಾಗ


ಗುರುಮಠಕಲ್ : ಸೂರ್ಯ


ಮುಧೋಳ : ಪಂಚಮುಖಿ ಮಾರುತಿ


ಕುರುಕಂಟ : ವೀರಗಲ್ಲು


ನಿಡಗುಂದಿ ಕಾಳಿಕ


ಮಳಖೇಡ : ಕಂಚಿನ ವಿಗ್ರಹಗಳು

ಕಮಾನುಗಳಿವೆ. ಅಲ್ಲಿ ಸದಾ ನೀರಿನ ಬಗ್ಗೆಗಳಿರುತ್ತವೆ. ಕಲ್ಯಾಣಿ ಮಧ್ಯ ಹಾಳಾದ ದೇವಾಲಯ ಹಾಗೂ ಸುತ್ತ ಪ್ರಾಕಾರವುಳ್ಳ ಕಟ್ಟಡಣಗಳು ವಿರಳ. ಈ ಹಿನ್ನಲೆಯಲ್ಲಿ ಸ್ಥಳೀಯ ಕಲ್ಯಾಣಿ ಮಹತ್ವದ್ದಾಗಿದೆ. ಕಾಲ ಸು ಕ್ರಿ.ಶ. ೧೧ನೇ ಶತಮಾನ, ಪ್ರಾಕಾರಗೋಡೆ ಸು ಕ್ರಿ.ಶ. ೧೬ನೇ ಶತಮಾನ.

ಈ ಅಧ್ಯಯನದಲ್ಲಿ ಕೆಲವು ಮಹತ್ವದ ಸಂಗತಿಗಳನ್ನು ಗಮನಿಸಲಾಗಿದೆ. ದೇವಾಲಯದ ವಾಸ್ತು ಅಧ್ಯಯನದಿಂದ ನಿಡಗುಂದಿಯಲ್ಲಿ ಶಾಲಾಮಾದರಿ ಶಿಖರವುಳ್ಳ ದೇವಾಲಯ ಸೂರ್ಯ ದೇವಾಲಯ ಮತ್ತು ಸೂರ್ಯ ವಿಗ್ರಹಗಳು ಕಥಾನಕ ಸ್ತಂಭಗಳು (ಮಳಖೇಡ, ನಿಡಗುಂದಿ ಇತ್ಯಾದಿ) ಅದರಲ್ಲಿ ಜೈನ ಬಸದಿಯ ಕಂಬಗಳಲ್ಲಿಯ ಚಿತ್ರಗಳು (ಕುರುಕುಂಟ), ದ್ವಿತಳ ಪಾಯವುಳ್ಳ ದೇವಾಲಯ (ನಿಡಗುಂದಿ, ಬಾಲಕರ ಚಿತ್ರವುಳ್ಳ ಬಾಗಿಲು ಚೌಕಟ್ಟುಗಳು (ಮಳಖೇಡ ಇತ್ಯಾದಿ), ರಾಮಾಯಣ ಭಾಗವತ, ಮಹಾಭಾರತಗಳ ಕಥಾನಕ ಚಿತ್ರ ಫಲಕವುಳ್ಳ ಕಲ್ಯಾಣಿ (ಮುದ್ನೂರು), ಐವೂರಿನ ಕಲ್ಯಾಣಿ, ಕಲ್ಯಾಣಿ ಮಧ್ಯಯಿರುವ ದೇವಾಲಯ (ಯಡ್ರಾಮಿ) ನೀರಿನ ದಡದಲ್ಲಿರುವ ಸರ್ವತೋಭದ್ರ ಮಾದರಿಯ ದೇವಾಲಯ (ಕಾಳ್ಗಿ) ವೀರಶೈವರ ಪ್ರಾಚೀನ ಮಠಗಳು (ಗುರುಮಠಕಲ್, ಜೇವರ್ಗಿ), ಸಿಂಹ ಸ್ತಂಭವುಳ್ಳ ಬಸದಿಯ ಅವಶೇಷಗಳು (ಜೇವರ್ಗಿ), ವೈವಿಧ್ಯಮಯ ಮುಸ್ಲಿಂ ಕಟ್ಟಡಗಳು, ಗೋರಿಗಳು ಹಾಗೂ ಧರ್ಮ ಸಮನ್ವಯದ ಆಚರಣೆಗಳು, ವಿಜಯನಗರ ಕಾಲದ ದೇವಾಲಯಗಳಾದ ಬಲ ಭೀಮೇಶ್ವರ (ಕೊಂತಪಳ್ಳಿ); ಅರವತ್ತಾರಕ್ಕೂ ಹೆಚ್ಚು ಶಿಲ್ಪವುಳ್ಳ ಭೂತೇಶ್ವರ ದೇವಾಲಯ (ಮೇದಿಕ), ಕೋಟೆ, ಬಾವಿ, ಊರಗಸಿ ಮುಂತಾದವುಗಳು ಮಹತ್ವವೆನಿಸಿವೆ. ಶಿಲ್ಪಗಳಲ್ಲಿ ಪಂಚಮುಖಿ ಹನುಮ (ಮುಧೋಳ), ಕಿರೀಟವಿಲ್ಲದ ಮಹಿಷಾಸುರಮರ್ದಿನಿ (ಶಹಪೂರ), ಶಾತವಾಹನರ ಕಾಲದ ಸ್ಮಾರಕ ಫಲಕ (ಜೇವರ್ಗಿ), ಬುದ್ಧನ ಶಿಲ್ಪ (ಐವೂರು), ಕೋದಂಡ ರಾಮ, ಇಷ್ಟಲಿಂಗವಿಡಿದ ಪಾರ್ವತಿ (ಗುರುಮಠಕಲ್), ಕಂಚಿನ ಜೈನಮೂರ್ತಿಗಳು, ತೋರಣಗಳು (ಮಳಖೇಡ), ಇಷ್ಟಲಿಂಗಧಾರಣೆ ಅಂದರೆ ಸಾಲಿಗ್ರಾಮ ಧಾರಣೆಯ ಮಾರುತಿ (ಕೊಂತನಪಳ್ಳಿ), ವೀರಗಲ್ಲು (ತುರುಕುಂಟೆ), ಸತಿಕಲ್ಲು (ಕಾಳ್ಗಿ), ಅರಮನೆಗಳು (ಗುರುಮಠಕಲ್ ಇತ್ಯಾದಿ) ವಿಶಿಷ್ಟವೆನಿಸಿವೆ. ಮೇದಕದ ಚೆನ್ನಕೇಶವ (ವೆಂಕಟೇಶ) ದೇವಾಲಯದ ಸಾಂಸ್ಕೃತಿಕ ಪರಂಪರೆಗೆ ಸೀಮಿತವಾದ ಗೌಳಿಯರ ಶಿಲ್ಪಗಳು ವಿಶೇಷವೆನ್ನಬಹುದು. ರಾಷ್ಟ್ರಕೂಟರ ವಾಸ್ತುವಿನ ವೈವಿಧ್ಯಮಯ ಲಕ್ಷಣಗಳು ಇಲ್ಲಿವೆ. ಮೇದಕದಲ್ಲಿ ಭೂತೇಶ್ವರದಂತೆ ಕಾಳ್ಗಿ ಕಾಳೇಶ್ವರ, ರೇವಣಸಿದ್ದೇಶ್ವರ, ನಾರಾಯಣ ಪುರ, ಜಲಸಂಗಿ ಇತ್ಯಾದಿಯ ಭಾಗದ ದೇವಾಲಯಗಳಲ್ಲಿ ಭಿತ್ತಿಯ ಶಿಲ್ಪಗಳು ಒಂದೇ ರೀತಿಯಲ್ಲಿವೆ! ಇಲ್ಲಿ ಸ್ತ್ರೀ-ಶೃಂಗಾರವನ್ನು ಪ್ರಧಾನಮಾಡಿ ಕೊಳ್ಳಲಾಗಿದೆ. ಆದರೆ ಕೆಲವು ದೇವಾಲಯಗಳ ಭಿತ್ತಿ ಸರಳವಾಗಿವೆ. ಮಧ್ಯಯುಗೀನ ಬೌದ್ಧಧರ್ಮದ ಬುದ್ಧನ ಶಿಲ್ಪ, ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಹಿಂದೂ ದೇವಾಲಯಗಳು-ಶಿಲ್ಪಗಳು, ಮುಸ್ಲಿಂ ಕಟ್ಟಡಗಳು, ನಾಯಕರ ಕಾಲದ ಮಠಮಾನ್ಯಗಳ ವಿವರಗಳು ಈ ಪ್ರದೇಶದ ಇತಿಹಾಸ ರಚನೆಗೆ ಸಹಾಯಕವಾಗಿವೆ.

(ಕವಿವಿಯ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಗುಲ್ಬರ್ಗಾ ಜಿಲ್ಲೆಯ ಸೇಡಂ, ಚಿತಾಪುರ, ಯಾದಗಿರಿ, ಜೇವರ್ಗಿ, ಶಹಪೂರ, ಸುರಪುರ ತಾಲೂಕಿನ ಹಳ್ಳಿ-ಹಳ್ಳಿಗಳ ಪುರಾತತ್ವ ಅವಶೇಷಗಳ ಅಧ್ಯಯನ ಕೈಗೊಂಡು ಅದನ್ನು ಪ್ರಕಟಿಸಲು ಸಹಕಾರವಿತ್ತ ಕವಿವಿಯ ಕುಲಪತಿಗಳಿಗೆ ಮತ್ತು ಕುಲಸಚಿವರಿಗೆ ಅನಂತ ಕೃತಜ್ಞತೆಗಳು; ಜೇವರ್ಗಿಯ ಅವಶೇಷಗಳ ಅನ್ವೇಷಣೆ ಕಾಲದಲ್ಲಿ ಜತೆಯಲ್ಲಿದ್ದ ಸಹೋದ್ಯೋಗಿ ಶ್ರೀ ಎಸ್. ಬಿ. ಹಿರೇಮಠ ಅವರಿಗೆ ಧನ್ಯವಾದಗಳು; ಬುದ್ಧನ ವಿಗ್ರಹವನ್ನು (೧೯೯೪) ಬೆಳಕಿಗೆ ತರಲು ಸಹಕರಿಸಿದ ನನ್ನ ಪ್ರೀತಿಯ ವಿದ್ಯಾರ್ಥಿ ಶ್ರೀ ಚೆನ್ನಾರೆಡ್ಡಿ ಇವರಿಗೆ ಧನ್ಯವಾದಗಳು ಅನ್ವೇಷಣಾ ಸಂದರ್ಭದಲ್ಲಿ ಪ್ರತಿಗ್ರಾಮಗಳಲ್ಲಿ ಅನೇಕ ವ್ಯಕ್ತಿಗಳು ನೀಡಿದ ವಿವಿಧ ರೀತಿಯ ಸಹಕಾರಕ್ಕೆ ನಾನು ಋಣಿಯಾಗಿದ್ದೇನೆ.)

ಪ್ರೊ॥ ಲಕ್ಷ್ಮಣ್ ತೆಲಗಾವಿ *

# ಚಿತ್ರದುರ್ಗ ಕೋಟೆ ಮತ್ತು ಬೆಟ್ಟ ಪರಿಸರದ ಮೂರು ವ್ಯಕ್ತಿಶಿಲ್ಪಗಳು

ಚಿತ್ರದುರ್ಗ ಮತ್ತು ಬೆಟ್ಟ ಪರಿಸರದ ದೇವಾಲಯ ಹಾಗೂ ಇತರ ಸ್ಮಾರಕಗಳಲ್ಲಿಯ ಹಲವಾರು ಉಬ್ಬುಶಿಲ್ಪ ಮತ್ತು ಬಿಡಿಶಿಲ್ಪಗಳ ಬಗೆಗೆ ತಕ್ಕಮಟ್ಟಿನ ಅಧ್ಯಯನ ನಡೆಸಲಾಗಿದ್ದರೂ, ಬೆಳಕಿಗೆ ಬರಬೇಕಾದ, ಅಧ್ಯಯನಕ್ಕೊಳಪಡಬೇಕಾದ ಶಿಲ್ಪಗಳ ಸಂಖ್ಯೆಯೂ ಸಾಕಷ್ಟಿದೆ. ಕೋಟೆಯ ಪ್ರಾಕಾರ, ದ್ವಾರಗಳೇ ಅಲ್ಲದೆ, ಗುಹಾಲಯಗಳಲ್ಲಿರುವ ಹಾಗೂ ಬಯಲುಬಂಡೆಗಳ ಮೇಲೂ ಕೆತ್ತಲಾಗಿರುವ ವಿವಿಧ ಬಗೆಯ ಉಬ್ಬುಶಿಲ್ಪಗಳನ್ನು ಇನ್ನೂ ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿಲ್ಲ. ಆದರೆ ಈವರೆಗೆ ವ್ಯವಸ್ಥಿತ ಅಧ್ಯಯನ ನಡೆಸಲಾಗಿದ್ದರೆ ಅದು ಸ್ಮಾರಕಗಳ ಒಳಹೊರಗಿನ ಮತ್ತು ಬಯಲುಬಂಡೆಗಳ ಮೇಲಿನ ಕೊರೆಚಿತ್ರಗಳನ್ನು ಮಾತ್ರ.

ಪ್ರಸ್ತುತ ಪ್ರಬಂಧದಲ್ಲಿ, ಈವರೆಗೆ ಗುರುತಿಸಲಾಗದ ಕೆಲವು ಪ್ರಾಕಾರ ಶಿಲ್ಪ ಹಾಗೂ ಬಿಡಿಶಿಲ್ಪಗಳ ಪೈಕಿ ಕೋಟೆಯ ಮೂರನೇ ಪ್ರಾಕಾರದ ಮೇಲಿನ ಒಂದು ಉಬ್ಬುಶಿಲ್ಪ, ಏಕನಾಥಮ್ಮ ಗುಡಿಯ ಹುಟ್ಟುಬಂಡೆ ಮೇಲಿನ ಉಬ್ಬುಶಿಲ್ಪ ಹಾಗೂ ಬೆಟ್ಟ ಪರಿಸರದ ಧವಳಪ್ಪನಗುಡ್ಡದಲ್ಲಿರುವ ವಿಗ್ರಹ - ಇವುಗಳನ್ನು ಕುರಿತು ಚರ್ಚಿಸಿದೆ. ವಾಸ್ತವದಲ್ಲಿ, ಈ ಮೂರೂ ವ್ಯಕ್ತಿಶಿಲ್ಪಗಳು.

## ೧. ಕೋಟೆಯ ಮೂರನೇ ಪ್ರಾಕಾರದ ಮೇಲಿನ ಉಬ್ಬುಶಿಲ್ಪ

ಬೆಟ್ಟವನ್ನು ಏರುವ ಹಾದಿಯಲ್ಲಿ ಈಗ ಮೊದಲಿನದೆನಿಸಿರುವ ಕೋಟೆಯು ಇಲ್ಲಿಯ ಏಳುಸುತ್ತುಗಳಲ್ಲಿ ಮೂರನೆಯದು. ಇದರ ಮಹಾದ್ವಾರ ಮತ್ತು ಬಲಪಕ್ಕದಲ್ಲಿ ಕಂದಕದಲ್ಲಿರುವ ಬಾವಿ - ಈ ಎರಡನ್ನೂ ಕಾಮನಬಾಗಿಲು ಮತ್ತು ಕಾಮನಬಾವಿಗಳೆಂದು ಕರೆಯುವುದು ರೂಢಿಯಲ್ಲಿವೆ. ಕಾಮನಬಾಗಿಲೆಂಬ ಈ ಪ್ರಮುಖ ಮಹಾದ್ವಾರವು ಉತ್ಕೃಷ್ಟ ಕಲಾವಿನ್ಯಾಸದಿಂದ ಕೂಡಿದ್ದು ಆಕರ್ಷಕವಾಗಿದೆ. ಹಾಗೆಯೇ, ಕಂದಕದಲ್ಲಿರುವ ಕಾಮನಬಾವಿ ಸಹಾ ೮ ಚೌಕ ಮತ್ತು ೧೨ ಕೋನಗಳುಳ್ಳ ವಿಸ್ತಾರವಾದ ವಿಶಿಷ್ಟ ರಚನೆ. ಬಾಗಿಲು ಮತ್ತು ಬಾವಿ - ಈ ಎರಡೂ ಮೋಹಕವಾದ ಕಾಮ(ದೇವ)ನ ಹೆಸರಿನಲ್ಲಿರುವುದು ಸ್ವಾರಸ್ಯಕರವಾಗಿದೆ. ಈ ಕಾಮ ಅಥವಾ ಮನ್ಮಥ ಅಥವಾ ಮದನ ಯಾರು? ಪೌರಾಣಿಕ ವ್ಯಕ್ತಿಯೇ ಅಥವಾ ಚಾರಿತ್ರಿಕ ವ್ಯಕ್ತಿಯೇ? ಈ ಕುರಿತು ಮುಂದೆ ವಿವೇಚಿಸಿದೆ.



ಕಾಮನಬಾಗಿಲು ಹೆಸರಿನ ಈ ಪ್ರವೇಶದ್ವಾರ ವಿಜಯನಗರ ಕಾಲದ ರಚನೆ. ಎರಡು ಗೋಡೆಗಳ ನಡುವಣ ಮೂರು ತಿರುವುಗಳ ಡೊಂಕುಮಾರ್ಗವನ್ನು ಬಳಸಿ ಈ ಮಹಾದ್ವಾರವನ್ನು ತಲುಪಬೇಕು. ಚಿತ್ರದುರ್ಗ ಕೋಟೆಯಲ್ಲಿ ಇಂಥಾ ಸುಂದರ ಹಾಗೂ ನಯವಾದ ರಚನೆ ಕಂಡುಬರುವುದಿಲ್ಲ. ಈಚೆಗೆ ಬೆಳಕಿಗೆ ಬಂದ ಬಂಡೆಬರಹದ ಆಧಾರದಿಂದ ವೀರಭದ್ರ ಕೊತ್ತಲ ಇದೇ ಆಗಿರಬಹುದೆಂದು ತಿಳಿಯಲಾಗಿದೆ. ತಮ್ಮ ಕಾಲದ ಶಿಲ್ಪಕಲಾಶೈಲಿಯಲ್ಲಿಯೇ ಈ ಬಾಗಿಲನ್ನು ಕಟ್ಟಿಸಿದ್ದಾರೆ ವಿಜಯನಗರ ಸಾಮಂತರು. ಇಳಿಜಾರಾಗಿರುವ ನಯಗೊಳಿಸಿದ ಗೋಡೆಗಳ ಮೇಲಿರುವ ನಾನಾ ಬಗೆಯ ಉಬ್ಬುಶಿಲ್ಪಗಳೆಂದರೆ ಮೂರು ಮೀಟರ್ ಉದ್ದದ

* ಮುಖ್ಯಸ್ಥ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ-೫೮೩ ೨೭೬

ಆದಿಶೇಷ, ನಂದಿ, ಶಿವಲಿಂಗ, ಗಂಡಭೇರುಂಡ, ಕಮಲ, ಹಂಸ, ಪುಷ್ಪ, ಮಿಥುನಶಿಲ್ಪ, ಇತ್ಯಾದಿ. ಇವೇ ಅಲ್ಲದೆ, ಆದಿಶೇಷ ಉಬ್ಬುಶಿಲ್ಪದಿಂದ ಸ್ವಲ್ಪ ಎಡಭಾಗದಲ್ಲಿರುವ ರಾಜಠೀವಿಯಲ್ಲಿ ಆಸೀನನಾಗಿರುವ ವ್ಯಕ್ತಿ, ಗಣೇಶ, ಪೂರ್ಣಕುಂಭ ಮತ್ತು ಭೈರವಶಿಲ್ಪಗಳು ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಮುಖ್ಯವಾದುವು.

ರಾಜಠೀವಿಯಲ್ಲಿ ಆಸೀನನಾಗಿರುವ ವ್ಯಕ್ತಿಯ ಉಬ್ಬು ಶಿಲ್ಪವನ್ನು ಗುರುತಿಸುವ ನಿಟ್ಟಿನಲ್ಲಿ ಸರಿಯಾದ ಪ್ರಯತ್ನಗಳು ಈವರೆಗೆ ನಡೆದಿಲ್ಲ. ಈ ಅಪರೂಪದ ಶಿಲ್ಪ ಕುರಿತು ನಾನಾ ತೆರನಾಗಿ ವ್ಯಾಖ್ಯಾನಿಸುವ ಪ್ರವೃತ್ತಿಯೂ ಇಲ್ಲಿ ಸಾಗಿ ಬಂದಿದೆ. ಶಿಲ್ಪಲಕ್ಷಣಗಳನ್ನು ಗಮನಿಸಿದರೆ, 'ರಾಜಾಸನ'ದಲ್ಲಿ ಠೀವಿಯಿಂದ ಕುಳಿತಿರುವ ವ್ಯಕ್ತಿ ಮೈದುಂಬಿಕೊಂಡಿರುವ 'ಸುಖಪುರುಷ'. ಸರ್ವಾಭರಣಯುಕ್ತನಾಗಿದ್ದಾನೆ. ಕಂಠಹಾರ, ಮುತ್ತಿನಸರ, ಮುತ್ತಿನ ಯಜ್ಞೋಪವೀತ, ನಡುಪಟ್ಟಿ, ಭುಜಾಭರಣ, ತೋಳಬಂದಿ, ಕೈ-ಕಾಲುಗಳಲ್ಲಿ ಕಡಗ, ಕಿವಿಯಲ್ಲಿ ಕುಂಡಲಗಳಿವೆ. ಧೋತಿ ಧರಿಸಿದ್ದಾನೆ. ಹಣೆ ಮೇಲೆ ಬೊಟ್ಟಿನ ಗುರುತಿದೆ. ಬಲಹಸ್ತದ ಬೆರಳುಗಳಿಂದ ಕೊರಳಹಾರವನ್ನು ನವಿರಾಗಿ ನೀವುತ್ತ ಕುಳಿತಿರುವ ಭಂಗಿಯಲ್ಲಿರುವ ಈತ, ತನ್ನ ಎಡ ಹಸ್ತದಲ್ಲಿ ಮಧುಪಾತ್ರೆಯಂತೆ ತೋರುವ ಕುಂಡಿಕೆಯನ್ನು ಹಿಡಿದಿರುವನು. ಇಲ್ಲಿ ಗಮನಿಸುವಂಥಾ ಮುಖ್ಯ ಸಂಗತಿಯೆಂದರೆ, ಈ ವ್ಯಕ್ತಿ ಧರಿಸಿರುವ ಅತ್ಯಂತ ಕುತೂಹಲ ಹುಟ್ಟಿಸುವ ವಿಚಿತ್ರವಾದ ಹಾಗೂ ಆಲಂಕಾರಿಕವಾದ ಹ್ಯಾಟನ್ನು ಹೋಲುವ ತಲೆಯುಡಿಗೆ. ಇದು ಈ ವ್ಯಕ್ತಿಯ ರಸಿಕತನದ ಪ್ರತೀಕದಂತಿದೆ. ಎಡ ಮತ್ತು ಬಲ - ಈ ಎರಡೂ ಬದಿಗಳಲ್ಲಿ ಭುಜದಿಂದ ಕೆಳಕ್ಕೆ ಮೊಳಕೈವರೆಗೂ ಬಾಗಿರುವ ಹ್ಯಾಟಿನ ಎರಡು ತುದಿಗಳಲ್ಲೂ ಪರಸ್ಪರ ವಿರುದ್ಧ ದಿಕ್ಕಿಗೆ ತಲೆ ತಿರುಗಿಸಿ ನೋಡುತ್ತಿರುವ ಎರಡು ಗಿಳಿಗಳು ಕುಳಿತಿವೆ; ಅಥವಾ ಕುಳಿತಿರುವಂತೆ ಅಂಥಾ ಆ ಕೃತಿಗಳನ್ನು ಹ್ಯಾಟಿನ ತುದಿಗಳಲ್ಲಿ ಬಿಡಿಸಲಾಗಿದೆ. ತಲೆಗೂದಲನ್ನು ನೆತ್ತಿಯ ಮೇಲೆ ತುರುಬಿನಂತೆ ವಿನ್ಯಾಸಗೊಳಿಸಿದೆ. ಈ ಎರಡು ಗಿಳಿ ಆಕೃತಿಗಳೂ ತಮ್ಮ ಕೊರಳುಗಳಲ್ಲಿ ಬಳೆಗಳನ್ನು ಹೊಂದಿವೆ.

ಈ ವ್ಯಕ್ತಿಯ ಉಬ್ಬುಶಿಲ್ಪಕ್ಕೆ ಕಲಾತ್ಮಕ ಮೆರುಗು ಉಂಟಾಗಿರುವುದು ಇದರ ಎಡ-ಬಲಗಳಲ್ಲಿ ಆಕರ್ಷಕವಾಗಿ ಬಿಡಿಸಲಾಗಿರುವ ಬಳ್ಳಿಯಂಥಾ ವಿನ್ಯಾಸಗಳಿಂದ. ಹೂವು ಮತ್ತು ಎಲೆಗುಂಪಲಿನಿಂದ ಕೂಡಿದ ದಟ್ಟ ಸಸ್ಯ ಸಮೂಹದ ಮಧ್ಯೆ ಈ ವ್ಯಕ್ತಿ ವಿಹರಿಸುತ್ತಿರುವಂತೆ ಇದರಿಂದ ಭಾಸವಾಗುತ್ತದೆ. ಆದರೆ ಬಳ್ಳಿಯಂಥಾ ವಿನ್ಯಾಸಗಳನ್ನು ಗಮನಿಸಿದರೆ, ಅವುಗಳ ಕಾಂಡಗಳ ಮೇಲೆ ಮೂಡಿಸಲಾಗಿರುವ ಮೂರು-ಮೂರು ಗೆಣ್ಣುಗಳು ಇವು ಕಬ್ಬಿನ ಜಲ್ಲೆಗಳಿರಬಹುದೆಂಬ ಸಂದೇಹ ಮೂಡಿಸುತ್ತವೆ. ಪ್ರಾಯಶಃ ಈ ವ್ಯಕ್ತಿಯ ಗುರುತನ್ನು ಸ್ಪಷ್ಟೀಕರಿಸಲು ಇಂಥಾ ಸಂಕೇತವನ್ನು ಮೂಡಿಸಿರಬಹುದು.

ಪ್ರಸ್ತುತ ವ್ಯಕ್ತಿಶಿಲ್ಪ ಕುರಿತು ಪ್ರಚಲಿತವಿರುವ ಹೇಳಿಕೆಗಳು ಕುತೂಹಲಕಾರಿಯಾದುವು. ಇದನ್ನು ಶುಕಮುನಿ, ರಾಜಯೋಗಿ, ಕಾಮ (ಮನ್ಮಥ), ಇತ್ಯಾದಿಯಾಗಿ ಗುರುತಿಸಲು ಪ್ರಯತ್ನಿಸಿರು ವುದುಂಟು. ಮೊದಲನೆಯದಾಗಿ, ಶುಕಮುನಿ ಅಥವಾ ಶುಕ ಮಹರ್ಷಿಯ ಹೆಸರನ್ನು ಈ ಶಿಲ್ಪಕ್ಕೆ ಆರೋಪಿಸಿರುವ ಹಿನ್ನೆಲೆಯಲ್ಲಿ ಇದರಲ್ಲಿ ಚಿತ್ರಿತವಾಗಿರುವ ಗಿಳಿಗಳೇ ಕಾರಣ ಎನ್ನಬಹುದು. ಆದರೆ ವ್ಯಾಸ ಮಹರ್ಷಿಯ ಪುತ್ರನಾದ ಶುಕಮಹರ್ಷಿಯ ಶಿಲ್ಪವನ್ನು ಇಲ್ಲಿ ಬಿಡಿಸುವ ಪ್ರಮೇಯವೇ ಕಂಡುಬರುವುದಿಲ್ಲ. ಶುಕೀ (ಹೆಣ್ಣು ಗಿಳಿ) ರೂಪವನ್ನು ತಾಳಿ ಬಂದ ಘೃತಾಚಿಯೆಂಬ ಅಪ್ಸರಸಿಯನ್ನು ನೋಡಿದ ವ್ಯಾಸ ಮಹರ್ಷಿ ಆಕೆಯಲ್ಲಿ ಮೋಹಗೊಂಡ ಸಂದರ್ಭ ಪುರಾಣೋಕ್ತವಾಗಿದ್ದರೂ ಶುಕಮುನಿಯ ಜನನ ಪ್ರಕ್ರಿಯೆ ಸಂಬಂಧದಲ್ಲಿ ಈ ಶಿಲ್ಪ ಯಾವ ರೀತಿಯಲ್ಲೂ ಸಮರ್ಥನೆ ನೀಡುವುದಿಲ್ಲ. ಅಲ್ಲದೆ, ಋಷಿಯಾದ ಶುಕನನ್ನು 'ಮೋಜುಗಾರ' ನಂತಿರುವ ಪ್ರಸ್ತುತ ಶಿಲ್ಪದ ವ್ಯಕ್ತಿಗೆ ಹೋಲಿಸುವುದೇ ಅಸಂಗತ ಎನ್ನಬೇಕಾಗುತ್ತದೆ.

ಹಾಗೆಯೇ, ಈ ವ್ಯಕ್ತಿಯನ್ನು 'ರಾಜಯೋಗಿ'ಯೆಂತಲೂ ಕರೆಯುವುದುಂಟು. ಆದರೆ ಕೇವಲ ರಾಜಲಕ್ಷಣಗಳಿಂದ ಕೂಡಿದ ಈ ವ್ಯಕ್ತಿ 'ಜಿತೇಂದ್ರಿಯನಾಗಿ ಪರಮಾತ್ಮನಲ್ಲೇ ಚಿತ್ತವನ್ನು ನಿಲ್ಲಿಸಿ ಲೌಕಿಕ ವಿಷಯಗಳಾವುದರಲ್ಲೂ ಆಸೆಯನ್ನು ತ್ಯಜಿಸಿದ ಹಾಗೂ ಸ್ವರ್ಣ, ಲೋಷ್ಟ, ಗೃಹ, ವನ ಮುಂತಾದ ಎಲ್ಲ ವಿಷಯಗಳಲ್ಲೂ ಸಮಬುದ್ಧಿಯುಳ್ಳ ಸನ್ಯಾಸಿ' ಅಥವಾ ಯೋಗಿಯ ಯಾವ ಲಕ್ಷಣವನ್ನೂ ಹೊಂದಿಲ್ಲದಿರುವುದು ಸ್ಪಷ್ಟ. ಆದ್ದರಿಂದ 'ಚಿತ್ತವೃತ್ತಿ ನಿರೋಧ ಮಾಡಿರುವ ತಪಸ್ವಿ'ಯನ್ನು ಈ ವ್ಯಕ್ತಿಯೊಂದಿಗೆ ಹೋಲಿಸುವುದು ಸಹಾ ಅಸಂಬದ್ಧವಾದುದು ಎನ್ನಲಡ್ಡಿಯಿಲ್ಲ. ಹದಿನಾಲ್ಕನೇ ಶತಮಾನದಲ್ಲಿ ಇಲ್ಲಿದ್ದ ವಿಜಯನಗರ ಸಾಮಂತರವೆಂದು ಗುರುತಿಸಬಹುದಾದ ಒಂದೆರಡು ಶಿಲ್ಪಗಳು ಬೆಟ್ಟದಲ್ಲಿ ಅವರೇ ನಿರ್ಮಿಸಿದ ದೇವಾಲಯ, ಮಂದಿರಗಳಲ್ಲಿ ಕಂಡುಬಂದಿವೆ. ಪ್ರಸ್ತುತ ಶಿಲ್ಪ ಅವುಗಳಿಗೆ ಯಾವ ತೆರನಲ್ಲೂ ಹೋಲುವುದಿಲ್ಲ; ಯಾವುದೇ ಚಾರಿತ್ರಿಕ ಸಂದರ್ಭವನ್ನೂ ನೆನಪಿಸುವುದಿಲ್ಲ.

ಈ ಕೋಟೆಯ ಮೂರನೇ ಹೆಬ್ಬಾಗಿಲನ್ನು ಕಾಮನಬಾಗಿಲೆಂದು ಹಾಗೂ ಈ ಹೆಬ್ಬಾಗಿಲಿನ ಪಕ್ಕದ ಕಂದಕದಲ್ಲಿರುವ ಬಾವಿಯನ್ನು ಕಾಮನಬಾವಿಯೆಂದು ಕರೆಯಲಾಗುತ್ತದೆಂಬುದನ್ನು ಮೇಲೆಯೇ ಹೇಳಿದೆ. ಆದರೆ ಗಣೇಶ ಮತ್ತು ಭೈರವರ ಬಿಂಬಗಳ ಜೊತೆಗೆ ಕಾಮ ಅಥವಾ ಮನ್ಮಥನ ಶಿಲ್ಪವನ್ನೇಕೆ ಒಂದೇ ಕಲ್ಲಿನಲ್ಲಿ ಕಟೆಯಲಾಗಿದೆಯೆಂಬ ಜಿಜ್ಞಾಸೆ

ಎದುರಾಗುತ್ತದೆ; ಇದು ಔಚಿತ್ಯದ ಪ್ರಶ್ನೆಯಾಗಿಯೂ ನಿಲ್ಲುತ್ತದೆ. ಈ ಶಿಲ್ಪ ಕಾಮ ಅಥವಾ ಮನ್ಮಥನದೇ ಆದಲ್ಲಿ ಆತನ ಲಕ್ಷಣಗಳೇನು? ಟಿ.ಎ. ಗೋಪಿನಾಥರಾಯರು ಉಲ್ಲೇಖಿಸಿರುವಂತೆ, ರತಿಸಹಿತವಿರುವ ಮನ್ಮಥ ಅಥವಾ ಕಾಮ ತನ್ನ ಕೈಗಳಲ್ಲಿ ಐದು ಬಗೆಯ ಹೂವಿನ ಬಾಣಗಳನ್ನು ಹಾಗೂ ಕಬ್ಬಿನ ಬಿಲ್ಲನ್ನು ಹಿಡಿದಿರುತ್ತಾನೆ. ಕೆಲವೊಮ್ಮೆ ಒಂದೇ ಪುಷ್ಪ-ಬಾಣ ಇರಬಹುದು. ಬಲಗೈಯಲ್ಲಿ ಬಾಣವಿದ್ದರೆ ಎಡಗೈಯಲ್ಲಿ ಬಿಲ್ಲು ಇರುತ್ತದೆ. ಪೀಠ ಅಥವಾ ರಥದಲ್ಲಿರುವ ಈತನ ರಥದ ಮೇಲಿನ ಪತಾಕೆಯಲ್ಲಿ ಮತ್ಸ್ಯಚಿಹ್ನೆ ಇರುತ್ತದೆ. ಈತನ ಅನುಚರರೆಂದರೆ ಮದ, ರಾಗ, ವಸಂತ ಹಾಗೂ ಶಿಶಿರಋತು. ಕೆಲವೊಮ್ಮೆ ಈತನೊಡನೆ ಈ ಅನುಚರರನ್ನು ಚಿತ್ರಿಸದೇ ಇರಬಹುದು (ಎಲಿಮೆಂಟ್ಸ್ ಆಫ್ ಹಿಂದೂ ಐಕನಾಗ್ರಫಿ, ೨-೧, ಪು. ೧೪೮-೪೯). ವಸಂತಮಾಸದಲ್ಲಿ ಮನ್ಮಥ ಆಗಮಿಸುವ ಪರಿಯನ್ನು ಸಾಕಷ್ಟು ಮಂದಿ ಕನ್ನಡ ಕವಿಗಳೂ ಗುರುತಿಸಿದ್ದಾರೆ. ಉದಾಹರಣೆಗೆ, ''ಶುಕಪಿಕದುಂದುಭಿಧ್ವನಿಗಳುಣ್ಮೆ ಮನೋಭವ ರಾಜನಾ ವಸಂತಕ ಸಖಯುಕ್ತನಾಗಿ ಬರಲ್'' ಎನ್ನುತ್ತಾನೆ ದೇವಕವಿ (ಕುಸುಮಾವಳೀ ಕಾವ್ಯ, ೧-೯೪). ಆದರೆ ಕೆಲವನ್ನು ಹೊರತುಪಡಿಸಿದರೆ ಪ್ರಸ್ತುತ ಶಿಲ್ಪ ಈ ಮೇಲಿನ ವಿವರಣೆಗಳಲ್ಲಿರುವ ಬಹುಪಾಲು ಲಕ್ಷಣಗಳನ್ನು ಹೊಂದಿಲ್ಲದಿರುವುದು ಸ್ಪಷ್ಟ.

ಆದರೂ ಕಾಮ ಅಥವಾ ಮನ್ಮಥನ ಹೆಸರು ಇಲ್ಲಿಯ ಬಾಗಿಲು ಮತ್ತು ಬಾವಿಗಳಿಗೆ ಬಂದಿರುವ ಕಾರಣವನ್ನು ಹುಡುಕಲೇಬೇಕಾಗುತ್ತದೆ. ಮೊದಲಿಗೆ, ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, 'ಕಾಮ-ಮನ್ಮಥ-ಮದನ' - ಈ ಪರ್ಯಾಯ ನಾಮಗಳಿಂದ ಕರೆಯಲ್ಪಟ್ಟಿರುವ ಊರು, ಕೇರಿ, ಅಗ್ರಹಾರ, ಕೆರೆ, ಬಾವಿ, ಕಟ್ಟೆ, ಮಡು, ಇತ್ಯಾದಿಗಳು ಕರ್ನಾಟಕದಲ್ಲೆಲ್ಲ ಹರಡಿವೆ, ಮುಖ್ಯವಾಗಿ, ನಿಸರ್ಗವಾಚಿಯಾಗಿ ಇವು ಬಳಕೆಗೊಂಡಿರುವುದು ಗಮನಾರ್ಹ. ಉದಾಹರಣೆಗೆ, ಕಾಮ(ಮೇ) ನಹಳ್ಳಿ, ಕಾಮನೂರು, ಕಾಮಾಪುರ, ಕಾಮನಘಟ್ಟ, ಕಾಮನಕೇರಿ, ಕಾಮನದುರ್ಗ, ಕಾಮನಕೊಪ್ಪ, ಕಾಮನ ಅಗ್ರಹಾರ, ಕಾಮನಟಗಿ; ಮನ್ಮಥನಾಳ; ಮದನಹಾಳ, ಮದನ(ರ) ಕಂಡಿ, ಮದನ(ರ) ಮಟ್ಟಿ, ಮದನೀಪುರ, ಮದನೂರು, ಮದಗುಣಕಿ, ಮದನಾಪುರ, ಮದನಕಲ್ಲು, ಮದನಹಳ್ಳಿ, ಇತ್ಯಾದಿಗಳು ಸ್ಥಳವಾಚಿಗಳಾಗಿದ್ದರೆ, ಕಾಮಸಮುದ್ರ, ಕಾಮಸಾಗರ, ಕಾಮನಕೆರೆ, ಕಾಮನಕಟ್ಟೆ; ಮದನಬಾ(ಭಾ)ವಿ, ಮದಭಾವಿ, ಮದನಮಡು, ಮದನ(ರ)ಗೆರೆ, ಇತ್ಯಾದಿಗಳು ಜಲವಾಚಿಯೆನಿಸಿವೆ. ಇಲ್ಲಿ ಕಾಮ-ಮನ್ಮಥ-ಮದನ- ಈ ಪರ್ಯಾಯ ನಾಮಗಳು ಹೇಗೆ ಸಮಾನವಾಗಿ ಪ್ರಭಾವ ಬೀರಿವೆಯೆನ್ನುವುದನ್ನು ಗಮನಿಸಬಹುದು. ಮುಖ್ಯವಾಗಿ, ಈ ಹೆಸರುಗಳು ಜಲಸೂಚಿಯಾಗಿಯೂ ಇರುವುದನ್ನು ಪ್ರಸ್ತುತ ಅಧ್ಯಯನದ ನೆಲೆಯಲ್ಲಿ ಮಹತ್ವದ್ದೆಂದು ಪರಿಗಣಿಸಬೇಕಾಗುತ್ತದೆ. ಈ ಸಂಬಂಧದಲ್ಲಿ ಎರಡು ಸಜೀವ ಉದಾಹರಣೆಗಳು ಇಂತಿವೆ:

ಚಿತ್ರದುರ್ಗ ಕೋಟೆ ಕಂದಕದ ಕಾಮನಬಾವಿಯಂತೆಯೇ ಅದೇ ಹೆಸರಿನ ಆದರೆ ಅಷ್ಟು ವಿಸ್ತಾರವಲ್ಲದ-ಬಾವಿಯೊಂದು ಗುಲ್ಬರ್ಗಾ ಕೋಟೆಯ ಬಲ ಕಂದಕದಲ್ಲಿರುವುದು ಗಮನಾರ್ಹ. ಹಂಪಿ ವಿರೂಪಾಕ್ಷ ದೇವಾಲಯದ ಉತ್ತರ ಬಾಗಿಲಿನ ಬಲಗಡೆ ಇರುವ ಪ್ರಸಿದ್ಧವಾದ ಮನ್ಮಥತೀರ್ಥ ಅಥವಾ ಮನ್ಮಥಕುಂಡವನ್ನೂ ಇಲ್ಲಿ ನೆನೆಯಬಹುದು. ಸಂಸ್ಕೃತಾನುಕರಿಸಿದ ಈ ಹೆಸರು ಕನ್ನಡದಲ್ಲಿ 'ಕಾಮನಬಾವಿ' ಎಂದೇ ಆಗುತ್ತದಲ್ಲವೇ? ಇದಕ್ಕೆ ಪರ್ಯಾಯವಾಗಿ ವಿದ್ವಾಂಸರು ಸಮರ್ಥಿಸಲೆತ್ನಿಸಿರುವ 'ಮನ್ಮುಖತೀರ್ಥ'ವನ್ನು ಗಮನಿಸಿದ ನಂತರವೂ ಈ ಮಾತನ್ನು ಹೇಳಬೇಕಾಗುತ್ತದೆ. ಇವುಗಳಿಗೆ ಯಾವುದೇ ಹಿನ್ನೆಲೆ ಇದ್ದರೂ ಚಿತ್ರದುರ್ಗ ಕೋಟೆ ಬಾಗಿಲು ಮತ್ತು ಕಂದಕದ ಬಾವಿಗಳಿಗೆ 'ಕಾಮ'ನ ಹೆಸರು ಬಂದಿರುವುದಕ್ಕೆ ನಿರ್ದಿಷ್ಟ ಕಾರಣ ಇರಲೇಬೇಕೆನಿಸುತ್ತದೆ.

ತಂತ್ರದಲ್ಲಿ ಕಾಮ ಅಥವಾ ಮನ್ಮಥನಿಗೆ ಇರುವ ಸ್ಥಾನದ ಬಗೆಗೆ ಪ್ರತ್ಯೇಕವಾಗಿ ಚರ್ಚಿಸುವ ಅಗತ್ಯವಿದೆ. ಪ್ರಸ್ತುತ ಕಾಮನಬಾವಿಯನ್ನು ಗಮನಿಸಿದರೆ, ಇದರ ವಿನ್ಯಾಸ 'ಯಂತ್ರರಾಜ' ಎಂದು ಪರಿಗಣಿತವಾದ ಶ್ರೀಚಕ್ರಯಂತ್ರವನ್ನು ನೇರವಾಗಿ ಹೋಲುತ್ತದೆ. ಈ ಹಿನ್ನೆಲೆಯಲ್ಲಿ ಅಂದಿನವರ - ಮುಖ್ಯವಾಗಿ ರಾಜವರ್ಗದವರ, ನಂಬಿಕೆ ಆಚರಣೆಗಳ ಪ್ರತೀಕವಾಗಿರುವಂತೆ ಕಂಡುಬರುತ್ತದೆ ಈ ಬಾವಿ ಎನ್ನಬೇಕು. ವಿಜಯನಗರ ಸಾಮಂತರು ೧೩೫೫-೫೭ರ ಪೂರ್ವದಲ್ಲೆ 'ಕಾಮನಬಾಗಿಲು' ಮಹಾದ್ವಾರ ಮತ್ತು ಕೋಟೆ ಪ್ರಾಕಾರಗಳನ್ನು ಮಾಡಿಸಿದ್ದರಿಂದ, ಅವರ ಮನೋಧರ್ಮದಂತೆ ಕಾಮನಬಾವಿ ಸಹಾ ಆಗಲೇ ನಿರ್ಮಾಣಗೊಂಡಿದ್ದಿರಬಹುದು. ಆದರೆ ಚಿತ್ರದುರ್ಗ ನಾಯಕರನ್ನು ಕುರಿತ ಜನಪದ ಸಾಹಿತ್ಯದಲ್ಲಿ ಕಾಮನಬಾವಿ ಕಟ್ಟಿಸಿದವನು ಕೊನೆಯ ದೊರೆ ರಾಜಾ ವೀರಮದಕರಿನಾಯಕ (೧೭೭೪-೧೭೭೯) ಎಂತಲೂ ಹೇಳಿದೆ. ಈ ನಾಯಕರು ವಿಜಯನಗರ ಕಾಲದ ಕೋಟೆ, ಕಟ್ಟಡ ಮೊದಲಾದುವನ್ನು ಮರುನಿರ್ಮಿಸಿರುವ ಉದಾಹರಣೆಗಳೂ ಇರುವುದರಿಂದ ವೀರಮದಕರಿನಾಯಕ ತನ್ನ ಅವಧಿಯಲ್ಲಿ ಈ ಬಾವಿಯನ್ನು ಮರು ನಿರ್ಮಿಸಿದನೋ ಹೇಗೋ ಪರಿಶೀಲಿಸಬೇಕಿದೆ. ಏನೇ ಇದ್ದರೂ ಬಾವಿಯ ವಿನ್ಯಾಸಕ್ಕೂ ಇಲ್ಲಿಯ ಕೋಟೆ ಪ್ರಾಕಾರದ ಮೇಲಿನ ಪ್ರಸ್ತುತ 'ಕಾಮ'ನ ಶಿಲ್ಪಕ್ಕೂ ನೇರವಾದ ಸಂಬಂಧ ಇರುವಂತೆ ತೋರುತ್ತದೆ. ಅಲ್ಲದೆ, ಇಲ್ಲಿಯ ಮಹಾದ್ವಾರವೂ ಕಾಮನ ಹೆಸರಿನಿಂದಲೇ ಕರೆಯಲ್ಪಟ್ಟಿರುವುದು ತೀರಾ ಸಹಜ. ಚಿತ್ರದುರ್ಗ ನಾಯಕ ಅರಸರು 'ಕಾಮಗೇತಿ' ಬೆಡಗಿಗೆ ಸೇರಿದವರಾದ್ದರಿಂದ ಅದರ ಬೆಡಗಿನ ಹೆಸರೇ ಇಲ್ಲಿಯ ಬಾಗಿಲು

ಮತ್ತು ಬಾವಿಗಳಿಗೆ ಬಂದಿದೆಯೆಂಬ ವಾದವಿದ್ದರೂ, ಇದು ಕೇವಲ ಕಪೋಲಕಲ್ಪಿತ ಕಥೆಯೆಂಬುದು ಮೇಲ್ನೋಟಕ್ಕೇ ತಿಳಿಯುತ್ತದೆ.

ಮೇಲಿನ ವಿವರಗಳನ್ನು ಇಲ್ಲಿ ಮರುಪರಿಶೀಲಿಸುವುದಾದರೆ, ಪ್ರಸ್ತುತ ವ್ಯಕ್ತಿಶಿಲ್ಪ ಕಾಮ ಅಥವಾ ಮನ್ಮಥನದೇ ಆಗಿರುವ ಸಾಧ್ಯತೆ ಹೆಚ್ಚುತ್ತದೆ. ಶಿಲ್ಪಲಕ್ಷಣಗಳೂ ಹೆಚ್ಚು ಕಡಮೆ ಇದನ್ನೆ ದೃಢೀಕರಿಸುವಂತಿವೆ. ಈ ಪ್ರಾಕಾರಶಿಲ್ಪ ಮತ್ತು ಸನಿಹದ ಬಾವಿಗಳನ್ನು ಗಮನಿಸಿದರೆ ಇವು ತಂತ್ರ ಸಂಬಂಧಪಟ್ಟುವೂ ಆಗಿರಬಹುದು. ಪ್ರಸ್ತುತ ಶಿಲ್ಪದ ವಿವರಗಳ ಹಿನ್ನೆಲೆಯಲ್ಲಿ,. ವನದಲ್ಲಿ ವಿಹರಿಸುತ್ತಿರುವ ವ್ಯಕ್ತಿ ಕಾಮ ಅಥವಾ ಮನ್ಮಥನೇ ಹೌದೆಂಬುದನ್ನು ನಿರಾಕರಿಸುವ ಯಾವ ಕಾರಣಗಳಿಲ್ಲದಿದ್ದರೂ ಈ ಅಂಶವನ್ನು ಅಧಿಕೃತವನಾಗಿ ಒಪ್ಪುವತನಕ ಮರುಪರಿಶೀಲಿಸಲು ಅವಕಾಶವಿದ್ದೇ ಇದೆ.

## ೨. ಏಕನಾಥಮ್ಮ ಗುಡಿಯ ಹುಟ್ಟು ಬಂಡ ಮೇಲಿನ ಉಬ್ಬುಶಿಲ್ಪ

ಚಿತ್ರದುರ್ಗ ಚರಿತ್ರೆಯಲ್ಲಿ ಗಮನಾರ್ಹ ಸ್ಥಾನ ಪಡೆದ ಸ್ಥಳೀಯ ದೇವತೆಗಳಲ್ಲಿ ಏಕನಾಥಮ್ಮಳೂ ಒಬ್ಬಳು. ಏಕನಾಥೇಶ್ವರಿ ಯಂತಲೇ ಪ್ರಸಿದ್ಧಳು. ಕೋಟೆಯ ಮಧ್ಯರಂಗದ ತೆವರಿನ ಮೇಲೆ ಈ ದೇವತೆಯ ಗುಡಿಯಿದ್ದು, ಬೃಹತ್ ಕಲ್ಲಾಸರೆಯಲ್ಲಿ ಇದು ನೆಲೆಗೊಂಡಿದೆ. ಹುಟ್ಟುಬಂಡೆಯಲ್ಲಿ ಪ್ರಭಾವಳಿ ಸಹಿತ ೬೧ ಸೆಂ.ಮೀ. ಎತ್ತರದಲಷ್ಟು ಮೂಡಿಸಲಾಗಿರುವ ರುಂಡ ರೂಪದಲ್ಲಿದೆ ಈ ದೇವತೆ. *ತಾರಾ ಭಗವತಿಯೆಂಬ ಬೌದ್ಧ ದೇವತೆಯೇ ಏಕನಾಥೇಶ್ವರಿಯೆಂದು ಭಾವಿಸಲಾಗುತ್ತದೆ.* ಮೂಲದಲ್ಲಿ ಕಲ್ಲಾಸರೆಯಲ್ಲಿ ಮುಕ್ತವಾಗಿ ನೆಲಸಿದ್ದ ಈ ದೇವತೆಗೆ ಗೂಡಿನಂಥ ಪುಟ್ಟ ಗುಡಿ ಕಟ್ಟಿದವರು ವಿಜಯನಗರದ ಸಾಮಂತರೆಂದು ಭಾವಿಸಲು ಅವಕಾಶವಿದೆ. ಇವರಿಗೆ ಸಂಬಂಧಿಸಿದ ಒಂದೆರಡು ಕುರುಹುಗಳು ಈ ಗುಡಿಯ ಸುತ್ತಮುತ್ತಲಲ್ಲಿ ಕಂಡುಬಂದರೂ ಅವರು ಈ ದೇವತೆಯ ಭಕ್ತರಾಗಿದ್ದರೆನ್ನಲು ಆಧಾರಗಳಿಲ್ಲ. ಆದರೆ ಈ ದೇವತೆಯ ನಿಷ್ಠಾವಂತ ಭಕ್ತರಾಗಿದ್ದವರು ಹಾಗೂ ಈಗಿನ ಸುಂದರ ದೇವಾಲಯ ನಿರ್ಮಿಸಲು ಕಾರಣ ರಾದವರು ಚಿತ್ರದುರ್ಗ ನಾಯಕ ಅರಸರೇ.

ಪ್ರಸ್ತುತ ಶಿಲ್ಪ ಕಂಡುಬಂದಿರುವುದು, ಈ ದೇವಾಲಯದ ಮಹಾಮಂಟಪವನ್ನು ದಾಟಿ ಮೆಟ್ಟಿಲುಗಳನ್ನು ಏರಿದರೆ ಸಿಕ್ಕುವ ಇನ್ನೊಂದು, ಅಂದರೆ ಮಹಾಮಂಟಪಕ್ಕೇ ಹೊಂದಿಕೊಂಡಿರುವ ಮೂಲ ಮುಖಮಂಟಪದ ಹುಟ್ಟುಬಂಡೆಯ ಮೇಲೆ. ಈ ಹುಟ್ಟು ಬಂಡೆಯನ್ನೆ ಆಧರಿಸಿ ಈ ಮೂಲ ಮುಖಮಂಟಪ ನಿರ್ಮಾಣ ಗೊಂಡಿದೆ. ಶಿಲ್ಪ ಕಲ್ಲಾಸರೆಯ ಗರ್ಭಗುಡಿಯ ಮುಖ್ಯದ್ವಾರದ ಬಲಬದಿಯ ಬಂಡೆಯ ಮೇಲಿದೆ. ವಾಸ್ತವದಲ್ಲಿ, ಗುಡಿಯ ಒಳಗೇ ಇರುವಂಥ ಶಿಲ್ಪ ಇದು. ದೇವಿಯ ದರ್ಶನಕ್ಕೆಂದು ಈ ಗುಹಾಲಯ ಅಥವಾ ಗರ್ಭಗುಡಿ ಪ್ರವೇಶಿಸುವವರು ಹಾಗೂ ಹೊರಬಾಗಿಲಲ್ಲೆ ನಿಂತು ದರ್ಶನ ಮಾಡುವವರೆಲ್ಲರೂ ಈ ಶಿಲ್ಪವನ್ನು ಗಮನಿಸುವುದುಂಟು. ೬೦ ಸೆಂ.ಮೀ. ಉದ್ದ, ೪೦ ಸೆಂ.ಮೀ. ಅಗಲ ವಿಸ್ತಾರದಲ್ಲಿ ಬಂಡೆಯನ್ನೆ ತೋಡಿ ಈ ಆಕೃತಿ ಮೂಡಿಸಲಾಗಿದೆ.



ವಾಸ್ತವದಲ್ಲಿ, ಈ ಶಿಲ್ಪ ಒಬ್ಬ ವೀರನದು. ಈತ ತನ್ನ ಬಲಗೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿದ್ದರೆ, ಇಳಿಬಿಟ್ಟಿರುವ ಎಡಗೈಯಲ್ಲಿ ಒರೆಯಂಥ ಸಾಧನ ಹಿಡಿದಿದ್ದಾನೆ. ವೀರಗಚ್ಚೆ ಹಾಕಿದ್ದಾನೆ. ರಾಜಪೋಷಾಕು ತೊಟ್ಟು ಸರ್ವಾಭರಣ ಭೂಷಿತನಾಗಿದ್ದಾನೆ. ಸೊಂಟದ ಬಲಭಾಗದಲ್ಲಿ ಕಠಾರಿ ಸಿಕ್ಕಿಸಿ ಕೊಂಡಿರುವನು. ಈತ ಧರಿಸಿರುವ ಪೇಟ ಅಥವಾ ತಲೆಯುಡಿಗೆ ನಾಯಕ ಅರಸರು ಸಾಮಾನ್ಯವಾಗಿ ಇಟ್ಟುಕೊಳ್ಳುವ ವಿಶಿಷ್ಟ ಪೇಟದಂತೆಯೇ ಇದೆ. ಚಿತ್ರದುರ್ಗ ಕೋಟೆಯಲ್ಲಿ ನಾಯಕ ಅರಸರ ಕಾಲದ ವಿವಿಧ ಸ್ಮಾರಕಗಳಲ್ಲಿ ಕಂಡುಬಂದಿರುವ ರಾಜರು ಮತ್ತು ರಾಜ

ಸಂಬಂಧಿಗಳ ಶಿಲ್ಪಗಳನ್ನು ಇದು ನಿಕಟವಾಗಿ ಹೋಲುತ್ತದೆ. ಆದ್ದರಿಂದ ಪ್ರಸ್ತುತ ಶಿಲ್ಪ ಸಹಾ ಓರ್ವ ನಾಯಕನದೇ ಎಂಬುದು ಸ್ಪಷ್ಟ. ಆದರೆ ಈ ಶಿಲ್ಪ ಯಾವ ನಾಯಕನದು?

ಚಿತ್ರದುರ್ಗ ನಾಯಕ ಸಂಸ್ಥಾನಕ್ಕೆ ಅಡಿಗಲ್ಲನ್ನಾಕಿದವನು ದುರ್ಗದ ಮೊದಲನೇ ಅರಸ ಮತ್ತಿ ತಿಮ್ಮಣ್ಣನಾಯಕ (೧೫೬೮-೧೫೮೮). ಈ ನಾಯಕ ವಿಜಯನಗರದ ರಾಜಪ್ರತಿನಿಧಿಯಾಗಿ ಚಿತ್ರದುರ್ಗದಲ್ಲಿ ನೇಮಕನಾದವನು. ಈತ ಮಹತ್ವಾಕಾಂಕ್ಷಿಯಾದ್ದರಿಂದ ವಿಜಯನಗರ ಅಥವಾ ಕೇಂದ್ರ ಸರ್ಕಾರವನ್ನು ಲೆಕ್ಕಿಸದೆ, ತನ್ನ ಇಚ್ಛೆಯಂತೆ ದುರ್ಗದಲ್ಲಿ ಸ್ವತಂತ್ರವಾಗಿ ನಿರ್ಮಾಣ ಕಾರ್ಯಗಳನ್ನು ಕೈಗೊಂಡ. ೧೫೭೫ರಿಂದೀಚೆಗೆ ಬೆಟ್ಟದಲ್ಲಿ ಕೋಟೆ, ಅರಮನೆ, ದೇವಾಲಯ, ಕೆರೆ ಮೊದಲಾದುವನ್ನು ಮಾಡಿಸಿದ. ಈತ ಶ್ರದ್ಧೆಯಿಂದ ನಿರ್ಮಿಸಿದ ದೇವಾಲಯಗಳಲ್ಲಿ ಏಕನಾಥಮ್ಮನದೂ ಒಂದು.

ಏಕನಾಥಮ್ಮನ ಗುಡಿ ನಿರ್ಮಾಣಕ್ಕೆ ಸಂಬಂಧಿಸಿದಂತೆ ಈ ಅರಸರ ವಂಶಾವಳಿ ಪ್ರಸ್ತಾಪಿಸುವ ಕಥೆ ಕುತೂಹಲಕಾರಿಯಾದುದು. ತಿಮ್ಮಣ್ಣನಾಯಕನು ಬೆಟ್ಟದಲ್ಲಿ ನೆಲ್ಲಿಕಾಯಿ ಸಿದ್ದಪ್ಪನಬೆಟ್ಟದ ಸುತ್ತುಕೋಟೆ, ರಣಮಂಡಲ ಸುತ್ತುಕೋಟೆ, ವನಿಕೆಕಂಡಿಬಾಗಿಲು ಸುತ್ತುಕೋಟೆ - ಈ ಮೂರು ಸುತ್ತು ಕೋಟೆಗಳನ್ನು ಕಟ್ಟಿಸತೊಡಗಿದಾಗ ಒಂದು ಅಪರೂಪದ ಘಟನೆ ನಡೆಯುತ್ತದೆ. ಈ ಮೂರು ಸುತ್ತುಕೋಟೆಗಳನ್ನು ಬೆಳಗಿನಿಂದ ಸಂಜೆವರೆಗೆ ಕಟ್ಟಿದರೂ ಮರುದಿನ ಬೆಳಗ್ಗೆ ವೇಳೆಗೆ ಪೂರ್ತಿ ಬಿದ್ದುಹೋಗುತ್ತಿರುತ್ತವೆ. ಪ್ರತಿನಿತ್ಯವೂ ಇದೇ ರೀತಿ ನಡೆಯತೊಡಗಿದಾಗ ನಾಯಕ ಶಕುನ ಕೇಳುತ್ತಾನೆ. ಆಗ ಏಕನಾಥಮ್ಮಳು ಯಳವರ್ತಿಯ ಹಳೇಪೈಕದ ಗಿರಿಯಾ ಎಂಬ ದಂಡಿಗೆ ದಾಸಯ್ಯನ ಮೈಯಲ್ಲಿ ಹೊಕ್ಕು ಈ ರೀತಿ ಹೇಳುತ್ತಾಳೆ: ''ನಾನು ಏಕನಾಥಿ. ಇಲ್ಲಿ ಇರುವ ಇಷ್ಟದೇವತೆಗಳೆಲ್ಲ ನನ್ನ ಅಧೀನದಲ್ಲಿದ್ದಾರೆ. ನಾನು ಇಲ್ಲಿ ಒಂದು ಬಂಡೆಯಲ್ಲಿ ಒಡೆದು ಮೂಡಿದ್ದೇನೆ. ಈ ಕೋಟೆ ನಿಲ್ಲದಂತೆ ಮಾಡಿರುವವಳು ನಾನೇ. ನನ್ನ ಜಾಗದಲ್ಲಿ ಬಂದು ನನ್ನನ್ನು ಕ್ರಮಗೊಂಡು ಸೇವೆ ಮಾಡದೆ, ನನ್ನ ಅಪ್ಪಣೆ ಪಡೆಯದೇ ನೀನು ಇಲ್ಲಿ ಊರು ನಿರ್ಮಿಸಲು ಆಗದು.''

ಹೀಗೆ ತನ್ನ ನೆಲೆಯಲ್ಲಿ ತೋರಿಸಿದ ಏಕನಾಥಮ್ಮಳ ಪ್ರಭಾವವನ್ನು ಮನಗಂಡ ಮತ್ತಿ ತಿಮ್ಮಣ್ಣನಾಯಕ, ಆ ದೇವತೆಗೆ ತಕ್ಕ ಪೂಜೆ- ಪುನಸ್ಕಾರ ಮಾಡಿಸುತ್ತಾನೆ. ಕೋಣವೊಂದನ್ನು ತರಿಸಿ ಪಟ್ಟದಕೋಣನನ್ನಾಗಿ ಪೂಜೆಮಾಡಿಸಿ ಅದನ್ನು ಬಿಡಿಸುತ್ತಾನೆ. ಆ ವರುಷ ದೊಳಗೆ ಗುಡಿ ಕಟ್ಟಿಸಿ ದೇವರು ಮಾಡುತ್ತೇನೆಂದು ಮೀಸಲು ಕಟ್ಟುತ್ತಾನೆ. ಆಗ ಕೋಟೆಸುತ್ತುಗಳು ಕುಸಿಯದೆ ಗಟ್ಟಿಯಾಗಿ ನಿಲ್ಲುತ್ತವೆ. ಆ ನಂತರ ಹರಕೆ ತೀರಿಸುವ ನಿಟ್ಟಿನಲ್ಲಿ ಈ ನಾಯಕ ಏಕನಾಥಮ್ಮ ಗುಡಿಯನ್ನು ನಿರ್ಮಿಸುವುದರೊಡನೆ ದೀಪಸ್ತಂಭ ಮತ್ತು ಉಯ್ಯಾಲೆ ಕಂಬಗಳನ್ನೂ ಆ ಗುಡಿ ಎದುರಿಗೆ ನಿಲ್ಲಿಸುತ್ತಾನೆ. ಹಾಗೆಯೇ, ೧೫೭೭ರಲ್ಲಿ, ಪಟ್ಟದಕೋಣ ಸಹಿತ ನೂರಾ ಒಂದು ಕೋಣ, ನೂರಾ ಒಂದು ಕುರಿಗಳಿಂದ ದೇವರನ್ನು ಮಾಡಿಸಿ ಉತ್ಸವ ಆಚರಿಸುತ್ತಾನೆ; ಏಕನಾಥಮ್ಮಳ ಬಗೆಗಿನ ತನ್ನ ಭಕ್ತಿ-ಭಾವಗಳನ್ನು ಹೀಗೆ ವ್ಯಕ್ತ ಪಡಿಸುತ್ತಾನೆ.

ಈ ಸಂಗತಿಗಳ ಹಿನ್ನೆಲೆಯಲ್ಲಿ ಸ್ಪಷ್ಟಪಡುವ ಅಂಶಗಳೆಂದರೆ, ಏಕನಾಥಮ್ಮಗುಡಿಯನ್ನು ಪೂರ್ತ ನಿರ್ಮಿಸಿದವನು ಮತ್ತಿ ತಿಮ್ಮಣ್ಣ ನಾಯಕನೇ. ಹಾಗೆಯೇ, ಚಿತ್ರದುರ್ಗ ನಾಯಕ ಅರಸರ ಪೈಕಿ ಈ ದೇವತೆಯ ಮೊದಲ ನಿಷ್ಠಾವಂತ ಭಕ್ತನೂ ಈತನೇ. ಪ್ರಸ್ತುತ ಶಿಲ್ಪವನ್ನು ಗಮನಿಸಿದರೆ, ಭಕ್ತನಂತೆ ವಿನೀತ ಭಾವದಿಂದ ಕೈಮುಗಿದುಕೊಂಡು ನಿಂತಿರುವ ಸಾಂಪ್ರದಾಯಿಕ ಶೈಲಿಯಲ್ಲಿ ಇದನ್ನು ಕಡೆಯದೆ, ರೋಷ-ಆವೇಶಗಳಿಂದ ಖಡ್ಗವನ್ನು ಝಳಪಿಸುತ್ತಿರುವ ವೀರಯೋಧನ ಭಂಗಿಯಲ್ಲಿ ಬಿಡಿಸಲಾಗಿದೆ. ಕಾಮಗೇತಿ ನಾಯಕ ವಂಶಜರ ಸ್ವಾತಂತ್ರ್ಯ ದಾಹವನ್ನು ಎತ್ತಿ ಸಾರುತ್ತಿರುವ ರೀತಿಯಲ್ಲಿ ಈ ವೀರ ಕಂಡುಬರುತ್ತಾನೆ.

ಗಮನಾರ್ಹ ಸಂಗತಿಯೆಂದರೆ, ತನ್ನ ಸ್ವತಂತ್ರ ಪ್ರವೃತ್ತಿಯ ಎಲ್ಲ ಚಟುವಟಿಕೆಗಳಲ್ಲಿ ವಿಜಯನಗರ ಅರಸರ ಆಗ್ರಹಕ್ಕೆ ತುತ್ತಾದ ಮತ್ತಿ ತಿಮ್ಮಣ್ಣನಾಯಕ, ಹಂಪಿ ರಾಜಧಾನಿಯಲ್ಲಿ ಸೆರೆಮನೆ ಸೇರಬೇಕಾಯಿತು. ಆದರೆ ಈತನ ಪೀಳಿಗೆಯವರು ಸ್ವತಂತ್ರರಾದರಲ್ಲದೆ, ದುರ್ಗದಲ್ಲಿ ಕಾಮಗೇತಿ ವಂಶದ ಜ್ಯೋತಿಯನ್ನು ಹೊತ್ತಿಸಿದರು. ಸ್ವಾತಂತ್ರ್ಯಪ್ರಿಯತೆಯನ್ನು ಮೆರೆದ ಮತ್ತಿ ತಿಮ್ಮಣ್ಣ ನಾಯಕ ವೀರನಾದ್ದರಿಂದಲೇ ಆನಂತರವೂ ವೀರ ನಂತೆಯೇ ಪ್ರಸ್ತುತ ಶಿಲ್ಪದಲ್ಲಿ ಕಂಗೊಳಿಸಿದ್ದಾನೆ ಎನ್ನಬಹುದು. ಈ ದೃಷ್ಟಿಯಿಂದ, ಚಿತ್ರದುರ್ಗ ನಾಯಕ ಪ್ರಭುತ್ವದ ಮೂಲ ಪುರುಷನಾಗಿ, ಏಕನಾಥಮ್ಮನ ನಿಜಭಕ್ತನಾಗಿ ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಮತ್ತಿ ತಿಮ್ಮನಾಯಕ, ಏಕನಾಥಮ್ಮ ಗುಡಿಯ ನಿರ್ಮಾಪಕನೂ ಹೌದು. ಪ್ರಸ್ತುತ ಶಿಲ್ಪದ ಮೂಲಕ ಈ ನಾಯಕನ ನೆನಪನ್ನು ಇಲ್ಲಿ ಶಾಶ್ವತಗೊಳಿಸಲು ಆ ನಂತರದವರು ಪ್ರಯತ್ನಿಸಿರಲೂ ಸಾಕು.

### ೩. ಧವಳಪ್ಪನಗುಡ್ಡದ ಕಟ್ಟೆಗೆ ಸಂಗಣ್ಣನ ವಿಗ್ರಹ

ಚಿತ್ರದುರ್ಗ ಬೆಟ್ಟದ ಪಶ್ಚಿಮಕ್ಕಿರುವ ಪ್ರಸಿದ್ಧ ಅಂಕಲಿಮಠದ ಸಮೀಪದಲ್ಲಿ ಧವಳಪ್ಪನಗುಡ್ಡವಿದೆ. ಚಿತ್ರದುರ್ಗ ನಗರದಿಂದ ಈ ಗುಡ್ಡಕ್ಕೆ ಇರುವ ದೂರ ೪ ಕಿ.ಮೀ. ಚಿತ್ರದುರ್ಗದ ಹಳೆಯ ಹೆಸರುಗಳಲ್ಲಿ ಛತ್ರಕಲ್‌ದುರ್ಗ ಎಂಬುದೂ ಒಂದು. ಇದು ಧವಳಪ್ಪನ ಗುಡ್ಡದ ಛತ್ರಿಯಂಥಾ ವಿಶಿಷ್ಟ ಆಕಾರದಿಂದ ಹುಟ್ಟಿಕೊಂಡುದೆಂದು ವ್ಯಕ್ತಪಡುತ್ತದೆ. ಇದು ಏನೇ ಇರಲಿ; 'ಶಿವ ಭಕ್ತರಲ್ಲದವರಿಗೆ ಗುಡ್ಡದ ಮೇಲಕ್ಕೆ ಹೋಗಲು ಪ್ರವೇಶ

ನಿರ್ಬಂಧಿಸುವಂಥ' ಶಾಸನವನ್ನು ಮಾರ್ಗದ ಆರಂಭದಲ್ಲೆ ಹಾಕಿಸಿ ಕೊಂಡಿರುವ ಧವಳಪ್ಪನ ಗುಡ್ಡ, ಹಿಂದೊಮ್ಮೆ ಕಟ್ಟಾ ಶೈವಪೀಠವಾಗಿದ್ದುದು ಸ್ಪಷ್ಟ. ತನ್ನ ಬುಡದಲ್ಲೆ ಜನವಸತಿಯ ಕುರುಹುಗಳನ್ನೂ ಕೆರೆಯ ಗುರುತನ್ನೂ ಹೊಂದಿದೆ ಈ ಗುಡ್ಡ. ಆಗ ಇದೊಂದು ಪ್ರಮುಖ ಧಾರ್ಮಿಕ ಕ್ಷೇತ್ರವೆನಿಸಿದ್ದಿರಬೇಕು. ಅಂಕಲಿಮಠದ ದಿಕ್ಕಿನಿಂದ ಈ ಗುಡ್ಡದ ಬುಡದಲ್ಲಿರುವ ಹಳೆಯ ಪ್ರವೇಶ ಮಾರ್ಗದವರೆಗೆ ಇದ್ದ ಪ್ರಾಚೀನ ಮಾರ್ಗವನ್ನು (ಅಲ್ಲಲ್ಲಿ ಹಾಳಾಗಿದ್ದರೂ) ಈಗಲೂ ಗುರುತಿಸಬಹುದು. ಸಣ್ಣ ಚಪ್ಪಡಿಕಲ್ಲುಗಳನ್ನು ರಸ್ತೆಯುದ್ದಕ್ಕೂ ಹಾಸಲಾಗಿದೆ. ಇದು ಜನರ ನಿತ್ಯಸಂಚಾರದ ಮಾರ್ಗವಾಗಿದ್ದಿತೆಂದು ತೋರುತ್ತದೆ.



ಈಗ ಅಷ್ಟಾಗಿ ಬಳಕೆಯಲ್ಲಿಲ್ಲದ ಬಂಡೆ ಸಂದುಗಳ ಇಕ್ಕಟ್ಟಾದ ಹಾಗೂ ಕಡಿದಾದ ಮಾರ್ಗದಲ್ಲಿ ಸಾಗಿ ಗುಡ್ಡವನ್ನೇರಿದರೆ ತಕ್ಕಮಟ್ಟಿಗೆ ಸಮತಟ್ಟಾಗಿರುವ ಪ್ರದೇಶವಿದೆ. ಅಲ್ಲಿಯೇ ನಿಂತಿರುವ ವಿಶಿಷ್ಟವಾದ ಬೃಹತ್ ಬಂಡೆಯ ಅಡಿಯಲ್ಲಿ ಹುಟ್ಟು ಬಂಡೆಯಲ್ಲಿ ಕೊರೆದು ಮೂಡಿಸಿರುವ ಲಿಂಗಗಳಿವೆ. ಈ ಬಂಡೆಯ ಅಡಿಯಲ್ಲಿ ವ್ಯವಸ್ಥಿತವಾಗಿ ಪ್ರತ್ಯೇಕ ಕೋಣೆಗಳನ್ನು ನಿರ್ಮಿಸಿ ಅವುಗಳಲ್ಲಿ ಲಿಂಗಗಳಿರುವಂತೆ ಯೋಜಿಸಲಾಗಿದೆ. ಇಲ್ಲಿರುವ ತಿಳಿನೀರಿನ ಕೊಳ ಮೊದಲಾದುವು ಕುತೂಹಲವನ್ನುಂಟು ಮಾಡುತ್ತವೆ. ಇದೊಂದು ನಿಸರ್ಗದತ್ತವಾದ ಧಾರ್ಮಿಕ ಕ್ಷೇತ್ರ.

ಕಲ್ಯಾಣ ಚಾಲುಕ್ಯರ ಆಡಳಿತವಾಧಿಯಲ್ಲಿ ಅಂಕಲಿಮಠವು, ಧವಳಪ್ಪನಗುಡ್ಡ ಮತ್ತು ಹಿಮವತ್-ಕೇದಾರ ಕ್ಷೇತ್ರಗಳು ಅಭಿವೃದ್ಧಿಗೊಂಡುವೆಂಬುದು ಗಮನಾರ್ಹ. ಪರಸ್ಪರ ಸಂಬಂಧ ಪಡೆದಿದ್ದ ಈ ಎಡೆಗಳು, ಕಾಳಾಮುಖ ಪಂಥೀಯರ ನೆಲೆಗಳಾಗಿ ಬೆಳಗಿದುವೆಂದು ಭಾವಿಸಲಾಗುತ್ತದೆ. ಅಂಕಲಿಮಠವು ಅಂಕ ಹಲಗೆಯ ಮಠವಾಗಿ ಅಂದರೆ ಶಿಕ್ಷಣಕೇಂದ್ರವಾಗಿ ಪ್ರಸಿದ್ಧಿಗೊಂಡರೆ, ಧವಳಪ್ಪನಗುಡ್ಡ ಮತ್ತು ದೊಡ್ಡಣ್ಣನಕೆರೆ ಪರಿಸರದ ಹಿಮವತ್-ಕೇದಾರಗಳು ಧಾರ್ಮಿಕ ಕೇಂದ್ರಗಳಾಗಿದ್ದುವೆಂಬುದು ಸ್ಪಷ್ಟ. ಆದರೆ ಈ ಎಡೆಗಳ ಬಗೆಗೆ ಇನ್ನಷ್ಟು ಅಧ್ಯಯನ ನಡೆಯಬೇಕಿದೆ. ಬಿ ರಾಜಶೇಖರಪ್ಪನವರು ಪ್ರಸ್ತಾಪಿಸಿರುವಂತೆ, ಕದಂಬ ಮಯೂರ ವರ್ಮನ ವನವಾಸದ ಶ್ರೀಪರ್ವತವೆಂಬುದು ಧವಳಪ್ಪನ ಗುಡ್ಡವೇ. ಹಾಗೆಯೇ, ಈ ಗುಡ್ಡದ ಸುತ್ತಮುತ್ತಲ ಪ್ರದೇಶವೇ ಶ್ರೀಪರ್ವತಾರಣ್ಯ (ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್ : ೧೯೮೭, ಪು. ೧೮೬-೧೮೭).

ಕಟ್ಟಿಗೆ ಸಂಗಣ್ಣನ ವಿಗ್ರಹವಿರುವುದು ಧವಳಪ್ಪಗುಡ್ಡದ ಪೂರ್ವದಕ್ಕಿನ ಪಾರ್ಶ್ವದಲ್ಲಿ; ಹಳೆಯ ಪ್ರವೇಶ ಮಾರ್ಗಕ್ಕೆ ಎಡಭಾಗದಲ್ಲಿ ಈ ಎಡೆಯಿಂದ ಸ್ವಲ್ಪ ಮೇಲಕ್ಕೆ ಏರಿದರೆ ಈ ಗುಡ್ಡದ ಕಡಿದಾದ ಭಾರಿ ಬಂಡೆಯಲ್ಲಿ ನೈಸರ್ಗಿಕವಾಗಿ ರೂಪುಗೊಂಡಿರುವ ದೊಡ್ಡಕುಳಿಯ ಸಮೀಪದಲ್ಲಿ, ಅಂದರೆ ಅದರಿಂದ ೨೫ ಮೀಟರ್ ಅಂತರದಲ್ಲಿ ಈ ವಿಗ್ರಹವಿದೆ. ಆಳವಾದ ಈ ಕುಳಿಯಲ್ಲಿರುವ "ತೇಜಸ್ಥಾಯಿನಃ ಶ್ರೀವಿನಯವರ್ಮ್ಮೋ ನಾಮ" ಎಂಬ ಕೆಂಪುವರ್ಣ ಶಾಸನದಿಂದಾಗಿ ಈ ಎಡೆಗೆ ಇನ್ನಷ್ಟು ಮಹತ್ವ ಪ್ರಾಪ್ತವಾಗಿದೆ. ಇಲ್ಲಿಯ ಬೃಹತ್‌ಬಂಡೆಗೆ ಒರಗಿ ಕೊಂಡಿರುವ ಪ್ರಸ್ತುತ ಶಿಲ್ಪವನ್ನೆ ಕಟ್ಟಿಗೆ ಸಂಗಣ್ಣನೆಂದು ಸಂಬೋಧಿಸಲಾಗುತ್ತದೆ. ಆದರೆ ನಿಗೂಢ ಎಡೆಯಲ್ಲಿ ಈ ಶಿಲ್ಪವಿರುವಂತೆ ಇಂದು ಕಂಡು ಬಂದರೂ ಈ ವಿಗ್ರಹಕ್ಕೆ ಇಂದಿಗೂ ಪೂಜೆ ಸಲ್ಲುತ್ತಿರುವುದು ಗಮನಾರ್ಹ. ಭಕ್ತರು ಅಥವಾ ಈ ಶಿಲ್ಪದ ವ್ಯಕ್ತಿಗೆ ಸಂಬಂಧಿಸಿದವರು ಗುರುತಿಸುವಂತೆ ಈ ವಿಗ್ರಹ ಕಟ್ಟಿಗೆ ಸಂಗಣ್ಣ ಎಂಬ ವ್ಯಕ್ತಿಯದು. ಪೂಜೆಯ ದೃಷ್ಟಿಯಿಂದ ಈ ಗುಡ್ಡದ ಅತಿ ಪ್ರಮುಖ ಹಾಗೂ ಪವಿತ್ರ ಶಿಲ್ಪ ಇದಾಗಿದೆ ಯೆಂಬುದು ಸ್ಪಷ್ಟ.

ಉತ್ತರದಿಕ್ಕಿಗೆ ಮುಖಮಾಡಿರುವ ಕಟ್ಟಿಗೆ ಸಂಗಣ್ಣನ ಶಿಲ್ಪ ಹಸಿರು ಶಿಲೆಯದು. ೧.೧೭ ಮೀಟರ್ ಎತ್ತರ, ೪೨ ಸೆಂ. ಮೀ. ಅಗಲ ಹಾಗೂ ೨೧ ಸೆಂ. ಮೀ. ದಪ್ಪವಿದೆ. ಶಿಲ್ಪಲಕ್ಷಣಗಳನ್ನು ಗಮನಿಸಿದರೆ, ಈ ವ್ಯಕ್ತಿಯ ಕೊರಳಲ್ಲಿ ದೊಡ್ಡದಾದ ಲಿಂಗದಕಾಯಿ ಅಥವಾ ಕರಂಡಿಗೆ ಇದೆ. ನಿಲುವಂಗಿ ತೊಟ್ಟಿದ್ದು, ಕರಗಳನ್ನು

ಜೋಡಿಸಿ ನಮಸ್ಕರಿಸುವ ಭಂಗಿಯಲ್ಲಿ ನಿಂತಿದ್ದಾನೆ. ಈತನ ಮುಖಭಾಗವನ್ನು ಯಾರೋ ಕಿಡಿಗೇಡಿಗಳು ಜಜ್ಜಿ ವಿರೂಪ ಗೊಳಿಸಿದ್ದರೂ ಅದರ ಮೇಲಿನ ಗಂಭೀರ ಮುದ್ರೆಯನ್ನು ಅಳಿಸಲಾಗಿಲ್ಲ. ಮಡಚಿರುವ ಎಡ ಮುಂಗೈಯಲ್ಲಿ ಸುಂದರವಾದ 'ಸ್ಯಾಚೆಟ್'ನಂಥಾ ಸಂಚಿಯನ್ನು ಹಿಡಿದಿರುವಂತೆ ಬಿಡಿಸಲಾಗಿದೆ. ಇದು ಹೂವಿನ ಬುಟ್ಟಿ ಇರಬಹುದೇ? ಗಮನ ಸೆಳೆಯುವ ಪ್ರಮುಖ ಲಕ್ಷಣವೆಂದರೆ, ಈ ವ್ಯಕ್ತಿ ತನ್ನ ಎಡ ಕಂಕುಳಲ್ಲಿ ಹಿಡಿದಿರುವ ಕಟ್ಟಿಗೆ ಅಥವಾ ಬೆತ್ತ. ವಾಸ್ತವದಲ್ಲಿ, ಈ ಶಿಲ್ಪದಲ್ಲಿ ಪ್ರಧಾನವಾಗಿ ಕಂಡುಬರುವಂಥಾದ್ದು ಈ ಬೆತ್ತವೇ. ಹಾಗೆಯೇ, ತಲೆಯ ಮೇಲಿನ ಕೇಶಲಂಕಾರ ವಿಶಿಷ್ಟವಾದುದು. ಆದರೆ ಹಿಂದಕ್ಕೆ ಬಾಚಿದಂತಿರುವ ೧೦ ನೆರಿಗೆಗಳುಳ್ಳ ಕೇಶರಾಶಿ ವ್ಯಕ್ತಿಯ ಬೋಳುತಲೆಗೆ 'ಟೋಪನ್' ಹಾಕಿದಂತಿದೆ. ಎರಡೂ ಭುಜಗಳ ಮೇಲೆ ಇಳಿಬಿದ್ದಿರುವ ನೀಳವಾದ ಜಡೆಗಳು ಈ ವ್ಯಕ್ತಿ ಶೈವಪಂಥೀಯನೆಂಬುದನ್ನು ಇನ್ನಷ್ಟು ದೃಢೀಕರಿಸುತ್ತವೆ. ದೇಹದ ಮೇಲಿನ ಆಭರಣಗಳ ಪೈಕಿ ನುರಿನುರಿಯಾಗಿರುವಂತೆ ಬಿಡಿಸಿರುವ ಕೈಕಡಗಳು; ಎಡಗಾಲಿನಲ್ಲಿರುವ - ಮಧ್ಯೆ ಚೌಕಾಕಾರದ ಮಣಿ ಜೋಡಿಸಿದಂತಿರುವ -ಉಂಗುರಾಕಾರದ ಕಾಲುಕಡಗ (ಕಾಲು ಪೆಂಡೆಯ?); ರುದ್ರಾಕ್ಷಿಗಳಿಂದ ಕೂಡಿದ ಕರ್ಣಕುಂಡಲಗಳು ಮುಖ್ಯವಾದುವು. ಹಣೆಯಲ್ಲಿರುವ 'ರುದ್ರನೇತ್ರ' ಅತಿಶಯವಾಗಿ ತೋರುತ್ತದೆ. ಒಟ್ಟಿನಲ್ಲಿ, ಕಟ್ಟಿಗೆ ಸಂಗಣ್ಣನದು ಆಕರ್ಷಕ ಭಂಗಿಯ ವಿಶಿಷ್ಟ ಶಿಲ್ಪ.

ಕಟ್ಟಿಗೆ ಸಂಗಣ್ಣ ಯಾರು? ಧವಳಪ್ಪನಗುಡ್ಡಕ್ಕೂ ಈತನಿಗೂ ಇರುವ ಸಂಬಂಧ ಯಾವ ಬಗೆಯದು? ಮೊದಲಿಗೆ, 'ಕಟ್ಟಿಗೆ' ಕುರಿತು ತಿಳಿಯುವುದು ಅಗತ್ಯ. ಶಾಸನಗಳಲ್ಲಿ, ಸಾಹಿತ್ಯಕೃತಿಗಳಲ್ಲಿ ಕಟ್ಟಿಗೆಯವರ ಹಾಗೂ ಕಟ್ಟಿಗೆಕಾರರ ಪ್ರಸ್ತಾಪ ಬರುತ್ತದೆ. 'ಕಟ್ಟಿಗೆ'ಯನ್ನು 'ದಂಡ'ವೆಂತಲೂ ಕರೆದಿದೆ. ರಾಜರ ಆಸ್ಥಾನಗಳಲ್ಲಿ ಅಥವಾ ಓಲಗಳಲ್ಲಿ ಶಿಸ್ತುಕಾಯುವ ದ್ವಾರರಕ್ಷಕ (ವೇತ್ರಧಾರಿ) ರಾಗಿ ದಂಡವನ್ನು ಹಿಡಿಯುವವರನ್ನು ಹೀಗೆ ಕರೆದಿರುವುದು ಸ್ಪಷ್ಟ. ಆಸ್ಥಾನದಲ್ಲಿದ್ದ ಅಂಗರಕ್ಷಕರು ಹಾಗೂ ವಂದಿಮಾಗಧರೊಡನೆ ಕಟ್ಟಿಗೆಯವರನ್ನೂ ಗುರುತಿಸಲಾಗಿದೆ. ಅಗ್ರಹಾರವೊಂದರಲ್ಲಿ ವಾಸಿಸುತ್ತಿದ್ದ ವಿದ್ವಾಂಸರು ಮತ್ತು ಅಧಿಕಾರಿವರ್ಗದವರಲ್ಲಿ ಕಟ್ಟಿಗೆಯ ಮಧುವಯ್ಯ ಎಂಬವನೂ ಇದ್ದುದನ್ನು ಹೇಳುತ್ತದೆ ೧೧೧೮ರ ಶಿಕಾರಿಪುರದ ಶಾಸನ (ಸಂಖ್ಯೆ ೧೧೭). ಪ್ರಾಯಶಃ ಈ ಮಧುವಯ್ಯನು ಅಗ್ರಹಾರದ ಮೇಲ್ವಿಚಾರಕರಲ್ಲೊಬ್ಬ ನಾಗಿರಬೇಕು. ವಿಜಯನಗರ ಕಾಲದ ಶಾಸನಗಳಲ್ಲಿ ಕಟ್ಟಿಗೆ ಅಹಮದಖಾನ್ ಮತ್ತು ಕಟ್ಟಿಗೆ ಲಿಂಗಪ್ಪ ಎಂಬೀರ್ವರು ಕಂಡುಬರುತ್ತಾರೆ. 'ರಾಯರಿಗೆ (ಇಮ್ಮಡಿ ದೇವರಾಯನಿಗೆ) ಧರ್ಮವಾಗಬೇಕೆಂದು' 'ಶ್ರೀಪಾದಸೇವೆಯ' ಕಟ್ಟಿಗೆಯ ಅಹಮದಖಾನನು ಧರ್ಮಶಾಲೆಯೊಂದನ್ನು ಹಂಪಿಯಲ್ಲಿ ಕಟ್ಟಿಸಿದರೆ [ಸೌ. ಇ. ಇ., ೯-೨, ೪೪೭-೩, (ಕ್ರಿ. ಶ. ೧೪೩೯)], ಚಕ್ರತೀರ್ಥದ ಕಲ್ಲುಪಾವಟಿಗೆಗಳನ್ನು ಮಾಡಿಸಿಕೊಡುತ್ತಾನೆ ಕಟ್ಟಿಗೆ ಲಿಂಗಪ್ಪ (ವಿಜಯನಗರ: ಪ್ರೋಗ್ರೆಸ್ ಆಫ್ ರಿಸರ್ಚ್ : ೧೯೮೪-೮೭, ಪು. ೪೦). ಇಂಥಾ ದುಬಾರಿ ಕಾಮಗಾರಿಗಳನ್ನು ಕೈಗೊಳ್ಳುವಲ್ಲಿ ಆಸಕ್ತರಾದ ಈ ಈರ್ವರೂ ಅಧಿಕಾರಿವರ್ಗ ದವರೆಂಬುದು ಸ್ಪಷ್ಟ. ಈ ಉಲ್ಲೇಖಗಳಿಂದ ವ್ಯಕ್ತಪಡುವುದೇ ನೆಂದರೆ, ಕಟ್ಟಿಗೆಯವರು ರಾಜರ ಆಸ್ಥಾನಗಳಲ್ಲಿ ಶಿಸ್ತು ಕಾಯುವಂಥಾ, ಅಗ್ರಹಾರಗಳ ಮೇಲ್ವಿಚಾರಕರಾಗಿರುವಂಥಾ, ಜವಾಬ್ದಾರಿಯುತ ಕಾರ್ಯನಿರ್ವಹಿಸುವವರಾಗಿದ್ದರು.

ಹನ್ನೆರಡನೇ ಶತಮಾನದ 'ಪೆರಿಯಪುರಾಣ' (ಬೆಂಗಳೂರು ವಿಶ್ವವಿದ್ಯಾಲಯ : ೧೯೭೪) ನೀಡುವ ವಿವರಣೆ ಕುತೂಹಲ ಕಾರಿಯಾಗಿದೆ. ಶ್ರೀಪರ್ವತದ ಮಹಿಮೆಯನ್ನು ಕೊಂಡಾಡುವಾಗ '**ಪರಮೇಶ್ವರನ ಅರಮನೆಯ ಕಾವಲು ನಾಯಕ ನಮ್ಮೊಡೆಯ ನಂದೀ ದೇವರು**' ಎನ್ನುತ್ತದೆ ಈ ಪುರಾಮ. ಅದು ಮುಂದುವರೆದು, ಈ ಕೈಲಾಸ ಮಹಾಪರ್ವತವನ್ನು ಕಾಪಾಡುವಂಥ ನಂದೀಶ್ವರನು ದಟ್ಟವಾದ ನೀಳ್ಜಡೆಯವನಾದ ಪರಶಿವನ ಅನುಗ್ರಹದಿಂದ ಸೇವೆಮಾಡಲೋಸುಗ ಛುರಿಕೆ(ಚೂರಿ) ಮತ್ತು ಬೆತ್ತಗಳನ್ನು ಪಡೆದುಕೊಂಡಿರುವನೆಂದು ವರ್ಣಿಸುತ್ತದೆ. ಈ ಪುರಾಣದ ಪ್ರಕಾರ, ಪ್ರಮುಖ ಶೈವಕ್ಷೇತ್ರವನ್ನು ಕಾಪಾಡುವ ಹೊಣೆ ಹೊತ್ತಿದ್ದ ನಂದೀಶ್ವರನ ಕೈಯಲ್ಲಿದ್ದುದು ಚೂರಿ ಮತ್ತು ಬೆತ್ತ. ೧೨ನೇ ಶತಮಾನದಲ್ಲಿ ಶೈವಪೀಠಗಳ ರಕ್ಷಣಾವ್ಯವಸ್ಥೆ ಕುರಿತು ಇದು ಸ್ಥೂಲನೋಟ ಒದಗಿಸುವಂತೆ ತೋರುತ್ತದೆ.

ಚೂರಿ ಅಥವಾ ಖಡ್ಗ ವೀರನೊಬ್ಬನಿಗೆ ಶೋಭಿಸು ವಂಥಾದ್ದು. ಇಲ್ಲಿ ಬೆತ್ತವು 'ದಂಡ' ಎಂಬ ಅರ್ಥದಲ್ಲಿಯೇ ಪ್ರಯೋಗವಾಗಿರುವಂತೆ ತೋರುತ್ತದೆ. ಕ್ಷೇತ್ರಪಾಲಕನಾದ ನಂದಿಯಂತೆಯೇ ಸಂಗಣ್ಣನೂ ಕಟ್ಟಿಗೆ(ದಂಡ) ಧಾರಿಯಾಗಿದ್ದು, ಶ್ರೀಪರ್ವತಾ ರೋಪಿತ ಧವಳಪ್ಪನಗುಡ್ಡದ ರಕ್ಷಕನೂ ಮೇಲ್ವಿಚಾರಕನೂ ಆಗಿದ್ದಿರಬೇಕೆಂದು ತಿಳಿಯಲವಕಾಶವಿದೆ. ಆದ್ದರಿಂದಲೇ ತನಿಗೂ ಇದೇ ಕಾಯಕದ ಇತರರ ಹೆಸರಗಳಿಗೂ ಬಂದಹಾಗೆ 'ಕಟ್ಟಿಗೆ' ವೃತ್ತಿವಿಶೇಷಣ ಅಂಟಿಕೊಂಡಿರುವುದು ಸ್ಪಷ್ಟ. ಧವಳಪ್ಪನಗುಡ್ಡದ ಪ್ರವೇಶಮಾರ್ಗದ ಸನಿಹದಲ್ಲಿಯೇ ಈತನ ವಿಗ್ರಹ ಇರುವುದರಿಂದ ಸಂಗಣ್ಣ ಈ ಕ್ಷೇತ್ರದ ರಕ್ಷಕನಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಈ ಮೂಲಕ ದೃಢಪಡುವ ಅಂಶ. ಈತ ಹಿಡಿದಿರುವ ಕಟ್ಟಿಗೆ ಅಥವಾ ದಂಡ ಈತನಿಗಿದ್ದ ಅಧಿಕಾರದ ಲಾಂಛನ.

'ಕಟ್ಟಿಗೆ'ಯನ್ನು ಹೊರತುಪಡಿಸಿದರೆ, 'ಸಂಗಣ್ಣ' ಎಂಬ ಹೆಸರಿನತ್ತ ಗಮನಹರಿಸುವುದು ಅಗತ್ಯ. ಈತನನ್ನು ಅಣ್ಣನೆಂದು ಸಂಬೋಧಿಸಿರುವುದರಿಂದ ಈತ ಆ ಪ್ರದೇಶದಲ್ಲಿ ಹಿರಿಯನಾದ

ಹಾಗೂ ಗೌರವಾನ್ವಿತ ವ್ಯಕ್ತಿಯಾಗಿದ್ದನೆಂಬುದು ವ್ಯಕ್ತಪಡುತ್ತದೆ. ಸಂಗಮ ಎಂಬುದು ಶಿವನ ಹೆಸರೂ ಹೌದು. ಸಂಗಮೇಶ್ವರ ನೆಂತಲೂ ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ, ಕಟ್ಟಿಗೆ ಸಂಗಣ್ಣನು ಜಂಗಮ ಅಥವಾ ಅಯ್ಯನಾಗಿರುವುದನ್ನು ಗುರುತಿಸಬಹುದು.

ಹಾಗೆಯೇ, ಕಟ್ಟಿಗೆ ಸಂಗಣ್ಣ ವಾಸಿಸಿದ್ದ ಧವಳಪ್ಪನಗುಡ್ಡದ ಹೆಸರಿನ ಹಿನ್ನೆಲೆಯನ್ನೊಮ್ಮೆ ಕೆದಕುವುದಾದರೆ, ಇದನ್ನು ಧವ( ಲ )ಳಗಿರಿ ಎಂದು ಕರೆಯುವುದೂ ರೂಢಿಯಲ್ಲಿದೆ. ಈ ಕನ್ನಡ ಮತ್ತು ಸಂಸ್ಕೃತ ರೂಪಗಳೆರಡೂ ಹಿಮಾಚ್ಛಾದಿತ ಪರ್ವತವೊಂದನ್ನು ಕಣ್ಣಮುಂದೆ ತಂದು ನಿಲ್ಲಿಸಲೆತ್ನಿಸುತ್ತವೆ. ಹಿಮಾಲಯದ ಉನ್ನತ ಶಿಖರಗಲ್ಲೊಂದಕ್ಕೆ ಧವಲಗಿರಿಯೆಂಬ ಹೆಸರಿರುವುದನ್ನೂ ಗಮನಿಸಬಹುದು. ಹಾಗೆಯೇ, "ಪರಮೇಶ್ವರನು ಎಂದೆಂದೂ ನೆಲೆಯಾಗಿ ವಾಸಿಸುತ್ತಿರುವ ಶ್ರೀಕೈಲಾಸ ಮಹಾಪರ್ವತವು ಹೊಂಬೆಟ್ಟದ ಮೇಲೆ ಬೆಳ್ಳನೆಯ ವಿಭೂತಿ ಯನ್ನಿಟ್ಟ ಹಾಗೆ ಎಂದು (ಕವಿಗಳಿಂದ) ವರ್ಣಿಸಲ್ಪಟ್ಟು ಬಹಳ ಉದ್ದವಾಗಿ ಹರಡಿರುವ ಹಿಮಗಿರಿಯ ಪಕ್ಕದಲ್ಲಿರುವುದು" ಎಂದು ಶ್ರೀಪರ್ವತದ ಮಹಿಮೆಯನ್ನು 'ಪೆರಿಯಪುರಾಣ'ವೂ (ಪು. ೮) ಪ್ರಸ್ತಾಪಿಸುವುದು ಇಂಥಾ ವಿವರಣೆಗೆ ಅನುಗುಣವಾಗಿಯೇ ಇದೆ. 'ಹೊಂಬೆಟ್ಟದ ಮೇಲೆ ಬೆಳ್ಳನೆಯ ವಿಭೂತಿಯನ್ನಿಟ್ಟ' ಎಂಬ ಸಾಂಪ್ರದಾಯಿಕ ಕಲ್ಪನೆಯನ್ನೆ ಧವಳಪ್ಪಗುಡ್ಡಕ್ಕೆ ಅನ್ವಯಿಸಿ ಅಂದಿನ ಶಿವಭಕ್ತರು ಸಂಭ್ರಮಿಸಿದ್ದರೆ ಆಶ್ಚರ್ಯವೇನಿಲ್ಲ.

ಧವಳಪ್ಪ ಯಾರು? ವ್ಯಕ್ತಿಯೇ, ದೈವವೇ? ಇದು ಜಿಜ್ಞಾಸೆಗೊಳಪಟ್ಟಿರುವ ಸಂಗತಿ. ಈತನ ಬಗೆಗೆ ಸ್ಥಳೀಯ ದಾಖಲೆಗಳಲ್ಲಿ ಪ್ರಸ್ತಾಪವಿಲ್ಲ. ಆದರೆ ಈತನೊಬ್ಬ ಶಿವಭಕ್ತ ನಾಗಿದ್ದನೆಂಬ ಕಥೆಯೊಂದಿದ್ದು, ಅದು ಸಹಾ ಈಚಿನ ಸೃಷ್ಟಿ ಯೆಂಬಂತೆ ಕಂಡುಬರುತ್ತದೆ. ಈ ಬೆಟ್ಟದ ಮೇಲಿನ ಯಾವುದಾದರೂ ಲಿಂಗವನ್ನು ಈ ಹೆಸರಿನಿಂದ ಕರೆದಂತೆ ತೋರುವುದಿಲ್ಲ. ಅಲ್ಲದೆ, ಈ ಲಿಂಗಗಳನ್ನು ಆರಾಧಿಸುತ್ತಿದ್ದಿರ ಬಹುದಾದ ಯಾವನೇ ಗುರು ಅಥವಾ ಯತಿಯ ಬಗೆಗೂ ನಿರ್ದಿಷ್ಟ ಸೂಚನೆಯಿಲ್ಲ. ಈ ದೃಷ್ಟಿಯಿಂದ ಕಟ್ಟಿಗೆ ಸಂಗಣ್ಣನ ಹಿನ್ನೆಲೆಯನ್ನು ಸರಿಯಾಗಿ ಕೆದಕುವುದು ಅಗತ್ಯವೆನಿಸುತ್ತದೆ. ತನ್ನ ಶ್ರೇಷ್ಠ ವ್ಯಕ್ತಿತ್ವ, ಅಧಿಕಾರ, ಪ್ರಭಾವಗಳಿಂದ ಕೂಡಿದ ವ್ಯಕ್ತಿಯೊಬ್ಬ ಈ ಪರಿಸರದ ಪ್ರಮುಖ ಶೈವಪೀಠವನ್ನು ತನ್ನ ಹಿಡಿತದಲ್ಲಿ ಇರಿಸಿಕೊಂಡಿದ್ದ ಪಕ್ಷದಲ್ಲಿ, ಆತನ ಹೆಸರಿನಿಂದಲೇ ಈ ಗುಡ್ಡವನ್ನು ಜನರು ಗುರುತಿಸುವುದು ತೀರಾ ಸಹಜ. ಆ ನಂತರವೂ ಆತನ ನೆನಪನ್ನು ಉಳಿಸುವ ನಿಟ್ಟಿನಲ್ಲಿ ಕೈಗೊಳ್ಳುವ ಪ್ರಯತ್ನವೂ ಅನೂಚಾನವಾಗಿ ಬಂದ ರೂಢಿಯನ್ನೆ ಅನುಸರಿಸಿರುತ್ತದೆ. ಇಂಥಾ ಸಂಭವನೀಯ ಕ್ರಮವನ್ನು ಒಪ್ಪುವುದಾದರೆ, ಕಟ್ಟಿಗೆ ಸಂಗಣ್ಣನೇ ಧವಳಪ್ಪನೆಂದು ನಿರ್ಧರಿಸಬಹುದು.

ಕಾಲಮಾನದ ದೃಷ್ಟಿಯಿಂದ ಕಟ್ಟಿಗೆ ಸಂಗಣ್ಣ ಅಥವಾ ಧವಳಪ್ಪನ ಶಿಲ್ಪ ಹೊಯ್ಸಳ ಪೂರ್ವಕಾಲದ್ದೆನ್ನಬಹುದು. ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಅಂಕಲಿಮಠ, ಧವಳಪ್ಪನಗುಡ್ಡ ಮತ್ತು ಹಿಮವತ್-ಕೇದಾರ ಪ್ರದೇಶಗಳು ಜನನಿಬಿಡವಾಗಿದ್ದ ಅವಧಿಯಲ್ಲಿ ಈ ವ್ಯಕ್ತಿ ಇಲ್ಲಿ ಇದ್ದಿರಬೇಕು. ಕಲ್ಯಾಣ ಚಾಲುಕ್ಯರ ಅಧಿಕಾರಿಗಳಿಂದ ಈತ ಇಲ್ಲಿ ನೇಮಿಸಲ್ಪಟ್ಟಿರಬಹುದು. ಈಗ ಈತನ ಶಿಲ್ಪವಿರುವ ಎಡೆಯಲ್ಲಿ ಹಿಂದೊಮ್ಮೆ ಕಲ್ಲುಪೌಳಿ ಇದ್ದ ಕುರುಹುಗಳಿವೆ. ಗುಡ್ಡದ ಬುಡದಿಂದ ಈ ವಿಗ್ರಹದ ನೆಲೆಯವರೆಗೆ ಇರುವ ಮೆಟ್ಟಿಲುಗಳನ್ನು ಗಮನಿಸಿದರೆ ಈ ಎಡೆಗೆ ಇರುವ ಪ್ರಾಮುಖ್ಯತೆ ಮನದಟ್ಟಾಗುತ್ತದೆ. ಮೆಟ್ಟಲುಗಳು ಅಲ್ಲಲ್ಲಿ ಮುಚ್ಚಿಹೋಗಿದ್ದು, ಮುಳ್ಳುಪೊದೆಗಳು ಈ ಭಾಗದಲ್ಲಿ ದಟ್ಟವಾಗಿ ಆವರಿಸಿರುವುದರಿಂದ ಈ ವಿಗ್ರಹವನ್ನು ಸಮೀಪಿಸುವುದು ಒಂದು ಸಾಹಸಕಾರ್ಯವೇ ಸರಿ. ಕಟ್ಟಿಗೆ ಸಂಗಣ್ಣನನ್ನು ತಮ್ಮ ಹಿರಿಯನೆಂದು ಭಾವಿಸಿ ಇಂದಿಗೂ ಪೂಜಿಸುತ್ತಾ ಬರುತ್ತಿರುವ ಕುಟುಂಬಗಳು ಚಿತ್ರದುರ್ಗ ಪಕ್ಕದ ಸೊಂಡಕೊಳ ಮೊದಲಾದೆಡೆಗಳಲ್ಲಿ ಇರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಕಟ್ಟಿಗೆ ಸಂಗಣ್ಣನ ಚರಿತ್ರೆಯನ್ನು ನಿಖರವಾಗಿ ಶೋಧಿಸುವ ಪ್ರಯತ್ನ ಮುಂದುವರೆಯಬೇಕಿದೆ. ಮುಖ್ಯವಾಗಿ, ಕಟ್ಟಿಗೆ ಸಂಗಣ್ಣನೇ ಧವಳಪ್ಪನೆಂಬುವ ಬಗೆಗೆ ಇನ್ನಷ್ಟು ಬೆಳಕು ಹಾಯಿಸಬೇಕಾಗಿದೆ.

(ಕೃತಜ್ಞತೆಗಳು : ಲ. ನಾಗರಾಜ ಹೊಯ್ಸಳ, ಭೀ. ಉಮೇಶ್, ಕ. ಮ. ರವಿಶಂಕರ, ಹೆಚ್. ಮಂಜುನಾಥ್, ಜಿ. ಚಂದ್ರಪ್ಪ, ಎಂ. ಬಸವ ರಾಜು, ನಾ. ವೆಂಕಟೇಶಭಟ್, ಎಂ. ಸಣ್ಣಹುಲಿಯಪ್ಪ, ಹೆಚ್. ಎನ್. ಉಮೇಶ್, ಕೆ. ಎಮ್. ವೀರಯ್ಯ, ಸಿ. ಎಲ್. ಶಿವಶಕ್ತಿ ಪ್ರಸನ್ನಕುಮಾರ್, ತಿಪ್ಪೇಸ್ವಾಮಿ, ಬಿ. ವಿಜಯಕುಮಾರ್; ಡಾ॥ ಎಂ. ಎಂ. ಕಲಬುರ್ಗಿ, ಮಾನ್ಯ ಕುಲಪತಿಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯ; ಡಾ॥ ಕೆ. ಎಂ. ಸುರೇಶ್, ಎಂ. ಜಿ. ನಾಗರಾಜ್ ಹಾಗೂ ಎಸ್. ವೈ. ಸೋಮಶೇಖರ.)

*[ಏಕನಾಥಮ್ಮ ಗುಡಿ ಹುಟ್ಟುಬಂಡೆ ಶಿಲ್ಪದ ಎಡಗೈಯು ಆಯುಧವೊಂದರ ಮೇಲೆ ಊರಿರುವಂತೆ ಭಾಸವಾಗುತ್ತದೆ. ದ್ವಿಭುಜ ವೀರಭದ್ರ ಶಿಲ್ಪಗಳಲ್ಲೂ ಎಡಹಸ್ತವು ನೆಲಕ್ಕೂರಿರುವ ನೀಳ ಢಾಲು-ಹಲಗೆಯ ಮೇಲೆ ಪ್ರಸ್ತುತ ಶಿಲ್ಪದ ಮಾದರಿಯಲ್ಲಿ ಊರಿರುವಂತೆ ಕಾಣಬರುತ್ತದೆ. (ಉದಾ : ಶ್ರೀಶೈಲ ನಿಡುಮಾಮಿಡಿ ಪೀಠ-ಗೂಳೂರು ಸಂಸ್ಥಾನ ಪೀಠದ ಹುಟ್ಟುಬಂಡೆಯ ದ್ವಿಭುಜ ವೀರಭದ್ರ ಶಿಲ್ಪದಲ್ಲಿ ನೀಳಢಾಲುವಿನ ಮೇಲೆ ಹೀಗೆಯೆ ಊರಿದಂತಿದೆ. ಅಂತಹುದೇ ಪ್ರಸ್ತುತ ಹುಟ್ಟುಬಂಡೆಯ ಶಿಲ್ಪದ ಸಂದರ್ಭವಾದರೆ ಶಿಲ್ಪದ ಎಡಹಸ್ತವು ಊರಿರುವ ಆಯುಧ, ಢಾಲುಹಲಗೆ ಆಗಿರಬಹುದೆ? ಎಂಬುದನ್ನೂ ಪರಿಶೀಲಿಸಬಹುದು; ಹಿಮವತ್-ಕೇದಾರ ಪೀಠವು ವೈರಾಗ್ಯ ಸಿಂಹಾಸನ ಪ್ರಣೀತವೆನ್ನುವುದುಂಟು. ಚಿತ್ರದುರ್ಗದ ಗುಡ್ಡದ ಪರಿಸರದಲ್ಲಿ ಕೇದಾರ ಮೂಲದ ವೀರಶೈವ ಮಠವಿತ್ತು ಎಂಬ ಹೇಳಿಕೆಗಳಿವೆ ಎಂದು ಡಾ॥ಶ್ರೀ ಜಚನಿ ಅವರು ಹೇಳುತ್ತಿದ್ದುದುಂಟು. ಇದು ನಿಜವಿದ್ದರೆ ಧವಳಪ್ಪನ ಸಂಬಂಧಗಳಿಗೆ ಕೇದಾರ ಮಠದ ವ್ಯಾಪ್ತಿ ಇದೆಯೆ? ಎಂಬುದನ್ನೂ ಪರಿಶೀಲಿಸಬಹುದಲ್ಲವೆ?-(ಸಂ.)]*

ಕೆ. ಸಿ. ಮಲ್ಲಿಗೆವಾಡ *

# ರೊಟ್ಟಿಗವಾಡದ ಕಲಾ ನೈಪುಣ್ಯತೆಯ ಶ್ರೀ ಕಲ್ಮೇಶ್ವರ ದೇವಾಲಯ

ಕರ್ನಾಟಕದ ಎಲ್ಲಂದರಲ್ಲಿ ತಲೆ ಎತ್ತಿ ನಿಂತಿರುವ ಐತಿಹಾಸಿಕ ವಸ್ತುಗಳು ಇಲ್ಲಿನ ಕಲಾ ಶ್ರಿಮಂತಿಕೆಯನ್ನು ಹೆಚ್ಚಿಸುತ್ತಿವೆ. ಇವುಗಳಲ್ಲಿ ಅಡಕವಾಗಿರುವ 'ಮಹತ್ವದ ಸಾಮಾಜಿಕ' ಧಾರ್ಮಿಕ ಸಾಂಸ್ಕೃತಿಕ ಶೈಕ್ಷಣಿಕ ವಿಷಯಗಳು. ಅಂದಿನ ಜೀವನದ ಮೌಲ್ಯವನ್ನು ಇಂದಿನ ಪೀಳಿಗೆಗೆ ಅರುಹುತ್ತವೆ. ಬಹುತೇಕವಾಗಿ ನಮ್ಮ ರಾಜ್ಯದಲ್ಲಿ ಆಳಿಕೆ ನಡೆಸಿದವರು, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ-ಚೂರಿ, ಶಾತವಾಹನ, ಪಲ್ಲವ ಅರಸರುಗಳು. ಅಂದು ತಮ್ಮ ವಿಜಯದ ಸಂಕೇತವಾಗಿಯೋ ಅಥವಾ ಅವರ ಆರಾಧ್ಯ ದೇವನ ಸ್ಮರಣಾರ್ಥವಾಗಿಯೇ ಎಂಬಂತೆ ವಿವಿಧ ದೇಗುಲಗಳ ನಿರ್ಮಾಣ ಮಾಡಿ ನಮ್ಮ ರಾಜ್ಯವನ್ನು ಶ್ರೀಮಂತ ಗೊಳಿಸಿರುವದಕ್ಕೆ ಇಂದಿಗೂ ಅಚ್ಚಳಿಯದೇ ನಿಂತಿರುವ ಅವರ ಕಲಾತ್ಮಕ ಕೊಡುಗೆಗಳೇ ಸಾಕ್ಷಿ.

ಧಾರವಾಡ ಜಿಲ್ಲೆಯು ವಿವಿಧ ಅರಸರ ಆಳಿಕೆಗೆ ಒಳಪಟ್ಟಿದ್ದು ಇಲ್ಲಿ ಆಳಿದ ಪ್ರಮುಖ ಅರಸರೆಂದರೆ ಕಲ್ಯಾಣಿಯ ಚಾಲುಕ್ಯರು, ಕದಂಬರು, ಹೊಯ್ಸಳರು. ಕುಂದಗೋಳ ತಾಲೂಕಿನ ರೊಟ್ಟಿಗವಾಡ ಗ್ರಾಮವು ಇದಕ್ಕೆ ಹೊರತಾಗಿರುವದಿಲ್ಲ ವಿವಿಧ ರೀತಿಯ ದೇಗುಲ ವಿಗ್ರಹಗಳನ್ನೊಳಗೊಂಡ ಪ್ರಾಚೀನ ಕಲಾ ಸೌಂದರ್ಯವು ಪ್ರೇಕ್ಷಕರ ಕಣ್ಮನಗಳನ್ನು ತಣಿಸುತ್ತವೆ.

ರೊಟ್ಟಿಗವಾಡವು ಮೊದಲು ರಟ್ಟರ ಆಳಿಕೆಗೆ ಒಳಪಟ್ಟದ್ದಾಗಿತ್ತು. ಇಲ್ಲಿ ಆಳಿಕೆ ನಡೆಸಿದ ಸವದತ್ತಿಯ ರಟ್ಟರು, ಈ ಗ್ರಾಮದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ನಂತರ ರಟ್ಟರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡ ಮೇಲೆ ಮುಂದೆ ಈ ಗ್ರಾಮವು ರಟ್ಟರವಾಡವೆಂದಾಗಿ ನಂತರ ಇದುವೇ ಇಂದಿನ ರೊಟ್ಟಿಗವಾಡ ಎಂದು ಪ್ರಸಿದ್ಧವಾಗಿದೆ.

ಇಲ್ಲಿರುವ ಪ್ರಾಚೀನ ಐತಿಹ್ಯಗಳೆಂದರೆ ಶ್ರೀ ಕಲ್ಮೇಶ್ವರ ದೇವಾಲಯ, ಗಜಲಕ್ಷ್ಮಿ ವಿಗ್ರಹ, ಕಾಮಧೇನುವಿಗ್ರಹ ಆಸೀನ ಭೈರವ, ದುರ್ಗಾ, ನಾಗರೇಖೆ, ಶ್ರೀ ಮಾರುತಿ, ನಂದಿ ಈಶ್ವರ, ಶ್ರೀ ವೀರಭದ್ರ, ಕಲ್ಮೇಶ್ವರ ಧ್ಯಾಮಪ್ಪ ಮೊದಲಾದವುಗಳು ಪ್ರಮುಖ ವಾಗಿವೆ. ಇವೆಲ್ಲವುಗಳು ವಿವಿಧ ಶತಮಾನಗಳಿಗೆ ತಕ್ಕಂತೆ ನಿರ್ಮಾಣಗೊಂಡಿವೆ.



ಶ್ರೀ ಕಲ್ಮೇಶ್ವರ ದೇವಾಲಯವು ಚೌಕಾಕಾರವಾಗಿ ೧೦'×೧೦' ಇದ್ದು ತಳಪಾಯವು ಬೃಹದಾಕಾರವಾದ ಕಲ್ಲುಗಳ ಜಗುಲಿಯ ಮೇಲೆ ನಿರ್ಮಾಣವಾಗಿದೆ. 'ತಳಪಾಯದ'' ಕಲ್ಲುಗಳು ಯಾವುದೇ ಕಟ್ಟಡವಾಗಿರದೇ ಅವುಗಳನ್ನು ನಯವಾಗಿ ಜೋಡಿಸಿ ಬಂಡೆಗಳನ್ನು ಹೊಂದಿಸಿಟ್ಟಿರುವರು. ಮೊದಲು ಅವೆಲ್ಲವುಗಳು ಭೂಮಿಯಲ್ಲಿದ್ದು ಈಗ ಪ್ರಕೃತಿ ವಿಕೋಪದಿಂದ ಮೇಲಿನ ಮಣ್ಣು ಸವೆದು ದೊಡ್ಡ ಬಂಡೆಗಳು ಗೋಚರವಾಗಿವೆ. ದೇವಾಲಯವು ಪೂರ್ವಾಭಿ ಮುಖವಾಗಿದ್ದು ಸುಮಾರು ೫'-೬'' ಎತ್ತರವಾದ ಬಂಡೆಗಳ ಜಗುಲಿಯ ಮೇಲೆ ಕಟ್ಟಲ್ಪಟ್ಟಿದೆ. ಸುಮಾರು ೧೦-೧೧ನೇ ಶತಮಾನಕ್ಕೆ ಸಂಬಂಧಿಸುವ ಈ ದೇವಾಲಯದ ನಿರ್ಮಾಣದ ಶೈಲಿಯು ಕಲ್ಯಾಣದ ಚಾಲುಕ್ಯರ ಕಾಲದ್ದಾಗಿದೆ. ಮೊದ ಮೊದಲು ಇಲ್ಲಿ ಜನಸಂದಣಿ ಹೆಚ್ಚಿದ್ದರಿಂದ ದೇಗುಲ ಹತ್ತಲು ೪ ಪಾವುಟಿಗೆಗಳನ್ನು ನಿರ್ಮಿಸಿ ಪ್ರವೇಶಕ್ಕೆ ಸುಗಮಗೊಳಿಸಿರಬಹುದು.

* ಇತಿಹಾಸ ಉಪನ್ಯಾಸಕರು. ಜಿ.ಇ.ಸಿ.ಸಂ.ಪ. ಪೂ. ಕಾಲೇಜು, ರೊಟ್ಟಿಗವಾಡ, ತಾ॥ ಕುಂದಗೋಳ, ಜಿ॥ ಧಾರವಾಡ

ಒಳಭಾಗದಲ್ಲಿ ಶಿಲ್ಪಿಯು ನಯವಾಗಿ ಕೆತ್ತನೆ ಮಾಡಿದ್ದು ಕಲ್ಲುಗಳನ್ನು ಯಾವುದೇ ಗಚ್ಚುಗಾರೆಗಳನ್ನು ಬಳಸದೆ ಕ್ರಮಬದ್ಧವಾಗಿ ಜೋಡಿಸಿದ್ದಾರೆ. ಅಷ್ಟಭುಜಗಳನ್ನು ಹೊಂದಿರುವ ದೇಗುಲ ಹೊರಭಾಗವು ಒರಟು ಕಲ್ಲುಗಳಿಂದ ಕೂಡಿದೆ. ಕಲ್ಯಾಣದ ಚಾಲುಕ್ಯರು ನಿರ್ಮಿಸಿರುವ ಪ್ರಾರಂಭಿಕ ದೇವಾಲಯದ ಕುರುಹುಗಳು ಇಲ್ಲಿ ಲಭ್ಯವಾಗುತ್ತವೆ. ಇವುಗಳಲ್ಲಿ ಮುಖ್ಯವಾಗಿ ಯಾವುದೇ ನವೀನತೆ ಇಲ್ಲದಿದ್ದರೂ ಸಹ ತನ್ನದೇ ಆದ ಕುಶಲತೆಯನ್ನು ಒಳಗೊಂಡಿದೆ. ಮೇಲ್ಛತ್ತಿನಲ್ಲಿ ಕಲ್ಲನ್ನು ಹೊಂದಿಸಿ ಗೋಪುರ ನಿರ್ಮಿಸಿದ್ದಾರೆ. ಗೋಪುರದ ಒಳಭಾಗದಲ್ಲಿ ಅಷ್ಟಕೋನಾಕೃತಿಯ ಚಿತ್ರಣವಿದ್ದು ಮಧ್ಯಭಾಗದಲ್ಲಿ ಸಹಸ್ರದಳ ಕಮಲವನ್ನು ಕೆತ್ತಲಾಗಿದೆ. ಮೂಲೆಗೊಂದರಂತೆ ಸುಂದರವಾದ ಪ್ರತ್ಯೇಕ ಪುಷ್ಪ ಗುಚ್ಛವನ್ನು ಕೆತ್ತಿದ್ದಾರೆ. ಇವುಗಳು ಒಳಗೋಪುರಕ್ಕೆ ವಿಶೇಷ ಮೆರಗನ್ನು ತಂದಿವೆ. ಆದರೆ ಗೋಪುರದ ಹೊರಭಾಗವು ಯಾವುದೇ ಕೆತ್ತನೆಯನ್ನು ಹೊಂದಿರದೇ ತನ್ನ ಹಳೆಯ ಜಾಡಿನಲ್ಲಿಯೇ ಕಂಗೊಳಿಸುತ್ತದೆ. ದೇವಾಲಯವು ತನ್ನ ಹೊಸತನವನ್ನು ವ್ಯಕ್ತಪಡಿಸದೆ ಕಲಾ ನೈಪುಣ್ಯತೆಯ ಸೊಬಗನ್ನು ಹೊತ್ತು ನಿಂತಿದೆ.

ಪ್ರಾಚೀನ ಶ್ರೀ ಕಲ್ಮೇಶ್ವರ ದೇವಾಲಯಕ್ಕೆ ಸ್ಥಳೀಯವಾಗಿ ಕಲ್ಲಪ್ಪಜ್ಜನ ಗುಡಿ ಎಂದೇ ಕರೆಯುತ್ತಾರೆ. ಬಹುತೇಕವಾಗಿ ದೇಗುಲವನ್ನು ದಳಪಾಯವಲ್ಲಿ ಬೆಣತು ಮಿಶ್ರಿತ ಕಪ್ಪು ಕಲ್ಲನ್ನು ಬಳಸಿದ್ದಾರೆ. ದೇಗುಲದ ಬಾಗಿಲು ಗೋಡೆ, ಮೇಲ್ಛತ್ತನ್ನು ಮಾತ್ರ ಮರಳು ಮಿಶ್ರಿತ ಕಪ್ಪು ಕಲ್ಲಿನಲ್ಲಿ ಕೆತ್ತಿದ್ದಾರೆ. ಮಜಭೂತಾದ ಆರು ಕಂಬಗಳ ಆಧಾದ ಮೇಲೆ ಕಟ್ಟಲಾಗಿದ್ದು ಇದೊಂದು ಅಭೂತಪೂರ್ವವಾದ ದೇಗುಲವಾಗಿದೆ. ನಾಲ್ಕು ಬೋದಿಗೆ ತೊಲೆಗಳ ಮೇಲಿದ್ದ ಯಾವುದೇ ಕೆತ್ತನೆಗಳು ಕಂಡುಬರುತ್ತಿಲ್ಲ. ಮಧ್ಯಭಾಗದಲ್ಲಿ ಎದುರು ಬದುರಾಗಿ ಪ್ರತಿಷ್ಠಾಪಿಸಿರುವ ಶ್ರೀ ಕಲ್ಮೇಶ್ವರನ (ಈಶ್ವರನ ಲಿಂಗ) ಹಾಗೂ ನಂದಿ ವಿಗ್ರಹವು ನಯನ ಮನೋಹರವಾಗಿವೆ.

ಕಲ್ಲಪ್ಪಜ್ಜನ ಗುಡಿಯು ಶ್ರೀ ಈಶ್ವರ ದೇವಾಲಯವಾಗಿದ್ದು ದೇಗುಲದ ಗೋಡೆಯ ಒಳಭಾಗದಲ್ಲಿ ಪ್ರತ್ಯೇಕವಾದ ಬೇರೆ ದೇವರನ್ನು ಪ್ರತಿಷ್ಠಾಪಿಸಲು ನಿರ್ಮಿಸಿರುವ ಪೀಠವು ಪಶ್ಚಿಮ ದಿಕ್ಕಿನಲ್ಲಿದೆ. ಬಹುತೇಕವಾಗಿ ಇಲ್ಲಿ ತ್ರುಟಿತ ಗೊಂಡಿರುವ ಶ್ರೀ ವೀರಭದ್ರ, ಲಕ್ಷ್ಮಿ, ಆಸೀನ ಭೈರವ ಮೊದಲಾದವುಗಳ ಇತ್ತೀಚಿನ ದಿನಗಳಲ್ಲಿ ಬಹಳ ಜರ್ಜರಿತವಾಗಿವೆ. ಈಶ್ವರ ಲಿಂಗವು ಅಷ್ಟಮಾಲೆಗಳನ್ನು ಹೊಂದಿದ್ದು ಬಾಣ, ಪೀಠಗಳು ಅಳತೆಗೆ ತಕ್ಕಂತೆ ಕಲ್ಲನ್ನು ಕಂಡರಿಸಿದ್ದಾರೆ. ಜಲಹರಿಯ ನೀರು ಹೊರ ಹೋಗಲು ವಿಶೇಷ ವ್ಯವಸ್ಥೆ ಮಾಡಲಾಗಿದೆ ಬಾಣ ಮಾತ್ರ ಪ್ರತ್ಯೇಕವಾಗಿದ್ದು ಇನ್ನುಳಿದ ಕಲ್ಲು ಅಖಂಡವಾಗಿರುವುದು, ಗೋಚರವಾಗುತ್ತದೆ. ಈಶ್ವರ ನಂದಿ ವಿಗ್ರಹಗಳನ್ನು ಮೃದುವಾದ ಬಳಪದ ಕಲ್ಲಿನಲ್ಲಿ ಕೆತ್ತಿದ್ದರಿಂದ ಅವು ಬಹಳಷ್ಟು ನುಣುಪಾಗಿವೆ.

ನಂದಿ ವಿಗ್ರಹವು ಪಶ್ಚಿಮಕ್ಕೆ ಮುಖ ಮಾಡಿ ಮಲಗಿದ ಭಂಗಿಯಲ್ಲಿದೆ, ಬಲಗಾಲನ್ನು ಮಡಚಿ ಎಡಗಾಲನ್ನು ಮುಂದೆ ಮಾಡಿದೆ. ಇದರ ಅಭಿಷೇಕದ ನೀರು ಹೋಗಲು ವಿಗ್ರಹದ ಕೆಳಭಾಗದಲ್ಲಿ ಜಲಹರಿಯನ್ನು ನಿರ್ಮಿಸಲಾಗಿದೆ. ಗಾತ್ರಕ್ಕೆ ಅನುಗುಣವಾಗಿ ವಿಗ್ರಹದ ಮುಖ ಮಾತ್ರ ಚಿಕ್ಕದಾಗಿದ್ದು, ಶಿಲ್ಪಿಯು ವಿಗ್ರಹದ ಕೊರಳಲ್ಲಿ ಗೆಜ್ಜೆಸರ, ಗುಮರಿ, ಘಂಟೆ, ಗೆಜ್ಜೆಗಳನ್ನು ಮೂಡಿಸಿದ್ದಾರೆ. ಇಳಿಬಿದ್ದ ಗಂಗೆದೊಗಲು ವಿಗ್ರಹಕ್ಕೆ ಮೆರಗು ತಂದಿದೆ. ಹಣೆಯಲ್ಲಿ ಹಣೆಪಟ್ಟಿ ಹೆಣೆತದ್ದು ಸರಗಳಿಂದ ಅಲಂಕರಿಸಿದ್ದರೆ, ಕೋಡುಗಳು ಚಿಕ್ಕದಾಗಿದ್ದು ಗೂಟೆಗೂಡಿನ ಬಸವಣ್ಣನೆಂದು ಪ್ರಸಿದ್ಧವಾಗಿದ್ದಾನೆ. ಹದವಾದ ಬೆನ್ನು ಇಣಿ, ಶಿರ, ಮೊದಲಾದವುಗಳು ಆಕರ್ಷಣೀಯವಾಗಿವೆ. ಬೆನ್ನಮೇಲೆ ಸುಂದರವಾದ ಸರಪಳಿ ಗಂಟನ್ನು ಹಾರಜೂಲ ಹಾಕಿದಂತೆ ಮಾಡಲಾಗಿದೆ. ಈ ಪ್ರಸನ್ನ ಮೊಗದ ನಂದಿಯು ಈಶ್ವರನ ಎದುರಿಗೆ ಉಳಿದವುಗಳೆಲ್ಲವೂ ತ್ರುಟಿತಗೊಂಡಿದೆ.

ಕಲ್ಮೇಶ್ವರ ದೇವಾಲಯವನ್ನು ಮೊದಲು ಮಣ್ಣಿನಿಂದ ಮುಚ್ಚಿದಂತೆ ಕಾಣುತ್ತದೆ. ಏಕೆಂದರೆ ನಿರ್ಮಾಣದ ಹಂತದಲ್ಲಿಯೇ ಹೊರಗೋಡೆಯನ್ನು ಅಲಂಕರಿಸದೆ ಕಾಡುಗಲ್ಲನ್ನು ಹಾಗೇ ಬಿಟ್ಟಿದ್ದರಿಂದ ಬಹುತೇಕವಾಗಿ ವೈರಿಗಳ ದಾಳಿಯಿಂದ ದೇಗುಲವನ್ನು ರಕ್ಷಿಸಲು ಹೀಗೆ ನಿರ್ಮಿಸಿರುವದು ಕಂಡುಬರುತ್ತದೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯವು ರೊಟ್ಟಿಗವಾಡ ಗ್ರಾಮದ ಪ್ರಮುಖ ಆರಾಧ್ಯ ದೇವರಾಗಿದ್ದರೂ ಇತ್ತೀಚಿನ ದಿನಗಳಲ್ಲಿ ದೇಗುಲವನ್ನು ನಿರ್ಲಕ್ಷಿಸಿದ್ದಾರೆ. ಕಾರಣ ಪ್ರಕೃತಿ ವಿಕೋಪಗಳಂತಹ ಭೀಕರ ಬಿರುಗಾಳಿ, ಭೂಕಂಪ, ಬಾರಿ ಮಳೆಯಂತಹವುಗಳಿಗೆ ಒಳಗಾಗಿ ತನ್ನ ಅವನತಿಯ ಹಾದಿಯನ್ನು ಹಿಡಿದಿದೆ. ೧೯೬೭ರಲ್ಲಿ ಜರುಗಿದ ಭಾರೀ ಭೂಕಂಪಕ್ಕೆ ತುತ್ತಾಗಿ ಕಂಬಗಳ ಮೇಲಿರುವ ತೊಲೆ ಬೋದುಗೆಗಳು ಸರಿದು ಹೋಗಿದ್ದರಿಂದ ಇನ್ನೇನು ದೇವಾಲಯವು ಯಾವ ವೇಳೆಯಲ್ಲಾದರೂ ಬೀಳವಂತಿದೆ. ಬಲಭಾಗದ ತೊಲೆಯು ಹೆಚ್ಚು ಬಿರುಕು ಬಿಟ್ಟಿದೆ. ಅಂದರೆ ೧'-½' ಅಗಲವಾಗಿದೆ ಇದರಿಂದ ಈ ದೇಗುಲ ಅಪಾಯದ ಅಂಚಿನಲ್ಲಿರುವುದು ಸ್ಪಷ್ಟವಾಗಿದೆ.

**ಶ್ರೀ ಗಣೇಶ :** ಈ ದೇವಾಲಯದಲ್ಲಿರುವ ತ್ರುಟಿತ ಗಣೇಶನ ವಿಗ್ರಹವು ಸುಮಾರು ೨' ಎತ್ತರವಿರುವದಲ್ಲದೆ, ಚತುರ್ಭುಜಗಳನ್ನು ಹೊಂದಿದ್ದು ಅಂಕುಶ ಬ್ರಹ್ಮಾಸ್ತ್ರ, ಗದೆ, ಹಾಗೂ ಆಶೀರ್ವಾದ ಹಸ್ತವನ್ನು ಹೊಂದಿದ್ದು ಆಸೀನ ಭಂಗಿಯಲ್ಲಿದೆ. ಕೆಳ ಭಾಗದಲ್ಲಿ

ಅವನ ವಾಹನ ಇಲಿ ಇದೆ. ಗಣಪನ ಸೊಂಡಿಲು ಎಡಗಡೆಗೆ ವಾಲಿದೆ, ಗಣಪನ ವಿಗ್ರಹವು., ಉತ್ತಮವಾಗಿದ್ದು ಇದೂ ಸಹ ಮೃದುವಾದ ಕಪ್ಪುಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ಬಹುವಿಧವಾದ ಅಲಂಕಾರಗಳನ್ನು ಇಲ್ಲಿ ಬಿಡಿಸಲಾಗಿದೆ.

ಶ್ರೀ ವೀರಭದ್ರ : ಈ ದೇವಾಲಯದಲ್ಲಿ ತ್ರುಟಿತ ಶ್ರೀ ವೀರಭದ್ರ ದೇವರ ವಿಗ್ರಹವು ಸ್ಥಾನಕ ಭಂಗಿಯಲ್ಲಿದ್ದು ದ್ವಿಭುಜಗಳಿದ್ದು ವಿಗ್ರಹದ ಮುಖ, ಭುಜಗಳ ಭಾಗಗಳು ಒಡೆದು ಹೋದ ಕಾರಣ ನಿಶ್ಚಿತವಾದ ವಿವರಣೆ ಸ್ಪಷ್ಟವಾಗಿಲ್ಲ. ಬಹುತೇಕವಾಗಿ ಈ ತ್ರುಟಿತ ವಿಗ್ರಹಗಳೆಲ್ಲವು ದೇವಾಲಯದಲ್ಲಿದ್ದ ಪೀಠದಲ್ಲಿ ಪ್ರತಿಷ್ಠಾಪಗೊಂಡಿದ್ದಿರಲು ಸಾಧ್ಯ. ಶ್ರೀ ವೀರಭದ್ರನು ರುಂಡಮಾಲೆ ಧರಿಸಿದ್ದು, ಪಾದದ ಹತ್ತಿರ ಪಾದುಕೆಗಳಿದ್ದು, ಎಡ ಬಲ ಭಾಗದ ಕೆಳಗಡೆ ಪ್ರಸೂತಾದೇವಿ ಹಾಗೂ ದಕ್ಷಬ್ರಹ್ಮರ ವಿಗ್ರಹಗಳಿವೆ. ಶಿರದಭಾಗವು ಇಲ್ಲವಾದ ಕಾರಣ ಅವನ ಕೊರಳು ತೋಳು ಎದೆಯ ಆಭರಣಗಳು ಕಂಡು ಬರುತ್ತಿಲ್ಲ. ಈ ವಿಗ್ರಹವು ಮೃದುವಾದ ಕಪ್ಪು ಕಲ್ಲಿನಲ್ಲಿಯೇ ಕೆತ್ತಲ್ಪಟ್ಟಿದ್ದು ವಿಗ್ರಹದ ಸುತ್ತಲೂ ಪಟ್ಟಿಕೆ ಇದ್ದು ಇದರಲ್ಲಿ ಸುರಳಿ ಕೆತ್ತನೆ, ಲತಾಕುಂಜವಿದೆ. ಸೂಕ್ಷ್ಮ ಕೆತ್ತನೆಯಿಂದ ಕೂಡಿದ ವೀರಭದ್ರನ ಮೂರ್ತಿಯು ಏಕಶಿಲಾವಿಗ್ರಹ ವಾಗಿದೆ. ಸುಮಾರು ೨' ಎತ್ತರವಾದ ಈ ವಿಗ್ರಹದ ನಡುವಿಗೆ ನಡುಪಟ್ಟಿ ವಸ್ತ್ರಗಳಿಂದ ಅಲಂಕರಿಸಲ್ಪಟ್ಟಿದ್ದು ಬಲಗೈಯನ್ನು ಇಳಿಬಿಟ್ಟಿದ್ದು ತೊಡೆಯ ಭಾಗವು ಸಪಾಟಾಗಿದೆ. ಈ ವಿಗ್ರಹವು ಉಬ್ಬು ಕೆತ್ತನೆಯಾಗಿದ್ದು ಕಿರಿದಾದ ನಡ, ಹರವಾದ ಪಾದದ ಅಚ್ಚುಕಟ್ಟಾದ ಕೆತ್ತನೆಗಳು. ಈ ವಿಗ್ರಹಕ್ಕೆ ಹೆಚ್ಚು ಶೋಭೆಯನ್ನು ತರುವಂತಾಗಿದೆ.

ಇದಲ್ಲದೆ ಈ ದೇವಾಲಯದ ಸುತ್ತಲೂ ಇದ್ದ ಕೆಲ ತ್ರುಟಿತ ಅವಶೇಷಗಳನ್ನು ಕ್ರೋಢೀಕರಿಸಿದಾಗ ಅವುಗಳಲ್ಲಿ ಪಾದದ ಭಾಗ, ಕೆಲಕಡೆ ಕೈಯಲ್ಲಿ ಚಕ್ರ, ಆಸೀನ ಭೈರವ, ಡಮರುಗ, ಶಂಖ, ಹಾಗೂ ಎದೆಯ ಭಾಗಗಳೂ ಸಹ ಕಂಡುಬರುತ್ತವೆ. ಇವೆಲ್ಲವುಗಳನ್ನು ಕ್ರೋಢೀಕರಿಸಿದರೂ ಸಹ ಯಾವುದೆ ಆಕಾರ ರೂಪಗಳ ಹೊಂದಾಣಿಕೆಯು ಕಂಡು ಬರುವುದಿಲ್ಲ. ಆದ್ದರಿಂದ ಇವುಗಳ ಮೂಲ ವಿಗ್ರಹಗಳೂ ಭೂಗತವಾಗಿರಬಹುದು ಅಥವಾ ಇನ್ನಾವುದೇ ಸ್ಥಳಗಳಲ್ಲಿ ಸ್ಥಳಾಂತರಗೊಂಡಿರಲು ಸಾಧ್ಯವಿದೆ.

ದೇವಾಲಯಕ್ಕೆ ಪ್ರವೇಶ ದ್ವಾರವಿದ್ದು ಇದು ಕೇವಲ ಆಧಾರ ಸ್ತಂಭಗಳನ್ನೆ ಅವಲಂಬಿಸಿದೆ. ಮುಂದಿನ ೨ ಕಂಬಗಳು ಪ್ರತ್ಯೇಕವಾದ ಸಣ್ಣ ಅಂಕಣವನ್ನು ಹೊಂದಿದ್ದು ಹೊರ ಭಾಗದಲ್ಲಿ ಯಾವುದೆ ಕೆತ್ತನೆಗಳಿರುವುದಿಲ್ಲ ದೇವಾಲಯದ ಹೊಸ್ತಿಲು ಬೃಹದಾಕಾರವಾಗಿದ್ದು, ಅಡಿಪಾಯದ ನೆಲಗಟ್ಟಿಗೆ, ಹೊಂದಿಕೊಂಡಿದೆ. ಪೂರ್ವಕ್ಕೆ ಒಂದೇ ದ್ವಾರವಿದ್ದು ಉಳಿದ ಕಡೆ ಯಾವುದೇ ಪ್ರವೇಶಕ್ಕೆ ಅವಕಾಶವಿರುವದಿಲ್ಲ.

ಶ್ರೀ ಕಲ್ಮೇಶ್ವರ ದೇವಾಲಯದ ನಿರ್ಮಾಣ ೧೦-೧೧ನೇ ಶತಮಾನಕ್ಕೆ ಸಂಬಂಧಿಸಿದ್ದರೂ ಸಹ ಇಂದಿಗೂ ಅದರ ಉಸ್ತುವಾರಿಗಾಗಿ ಸಾರ್ವಜನಿಕರಾಗಲಿ ಸಂಬಂಧಿಸಿದ ಇಲಾಖೆಯಾಗಲಿ ಪ್ರಯತ್ನಿಸಿಲ್ಲ. ಹೀಗೇ ದೇಗುಲವನ್ನು ಕೈಬಿಟ್ಟರೆ. ಇನ್ನೂ ಕೆಲವೇ ದಿನಗಳಲ್ಲಿ ಅದು ಪೂರ್ಣನಾಶ ವಾಗುವುದರಲ್ಲಿ ಸಂದೇಹವಿಲ್ಲ.

ಚಂದನಾ ವೈ ನೀಲಪ್ಪ*

# ಹರಿಹರದ ಲಕ್ಷ್ಮೀ ದೇವಾಲಯ ಒಂದು ಅಧ್ಯಯನ

ಹರಿಹರವು ಪುರಾಣಕಾಲದಿಂದಲೂ ಪ್ರಸಿದ್ಧವಾದ ಪುಣ್ಯಕ್ಷೇತ್ರ. ಶ್ರೀ ಶಂಕರ ನಾರಾಯಣರು ತಮ್ಮನ್ನು ಭಕ್ತಿಯಿಂದ ಪೂಜಿಸಿ ವರ ಪಡೆದ ಗುಹಾಸುರನನ್ನು ವಧಿಸಲು ಐಕ್ಯರೂಪ ಹೊಂದಿ ಅವತರಿಸಿದ ಪಾವನ ಭೂಮಿ ಇದಾಗಿದೆ. ಸ್ಕಂದ ಪುರಾಣದ ಕಾಶೀ ಕಾಂಡದ ಪೂರ್ವಾರ್ಧದ ಎಂಟನೇ ಅಧ್ಯಾಯದಲ್ಲಿ ಸಾಕ್ಷಾತ್ ಯಮಧರ್ಮನೇ ಹಾಡಿದ ಸ್ತೋತ್ರಗಳಲ್ಲಿ ಈ ವಿಷಯ ವಿವರಿಸಲಾಗಿದೆ. ಇದು ಒಂದು ಧಾರ್ಮಿಕ ಸಮ್ಮಿಲನದ ಕೇಂದ್ರವೂ ಅಹುದು. ಭಾವೈಕ್ಯದ ಸಾಂಕೇತಿಕ ಸ್ಥಾನವೂ ಅಹುದು. ಕರ್ನಾಟಕವನ್ನು ಆಳಿದ ಮಹಾನ್ ರಾಜವಂಶಸ್ಥರೆಲ್ಲರ ಆಡಳಿತಕ್ಕೆ ಒಳಪಟ್ಟ ನಾಡು, ಗಡಿಪ್ರದೇಶ ಕೂಡ ಇದಾಗಿತ್ತು. ಇಲ್ಲಿ ಆಳಿ ಅಳಿದು ಹೋದ ಎಲ್ಲಾ ರಾಜಮನೆತನಗಳು ಹರಿಹರದ ಶ್ರೀ ಸ್ವಯಂಭೂ ಶ್ರೀಶಂಕರನಾರಾಯಣ ದೇವರಿಗೆ ತಮ್ಮ ಕೈಲಾದ ಸೇವೆ ಸಲ್ಲಿಸಿದ್ದಾರೆ ಹಾಗೂ ಸಾಕ್ಷಿಭೂತವಾಗಿ ಸ್ಮಾರಕಗಳನ್ನು ಇಲ್ಲಿ ಬಿಟ್ಟಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಹೊಯ್ಸಳರ ಕಾಲದ ಭವ್ಯ ಬೃಹತ್ ದೇವಾಲಯ ಹರಿಹರವನ್ನು ಐತಿಹಾಸಿಕ ಕೇಂದ್ರವನ್ನಾಗಿಸಿದೆ.

ಹರಿಹರೇಶ್ವರ ದೇವಾಲಯ ಇಲ್ಲಿಯ ಖ್ಯಾತಿ ಸ್ಮಾರಕ. ಹರಿಹರೇಶ್ವರನ ಪ್ರಾಂಗಣದಲ್ಲಿ ಹೊಯ್ಸಳರ ಶಿಲ್ಪಶಾಸ್ತ್ರದ ಇನ್ನೊಂದು ದೇವಾಲಯವಿದೆ. ಸಾಮಾನ್ಯವಾಗಿ ಜನರು ಇದನ್ನು ಲಕ್ಷ್ಮೀ ದೇವಾಲಯವೆಂದೇ ಕರೆಯುತ್ತಾರೆ. ಈ ಲಕ್ಷ್ಮೀ ದೇವಾಲಯವೇ ಈ ಪ್ರಬಂಧದ ಕೇಂದ್ರ ಬಿಂದುವಾಗಿದೆ.

ಇಲ್ಲಿ ಮೊದಲಿಗೆ ಉದಯಿಸುವ ಪ್ರಶ್ನೆ : ಇದು ಲಕ್ಷ್ಮೀ ದೇವಾಲಯ ಅಹುದೇ-ಅಲ್ಲವೇ? ಈ ದೇವಾಲಯದ ಗರ್ಭ ಗುಡಿಯಲ್ಲಿ ಅಮೃತ ಶಿಲೆಯ ಮಹಿಷಾಸುರಮರ್ದಿನಿ ವಿಗ್ರಹವಿದೆ. ಅದರೆ ನೈಜತೆಯ ಅರಿವಿಲ್ಲದ ಜನರು ಇದನ್ನು ಲಕ್ಷ್ಮಿದೇವಿ ಎಂದೇ ಆರಾಧಿಸುತ್ತಾರೆ. ಈ ದೇವಾಲಯದಲ್ಲಿ ಮೂಲತಃ ಯಾವ ವಿಗ್ರಹವಿತ್ತೊ ತಿಳಿದಿಲ್ಲ. ಮೂಲಮೂರ್ತಿ ಮುಸಲ್ಮಾನರ ಧಾಳಿಗೆ ಒಳಗಾಗಿತ್ತು. ಪೇಶ್ವೆಗಳ ಕಾಲದಲ್ಲಿ ಸುಬೇದಾರ್ ಲಕ್ಷ್ಮಣ ಹರಿ ಎಂಬಾತನು ಇಲ್ಲಿ ಈಗಿರುವ ಮಹಿಷಾಸುರಮರ್ದಿನಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದನು ಎಂದು ಇತಿಹಾಸದ ಪುಟಗಳಿಂದ ತಿಳಿಯಬಹುದು.

ಹರಿಹರದಲ್ಲಿ ಆಳಿದ ಹಲವು ರಾಜವಂಶಗಳು ಇಲ್ಲಿ ಹಲವಾರು ದೇವಾಲಯಗಳನ್ನು ಕಟ್ಟಿಸಿದ್ದಾರೆ ಎಂದು ಇಲ್ಲಿ ದೊರೆತಿರುವ ಶಾಸನಗಳು ತಿಳಿಸುತ್ತವೆ. ಶಾಸನಗಳಲ್ಲಿದ್ದ ಎಲ್ಲಾ ದೇವಾಲಯಗಳನ್ನು ಗುರುತಿಸುವುದು ಇತಿಹಾಸಕಾರರಿಗೆ ಸಾಧ್ಯವಾಗಿಲ್ಲ ಎಂಬುದು ಇಲ್ಲಿ ಬಹಳ ಮುಖ್ಯ ವಿಷಯ. ಹೀಗೆ ಇಲ್ಲಿ ಕಟ್ಟಿಸಲ್ಪಟ್ಟ ದೇವಾಲಯಗಳಲ್ಲಿ ಯಾದವ ಸಾಳುವ ತಿಕ್ಕಮನು, ಹರಿಹರದಲ್ಲಿ ಲಕ್ಷ್ಮೀನರಸಿಂಹ ದೇವಾಲಯ ಕಟ್ಟಿಸಿದ್ದನೆಂಬ ಉಲ್ಲೇಖ ಶಾಸನದಲ್ಲಿದೆ. ಈ ಬಗ್ಗೆ ಈಗಾಗಲೇ ಪ್ರಕಟಿತ ದಾವಣಗೆರೆ ೫೯ನೇ ನಂಬರಿನ ಶಾಸನ ತಿಳಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೨೭೭ ಮಾರ್ಚಿ ೧೯.

ಈ ಶಾಸನದ ಪಾಠದ ಪ್ರಕಾರ ಗುಹನನ್ನು ವಧಿಸಿ ಶಿವ ವಿಷ್ಣು ಐಕ್ಯವಾಗಿ ಶೋಭಾಯಮಾನವಾಗಿ ಮೆರೆಯುತ್ತಿದ್ದ ಹರಿಹರವನ್ನು ಸಾಳುವ ತಿಕ್ಕಮನು ಕಂಡನು. ತನ್ನ ದೊರೆ ರಾಮಚಂದ್ರನ (ಮಹಾದೇವರಾಯ) ನೆಪದಿಂದ ಇಲ್ಲಿಗೆ ಬಂದಾಗ ಹರಿಹರವನ್ನು ಹರಿಶಂಕರನಿಗೆ ಶಂಖದಲ್ಲಿ ನೀರೆರೆದು ಸಕಲ ಸಿದ್ಧಾಯಗಳನ್ನು ಮಾನ್ಯ ಮಾಡಿ ಅರ್ಪಿಸಿದನು. ಮತ್ತು ಹರಿಹರದ ಅಗ್ರಹಾರವನ್ನು ಸಾಳುವ ತಿಕ್ಕಮನು ತನ್ನ ಒಡೆಯ ಮಹಾದೇವ ರಾಯನ ಹೆಸರಿಲ್ಲಿ ದೇವಾಲಯ ರೂಪದ ಧರ್ಮ ಮಾಡಲು ಬಯಸಿದನು. ಸಾಳುವ ತಿಕ್ಕಮನಿಗೆ ಹರಿಹರೇಶ್ವರನ ಪ್ರೇರಣೆಯಾಯಿತು. ಅದರಂತೆ ಪಟ್ಟಣದ ನಡುವೆ ಮಹಾದೇವರಾಯನ್ನು ದೈವತ್ವ ಪಡೆದಿರಲಿ ಎಂದು ತನ್ನ ಮನಸ್ಸನ್ನು ಪ್ರೇರೇಪಿಸಿದ ಹರಿಹರ ದೇವರ ಸಮೀಪದಲ್ಲಿ ನೆಲೆಸುತ್ತಿದ್ದ

* ಶ್ರವಣ ಟ್ಯುಟೋರಿಯಲ್, ೩೧೨, 'ಇ' ಬ್ಲಾಕ್, ನಡುವಲ್ ಪೇಟೆ, ಹರಿಹರ - ೫೭೭ ೬೦೧

ಬ್ರಾಹ್ಮಣರನ್ನು ಒಲಿಸಿ ಭೂಮಿಯನ್ನು ಕ್ರಯಕ್ಕೆ ಪಡೆದು ದೇವಾಲಯ ಕಟ್ಟಿಸಲು ಪ್ರಾರಂಭಿಸಿದನು. ಶಕವರ್ಷ ಈಶ್ವರ ಸಂವತ್ಸರದ ಚೈತ್ರ ಶುದ್ಧ ತ್ರಯೋದಶಿಯ ಶುಕ್ರವಾರದಂದು (೧೨೭೭ ಮಾರ್ಚಿ ೧೯) ಈ ದೇವಾಲಯದ ಕಾರ್ಯ ಪ್ರಾರಂಭವಾಯಿತೆಂದು ಶಾಸನದಿಂದ ತಿಳಿದುಬರುತ್ತದೆ. ಎಲ್ಲರೂ ಕಾಪಾಡುವ ಲಕ್ಷ್ಮೀ ನಾರಾಯಣನನ್ನು ಈ ದೇವಾಲಯದಲ್ಲಿ ತಿಕ್ಕಮನು ಬಹುಧಾನ್ಯ ಸಂವತ್ಸರದ ಮಾಘಶುದ್ಧ ಪಂಚಮಿಯ ಗುರುವಾರದಂದು (೧೨೭೯ ಜನವರಿ ೧೮) ಪತಿಷ್ಠಾಪಿಸಿದನೆಂದು ಶಾಸನ ತಿಳಿಸುತ್ತದೆ. ಪ್ರಮಾಥಿ ಸಂವತ್ಸರದ ಮಾಘ ಶುದ್ಧ ಪಂಚಮಿ (೧೨೮೧ ಫೆಬ್ರವರಿ ೬)ರಂದು ಮಂಗಳವಾರ ಅಶ್ವಿನಿ ನಕ್ಷತ್ರದಲ್ಲಿ ದೇವಾಲಯಕ್ಕೆ ಚಿನ್ನದ ಕಳಸವನ್ನಿರಿಸಿ ದೇವರ ಕೈಂಕರ್ಯಕ್ಕೆ ಭೂಮಿ ಕ್ರಯಕ್ಕೆ ಪಡೆದು ದಾನ ಕೊಟ್ಟಿರುವುದು ಈ ಶಾಸನದಲ್ಲಿದೆ.

ಇಲ್ಲಿಯ ಇನ್ನೊಂದು ಶಾಸನವನ್ನು ನಾವು ಈ ನಿಟ್ಟಿನಲ್ಲಿ ಗಮನಿಸಬೇಕಾಗುತ್ತದೆ. ಇದು ದಾವಣಗೆರೆ ೪೩ನೇ ಶಾಸನ, ವಿಜಯನಗರದ ಅರಸೊತ್ತಿಗೆ ಕಾಲಕ್ಕೆ ಸೇರಿದ್ದು ಆಗಿದೆ. ಇದರ ಕಾಲಮಾನ ಕ್ರಿ. ಶ. ೧೫೦೨ನೇ ಇಸವಿಯಾಗಿದೆ. ಈ ಶಾಸನದ ಪ್ರಕಾರ ಹರಿಹರಕ್ಕೆ ವಿಜಯನಗರದ ಅರಸೊತ್ತಿಗೆಯವರು ದತ್ತಿಕಾರ್ಯ ಮಾಡಿರುವುದು ತಿಳಿದು ಬರುತ್ತದೆ. ಹರಿಹರ ದೇವರ ಪತ್ನಿಯರಾದ ಶ್ರೀ ಲಕ್ಷ್ಮೀ ಪಾರ್ವತಿ ರಥೋತ್ಸವಕ್ಕಾಗಿ ಚೈತ್ರ ಶುದ್ಧ ೧೫ರಂದು ಕೃಷ್ಣಪ್ಪ ನಾಯಕನಿಗೆ ಪುಣ್ಯವಾಗಬೇಕೆಂದು ಗಂಗನರಸ ಗ್ರಾಮವನ್ನು ಎಲ್ಲಾ ತೆರಿಗೆ ಮಾನ್ಯ ಮಾಡಿ ಜೀರ್ಣೋದ್ಧಾರ ಮಾಡಿ ಅರ್ಪಿಸಿರುವುದು ತಿಳಿದು ಬರುತ್ತದೆ.

ಈ ಎರಡು ಶಾಸನಗಳನ್ನು ಗಮನಿಸಿದ ನಂತರ ದೇವಾಲಯದ ವಾಸ್ತು ಶಿಲ್ಪದ ಅಧ್ಯಯನವೂ ಮುಖ್ಯವಾಗಿದೆ. ದೇವಾಲಯವು ಹೊಯ್ಸಳ ಶೈಲಿಯಲ್ಲಿದೆ ಎಂಬುವುದರಲ್ಲಿ ಸಂದೇಹವೇ ಇಲ್ಲ. ಹೆಚ್ಚು ಕಡಿಮೆ ಹೊಯ್ಸಳರ ಇಳಿಮುಖ ಕಾಲದ್ದಿರಬೇಕು. ದೇವಾಲಯದ ವಾಸ್ತುವಿನಲ್ಲಿ ಸೂಕ್ಷ್ಮ ಕೆತ್ತನೆ ಕುಸುರಿ ಕೆಲಸ ಕಂಡು ಬರುವುದಿಲ್ಲ. ದೇವಾಲಯಕ್ಕೆ ಗರ್ಭಗೃಹ ಮತ್ತು ಮುಖ ಮಂಟಪ ಮಾತ್ರ ಇದೆ. ಹರಿಹರೇಶ್ವರ ದೇವಾಲಯದ ವಾಸ್ತುವನ್ನು ಹೋಲುತ್ತದೆ. ಆದರೆ ಗರ್ಭಗೃಹವು ಯಾರದೋ ಧಾಳಿಗೆ ತುತ್ತಾಗಿ ನಾಶವಾಗಿರಬೇಕು. ನಂತರ ಮೊದಲಿದ್ದ ತಳಪಾಯದ ಮೇಲೆ ಮೂಲ ಗರ್ಭ ಗುಡಿಯ ವಿಸ್ತೀರ್ಣಕ್ಕಿಂತ ಸ್ವಲ್ಪ ಚಿಕ್ಕದಾಗಿಯೇ, ಗಾರೆಯಿಂದ ಕಟ್ಟಿಸಿದೆ. ಎರಡು ಮೂರು ಮೆಟ್ಟಿಲುಗಳನ್ನು ಏರಿ ಮುಖ ಮಂಟಪಕ್ಕೆ ಪ್ರವೇಶ. ಇದರ ಮಹಾದ್ವಾರ ಪೂರ್ವಾಭಿಮುಖವಾಗಿದೆ. ಉತ್ತರ ಮತ್ತು ದಕ್ಷಿಣದ ಬಾಗಿಲುಗಳು ಇವೆ. ಚೌಕಾಕಾರದ ಕೋಚು ವಿನ್ಯಾಸದ ಮಂಟಪದ ಸುತ್ತಲೂ ಕಕ್ಷಾಸನವಿದೆ. ಗರ್ಭಗೃಹದ ಮೇಲೆ ಮೂರು ಸ್ತರಗಳಿರುವ ವಿಮಾನವಿದೆ. ಅದರ ಮೇಲೆ ಅಮಲಕ ಮತ್ತು ಕಳಸವಿದೆ. ಒಂದೊಂದು ಸ್ತರದಲ್ಲೂ ನೀಳ್ಗಂಬಗಳ ವಿಗ್ರಹಗಳಿವೆ. ಗರ್ಭ ಗುಡಿಯನ್ನು ಗಮನಿಸಿದರೆ ಮೊದಲಿನ ಅರ್ಧದಷ್ಟು ಚಿಕ್ಕದಾಗಿದೆ. ತಳಪಾಯ ಗರ್ಭ ಗುಡಿಯ ಹೊರಕ್ಕೆ ನಾಲ್ಕೈದು ಅಡಿ ಹೋರ ಚಾಚಿದೆ. ಈಗ ಇದೇ ತಳಪಾಯವನ್ನು ಬಳಸಿಕೊಂಡು ರಾಮಮಂದಿರ ಕಟ್ಟಿಸಿರುವುದು ಖಚಿತವಾಗಿ ಕಾಣುತ್ತದೆ. ಪ್ರಾಚೀನ ಕಲ್ಲುಗೋಡೆಯ ಬದಲಿಗೆ ಗಾರೆಯ ಗೋಡೆ ಕಂಡು ಬರುತ್ತದೆ. ಹಾಗೇ ಪೀಠದಲ್ಲಿ ಲಕ್ಷ್ಮಿಯ ಬದಲಿಗೆ ಮಹಿಷಾಸುರಮರ್ದಿನಿ ಇದೆ. ಗರ್ಭಗುಡಿಯ ಹಿಂದಿನ ಗೋಡೆಯ ಮೇಲೆ ಕೂಡ ಮಹಿಷಾಸುರಮರ್ದಿನಿಯ ವರ್ಣ ಚಿತ್ರ ರಚಿಸಲಾಗಿದೆ.

ಗರ್ಭ ಗುಡಿಯ ಮಹಾದ್ವಾರದ ಬಲಗಡೆಗೆ ಒಂದು ಗಣೇಶನ ಉಬ್ಬು ಶಿಲಾ ವಿಗ್ರಹವಿದೆ ಗಣೇಶನು ತನ್ನ ವಾಹನ ಇಲಿಯ ಮೇಲೆ ಕಮಲದಳಗಳ ಮೇಲೆ ಕುಳಿತ್ತಿರುವ ಭಂಗಿ ಸುಂದರವಾಗಿದೆ. ಗರ್ಭ ಗುಡಿಯ ಮಹಾದ್ವಾರದ ಎಡಬದಿಯಲ್ಲಿ ಸುಬ್ರಮಣ್ಯ ಸಾಂಕೇತಿಕವಾಗಿ ನಾಗರೂಪದಲ್ಲಿದೆ. ಸುಬ್ರಮಣ್ಯನೆಂದೇ ಇದನ್ನು ಪೂಜಿಸುತ್ತಿದ್ದಾರೆ.

ಗುಡಿಯ ವಿಮಾನದ ಸ್ಥರಗಳಲ್ಲಿ ಶಿಲ್ಪಾಕೃತಿಗಳನ್ನು ಗಮನ ಕೊಟ್ಟು ಅವಲೋಕಿಸಿದರೆ ಬಲಭಾಗದಲ್ಲಿ ಶಿವಪಾರ್ವತಿಯರು ಕೈಲಾಸದಲ್ಲಿ ಆಸೀನರಾಗಿರುವ ದೃಶ್ಯ, ನಂದಿಯು ವಿರಾಜಮಾನವಾಗಿದೆ. ಎಡಬದಿಯಲ್ಲಿ ವಿಷ್ಣುವಿನ ನರಸಿಂಹ ಅವತಾರದ ದೃಶ್ಯವಿದೆ. ಸುಣ್ಣ ಬಳಿದುದರ ಪರಿಣಾಮವಾಗಿ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ದೇವಾಲಯದ ತೋರಣದ ಗಜಲಕ್ಷ್ಮಿ ಸರಿಯಾಗಿ ಸ್ಫುಟವಾಗಿ ಮೂಡಿ ಬಂದಿಲ್ಲ.

ಇಲ್ಲಿ ಉಲ್ಲೇಖಿತ ಈ ಎರಡು ಶಾಸನಗಳಿಂದ ಮತ್ತು ಲಕ್ಷ್ಮೀ ದೇವಾಲಯದ ವಾಸ್ತು ವಿನ್ಯಾಸದಿಂದ ನನ್ನ ವಿಚಾರಕ್ಕೆ ಹೊಳೆದ ವಿಷಯಗಳನ್ನು ತಮ್ಮ ಮುಂದಿಡಲು ಬಯಸುತ್ತೇನೆ. ೧) ಸಾಳುವ ತಿಕ್ಕಮನು ಕಟ್ಟಿಸಿದ ಲಕ್ಷ್ಮೀನಾರಾಯಣ ದೇವಾಲಯ ಇದಾಗಿರಲು ಸಾಧ್ಯವಿಲ್ಲ. ಭೂಮಿ ಕ್ರಯಕ್ಕೆ ಪಡೆದು ಹೊಯ್ಸಳ ಶೈಲಿಯ ದೇವಾಲಯ ಕಟ್ಟುವುದು ನಂಬಲು ಸಾಧ್ಯವಿಲ್ಲ. ಈ ಶಾಸನ ಕಾಲಕ್ಕೆ ಹರಿಹರವು ಯಾದವರ ವಶವಾಗಿತ್ತು. ಮೂರು ವರುಷ ಕಾಲ ಕಟ್ಟಡದ ಕೆಲಸನಡೆದಿರುವುದು ತಿಳಿದು ಬರುತ್ತದೆ. ಶಾಸನದಂತೆ ಲಕ್ಷ್ಮೀನಾರಾಯಣ ಗುಡಿ ಹರಿಹರೇಶ್ವರ ದೇವಾಲಯ ಪಕ್ಕದಲ್ಲಿ ತ್ತೆಂಬುದು ಮಾತ್ರ ತಿಳಿಯುತ್ತದೆಯೇ ಹೊರತು ಎಲ್ಲಿ ಎಂದು ತಿಳಿಯುವುದಿಲ್ಲ. ಸಾಳುವ ತಿಕ್ಕಮನು ಕಟ್ಟಿಸಿದ ಲಕ್ಷ್ಮೀನಾರಾಯಣ ಗುಡಿ ಇದಲ್ಲ ಎಂದು ಖಚಿತವಾಗಿ ಹೇಳಬಹುದು. ೨) ದಾವಣಗೆರೆ ೪೩ನೇ ಶಾಸನದಿಂದ ಹರಿಹರದಲ್ಲಿ ಲಕ್ಷ್ಮೀ-ಪಾರ್ವತಿ ರಥೋತ್ಸವವು ವಿಜೃಂಭಣೆಯಿಂದ ಒಂದೇ ದಿನ ನಡೆಯುತ್ತಿದ್ದಿರಬೇಕೆಂದು ತಿಳಿದು ಬರುತ್ತದೆ. ಇಲ್ಲಿಯೂ ಗುಡಿಯ ಸ್ಥಾನದ ಬಗ್ಗೆ ಉಲ್ಲೇಖವಿಲ್ಲ. ೩) ಹೊಯ್ಸಳರು ಮೊದಲೇ ಕಟ್ಟಿಸಿದ ದೇವಾಲಯದಲ್ಲಿ ಸಾಳುವ

ತಿಕ್ರಮ ಲಕ್ಷ್ಮೀ ನಾರಾಯಣ ದೇವರ ಪ್ರತಿಷ್ಠಾಪನೆ ಮಾಡಿರಲಿಕ್ಕಿಲ್ಲ. ಲಕ್ಷ್ಮೀ ದೇವಾಲಯ ಹೊಯ್ಸಳ ಶೈಲಿಯಲ್ಲಿರುವುದರಿಂದ ಇದು ಮೊದಲೇ ಕಟ್ಟಿದ ವಾಸ್ತುವಾಗಿದೆ. ಲಕ್ಷ್ಮೀನರಸಿಂಹ ದೇಗುಲವನ್ನು ಹರಿಹರದಲ್ಲಿ ಪಾಳು ಬಿದ್ದ ದೇವಾಲಯಗಳ ಗಣನೆಯಲ್ಲಿ ತೆಗೆದುಕೊಳ್ಳ ಬೇಕಾಗುತ್ತದೆ. ಒಂದು ವೇಳೆ ಹೊಯ್ಸಳರ ಅವನತಿ ಕಾಲದಲ್ಲಿ ಕಟ್ಟದ ದೇವಾಲಯದಲ್ಲಿ ಲಕ್ಷ್ಮೀನಾರಾಯಣನ ಪ್ರತಿಷ್ಠಾಪನೆ ಮಾಡಿದ ಎಂದರೂ ಮೂರು ವರುಷ ಕಾಲಾವಧಿ ಬೇಕಿರಲಿಲ್ಲ.

ಹರಿಹರದಲ್ಲಿ ಲಕ್ಷ್ಮೀ ಪಾರ್ವತಿ ರಥೋತ್ಸವ ಒಂದೇ ದಿನ ನಡೆಯುತ್ತಿತ್ತು. ಇವರಿಗೆ ಬೇರೆ ಬೇರೆ ಗುಡಿಗಳಿದ್ದವೇ ಅಥವಾ ಹರಿಹರನನ್ನು ಒಂದು ಗೂಡಿಸಿದಂತೆ ಇವರನ್ನು ಒಂದೇ ದೇವಾಲಯ ದಲ್ಲಿ ಪ್ರತಿಷ್ಠಾಪಿಸಿದ್ದರೋ ಎಂದು ಸರಿಯಾಗಿ ತಿಳಿಯದ ವಿಷಯ. ಆದರೂ ಒಂದೇ ದಿನ ರಥೋತ್ಸವ ಆಗುತ್ತಿದ್ದುದರಿಂದಲೂ, ಪಕ್ಕದಲ್ಲೇ ಹರಿ ಮತ್ತು ಹರರು ಐಕ್ಯವಾದ ದೇವಾಲಯ ಇರುವುದರಿಂದಲೂ ಈ ರೀತಿ ಒಂದೇ ಗುಡಿ ಇರಲು ಸಾಧ್ಯತೆ ಇದೆ. ಗೋಪುರದಲ್ಲಿ ಕಂಡು ಬರುವ ಕೈಲಾಸದ ದೃಶ್ಯ ಮತ್ತು ವಿಷ್ಣುವಿನ ನರಸಿಂಹಾವತಾರದ ದೃಶ್ಯಗಳು ಇದಕ್ಕೆ ಪುಷ್ಟಿ ಕೊಡುತ್ತವೆ. ಪೋಲ್ಡಾಳನೇ ಈ ರೀತಿಯ ಒಂದು ದೇವಾಲಯ ಕಟ್ಟಿಸಿರಲೂ ಬಹುದು. (ಹರಿಹರದಲ್ಲಿ ಹಲವು ಶಾಸನಗಳು ಮರೆಯಾಗಿವೆ) ಬೇರೆ ಬೇರೆಯಾಗಿ ಪ್ರತಿಷ್ಠಾಪಿಸುತ್ತಿದ್ದವರು ಇಂಥದೇ ಇನ್ನೊಂದು ಗುಡಿಯನ್ನು ಹರಿಹರೇಶ್ವರನ ಇನ್ನೊಂದು ಪಕ್ಕದಲ್ಲಿ ಕಟ್ಟಿಸುತ್ತಿದ್ದರು.

ಗರ್ಭ ಗುಡಿಯ ಮಹಾದ್ವಾರದ ಹೊರಗೆ ಎಡಬದಿ ಮತ್ತು ಬಲಬದಿಯಲ್ಲಿರುವ ಗಣೇಶ ಮತ್ತು ಸುಬ್ರಮಣ್ಯ ವಿಗ್ರಹಗಳು ಇದು ಪಾರ್ವತೀ ಗುಡಿ ಇದ್ದಿರಬೇಕೆಂದು ಸಂದೇಹಪಡುವಂತೆ ಮಾಡುತ್ತದೆ. ಏಕೆಂದರೆ ಗಣೇಶ ಮತ್ತು ಸುಬ್ರಮಣ್ಯ ಪಾರ್ವತೀ ಸುತರು. ಅವರೇಕೆ ಲಕ್ಷ್ಮೀ ಇಕ್ಕೆಲದಲ್ಲಿ ಬಂದು ಕುಳಿತು ಕೊಳ್ಳುವರು? ಹೇಗೆ ಕೆತ್ತಿಸಲ್ಪಟ್ಟರು? ಎಂಬುದು ಕೂಡ ಇದಕ್ಕೆ ಪುಷ್ಟಿ ಕೊಡುತ್ತದೆ. ಮಕ್ಕಳು ತಾಯಿ ಪಕ್ಕ ಕುಳಿತಿರುವುದೇ ಸರಿ ಎಂತಾದರೆ ಇದು ಪಾರ್ವತೀ ಗುಡಿ ಎಂಬ ನಿರ್ಧಾರಕ್ಕೆ ಬರಬಹುದು. ಗರ್ಭ ಗುಡಿಯಲ್ಲಿರುವ ಮಹಿಷಾಸುರ ಮರ್ದಿನಿ ಕೂಡ ಪಾರ್ವತಿಯ ಒಂದು ರೂಪ ಆದ ಕಾರಣ ಈ ದೇವಾಲಯವು ಪಾರ್ವತಿ ದೇವಾಲಯ ಎನ್ನುವುದಕ್ಕೆ ಇನ್ನೊಂದು ಸಾಕ್ಷಿ ದೊರೆಯುತ್ತದೆ.

ಕೊನೆದಾಗಿ ಈ ದೇವಾಲಯ ಲಕ್ಷ್ಮೀ ದೇವಾಲಯವಂತೂ ಅಲ್ಲ. ಇದು ಪಾರ್ವತಿ ದೇವಾಲಯ ಇರಬೇಕು. ಇಲ್ಲವೇ ಲಕ್ಷ್ಮೀ ಪಾರ್ವತಿ ಸಮ್ಮಿಲನವಾಗಿರುವ ಗುಡಿ ಇರಬೇಕು ಎಂಬ ಕಲ್ಪನೆ ಮೂಡಿಸಿದೆ. ಸಂಶೋಧಕರಿಗೆ ಪ್ರಶ್ನಾರ್ಥಕವಾಗಿ ನಿಂತಿದೆ - ಈ ವಾಸ್ತು ಎಂದು ಹೇಳಬಹುದು. ಲಕ್ಷ್ಮೀ ಪಾರ್ವತೀ ಎರಡೂ ಐಕ್ಯರೂಪದಲ್ಲಿದ್ದರೂ ಆಶ್ಚರ್ಯವಿಲ್ಲವೆನ್ನಬಹುದು. ಆದರೆ ಇಂಥದೊಂದು ಮೂರ್ತಿ ಲಭ್ಯವಾಗಿಲ್ಲದಿರುವುದು ಕೂಡ ಗಮನೀಯ. ಆದರೆ ಪಾರ್ವತಿ ಗುಡಿ ಎನ್ನುವುದರಲ್ಲಿ ಮಾತ್ರ ಸಂಶಯವೇ ಇಲ್ಲ.

ಈ ದೇವಾಲಯದಲ್ಲಿ ಹೊಯ್ಸಳರ ಶೈಲಿಯ ನಂದಿಯ ಶಿಲ್ಪವಿದೆ. ಇದರಂತೆ ಪೂರ್ಣವಾಗಿ ಜೀರ್ಣೋದ್ಧಾರಗೊಂಡಿರುವ 'ಎಲ್ಲಮ್ಮನ ದೇವಾಲಯ'ದಲ್ಲಿ ೬' ಎತ್ತರದ ಗಾರೆಗಚ್ಚಿನ ದೇವಿಯಬಿಂಬವಿದೆ. ಬಿಂಬಕ್ಕೆ ಗಾಜು ಮತ್ತು ಬಣ್ಣಗಳಿಂದ ಅಲಂಕರಿಸಲಾಗಿದೆ. ಇದು ಕೋಲಾರದ ಗಾರೆಗಚ್ಚಿನ ಶಿಲ್ಪಗಳನ್ನು ನೆನಪಿಗೆ ತರುತ್ತಿದೆ. ದೇವಿಯ ಬಿಂಬದ ಬಳಿ ಕಲ್ಲಿನ ಮತ್ತೊಂದು ರುಂಡವಿದೆ. ಇದನ್ನು 'ಎಲ್ಲಮ್ಮ ದೇವಿ' ಎಂದು ಪೂಜಿಸುತ್ತಿದ್ದಾರೆ.

ಹೆಬ್ಬೂರಿನಲ್ಲಿ ವೈಷ್ಣವ ದೇವಾಲಯಗಳನ್ನು ಗಮನಿಸಿದರೆ, ಕಲ್ಯಾಣಿ ಚಾಳುಕ್ಯ ಮತ್ತು ಹೊಯ್ಸಳರ ಕಾಲದ ಅವಶೇಷಗಳು ಹೆಚ್ಚಾಗಿ ಕಾಣಬರುತ್ತಿವೆ. ಇಲ್ಲಿ 'ವೆಂಕಟೇಶ ದೇವರ ಗುಡಿ' ಎಂದು ಗುರುತಿಸುವ ಸಣ್ಣಗುಡಿ ಇದೆ. ಇದು ಚಿಕ್ಕದಾದ, ಕುಳ್ಳಾದ ಗರ್ಭಗೃಹ ಮತ್ತು ತೆರೆದ ಅಂತರಾಳದ ಭಾಗ ಮಾತ್ರವಿರುವ ಗುಡಿಯಾಗಿದೆ. ಈ ಗರ್ಭಗೃಹದಲ್ಲಿ ಚಿಕ್ಕದಾದ ಪಾಣಿವಟ್ಟದ ಮೇಲೆ ಸು. ೨½' ಎತ್ತರದ ವಿಷ್ಣುವಿನ ಶಿಲ್ಪವಿದೆ. ಸಮಭಂಗಿಯಲ್ಲಿ ನಿಂತಿರುವ ದೇವನ ಪಾದದ ಬಳಿ ಶ್ರೀದೇವಿ ಭೂದೇವಿಯರ ಶಿಲ್ಪವೂ ಇದೆ. ದೇವನ ಚತುರ್ಭುಜಗಳಲ್ಲಿ ಕ್ರಮವಾಗಿ ಅಭಯ, ಶಂಖ, ಚಕ್ರ ಮತ್ತು ಗದ್ದೆಗಳನ್ನು ಕಾಣುತ್ತೇವೆ. ದೇವನಿಗೆ ವಲ್ಲಿಯ ಪ್ರಭಾವಳಿ, ಕಿರೀಟ ಮಕುಟಗಳಿವೆ ಸರಳವಾಗಿ ಬಿಡಿಸಿರುವ ಶಂಖ, ಚಕ್ರ, ಅವುಗಳನ್ನು ಹಿಡಿದಿರುವ ರೀತಿ, ದೇಹಕ್ಕೆ ಅಂಟಿದಂತೆ ಬಿಡಿಸಿರುವ ಆಭರಣಗಳ ಸರಳ ಕಟೀವಸ್ತ್ರ ಇವೆಲ್ಲವೂ ಶಿಲ್ಪವು ಸು. ೧೧ನೇ ಶತಮಾನದ್ದೆಂದೂ ಸೂಚಿಸುತ್ತವೆ. ದೇವನಿಗೆ 'ಗರುಡಪೀಠ'ವಿರದೆ ನೆಲಕ್ಕೆ ಸೇರಿದಂತಿರುವ ಪಾಣಿಪೀಠದ ಮೇಲೆ ದೇವನ ಬಿಂಬವಿದೆ. ಇಲ್ಲಿ ಗುಡಿಯ ವಾಸ್ತುವಿಶೇಷವೇನೂ ಕಂಡು ಬರದಿದ್ದರೂ ಶಿಲ್ಪದ ಆಧಾರದಿಂದ ಪ್ರಾಚೀನವಾದ ಗುಡಿ ಎನ್ನಿಸುತ್ತಿದೆ.



***ಬೇಟೆರಾಯಸ್ವಾಮಿಗುಡಿಯು*** ಈ ಊರಿನಲ್ಲಿರುವ ದೇವಾಲಯಗಳಲ್ಲೆಲ್ಲ ಅತ್ಯಂತ ವಿಶಾಲವಾದ ದೇವಾಲಯವಾಗಿದೆ. ಪ್ರಾಚೀನವಾದ ಈ ಭವ್ಯದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳುಳ್ಳ ದೇವಾಲಯವಾಗಿದೆ. ದೇವಾಲಯದ ಮುಖಮಂಟಪಕ್ಕೆ ಮೂರು ದಿಕ್ಕಿನಲ್ಲೂ ಸೋಪಾನಗಳಿದ್ದು ಪೂರ್ವದ ಸೋಪಾನ ಪಂಕ್ತಿಯು ಆನೆಗಳಿಂದ ಅಲಂಕೃತವಾಗಿದೆ. ಗರ್ಭಗೃಹ, ಎರಡು ಅಂತರಾಳಗಳು ಮತ್ತು ನವರಂಗ ಪ್ರಾಚೀನವಾದ ರಚನೆಯಾಗಿದ್ದು, ಮುಖಮಂಟಪದ ಭಾಗಗಳು ನಂತರದ ಸೇರ್ಪಡೆಯಾಗಿದೆ. ಗರ್ಭಗೃಹ, ಅಂತರಾಳದ ದ್ವಾರಬಂಧಗಳು ನಿರಲಂಕೃತವಾಗಿವೆ. ದ್ವಾರಬಂಧದಲ್ಲಿ ಲಲಾಟ ಬಿಂಬ ಮತ್ತು ದ್ವಾರಪಾಲಕರ ಶಿಲ್ಪಗಳು ಇಲ್ಲ. ವಿಶಾಲವಾದ ನವರಂಗವಿದೆ. ನವರಂಗದ ಮಧ್ಯದಲ್ಲಿ ನಾಲ್ಕು ದಪ್ಪದಾದ ಸರಳವಾದ ಕಂಬಗಳಿವೆ. ಕಂಬಗಳು ಸೀಳುಬೋದಿಗೆಯಿಂದ ಕೂಡಿವೆ. ನವರಂಗದ ವಿತಾನದಲ್ಲಿ ವಜ್ರಾಕೃತಿಯ ಅಲಂಕಾರವಿದೆ. ನವರಂಗದ ದ್ವಾರಬಂಧವು ಪಾಳೇಗಾರರ ಕಾಲದ್ದಾಗಿದ್ದು, ದ್ವಾರಪಾಲಕರ ಶಿಲ್ಪಗಳೂ ಇವೆ. ವಿಶಾಲವಾದ ಮುಖ ಮಂಟಪದಲ್ಲಿ ಸಾಲಾಗಿ ನಾಲ್ಕು ಕಂಬಗಳಿವೆ. ಈ ದೇವಾಲಯವು ಮಂಚಕ ರೀತಿಯ ಅಧಿಷ್ಠಾನದ ಮೇಲೆ ಅಗಲವಾದ ಕಲ್ಲು ಚಪ್ಪಡಿಗಳಿಂದಾದ ಭಿತ್ತಿಯಿಂದ ಕೂಡಿದೆ. ಗರ್ಭಗೃಹದ ಭಾಗದ ಭಿತ್ತಿ ಪುನಾರಚನೆಗೊಂಡಿದೆ. ಭಿತ್ತಿಯ ಮೇಲ್ಭಾಗದ ಪ್ರಸ್ತರದಲ್ಲಿ ಕಪೋತದ ಭಾಗ ಮಾತ್ರವಿದ್ದು ಕೈಪಿಡಿ ಗೋಡೆ ಕಟ್ಟಲಾಗಿದೆ. ದೇವಾಲಯದ ಶಿಖರದ ಭಾಗ ಇಲ್ಲ. ದೇವಾಲಯದ ಮುಂದೆ ಎತ್ತರವಾದ ಬಲಿಪೀಠವೂ, ದೀಪಸ್ತಂಭವೂ ಇದೆ. ವಿಶಾಲವಾದ ಪ್ರಾಕಾರವುಳ್ಳ ಈ ಭವ್ಯದೇಗುಲ ಇಂದು ಪಾಳುಬಿದ್ದಿದೆ.

ದೇವಾಲಯದ ಗರ್ಭಗೃಹವು ಬಾವುಲಿಗಳ ವಾಸಸ್ಥಾನ ವಾಗಿದ್ದರೆ, ಮುಖಮಂಟಪವು ಅನಾಥ ವಾಸಸ್ಥಳವಾಗಿದೆ. ನವರಂಗದ ಒಂದು ಭಾಗದಲ್ಲಿ ದೊಡ್ಡದಾದ ಹುತ್ತವೇ ಬೆಳೆದಿದೆ.

ಗರ್ಭಗೃಹದಲ್ಲಿ ೨' ಎತ್ತರದ ಪೀಠದ ಮೇಲೆ ಸ್ಥಾನೀಕನಾದ ಬೇಟೆರಾಯ ಸ್ವಾಮಿಯ ಸು. ೩' ಎತ್ತರದ ಶಿಲ್ಪವಿದೆ. ಸಮಭಂಗಿಯಲ್ಲಿ ಸ್ಥಾನೀಕನಾಗಿರುವ ದೇವನ ಕೈಗಳಲ್ಲಿ ಕ್ರಮವಾಗಿ ಬಾಣ, ಚಕ್ರ, ಶಂಖ, ಧನಸ್ಸುಗಳನ್ನು ಹಿಡಿದಿರುವಂತೆ ಕಾಣುತ್ತದೆ. ಶಿಲ್ಪದಲ್ಲಿ ಕಿರೀಟ ಮತ್ತು ವೈಜಯಂತಿ ಹಾರವನ್ನು ಬಿಟ್ಟರೆ ಬೇರಾವ ಆಭರಣಗಳ ವಿನ್ಯಾಸವೂ ಸ್ಪಷ್ಟವಾಗಿಲ್ಲ. ದೇವನ ಎಡಭಾಗದಲ್ಲಿ ಮಾತ್ರ ದೇವಿಯ ಅಸ್ಪಷ್ಟವಾದ ಕೆತ್ತನೆ ಇದೆ; ಬಲಭಾಗದಲ್ಲಿಲ್ಲ. ಈ ಶಿಲ್ಪವು ಚಿಕ್ಕದಾದ ಪ್ರಭಾವಳಿಯನ್ನು ಹೊಂದಿದೆ. ಆದರೆ ಪೂರ್ಣವಾಗಿ ಕೆತ್ತಲಾಗಿಲ್ಲ. ಶಿಲ್ಪವು ಧೂಳಿನಿಂದ ಕೂಡಿದ್ದೆ. ಇದನ್ನು ಒಂದು ಗರುಡ ಪೀಠದ ಮೇಲೆ ತಂದಿಟ್ಟು ಮತ್ತೊಂದು ಪ್ರಭಾವಳಿಯನ್ನು ಶಿಲ್ಪಕ್ಕೆ ಹೊಂದಿಸಿಟ್ಟಿದ್ದಾರೆ. ಗರುಡ ಪೀಠ, ಮೊದಲ ಪ್ರಭಾವಳಿ ಮತ್ತು ದೇವನ ಶಿಲ್ಪ ಮೂರೂ ಬೇರೆ ಬೇರೆ ಭಾಗಗಳೆಂದು ಗೋಚರವಾಗುತ್ತಿದೆ.' ಇಂದು ಈ ದೇವನಿಗೆ ಪೂಜೆ, ರಕ್ಷಣೆ ದೇವಾಲಯ ಪಾಳುಬಿದ್ದಿದೆ. ಈ ದೇವಾಲಯದ ನವರಂಗದಲ್ಲಿರುವ ಹುತ್ತಕ್ಕೆ ಒರಗಿಸಿದಂತೆ ಮತ್ತೊಂದು ಬೇಟೆರಾಯಸ್ವಾಮಿಯ ಶಿಲ್ಪವಿದೆ. ಸುಂದರವಾದ ಮಕರ ತೋರಣದ ಪ್ರಭಾವಳಿಯ ಮಧ್ಯೆ ದೇವನು ಸಮಭಂಗಿಯಲ್ಲಿ ಸ್ಥಾನೀಕನಾಗಿದ್ದಾನೆ. ಪ್ರಭಾವಳಿಯವಲ್ಲಿ ಸುರುಳಿಗಳಲ್ಲಿ ದಶಾವತಾರದ ಚಿಕಣಿ ಶಿಲ್ಪಗಳಿವೆ. ದೇವನು ಚತುರ್ಭುಜಗಳಲ್ಲಿ ಕ್ರಮವಾಗಿ ಬಾಣ, ಚಕ್ರ, ಶಂಖ ಮತ್ತು ಧನುಸ್ಸನ್ನು ಹಿಡಿದಿದ್ದಾನೆ. ದೇವನ ಪಾದಗಳ ಬಳಿ ಶ್ರೀದೇವಿ, ಭೂದೇವಿಯರ ಶಿಲ್ಪಗಳಿವೆ. ದೇವಿಯರ ಕೈಗಳಲ್ಲಿ ಚಾಮರವಿದೆ. ಸುಂದರವಾದ ಕುಸುರಿಯಿಂದ ಕೂಡಿದ, ಆಭರಣಯುಕ್ತವಾದ, ಬಳಪದ ಕಲ್ಲಿನ ಈ ಶಿಲ್ಪವು ಹೊಯ್ಸಳರ ಶೈಲಿಯ ಶಿಲ್ಪವಾಗಿದೆ. ನವರಂಗದ ದ್ವಾರದಲ್ಲಿರುವ ಕಗ್ಗಲ್ಲಿನ ದ್ವಾರಪಾಲಕರ ಶಿಲ್ಪಗಳು ಪಾಳೆಯಗಾರರ ಕಾಲದ ಶಿಲ್ಪಗಳಾಗಿವೆ.

ಈ ದೇವಾಲಯದ ನವರಂಗ ಮತ್ತು ಅಂತರಾಳದ ಬಲಭಾಗದ ಭಿತ್ತಿಯ ಭಾಗಗಳು ನಶಿಸಿವೆ. ಈ ನಶಿಸಿರುವ ಭಿತ್ತಿಯಲ್ಲಿ ಗಾತ್ರದ ಸು. ೬' ಅಗಲದ ಸಣ್ಣ ಇಟ್ಟಿಗೆಗಳನ್ನು ಬಳಸಲಾಗಿದ್ದು, ದೇವಾಲಯವು ಮೊದಲಿಗೆ ಇಟ್ಟಿಗೆಯ ನಿರ್ಮಾಣವಾಗಿತ್ತೆಂದೂ ಸು. ೧೦ನೇ. ಶತಮಾನದ ಗಂಗರ ಅಂತ್ಯಕಾಲದ ವಾಸ್ತುವೆಂದೂ ಸೂಚಿಸುತ್ತಿದೆ. ಈ ಭಾಗದ ಸಮೀಪದಲ್ಲೇ ಆ ಕಾಲಕ್ಕೆ ಸೇರುವ ಕಂಬವೊಂದು ನಶಿಸಿ ಬಿದ್ದಿದೆ. ಈ ಅವಶೇಷಗಳನ್ನು ಗಮನಿಸಿದಾಗ ಈ ದೇವಾಲಯವು ಸು. ೧೦-೧೧ನೇ ಶತಮಾನದಿಂದ ೧೬-೧೭ನೇ ಶತಮಾನದವರೆಗೆ ನಶಿಸಿ ಜೀರ್ಣೋದ್ಧಾರಗೊಂಡು ಭವ್ಯ ದೇಗುಲವಾಗಿ ನಿರ್ಮಿತವಾದರೂ ಇಂದು ಪಾಳುಬಿದ್ದಿರುವುದನ್ನು ಕಂಡಾಗ ಮರುಕವಾಗುವಂತಿದೆ.



ಹೆಬ್ಬೂರಿನಲ್ಲಿ ಇಂದು ಪ್ರಸಿದ್ಧವಾಗಿರುವ ಮತ್ತೊಂದು ದೇವಾಲಯ 'ವರದರಾಜಸ್ವಾಮಿ ದೇವಾಲಯ'. ಇದು ಸು.೧೬-೧೭ನೇ ಶತಮಾನದಲ್ಲಿ ಜೀರ್ಣೋದ್ಧಾರವಾಗಿರುವ ಈಗಲೂ ಪೂಜೆ ನಡೆಯುತ್ತಿರುವ ಭವ್ಯದೇವಾಲಯವಾಗಿದೆ. ಈ ದೇವಾಲಯದ ಗರ್ಭಗೃಹ ಅಂತರಾಳಗಳು ಪ್ರಾಚೀನವಾದ ಭಾಗಗಳಾಗಿದ್ದು, ನವರಂಗ ಮತ್ತ ಮುಖಮಂಟಪದ ಭಾಗಗಳು ನಂತರದ ಕಾಲದ ಸೇರ್ಪಡೆಯಾಗಿದೆ. ಸುಂದರವಾದ ಪ್ರಕಾರ ಮಂಟಪವಿರುವ ದೇವಾಲಯ ಹೆಬ್ಬೂರಿನ ಪ್ರಾಚೀನ ದೇವಾಲಯಗಳಲ್ಲೆಲ್ಲ ಆಕರ್ಷಣೀಯವೆನ್ನಿಸಿದೆ. ದೇವಾಲಯದ ನವರಂಗ ಮಂಟಪದ ಕಂಬಗಳು ಚಿತ್ರಖಂಡ ಕಂಬಗಳಾಗಿವೆ. ಮಧ್ಯದ ಅಂಕಣದ ವಿತಾನದಲ್ಲಿ ಕಮಲದ ಅಲಂಕಾರವಿದೆ. ಮುಖಮಂಟಪದ ಭಾಗದ ವಿನ್ಯಾಸವು ಮಾಗಡಿ ಸೋಮೇಶ್ವರ ದೇವಾಲಯದ ವಿನ್ಯಾಸವನ್ನು ಹೋಲುತ್ತದೆ. ಇಲ್ಲಿಯ ಕಂಬಗಳಲ್ಲಿ ಪದ್ಮಕಾಂತ ಸ್ತಂಭಗಳನ್ನು, ಸಂಯೋಗ ಸ್ತಂಭಗಳನ್ನೂ ಕಾಣುತ್ತೇವೆ. ಪುಷ್ಪಬೋದಿಗೆಯಿಂದ ಕೂಡಿರುವ ಈ ಮಂಟಪಗಳ ಮೇಲ್ಛಾವಣಿಯ ಪಟ್ಟಿಕೆಗಳಲ್ಲಿ ಪುಷ್ಪಗಳು ಲತಾಬಳ್ಳಿ, ಹಂಸ, ಯಾಳಿ, ಮುಂತಾದ ಶಿಲ್ಪ ಪಟ್ಟಿಕೆಗಳು ಇವೆ. ಈ ಪಟ್ಟಿಕೆಗಳಲ್ಲಿ ೧-೨ ಪಂಚತಂತ್ರದ ಕಥೆಯ ಶಿಲ್ಪಗಳನ್ನು ಕಾಣಬಹುದಾಗಿದೆ. ಈ ಭಾಗದ ಹೊರಭಿತ್ತಿಯ ಪಟ್ಟಿಕೆಗಳಲ್ಲೂ ಸೈನಿಕರು, ಕುದುರೆ ಸವಾರರೂ, ಆನೆಗಳ ಸಾಲು ಮುಂತಾದ ಶಿಲ್ಪಗಳನ್ನೂ ಯುದ್ಧದ ದೃಶ್ಯವನ್ನು ಕೆತ್ತಲಾಗಿದೆ. ಅಧಿಷ್ಠಾನಯುಕ್ತವಾಗಿರುವ ಈ ಮಂಟಪದ ಪಾಳೆಯಗಾರರ ಕಾಲದ ವಾಸ್ತುವಾಗಿದೆ. ಈ ದೇವಾಲಯವೂ ಈಗ ೫-೬ ವರ್ಷಗಳ ಹಿಂದೆ ಪುನಾರಚನೆಗೊಂಡಿದ್ದು ಇಂದಿಗೂ ಉಳಿದು ಬಂದಿದೆ ಈ ದೇವಾಲಯದ ಗರ್ಭಗೃಹದಲ್ಲಿ ದೊಡ್ಡದಾದ ಕಗ್ಗಲ್ಲಿನ ಗರುಡಪೀಠದ ಮೇಲೆ ವರದರಾಜಸ್ವಾಮಿಯ ಬಿಂಬವಿದೆ.



ಉದ್ದವಾದ ಕಿರೀಟ ಧರಿಸಿರುವ ದೇವನ ಕೈಗಳಲ್ಲಿ ಕ್ರಮವಾಗಿ ವರದಹಸ್ತ, ಶಂಖ, ಚಕ್ರ ಮತ್ತು ಗದೆಗಳನ್ನು ಕಾಣುತ್ತೇವೆ. ಸರಳವಾದ ಕಿರೀಟ, ಬಟ್ಟೆ, ಉರಧಾಮವಿರದ ಈ ಶಿಲ್ಪ ಶಂಖ ಚಕ್ರಗಳನ್ನು ಹಿಡಿದಿರುವ ರೀತಿ, ಗದೆಯ ವಿನ್ಯಾಸ ಇವು ಶಿಲ್ಪವು ಸು. ೧೧ನೇ ಶತಮಾನದ್ದೆಂದೂ ಸೂಚಿಸುತ್ತವೆ. ಶಿಲ್ಪಕ್ಕೆ ತಕ್ಕದಾದ ಚಿಕ್ಕ ಗರುಡ ಪೀಠವೊಂದು ಹೊಂದಿಕೊಂಡಂತಿದೆ. ದೇವನ ಪಕ್ಕದಲ್ಲಿರುವ ದೇವಿಯರ ಶಿಲ್ಪಗಳು ಸಾಮಾನ್ಯವಾಗಿದ್ದು, ದ್ವಿಭಂಗಿಯಲ್ಲಿಲ್ಲ. ಇಂಥ ಈ ಶಿಲ್ಪವನ್ನು ಎಲ್ಲಿಂದಲೋ ತಂದಿಟ್ಟಿರುವಂತಿದೆ. ಅಂತರಾಳದಲ್ಲಿರುವ ಪಟ್ಟಿಕೆಯ ಮೇಲೆ ಕೆಲವು ಆಳ್ವಾರರ ಶಿಲ್ಪಗಳಿವೆ.

ನವರಂಗದ ದ್ವಾರದಲ್ಲಿರುವ ದ್ವಾರಪಾಲಕರ ಶಿಲ್ಪಗಳು ಪಾಳೆಯಗಾರರ ಕಾಲದ್ದಾಗಿದೆ. ಅಂತರಾಳದ ಪಕ್ಕದಲ್ಲಿರುವ ಕೋಣೆಯಲ್ಲಿ ಆಸೀನಳಾದ ಲಕ್ಷ್ಮಿಯ ಬಿಂಬವಿದೆ. ಪದ್ಮಪೀಠದ ಮೇಲೆ ಪದ್ಮಾಸನ ಭಂಗಿಯಲ್ಲಿರುವ ದೇವಿಯ ಚತುರ್ಭುಜಗಳಲ್ಲಿ ಮುಂದಿನ ಕೈಗಳು ಅಭಯ, ವರದ ಹಸ್ತಗಳಾಗಿದ್ದೂ, ಹಿಂಗೈಗಳಲ್ಲಿ ಪದ್ಮವನ್ನು ಧರಿಸಿದ್ದಾಳೆ. ಈ ಶಿಲ್ಪವು ಸು. ೧೭ನೇ ಶತಮಾನದ್ದಾಗಿದೆ.

ಈ ಕೆಲವು ಪ್ರಾಚೀನ ದೇವಾಲಯಗಳಲ್ಲದೇ, ಹೆಬ್ಬೂರಿನಲ್ಲಿ ಇನ್ನೂ ಅನೇಕ ದೇವಾಲಯಗಳಿವೆ. ಕೆಲವು ಈಚಿಗೆ ಕಟ್ಟಲಾದ ನೂತನ ನಿರ್ಮಾಣಗಳಾದರೆ, ಮತ್ತೆ ಕೆಲವು ೧೭-೧೮ನೇ ಶತಮಾನದ ನಿರ್ಮಿತಿಗಳು. ಇಲ್ಲಿ ಪ್ರಾಚೀನ ದೇವಾಲಯಗಳ ಬಗೆಗೆ ಮಾತ್ರ ಅಭ್ಯಾಸ ಮಾಡಲಾಗಿದೆ. ಆದ್ದರಿಂದ ಹೆಬ್ಬೂರಿನ ಉಳಿದ ದೇವಾಲಯಗಳ ಅಧ್ಯಯನವೂ, ಮತ್ತೂ ಕಾಮಾಕ್ಷಿ ದೇವಾಲಯದ ವಿಭಿನ್ನ ಶೈಲಿಯ ವಾಸ್ತುವಿನ ಅಧ್ಯಯನವೂ ನಡೆಯಬೇಕಾದ ಅಗತ್ಯವಿದೆ. ಈ ಅಧ್ಯಯನ ಪೂರ್ಣಗೊಂಡಾಗ ಸಣ್ಣಗ್ರಾಮದ ಹೆಬ್ಬೂರಿನ ಹಿರಿಯ ವೈಶಿಷ್ಟ್ಯದ ಅರಿವಾಗುವುದು.

(ನನ್ನ ಪ್ರವಾಸದ ಸಮಯದಲ್ಲಿ ಜೊತೆಯಲ್ಲಿದ್ದು, ವಾಸ್ತುಶಿಲ್ಪ ವಿವರಗಳನ್ನು ಖಚಿತಪಡಿಸಿದ ಶ್ರೀಮತಿ ಕೂ. ಸ. ಅಪರ್ಣರವರಿಗೂ, ಸ್ಥಳೀಕರಾದ ಶ್ರೀ ಪ್ರಭುರವರಿಗೂ ಮತ್ತು ಕು. ಸೌಮ್ಯರವರಿಗೂ ನಾನು ಋಣಿಯಾಗಿದ್ದೇನೆ.)

ಸಿ. ಆರ್. ಶ್ಯಾಮಲ*

# ಬಳ್ಳಾರಿ ಗುಡ್ಡದ ಮೇಲಿನ ದೇವಾಲಯಗಳು

ಇಂದಿನ ಹಳೇ ಬಳ್ಳಾರಿಯು ಬಳ್ಳಾರಿಗುಡ್ಡ ಮತ್ತು ಬಾಲದ ಗುಡ್ಡ ಎಂಬ ಎರಡು ಗುಡ್ಡಗಳ ನಡುವೆ ಇದೆ. ಬಳ್ಳಾರಿಗುಡ್ಡವು ನಾಲ್ಕು ಸುತ್ತಿನ ಕೋಟೆಯನ್ನು ಹೊಂದಿದೆ. ಬಳ್ಳಾರಿಕೋಟೆ ಬಹಳ ಪ್ರಸಿದ್ಧವಾದುದು. ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ಆಳಿದ ಬಳ್ಳಾರಿ ಪಾಳೆಯಗಾರನಾದ ಹಂಡೆ ಬಾಲದ ಹನುಮಪ್ಪನಾಯಕನು (ಕ್ರಿ. ಶ. ೧೫೬೭-೧೬೩೨) ಮೇಲಿನ ಕೋಟೆಯನ್ನೂ, ಹೈದರಾಲಿಯು ಕೆಳಗಿನ ಎರಡು ಕೋಟೆಗಳನ್ನೂ ಕಟ್ಟಿಸಿದನೆಂಬ ಪ್ರತೀತಿಯಿದೆ. ಹಂಡೆವಂಶದ ಕೊನೆಯ ಪಾಳೆಯಗಾರನಾದ ದೊಡ್ಡಪ್ಪನಾಯಕನೊಡನೆ (ಕ್ರಿ. ಶ. ೧೭೬೯-೧೭೭೫) ಯುದ್ಧ ಮಾಡುವಾಗ ನಾಲ್ಕೂ ಕೋಟೆಗಳು ಹಾಳಾದ್ದರಿಂದ, ಹೈದರಾಲಿಯು ಅವುಗಳ ದುರಸ್ತಿ ಶುರು ಮಾಡಿದ ಕೆಲಸವನ್ನು ಅವನ ಮಗ ಟೀಪೂಸುಲ್ತಾನನು ಗಾರೆಗಚ್ಚುಗಳಿಂದ ಬುರುಜುಗಳ ಸಮೇತವಾಗಿ ಪುನಃ ಗಟ್ಟಿಯಾಗಿ ಕಟ್ಟಿಸಿದನು.

ಬಳ್ಳಾರಿಗುಡ್ಡದ ಮೇಲೆ, ಬೆಟ್ಟದ ತುಂಬಾ ಹರಡಿದಂತೆ ಏಳು ಸಣ್ಣ ಸಣ್ಣ ಕೋಣೆಗಳಿವೆ. ಪ್ರಕೃತಿ ನಿರ್ಮಿತ ನೀರಿನ ಹೊಂಡಗಳಿವೆ. ಒಂದು ಹೊಂಡವಂತೂ ೨೯ ಅಡಿ ಆಳವಾಗಿದೆ. ಈ ಹೊಂಡದ ಹತ್ತಿರದಲ್ಲಿಯೇ, ಮೇಲಿನ ಕೋಟೆಯ ಪೂರ್ವಕ್ಕೆ ಜೋಡಿ ದೇವಾಲಯಗಳಿವೆ. ಈ ದೇವಾಲಯಗಳ ಬಗ್ಗೆ ನನಗೆ ವಿಶೇಷವಾಗಿ ಕಂಡದ್ದನ್ನು ಇಲ್ಲಿ ಮಂಡಿಸಲು ಪ್ರಯತ್ನಿಸಿದ್ದೇನೆ.

ಈ ದೇವಾಲಯಗಳು ಜೀರ್ಣವಾಗಿವೆ. ಮೊದಲು ಇಲ್ಲಿ ಶಾಸನವಿದ್ದಿತಂತೆ. ಆದರೆ ಈಗ ಯಾವ ಶಾಸನವೂ ದೊರೆಯದ ಕಾರಣ ಇದರ ಇತಿಹಾಸ ತಿಳಿಯುವುದು ಸ್ವಲ್ಪ ಕಷ್ಟಕರವಾಗಿದೆ. ಶಿಲ್ಪದ ಶೈಲಿಯನ್ನು ಗಮನಿಸಿದಾಗ ನಮಗೆ ಚಾಲುಕ್ಯ ವೇಸರ ಶೈಲಿಯೂ, ಪಾಳೆಯಗಾರರ ಶೈಲಿಯೂ ಕಂಡು ಬರುತ್ತವೆ. ಇಲ್ಲಿ ಗರ್ಭಗುಡಿ ಹಾಗೂ ಮುಖ ಮಂಟಪ ಮಾತ್ರವಿದ್ದು ಪ್ರಾಕಾರವಾಗಲೀ, ಅಂತರಾಳವಾಗಲೀ, ನವರಂಗವಾಗಲೀ ಇಲ್ಲ. ಗೋಡೆಗಳು ಕಲ್ಲಿನಿಂದ ಕಟ್ಟಿದ್ದು, ಗೋಪುರಗಳು ಇಟ್ಟಿಗೆಯಿಂದ ನಿರ್ಮಿಸಲ್ಪಟ್ಟಿವೆ. ಗೋಪುರಗಳು ವರ್ತುಳಾಕಾರವಿದ್ದು ಮೆಟ್ಟಿಲು ಮೆಟ್ಟಿಲಾಗಿ ಮೇಲೇರುತ್ತಾ ಸಣ್ಣದಾಗುವಂತೆ ಕಾಣುತ್ತವೆ. ಒಂದು ದೇವಸ್ಥಾನದಲ್ಲಿ ವರ್ತುಳಾಕಾರದ ಪೀಠವೂ ಮತ್ತೊಂದರಲ್ಲಿ ಚೌಕಾಕಾರದ ಪೀಠವೂ ಬಿದ್ದಿವೆ. ದ್ವಾರಗಳ ಲಲಾಟ ಬಿಂಬದ ಮೇಲೆ ಗಜಲಕ್ಷ್ಮಿಯ ಉಬ್ಬು ಚಿತ್ರಗಳಿವೆ. ದ್ವಾರದ ಚೌಕಟ್ಟಿನ ಎಡಬಲಗಳಲ್ಲಿ, ಗೋಡೆಯೊಳಗೇ ಅಡಕವಾಗಿರುವಂತೆ ಎರಡೆರಡು ಕಲ್ಲಿನ ಕಂಬಗಳಿವೆ. ಇವುಗಳ ಮಧ್ಯದಲ್ಲಿ ಆಯತಾಕಾರದ ಮೂರು ಅಂಕಣಗಳಲ್ಲಿ ಶಿಲ್ಪಗಳು ಕಂಡುಬರುತ್ತವೆ. ದಟ್ಟವಾಗಿ ಸುಣ್ಣ ಮತ್ತು ಅಲ್ಲಲ್ಲಿ ಕೆಂಪು ಬಣ್ಣವನ್ನು ಹಚ್ಚಿರುವುದರಿಂದ ವಿಗ್ರಹಗಳ ರೂಪರೇಷೆ ಹಾಗೂ ವಿವರಗಳು ತಿಳಿಯಲಾಗುವುದಿಲ್ಲ. ಆದ್ದರಿಂದಲೇ ಶಿಲ್ಪಶೈಲಿಯ ಬಗ್ಗೆಯೂ ನಿಶ್ಚಿತ ಅಭಿಪ್ರಾಯ ನೀಡಲು ಸಾಧ್ಯವಿಲ್ಲವಾಗಿದೆ. ದ್ವಾರದ ಇಕ್ಕೆಡೆಗಳಲ್ಲಿನ ಕಂಬಗಳ ಕೆಳಗೆ ಒಂದೇ ಬಗೆಯ ಮೂರು ಉಬ್ಬು ಶಿಲ್ಪಗಳಿವೆ. ದ್ವಾರಪಾಲಕಿಯರ ಪಕ್ಕದಲ್ಲಿ ಎರಡು ಶಿಲ್ಪಗಳಿದ್ದು ಅದರಲ್ಲಿ ಒಂದನ್ನು-ಬಾಲ ತಲೆಯ ಮೇಲೆ ಎತ್ತಿಕೊಂಡು ನಿಂತಿರುವ ಹನುಮಂತನೆಂದು ಗುರುತಿಸಬಹುದಾಗಿದೆ. ಇನ್ನೊಂದು ಶಿಲ್ಪವು ತ್ರಿಶೂಲಧಾರಿಯಾಗಿದ್ದು, ಅವನ ಪಕ್ಕದಲ್ಲಿ ಬಲಗಡೆಗೆ ಕೆಳಗೆ ಕೈಮುಗಿದು ನಿಂತಿರುವ ಶಿಲ್ಪವೂ ಕಂಡುಬರುತ್ತದೆ. ಈ ಚಿಕ್ಕ ಶಿಲ್ಪವು ಪ್ರಾಯಶಃ ಭಕ್ತನದೇ ಇರಬೇಕೆಂದೆನಿಸುತ್ತದೆ. ಗರ್ಭಗುಡಿಯ ಒಳಗೆ, ಎದುರು ಗೋಡೆಯ ಮೇಲ್ಭಾಗದ ಅಂಚಿನಲ್ಲಿ ತ್ರಿಕೋಣಾಕಾರದ ತೋರಣದ ಚಿತ್ರವಿದೆ. ಇದನ್ನು ಬಿಟ್ಟರೆ ಗರ್ಭಗುಡಿಯ ಒಳಗೆ ಗೋಡೆಗಳಲ್ಲಾಗಲೀ, ಮೇಲ್ಗಂಡ(ಛಾವಣಿ)ದಲ್ಲಾಗಲೀ, ಯಾವ ಶಿಲ್ಪಗಳಾಗಲಿ ಅಲಂಕಾರಗಳಾಗಲಿ ಇಲ್ಲ. ದೇವಸ್ಥಾನದ ಹೊರಭಾಗದಲ್ಲಿ ಮೂರೂ ಕಡೆಯ ಗೋಡೆಗಳಿಗೆ ಅಂಟಿಕೊಂಡಂತೆ ಕಂಬಗಳ ಸಾಲುಗಳಿವೆ. ಇವು ನಿರಂಧಾರ (ಪದಕ್ಷಿಣಾಪಥವಿಲ್ಲದಿರುವ) ದೇವಾಲಯಗಳು.

* ಸೀತಾ ನಿವಾಸ, ವಲ್ಲಭಾಯಿ ರಸ್ತೆ, ವಿಲ್ಲೆಪಾರ್ಲೆ (ಪ), ಮುಂಬಯಿ - ೪೦೦ ೦೫೬

ದೇವಾಲಯಗಳೆರಡಕ್ಕೂ ಸೇರಿ ಉಬ್ಬು ಶಿಲ್ಪಗಳಿರುವ ಒಂದೇ ಗರುಡಗಂಬ ಇದೆ. ಈ ಕಂಬದ ಪೀಠ ಭಾಗದಲ್ಲಿ ಪಶ್ಚಿಮದ ಕಡೆಗೆ, ದೇವಸ್ಥಾನಕ್ಕೆ ಅಭಿಮುಖವಾಗಿ ಗರುಡ , ಕೈ ಮುಗಿದು ಕೊಂಡು ನಿಂತಿದ್ದಾನೆ, ದಕ್ಷಿಣದ ಕಡೆಗೆ ಹನುಮಂತ ಬಾಲವೆತ್ತಿ ಕೊಂಡು ನಿಂತಿದ್ದಾನೆ. ಉತ್ತರದ ಕಡೆಗೆ ದಂಪತಿಗಳು ಕೈ ಮುಗಿದುಕೊಂಡು ನಿಂತಿದ್ದಾರೆ. ಇವರು ಗರುಡಗಂಬವನ್ನು ನೆಟ್ಟಂತಹ ಭಕ್ತರಿರಬಹುದು. ಆಭರಣಗಳನ್ನೂ, ವೀರ ನಿಲುವನ್ನೂ, ಪೇಟ ಸುತ್ತಿ ಕೊಂಡಿರುವುದನ್ನು ನೋಡಿದರೆ ಪಾಳೆಯಗಾರನಿರ ಬಹುದು. ಪೂರ್ವದ ಕಡೆಗೆ ಯಾವ ಶಿಲ್ಪವೂ ಇಲ್ಲ.

ಇನ್ನು ಈ ದೇವಾಲಯವನ್ನು ಯಾರು, ಯಾವಾಗ, ಯಾವ ದೇವರಿಗೆ ಕಟ್ಟಿಸಿರಬಹುದೆಂದು ವಿಚಾರಮಾಡೋಣ. ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವ ಶಾಸನವೂ ದೊರೆತಿಲ್ಲ. ಆದರೆ ಪ್ರಧಾನ ಆಕರವಾದ 'ಬಳ್ಳಾರಿ ಕೈಫಿಯತ್ತನ್ನು' ಆಧರಿಸಿ ಈ ಕೆಲವು ವಿಷಯಗಳನ್ನು ಪರಿಶೀಲಿಸಬಹುದಾಗಿದೆ.



ಕೈಫಿಯತ್ತಿನಲ್ಲಿ –

*೧. ಸೋವಿದೇವನ ವಂಶಸ್ಥನಾದ ಮಲ್ಲರಾಯನು ಬಳ್ಳಾರಿ ಯಲ್ಲಿ ಕಾಶಿವಿಶ್ವನಾಥ, ಮಲ್ಲಿಕಾರ್ಜುನ, ಗೌರೀಶ್ವರ ಮೊದಲಾದ ದೇವಾಲಯಗಳನ್ನು ಕಟ್ಟಿಸಿದನೆಂದು ಹೇಳಿದೆ.*

*೨. ಬಲ್ಲಾಳರಾಯನ ವಂಶಸ್ಥನಾದ ಸಿಂಧೂ ಬಲ್ಲಾಳನು ಪರ್ವತನ ಪೂರ್ವಭಾಗದಲ್ಲಿ ವಿಷ್ಣು, ಶಿವ ದೇವಾಲಯಗಳನ್ನೂ ಜಿನಬಸ್ತಿಗಳನ್ನೂ ಕಟ್ಟಿಸಿದನೆಂದು ಹೇಳಿದೆ.*

*೩. ಹಂಡೆವಂಶದ ಪಾಳೆಯಗಾರನಾದ ಬಾಲದ ಹನುಮಪ್ಪ ನಾಯಕನು ಕೋಟೆ ಕಟ್ಟಿಸಿದನೆಂದು ತಿಳಿದು ಬರುತ್ತದೆ.*



ಕ್ರಿ. ಶ. ೮೧೬–೮೪೩ರ ವರೆಗೆ ಮತ್ತು ಕ್ರಿ. ಶ. ೮೭೦–೯೧೯ರ ವರೆಗೆ ಗಂಗವಂಶದಲ್ಲಿ ಇಬ್ಬರು ರಾಚಮಲ್ಲ ಎಂಬ ಅರಸರು ಆಳಿದ್ದಾರೆ. ಅವರೂ ಪರಮತ ಸಹಿಷ್ಣುಗಳಾಗಿದ್ದರು. ಅವರೂ ಶೈವ ಹಾಗೂ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದರು. ಆದರೆ ಅವರ ವಂಶದಲ್ಲಿ ಪ್ರಸಿದ್ಧನಾದ ಸೋವಿದೇವನೆಂಬ ಅರಸನಾರೂ ಇರಲಿಲ್ಲ.



ಚರಿತ್ರೆಯಲ್ಲಿ ಇಬ್ಬರು ಸೋವಿದೇವ ಎಂಬ ಅರಸರು ಬರುತ್ತಾರೆ. ಕಲ್ಯಾಣದ ಕಲಚೂರಿ ವಂಶಸ್ಥನಾದ ಬಿಜ್ಜಳನ ಮಗಳ ಮಗ ಸೋಮೇಶ್ವರನನ್ನು ಸೋವಿದೇವನೆಂದು ಕರೆಯುತ್ತಿದ್ದರು. ಈತನ ಕಾಲ ಕ್ರಿ. ಶ. ೧೧೬೮–೧೧೭೭ರ ವರೆಗೆ. ಆದರೆ ಈತನಿಗೆ ರಾಚಮಲ್ಲ ಎಂಬುವವನ ಸಂಬಂಧ ಬಂದಂತೆ ಕಾಣುವುದಿಲ್ಲ. ಇವನೂ ಸಿಂಧ ವಂಶಕ್ಕೇ ಸೇರಿದವನು. ಈತನಿಗೆ ಸಂತಾನವಿಲ್ಲದ ಕಾರಣ, ಇವನ ತಮ್ಮಂದಿರೇ ರಾಜ್ಯವಾಳಿದರು. ಇವರಲ್ಲಿಗೇ ಕಲಚೂರ್ಯರ ವಂಶ ಮುಕ್ತಾಯವಾಗುತ್ತದೆ.

ಕುರುಗೋಡು ಸಿಂಧ ಮನೆತನಕ್ಕೆ ಸೇರಿದ ಸೋವಿದೇವ ಕ್ರಿ. ಶ. ೧೧೨೨ರಲ್ಲಿ ಬಲಕುಂದೆನಾಡನ್ನು ಆಳುತ್ತಿದ್ದನು. ಬಲಕುಂದೆ ೩೦೦ರಲ್ಲಿ ಬಳ್ಳಾರಿಯೂ ಸಮಾವೇಶಗೊಳಿಸಿದ ಈತನು ನೊಳಂಬ ಪಲ್ಲವರನ್ನು ಸೋಲಿಸಿದನಲ್ಲದೆ, ಕುರುಗೋಡು ಸಿಂಧರ ಕೀರ್ತಿ, ಪ್ರತಿಷ್ಠೆ ಸ್ಥಾನಮಾನಗಳನ್ನು ಉನ್ನತಿಗೇರಿಸಿ, ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರ ಪದವಿಗೆ ಏರಿಸಿದ ಶ್ರೇಯಸ್ಸು ಸಲ್ಲುತ್ತದೆ. ಅವನು ಒಂದು ಶಾಸನವನ್ನು ಹಾಕಿಸಿದ್ದನಂತೆ. ಅದು ಬಹಳ ಶಿಥಿಲವಾಗಿದ್ದಿತು. ಇವನ ಐದು ಜನ ಮಕ್ಕಳಲ್ಲಿ ಎರಡನೆಯವನೇ ಒಂದನೆಯ ರಾಚಮಲ್ಲ .

ಇವನು ಕ್ರಿ. ಶ. ೧೧೪೧-೧೧೭೩ರ ವರೆಗೆ ಆಳಿದನು. ಶಾಸನಗಳಲ್ಲಿ ಈತನನ್ನು 'ಬಳ್ಳಾರೆಯ ರಾಚಮಲ್ಲ' ಎಂದು ಹೇಳಿದೆ. ಇವನೇ ಕೈಫಿಯತ್ತಿನಲ್ಲಿ ಹೇಳಿರುವ ಮಲ್ಲರಾಯ. ಶಾಸನಗಳಲ್ಲೂ ಈತನನ್ನು ಮಲ್ಲರಸನೆಂದೇ ಉಲ್ಲೇಖಿಸಿದೆ. ರಾಚಮಲ್ಲ ಸಿಂಧವಂಶದವನು, ಚಾಲುಕ್ಯರ ಮಹಾಮಂಡಲೇಶ್ವರ ಎಂಬುದನ್ನು*[೧] ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲದೇವನ ಮಹಾಮಂಡಲೇಶ್ವರನಾದ ಮಲ್ಲರಸನು ದಮ್ಮದೇವತೆಗೆ ದಾನವನ್ನು*[೨] ಮತ್ತು ಕರಕಾನ್ತೇಶ್ವರನ ಗಾನ ಪೂಜಾದಿಗಳಿಗೆ ದಾನವನ್ನು ಕೊಟ್ಟಿರುವನು*[೩] ಎಂದು ಹೇಳಿದೆ. ಮೊದಲನೆಯ ರಾಚಮಲ್ಲನು ಶೈವಭಕ್ತನಾಗಿದ್ದನು. ಬಲಕುಂದೆನಾಡಿನ ಅನೇಕ ಶಾಸನಗಳು ಇವನನ್ನು ಶಿವಪಾದ ಶಿಖಾಮಣಿ*[೪] ಶಿವಚೂಡಾಮಣಿ*[೫] ಅರ್ಚಿತ ಶಿವಪಾದ*[೬] ಎಂದೆಲ್ಲಾ ಹೊಗಳಿವೆ. 'ಸಾನಂದ ಚರಿತ್ರೆ'ಯಲ್ಲಿ ಮೊದಲನೆಯ ರಾಚಮಲ್ಲನು ಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮ, ಮೊದಲಾದ ಮಹಾಶೈವ ಭಕ್ತರ ಸಾಲಿನಲ್ಲಿ ಸೇರುತ್ತಾನೆಂದು ಹೇಳಿದೆ. *[೭] 'ವೀರಶೈವ ಮಹಾ ಪುರಾಣ'ವೂ ಈತನು ಮಹಾ ಶೈವಭಕ್ತನೆಂಬುದನ್ನು ಖಚಿತಪಡಿಸಿದೆ. ಇವನ ಮೊಮ್ಮಗನಾದ ಎರಡನೆಯ ರಾಚಮಲ್ಲನ ಶಾಸನಗಳು ಶೈವಭಕ್ತನೆಂದಷ್ಟೇ ಹೇಳಿದೆ. ಮೊದಲನೆಯ ರಾಚಮಲ್ಲನು ಬಳ್ಳಾರಿ ಗುಡ್ಡದ ಮೇಲೆ ಶೈವ ದೇವಸ್ಥಾನಗಳನ್ನು ಕಟ್ಟಿಸಿರಬಹುದು.

ಕೈಫಿಯತ್ತಿನ ಚರ್ಚೆಯ ಎರಡನೆಯ ವಿಷಯವನ್ನು ತೆಗೆದುಕೊಂಡರೆ, ಬಲ್ಲಾಳನ ವಂಶಸ್ಥನಾದ ಸಿಂಧೂಬಲ್ಲಾಳನು ಈ ಪರ್ವತ ಪ್ರದೇಶಕ್ಕೆ ಬಂದು, ಪರ್ವತದ ಮೇಲೆ ನಿರ್ಮಲೋದಕ ವಾದ ದೇವಖಾತಗಳನ್ನು ಕಂಡು, ಈ ಪರ್ವತಕ್ಕೆ ಪೂರ್ವಭಾಗದಲ್ಲಿ ವಿಷ್ಣು, ಶಿವ ದೇವಾಲಯಗಳನ್ನೂ, ಜಿನಬಸ್ತಿಗಳನ್ನೂ ಕಟ್ಟಿಸಿದನು ಎಂದು ಹೇಳಿದೆ. ಸಿಂಧವಂಶದ ಎರಡನೆಯ ರಾಚಮಲ್ಲನ ಮಗನಾದ, ಚಾಲುಕ್ಯರ ಕೊನೆಯ ಮಹಾಮಂಡಲೇಶ್ವರನಾದ ವೀರಕಲಿದೇವರಸನನ್ನು ಹೊಯ್ಸಳ ವೀರ ಎರಡನೆಯ ಬಲ್ಲಾಳನು (ಕ್ರಿ. ಶ. ೧೧೭೩-೧೨೨೦) ಸೋಲಿಸಿ ಆ ರಾಜ್ಯಗಳನ್ನೆಲ್ಲಾ ಆಕ್ರಮಿಸಿ ಕೊಂಡನು. ಅವನಿಗೆ 'ಸಿಂಧು ಬಲ್ಲಾಳ'ನೆಂಬ ಬಿರುದು ಬಂದಿತು. ಈತನೂ ಚಾಲುಕ್ಯರ ಸಾಮಂತನಾಗಿದ್ದವನೇ. ಈ ಗುಡ್ಡದ ಸೌಂದರ್ಯ ಹಾಗೂ ಕೋಟೆಯ ಭದ್ರತೆಯನ್ನು ಈಕ್ಷಿಸಿ, ಮಾರುಹೋಗಿ ಈ ಗುಡ್ಡಕ್ಕೆ ತನ್ನ ಹೆಸರನ್ನೇ ಇಟ್ಟು 'ಬಲ್ಲಾಳ ಗುಡ್ಡ'ವೆಂದು ಕರೆದಿರಬಹುದು. ಬಳ್ಳಾರಿಗುಡ್ಡಕ್ಕೆ, ಬಲ್ಲಾಳ ಗುಡ್ಡ ವೆಂದು ಇನ್ನೊಂದು ಹೆಸರಿದೆ. ಇವನು ಸರ್ವಧರ್ಮಗಳಿಗೂ ಪ್ರೋತ್ಸಾಹ ನೀಡುತ್ತಿದ್ದನು. ಆದ್ದರಿಂದ ಬೆಟ್ಟದ ಮೇಲಿರುವ ಈ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡುವಾಗ ಒಂದು ವೈಷ್ಣವ ದೇವಾಲಯವನ್ನು ಮಾಡಿರಬಹುದು. ಯಾಕೆಂದರೆ ಒಂದರಲ್ಲಿ ತ್ರಿಶೂಲ ಹಿಡಿದ ವ್ಯಕ್ತಿಯ ಶಿಲ್ಪ ಸ್ಪಷ್ಟವಿದೆ, ಮತ್ತೊಂದು ಅಷ್ಟು ಸ್ಪಷ್ಟವಾಗಿಲ್ಲವೆಂದು ಮೇಲೆ ಹೇಳಿದ್ದೇನೆ. ತ್ರಿಶೂಲ ಹಿಡಿದ ಶಿಲ್ಪದ ದೇವಾಲಯವು ಶಿವನ ಸ್ಥಾನವಾಗಿದ್ದು ಮತ್ತೊಂದು ವಿಷ್ಣುವಿನ ಸ್ಥಾನವಾಗಿರಬಹುದು.

*ಚಾಲುಕ್ಯರ ಕಾಲದಲ್ಲಿ ದೇವಾಲಯಗಳನ್ನು ನದೀ ತೀರ, ಸಂಗಮ ಸ್ಥಳ, ಕೆರೆ-ಹೊಂಡ-ಬಾವಿಗಳ ಸಮೀಪ, ಇಲ್ಲವೆ ಗುಡ್ಡಗಳ ಮೇಲೆ ಕಟ್ಟುತ್ತಿದ್ದರು. ಈ ದೇವಾಲಯದ ಗೋಡೆಗಳು ಅಲಂಕಾರ ರಹಿತವಾಗಿ ಸಾದಾ ಇರುವುದು. ನಾಗರ ಶೈಲಿಯು ಚಾಲುಕ್ಯರ ಕಾಲದಲ್ಲಿ ಸಾಕಷ್ಟು ಪ್ರಚಲಿತವಿದ್ದು, ಸಾಕಷ್ಟು ಸಂಖ್ಯೆಯಲ್ಲಿ ದೇವಾಲಯಗಳ ನಿರ್ಮಾಣವಾಗಿದ್ದಿತು. ಇವರ ಹೆಚ್ಚಿನ ದೇವಾಲಯಗಳು ನಿರಂಧಾರ ಪ್ರಕಾರದವುಗಳಾಗಿದ್ದವು. ಚಾಲುಕ್ಯ ಶೈಲಿಯ ಅನೇಕ ದೇವಾಲಯಗಳ ತಲವಿನ್ಯಾಸ ಸಾದಾ ಮತ್ತು ಚಿಕ್ಕದಾಗಿರುತ್ತಿದ್ದು, ಪೂಜೆಗೆ ಆವಶ್ಯವೆನಿಸಿದ ಭಾಗಗಳು ಮಾತ್ರ ಹೊಂದಿರುತ್ತಿದ್ದು, ಚೌಕಾದ ಗರ್ಭಗೃಹ ಹಾಗೂ ಚಿಕ್ಕ ಮುಖಮಂಟಪಗಳು ಇರುತ್ತಿದ್ದುವು. ಗರುಡಗಂಬವಾಗಲೀ ಬಸವಣ್ಣನಾಗಲೀ ಇರಲೇಬೇಕೆಂಬ ಕಟ್ಟಳೆ ಇರಲಿಲ್ಲ. ಆವರು ಗರುಡಗಂಬವನ್ನು ಅಲಂಕಾರಿಕ ಮಂಗಲ ಚಿಹ್ನೆ ಎಂದಿಷ್ಟೇ ಭಾವಿಸಿದ್ದರು. ಈ ಲಕ್ಷಣಗಳೆಲ್ಲಾ ಬಳ್ಳಾರಿಗುಡ್ಡದ ಮೇಲಿನ ದೇವಾಲಯಗಳಲ್ಲಿ ಕಂಡುಬರುವುದರಿಂದ ಇವು ಚಾಲುಕ್ಯ ಮಹಾಮಂಡಲೇಶ್ವರ ಒಂದನೆಯ ರಾಚಮಲ್ಲನೇ ಕಟ್ಟಿಸಿರಬೇಕು.*

ಚರ್ಚೆಯ ಮೂರನೆಯ ಭಾಗದ ಪ್ರಕಾರ, ಹಂಡೆ ಅನಂತಪುರದ ಕೈಫಿಯತ್ತಿನಲ್ಲಿ - ಹಂಡೆಯ ಪಾಳೆಯಗಾರರು ಸಿದ್ಧರಾಮನ ಭಕ್ತರು, ಅವರನ್ನು ಬಿಟ್ಟು ಇತರರನ್ನು ಆರಾಧಿಸುತ್ತಿರಲಿಲ್ಲ, ಶಿವನಿಗೆ ಅರ್ಪಿಸದ ಮುನ್ನ ನೀರನ್ನೂ ಕುಡಿಯುತ್ತಿರಲಿಲ್ಲ ಎಂದು ತಿಳಿಸುತ್ತದೆ. *[೮] ಬಾಲದ ಹನುಮಪ್ಪನಾಯಕನು ಹಂಡೆಯ ವಂಶಸ್ಥನಾದ್ದರಿಂದ ವೀರಶೈವ ಧರ್ಮದವನೆಂಬುದು ಖಚಿತವಾಗುತ್ತದೆ. ಈತನ ವಂಶಸ್ಥರಲ್ಲಿ ಬರುವ ಹೆಸರುಗಳು ಹನುಮ, ರಾಮ, ಸಿದ್ದಪ್ಪ, ರಾಮಲಿಂಗ. ಆದ್ದರಿಂದ ಹಂಡೆವಂಶದ ಪಾಳೆಯಗಾರರು ರಾಮನನ್ನೂ ಶಿವನನ್ನೂ ಪೂಜಿಸುತ್ತಿರಬಹುದು. ಇವನು ಗುಡ್ಡದ ಮೇಲೆ ಕೋಟೆಯನ್ನು ಕಟ್ಟಿರುವಾಗ ಮೊದಲೇ ಅಲ್ಲಿದ್ದ ದೇವಾಲಯಗಳ ಮುಂದೆ ಗರುಡಗಂಬವನ್ನು ನಿಲ್ಲಿಸಿರಬಹುದು. ರಾಮ ಹನುಮರ ಕುರುಹಾಗಿ ಹನುಮಂತನನ್ನೂ, ವೈಷ್ಣವ ಚಿನ್ಹೆಯಾಗಿ ಗರುಡನನ್ನೂ ಕೆತ್ತಿಸಿ,

ಪೂರ್ವದಲ್ಲಿ ಖಾಲಿಯಿರುವ ಸ್ಥಳದಲ್ಲಿ ಬಸವನ ಶಿಲ್ಪವನ್ನು ಕೆತ್ತಿಸ ಬೇಕೆಂದಿದ್ದನೇನೋ! ದೇವಾಲಯದ ಹೊರಭಾಗದ ಸುತ್ತಲಿನ ಗೋಡೆಗಳಲ್ಲಿ ಪೂರ್ಣಕಂಬಗಳ ಸಾಲಿರುವುದನ್ನೂ, ಗರುಡ-ಹನುಮರ ಹಾಗೂ ಉತ್ತರಕ್ಕಿರುವ ದಂಪತಿಗಳು ಉಬ್ಬು ಶಿಲ್ಪಗಳನ್ನೂ ಈಕ್ಷಿಸಿದಾಗ ಇದು ವಿಜಯನಗರೋತ್ತರ ಕಾಲದ್ದೆಂದೆನಿಸುವುದು.

ಕುಂ. ಭಾ. ಸದಾಶಿವಪ್ಪನವರು ಬಳ್ಳಾರಿ ಕೋಟೆಯೊಳಗೆ ಈಶ್ವರ ದೇವಾಲಯಗಳಿವೆ. ಅವಕ್ಕೆ ಬಲ್ಲಾಳೇಶ, ಮಲ್ಲಾರ್ಯ ಲಿಂಗವೆಂದು ಕರೆಯಲಾಗಿದೆ ಎಂದು ಹೇಳಿದ್ದಾರೆ. *೧೦ ಸಿಂಧವಂಶದ ಮಲ್ಲರಾಯನು (ಒಂದನೆಯ ರಾಚಮಲ್ಲ) ಕಟ್ಟಿಸಿದಾಗ 'ಮಲ್ಲಾರ್ಯಲಿಂಗ'ವೆಂತಲೂ, ಆನಂತರ ಸಿಂಧೂಬಲ್ಲಾಳನು (ಎರಡನೆಯ ಬಲ್ಲಾಳ) ಜೀರ್ಣೋದ್ಧಾರ ಮಾಡಿದಾಗ 'ಬಲ್ಲಾಳೇಶ'ವೆಂತಲೂ ಕರೆದಿರಬಹುದು. ಆದರೆ, ನನ್ನನ್ನು ಆ ಗುಡ್ಡದ, ದೇವಸ್ಥಾನಗಳ ಪರಿಚಯ ಮಾಡಿಕೊಟ್ಟಂತಹ, ಸ್ನೇಹಿತರಾದ, ಬಳ್ಳಾರಿಯಲ್ಲಿಯೇ ಅನೇಕ ವರ್ಷಗಳಿದ್ದು, ಶಾಲೆಯಲ್ಲಿ ಶಿಕ್ಷಕರಾಗಿರುವ ಶ್ರೀ ಶೇಷಗಿರಿ ಆಚಾರ್ ಅವರು ಇವುಗಳಲ್ಲಿ ಒಂದು ಸೀತಾರಾಮರ ಗುಡಿ ಮತ್ತೊಂದು ಲಕ್ಷ್ಮೀನಾರಾಯಣನ ಗುಡಿಯೆಂದೂ ಹೇಳಿದರು. ಇದರ ಸತ್ಯಾಸತ್ಯತೆಯು ದೇವಸ್ಥಾನದ ಶಿಲ್ಪಗಳ ಸುಣ್ಣಕೆಮ್ಮಣ್ಣನ್ನು ತೊಳೆಸಿ ನೋಡಿದಾಗ, ಅವುಗಳ ಸ್ವರೂಪವು ಬೆಳಕಿಗೆ ಬಂದ ಮೇಲೆ ತಿಳಿಯುತ್ತದೆ.

ಅಲ್ಲಿ ಸುತ್ತಲೂ ಹರಡಿಕೊಂಡಿರುವ ಸಣ್ಣ ಸಣ್ಣ ಕೋಣೆಗಳು, ಪೂಜೆ ಉತ್ಸವಾದಿಗಳಿಗೆ ಬಂದಂತಹ ರಾಜರು, ಪರಿವಾರದವರು, ಅವರ ಕುಟುಂಬಗಳು ಇರಲು ನಿವಾಸ ಸ್ಥಾನಗಳೆಂದು ಹೇಳಿದರು. ಆದರೆ ಕೋಣೆಗಳಿಗೆ ಯಾವ ರೀತಿಯ ಅಲಂಕಾರಗಳೂ ಇಲ್ಲದೇ, ಬರಿದೇ ಚೌಕವಾದ ಕೋಣೆಗಳಾದ್ದರಿಂದ ಇವುಗಳು ಎರಡನೆಯ ಬಲ್ಲಾಳನು ಕಟ್ಟಿಸಿದ ಜೈನ ದೇವಾಲಯಗಳೇಕಾಗಿರಬಾರದು ಅಥವಾ ಜೈನ ಮುನಿಗಳು ಬಂದು ನೆಲಸುವುದಕ್ಕಾಗಿ ಕಟ್ಟಿದ ಕೋಣೆಗಳೇಕಾಗಿರ ಬಾರದು.?

ಬಾಳ್ಳಾರಿಗುಡ್ಡದ ಮೇಲಿರುವ ದೇವಸ್ಥಾನಗಳ ಜೋಡಿಯು, ಸಿಂಧರು, ಹೊಯ್ಸಳರು ಹಾಗೂ ಹಂಡೆ ಬಾಲದ ಹನುಮಪ್ಪ ನಾಯಕನ ಕಾಲದಲ್ಲಿ ಪೂಜೆ-ಪುರಸ್ಕಾರಗಳನ್ನು ಮಾಡಿಸಿಕೊಂಡು ವೈಭವದಿಂದಿದ್ದು, ಈಗ ದೇವರಿಲ್ಲದ ಹಾಳು ಗುಡಿಯಾಗಿ, ಜನರ ಕೆಟ್ಟ ಸಾಹಿತ್ಯದ ಪ್ರದರ್ಶನದ ಕೇಂದ್ರವಾಗಿದೆಯೆಂದು ಹೇಳಲು ವಿಷಾದವಾಗುತ್ತದೆ. ಇಂತಹ ಸ್ಮಾರಕಗಳ ಕಡೆಗೂ ಇತಿಹಾಸಜ್ಞರು ಲಕ್ಷ್ಯ ಕೊಡಬೇಕೆಂದು ವಿನಂತಿಸುತ್ತೇನೆ. ಅಲ್ಲದೆ ಸ್ಥಳೀಯ ಜನರೂ ಇಂತಹ ಸ್ಮಾರಕಗಳು ಸಣ್ಣ ಪುಟ್ಟವೆಂದು ಅಲಕ್ಷಿಸದೆ, ಇವುಗಳು ಹಾಳಾಗದಂತೆ ನೋಡಿಕೊಂಡರೆ ಕರ್ನಾಟಕದ ಚರಿತ್ರೆ ಎಷ್ಟು ಶ್ರೀಮಂತವಾಗಿತ್ತು ಎಂಬುದು ಈಗಿನ ಪೀಳಿಗೆಗೆ ತಿಳಿದುಬರುತ್ತದೆ. ಅವರ ಒಲವೆಲ್ಲಾ ಪಶ್ಚಿಮದ ಸಂಸ್ಕೃತಿಯ ಕಡೆಗೇ ಹರಿಯುತ್ತಿರುವುದು ನಿಂತು ತಮ್ಮ ನಾಡು, ದೇಶಗಳ ಕಡೆಗೆ ಒಲವು ಹರಿಯುತ್ತದೆ ಎಂಬುದು ನನ್ನ ಅನಿಸಿಕೆ.

## ಅಡಿ ಟಿಪ್ಪಣಿಗಳು

*೧. S.I.I. IX (i), 322, 1195
*೨. E.C XIV (i), ೧೭೧ ಕುರುಗೋಡು
*೩. E.C. XIV (i), 172, ಕುರುಗೋಡು
*೪. A.E. XIV 19(i), 1173, ಕುರುಗೋಡು
*೫. S.I.I. IX (i) 296, 1176, ಕುರುಗೋಡು
*೬. S.I.I. IS (i) 297, 1176, ಕುರುಗೋಡು
*೭. *ಸಾನಂದ ಚರಿತ್ರೆ:* (ಸಂ.) ಎಸ್. ಬಸಪ್ಪ
*೮. *ವೀರಶೈವಾಮೃತ ಮಹಾಪುರಾಣ :* (ಸಂ.) ಹಿರೇಮಠ ಆರ್. ಸಿ.
*೯. ಚನ್ನಾಂಬಿಕಾ ಪಾವಟೆ : 'ಹಂಡೆ ಪಾಳೆಯಗಾರರು', **ಇತಿಹಾಸ ದರ್ಶನ ೮**, ಪುಟ. ೯೪
*೧೦. ಕುಂಬಾ ಸದಾಶಿವಪ್ಪ 'ಹರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಸಂಪ್ರದಾಯಗಳು', **ಇತಿಹಾಸ ದರ್ಶನ ೭**, ಪುಟ. ೧೫೫
ಡಾ॥ ಚೆನ್ನಬಸವಯ್ಯ ಹಿರೇಮಠ : ***ಬಳ್ಳಾರಿಯ ಕೈಫಿಯತು, ಕುರುಗೋಡು ಸಿಂದರು - ಒಂದು ಅಧ್ಯಯನ***
ಡಾ॥ ಸಿಂದಗಿ ರಾಜಶೇಖರ : ***ಕರ್ನಾಟಕ ವಾಸ್ತು ಶಿಲ್ಪ ಮತ್ತು ಚಿತ್ರಕಲೆ***

ಡಾ॥ ಹೆಚ್. ಚಂದ್ರಶೇಖರ *

# ಚಂದನಕೆರೆ : ಒಂದು ಪ್ರಾಥಮಿಕ ಅಧ್ಯಯನ

ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ಕಲ್ಯಾಣ ಚಾಳುಕ್ಯರ ಮನೆತನ ಅತ್ಯಂತ ಪ್ರಮುಖವಾದ ಮನೆತನಗಳಲ್ಲಿ ಒಂದು. ಇಂದಿನ ಬಸವಕಲ್ಯಾಣದಿಂದ, (ಕ್ರಿ. ಶ. ೧೦-೧೨ರ ಅವಧಿಯಲ್ಲಿ) ಈ ಸಾಮ್ರಾಟರು ಕರ್ನಾಟಕ ಮತ್ತು ತಮಿಳುನಾಡು ಮಹಾರಾಷ್ಟ್ರ ಮತ್ತು ಆಂಧ್ರದ ಭಾಗಗಳನ್ನು ಸಮರ್ಥವಾಗಿ ಆಳಿ, ಕನ್ನಡ ಸಾಹಿತ್ಯ, ಕಲೆ ಮತ್ತು ಶಿಲ್ಪಕಲೆಗೆ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆ. ಈ ಬಗ್ಗೆ ಹಲವಾರು ಗ್ರಂಥಗಳು ಪ್ರಕಟವಾಗಿದ್ದರೂ, ಈ ಅರಸರ ಕಾಲದಲ್ಲಿ ಇದ್ದ ಕೆಲವು ಸಾಂಸ್ಕೃತಿಕ ಪ್ರಮುಖ ಸ್ಥಳಗಳು ಇತಿಹಾಸಕಾರರಿಗೆ ಅಪರಿಚಿತ - ಅಂಥ ಸ್ಥಳಗಳಲ್ಲಿ ಚಂದನಕೆರೆಯೂ ಒಂದು.

ಇಂದು ಚಂದನಕೆರೆ, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕ ಕೇಂದ್ರದಿಂದ ಪಶ್ಚಿಮಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿರುವ ಅತ್ಯಂತ ಚಿಕ್ಕ ಹಳ್ಳಿ. ರಾಯಚೂರು ಜಿಲ್ಲೆಯಲ್ಲಿಯ ಕಲ್ಯಾಣ ಚಾಳುಕ್ಯರ ದೇವಾಲಯಗಳ, ಶಿಲ್ಪಗಳ ಅಧ್ಯಯನ ಮಾಡಿ ಪ್ರೌಢ ಗ್ರಂಥ ಪ್ರಕಟಿಸಿರುವ ಡಾ॥ಸಿ. ಎಸ್. ಪಾಟೀಲರ ಗಮನಕ್ಕೂ ಈ ಹಳ್ಳಿ ಬಂದಿಲ್ಲ. [*೧] ಈ ದೃಷ್ಟಿಯಿಂದ ಚಂದನಕೆರೆ ಒಂದು ಕನ್ಯೆ ನೆಲ. ಈ ಊರಿನಲ್ಲಿ ಹಲವಾರು ಭಗ್ನ ಶಿಲ್ಪಗಳು, ದೇವಾಲಯಗಳ ಅವಶೇಷಗಳು ಮತ್ತು ಶಿಲಾಲಿಪಿಗಳು ಅಧ್ಯಯನಕ್ಕೆ ಯೋಗ್ಯ ವಾಗಿವೆ.

**ಪುರಾತತ್ವ ಅವಶೇಷಗಳು**

ಯಾವುದೇ ಸ್ಥಳದ ಇತಿಹಾಸದ ರಚನೆಯಲ್ಲಿ ಪುರಾತತ್ವ ಒಂದು ಸಾಧನ. ಇತಿಹಾಸ ಮತ್ತು ಪುರಾತತ್ವದ ಪರಸ್ಪರ ಸಂಬಂಧವನ್ನು ಪ್ರೊ॥ ನಾಗರಾಜು ಅವರು ವಿವರಿಸುತ್ತಾ "…. ಪುರಾತತ್ವದ ಮೂಲ ವಸ್ತುಗಳಾದರೋ ಜಡ ಪದಾರ್ಥಗಳು, ಅಷ್ಟೇ ಮೌನಿ. ಅವು ಏನನ್ನೂ ತಾವಾಗಿಯೇ ಹೇಳುವದಿಲ್ಲ. ಅವುಗಳ ಸ್ವರೂಪ, ಪರಿಸರ, ಪರಸ್ಪರ ಸಂಬಂಧಗಳು ಇತ್ಯಾದಿಗಳನ್ನು ಸಮನ್ವಯ ಗೊಳಿಸಿ, ಪ್ರಾಕ್‌ಚರಿತ್ರೆಯ ಕಲ್ಪನೆಯನ್ನು ಮಾಡಿಕೊಳ್ಳುವದು ಪುರಾತತ್ವದ ವಿಧಾನ. ಅಂದರೆ ಇತಿಹಾಸದ ಜೀವಾಳ ವಿಶ್ಲೇಷಣೆಯಾದರೆ, ಪುರಾತತ್ವದ ಜೀವಾಳ ಸಂಯೋಜನೆ". [*೨] ಈ ಮಾತುಗಳು ನನ್ನ ಈ ಅಧ್ಯಯನಕ್ಕೆ ಅತ್ಯಂತ ಸಮರ್ಪಕವಾಗಿ ಸಲ್ಲುತ್ತವೆ. ಚಂದನಕೆರೆಯನ್ನು ಕುರಿತು ಮಿಡೋಸಟೇಲರನ ಆತ್ಮಕತೆಯಲ್ಲೂ ವಿವರಣೆ ಇಲ್ಲ. ದೇವದುರ್ಗದ ದೊರೆಗಳು ಚಂದನಕೆರೆಯಿಂದ ದೇವದುರ್ಗಕ್ಕೆ ತಮ್ಮ ರಾಜಧಾನಿಯನ್ನು (ವಾಸಸ್ಥಾನ) ಸ್ಥಳಾಂತರಿಸಿದರು ಎಂಬುದು ಮಾತ್ರ ತಿಳಿದು ಬರುತ್ತದೆ. [*೩] ಈ ಸ್ಥಳದ ಬಗ್ಗೆ ಯಾವ ದಾಖಲೆಗಳೂ, ಶಿಲಾ ಶಾಸನಗಳ ಅಧ್ಯಯನಗಳೂ ಲಭ್ಯವಿಲ್ಲದಿರುವದರಿಂದ, ಇಲ್ಲಿ ಲಭ್ಯವಿರುವ ಪುರಾತತ್ವ ಅವಶೇಷಗಳ ಅಧ್ಯಯನದ ವಿವರಣೆಗಳನ್ನು ಈ ಕೆಳಗೆ ಕೊಟ್ಟಿದ್ದೇನೆ. ನಂತರ ಕೆಲ ತೀರ್ಮಾನ ಗಳನ್ನು ಪುರಾತತ್ವ ಅವಶೇಷಗಳ ಅಧ್ಯಯನದ ಆಧಾರಗಳ ಮೇಲೆ ಸೂಚಿಸಿದ್ದೇನೆ.

ಇಲ್ಲಿ ಸಿಗುವ ಪುರಾತತ್ವ ಅವಶೇಷಗಳನ್ನು ವಿವರಣೆಗೆ ಅನುಕೂಲ ವಾಗಲೆಂದು ಏಳು ವಿಭಾಗಗಳಲ್ಲಿ ವರ್ಗೀಕರಿಸಲಾಗಿದೆ: ೧) ಗುಡಿಗಳು ೨) ಮೂರ್ತಿ ಶಿಲ್ಪಗಳು ೩) ಜೈನ ಬಸ್ತಿ ೪) ಗೋರಿ ೫) ಮಾಸ್ತಿ ಕಲ್ಲುಗಳು ೬) ವೀರಗಲ್ಲುಗಳು ಮತ್ತು ೭) ಕಾವಲು ಕಮಾನಿನ ಕಟ್ಟಡ.

**ಗುಡಿಗಳು** : ಚಂದನಕೆರೆ ಹಳ್ಳಿಯನ್ನು ದೇವನದುರ್ಗದಿಂದ ಪ್ರವೇಶಿಸುವ ಮೊದಲು ಬಲಕ್ಕೆ *'ಚಂದನಕೆರ ಹನುಮಪ್ಪ'* ಎಂದು ಸ್ಥಳೀಯವಾಗಿ ಪ್ರಸಿದ್ಧವಾಗಿರುವ ಗುಡಿ ಸಿಗುತ್ತದೆ. ಇದನ್ನು ದಾಟಿ ಮುಂದೆ ಸುಮಾರು ನೂರು ಮೀಟರು ನಡೆದರೆ ಚಂದನಕೆರೆ ಹಳ್ಳಿ ಸಿಗುತ್ತದೆ. ಈ ಪ್ರವೇಶದಲ್ಲಿ ಎಡಕ್ಕೆ ಒಂದು ಕಟ್ಟೆ ಸಿಗುತ್ತದೆ (ಅಧಿಷ್ಠಾನ). ಇದೊಂದು ಈಶ್ವರ ದೇವಾಲಯ. ಅದರ ಎದುರಿಗೆ ಇನ್ನೊಂದು ಹನುಮಪ್ಪ ಚಿಕ್ಕ ಗುಡಿ ಇದೆ.

ಇತಿಹಾಸದ ದೃಷ್ಟಿಯಿಂದ ಈ ಈಶ್ವರ ದೇವಾಲಯದ

---

* ಎಂ.ಐ.ಜಿ. ೭೭, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ ಬಸವೇಶ್ವರನಗರ, ಬೆಂಗಳೂರು - ೭೯

ಅವಶೇಷ ಮುಖ್ಯ. ಸುಮಾರು ೧೨ ಮೀ.×೧೨ ಮೀ. ಅಳತೆಯ ಇಂದಿನ ಕಟ್ಟೆಯು ಹಿಂದೆ ಚಾಲುಕ್ಯರ ಕಾಲದ ಈಶ್ವರ ದೇವಸ್ಥಾನದ ಅಧಿಷ್ಠಾನವಾಗಿತ್ತು ಎಂಬುದನ್ನು ಸುಲಭವಾಗಿ ಗುರುತಿಸಬಹುದು. ಕಟ್ಟೆಯನ್ನು ಇಂದು ರೈತರು ತಮ್ಮ ಸೊಪ್ಪು, ಕಾಳು ಇತ್ಯಾದಿ ವಸ್ತುಗಳನ್ನು ಒಣಗಿಸಲು ಮತ್ತು ಹಸನು ಮಾಡಲು ಉಪಯೋಗಿಸುತ್ತಲಿದ್ದಾರೆ. ಈ ಕಟ್ಟೆಯ ದಕ್ಷಿಣದ ಅಂಚಿನಲ್ಲಿ, ಸುಮಾರು ೩ ಅಡಿ ಎತ್ತರದ (೧. ಮೀ) ಪಾಣಿವಾಟ ಇದೆ – ಅದರ ಮೇಲೆ ಒಂದು ಸಣ್ಣ ಸ್ಥಾವರ ಲಿಂಗವನ್ನು ಇಡಲಾಗಿದೆ – ಎದುರುಗಡೆ ಒಂದು ಭಿನ್ನ ನಂದಿಶಿಲ್ಪ ಇದೆ. ಪಕ್ಕದಲ್ಲಿ ಸುಮಾರು ಮೂರು ಅಡಿ ಎತ್ತರದ ಚಾಳುಕ್ಯ ಶೈಲಿಯಲ್ಲಿ ಕಟೆಯಲಾದ ತಿಳಿಗೆಂಪು ವರ್ಣದ ಕಣಶಿಲೆಯ ಸ್ತಂಭ ಇದೆ – ಇವುಗಳಲ್ಲದೆ ಶಕ್ತಿ ದೇವತೆಯ ಭಗ್ನ ಶಿಲ್ಪ ಇದೆ. ಲಿಂಗ, ಪಾಣಿವಾಟ ಮತ್ತು ಇತರ ಶಿಲ್ಪಗಳನ್ನು ಡಾಲೋರೈಟ (Dolerite) ಶಿಲೆಯಲ್ಲಿ ಕಟೆಯಲಾಗಿದೆ.

ಈ ಕಟ್ಟೆಯ ಎದುರುಗಡೆ ಹನುಮಪ್ಪನ (ಆಂಜನೇಯ) ಒಂದು ಚಿಕ್ಕ ಗುಡಿ ಇದೆ. ಇದರ ರಚನೆ ನೋಡಿದಾಗ ಇದು ತೀರ ಇತ್ತೀಚಿನದು ಎಂದು ಕಂಡು ಬರುತ್ತದೆ. ಈ ಗುಡಿಯ ಮುಂದೆ ಒಂದೆರಡು ಭಿನ್ನ ವೀರಗಲ್ಲುಗಳಿವೆ. ಮೇಣ ಮೆತ್ತಿರುವದರಿಂದ ವಿವರಗಳು ಗೊತ್ತಾಗುವುದಿಲ್ಲ. ಈ ಎರಡು ಗುಡಿಗಳ ಪರಿಸರದಲ್ಲಿ ಎರಡು ಶಿಲಾ ಲೇಖನಗಳಿವೆ - ಅವುಗಳಲ್ಲಿ ಒಂದು ಭಗ್ನಗೊಂಡಿದೆ. ಲಿಪಿಯಿಂದ ಇವುಗಳು ಕನ್ನಡದ ಶಾಸನಗಳು ಎಂಬುದು ಸ್ಪಷ್ಟ.

ಮೊದಲಿಗೆ ಉದಾಹರಿಸಿದ ಸ್ಥಳೀಯವಾಗಿ ಪ್ರಸಿದ್ಧವಾಗಿರುವ ಹನುಮಪ್ಪನ ಗುಡಿಯು (ಆಂಜನೇಯ) ಕೊಂಚ ಹೆಚ್ಚು ವಿವರಣೆಗೆ ಅರ್ಹವಾಗಿದೆ. ದಕ್ಷಿಣಾಭಿಮುಖವಾಗಿರುವ ಈ ಗುಡಿಯು ತಮ್ಮ ಯಾವ ಪುರಾತನ ವಾಸ್ತುಶಾಸ್ತ್ರಕ್ಕೆ ಹೊಂದುವದಿಲ್ಲವಾದರೂ, ಇಲ್ಲಿಯ ಕಂಬಗಳನ್ನು ಚಾಲುಕ್ಯ ಎನ್ನಬೇಕೆನ್ನುವ ಶೈಲಿಯಲ್ಲಿ ಕಟೆಯಲಾಗಿದೆ, ಅರ್ಧ ಕಂಬಗಳು ಮತ್ತು ಕಂಬಗಳು ಸೇರಿ ಒಟ್ಟು ಎಂಟು ಕಂಬಗಳಿವೆ. ಗರ್ಭಗುಡಿ ಮತ್ತು ಅದರ ಮುಂದೆ ಒಂದು ಪಡಸಾಲೆ, ಪಡಸಾಲೆಯ ಮೇಲೆ ಎಂಟು ಕಂಬಗಳನ್ನು ನಿಲ್ಲಿಸಿ, ಛತ್ತಿನಲ್ಲಿ ಕಣಶಿಲೆಯ ಹಾಸುಗಲ್ಲುಗಳನ್ನು ಹಾಸಲಾಗಿದೆ. ಇದರ ಎಲ್ಲಾ ರಚನೆ ತೀರ ಇತ್ತೀಚಿನದಾದರೂ ಕಂಬಗಳು ಮತ್ತು ಗರ್ಭಗುಡಿಯ ಬಾಗಿಲಿನ ಚೌಕಟ್ಟು ಕಲ್ಯಾಣ ಚಾಳುಕ್ಯರ ಕಾಲದವು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಈ ಗುಡಿಯ ಪೂರ್ವದ ಗೋಡೆಯ ಒಂದು ಸೈಜುಕಲ್ಲಿನ ಮೇಲೆ ಲಿಂಗಮುದ್ರೆ ಸ್ಪಷ್ಟವಾಗಿ ಕಾಣುತ್ತದೆ. ಬಹುಶಃ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ನಿರ್ಮಿಸಲ್ಪಟ್ಟ ಈಶ್ವರ ದೇವಾಲಯದ ಕಂಬಗಳನ್ನು, ಗರ್ಭ ಗುಡಿಯ ಚೌಕಟ್ಟು ಮತ್ತು ಸೈಜುಕಲ್ಲುಗಳನ್ನು ಸ್ಥಳಾಂತರಿಸಿ ಈ ಗುಡಿಯನ್ನು ಬಹುಶಃ ೧೭-೧೮ನೇ ಶತಮಾನದಲ್ಲಿ ಕಟ್ಟಲಾಗಿದೆ ಎಂಬುದಕ್ಕೂ ಗುಡಿಯ ಗೋಪುರ ಮತ್ತು ಕುಂಟಿಗಳ ರಚನಾ ಶೈಲಿಯನ್ನು ಆಧರಿಸಿ ಊಹಿಸಬಹುದು.

ಮೂರ್ತಿ ಶಿಲ್ಪಗಳು : ಈ ಹಳ್ಳಿಯ ಪಶ್ಚಿಮಕ್ಕೆ ಇರುವ ಕೆರೆಗೆ (ಕೆರೆಯ ಹೆಸರೂ ಚಂದನಕೆರೆ) ಹೋಗುವ ದಾರಿಗೆ ಹೊಂದಿಕೊಂಡೇ ಹಳ್ಳಿಯ ಕೊನೆಯಲ್ಲಿ ಒಂದು ಮಣ್ಣಿನ ದಿಬ್ಬ ಇದೆ. ಇದೂ ಒಂದು ಯಾವುದೋ ದೇವಾಲಯದ ಅಧಿಷ್ಠಾನವಿದ್ದಂತೆ ಭಾಸ ವಾಗುತ್ತದೆ. ಸದ್ಯಕ್ಕೆ ಈ ಪ್ರದೇಶ ತಿಪ್ಪೆಗುಂಡಿಯಾಗಿದೆ. ಈ ದಿಬ್ಬದ



ಮೇಲೆ ಹಲವು ಮೂರ್ತಿಶಿಲ್ಪಗಳಿವೆ. ಅವುಗಳಲ್ಲಿ ವೀರಭದ್ರ, ಭದ್ರಕಾಳಿ ಶಿಲ್ಪಗಳನ್ನು ಸ್ಪಷ್ಟವಾಗಿ ಗುರ್ತಿಸಬಹುದು. ಇನ್ನೆರಡು ಶಿಲ್ಪಗಳ ಟೊಂಕದ ಕೆಳಗಿನ ಭಾಗಗಳು ಮಾತ್ರ ಇರುವದರಿಂದ ಈ ಶಿಲ್ಪಗಳ ಅಭಿಜ್ಞತೆ ಸಾಧ್ಯವಾಗದು.

ಈ ಮೂರ್ತಿ ಶಿಲ್ಪಗಳಲ್ಲಿ ೪ ಅಡಿ ಎತ್ತರ ೩ ಅಡಿ ಅಗಲವಿರುವ ವೀರಭದ್ರನ ಶಿಲ್ಪ ಅತ್ಯಂತ ಸುಂದರವಾಗಿದೆ. ಈ ಶಿಲ್ಪದ ಎದೆಯ ಮಟ್ಟದ ಮೇಲ್ಭಾಗ ಮಾತ್ರ ಇದೆ. ಕೆಳಭಾಗ ಕಳೆದು ಹೋಗಿದೆ. ಲಭ್ಯವಿರುವ ಶಿಲ್ಪದ ಭಾಗವೂ ಉದ್ದಕ್ಕೆ (Vertically) ಸೀಳಿ ಹೋಗಿದೆ - ಈ ಎರಡು ಭಾಗಗಳನ್ನು ಜೋಡಿಸಿ ನೋಡಿದರೆ ಶಿಲ್ಪಿಯ ಕಲಾ ನೈಪುಣ್ಯತೆ ಎದ್ದು ಕಾಣುತ್ತದೆ. ನಾಲ್ಕು ಕೈಗಳ ಈ ಶಿಲ್ಪದ ಕೈಗಳಲ್ಲಿ ಬಿಲ್ಲು, ತ್ರಿಶೂಲ, ಖಡ್ಗ ಮತ್ತು ಡಮರುಗವನ್ನು ಕೆತ್ತಲಾಗಿದೆ. ವೀರಭದ್ರನ ಜಟೆಯಲ್ಲಿ ಶಿವಲಿಂಗ ಮತ್ತು ಸರ್ಪವನ್ನು ಕೆತ್ತಲಾಗಿದೆ. ಜಟೆಯ ಮೇಲೆ ಕೊಂಚ ಸ್ಥಳ ಬಿಟ್ಟು ಕೀರ್ತಿಮುಖವನ್ನು ಕೆತ್ತಲಾಗಿದೆ. ಪೂರ್ಣರೂಪದ ವೀರಭದ್ರ ಶಿಲ್ಪವು ಅತ್ಯಂತ ಸುಂದರವಾಗಿರಬಹುದೆಂದು ಈಗ ನೋಡಲು ಸಿಗುವ ಈ ಎರಡು ತುಂಡುಗಳಿಂದ ಸಹಜವಾಗಿಯೇ ಊಹಿಸಬಹುದು.

ಇದರ ಪಕ್ಕದಲ್ಲಿಯೇ ಭದ್ರಕಾಳಿಯ ಸುಂದರ ಶಿಲ್ಪ ಇದೆ. ಮೂರು ಅಡಿ ಎತ್ತರ ಮತ್ತು ಎರಡೂವರೆ ಅಡಿ ಅಗಲವಿರುವ ಈ ಶಿಲ್ಪವು ನಾಲ್ಕು ಕೈಗಳುಳ್ಳದ್ದು. ಎಡಗಡೆಯ ಎರಡು ಕೈಗಳು ಭಗ್ನಗೊಂಡಿವೆ. ಬಲಗಡೆಯ ಒಂದು ಕೈಯಲ್ಲಿ ಖಡ್ಗ, ಇನ್ನೊಂದು ಕೈಯಲ್ಲಿ ಒಂದು ರುಂಡ ಇದೆ. ಭುಜದ ಎತ್ತರದಲ್ಲಿ ಎರಡೂ ಕಡೆ ಹೂಗಳನ್ನು ಕೆತ್ತಲಾಗಿದೆ. ಹೂಗಳ ಅಡಿಯಲ್ಲಿ ತಪಸ್ವಿಗಳು ಧ್ಯಾನದಲ್ಲಿದ್ದಾರೆ. ಭದ್ರಕಾಳಿಯ ಕಿವಿಗಳ ಆಭರಣಗಳು, ಕಂಠಾಭರಣಗಳು, ಕುಚಗಳ ಕಟ್ಟುಗಳು, ಕಟಿಯಾ ಭರಣಗಳು (ಡಾಬ ಇತ್ಯಾದಿ) ಇವುಗಳನ್ನು ಕಲಾತ್ಮವಾಗಿ ಕೆತ್ತಲಾಗಿದೆ. ಭದ್ರಕಾಳಿಯ ಜಟೆಯಲ್ಲಿ ಮತ್ತು ಬಲಗೈ ರುಂಡದ ತಲೆಯ ಮೇಲೆ (ಬಹುಶಃ ಈ ರುಂಡ ದಕ್ಷಬ್ರಹ್ಮನದೆ?) ಶಿವ ಲಿಂಗವನ್ನು ಕಲಾತ್ಮಕವಾಗಿ ಕೆತ್ತಲಾಗಿದೆ.

ಈ ಎರಡು ಶಿಲ್ಪಗಳು ಪಕ್ಕದಲ್ಲಿ (ಎಡಗಡೆ) ರುಂಡವಿಲ್ಲದ ಇನ್ನೊಂದು ಶಿಲ್ಪವಿದೆ. ಈ ಮುಂಡ ಶಿಲ್ಪದ ಆಭರಣಗಳ ಶೈಲಿಯನ್ನು ನೋಡಿದರೆ ಇದೊಂದು ಪುರುಷ ಶಿಲ್ಪವಿರಬಹುದೆಂದು ಎನಿಸುತ್ತದೆ. ಈ ಶಿಲ್ಪದ ಲಿಂಗ (Gender) ದ ಗೋಜಿಗೆ ಹೋಗದೆ, ಹಾಗೆಯೇ ನೋಡಿದರೆ ಶಿಲ್ಪಿಯು ತುಂಬಾ ಎಚ್ಚರಿಕೆಯಿಂದ ಮಾಡಿದ ಕುಸುರಿ ಕೆಲಸ ಕಂಗಳನ್ನು ತುಂಬುತ್ತದೆ. ಇದೇ ಸ್ಥಳದಲ್ಲಿ ಇನ್ನೆರಡು ಭಗ್ನ ಶಿಲ್ಪಗಳು ನೋಡಲು ಸಿಗುತ್ತದೆ. ಒಂದು ಶಿಲ್ಪದ ಕೆಳಭಾಗ ಮಾತ್ರ ನೋಡಲು ಸಿಗುತ್ತದೆ. ರುಂಡಮಾಲೆ ಸ್ಪಷ್ಟವಾಗಿ ಕಾಣುತ್ತದೆ. ಆದರೆ ಇದು ಯಾವ ವಿಗ್ರಹವೆಂದು ನಿರ್ಧರಿಸಲು ಸಾಧ್ಯವಾಗದು. ಅದರ ಪಕ್ಕದಲ್ಲಿಯೇ ಇನ್ನೊಂದು ತುಂಡು ಇದೆ. ಕೈಯ ಹಸ್ತ ಮಾತ್ರ ಕಾಣಿಸುತ್ತದೆ. ವಿಗ್ರಹದ ಉಳಿದ ಭಾಗ ಕಾಣದು. ಸಿಗುವ ಈ ಹಸ್ತದ ಭಾಗ ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟಿದೆ.

ಈ ಶಿಲ್ಪಗಳಲ್ಲದೆ ಈ ದಿಬ್ಬದ ಮೇಲೆ ನಂದಿ ವಿಗ್ರಹದ ತುಂಡುಗಳು ಇವೆ. ಇವುಗಳಲ್ಲದೆ ಒಂದು *ಶಾರ್ದೂಲ ಸ್ತಂಭ* ಇದೆ. ಮೇಲ್ನೋಟಕ್ಕೆ ಇದು ಪಲ್ಲವರ ಶೈಲಿಯ ಶಾರ್ದೂಲ ಸ್ತಂಭ ಅನಿಸುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಇದೂ ಚಾಳುಕ್ಯರ ಶೈಲಿಯದು ಎಂಬುದು ವಿದಿತವಾಗುತ್ತದೆ. ಇದು ಬಹುಶಃ ಪಾರ್ಶ್ವನಾಥ ಬಸದಿಯಲ್ಲಿ ಸ್ಥಾಪಿಸಲ್ಪಟ್ಟ ಸ್ತಂಭಗಳಲ್ಲಿ ಒಂದಾಗಿರಬಹುದು. ಪಾರ್ಶ್ವನಾಥ ಬಸದಿಗಳಲ್ಲಿ ಸಿಂಹ ಮುಖದ ಸ್ತಂಭಗಳ ಮೇಲೆ ಪೀಠವನ್ನು ಇಟ್ಟು ಪೀಠದ ಮೇಲೆ ಪಾರ್ಶ್ವನಾಥ ಶಿಲ್ಪವನ್ನು ಸ್ಥಾಪಿಸುವ ಸಂಪ್ರದಾಯ ಆಗ ಇತ್ತು ಎಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳುವದು ಉಚಿತ.



ಭದ್ರಕಾಳಿ - ಚೌಡಮ್ಮ

ಈ ಮೂರ್ತಿ ಶಿಲ್ಪಗಳಲ್ಲದೆ, ಕೆರೆಯ ಬಲದಂಡೆಯ ಕೊನೆಯಲ್ಲಿ ಒಟ್ಟಿಗೆ ಹೊಂದಿಕೊಂಡಿರುವ ಗವಿಯಲ್ಲಿ ಒಂದು ಭದ್ರಕಾಳಿಯ ವಿಗ್ರಹ ಇದೆ. ಇದನ್ನು ಸ್ಥಳೀಯರು ಚೌಡಮ್ಮನ ವಿಗ್ರಹ ಎಂದು ಕರೆಯುತ್ತಾರೆ. ಕೆರೆಯ ಒಡ್ಡಿನ ಮೇಲೆ ರುಂಡವಿರದ ನಂದಿಯ ಸುಂದರ ವಿಗ್ರಹ ಇದೆ. ನಂದಿಯ ಕೊರಳ ಸುತ್ತ ಕೆತ್ತಲಾಗಿರುವ

ಕೊರಳಸರ ಶಿಲ್ಪಿಯ ಕೈಚಳಕಕ್ಕೆ ಸಾಕ್ಷಿ. ಈ ನಂದಿಯ ಶಿಲ್ಪದ ಹತ್ತಿರವೇ *ಚಾಣಂತಿ ಸಂಗಮ್ಮ* ಎಂದು ಜನಪದರಿಂದ ಕರೆಯಲ್ಪಡುವ ಒಂದು ಶಿಲ್ಪವಿದೆ. ಹೆಣ್ಣು ಮಗಳೊಬ್ಬಳು ಬಲಗೈಯಲ್ಲಿ ಒಂದು ಚಾಕುವನ್ನು ಹಿಡಿದಿದ್ದಾಳೆ. ಎಣ್ಣೆ ಸುರಿದು ಮೇಣ ಬೆಳೆದಿರುವದಿಂದ ಶಿಲ್ಪದ ಮುಖ ಲಕ್ಷಣಗಳು ಸರಿಯಾಗಿ ಕಾಣುತ್ತಲಿಲ್ಲ. ಶಿಲ್ಪದ ಎಡಕೊನೆಯಲ್ಲಿ ಒಂದು ಗಂಡಿನ ಮುಖ ಕಾಣುತ್ತದೆ. ಈ ಶಿಲ್ಪವನ್ನು ಚಾಮುಂಡಿ ಶಿಲ್ಪವೆಂದು ಕರೆಯಲೂಬಹುದು ಅಥವಾ ಮಾಸ್ತಿಶಿಲ್ಪವೆಂದು ಕರೆಯಬಹುದು. ಜನಪದರು ಹೇಳುವ ಕತೆಯ ಹಿನ್ನೆಲೆಯಲ್ಲಿ ಇದು ಮಾಸ್ತಿಶಿಲ್ಪವಾಗಿರುವ ಸಾಧ್ಯತೆ ಹೆಚ್ಚು. ಶಿಲ್ಪದ ಕೆಳಭಾಗ ಮಣ್ಣಿನಲ್ಲಿ ಹೂತಿರುವುದರಿಂದ ಖಚಿತವಾಗಿ ಏನನ್ನೂ ಹೇಳಲು ಸಾಧ್ಯವಾಗದು.

**ಬಸದಿ :** ಈ ದಿಬ್ಬ ದಾಟಿ, ಇತ್ತೀಚೆಗೆ ಕಟ್ಟಿರುವ ಶಾಲಾ ಕಟ್ಟಡದ ಕಡೆ ಹೋದರೆ ಒಂದು ಸಣ್ಣ ಬಯಲು ಸಿಗುತ್ತದೆ. ಈ ಬಯಲಿನಲ್ಲಿ ಹಿಂದೆ ಒಂದು 'ಮಠವಿತ್ತಂತೆ' ಎಂದು ಈ ಹಳ್ಳಿಯ ಮುದುಕನೊಬ್ಬನು ನನಗೆ ಹೇಳಿದನು. ಈ ನಿವೇಶನದ ರಚನೆ, ಅಲ್ಲಿ ಬಿದ್ದಿರುವ ಒಂದು ಕಂಬ ನಿಂತಿರುವ ಇತರೆರಡು ಕಂಬಗಳು ಮತ್ತು ತುಂಡಾಗಿರುವ ವಿಶಿಷ್ಟ ಶಿಲ್ಪ ಈ ಸ್ಥಳದಲ್ಲಿ ಜೈನ ಬಸದಿ ಇದ್ದಿರಬಹುದೆಂದು ಸೂಚಿಸುತ್ತವೆ. ಬಸದಿಗಳಿಗೂ 'ಮಠ'ವೆಂದು ಸಾಮಾನ್ಯರು ಕರೆಯುವುದುಂಟು. ಇಲ್ಲಿ ಒಂದು ಭಗ್ನ ಶಿಲಾಶಾಸನವಿದೆ. ಈ ಮಠದ ಆವರಣದಲ್ಲಿ ಒಂದು ಶಿಲ್ಪ ಬಿದ್ದಿದೆ. ಇದು ಪುರುಷ ಶಿಲ್ಪ. ಪುರುಷನ ತಲೆಯ ಮೇಲೆ ಕಿರೀಟ ಇತ್ಯಾದಿಗಳಿಲ್ಲ. ಅಗಲವಾದ ಹಣೆ, ಅಗಲವಾದ ಕಣ್ಣುಗಳು, ಉದ್ದನೆಯ ಮೂಗು, ದೊಡ್ಡ ಕಿವಿಗಳು ಇವುಗಳು ನೋಡುಗನನ್ನು ಆಕರ್ಷಿಸುತ್ತವೆ. ತಲೆಯ ಹಿಂದೆ ೧೪ ಹೆಡೆಗಳ ಸರ್ಪವನ್ನು ಕೆತ್ತಲಾಗಿದೆ. ಕೊರಳಲ್ಲಿ ಒಂದು ಸರ ಇದೆ. ಸಾಮಾನ್ಯವಾಗಿ ಜಿನ ಶಿಲ್ಪಗಳಲ್ಲಿ ಆಭರಣವಿರುವದಿಲ್ಲ. ಆದ್ದರಿಂದ ಇದನ್ನು ಜಿನ ಶಿಲ್ಪವೆನ್ನದೆ ನಾಗರಾಜ ಶಿಲ್ಪವೆಂದೆನಬಹುದು. ಆದರೆ ತಲೆಯ ಮೇಲೆ ಕಿರೀಟ ಇತ್ಯಾದಿ ಆಭರಣಗಳಿಲ್ಲದಿರುವದರಿಂದ ಇದು ನಾಗರಾಜ ಶಿಲ್ಪವೂ ಅಲ್ಲ- ಶಿಲ್ಪದ ಮುಖ ಲಕ್ಷಣಗಳು ಮತ್ತು ಸರ್ಪ ಇವುಗಳು ಇದು ಪಾರ್ಶ್ವನಾಥ ಶಿಲ್ಪವೇ ಎಂದು ಸೂಚಿಸುತ್ತವೆ, ಸದ್ಯ ಲಭ್ಯವಿರುವ ಈ ಜಿನ ಶಿಲ್ಪದ ಎತ್ತರ ೬೨ ಸೆಂ. ಮೀಟರ್ ಮತ್ತು ಅಗಲ ೪೫ ಸೆಂ.ಮೀ. ಇದಕ್ಕೂ ಬೂದ-ಬಣ್ಣದ ಕಣಶಿಲೆಯಲ್ಲಿ ಕಡೆಯಲಾಗಿದೆ. ಇಲ್ಲಿಯ ಇತರ ಮೂರ್ತಿಶಿಲ್ಪಗಳೆಲ್ಲವನ್ನೂ ಡಾಲೋರೈಟ ಶಿಲೆಯಲ್ಲಿ (ಹಸಿರು ಮಿಶ್ರಿತ ಕಪ್ಪು ಬಣ್ಣ) ಕಟೆದಿದ್ದರೆ ಈ ಜಿನ ಶಿಲ್ಪವೊಂದನ್ನು ಮಾತ್ರ ತಿಳಿಬೂದು ಬಣ್ಣದ ಕಣಶಿಲೆಯಲ್ಲಿ ಕಟೆಯಲಾಗಿದೆ. ಈ ಜಿನ ಶಿಲ್ಪದ ಪಕ್ಕದಲ್ಲಿಯೇ ೫ ಅಡಿ ಎತ್ತರ ಮತ್ತು ೧೨'' ವ್ಯಾಸವುಳ್ಳ ಕಣಶಿಲೆಯ ಕಂಬ ಬಿದ್ದಿದೆ. ಇದಲ್ಲದೆ ಈ ನಿವೇಶನದ ದಕ್ಷಿಣ ಭಾಗದಲ್ಲಿ ಎರಡು ಕಂಬಗಳು ನಿಂತಿವೆ. ಇನ್ನೂ ಒಂದೆರಡು ಕಂಬಗಳ ತುಂಡುಗಳು ಅಲ್ಲಲ್ಲಿ ಬಿದ್ದಿವೆ.


ಪಾರ್ಶ್ವನಾಥ

ಕೆರೆಯ ಒಡ್ಡಿನ ಮೇಲೆ ರೊಕ್ಕದ ಬಂಡೆ ಎಂದು ಜನಪದರು ಕರೆಯುವ ಹಾಸು ಬಂಡೆ (Slab) ಯ ಬಗ್ಗೆ ಈಗಲೇ ಹೇಳುವದು ಉಚಿತ. ಸುಮಾರು ೫ ಅಡಿಯಷ್ಟು ವ್ಯಾಸವುಳ್ಳ ಒಂದು ವರ್ತುಳವನ್ನು ಕೆತ್ತಲಾಗಿದೆ. ಈ ವರ್ತುಳವನ್ನು ಒಂದು ಚೌಕದ ಮಧ್ಯೆ ಕೆತ್ತಲಾಗಿದೆ. ಸುಮಾರು ೬ ಇಂಚು ದಪ್ಪ ಇರುವ ಹಾಸು ಬಂಡೆಯ ಅಂಚಿನಲ್ಲಿ ಪದ್ಮಗಳನ್ನು ಕೆತ್ತಲಾಗಿರುವದನ್ನು ಸೂಕ್ಷ್ಮವಾಗಿ ನೋಡಿದರೆ ಕಾಣಬಹುದು. ಮೇಲ್ನೋಟಕ್ಕೆ ಚಾಳುಕ್ಯ ಶೈಲಿಯ ರಂಗಮಂಟಪದ ಹಾಸುಗಲ್ಲು ಎಂದು ಕಾಣುವ ಈ ಹಾಸುಬಂಡೆಯು ಪಾರ್ಶ್ವನಾಥ ಶಿಲ್ಪದ ಪೀಠ ಮೇಲೆ ವಿವರಿಸಲಾದ ಕಂಬಗಳು, ಜಿನ ಶಿಲ್ಪ ಶಾರ್ದೂಲಸ್ತಂಭ, ಮತ್ತು ಈ ಪೀಠ ಇವುಗಳೆಲ್ಲವೂ, ಚಂದನಕೆರೆಯಲ್ಲಿ ಕ್ರಿ. ಶ. ೧೦-೧೨ನೇ ಶತಮಾನದ ಅವಧಿಯಲ್ಲಿ ಒಂದು ಜೈನ ಬಸ್ತಿ ಇತ್ತು ಎಂಬುದನ್ನು ಸೂಚಿಸುತ್ತವೆ. ಬಹುಶಃ ಚಂದನಮುನಿ ಎಂಬವರು ಇಲ್ಲಿ ವಾಸವಾಗಿದ್ದರು. ಅವರ ಹೆಸರಿನಿಂದಾಗಿಯೇ ಈ ಊರಿನ ಕೆರೆಗೂ ಮತ್ತು ಈ ಊರಿಗೂ ಕಾಲಾಂತರದಲ್ಲಿ ಚಂದನ ಕೆರೆ ಎಂಬ ಹೆಸರು ಬಂದಿರಬಹುದೆ?

ಕೆರೆಯ ಒಡ್ಡಿನ ಕೆಳಗೆ (Down stream)ಇರುವ ಗದ್ದೆಯಲ್ಲಿ ಒಂದು ಮುಸ್ಲಿಂ ಗೋರಿ ಇದೆ. ಹೆಸರು ಇತ್ಯಾದಿಗಳು ಇಲ್ಲ. ಆದರೆ ಈ ಕಟ್ಟಡದ ಒಳಗೆ ಒಂದು ವೀರಗಲ್ಲು ಇದೆ. ಯಾರೋ ಇಲ್ಲಿ ವೀರಗಲ್ಲನ್ನು ತಂದು ಇಟ್ಟಿರಬಹುದು. ಅಥವಾ ಈ ವೀರಗಲ್ಲಿನ ಮೇಲೆ ಇಂಡೋ ಸಾರ್ಸನಿಕ ಶೈಲಿಯ ಗುಮ್ಮಟವನ್ನು ೧೬-೧೭ನೇ ಶತಮಾನದಲ್ಲಿ ಔಚಿತ್ಯವನ್ನರಿಯದೆ ಕಟ್ಟಿಸಿರಬಹುದೆ?

**ಮಾಸ್ತಿ ಕಲ್ಲುಗಳು :** ಈಗಾಗಲೇ ವಿವರಿಸಲಾದ ಸಂದೇಹಾಸ್ಪದ ಮಾಸ್ತಿಕಲ್ಲು (ಶಿಲ್ಪ) ಅಲ್ಲದೆ ಇನ್ನೆರಡು ಮಾಸ್ತಿ ಶಿಲ್ಪಗಳು ದೇವದುರ್ಗ ಪೋಲೀಸ ಠಾಣೆಯ ಆವರಣದಲ್ಲಿವೆ. ಒಂದು ಶಿಲ್ಪದಲ್ಲಿ ಮೂರು ಹೆಣ್ಣು ಶಿಲ್ಪಗಳನ್ನು ಕೆತ್ತಲಾಗಿದೆ. ನಡುವಿನ



ಹೆಣ್ಣಿನ ಶಿಲ್ಪ ಕೊಂಚ ದೊಡ್ಡದು. ಇದರ ಎಡ ಮತ್ತು ಬಲಗಡೆಯಲ್ಲಿ ಇನ್ನೆರಡು ಸಣ್ಣ ಹೆಣ್ಣಿನ ವಿಗ್ರಹಗಳನ್ನು ಕೆತ್ತಲಾಗಿದೆ. ಮೂರೂ ಶಿಲ್ಪಗಳು ಕೈಮುಗಿದಿವೆ. ಶಿಲ್ಪಗಳ ಶೈಲಿಯನ್ನು ನೋಡಿದಾಗ ಕ್ರಿ. ಶ. ೧೬-೧೭ನೇ ಶತಮಾನದವು ಎನಿಸುತ್ತದೆ. ಹಾಗೆಯೇ ಇನ್ನೊಂದು ಶಿಲ್ಪ ಸುಮಾರು ಒಂದು ಮೀಟರ್ ಎತ್ತರವಾಗಿದೆ. ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಬಹುಶಃ ಯಾವುದೋ ಪ್ರಾಣಿಯ ರುಂಡ. ಕೊರಳಲ್ಲಿ ಆಭರಣ, ಕಿವಿಗಳಲ್ಲಿ ಆಭರಣಗಳು-ಇದನ್ನು ಹೆಣ್ಣಿನ ವಿಗ್ರಹವೆಂದು ಸೂಚಿಸುತ್ತವೆ. ಆದರೆ ವಿಗ್ರಹದ ಬಲ ಕೊನೆಯಲ್ಲಿ ಒಂದು ನವಿಲಿನ (ಅಥವಾ ಕುಕ್ಕಟ) ಅಸ್ಪಷ್ಟ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಆದ್ದರಿಂದ ಇದು ಜೈನ ಧರ್ಮಕ್ಕೆ ಸೇರಿದ ಯಕ್ಷಿಣಿಯ ಶಿಲ್ಪವೂ ಆಗಿರಬಹುದೆ?

**ವೀರಗಲ್ಲುಗಳು :** ಸದ್ಯಕ್ಕೆ ಚಂದನಕೆರೆಯಲ್ಲಿ ಎರಡೇ ಎರಡು ವೀರಗಲ್ಲುಗಳು ಸಿಕ್ಕವು. ಆದರೆ ದೇವದುರ್ಗದ ಪೋಲೀಸ್ ಠಾಣೆಯ ಆವರಣದಲ್ಲಿ ಹತ್ತು ವೀರಗಲ್ಲುಗಳನ್ನು ಓರಣವಾಗಿ ಜೋಡಿಸಲಾಗಿದೆ. ಈ ಶಿಲ್ಪಗಳೆಲ್ಲವನ್ನು ಚಂದನಕೆರೆಯಿಂದ ತಂದು ಇಲ್ಲಿ ಜೋಡಿಸಲಾಗಿದೆ. ಈ ವೀರಗಲ್ಲುಗಳಲ್ಲಿ ಒಂದರ ಹೊರತಾಗಿ ಉಳಿದವುಗಳು ಡಾಲೋರೈಟ ಶಿಲೆಯಲ್ಲಿ ಕೆತ್ತಲ್ಪಟ್ಟಿವೆ. ಒಂದು ವೀರಗಲ್ಲನ್ನು ಮಾತ್ರ ಬೂದು ವರ್ಣದ ಕಣಶಿಲೆಯಲ್ಲಿ ಕಟೆಯಲಾಗಿದೆ. ಈ ವೀರಗಲ್ಲುಗಳಲ್ಲಿ ಬಹುಪಾಲು ಬೇಟೆಯ ದೃಶ್ಯಗಳೇ ಇವೆ. ಒಂದೇ ಒಂದು ಮಾತ್ರ ಯುದ್ಧದ ದೃಶ್ಯವನ್ನು ಚಿತ್ರಿಸುತ್ತದೆ. ಈ ಶಿಲ್ಪಗಳ ಆಭರಣ, ಉಡುಪು ಮತ್ತು ತೊಡಪುಗಳು, ಆಯುಧಗಳು ಇತ್ಯಾದಿಗಳನ್ನು ಸೂಕ್ಷ್ಮವಾಗಿ



ಗಮನಿಸಿದಾಗ ಈ ಶಿಲ್ಪಗಳು ವಿಜಯನಗರ ಶೈಲಿಗೆ ಸೇರಿದ ಶಿಲ್ಪಗಳು ಎಂದೆನಿಸುತ್ತದೆ. ಬಹುಶಃ ಇವುಗಳ ಕಾಲ ಕ್ರಿ. ಶ. ೧೬ರಿಂದ ೧೮ರವರೆಗೆ ಇರಬಹುದು. ಒಂದು ಶಿಲ್ಪದಲ್ಲಿ ಕುದುರೆ ಸವಾರಿ ಯಲ್ಲಿರುವ ಪಾಳೆಗಾರನ (ಅಥವಾ ದೊರೆಯ) ಪರಿಚಾರಕ ನೊಬ್ಬನ ಕೈಯಲ್ಲಿ ಬಂದೂಕನ್ನು ಕೆತ್ತಲಾಗಿರುವದರಿಂದ ಈ ಶಿಲ್ಪ ಕ್ರಿ. ಶ. ೧೮ನೇ ಶತಮಾನಕ್ಕೆ ಸೇರಬಹುದೆಂದು ಊಹಿಸಬಹುದು.

**ಕಾವಲು ಕಮಾನು :** ಚಂದನಕೆರೆಯಲ್ಲಿ ಮುದುಕನೊಬ್ಬನು ನಾನು ಕ್ಷೇತ್ರ ಕಾರ್ಯ ಕೈಗೊಂಡಾಗ ಚಂದನಕೆರೆ ಹಿಂದಿನ ಕಾಲದಲ್ಲಿ ದೇವದುರ್ಗದ ಅರ್ಧಭಾಗವನ್ನೂ ಆಕ್ರಮಿಸಿಕೊಂಡಿತ್ತು ಎಂದು ಹೇಳಿದಾಗ ಕುತೂಹಲವೆನಿಸಿತು. ದೇವದುರ್ಗದ ಊರಮಧ್ಯದಲ್ಲಿ ಕೋಟೆಯ ಅಳಿದುಳಿದ ಭಾಗ ಇದೆ. ಇದಕ್ಕೂ ಹೆಚ್ಚಾಗಿ ಇಂದಿನ ತಹಸೀಲ ಕಚೇರಿಯ ಹಿಂಬದಿಯಲ್ಲಿರುವ ಮಸೀದೆಯ



ಪಕ್ಕದಲ್ಲಿರುವ ಮೂರು ಕಮಾನುಗಳಿರುವ ಕಾವಲು ಕಟ್ಟಡ (watch Tower) ಒಂದು ಸ್ಪಷ್ಟ ಪುರಾವೆಯನ್ನು ನೀಡುತ್ತದೆ. ಬಹುಶಃ ಈ ಕಟ್ಟಡವನ್ನು ಕ್ರಿ. ಶ. ೧೬-೧೭ನೇ ಶತಮಾನದಲ್ಲಿ ಆಗ ಆಳುತ್ತಿದ್ದ ದೊರೆಯು ಕಟ್ಟಿಸಿರಬಹುದು. ಆಗ ಈ ಕಟ್ಟಡವು ಚಂದನಕೆರೆಯ ಪೂರ್ವದ ಹೆಬ್ಬಾಗಿಲು ಆಗಿರಬಹುದು. ಇದರ ಶೈಲಿಯ ಮೇಲೆ ಮುಸ್ಲಿಂ ಶೈಲಿಯ ಪ್ರಭಾವ ಕಂಡು ಬಂದರೂ ಅಲ್ಲಿ ಕೆತ್ತಲಾಗಿರುವ ಸೂರ್ಯ ಚಂದ್ರರ ಶಿಲ್ಪಗಳು ಮತ್ತು ಆನೆಯ ಶಿಲ್ಪಗಳು ಇದು ಹಿಂದು ದೊರೆಯು ಕಟ್ಟಿಸಿದ ರಚನೆ ಎಂಬುದನ್ನು ಸ್ಪಷ್ಟಗೊಳಿಸುತ್ತವೆ. ಈ ರಚನೆಯ ಪಶ್ಚಿಮಕ್ಕೆ ಇರುವ ಬಯಲು ಪ್ರದೇಶದಲ್ಲಿ ಈಗ ಮುಸ್ಲಿಂರ ಗೋರಿಗಳಿವೆ. ಆದರೆ ಅಲ್ಲಿ ದೇವಾಲಯಗಳ ಅಧಿಷ್ಠಾನಗಳ ಚಿಹ್ನೆಗಳು ಕಂಡು ಬರುತ್ತವೆ. ಈ ಪ್ರದೇಶದಲ್ಲಿ ನಿಜಾಮ ಸರ್ಕಾರದ ಪ್ರಭಾವ ಪ್ರಬಲವಾದಾಗ ಈ ನಿವೇಶನ ಮುಸ್ಲಿಂರ ಕೈ ಸೇರಿರಬಹುದು. ಈ ಕಟ್ಟಡದ ದಕ್ಷಿಣದ ಕೊನೆಯ ಕಮಾನಿನ ಒಂದು ಕಂಬದ ಮೇಲೆ ಎರಡು ಆನೆಗಳ ಸುಂದರ ಶಿಲ್ಪಗಳನ್ನು ಕೆತ್ತಲಾಗಿದ್ದನ್ನು ನಾನು ಚಿಕ್ಕವನಾಗಿದ್ದಾಗಿ ನಿಂದಲೂ ಜುಲೈ ೯೮ರವರೆಗೂ ನೋಡಿದ್ದೇನೆ. ೩೧-೭-೯೮ರಂದು ಈ ಉಬ್ಬು ಶಿಲ್ಪಗಳ ಚಿತ್ರಗಳನ್ನು ತೆಗೆದಾಗ, ಈ ಶಿಲ್ಪಗಳನ್ನು ಕೆಡಿಸುವುದಕ್ಕಾಗಿ ಚಾಣದಿಂದ ಹೊಡೆದ ಗುರುತುಗಳನ್ನು ನೋಡಿ ಬೇಸರಗೊಂಡೆನು. ನಂತರ ೩-೧೧-೯೮ರಂದು ಪುನಃ ಚಿತ್ರಗಳನ್ನು ತೆಗೆಯಲು ಹೋದಾಗ ಈ ಶಿಲ್ಪಗಳ ಮೇಲೆ ಸಿಮೆಂಟ್ ಮಡ್ಡಿಯನ್ನು ಮೆತ್ತಲಾಗಿರುವುದನ್ನು ನೋಡಿದಾಗ ನನಗೆ ತುಂಬಾ ಬೇಸರವಾಯಿತು. ಈ ಕಟ್ಟಡವು ಹಿಂದು ದೊರೆಯೊಬ್ಬನಿಂದ ನಿರ್ಮಿಸಲ್ಪಟ್ಟಿತು ಎಂಬ ಐತಿಹಾಸಿಕ ಸತ್ಯವನ್ನು ಅಳಿಸಿ ಹಾಕುವ ದುಷ್ಟ ಪ್ರಯತ್ನ ಇದೆಂಬುದು ಸ್ಪಷ್ಟ. ನಾವು ಇತಿಹಾಸದಿಂದ ಪಾಠಗಳನ್ನು ಕಲಿತಿಲ್ಲವೆಂಬುದಕ್ಕೆ ಇದೊಂದು ತೀರ ಇತ್ತೀಚಿನ ಉದಾಹರಣೆ.

**ಇತರ ಅವಶೇಷಗಳು :** ಮೇಲೆ ವಿವರಿಸಲಾದ ಶಿಲ್ಪಗಳಲ್ಲದೆ, ಚಂದನಕೆರೆಯ ತುಂಬೆಲ್ಲಾ ಹಲವಾರು ಭಗ್ನ ಶಿಲ್ಪಗಳು, ಪಾದಗಳು ಇತ್ಯಾದಿಗಳು ಅನಾಥವಾಗಿ ಬಿದ್ದಿವೆ. ಚಂದನಕೆರೆಯಲ್ಲಿ ಹಾಳು ಮಣ್ಣಿನ ದಿಬ್ಬವೆಂದು ಕರೆಯಲ್ಪಡುವ ಒಂದು ದಿಬ್ಬವಿದೆ. ಇಲ್ಲಿ ಸಂಗ್ರಹಗೊಂಡಿರುವ ಹಾಳು ಮಣ್ಣಿನ ಎತ್ತರ ಸುಮಾರು ೫ ಅಡಿ. ಈ ದಿಬ್ಬದ ಅಡಿಯಲ್ಲಿ ಮಣ್ಣಿನ ಸ್ತರಗಳಲ್ಲಿ ಮಣ್ಣಿನ ಮಡಿಕೆಯ ಚೂರುಗಳು ಮತ್ತು ಎಲುವಿನ ಚೂರುಗಳು ಸಿಗುತ್ತವೆ. ಈ ಮಣ್ಣಿನ ಮಡಿಕೆಯ ಚೂರುಗಳನ್ನು ಮತ್ತು ಎಲುವಿನ ಚೂರುಗಳನ್ನು ಶಾಸ್ತ್ರೀಯವಾಗಿ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಿದರೆ ಇವುಗಳ ಕಾಲವನ್ನು ಗೊತ್ತುಪಡಿಸಬಹುದು. ಕರ್ನಾಟಕದಲ್ಲಿ ಈ ಬಗೆಯ ಪ್ರಯೋಗಶಾಲೆ ಇಲ್ಲದ್ದರಿಂದ ನಾನು ಈ ರೀತಿಯಾಗಿ ಪ್ರಯತ್ನಿಸಿಲ್ಲ. ಮೇಲ್ನೋಟಕ್ಕೆ ಇದೊಂದು ಯಜ್ಞಶಾಲೆಯ ನಿವೇಶನವಾಗಿರಬಹುದೆಂದೆನಿಸುತ್ತದೆ. ಈ ಮಣ್ಣನ್ನು ಕಟ್ಟಡಗಳನ್ನು ಕಟ್ಟುವದಕ್ಕಾಗಿ ಟ್ರ್ಯಾಕ್ಟರ ಮೂಲಕ ಸಾಗಿಸುತ್ತಾರೆ. ಈ ಊರಿನ ಮುದುಕನೊಬ್ಬ ಈ ಮಣ್ಣನ್ನು ಮಾರಿ ಹಣ ಸಂಪಾದಿಸುತ್ತಲಿದ್ದಾನೆ.

**ಚರ್ಚೆಗಳು - ಸಂಯೋಜನೆ - ತೀರ್ಮಾನಗಳು :** ಮೇಲೆ ವಿವರಿಸಲಾದ ಪುರಾತತ್ವದ ಅವಶೇಷಗಳ ವಿವರಗಳನ್ನು ಪುನರಾವಲೋಕಿಸಿದಾಗ ಚಂದನಕೆರೆಯು ಕ್ರಿ. ಶ. ೧೦-೧೨ನೇ ಶತಮಾನದಲ್ಲಿ ಒಂದು ಅತ್ಯಂತ ಪ್ರಮುಖ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿತ್ತು ಎಂಬಂಶ ವ್ಯಕ್ತವಾಗುತ್ತದೆ. ಈ ಅವಧಿಯಲ್ಲಿ ಶೈವಧರ್ಮ ಮತ್ತು ಜೈನಧರ್ಮಗಳೆರಡೂ ಇಲ್ಲಿ ಪ್ರಸಾರದಲ್ಲಿದ್ದವು. ಜೈನಧರ್ಮದ ಕುರುಹುಗಳು ಅತ್ಯಂತ ಕುತೂಹಲಕಾರಿ ಅಂಶ - ಯಾಕೆಂದರೆ ಇಡೀ ದೇವದುರ್ಗ ತಾಲ್ಲೂಕಿನಲ್ಲಿ ಒಂದೂ ಜೈನ ಕುಟುಂಬ ಇಲ್ಲ. ಇಂದಿನ ರಾಯಚೂರು ಜಿಲ್ಲೆ ಮತ್ತು ಇಂದಿನ ಕೊಪ್ಪಳ ಜಿಲ್ಲೆ ಇವೆರಡನ್ನೂ ಗಮನಿಸಿದಾಗ ಕೊಪ್ಪಳದಲ್ಲಿ ಮಾತ್ರ ಜೈನ ಧರ್ಮದ ಕುರುಹುಗಳು ಇವೆ. ಮತ್ತು ಜೈನಧರ್ಮಿಯರು ಇದ್ದಾರೆ. ಕೊಪ್ಪಳವು ಹಿಂದೆ ಜೈನಧರ್ಮದ ಸುಪ್ರಸಿದ್ಧ ಕೇಂದ್ರವಾಗಿತ್ತು.[೮] *ಆದ್ದರಿಂದ ಹಿಂದಿನ ರಾಯಚೂರು ಜಿಲ್ಲೆಯಲ್ಲಿ ಕೊಪ್ಪಳವನ್ನು ಬಿಟ್ಟರೆ ಚಂದನಕೆರೆಯೇ ಇನ್ನೊಂದು ಜೈನಕೇಂದ್ರವಾಗಿತ್ತು ಎಂಬುದು ಕುತೂಹಲಕಾರಿ ಯಾದ ಅಂಶ.*

ಕ್ರಿ.ಶ. ೧೭ನೇ ಶತಮಾನದ ಸಮಯಕ್ಕೆ ರಾಯಚೂರು ಜಿಲ್ಲೆಯಲ್ಲಿ ಹರಿದಾಸರ ಪ್ರಭಾವ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ದಟ್ಟವಾಯಿತು. ಬಹುಶಃ ಈ ಪ್ರಭಾವಕ್ಕೆ ಒಳಗಾಗಿ ಚಂದನಕೆರೆಯ ದೊರೆಗಳು ವೈಷ್ಣವ ಸಂಪ್ರದಾಯವನ್ನು ಸ್ವೀಕರಿಸಿದರು. ಈ ದೊರೆಗಳ ವಂಶಸ್ಥರು ಇಂದಿಗೂ ದೈವದುರ್ಗ ದಲ್ಲಿದ್ದಾರೆ. ಬೇಡರು ಅಥವಾ ನಾಯಕರು ಎಂದು ಕರೆಸಿಕೊಳ್ಳುವ ಜನಾಂಗಕ್ಕೆ ಈ ದೊರೆಗಳು ಸೇರಿದ್ದಾರೆ. ಕ್ರಿ. ಶ. ೧೬-೧೭ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ವೈಷ್ಣವ ಸಂಪ್ರದಾಯಕ್ಕೆ ರಾಜಕೀಯ ಬೆಂಬಲ ದೊರಕಿದ್ದರಿಂದ ಶೈವ ಮತ್ತು ಜೈನಧರ್ಮಗಳು ಈ ಪ್ರದೇಶದಲ್ಲಿ ಕ್ಷೀಣಿಸತೊಡಗಿದವು. ಚಂದನಕೆರೆಯಲ್ಲಿ ಅಂತೂ, ಇರುವ ಎಲ್ಲಾ ಜನರು (ಒಂದು ಕುಟುಂಬದ ಹೊರತಾಗಿ) ವೈಷ್ಣವ ಸಂಪ್ರದಾಯಕ್ಕೆ ಸೇರಿದ ಬೇಡರು. ಈ ಸಂಪ್ರದಾಯದ ಬದಲಾವಣೆ ಇಲ್ಲಿದ್ದ ಶೈವ ದೇವಾಲಯಗಳ ಮೇಲೂ ಜೈನ ಬಸದಿಗಳ ಮೇಲೆ ಬಿದ್ದು, ಈ ಗುಡಿಗಳು ಮತ್ತು ಬಸದಿಗಳು ಅರಕ್ಷಿತವಾದವು. ಅಷ್ಟೇ ಅಲ್ಲ ಶೈವ ಗುಡಿಗಳ ಮತ್ತು ಜೈನ ಬಸದಿಯ ಕಲ್ಲುಗಳನ್ನು ಕಿತ್ತು ಹನುಮಂತ ದೇವರ ಗುಡಿಗಳಿಗೆ ಉಪಯೋಗಿಸಲಾಯಿತು. ಇದರ ಜೊತೆಗೆ ೧೮ನೇ ಶತಮಾನದ ನಂತರ ಬೆಳೆದ ಮುಸ್ಲಿಂರ ಪ್ರಭಾವದಿಂದಾಗಿ ಎಲ್ಲಾ ಗುಡಿಗಳು, ಬಸದಿಗಳು ಶಿಲ್ಪಗಳು ಸಂಪೂರ್ಣ ಅಥವಾ ಭಾಗಶಃ ನಾಶವಾದವು.

ತೀರ ಇತ್ತೀಚಿನವರೆಗೆ ಚಂದನಕೆರೆಯಲ್ಲಿ ನಿಧಿ ಶೋಧಕರ (''ಗಂಟು ಹುಡುಕುವವರು'') ಆಸೆ ಬುರುಕತನಕ್ಕೂ ಇಲ್ಲಿಯ ಶಿಲ್ಪಗಳು ಬಲಿಯಾದವು. ಇವೆಲ್ಲದರ ಒಟ್ಟು ಪರಿಣಾಮವೆಂದರೆ ಕ್ರಿ.ಶ. ೧೦-೧೨ ಶತಮಾನದಲ್ಲಿದ್ದ ಅಂದ ಚೆಂದದ ಚಂದನಕೆರೆ ಹಾಳಾಯಿತು.

**ಸಲಹೆಗಳು :** ಚಂದನಕೆರೆಯ ಬಗ್ಗೆ, ನನಗೆ ತಿಳಿದ ಮಟ್ಟಿಗೆ, ಇದೇ ಮೊದಲ ಕ್ರಮಬದ್ಧವಾದ ಅಧ್ಯಯನ. ಆದ್ದರಿಂದ ಇತಿಹಾಸಕಾರರು ಪುರಾತತ್ವ ಶಾಸ್ತ್ರಜ್ಞರು ಈ ಕನ್ನೆನೆಲದತ್ತ ದೃಷ್ಟಿಹರಿಸಬೇಕು. ಹೊಸ ವಿಷಯಗಳು ಬೆಳಕಿಗೆ ಬರುವದರಲ್ಲಿ ಸಂಶಯವಿಲ್ಲ. ಇಲ್ಲಿ ಒಟ್ಟು ೫ (ಐದು) ಶಿಲಾ ಶಾಸನಗಳು ನನ್ನ ಗಮನಕ್ಕೆ ಬಂದಿವೆ. ಈ ಶಾಸನಗಳು ಇದುವರೆಗೆ ಶಾಸನ ತಜ್ಞರ ಗಮನಕ್ಕೆ ಬಂದಿಲ್ಲ. ನನಗೆ ಪರಿಚಿತ ಇಬ್ಬರು ಶಾಸನ ತಜ್ಞರಿಗೆ ಈ ಬಗ್ಗೆ ಸೂಚಿಸಿದರೂ ಫಲಕಾಣಲಿಲ್ಲ. ಆದ್ದರಿಂದ ಶಾಸನ ತಜ್ಞರು ಕ್ಷೇತ್ರ ಕಾರ್ಯ ಕೈಗೊಂಡು ಈ ಶಾಸನಗಳ ಪಡಿಯಚ್ಚುಗಳನ್ನು ತೆಗೆದು ತಮ್ಮ ಅಧ್ಯಯನದೊಂದಿಗೆ ಪ್ರಕಟಿಸಿದರೆ, ಈ ಸ್ಥಳದ ಇತಿಹಾಸದ ಬಗ್ಗೆ ಇನ್ನಷ್ಟು ಬೆಳಕನ್ನೂ ಚೆಲ್ಲಬಹುದು. ಯಾರಾದರೂ ಶಾಸನ ತಜ್ಞರು ಮುಂದೆ ಬಂದರೆ ನಾನು ಸ್ಥಳೀಯ ಸೌಕರ್ಯಗಳನ್ನು ಒದಗಿಸುತ್ತೇನೆ. ಕೇಂದ್ರ ಪುರಾತತ್ವ ಇಲಾಖೆಯಾಗಲೀ, ರಾಜ್ಯ ಪುರಾತತ್ವ ಇಲಾಖೆಯಾಗಲೀ ಈ ಊರಿನ ಶಿಲ್ಪಗಳು ಇನ್ನಷ್ಟು ಹಾಳಾಗುವ ಮುನ್ನ ಸೂಕ್ತ ರೀತಿಯ ರಕ್ಷಣೆ ನೀಡಬೇಕು ಮತ್ತು ಇಲ್ಲಿ ಉತ್ಖನನ ಕಾರ್ಯಗಳನ್ನು ಕೈಗೊಳ್ಳಬೇಕು.

*(ಈ ಸಂಪ್ರಬಂಧ ಬರೆಯುವ ಮುನ್ನ ನಾನು ವಿದ್ವಾಂಸರಾದ ಪ್ರೊ॥ ಎಸ್. ಕೆ. ರಾಮಚಂದ್ರರಾವ್ ಅವರೊಡನೆ ಸುದೀರ್ಘವಾಗಿ ಚರ್ಚಿಸಿದೆನು. ಅವರು ಸಹೃದಯತೆಯಿಂದ ನನ್ನ ಅನುಮಾನಗಳನ್ನು ಕೇಳಿ ಸೂಕ್ತವಾಗಿ ಮಾರ್ಗದರ್ಶನ ನೀಡಿ ಪರಿಹರಿಸಿದ್ದಾರೆ. ಈ ನನ್ನ ಅಧ್ಯಯನದಲ್ಲಿ ಒಳ್ಳೆಯ ಮತ್ತು ಸ್ವೀಕರಾರ್ಹವಾದ ಅಂಶಗಳೇನಾದರೂ ಇದ್ದರೆ ಅದರ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ; ತಪ್ಪುಗಳೇನಾದರೂ ಇದ್ದರೆ ಅವುಗಳು ನನ್ನವು. ಆದ್ದರಿಂದ ಪ್ರೊ॥ ರಾಮಚಂದ್ರರಾವ್ ಅವರಿಗೆ ನಾನು ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಕ್ಷೇತ್ರ ಕಾರ್ಯದಲ್ಲಿ ನನ್ನ ತಮ್ಮ ಮತ್ತು ದೇವದುರ್ಗ ತಾಲ್ಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹೆಚ್. ದಂಡಪ್ಪ ಮತ್ತು ನನ್ನ ಬಾಲ್ಯ ಸ್ನೇಹಿತ ಶ್ರೀ ಆದಿ ಸೋಮಶೇಖರ ಸಹಕರಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಈ ಸಂಪ್ರಬಂಧವನ್ನು ವಿಚಾರಸಂಕಿರಣದಲ್ಲಿ ಮಂಡಿಸಲು ಅವಕಾಶ ನೀಡಿದ ಇತಿಹಾಸ ಅಕಾದೆಮಿಗೂ, ಇತಿಹಾಸ ದರ್ಶನದ ಸಂಪಾದಕರಿಗೂ ನಾನು ಋಣಿ.)*

## ಆಧಾರ ಸಚಿ ಮತ್ತು ಅಡಿ ಟಿಪ್ಪಣಿಗಳು

*೧. Channabasappa S. Patil (1992): ***Temples of Raichur and Bellary Districts,*** Directorate of Archaeology and Museums, Mysore.

*೨. ಪ್ರೊ॥ ಎಸ್. ನಾಗರಾಜು (೧೯೯೮) : ೧೨ನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರ ಭಾಷಣ, **ಇತಿಹಾಸ ದರ್ಶನ,** ಸಂ. ೧೪ (೧೯೯೯), ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

*೩. ಸೂರ್ಯಕಾಂತ ಗುಣಕಿ ಮಠ (೧೯೯೯) : 'ದೇವದುರ್ಗದ ದೊರೆಗಳು', *ಸುವರ್ಣ ಸಿರಿ* ರಾಯಚೂರು ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ರಾಯಚೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು

*೪. ಪಾಟೀಲ, ಎಸ್. ಪಿ. (೧೯೭೬)... 'ಕೊಪ್ಪಳ ಮತ್ತು ಜೈನ ಧರ್ಮ'..... *ಗವಿ ದೀಪ್ತಿ,* (ಸಂ) : ಎಸ್. ಎಂ. ವೃಷಭೇಂದ್ರ ಸ್ವಾಮಿ ಮತ್ತು ಇತರರು ಶ್ರೀ ಗವಿಮಠ, ಕೊಪ್ಪಳ

ವಿರೂಪಾಕ್ಷ ಪೂಜಾರಹಳ್ಳಿ *

# ವಿಜಯನಗರ ಕಾಲದ ವಾಸ್ತು ಶಿಲ್ಪದಲ್ಲಿ ಬೇಟೆ ಚಿತ್ರಣ

'ಬೇಟೆ' ಮಾನವನ ಆರಂಭಿಕ ಜೀವನದ ಮತ್ತು ಆಹಾರ ಹುಡುಕಾಟದ ಪ್ರಥಮ ಹಂತ. ಈ ಹಂತದಲ್ಲಿ ತನ್ನ ಬೇಟೆಯ ಅನುಭವಗಳನ್ನು ಮಾನವ ಗೃಹೆ, ಕಲ್ಲು ಬಂಡೆಗಳ ಮೇಲೆ ಬಿಡಿಸಿದ್ದಾನೆ. ಬಳಸಿದ ಆಯುಧಗಳು, ವಾಸಿಸಿದ ನೆಲೆಗಳು ವ್ಯಾಪಕವಾಗಿ ಕಂಡುಬರುತ್ತವೆ. ಬೇಟೆಗೆ ಅನೇಕ ಕಾರಣಗಳಿವೆ : ಆಹಾರ ಸಂಪಾದನೆ, ಸ್ವಯಂರಕ್ಷಣೆ, ಮನೋರಂಜನೆ, ಪ್ರಕೃತಿ ಸಮತೋಲನ ಮುಂತಾದವುಗಳನ್ನು ತಿಳಿಸಬಹುದು. ಇಂದಿಗೂ ಬೇಟೆ ಲಾಭದಾಯಕ ವೃತ್ತಿಯಾಗಿದೆ. ಸರ್ಕಾರ ಬೇಟೆಯನ್ನು ನಿಷೇಧಿಸಿದರೂ, ಆಚರಣೆ, ಸಂಪ್ರದಾಯಗಳಲ್ಲಿ ರೂಢಿಸಿ ಕೊಂಡಿದ್ದಾರೆ.

ಮಾನವ ಆರ್ಥಿಕವಾಗಿ ಸದೃಢನಾದಂತೆ ಜ್ಞಾನದ ವಿಕಾಸದ ಮೇಲೆ ಪರಿಣಾಮ ಬೀರಿ ಆಳುವ, ಪಳಗಿಸುವ ಶಕ್ತಿ ಪಡೆದ. ಈ ಬೇಟೆಯ ಶಕ್ತಿ ಅನೇಕ ಸಾಮ್ರಾಜ್ಯಗಳ ಸ್ಥಾಪನೆಗೆ ನಾಂದಿಯಾಗಿದೆ. ನಮ್ಮ ಜನಪದರು ಇತಿಹಾಸವನ್ನು ಹೇಳುವಾಗ ರಾಜ್ಯ, ವಂಶ, ಸಾಮ್ರಾಜ್ಯಗಳು ಉದಯವಾಗುವುದು ಬೇಟೆಯಿಂದಲೇ ಎಂದು ಹೇಳುತ್ತಾರೆ. ಉದಾ: ಶಾತವಾಹನರು, ಕದಂಬರು, ಹೊಯ್ಸಳರು, ನೊಳಂಬರು, ಕಂಪಲಿ ಅರಸರು, ವಿಜಯನಗರ, ಗುಡೆಕೋಟೆ, ಜರಿಮಲೆ, ಸೊಂಡೂರು, ತರೀಕೆರೆ ಮತ್ತು ಚಿತ್ರದುರ್ಗ ಸಂಸ್ಥಾನಗಳನ್ನು ಹೆಸರಿಸಬಹುದು. ಪ್ರಾಚೀನ ಕಾಲದಿಂದಲೂ ಅರಸರು ಬೇಟೆಯಾಡುತ್ತಾ ಬಂದಿದ್ದಾರೆ. ಅರಸರ ಬೇಟೆ ಬಗೆಗೆ ಕಾವ್ಯ ಹುಟ್ಟಿಕೊಂಡರೆ, ಜನಸಾಮಾನ್ಯರ ಬೇಟೆ ಬಗೆಗೆ ವೀರಗಲ್ಲುಗಳು ನಿರ್ಮಾಣಗೊಂಡವು. ಗಾಳಿ, ಮಳೆ, ಬಿಸಿಲು ಎನ್ನದೆ ರಾಜ ಯಾವಾಗಲೂ ಬೇಟೆಯಲ್ಲಿ ಕಾಲ ಕಳೆಯುತ್ತಿದ್ದ. ಚಕ್ರವರ್ತಿ ಬೇಟೆಗೆಂದು ಹೊರಗೆ ಹೊರಡುತ್ತಾನೆಂದರೆ ಸೈನ್ಯವು ಹಾದು ಹೋಗುವ ಪ್ರದೇಶದಲ್ಲಿನ ಬೇಟೆಯ ಕಾವಲುಗಾರರು (Game Keepers) ಎಲ್ಲೆಲ್ಲಿ ಒಳ್ಳೆಯ ಬೇಟೆ ಇದೆ ಎಂದು ಬೇಟೆಯ ಮಹಾಭಕ್ತಿಗಳಿಗೆ (Grand Masters of the hunt) ತಿಳಿಸ ಬೇಕಾಗಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಬೇಟೆಗಾರರಿಗೆ ರಾಜ ಮನ್ನಣೆಯಿತ್ತು.

ಮೇಲಿನಂತೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದುದೇ ಬೇಟೆಯ ಮೂಲಕ ಎಂದು ಮಧ್ಯ ಕರ್ನಾಟಕದ ಜನಪದರ ಅಭಿಮತ. 'ಹಕ್ಕ ಬುಕ್ಕ' ಎಂಬುವರು ಪ್ರದೇಶದಲ್ಲಿ ಬೇಟೆ ಯಾಡುತ್ತಾ ಬರುವಾಗ ಇವರ ಬೇಟೆ ನಾಯಿಗಳನ್ನು ಮೊಲಗಳು ಅಟ್ಟಿಸಿಕೊಂಡು ಹೋದವಂತೆ. ಇದನ್ನು ಕಣ್ಣಾರೆ ಕಂಡ ಹಕ್ಕ-ಬುಕ್ಕರ ಗುರುಗಳಾದ ವಿದ್ಯಾರಣ್ಯರು ಈ ಪ್ರದೇಶದ ಮಹಿಮೆಯನ್ನು ಗುರುತಿಸಿ ಈ ಸ್ಥಳದಲ್ಲಿ ರಾಜ್ಯ ಕಟ್ಟಬೇಕೆಂದು ತಿಳಿಸಿದರಂತೆ. ಅದರಂತೆ ಈ ರಾಜರಿಬ್ಬರು ಈ ನೆಲದಲ್ಲಿ ರಾಜ್ಯ ಸ್ಥಾಪನೆ ಮಾಡಿದರು ಎಂಬುದು ಜನಪದರು ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಬಗೆಗೆ ನೀಡುವ ಒಂದು ಹೇಳಿಕೆ ಎನ್ನಲಾಗಿದೆ.[*೧]

ಹಂಪೆ ಪ್ರಾಗಿತಿಹಾಸ ಕಾಲದ ಮಾನವನ ಆವಾಸ ಸ್ಥಾನವಾಗಿತ್ತೆಂಬುದಕ್ಕೆ ಗವಿ, ವರ್ಣ ಚಿತ್ರಗಳು, ವಾಸಸ್ಥಾನದ ಅವಶೇಷಗಳು ದೊರೆತ ಅನೇಕ ಉದಾಹರಣೆಗಳಿವೆ.[*೨] ವಿಜಯನಗರ ಕಾಲದ ಬೇಟೆಯನ್ನು ಡಾ॥ ಕೆ. ಶ್ರೀಕಂಠಯ್ಯನವರು ತಮ್ಮ 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನ ಜೀವನ ಚಿತ್ರ' ಎಂಬ ಕೃತಿಯಲ್ಲಿ ಪ್ರಾಸಂಗಿಕವಾಗಿ ಉಲ್ಲೇಖಿಸಿದ್ದಾರೆ. ರಾಧಾಕೃಷ್ಣ ಮೂರ್ತಿ ಅವರು 'ವಿಜಯನಗರ ಸಂಸ್ಕೃತಿಯ ಆಕರ ಗ್ರಂಥ ಸಾಮ್ರಾಜ್ಯ ಲಕ್ಷ್ಮಿ ಪೀಠಿಕಾ'[*೩] ಎಂಬ ಪ್ರಬಂಧದಲ್ಲಿ ಬೇಟೆಯ ಪ್ರಸ್ತಾಪವಿರುವುದನ್ನು ಬೆಳಕಿಗೆ ತಂದಿದ್ದಾರೆ.

ವಿಜಯನಗರದ ಅರಸರು ಸದೃಢ ಕಲಾಪೋಷಕರಾಗಿದ್ದರೆಂಬುದಕ್ಕೆ ಈಗಿರುವ ಅವಶೇಷಗಳೇ ಸಾಕ್ಷಿ. ದೇವಾಲಯಗಳು, ಕೋಟೆ-ಕೊತ್ತಲಗಳು, ದ್ವಾರಬಾಗಿಲು, ಹೆಬ್ಬಾಗಿಲು, ಅರವಟ್ಟಿಗೆ, ವರ್ತಿ, ಅಣೆಕಟ್ಟು ನಿರ್ಮಿಸಿರುವುದು ಇವರ ಕಲಾ ಸೌಂದರ್ಯದ ಪ್ರಜ್ಞೆಗೆ ಕೈಗನ್ನಡಿಯಾಗಿವೆ. ಹೀಗೆ ನಿರ್ಮಿಸುವ

* ಅಧ್ಯಾಪಕ, ಚರಿತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ - ೫೮೩ ೨೭೬

ಪ್ರಾಚ್ಯಾವಶೇಷಗಳಲ್ಲಿ ಬೇಟೆಯನ್ನು ವಿಪುಲವಾಗಿ ಬಳಸಿರುವುದು ಗಮನಾರ್ಹ. ಇದು ಕಲಾಸೌಂದರ್ಯಕ್ಕೆ ನೀಡಿರಬಹುದಾದ ಮೆರಗು ಮತ್ತು ಪ್ರಾಯೋಗಿಕ ಅನುಭವವಿರಬೇಕು. ಅಲ್ಲದೆ ಅಂದಿನ ಅನಿವಾರ್ಯತೆ, ಅಗತ್ಯತೆಯನ್ನು ಎತ್ತಿ ತೋರಿಸುತ್ತದೆ. ಇತರ ವಾಸ್ತುಶಿಲ್ಪದಂತೆ ಬೇಟೆಯು ಕಲಾಸೌಂದರ್ಯಕ್ಕೆ ಜೀವಾಳ 'ವಾಗಿರಬಹುದೆ?

ಹಂಪಿಯ ಪರಿಸರದಲ್ಲಿ ಶಿಲಾಯುಗದ ನಿವೇಶನಗಳಿವೆ. ಅವುಗಳೆಂದರೆ: ದರೋಜಿಗುಡ್ಡ, ಗಾದಿಗನೂರು, ಕಾಕುಬಾಳುಗುಡ್ಡ, ಮಲ್ಲಾಪುರ, ನಾಗಲಾಪುರ, ನಿಂಬಾಪುರ, ತಿಮ್ಮಲಾಪುರ, ತೋರಣಗಲ್ಲು ಮುಂತಾದವುಗಳು ಕಂಡುಬರುತ್ತವೆ.[*೪] ಈ ಸ್ಥಳಗಳಲ್ಲಿ ವಿಪುಲವಾಗಿ ಬೇಟೆಯ ದೃಶ್ಯಗಳನ್ನು ನೋಡಬಹುದು.

ವಿಜಯನಗರ ಕಾಲದಲ್ಲಿದ್ದ ಬೇಟೆಯ ಬಗೆಗೆ ವಿದೇಶಿಯರ ಬರೆವಣಿಗೆಗಳನ್ನು ಗಮನಿಸುವುದು ಸೂಕ್ತ. ವೇರ್ಥಯ ವಿಜಯನಗರ ರಾಜಧಾನಿ ಬಗ್ಗೆ ತಿಳಿಸುತ್ತಾ 'ಈ ಜಾಗವು ಬೇಟೆಗೂ ಹಕ್ಕಿಗಳನ್ನು ಹಿಡಿಯಲು ಬಹಳ ಚೆನ್ನಾಗಿದ್ದು ಎರಡನೇ ಸ್ವರ್ಗದಂತಿದೆ ಎಂದಿದ್ದಾನೆ. ೧೪೪೧ರಲ್ಲಿ ಬಂದ ಅಬ್ದುಲ್ ರಜಾಕ್ ಆನೆ ಹಿಡಿಯುವ ವಿಧಾನ, ಬೇಟೆಯ ತಂತ್ರವನ್ನು ತಿಳಿಸಿದ್ದಾನೆ. ೧೫೦೬ರಲ್ಲಿ ಪೋರ್ಚುಗೀಸ್‌ನ ಬಾರ್ಬೋಸಾನು ಸಹ ವಿಜಯನಗರ ಕಾಲದ ಬೇಟೆಯ ಬಗೆಗೆ ತಿಳಿಸಿದ್ದಾನೆ. ಪೆರ್ನಾಂವ್ ನೂನಿಜ್ 'ದೇವರಾಯ ಹಂಪೆಯಲ್ಲಿ ವಿರೂಪಾಕ್ಷ ದೇವಾಲಯವನ್ನು ಕಟ್ಟಲು ಬೇಟೆಯೇ ಕಾರಣ ಎನ್ನುತ್ತಾನೆ. ದೇವರಾಯ ಒಂದು ದಿನ ಬೇಟೆಯಾಡುತ್ತಾ ಒಂದು ಸ್ಥಳಕ್ಕೆ ಬರುತ್ತಾನೆ. ಅಲ್ಲಿ ಒಂದು ಮೊಲವು ಬೇಟೆಯ ನಾಯಿಯನ್ನೇ ಅಟ್ಟಿಸಿಕೊಂಡು ಬಂದು ಕಚ್ಚಿದ ಆಶ್ಚರ್ಯ ಪ್ರಸಂಗವನ್ನು ನೋಡಿದನಂತೆ. ದೇವರಾಯ ಇದೇ ಜಾಗದಲ್ಲಿ ಸ್ವಾಮಿಗಳ ಆದೇಶದಂತೆ ದೇವಾಲಯವನ್ನು ಕಟ್ಟಿಸಿದನೆಂಬುದು ಮಹತ್ವದ ಸಂಗತಿ. ಬೇಟೆ, ಬೇಟೆಗಾರರು, ಬೇಟೆಯ ಬಗೆಗಳು, ವಿಧಾನ, ಪರಿಸರ, ಉದ್ದೇಶ, ಆಯುಧ ಮುಂತಾದವುಗಳ ಬಗ್ಗೆ ವಿದೇಶಿಯರು ಬರವಣಿಗೆಗಳಲ್ಲಿ ತಿಳಿಸಿದ್ದಾರೆ.

ಇಲ್ಲಿ ಬೇಟೆ ಚಿತ್ರಣವನ್ನು ಗುರುತಿಸುವಲ್ಲಿ ಹಂಪಿಯನ್ನು ಪ್ರಧಾನವಾಗಿಟ್ಟುಕೊಂಡು ಉಳಿದ ಸ್ಥಳಗಳನ್ನು ಸಮೀಕ್ಷಿಸಲಾಗುವುದು. ಅವುಗಳೆಂದರೆ: ಹಂಪೆಯ ವಿರೂಪಾಕ್ಷ ದೇವಾಲಯ, ಹಜಾರರಾಮ ದೇವಾಲಯ, ವಿಜಯ ವಿಠಲ ದೇವಾಲಯ, ಕೃಷ್ಣ ದೇವಾಲಯ, ಅಚ್ಯುತ ದೇವಾಲಯ, ಮಾಲ್ಯವಂತ ರಘುನಾಥ ದೇವಾಲಯ, ಪಟ್ಟಾಭಿರಾಮ ದೇವಾಲಯ, ಮಹಾನವಮಿ ದಿಬ್ಬ ಮತ್ತು ಬೇಟೆಕಾರರ ಹೆಬ್ಬಾಗಿಲು. ಇತರ ಸ್ಥಳಗಳೆಂದರೆ : ಶೃಂಗೇರಿ, ಮೇಲುಕೋಟೆ, ನಂದಿ ಬೆಟ್ಟಗಳು, ಭಾಗಮಂಡಲ, ಕಲ್ಲೂರು, ಹಿರಿಯೂರು, ಶ್ರೀ ಶೈಲಂ, ಯಗಂಟಿ, ಲೇಪಾಕ್ಷಿ, ಪುಷ್ಪಗಿರಿ ಮತ್ತು ಶಂಕರದುರ್ಗ. ವಾಸ್ತುಶಿಲ್ಪದ ಮೂಲಕ ಶಾಸನ, ವೀರಗಲ್ಲು, ಮಾಸ್ತಿಕಲ್ಲು ಇತರ ಪ್ರಕಾರಗಳನ್ನು ಅಧ್ಯಯನಿಸಲಾಗುವುದು. ಲೌಕಿಕ ಮತ್ತು ಅಲೌಕಿಕ ಎಂಬ ಬೇಟೆಯ ಎರಡು ಪ್ರಕಾರಗಳಿವೆ. ಅಲೌಕಿಕ ಬೇಟೆಯು ಕಿರಾತಾರ್ಜುನೀಯ ಪ್ರಸಂಗವಾಗಿದೆ. ಲೌಕಿಕ ಬೇಟೆ ಜನಸಾಮಾನ್ಯರ ಹಸಿವಿನ ಪ್ರಾಯೋಗಿಕ ಚಟುವಟಿಕೆಯಾಗಿದೆ.

## ವಿರೂಪಾಕ್ಷ ದೇವಾಲಯ

ಇದು ಹಂಪೆಯ ಪರಿಸರದ ಸುಂದರ ಮತ್ತು ಅತೀ ಹೆಚ್ಚು ಭಕ್ತಾದಿಗಳನ್ನು ಹೊಂದಿದ ದೇವಾಲಯವಾಗಿದೆ. ಮಹಾಭಾರತದ 'ಕಿರಾತಾರ್ಜುನೀಯ'ವು ಬೇಟೆಗೆ ಬಲಿಯಾಗಿ ಸತ್ತ ಹಂದಿಯನ್ನು ಪಡೆಯಲು ಶಿವನಿಗೂ ಮತ್ತು ಅರ್ಜುನಿಗೂ ನಡೆಯುವ ಹೋರಾಟದ ಕಥೆ. ಈ ಕಿರಾತಾರ್ಜುನೀಯ ಕಥಾ ಸರಣಿಯು ವಿರೂಪಾಕ್ಷ ದೇವಸ್ಥಾನದಲ್ಲಿದೆ. ಗರ್ಭಗೃಹದ ವಾಯವ್ಯ ಭಾಗದ ಅರ್ಧಮಂಟಪ ಹಾಗೂ ರಂಗಮಂಟಪದ ಪಶ್ಚಿಮಕ್ಕೆ ಸೀಲಿಂಗ್ (ಸೂರು ಅಥವಾ ಒಳಮಾಳಿಗೆ)ನಲ್ಲಿ ಗೋಡೆಯ ಮೇಲೆ ಬರೆದ ಭಿತ್ತಿ ಚಿತ್ರದ ಕಲೆ ಪ್ರಸಿದ್ಧವಾಗಿದೆ. ಕೃಷ್ಣ ದೇವರಾಯ ೧೫೧೦ರಲ್ಲಿ ಈ ರಂಗಮಂಟಪವನ್ನು ಕಟ್ಟಿಸುತ್ತಾನೆ. ದಕ್ಷಿಣ ಮತ್ತು ಉತ್ತರ ದಿಕ್ಕಿನ ಪ್ರವೇಶ ಭಾಗದಲ್ಲಿ ೧೫೧೩ರ ಕೃಷ್ಣದೇವರಾಯನ ಶಾಸನಗಳಿವೆ. ಅರ್ಧಮಂಟಪದ ಹೊರಗಡೆ ಶಿವಲೀಲೆ ವಿಧಗಳನ್ನು ಕೆತ್ತಲಾಗಿದೆ. ಬೇಟೆ ಆರಾಧನೆ (Hunter devotee)ಯಲ್ಲಿ ಕಣ್ಣಪ್ಪನ ಶಿಲ್ಪ ಅರ್ಧಮಂಟಪದ ಕಂಬದಲ್ಲಿಯೂ ಮತ್ತು ಗರ್ಭಗೃಹದ ಹೊರಭಾಗದ ವಾಯವ್ಯಕ್ಕಿರುವ ಗೋಡೆಯ ಮೇಲೆಯು ಉಬ್ಬು ಶಿಲ್ಪ ಸುಂದರ ಕೆತ್ತನೆಯಿಂದ ಕೂಡಿದೆ.

ದೇವಾಲಯದ ಒಂದು ಕಂಬದಲ್ಲಿ ಚಿತ್ರಿಸಿರುವಂತೆ : ಅರ್ಜುನ ಮರದ ಕೆಳಗೆ ನಿಂತಿರುವುದು, ಕಿರಾತಿ ತನ್ನ ಪತಿಯ ಕೈಹಿಡಿದು ಬಾಣ- ಬಿಲ್ಲಿನೊಂದಿಗೆ ನಿಂತಿದ್ದಾಳೆ. ಅರ್ಜುನನಿಗೆ ಶಿವ ಪಾಶುಪತಾಸ್ತ್ರ, ಅಂಜಲಿಮುದ್ರೆ ಕೊಡುವುದು ಗಮನಾರ್ಹ.[*೫] ಇಷ್ಟೇ ಅಲ್ಲದೆ ಶಿವ ಪಾರ್ವತಿಯರು ಕೂಡಿ ನಂದಿವಾಹನವೇರಿ ಹೋಗುವ ಕಿರೀಟ ಮುಕುಟವನ್ನು ಕೆತ್ತಲಾಗಿದೆ. ಇದರ ಸಮೀಪದಲ್ಲಿ 'ಅರ್ಜುನನು ನೀರಿನಲ್ಲಿ ಮೀನಿನ ಪ್ರತಿಬಿಂಬವನ್ನು ನೋಡಿ ಮೀನಿಗೆ ಗುರಿಯಿಟ್ಟು ಬಾಣ ಬಿಡುತ್ತಿರುವುದು ಅಮೋಘ ಸಾಧನೆಯ ಪ್ರತೀಕವಾಗಿದೆ.[*೬] ಕನ್ನಡ ಕಾವ್ಯಗಳು ಪ್ರಚುರ ಪಡಿಸುವ ಕಿರಾತಾರ್ಜುನೀಯ ಪ್ರಸ್ತಾಪ ಇಲ್ಲಿ ಅಲೌಕಿಕ ಬೇಟೆಯನ್ನು ಮೀರಿಸುತ್ತದೆ. ಅಂದು ಪ್ರಚಲಿತವಿದ್ದ ಬೇಟೆಯನ್ನು ಕೈಬಿಟ್ಟು ಪುರಾಣ - ಶೈವ ಪಂಥಕ್ಕೆ ಸಂಬಂಧಿಸಿದ ಕಥಾಚಿತ್ರಗಳನ್ನು ಹೆಚ್ಚಾಗಿ ಕೆತ್ತಲಾಗಿದೆ. ಈ ದೇವಾಲಯದ ಚಚ್ಚೌಕವಾದ ನವರಂಗಕ್ಕೆ ಮೂರು ಕಡೆ ಪ್ರವೇಶ ದ್ವಾರಗಳಿವೆ. ಇಲ್ಲಿ ಬೇಡರ ಕಣ್ಣಪ್ಪನು ಶಿವಲಿಂಗವನ್ನು ಪೂಜಿಸುವುದು, ತನ್ನೆರಡು ಕಣ್ಣುಗಳನ್ನು

ಅರ್ಪಿಸುವುದು ಬೇಟೆಗಾರನೊಬ್ಬನ ಸಾಹಸಮಯವಾದ ಜೀವನ ಚರಿತ್ರೆಯಾಗಿದೆ. ವಿಜಯನಗರ ಕಾಲದ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಮೇಲಿನ ಸಂಗತಿಗಳನ್ನು ವರ್ಣಿಸಿದ್ದಾರೆ. ಹರಿಹರ, ರಾಘವಾಂಕ, ವಿರೂಪಾಕ್ಷ ಪಂಡಿತ, ಕನಕದಾಸ ಮತ್ತು ಇತರರು ಕಂಡುಬರುತ್ತಾರೆ.

### ಹಜಾರ ರಾಮಸ್ವಾಮಿ ದೇವಾಲಯ

ಇದು ವಿಜಯನಗರ ಕಾಲದ ಪ್ರಮುಖ ದೇವಾಲಯ. ಪ್ರಾಕಾರ ಗೋಡೆಯ ಹೊರ ಭಾಗದಲ್ಲಿ ಐದು ಪಟ್ಟಿಕೆಗಳಿವೆ. ಒಂದರಲ್ಲಿ ವ್ಯಕ್ತಿಗಳು 'ಬಲಗೈಯಲ್ಲಿ ಬಾಣವನ್ನು ಹಿಡಿದು, ಬಿಲ್ಲನ್ನು ಎಡ ಹೆಗಲಿಗೇರಿಸಿ, ಧನುರ್ವಿದ್ಯೆಯನ್ನು ಕರಗತ ಮಾಡಿಕೊಳ್ಳಲು ಹೊರಟ ಹೆಂಗಳೆಯರು, ಯೋಗಾಸನ ಹಾಕುವವರು, ಓಕುಳಿಯಾದಿ ವಿನೋದಗಳಲ್ಲಿ ಪಾಲುಗೊಂಡವರು ಕಂಡುಬರುತ್ತಾರೆ. *೭ ಬಹುಶಃ ಇದು ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದ ವೀರಯೋಧ ಮತ್ತು ಬೇಟೆಗಾರರ ಲಕ್ಷಣವೆಂದು ಹೇಳಬಹುದು.

ಹಜಾರ ರಾಮ ದೇವಾಲಯದ ಪ್ರವೇಶದ್ವಾರದ ಎರಡು ಬದಿಗಳಲ್ಲಿ ಹಂದಿ ಮತ್ತು ಚಿಗರೆ ಬೇಟೆಯ ದೃಶ್ಯಗಳ ಉಬ್ಬು ಶಿಲ್ಪಗಳಿವೆ. ಹೀಗೆ ದೇವಾಲಯದ ವಿವಿಧ ಭಾಗಗಳಲ್ಲಿ ಕಂಡುಬರುವ ಶಿಲ್ಪಗಳಿವೆ. ಈ ಹಂದಿ ಬೇಟೆ ವಿಜಯನಗರ ಕಾಲದಲ್ಲಿ ಪ್ರಚಲಿತದಲ್ಲಿತ್ತು ಎಂಬುದಕ್ಕೆ ಅನೇಕ ಆಧಾರಗಳಿವೆ. ವಿಜಯನಗರ ಅರಸರ ರಾಜಲಾಂಛನವೂ ಸಹ ವರಾಹವೇ ಆಗಿರುವುದರಿಂದ ಕ್ಷತ್ರಿಯ ಧರ್ಮಕ್ಕೆ ಉಲುಸಾಗಿ ಈ ಪ್ರಾಣಿ ಕಂಡುಬರುತ್ತದೆ. ವಿಜಯನಗರ ಕಾಲದ ಹಂದಿ ಬೇಟೆಯ ವೀರಗಲ್ಲುಗಳು ಬಳ್ಳಿಗಾವೆ (ಶಿಕಾರಿಪುರ, ಶಿವಮೊಗ್ಗ), ನೆಲವಾಗಿಲು ಮತ್ತು ಕೋಡಿಹಳ್ಳಿ (ಹೊಸಕೋಟೆ, ಬೆಂಗಳೂರು), ತಿಪ್ಪೂರು (ಮದ್ದೂರು, ಮಂಡ್ಯ) ಮುಂತಾದ ಕಡೆ ಕಂಡುಬರುತ್ತದೆ.

ಪರಾಕ್ರಮಿ ಅರಸರು ಚಿಗರೆ ಬೇಟೆಗೆ ಹೋಗುವುದು ಅಪರೂಪವೇನಲ್ಲ. ಜನಸಾಮಾನ್ಯರಿಂದ ಆಳರಸರವರೆಗೂ ಬೇಟೆ ಲೌಕಿಕ ಕ್ರೀಡೆಯಾಗಿತ್ತು. ಈ ಪರಿಸರದಲ್ಲಿ ಇಂದಿಗೂ ಚಿಗರೆ, ಹಂದಿ ಬೇಟೆಗೆ ಹೋಗುವುದು ಅಂದಿನ ಸಾಂಸ್ಕೃತಿಕ ಪರಂಪರೆಗೆ ದ್ಯೋತಕವಾಗಿದೆ. ಹಜಾರರಾಮದೇವಾಲಯದಲ್ಲಿ ಬೇಟೆಯಾಡುವ ದೃಶ್ಯದ ಚಿತ್ರಗಳಿದ್ದರೂ, ಹೆಚ್ಚಾಗಿ ಕಿರಾತಾರ್ಜುನೀಯಕ್ಕೆ ಸಂಬಂಧಿಸಿದ ದೃಶ್ಯಗಳಿವೆ. *೮

### ಅಚ್ಯುತ ದೇವಾಲಯ

ತಿರುವೆಂಗಳನಾಥ ಅಥವಾ ಅಚ್ಯುತರಾಯ ದೇವಾಲಯದಲ್ಲಿನ ಗೋಪುರದ ಮೇಲೆ ರಾಮಾಯಣದ ಕಥಾ ಸಂಗತಿಗಳನ್ನು ಕೆತ್ತಲಾಗಿದೆ. ರಾಮನು ಮಾರೀಚನಿಗೆ ಬಾಣವನ್ನು ಬಿಡುವುದು, ಸೀತೆ ಅಶೋಕವನದಲ್ಲಿರುವುದು, ಆಂಜನೇಯನು ಸೀತೆಗೆ ಮುದ್ರೆಯುಂಗುರವನ್ನು ಕೊಡುವುದು, ಆಂಜನೇಯನು ಸಂಜೀವಿನಿ ಪರ್ವತವನ್ನು ಎತ್ತುವುದು, ಲಕ್ಷ್ಮಣ ಮತ್ತು ಆಂಜನೇಯ ರಾಮನೊಡನಿರುವುದು ಮುಂತಾದವುಗಳನ್ನು ನೋಡಬಹುದು. *೯

ರಾಜ ಪ್ರಭುತ್ವದಲ್ಲಿ ರಾಜರಾಣಿ, ಪರಿಚಾರಕಿಯರನ್ನು ಆನಂದ ಪಡಿಸಲು ಮತ್ತು ದಿನನಿತ್ಯದ ಜನ ಜೀವನವನ್ನು ಪ್ರತಿಬಿಂಬಿಸಲು 'ನೃತ್ಯಗಾರರು, ವಾದ್ಯಗಾರರು, ಕುಸ್ತಿ ಪಟುಗಳು, ಬೇಟೆಗಾರರು, ಕೊರವಂಜಿ ಮಗುವನ್ನು ಬೆನ್ನ ಮೇಲೆ ಒಯ್ಯುವುದು, ಕೊರವಂಜಿ ಕಣಿ ಹೇಳುವುದು ಸ್ತ್ರೀಯರು ಪೂಜೆ ಮಾಡುವುದು, ಹೂಬಳ್ಳಿಯನ್ನು ಹಿಡಿದಿರುವುದು, ದೊಂಬರ ಆಟ, ಕೋಲಾಟ ಮುಂತಾದ ಶಿಲ್ಪಗಳನ್ನು ಮನಮೋಹಕವಾಗಿ ಕೆತ್ತಲಾಗಿದೆ. *೧೦

### ವಿಜಯ ವಿಠಲ ದೇವಾಲಯ

ವಿಜಯನಗರ ಕಾಲದ ಆಕರ್ಷಣೀಯ ಸ್ಮಾರಕಗಳಲ್ಲಿ ಇದು ಪ್ರಮುಖವಾದುದು. ಈ ದೇವಾಲಯದ ವಿವಿಧ ಭಾಗಗಳಲ್ಲಿ ಬೇಟೆಗಾತಿಯನ್ನು ಚಿತ್ರಿಸುವ ವೇಷಭೂಷಣ ಇನ್ನೂ ರೋಚಕವಾಗಿದೆ. ವರ್ಣಗಳಿಂದ ರಚಿತವಾದ ಕಿರೀಟವು ತಲೆಯನ್ನು ಅಲಂಕರಿಸಿದರೆ, ಕಾಡಿನ ಹೂಗಳನ್ನು ಕಿವಿಗೆ ಸಿಗಿಸಿಕೊಂಡಿದ್ದಾಳೆ. ವರ್ಣಗಳನ್ನು ಜೋಡಿಸಿದ ಉಡುಗೆ ನಡುವನ್ನು ಮುಚ್ಚಿದೆ. ಉಳಿದ ಆಭರಣಗಳು ಕಾಡಿನ ಸಾಮಗ್ರಿಯವೇ ಇರಲು ಸಾಕು! ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ತನಗಿಂತ ದೀರ್ಘವಾದ ಬಿಲ್ಲನ್ನು ಎತ್ತಿ ಹಿಡಿದಿದ್ದಾಳೆ. *೧೧ ಈ ರೀತಿಯ ಚಿತ್ರ ಮಹಾನವಮಿ ದಿಬ್ಬದಲ್ಲಿ ಮತ್ತು ಕನ್ನಡ ಕಾವ್ಯಗಳಲ್ಲಿ ವಿಪುಲವಾಗಿ ಬರುತ್ತದೆ.

ವಿಠಲ ದೇವಾಲಯದ ಹತ್ತಿರವಿರುವ ಮಸಲಯ್ಯನ ಗುಡ್ಡದ ಮೇಲೆ ಮಾನವನ ಹಾಗೂ ವನ್ಯಮೃಗಗಳ ಚಿತ್ರಗಳಿವೆ. ಆ ವನ್ಯ ಮೃಗಗಳೆಂದರೆ: 'ಕಾಡುಕೋಣ, ಹುಲಿ, ಚಿಗರಿ, ಎತ್ತು ಮುಂತಾದವುಗಳು, ಪಕ್ಕದಲ್ಲಿಯೇ ಕೆಲವು ಮಾನವರು ಒಂದು ವಿಧವಾದ ಸಮೂಹ ನೃತ್ಯದಲ್ಲಿ ಭಾಗಿಗಳಾಗಿರುವುದನ್ನು ನೋಡಬಹುದು. ಇತರ ಚಿತ್ರಗಳ ವಿನ್ಯಾಸಗಳೆಂದರೆ ಬೇಟೆಯಾಡುವ ದೃಶ್ಯ, ಒಂದು ರೀತಿಯ ಆರಾಧನಾ ನೃತ್ಯ (Ritual dance) ಮತ್ತಿತರ ವನ್ಯಮೃಗಗಳ ಚಿತ್ರಗಳಿವೆ. *೧೨ ಹೀಗೆ ಆನೆಗೊಂದಿ ಪ್ರದೇಶದಲ್ಲಿ ಮಾನವನು ಚಿತ್ರಿಸಿರುವ ಬೇಟೆಯ ದೃಶ್ಯಗಳಿರುವುದು ನೋಡಬಹುದು.

### ಮಾಲ್ಯವಂತ ರಘುನಾಥಸ್ವಾಮಿ

ದೇವಾಲಯದಲ್ಲಿನ ರಂಗಮಂಟಪದ ಎಡಭಾಗದ ಕಂಬದಲ್ಲಿ ಪೂರ್ವ ದಿಕ್ಕಿಗೆ ಬೇಟೆಗಾರನೊಬ್ಬ ಬಿಲ್ಲ, ಬತ್ತಳಿಕೆ ಹಿಡಿದು ನಿಂತಿದ್ದಾನೆ. ಬಲಭಾಗದ ಕಂಬದಲ್ಲಿ ಬೇಟೆಗಾರ ಹೆಗಲಿಗೆ ಬಿಲ್ಲನ್ನೇರಿಸಿ ಬತ್ತಳಿಕೆ, ಇನ್ನೊಂದು ಆಯುಧ ಹಿಡಿದು ನಿಂತಿದ್ದಾನೆ. ದೇವಾಲಯದ ಪ್ರಾಕಾರ ಗೋಡೆಯ ಮೇಲೆ ಮೀನುಗಳ ಚಿತ್ರಗಳಿವೆ.

ಇಲ್ಲಿರುವ ಪ್ರಸನ್ನ ವಿರೂಪಾಕ್ಷ ಲಿಂಗಕ್ಕೆ ರಾಮಲಕ್ಷ್ಮಣರು ಭೇಟಿ ನೀಡಿದ್ದರೆಂಬ ನಂಬಿಕೆಯಿದೆ. ಈ ಭಾಗ ಗಿರಿ-ಕಂದರಗಳಿಂದ ಆವೃತ ಗೊಂಡಿದ್ದರಿಂದ ಬೇಟೆಯ ಸಂಸ್ಕೃತಿಯಿದ್ದರೂ ಮರೆಯಾಗಿರಬೇಕು. ಅಲ್ಲದೆ, ವೈಷ್ಣವ ದೇವಾಲಯಗಳಲ್ಲಿ ಸಂಪೂರ್ಣ ಅರ್ಥ ಕೊಡುವ ಬೇಟೆ ದೃಶ್ಯಗಳಿರುವುದು ಕಡಿಮೆ. ಹುಲಿ, ಕರಡಿ ಮುಂತಾದವುಗಳು ಹೆಚ್ಚಾಗಿರುತ್ತವೆ.

### ಮಹಾನವಮಿ ದಿಬ್ಬ

ಕೃಷ್ಣದೇವರಾಯ ತನ್ನ ವಿಜಯಗಳ ಸಂಕೇತದಿಂದ ಉತ್ಸವ, ಆಚರಣೆಗಳನ್ನು ನಡೆಸಲು ಕಟ್ಟಿಸಿದ ಒಂದು ಬೃಹತ್ ವೇದಿಕೆ ರೂಪದ ದಿಬ್ಬವಾಗಿದೆ. ಪ್ರತಿಷ್ಠಿತ ವ್ಯಕ್ತಿಗಳ ಅರಮನೆಗಳ ಪ್ರದೇಶದ ಕಟ್ಟಡಗಳ ಅಧಿಷ್ಠಾನದಲ್ಲಿ ಅಲಂಕಾರವಾದ ಪ್ರಾಣಿ ಮತ್ತು ಸಸ್ಯಗಳ ಉಬ್ಬು ಶಿಲ್ಪಗಳಿವೆ. ಆನೆ, ಸಿಂಹ, ಹುಲಿ, ಜಿಂಕೆ, ಕುದುರೆ, ಹಂದಿ, ಜಾನುವಾರುಗಳು, ಗಿಳಿ, ನವಿಲು, ಹಂಸ, ಮೀನು, ಆಮೆ, ಕಪ್ಪೆ, ಮೊಸಳೆ ಮತ್ತು ಹಲ್ಲಿಗಳ ಶಿಲ್ಪಗಳು ಅಲ್ಲದೆ ಕಾಲ್ಪನಿಕ ಪ್ರಾಣಿಗಳ ಚಿತ್ರಗಳು ಕಂಡುಬರುತ್ತವೆ. ಮಹಾನವಮಿ ದಿಬ್ಬದಲ್ಲಿ ಯೋಧರು, ನೃತ್ಯಗಾರ್ತಿಯರು, ಸಂಗೀತಗಾರರು ಮತ್ತು ಬೇಟೆಗಾರರು ಪ್ರಮುಖವಾಗಿ ಕಂಡುಬರುತ್ತಾರೆ.



ಬೇಟೆನಾಯಿಗಳ ಮೂಲಕ ಬೇಟೆಯಾಡುವ ದೃಶ್ಯದ ಚಿತ್ರಗಳು ಮಹಾನವಮಿ ದಿಬ್ಬದ ಗೋಡೆಗಳಲ್ಲಿ ಕಾಣಸಿಗುತ್ತದೆ. ಇದರ ಗೋಡೆಗಳಲ್ಲಿ ಬಿಲ್ಲು-ಬಾಣಗಳನ್ನು ಬಳಸಿ ಬೇಟೆಯಾಡುವ ಚಿತ್ರಗಳೂ ಇದ್ದು ಇವು ಅಂದಿನ ಬೇಟೆ ಜೀವನವನ್ನು ತಿಳಿಸುವಲ್ಲಿ ಸಫಲವಾಗಿವೆ. ಬೇಟೆಯ ವೈವಿಧ್ಯಮಯವಾದ ಕ್ರಮಗಳನ್ನು ನೋಡಬಹುದು: ಬೇಟೆಯಾಡಿದ ಪ್ರಾಣಿಯನ್ನು ಒಂದು ಕೋಲಿಗೆ ಕಟ್ಟಿಕೊಂಡು ವ್ಯಕ್ತಿಗಳಿಬ್ಬರು ಹಿಂದೆ-ಮುಂದೆ ಹೊತ್ತು ಸಾಗಿಸುತ್ತಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ: ಪುರುಷನಷ್ಟೇ ಸಮಾನಳಾಗಿ ಮಹಿಳೆಯು ಬೇಟೆಯಲ್ಲಿ ಭಾಗ ವಹಿಸುವುದು. ಅವಳು ಸಹ ಪ್ರಾಣಿಗಳನ್ನು ಕೊಲ್ಲುವ ಚಾಕಚಕ್ಯತೆ ಅರಿತಿದ್ದಳೆಂಬುದಕ್ಕೆ ಉತ್ತಮ ಉದಾಹರಣೆ. 'ಮಹಾನವಮಿ ದಿಬ್ಬದ ಬೇಟೆ ಚಿತ್ರಗಳ ಸಾಲಿನಲ್ಲಿ ಕಂಡುಬರುವ ಚೆಂಚಲಕ್ಷ್ಮಿ ನರಸಿಂಹ ಎಂಬ ಚಿತ್ರವು ಈ ಪ್ರದೇಶದಲ್ಲಿ ಕಾಣಬರುವ ಚೆಂಚು ಬುಡಕಟ್ಟು ಜನರನ್ನು ಚಿತ್ರಿಸುತ್ತದೆ ಎಂದಿದ್ದಾರೆ.*೧೬ ಈ ಭಾಗದಲ್ಲಿ ಬೇಡರು ಚೆಂಚರಂತೆ ಕಂಡುಬಂದಿದ್ದು, ಪರಸ್ಪರ ಒಂದೇ ಬುಡಕಟ್ಟು ಜನರಾಗಿದ್ದಾರೆ. ಈ ಬೇಡರು ಪ್ರತಿ ವರ್ಷ ಯುಗಾದಿ ಸಂದರ್ಭದಲ್ಲಿ ರಾಜಾರೋಷವಾಗಿ ಬೇಟೆಗೆ ಹೋಗುತ್ತಾರೆ. ಇದಕ್ಕೆ ಆನೆಗೊಂದಿ ದೊರೆಗಳನ್ನು ಕರೆಸಿ ಚಾವಡಿ ಕಟ್ಟೆ ಮೇಲೆ ಕುರಿಸಿ, ಬೇಟೆಯಾಡಿ ಬಂದ ನಂತರ ಮೆರವಣಿಗೆ ಮಾಡುತ್ತಾರೆ. ಹೀಗೆ ರಾಜ ಪರಂಪರೆಯಿಂದ ಬೆಳೆದು ಬಂದ ಬೇಟೆಗೆ ಬೇಡರು ಅಧಿಕೃತ ವಾರಸುದಾರರಾಗಿದ್ದಾರೆ.

ಮಹಾನವಮಿ ದಿಬ್ಬದ ಬೇಟೆಯ ಪಟ್ಟಿಕೆಯ ಶಿಲ್ಪವೊಂದು ಅಪೂರ್ವವಾಗಿದೆ. ಕೇಶರಾಶಿಯನ್ನು ಎತ್ತರಿಸಿ ಮುಡಿಕಟ್ಟಿ ಒಬ್ಬ ಅದಕ್ಕೊಂದು ಹೂವಿನ ದಂಡೆ ಸುತ್ತಿದ್ದಾನೆ. ಕೊರಳಿನಿಂದ ಎಂಥದೋ ಅಗ್ಗದ ಸರ ತೂಗು ಬಿದ್ದಿದೆ. ತುಂಡು ಕಚ್ಚೆಯುಟ್ಟು ಜೋಡಿನಾಯಿ ಗಳೊಂದಿಗೆ ಕಾಡಿಗೆ ಹೊರಟಿದ್ದಾನೆ. ಅಲ್ಲಿ ಬಿಲ್ಲಿಗೆ ಬಾಣವೇರಿಸಿ ನಾಗಾಲೋಟದಲ್ಲಿ ಓಡುವ ಜಿಂಕೆಯನ್ನು ಹೊಡೆದು ಕೆಡವು ದರಲ್ಲಿದ್ದಾನೆ. ಅವರ ಗುಂಪಿನ ಇನ್ನಿತರ ಬೇಟೆಗಾರರು ಕಾಡು ಹಂದಿ, ಮೊಲಗಳನ್ನು ತಿವಿದು ಆಹುತಿ ತೆಗೆದುಕೊಳ್ಳುವ ಯತ್ನದಲ್ಲಿ ಮೈಮರೆತಿದ್ದಾರೆ.*೧೭ ಹಿಂದೆ ಮಹಾನವಮಿ ದಿಬ್ಬದ ಎರಡು ಭಾಗಗಳ ಸುಮಾರು ಪಟ್ಟಿಕೆಗಳಲ್ಲಿ ಬೇಟೆ ಶಿಲ್ಪಗಳಿವೆ. ಜಿಂಕೆಗಳ ಬೇಟೆ ಹೆಚ್ಚುಗಿದ್ದು, ಹೋಂಬೇಟೆ, ಹಂದಿ ಬೇಟೆಗಳನ್ನು ಕೆತ್ತಲಾಗಿದೆ. ವಿವಿಧ ರೀತಿಯ ಆಯುಧಗಳು ಬೇಟೆಗಾರರ ಉಡುಪು, ಬೇಟೆಗಾರ್ತಿಯರ ಉಡುಪು, ಪ್ರಾಣಿ-ಪಕ್ಷಿಗಳ ಚಿತ್ರಗಳು ಮನಮೋಹಕವಾಗಿವೆ. ಆಗಿನ ಕಾಲದಲ್ಲಿ 'ಬೇಟೆಗಾರರ ನೃತ್ಯ'ವನ್ನು ಮಹಾನವಮಿ ದಿಬ್ಬದಲ್ಲಿ ಪ್ರದರ್ಶಿಸುತ್ತಿದ್ದಿರಬೇಕು.

೧೮೮೩ರಲ್ಲಿ ಬಳ್ಳಾರಿ ಜಿಲ್ಲಾ ನ್ಯಾಯಧೀಶ ಹಾಗೂ ಕಲೆಕ್ಟರ್ ಆಗಿದ್ದ ರಾಬರ್ಟ್ ಸಿವೆಲ್ ಅವರು ಮಹಾನವಮಿ ದಿಬ್ಬದಲ್ಲಿ ಮಣ್ಣಿನಿಂದ ಮುಚ್ಚಿ ಹೋಗಿದ್ದ ಶಿಲ್ಪವನ್ನು ಶೋಧಿಸಿ ಬೆಳಕಿಗೆ ತಂದರಲ್ಲದೆ, ಅದಕ್ಕೆ ಸೂಕ್ತವಾದ ರಕ್ಷಣೆಯನ್ನು ಒದಗಿ ಸಲಾಯಿತು.*೧೮ ಇದು ಬೇಟೆಯ ಶಿಲ್ಪವಾಗಿದ್ದು, ದಿಬ್ಬದ ವಾಯವ್ಯ ಭಾಗಕ್ಕಿಗಿದೆ.

### ಬೇಟೆಕಾರರ ಹೆಬ್ಬಾಗಿಲು

ಹಂಪೆ ಪರಿಸರದಲ್ಲಿ ಕಂಡುಬರುವ ಸಿಂಘಾರದ ಹೆಬ್ಬಾಗಿಲು, ಕೋಟಿ ಶಂಕರದೇವ ಹೆಬ್ಬಾಗಿಲು. ಹೊದೆಯ ಬಾಗಿಲು, ಸೋಮವಾರದ ಬಾಗಿಲು, ಉಪ್ಪರಿಗೆ ಬಾಗಿಲು, ಸ್ವಾಮಿ

ದೇವರ ಬಾಗಿಲು, ಪೆನುಗೊಂಡೆ ಬಾಗಿಲು ಇತರ ಬಾಗಿಲುಗಳಲ್ಲಿ ಬೇಟೆಕಾರರ ಹೆಬ್ಬಾಗಿಲು ಪ್ರಮುಖವಾದದು. ವಿಜಯನಗರ ಕಾಲದಲ್ಲಿದ್ದ ಸಿಂಘಾರದ ಹೆಬ್ಬಾಗಿಲು ಬಿಟ್ಟರೆ ೨ನೇ ಸ್ಥಾನ ಬೇಟೆಕಾರರ ಹೆಬ್ಬಾಗಿಲಿಗೆ ಸಲ್ಲುತ್ತದೆ. ಇದು ಮಾಲ್ಯವಂತ ರಘುನಾಥ ದೇವಸ್ಥಾನದ ಆಗ್ನೇಯ ದಿಕ್ಕಿನ ಎರಡು ಗಿರಿ-ಕಂದರಗಳ ಕಣಿವೆಯಲ್ಲಿದೆ. ಬೇಟೆಕಾರರ ಹೆಬ್ಬಾಗಿಲು ಎಂದರೆ ಬೇಟೆಗಾರರಿಗೆ ಆವಾಸ ಸ್ಥಾನದ ಸ್ಥಳ. ಇದರ ಪೂರ್ವಕ್ಕೆ ಶಾಸನ ಮತ್ತು ಮೈಲಾರ ದೇವಸ್ಥಾನವಿದೆ. ಈ ಬಾಗಿಲು ಎರಡನೇ ಹರಿಹರನ ಕಾಲದಲ್ಲಿ ನಿರ್ಮಾಣಗೊಂಡಿದೆ. ಹೀಗಾಗಿ ವಿಜಯನಗರದ ಆರಂಭಿಕ ಕಾಲ ಘಟ್ಟದಲ್ಲಿ ಬೇಟೆ ಸಮೃದ್ಧವಾಗಿರಬೇಕು. ಪೂರ್ವದಿಂದ ಬೇಟೆಕಾರರ ಹೆಬ್ಬಾಗಿಲು ದಾಟಿದರೆ ಮುಂದೆ ಸಿಂಘಾರದ ಹೆಬ್ಬಾಗಿಲು ಕಾಣಸಿಗುತ್ತದೆ.

ಬೇಟೆಕಾರರ ಹೆಬ್ಬಾಗಿಲು ಸುತ್ತಲೂ ಬೆಟ್ಟ - ಗುಡ್ಡಗಳಿಂದ ಆವರಿಸಿಕೊಂಡ ಒಂದು ಕಣಿವೆ ಪ್ರದೇಶ. ಇಲ್ಲಿ ದೇವಾಲಯ, ಚಿಕ್ಕ ಚಿಕ್ಕ ವರ್ತಿಗಳು, ಕೊಂಡಗಳು, ಬಾವಿಗಳು ಇವೆ. ದೊಡ್ಡ ಗಾತ್ರದ ಕೋಟೆಗೋಡೆಗೆ ದ್ವಾರ ಬಾಗಿಲಿದೆ, ಇಲ್ಲಿ ಬೇಟೆಗಾರರು ರಾಜನ ಪ್ರತಿನಿಧಿಗಳಾಗಿ ಬೇಟೆಯಾಡಿ ಜೀವಿಸುತ್ತಿರಬೇಕು. ಹೀಗಾಗಿ ಇವರ ನಿವೇಶನಗಳು ಸಹ ಇಲ್ಲಿದ್ದಿರಬೇಕೆಂದು ಊಹಿಸಬಹುದು.

ಮಾಲ್ಯವಂತ ರಘುನಾಥ ದೇವಸ್ಥಾನದ ಆಗ್ನೇಯ ದಿಕ್ಕಿಗೆ ಕಣಿವೆಯಲ್ಲಿರುವ ಬೇಟೆಕಾರರ ಹೆಬ್ಬಾಗಿಲಿನ ಪೂರ್ವಕ್ಕಿರುವ ಗುಂಡಿನ ಮೇಲಿನ ಶಾಸನದ ಪಾಠ ಹೀಗಿದೆ:

೧. 'ಶ್ರೀ ಶಕ ವರುಷ ೧೩೧೨ರ ಉದ್ರಿ ಸಂವತ್ಸರದ ಆಸ್ವೀಜ ಸು। ಗು ಶ್ರೀ ಮನ್ಮಹಾರಾಜಾಧಿರಾಜ
೨. ರಾಜ ಪರಮೇಶ್ವರ ಶ್ರೀ ವೀರಪ್ರತಾಪ ಹರಿಹರ ಮಹಾರಾಯರ ಮ
೩. ನಯ ಎಡವಂಕದ ಬೇಟೆಕಾರ ಮಲಗೆಯ ನಾಯ್ಕನ ಮಗ ಬಥ್ನೆಯ ನಾಯ್ಕ
೪. ನು ಬೇಟೆಕಾರರ ಹೆಬ್ಬಾಗಿಲ ಮೂಡಣ ದಿಕ್ಕಿನ ಒರತೆಯ ಮೈಲಾರದೇವರ ಪ್ರ
೫. ತಿಷ್ಟೆ ಆ ಅಗ್ನಿ ದಿಸೆಯ ಆಲದ ಅರವೆ ಆ ದೇವರ ಹಿಂದಣ ವಾಯಾಬ್ಯದ ದಿಕ್ಕಿ
೬. ನ ಒರತೆಯ್ನು ಕೊಂಡವನು ಮಾಡಿದನು ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ' ೧೭

ಮೇಲಿನ ಶಾಸನದಿಂದ ಆಶ್ವೀಜ ಶು. ಕ್ರಿ.ಶ. ೧೩೯೦ ಆಗಸ್ಟ್ ೩೧ರಲ್ಲಿ ಹರಿಹರ ಮಹಾರಾಯನ ಮನೆಯ ಎಡವಂಕದ ಬೇಟೆಕಾರ ಮಲಗೆಯ ನಾಯ್ಕನ ಮಗ ಬಥ್ನೆಯ ನಾಯ್ಕನು ಬೇಟೆಕಾರರ ಹೆಬ್ಬಾಗಿಲು ಪೂರ್ವಕ್ಕೆ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿ, ಅದರ ಆಗ್ನೇಯಕ್ಕೆ ಆಲದ ಅರವೆ (ವನ) ಮತ್ತು ಆ ದೇವರ ಹಿಂದೆ ವಾಯವ್ಯಕ್ಕೆ ಒರತೆಯ ಕೊಂಡವನ್ನು ಮಾಡಿದನೆಂದು ತಿಳಿಸುತ್ತದೆ.*[೧೬] ಇಂದಿಗೂ ಇದ್ದು, ಇವುಗಳು ಶಿಥಿಲಗೊಂಡ ಒರತೆಯ ಮೈಲಾರ ದೇವಾಲಯ ಗರ್ಭಗೃಹ ಮತ್ತು ಮುಖ ಮಂಟಪ ಹೊಂದಿದೆ. ರಾಜನ ಅಧೀನದಲ್ಲಿ ಬೇಟೆಕಾರರು ತಮ್ಮ ವೃತ್ತಿಯನ್ನು ನಡೆಸುತ್ತಿದ್ದರೆಂದು ತಿಳಿಯಬಹುದು.*[೧೮] ಬೇಟೆಕಾರರ ಹೆಬ್ಬಾಗಿಲ ಈಶಾನ್ಯಕ್ಕಿರುವ ಒಂದು ದೇವಾಲಯದ ಹತ್ತಿರವಿರುವ ನೈಸರ್ಗಿಕ ಒರತೆಯನ್ನು ಪಕ್ಕದಲ್ಲಿರುವ ಶಾಸನವು ಮುಕ್ತಿ ಋಣ ನಿರ್ಮಲ ತೀರ್ಥವೆಂದು ಉಲ್ಲೇಖಿಸುತ್ತದೆ.*[೧೯] ಬೇಟೆಕಾರರ ಹೆಬ್ಬಾಗಿಲ ಈಶಾನ್ಯಕ್ಕೆ ಎರಡು ಬಾವಿಗಳಿವೆ. ಒಂದರ ಹೆಸರು ಲಿಂಗಬಾವಿ ಮತ್ತು ಇನ್ನೊಂದರ ಹೆಸರು ರಂಗನಾಥ ಬಾವಿ. ರಂಗನಾಥ ಬಾವಿಯನ್ನು ತಿರಿವಿದಿಚಿಟನಾಗಿ ನೆನಿಯ ಮಗ ಚಿನ್ನಪನಾಯಂಡು ಕಟ್ಟಿಸಿದನು ಎಂದು ಶಾಸನಗಳಿಂದ ತಿಳಿದು ಬರುತ್ತದೆ. ಇಲ್ಲಿ ಬೇಡಪಡೆ ವಾಸವಾಗಿದ್ದು, ಮಹಾನಾಯ ಕಾಚಾರ್ಯರು ಆಡಳಿತದಲ್ಲಿ ರಾಜ ಮತ್ತು ಗ್ರಾಮಾಧಿಕಾರಿಗಳ ನಡುವಣ ಕೊಂಡಿಯಾಗಿರುತ್ತಿದ್ದರು. ಇವರು ರಾಜನು ಬೇಟೆಗೆ ಹೊರಡುವಾಗ ತಮ್ಮ ಬೇಡಪಡೆಯನ್ನು ಸಿದ್ಧಗೊಳಿಸಿ ಬೇಟೆಗೆ ಹೊರಡುತ್ತಿದ್ದರು. ಕ್ರೂರಮೃಗಗಳ ಹಾವಳಿ ಹೆಚ್ಚಾದಾಗ ರಾಜ ಬೇಟೆಗೆ ತಪ್ಪದೇ ಹೋಗಬೇಕಾಗಿತ್ತು. ಇದಕ್ಕೆ ಬೇಟೆಕಾರರ ಹೆಬ್ಬಾಗಿಲು ಕೇಂದ್ರಸ್ಥಳವಾಗಿರಬೇಕು.

ವಿಜಯನಗರದ ಅರಸರು ಬೇಟೆಯಲ್ಲಿ ನಿಸ್ಸೀಮರು ಎಂಬುದಕ್ಕೆ ಪ್ರೌಢ ದೇವರಾಯನಿಗಿದ್ದ 'ಗಜವೇಂಟೆಗಾಜ' ಎಂಬ ಬಿರುದು ಸಾಕ್ಷಿಯಾಗಿದೆ. ೨ನೇ ದೇವರಾಯ ಒಮ್ಮೆ ೧೪೩೪ರಲ್ಲಿ ಮಚ್ಚೇನಹಳ್ಳಿಗೆ ಬೇಟೆಗೆ ಬಂದಾಗ ಜಟ್ಟಂಗಿ ರಾಮೇಶ್ವರನ ದರ್ಶನ ಮಾಡಿ, ತನ್ನ ಬೇಟೆಯ ಕುರುಹಾಗಿ ೭೦ ವರಹಗಳ ಆದಾಯ ಬರುವ ಒಂದು ಭೂಮಿಯನ್ನೇ ಉಂಬಳಿಯಾಗಿ ಕೊಟ್ಟನು.*[೨೦]

### ಇತರ ಸ್ಥಳಗಳಲ್ಲಿ ಕಂಡುಬರುವ ಬೇಟೆಯ ಚಿತ್ರಣ

ಹಂಪೆಯನ್ನು ಹೊರತುಪಡಿಸಿ ನೋಡಿದಾಗಲೂ ವಿಜಯ ನಗರ ಕಾಲದ ವಾಸ್ತು ಶಿಲ್ಪದಲ್ಲಿ ಬೇಟೆಯ ಚಿತ್ರಣ ಕಂಡುಬರುತ್ತದೆ. ಇದು ಹೆಚ್ಚಾಗಿ ಕಿರಾತಾರ್ಜುನೀಯ ಪ್ರಸಂಗವನ್ನು ಅವಲಂಬಿಸಿದೆ. ಶಿವನು ಕಿರಾತನಾಗಿ ಅರ್ಜುನನೊಂದಿಗೆ ಹೋರಾಡುವುದು ಮಹಾಭಾರತದಲ್ಲಿ ಬರುವ ಒಂದು ದೃಶ್ಯ. ಪಶ್ಚಿಮ ಚಾಲುಕ್ಯರ ಕಾಲದ ಶಿಲ್ಪಗಳಲ್ಲಿ ಈ ಪ್ರಸಂಗ ಬರುತ್ತದೆ. ೯ನೇ ಶತಮಾನದ ಕಂಬದಲ್ಲಿ ಪ್ರಾಮುಖ್ಯತೆ ಪಡೆದ ಶಾಸನವಿತ್ತು. ಪ್ರಾಥೀಶ್ವರ ದೇವಾಲಯ ಇಂದ್ರಕೀಲಬೆಟ್ಟ, ಅರ್ಜುನನಿಗೆ ಪಾಶುಪಾತಸ್ತ್ರ ಕೊಡುವುದು ಗಮನಾರ್ಹ. ಪಶ್ಚಿಮ ಚಾಲುಕ್ಯರ ಶಿಲ್ಪಗಳಲ್ಲಿ ವಿಕ್ರಮಾದಿತ್ಯ ನಿರ್ಮಿಸಿದ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ ದಲ್ಲಿದೆ. ಸ್ಮಾರಕಗಳಲ್ಲದೆ, ಕಾವ್ಯದಲ್ಲಿಯೂ ಬೇಟೆಯ ಪ್ರಸಂಗ

ವ್ಯಾಪಕವಾಗಿ ಬರುತ್ತದೆ. ಷಡಕ್ಷರ ದೇವನ ಶಬರ ಶಂಕರವಿಳಾಸವೇ ಅರ್ಜುನ ಮತ್ತು ಶಿವನ ಹೋರಾಟದ ಕಾವ್ಯವಾಗಿದೆ.

ಈ ರೀತಿಯ ಶಿಲ್ಪಕಲೆ, ಚಿತ್ರಕಲೆಗಳು ಶೃಂಗೇರಿ, ಮೇಲುಕೋಟೆ, ನಂದಿಬೆಟ್ಟಗಳು, ಭಾಗ ಮಂಡಲ, ಹಂಪಿ, ಕಲ್ಲೂರು ಮತ್ತು ಹಿರಿಯೂರುಗಳಲ್ಲಿ ಕಿರಾತಾರ್ಜುನೀಯ ಪ್ರಸಂಗ ಬರುತ್ತದೆ. ಶ್ರೀಶೈಲದ ಮಲ್ಲಿಕಾರ್ಜುನ ದೇವಾಲಯದ ಪ್ರಾಕಾರದ ಗೋಡೆಯ ಮೇಲೆ ಬೇಟೆಯ ದೃಶ್ಯಗಳು, ಕಿರಾತಾರ್ಜುನೀಯ ದೃಶ್ಯಗಳಿವೆ.

**ಶೃಂಗೇರಿ :** ವಿದ್ಯಾಶಂಕರ ದೇವಾಲಯದಲ್ಲಿ ಕಿರಾತಾರ್ಜುನೀಯ ಪ್ರಸಂಗವಿದೆ.*೨೦ ಈ ದೇವಾಲಯದ ವಾಯವ್ಯ ಭಾಗದ ಹೊರಗೋಡೆಯ ಮೇಲೆ ಕಿರಾತಾರ್ಜುನೀಯ ಚಿತ್ರ ಕೆತ್ತಲಾಗಿದೆ. ಇದರಲ್ಲಿ ಶಿವ, ಕಿರಾತ, ನಾಯಿ, ಬಾಣ, ಬತ್ತಳಿಕೆ ಇವೆ. ಹಂದಿ ಮಧ್ಯೆಯಿದ್ದು, ಕಿರಾತ ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಬಾಣ ಹಿಡಿದಿದ್ದರೆ, ಕಿರಾತೆ ಹಿಂದೆ ನಿಂತಿದ್ದಾಳೆ. ಇಬ್ಬರೂ ಮಲ್ಲಯುದ್ಧ ಮಾಡುತ್ತಾರೆ. ಬಲಗಡೆ ಅರ್ಜುನ, ಎಡಗಡೆ ಕಿರಾತ ಇಬ್ಬರ ಉಡುಪು ಎಲೆಗಳಿಂದಿತ್ತು. ಕಿರಾತೆ ನೋಡುತ್ತಾ ಇದ್ದಾಳೆ. ಕಲ್ಲು, ಗುಂಡು, ಗದೆಯಿಂದ ಕಿರಾತನನ್ನು ಅರ್ಜುನ ಹೊಡೆಯುತ್ತಿರುವ ನಾನಾಭಂಗಿಗಳಿವೆ. ಕೊನೆಗೆ ಶಿವ ಪಾಶುಪತಾಸ್ತ್ರ ಕೊಡುವುದು ಅರ್ಜುನ ಶಿವನ ಕಾಲಿಗೆ ಬಿಳುವುದು ಇತರ ವಿವರಗಳಿವೆ.

**ಮೇಲುಕೋಟೆ :** ನಾರಾಯಣ ಸ್ವಾಮಿ ದೇವಸ್ಥಾನದಲ್ಲಿ ಕಿರಾತಾರ್ಜುನೀಯ ಪ್ರಸಂಗ ಶ್ರೀ ವೈಷ್ಣವ ಕಂಬದಲ್ಲಿದೆ. ಎರಡು ಕಂಬಗಳಲ್ಲಿ ಅದ್ಭುತವಾಗಿ ಕೆತ್ತಲಾಗಿದೆ. ಕಿರಾತ ಬಿಲ್ಲು, ಬಾಣ ಹಿಡಿದರೆ, ಹಿಂದೆ ಪಾರ್ವತಿ ಅನುಸರಿಸಿ ನಿಂತಿದ್ದಾಳೆ. ಹಂದಿಗೆ ಬಾಣ ಬಿಡುವುದು, ಬಾಣ ಹಂದಿ ದೇಹದಿಂದ ತೂರಿ ಹೊರಗೆ ಚಾಚಿಕೊಂಡಿರುವುದು ಕಲ್ಲಿನಲ್ಲಿಯೇ ಸುಂದರವಾಗಿ ಕೆತ್ತಲಾಗಿದೆ. ಮಲ್ಲಯುದ್ಧದಲ್ಲಿ ಇಬ್ಬರೂ ಎಡಗೈಗಳನ್ನು ತಬ್ಬಿಕೊಂಡು ಬಲಗೈಗಳ ಮೂಲಕ ಯುದ್ಧ ಮಾಡುತ್ತಾರೆ. ಚೆಲುವ ನಾರಾಯಣ ದೇವರನ್ನು ಶಾಸನ ಮತ್ತು ಗೋಡೆ ಪ್ರಾಕಾರದಲ್ಲಿ, ಕೆತ್ತಲಾಗಿದೆ. ಇದನ್ನು ಮಲ್ಲಿಕಾರ್ಜುನ (೧೪೫೮) ರಾಜನ ಕಾಲದಲ್ಲಿ ತಿಮ್ಮಣ್ಣ ದಂಡನಾಯಕ ಕಟ್ಟಿಸಿರುತ್ತಾನೆ. ಕಿರಾತಾರ್ಜುನೀಯ ಪ್ರಸಂಗ ಕಂಬಗಳಲ್ಲಿದೆ. ಪರಮೇಶ್ವರ, ಮೂಕದಾನವ, - ಇವನ್ನು ಕಂಬಗಳಲ್ಲಿ ಕೆತ್ತಲಾಗಿದೆ. ಅರ್ಜುನ ಶಿವನಿಂದ ಸೋಲುವುದು ಕಥೆಯ ಸಾರಂಶವಾಗಿದೆ. ಹನುಮಾನ್ ದೇವಸ್ಥಾನ (ನಾರಾಯಣ ಸ್ವಾಮಿ ದೇವಸ್ಥಾನ)ದ ಗರ್ಭಗೃಹದ ೪ ಕಂಬಗಳಲ್ಲಿ, ೧೨ ಕಂಬ ಮಂಟಪದ ಕಿರೀಟ ಮುಕುಟ ಒಂದಾಗಿದೆ. ಕಿರಾತ ಬಾಣ-ಬಿಲ್ಲಿನಿಂದ ಹೊಡೆಯುವ ದೃಶ್ಯ ಅಪೂರ್ವವಾದದು.

**ನಂದಿಬೆಟ್ಟಗಳು :** ಯೋಗನಂದಿ ದೇವಾಲಯದ ಕಂಬಗಳ ಮೇಲೆ ಕಿರಾತಾರ್ಜುನೀಯ ಪ್ರಸಂಗ ಕೆತ್ತಿದ್ದಾರೆ. ಚೋಳರ ಕಾಲದಲ್ಲಿ ನಿರ್ಮಾಣವಾದರೂ, ವಿಜಯನಗರದರಸರು ಮಂಟಪ, ಗೋಪುರ, ಪ್ರಾಕಾರವನ್ನು ಕಟ್ಟಿಸಿರುತ್ತಾರೆ. 'ಕಿರೀಟ ಮುಕುಟದಲ್ಲಿ ದೋತಿ, ಅರ್ಜುನನ ತಪಸ್ಸು ಮಾಡುವುದು ಇದ್ದರೆ, ಪಶ್ಚಿಮ ಕಂಬದಲ್ಲಿ ಕಿರಾತ, ಅರ್ಜುನ ಬಿಲ್ಲು ಬಾಣ ಹಿಡಿದ ಚಿತ್ರವಿದೆ. ಕೊನೆಯಲ್ಲಿ ಪಾಶುಪತಾಸ್ತ್ರವನ್ನು ನೀಡುವುದು, ಶಿವಪಾರ್ವತಿಯರು ನಂದಿವಾಹನದ ಮೇಲೇರಿ ಹೋಗುವ ದೃಶ್ಯ ಗಮನಾರ್ಹವಾದುದು.*೨೨

**ಭಾಗಮಂಡಲ:** ಭಾಗಮಂಡಲೇಶ್ವರ ದೇವಸ್ಥಾನ ಪ್ರಸಿದ್ಧವಾದದು. ಇದರಲ್ಲಿ ಕಿರಾತಾರ್ಜುನೀಯವನ್ನು ೪ ಸಣ್ಣ ಗೋಪುರ, ಭಾಗಮಂಡಲೇಶ್ವರ, ವಿಷ್ಣು, ಸುಬ್ರಹ್ಮಣ್ಯ ಮತ್ತು ಗಣೇಶ ಹಾಗೂ ಎರಡು ದೇವಾಲಯಗಳಲ್ಲಿ ಕೆತ್ತಲಾಗಿದೆ. ಪ್ರಭಾವಳಿ ಯಿದ್ದು, ಅರ್ಜುನ ನಿಂತಿರುವುದು, ಶಿವ ಪಾಶುಪತಾಸ್ತ್ರ ಕೊಡುವುದು ಮುಂತಾದ ಪ್ರಸಂಗಗಳಿವೆ.

**ಲೇಪಾಕ್ಷಿ :** ವಿಜಯನಗರ ಕಾಲದ ವಿರುಪಣ್ಣ ದಂಡನಾಯಕನು ಇಲ್ಲಿನ ವೀರಭದ್ರ ದೇವಾಲಯವನ್ನು ಕಟ್ಟಿಸಿರುತ್ತಾನೆ. ಈ ಕಾಲದ ದೇವಾಲಯಗಳಲ್ಲಿ ಬಹು ಸುಂದರ, ಭವ್ಯವಾದ ದೇವಾಲಯವಿದು. ಆಂಧ್ರದ ಅನಂತಪುರ ಜಿಲ್ಲೆಯ, ಹಿಂದೂಪುರ ತಾಲೂಕಿಗೆ ಸಮೀಪದಲ್ಲಿದೆ ಈ ಲೇಪಾಕ್ಷಿ. ಇದು ಶಿಲ್ಪಕಲಾ ಸೌಂದರ್ಯದಲ್ಲಿ ಸರಿಸಾಟಿಯಿಲ್ಲದಂತೆ ಕಾಣುತ್ತದೆ. ಮುನಿಗಳ ಶಿಲ್ಪಗಳು, ರಂಗ ಮಂಟಪ, ಕಲ್ಯಾಣ ಮಂಟಪ, ಶಿವಲೀಲೆ, ರಾಮಾಯಣದ ದೃಶ್ಯಗಳು ಇತರ ಪುರಾಣ ಕಥೆಗಳನ್ನು ಚಿತ್ರಕಲೆಯಲ್ಲಿ ಶಿಲಾಕಂಭಗಳಲ್ಲಿ ಕಾಣಬಹುದು. ವೀರಭದ್ರ ದೇವಾಲಯದಲ್ಲಿ ಕಿರಾತ-ಶಿವನ ದೃಶ್ಯವಿದೆ. ಅರ್ಜುನ ಮತ್ತು ಶಿವ ಮೂಕ ದಾನವ (ವರಾಹ)ಕ್ಕೆ ಬಿಲ್ಲಿಂದ ಬಾಣ ಬಿಡುವ, ಸತ್ತ ಹಂದಿಗಾಗಿ ಹೋರಾಡುವ ಸನ್ನಿವೇಶ ಕೆತ್ತಲಾಗಿದೆ. ಉಬ್ಬು ಚಿತ್ರಗಳಲ್ಲಿ ಅರ್ಜುನ-ಶಿವ ಮಾಯಾವರಾಹಕ್ಕಾಗಿ ಕಾದಾಡುವ, ಮಲ್ಲಯುದ್ಧ ಮಾಡುವುದು ಅದ್ಭುತವಾಗಿದೆ. ಕಥಾಸರಣಿಯಲ್ಲಿ ಪಾಶುಪತಾಸ್ತ್ರ, ಅಂಜನಾಸ್ತ್ರಗಳನ್ನು ನೀಡಿ ನಂದಿವಾಹನವೇರಿ ತೆರಳುವ ಉಬ್ಬು ಶಿಲ್ಪ ಕಣ್ಣು ಕುಕ್ಕುವಂತಿದೆ.

ದಂತಕಥೆಗಳ ಮೂಲಕ ಆರಂಭವಾಗುವ ವಿಜಯನಗರ ಸಾಮ್ರಾಜ್ಯದ ಇತಿಹಾಸ ಬೇಟೆಯಿಂದಲೇ ತಳಕು ಹಾಕಿಕೊಂಡಿದೆ. ಈ ಅರಸರು ಕೊನೆಯವರೆಗೂ ಬೇಟೆಯನ್ನು ಪ್ರೋತ್ಸಾಹಿಸಿದ್ದರು. ಕೃಷ್ಣದೇವರಾಯನ ದಿನಚರಿಯಲ್ಲಿ 'ಮನೆಯವರು ಅಮರಗಾರರು ಅಷ್ಟು ಮಂದಿಗಳನ್ನು ರಾಯರವರು ಬೇಟೆ ಮಾರ್ಗವಾಗಿ ಹೊರಡುತ್ತಯಿದ್ದಾರೆ ನೀವೆಲ್ಲರೂ ನಿಮ್ಮ ನಿಮ್ಮ ಸ್ತೋಮ ಶುದ್ಧಿ ಮಾಡಿಕೊಂಡು ಬನ್ನಿಯೆಂದು ಚೀಟಿಗಳ ಬರೆಯಿಸಿ ಕಳುಹಿಸಿದರಾವ

ಕಾರಣ ಪಟ್ಟಣದೊಳಗುಳ್ಳ ರಾವುತರು ಮಾವುತರು ಕಾಲಾಳು ದೊರೆಮನ್ನೆಯವರು ಅಷ್ಟು ಮಂದಿಯು ಕದಲಿ ಹೋದರು' ಎಂದು ತಿಳಿದುಬರುತ್ತದೆ.[*೨] ಶ್ರೀ ಕೃಷ್ಣದೇವರಾಯನ 'ಆಮುಕ್ತ ಮಾಲ್ಯದ' ಕೃತಿಯಲ್ಲಿಯೂ ಬೇಟೆಯ ಪ್ರಸಂಗವಿದೆ.

ಸಾಮ್ರಾಜ್ಯದಲ್ಲಿ ನಾಯಕತನ, ಮ್ಯಾಸ ಬ್ಯಾಕ್ಕಿ ನಾಯಕತನ, ಪಾಳೆಯಗಾರಿಕೆ ಇರುವಂತೆ ಬೇಟೆಕಾರರು ಎನ್ನುವ ಪ್ರತ್ಯೇಕ ವರ್ಗವಿದ್ದಿತು. ರಾಜನ ಅಧೀನದಲ್ಲಿ ಬೇಟೆಯಾಡಿ, ರಾಜನನ್ನು ಬೇಟೆಗೆ ಪ್ರೋತ್ಸಾಹಿಸುತ್ತಾ ಅವರಿಗೆ ಉಣ ಬಡಿಸುತ್ತಿದ್ದಿರಬೇಕು. ಹೀಗಾಗಿ ಬೇಟೆ ಸಂಸ್ಕೃತಿಯು ನಾಡಿನಿಂದ ದೂರವಾಗಿ ಕಾಡಿನಲ್ಲಿ ಕೇಂದ್ರೀಕೃತವಾಗಿತ್ತು. ಇದೊಂದು ರೀತಿಯ ಮನೋರಂಜನೆ, ಆಹಾರ ಸಂಗ್ರಹಣೆಯ ಕಾರಣಗಳಿಗಾಗಿತ್ತು. ಇದೇ ಕಾಲಕ್ಕೆ ಸೇರಿದ ಗುರೇಕೋಟೆಯ ಆಂಜನೇಯ ದೇವಾಲಯದಲ್ಲಿನ ಬೇಟೆಯಶಿಲ್ಪ, ಕಂಪ್ಲಿ ಸೋಮೇಶ್ವರದಲ್ಲಿನ ಬೇಟೆ ಶಿಲ್ಪ, ಮರಿಯಮ್ಮನ ಹಳ್ಳಿಯ ಆಂಜನೇಯ ದೇವಾಲಯದಲ್ಲಿರುವ ಹುಲಿಬೇಟೆ ವೀರಗಲ್ಲು ಅತ್ಯುತ್ತಮ ಬೇಟೆ ಚಿತ್ರಣ ನೀಡುವಲ್ಲಿ ಯಶಸ್ವಿಯಾಗಿದೆ. ಅದೇ ರೀತಿ ಕುಪ್ಪಟೂರು (ಸೊರಬ, ಶಿವಮೊಗ್ಗ), ಬಳ್ಳಿಗಾವಿ (ಶಿಕಾರಿಪುರ, ಶಿವಮೊಗ್ಗ), ಸೋಮಾಂಬುಧಿ ಅಗ್ರಹಾರ (ಕೋಲಾರ), ಶ್ರವಣಗುಡಿ (ಮಧುಗಿರಿ, ತುಮಕೂರು), ಬಾಗಳಿ (ಹರಪನಹಳ್ಳಿ, ದಾವಣಗೆರೆ) ಮುಂತಾದ ಕಡೆಗಳಲ್ಲಿ ಹುಲಿ ಬೇಟೆಯ ವೀರಗಲ್ಲುಗಳು ಕಾಣಬರುತ್ತದೆ. ಇವು ಪ್ರಾದೇಶಿಕ ಭಿನ್ನತೆಯಿಂದ ಕೂಡಿದ್ದರೂ ಬೇಟೆಯ ವಿಧಾನ, ರೂಢಿ, ಪದ್ಧತಿಗಳನ್ನು ತಿಳಿಯಲು ಸಾಂಕೇತಿಕವಾಗಿವೆ. ನಾಗೇನಹಳ್ಳಿಯ ರಂಗನಾಥ ದೇವಾಲಯದ ಕಂಬದಲ್ಲಿ ಬೇಡತಿ ಎಡಗೈಯಲ್ಲಿ ಉದ್ದವಾದ ಕೋಲು ಅಥವಾ ಭರ್ಜಿಯಂತಹ ಆಯುಧವನ್ನು ಹಿಡಿದು ನಾಟ್ಯ ಭಂಗಿಯಲ್ಲಿ ನಿಂತಿದ್ದಾಳೆ.

ಈ ಭಾಗದಲ್ಲಿ ಸಣ್ಣ-ಪುಟ್ಟ ಅರಸರು ಸಹ ಬೇಟೆಯಲ್ಲಿ ಪ್ರವೀಣರಾಗಿದ್ದರು. ಕಂಪಲಿಯ ಅರಸ ಕಂಪಲಿರಾಯ, ಸೊಂಡೂರು ಘೋರ್ಪಡೆ ಮನೆತನ, ಗುಡೆಕೋಟೆ ಪಾಳೆಯಗಾರರು, ಜರಿಮಲೆ ಪಾಳೆಯಗಾರರು, ತರೀಕೆರೆ, ಚಿತ್ರದುರ್ಗ, ನಿಡಗಲ್ಲು, ನಾಯಕನ ಹಟ್ಟಿ ಮತ್ತು ರಾಯದುರ್ಗದ ಪಾಳೆಯಗಾರರು ಬೇಟೆಯಲ್ಲಿ ಸಾಹಸ ಪ್ರದರ್ಶಿಸಿರುವುದು ಸ್ಮರಣೀಯ. ಆಳರಸರಿಂದ ಹಿಡಿದು ಜನಸಾಮಾನ್ಯರವರೆಗೆ ಬೇಟೆ ಭಯಂಕರವಾದ ರಾಜಕೀಯ ತಂತ್ರವೂ ಆಗಿತ್ತು. ವೃತ್ತಿಯನ್ನು ಪಳಗಿಸುವ, ಮುಗಿಸುವ ಪ್ರಯತ್ನಗಳು ನಡೆದಿರಬೇಕು. ಯುದ್ಧದ ಪೂರ್ವ ವ್ಯವಸ್ಥೆ ಅಥವಾ ತರಬೇತಿ ಅವಸ್ಥೆ ಬೇಟೆ ಎಂದು ಹೇಳಬಹುದು. ವಿಜಯನಗರ ದರಸರು ಬೇಟೆಯಿಂದಲೇ ಸಾಮ್ರಾಜ್ಯ ಸ್ಥಾಪಿಸಿದ್ದು, ಬೇಟೆ ಸಂಸ್ಕೃತಿಯನ್ನು ರೂಪಿಸಿಕೊಂಡದ್ದು ಅವರ ಕಾಡಿನ ಜೀವನವನ್ನು ಮತ್ತು ನಾಡಜೀವನವನ್ನು ಸಮನಾಂತರಗೊಳಿಸುವಲ್ಲಿ ಸಫಲವಾಗಿದೆ. 'ವರಾಹ' ಲಾಂಛನವೂ ಬೇಟೆಯ ಪ್ರಾಣಿಯೇ ಆಗಿರುವುದರಿಂದ 'ಬೇಟೆ' ವಿಜಯನಗರ ಸಾಮ್ರಾಜ್ಯದಲ್ಲಿ ಮಹತ್ತರ ಪಾತ್ರವಹಿಸಿದ್ದು, ಅನೇಕ ತಿರುವುಗಳಿಗೆ ಕಾರಣವಾಗಿದೆ.

## ಆಧಾರ ಸೂಚಿ


*೧. *ಹಂಪಿ ಪರಂಪರೆ :* (ಸಂ) ಟಿ. ಪರಮೇಶ್ವರಪ್ಪ, ೧೯೯೬, ಪು. ೫೧

*೨ ಡಾ॥ ಅ. ಸುಂದರ : *ಕರ್ನಾಟಕ ಚರಿತ್ರೆ ಸಂಪುಟ* – ೧, ೧೯೯೭, ಪು. ೨೪೩+೨೪೪+೨೫೨+೨೬೨

*೩. ಡಾ॥ ರಾಧಾಕೃಷ್ಣಮೂರ್ತಿ: 'ವಿಜಯನಗರ ಸಂಸ್ಕೃತಿಯ ಆಕರ ಗ್ರಂಥ ಸಾಮ್ರಾಜ್ಯ ಲಕ್ಷ್ಮಿ ಪೀಠಿಕಾ' *ಇತಿಹಾಸ ದರ್ಶನ* – ೧೧, ೧೯೯೬, ಪು. ೬೧

*೪. ಸಿ.ಟಿ. ಯಂ ಕೊಟ್ರಯ್ಯ : *ಹಂಪೆ ಶಿಲಾಯುಗದ ಸಂಸ್ಕೃತಿ: ಕ್ರಿಸ್ತಶತಾಬ್ದಿ ಆರಂಭ: ಶಾಸನಗಳಲ್ಲಿ*, ಶರಣರ ಸುವಾಸಿನಿ ಬಳಗ, ಹೊಸಬೇಟೆ, ೧೯೯೭, ಪು. ೭

*೫. ಎಂ. ಎಸ್. ನಾಗರಾಜರಾವ್ : *ಕಿರಾತಾರ್ಜುನಿಯಂ ಇನ್ ಇಂಡಿಯನ್ ಆರ್ಟ್*, ಆಗಮ್ ಕಲಾ ಪ್ರಕಾಶನ, ದಿಲ್ಲಿ., ೧೯೭,. ಪು. ೫೦

*೬. *ಕರ್ನಾಟಕ ಚರಿತ್ರೆ ಸಂಪುಟ* – ೩ : (ಸಂ) ಪ್ರೊ॥ ಕೆ. ಎಸ್. ಶಿವಣ್ಣ, ೧೯೯೭, ಪು. ೩೬೨

*೭. ಟಿ. ಪರಮೇಶ್ವರಪ್ಪ, ಅದೆ., ಪು. ೩೭

*೮. ಡಾ॥ ಎಸ್. ರಾಜಶೇಖರ : *ವಿಜಯ ಕಲ್ಯಾಣ, ವಿಜಯಕಲ್ಯಾಣ ನಗರಿಯ ವಾಸ್ತುಶಿಲ್ಪ ಮತ್ತು ಚಿತ್ರ ಕಲೆ*, ಪು. ೧೮೮

*೯. ಎಚ್. ಟಿ. ತಳವಾರ್ : *ಅಚ್ಯುತಾಪುರದ ಶಿಲ್ಪಗಳು, ವಿಜಯನಗರ ಅಧ್ಯಯನ*, ಸಂ. – ೧. ಪು. ೨೬

*೧೦. ಅದೇ : ಪು. ೨೬

*೧೧. ಪೂರ್ವೋಕ್ತ : ಕ್ರಮ ಸಂಖ್ಯೆ ೧, ಪು. ೩೯

*೧೨. ಪೂರ್ವೋಕ್ತ : ಕ್ರ. ಸಂ. ೪, ಪು. ೫+೬

*೧೩. ಪೂರ್ವೋಕ್ತ : ಕ್ರ. ಸಂ. ೧, ಪು. ೫೨

*೧೪. ಪೂರ್ವೋಕ್ತ : ಕ್ರ. ಸಂ. ೧೦, ಪು. ೩೭

*೧೫. ಲಾಂಗ್ ಹರ್ಸ್ಟ್ : *ಹಂಪಿ ರೂಯಿನ್ಸ್*, ಏಶಿಯನ್ ಎಜುಕೇಶನಲ್ ಸರ್ವಿಸಸ್, ನ್ಯೂಡೆಲ್ಲಿ, ೧೯೮೧, ಪು. ೬೦

*೧೬. *ವಿಜಯನಗರ ಪ್ರೊಗ್ರೆಸ್ ಆಫ್ ರಿಸರ್ಚ್ :* (ಸಂ) ದೇವರಾಜ ಡಿ. ವಿ., ಚನ್ನಬಸಪ್ಪ ಎಸ್. ಪಾಟೀಲ್, ೧೯೮೪-೮೭, ೧೯೯೧, ಪು. ೫೦

*೧೭. *ವಿಜಯನಗರ ( ಹಂಪೆ ) ಶಾಸನಗಳು :* (ಸಂ) ಚನ್ನಬಸಪ್ಪ ಎಸ್. ಪಾಟೀಲ್, ವಿನೋದಾ ಪಾಟೀಲ್, ೧೯೯೮, ಪು. ೧೦೫

*೧೮. ವಿಜಯನಗರ ಪ್ರೊಗ್ರೆಸ್ ರಿಸರ್ಚ್ (ಪು : ೨೩) ನಲ್ಲಿ ತಿಳಿಸಿರುವಂತೆ : This gate was very important, next to the Singharada Hebbagilu, as this is the Second gate called Hebbagilu (Maingate). As evident from the name itself this gate must have been associated with hunters or hunting (ceremonial or otherwise). The mailara deva temple mentioned above was constructed by Baththeya Nayaka, Son of Malegeya-Nayaka, a hunter Serving under the king. The gate itself is amidst the hill and there are also a servies of hills out sides. This area appears to have been ideal for hunting.

*೧೯. ವಿಜಯನಗರ ಅಧ್ಯಯನ, ಸಂ. ೧, ಪು. ೬೮

*೨೦. ಎ.ಕ. ೧೧, ಎಂ. ಕೆ. ೩೨, ಪು. ೧೨೫

*೨೧. ನೋಡಿ : ಎಂ. ಕೆ. ಕೃಷ್ಣ : 'ದಿ ವಿದ್ಯಾಶಂಕರ ಟೆಂಪಲ್ ಶೃಂಗೇರಿ', ವಿಜಯನಗರ, ಸಿಕ್ಸ್ ಸೆಂಚುರಿ ಕಮೆಮಾರೇಷನ್ ವಾಲ್ಯುಮ್, ಧಾರವಾರ್ - ೧೯೩೬, ಪು. ೨೮೯+೨೯೪

*೨೨. ಎಂ. ಎಸ್. ನಾಗರಾಜರಾವ್ : *ಕಿರಾತಾರ್ಜುನಿಯಂ ಇನ್ ಇಂಡಿಯನ್ ಆರ್ಟ್*, ೧೯೭೯, ಪು. ೪೬

*೨೩. ಎಂ. ಪಿ. ಸೀತರಾಮಯ್ಯ : *ಕೃಷ್ಣ ದೇವರಾಯನ ದಿನಚರಿ*, ಪು. ೧೪

( ಪ್ರಬಂಧದ ಸಿದ್ಧತೆಯಲ್ಲಿ ನೆರವಾದ ಪ್ರೊ॥ ಲಕ್ಷ್ಮಣ್‌ತೆಲಗಾವಿ, ಡಾ॥ ರಾಜರಾಮ ಹೆಗಡೆ, ಜಿ. ಸರ್ವಮಂಗಳ, ಎಚ್. ತಿಪ್ಪೇಸ್ವಾಮಿ, ಈ. ಕುಮಾರಸ್ವಾಮಿ, ಪೂಜಾರಿ ನರಗಲ್ಲಪ್ಪ ಮತ್ತು ಇತಿಹಾಸ ಅಕಾದೆಮಿಯ ಸದಸ್ಯರಿಗೆ ತುಂಬು ಹೃದಯದ ಕೃತಜ್ಞತೆಗಳು.)

ಡಾ॥ ಜ್ಯೋತ್ಸ್ನಾ ಕಾಮತ್ *

# ಕನ್ನಡಿಗರೇ ಮರೆತ ಟೋಪಿ : ಕುಲಾವಿ

ವಿಜಯನಗರ ಸಾಮ್ರಾಜ್ಯದ ಕಾಲ (ಕ್ರಿ. ಶ. ೧೩೩೬ – ೧೫೬೫) ಸಾಹಿತ್ಯ, ಶಿಲ್ಪ, ವಾಸ್ತು, ಚಿತ್ರಕಲೆಗಳಲ್ಲಿ ವೈಶಿಷ್ಟ್ಯವನ್ನು ತೋರಿದಂತೆ ವೇಷಭೂಷಣಗಳಲ್ಲೂ ವೈಶಿಷ್ಟ್ಯವನ್ನು ಮೆರೆದಿದೆ. ಮುಸ್ಲಿಂ ಪ್ರಭಾವ ಬಲವಾಗಿ ನೆಲೆಯೂರುತ್ತಿದ್ದರೂ, ಅದರ ಅಂಶಗಳನ್ನು ಹೀರಿಕೊಂಡೂ ತನ್ನತನವನ್ನು ಎತ್ತಿ ಹಿಡಿದದ್ದು ಗಂಡಸರ ಉಡಿಗೆತೊಡಿಗೆಗಳ ಮಟ್ಟಿಗೆ ಗಮನಾರ್ಹವಾದ ಅಂಶವಾಗಿದೆ. ಇವುಗಳಲ್ಲಿ ಪುರುಷರ ಉದ್ದವಾದ ನಿಲುವಂಗಿ (ಕಬಾಯಿ), ನಡುವಿಗೆ ಓರಣವಾಗಿ ಸುತ್ತಿಕೊಳ್ಳುವ ಚಿತ್ತಾರದ ಸೀರೆಗಳು ಹಾಗೂ ಎತ್ತರದ ಟೋಪಿ ಕುಲಾಯಿ ಅಥವಾ ಕುಲಾವಿ ಮುಖ್ಯವಾದವು. ಟೋಪಿಯ ಶ್ರೇಷ್ಠ ಹಾಗೂ ಮೊದಲ ಅವತಾರವಾಗಿದ್ದು, ಹೊಲಿದ ಪ್ರಪ್ರಥಮ ಶಿರೋಭೂಷಣವೇ ಕುಲಾವಿ. ಕುಲಾಯಿ, ಕೊಲಾಯ್, ಕಲ್ಲಿ ಎಂದೆಲ್ಲ ವಿದೇಶೀ ಪ್ರವಾಸಿಗರು ಗುರುತಿಸಿದಂತೆ, ಚರಿತ್ರೆ ಹಾಗೂ ಕಾವ್ಯಗಳಲ್ಲೂ ಕುಲಾವಿಯ ಉಲ್ಲೇಖ ಕಂಡುಬರುತ್ತದೆ. ಕುಲಾವಿ ಧರಿಸಿದ ಕೃಷ್ಣದೇವರಾಯನ ಕಂಚಿನ ಪ್ರತಿಮೆ, ಚರಿತ್ರೆಯ ಅಭ್ಯಾಸಿಗಳಿಗೆ ಸುಪರಿಚಿತ. ವಿಜಯನಗರ ಕಾಲದಲ್ಲಿ ಕಟ್ಟಲ್ಪಟ್ಟ ಹಲವಾರು ದೇವಾಲಯಗಳಲ್ಲಿಯ ಶಿಲಾಪ್ರತಿಮೆಗಳಲ್ಲಿ ಕುಲಾಯಿಯನ್ನು ಗುರುತಿಸಬಹುದು. ಆದರೆ ನಿಜಕ್ಕೂ ಅವುಗಳ ಅಂದ – ಚೆಂದ, ವರ್ಣವಿನ್ಯಾಸ, ಕಲಾತ್ಮಕತೆ ಹಾಗೂ ಕುಸುರಿ ಕೆಲಸದ ವೈವಿಧ್ಯದ ಸ್ಪಷ್ಟ ಕಲ್ಪನೆ ಬರಬೇಕಿದ್ದರೆ, ಸದ್ಯಕ್ಕೆ ಆಂಧ್ರಪ್ರದೇಶಕ್ಕೆ ಸೇರಿಹೋಗಿರುವ ಹಿಂದುಪುರ ಬಳಿಯ (ಅನಂತಪುರ ಜಿಲ್ಲೆ) ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯ ಸಂಕೀರ್ಣದಲ್ಲಿರುವ ಭಿತ್ತಿಚಿತ್ರಗಳನ್ನು ಕೂಲಂಕಷವಾಗಿ ಅಭ್ಯಸಿಸಲೇಬೇಕು.

ತೊಟ್ಟವರ ವ್ಯಕ್ತಿತ್ವಕ್ಕೆ ಭವ್ಯತೆ ನೀಡುತ್ತಿದ್ದ ಕುಲಾವಿ ಆರೆಂಟು ಅಂಗುಲ ಎತ್ತರವಾಗಿದ್ದು, ಸುತ್ತಳತೆ ಹದಿನೈದು ಅಂಗುಲದವರೆಗೆ ಇರುತ್ತಿತ್ತು.[*೧] ಅದಾಗಲೇ ವಿದೇಶಗಳೊಡನೆ ಆಯಾತ-ನಿರ್ಯಾತಗಳು ಬಲುದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದು ವಿದೇಶಿ ಬಟ್ಟೆ, ಪ್ರಾಮುಖ್ಯತೆ ಪಡೆದಿತ್ತು. ಕುಲಾವಿಯ ತಯಾರಿಕೆಗೆ ಬೇಕಾದ ದಪ್ಪ ವೆಲ್ವೆಟ್, ಸ್ಯಾಟಿನ್, ಟಫೆಟಾ, ರೇಶ್ಮೆಯು ಬಟ್ಟೆ-ಪರ್ಶಿಯು, ಡಮಾಸ್ಕಸ್, ಅಲೆಕ್ಸಾಂಡ್ರಿಯು, ಈಜಿಪ್ಟ್, ಚೀನಗಳಿಂದ ಬರುತ್ತಿತ್ತು. ಇವನ್ನೆಲ್ಲ ಜಾಗ್ರತೆಯಾಗಿ ತಲೆಯ ಅಳತೆಗೆ ಹೊಂದುವಂತೆ ಹೊಲಿದು, ಬಳಿಕ ಕಸೂತಿಯಿಂದ ಅಲಂಕರಿಸಬೇಕಾಗಿದ್ದರಿಂದ ಸಿಂಪಿಗ ವರ್ಗ, ತುಂಬ ಪ್ರತಿಷ್ಠೆ ಹೊಂದಿ, ಅತ್ಯಂತ ಬೇಡಿಕೆಯಲ್ಲಿದ್ದ ವರ್ಗವಾಗಿದ್ದರೆ ಆಶ್ಚರ್ಯವಿಲ್ಲ! ಧರಿಸುವವರ ಸ್ಥಾನ-ಮಾನ, ಅಭಿರುಚಿಗಳಿಗೆ ತಕ್ಕಂತೆ ಕುಲಾವಿಗಳು ಸಿದ್ಧವಾಗಲಾರಂಭಿಸಿದವು. ಧನಿಕರು, ಅಧಿಕಾರಿಗಳು, ಅರಸುವರ್ಗದವರು ಬೇರೆ ಬೇರೆ ಸಂದರ್ಭಗಳಿಗೆ ಹೊಂದುವಂತೆ, ತಮ್ಮ ಇತರ ಅಲಂಕಾರಗಳಿಗೆ 'ಮ್ಯಾಚ್' ಆಗುವಂತೆ ಕುಲಾವಿಗಳನ್ನು ಧರಿಸುತ್ತಿದ್ದಿರಬೇಕು. ಕೃಷ್ಣದೇವರಾಯನ ಖಾಸಗಿ ಸಂಗ್ರಹದಲ್ಲಿ ಅದೆಷ್ಟು ರತ್ನಖಚಿತ ಕುಲಾವಿಗಳಿದ್ದವೆಂದು ಊಹಿಸುವದೂ ಕಷ್ಟ! ಆತನು ಆಪ್ತೇಷ್ಟರಿಗೆ ಆಗಾಗ ಕೊಡ ಮಾಡುತ್ತಿದ್ದ ಉಡುಗೊರೆಗಳಲ್ಲಿ ಸುವಾಸನಾ ದ್ರವ್ಯಗಳೊಂದಿಗೆ, ಕಬಾಯಿ ಪೀತಾಂಬರ, ಕುಲ್ಲಾಯಿಗಳೂ ಸೇರ್ಪಡೆಯಾಗುತ್ತಿದ್ದವೆಂಬುದು ಶ್ರೀಕೃಷ್ಣದೇವರಾಯನ ದಿನಚರಿಯಿಂದ ತಿಳಿದುಬರುತ್ತದೆ.

ಜನಸಾಮಾನ್ಯರು ವಿವಿಧ ಬಣ್ಣಗಳ ಬಟ್ಟೆಯ ಕುಲಾವಿಗಳಲ್ಲಿ ಹೂ, ಬಳ್ಳಿಗಳನ್ನು ಹೆಣೆಸಿಕೊಂಡರೆ, ಪ್ರತಿಷ್ಠಿತರು, ಬೆಳ್ಳಿ-ಬಂಗಾರದ ಜರಿಯ ಕುಸುರಿ ಕೆಲಸ ಮಾಡಿಸುತ್ತಿದ್ದರು. ಜೊತೆಗೆ ಬೆಲೆ ಬಾಳುವ ಮುತ್ತುರತ್ನ ಹರಳುಗಳನ್ನೂ ಕೆಚ್ಚಿಸುತ್ತಿದ್ದರು. ಲೇಪಾಕ್ಷಿ ದೇವಾಲಯದ ಮುಖಮಂಟಪದ ದ್ವಿತೀಯ ಅಂಕಣದಲ್ಲಿ ಆ ದೇವಸ್ಥಾನದ ನಿರ್ಮಾಣ ಹಾಗೂ ವಿಸ್ತರಣೆಗೆ ಕಾರಣರಾದಂಥ ಸೋದರರನ್ನು ಚಿತ್ರಿಸಲಾಗಿದೆ. ಈರ್ವರೂ ಭಯ-ಭಕ್ತಿಯಿಂದ ತಮ್ಮ ಇಷ್ಟದೇವತೆಯನ್ನು ವಂದಿಸುತ್ತಿದ್ದಾರೆ.

---

* ೧೧೦, 'ಶಶಿಕಿರಣ್', ೧೮ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೫೫

ನಾಲವತ್ತರ ಗಡಿಗೆ ಬಂದಿರಬಹುದಾದ ವಿರೂಪಣ್ಣ ದೃಢಕಾಯನಾಗಿ, ಗೌರವರ್ಣದವನಾಗಿದ್ದರೆ, ತಮ್ಮನಾದ ವೀರಣ್ಣನು ಸುಮಾರು ಮೂವತ್ತೈದರ ಪ್ರಾಯದ, ಕೃಶಾಂಗನಿದ್ದರೂ ಶೌರ್ಯದ ಮೀಸೆ ಹೊತ್ತ ಶ್ಯಾಮಾಂಗನಾಗಿದ್ದಾನೆ. ಇಬ್ಬರೂ ಎತ್ತರದ ಕುಲಾವಿಗಳನ್ನು ಧರಿಸಿದ್ದಾರೆ. ವಿರೂಪಣ್ಣನ ಕುಲಾವಿ ನೇರಿಳೆ ಬಣ್ಣದ್ದಿದ್ದು ಚೆಂಡುಮಲ್ಲಿಗೆಯಂಥ ಸುಂದರ ಹೂಗಳ ಕಸೂತಿ ಟೋಪಿಯ ಉದ್ದಕ್ಕೂ ಕಂಡುಬರುತ್ತಿದೆ. ಜೋಡಿ ರಿಬ್ಬನ್‌ಗಳಂಥ ಚುಂಗನ್ನು ಗಾಳಿಯಲ್ಲಿ ಹಾರಿಬಿಡಲಾಗಿದೆ. ವೀರಣ್ಣನ ಕುಲಾವಿಗೆ ಹಸಿರು ಬಣ್ಣದ ಬಳ್ಳಿಗಳು ಒಂದರ ಮೇಲೊಂದು ಹಾದು ಹೋದಂತೆ ಅಲಂಕರಿಸಲಾಗಿದೆ. ನಡುನಡುವೆ ಹೂಗಳನ್ನು ರಚಿಸಲಾಗಿದೆ.

ಲೇಪಾಕ್ಷಿ ದೇವಾಲಯದ ಹೆಚ್ಚಿನ ಚಿತ್ರಗಳು, ರಾಮಾಯಣ, ಮಹಾಭಾರತ ಹಾಗೂ ಮುಖ್ಯತಃ ಶಿವಪುರಾಣದ ಪ್ರಸಂಗಗಳನ್ನು ಪ್ರತಿನಿಧಿಸಿದರೂ, ದೇವದರ್ಶನಕ್ಕೆ ನೆರೆದ ಭಕ್ತಾದಿಗಳು ಸಮಕಾಲೀನ ವ್ಯಕ್ತಿಗಳೇ ಆಗಿದ್ದಾರೆ. ಅವರನ್ನೆಲ್ಲ ಸಮಕಾಲೀನ ಉಡುಪಿನಲ್ಲಿಯೇ ಚಿತ್ರಿಸಲಾಗಿದ್ದರಿಂದ ನಾಲ್ಕೈದು ಶತಕಗಳಷ್ಟು ಹಿಂದಿನ ಕನ್ನಡಿಗರ ಉಡಿಗೆ-ತೊಡಿಗೆಗಳನ್ನು ಸುಲಭವಾಗಿ ಕಂಡುಕೊಳ್ಳಬಹುದಾಗಿದೆ. ಕುಲಾವಿ ಎಂಬುದು ಕೇವಲ ರಾಜ-ಮಹಾರಾಜರಿಗೆ ಹಾಗೂ ಉನ್ನತ ಪ್ರತಿಷ್ಠಿತರಿಗೆ ಮೀಸಲಾಗಿತ್ತು, ಎಂದು ಹಲವು ಇತಿಹಾಸಕಾರರು ನಂಬಿದಂತಿದೆ. ಆದರೆ ಕುಲಾವಿ, ಸಾಮಾನ್ಯ ತಲೆಯುಡಿಗೆಯಾಗಿದ್ದು ತಂತಮ್ಮ ಸ್ಥಾನ-ಮಾನ-ಪ್ರತಿಷ್ಠೆಗೆ ಹೊಂದುವಂತೆ ಅದನ್ನು ಹೊಲಿಸಿಕೊಳ್ಳುವ ರೂಢಿಯಿತ್ತು ಎಂಬುದು ಸೂಕ್ತವಾಗಿದೆ. ವೀರಣ್ಣ, ವಿರೂಪಣ್ಣರ ಜೊತೆಯಲ್ಲಿ ಇನ್ನೂ ಕೆಲವು ಭಕ್ತಾದಿಗಳೂ ಕುಲಾವಿಗಳನ್ನು ಧರಿಸಿರುವದು ಕಂಡುಬರುತ್ತದೆ.

ರಸಿಕನೋರ್ವನು ಗಡ್ಡ ಮೀಸೆ, ಬೆಳೆಸಿ, ಕಿವಿಗೆ ಲೋಲಾಕಿನಂಥ ಒಡವೆ ಧರಿಸಿ, ವರ್ತುಳಗಳನ್ನೇ ಚಿತ್ರಿಸಿದ ಕುಲಾವಿ ಧರಿಸಿದ್ದಾನೆ. ಇನ್ನೊಬ್ಬನು ಮುತ್ತಿನ ಹಾರಗಳನ್ನು ಧರಿಸಿ ಹೂ-ಬಳ್ಳಿ ಹಾಕಿಸಿದ ಕುಲಾವಿ ತೊಟ್ಟಿದ್ದಾನೆ. ಕೆಲಮಗಳ ಮೇಲೆ ಮುತ್ತು ಹರಳುಗಳ ಅಲಂಕಾರವನ್ನು ಗುರುತಿಸಬಹುದು. ಕೆಲವರ ಕುಲಾವಿಗಳ ಕೆಳಗಡೆ ಬೇರೊಂದು ಬಳಿಯ ಬಟ್ಟೆಯನ್ನು ಧರಿಸಿ ಬಿಸಿಲು ಕಾಲದ ಬೆವರು ಅಥವಾ ತಲೆಗೆ ಹಾಕಿದ ಎಣ್ಣೆಯಿಂದ ಈ ಬೆಲೆಯುಳ್ಳ ಟೋಪಿಗಳನ್ನು ರಕ್ಷಿಸಲು ಈ ಉಪಾಯವನ್ನು ಕೈಕೊಂಡಿರಬಹುದಾದ ಸಾಧ್ಯತೆ ಇದೆ.

ಗಂಡಸರಿಗಷ್ಟೇ ಈ ಕುಲಾವಿ ಮೀಸಲಾಗಿತ್ತು ಎಂದು ನಂಬಬೇಕಾಗಿಲ್ಲ. ಹಬ್ಬಹರಿದಿನಗಳಂಥ ನಾಡಹಬ್ಬದಂಥ ಮೆರವಣಿಗೆಯ ವಿಶೇಷ ಪ್ರಸಂಗಗಳಲ್ಲಿ ಅರಮನೆಯ ಹೆಂಗಳೆಯರೂ, ಒಡವೆಗಳ ಭಾಗವಾಗಿ ಕುಲಾಯಿ ಧರಿಸುತ್ತಿದ್ದರು, ಎಂದು ಪ್ರತ್ಯಕ್ಷದರ್ಶಿ ಡುಮಿಂಗೋ ಪಾಯೇಸ್‌ನು ವರದಿಸಿದ್ದಾನೆ.* ರಾಯಭಾರಿಗಳು, ಸೇನಾಪತಿಗಳು, ಮಾಂಡಲಿಕರು, ಅರಸನಿಂದ ಕುಲಾಯಿಗಳನ್ನು ಇಂಥ ಪ್ರಸಂಗಗಳಲ್ಲಿ ಉಡುಗೊರೆಯಾಗಿ ಪಡೆಯುತ್ತಿದ್ದರು. ಅನೇಕಾನೇಕ ದೇವಾಲಯಗಳಲ್ಲಿಯ ಶಿಲಾವಿಗ್ರಹಗಳಿಗೆ ದೇವ-ದೇವತೆಗಳಿಗೆ ಕುಲಾವಿಯಾಕಾರದ ಕಿರೀಟಗಳನ್ನು ಕಂಡರಿಸಿದ್ದನ್ನು ಹಾಗೂ ಲೇಪಾಕ್ಷಿಯ ಭಿತ್ತಿಚಿತ್ರಗಳಲ್ಲಿ ಕುಲಾವಿ ತೋರಿಸಿದ್ದನ್ನು ಕಂಡರೆ ನೋಡಿದರೆ ಅದು ಆ ಕಾಲದ ಕರ್ನಾಟಕದ ರಾಷ್ಟ್ರೀಯ ತೊಡಿಗೆ, (National Wear) ಆಗಿದ್ದು ಸ್ಪಷ್ಟ!

ವೇಗದ ಕುದುರೆಯ ಸವಾರಿಯ ಸಂದರ್ಭದಲ್ಲೂ ಕುಲಾವಿಯೂ ತಲೆಯಿಂದ ಬೀಳುತ್ತಿರಲಿಲ್ಲವೆಂಬ ಬಾರ್ಬೋಸಾನ ಉದ್ಗಾರ ನೋಡಿದರೆ ಅವು ಬಿಗಿಯಾಗಿ ಕೂಡ್ರುವಂತೆ ತಲೆಯಳತೆ ಕೊಟ್ಟೇ ಹೊಲಿಸುತ್ತಿದ್ದಿರಬೇಕೆಂಬ ಅಭಿಪ್ರಾಯಕ್ಕೆ ಬರುವಂತಾಗುತ್ತದೆ. ತೊರವೆ ರಾಮಾಯಣ, ಕುಲಾವಿಯನ್ನು ಹೆಸರಿಸಿದಂತೆ ದೇವಪ್ಪ ಕವಿಯ ರಾಮವಿಜಯ ಕಾವ್ಯವು (೧೫೪೦) 'ಸಿಂಗರಿಸಿದ ಜುಂಗಿನ ಕೊನೆಯ, ಬರೆಹದ ಥಂದ ಕುಲಾವಿಯ ದೊರೆಗಳ ನೆರವಿ'ಯನ್ನು ಉಲ್ಲೇಖಿಸುತ್ತದೆ.* ಅಂದರೆ ಕುಲಾವಿಯ ತುದಿಗೆ ಗೊಂಡೆಗಳ ಸಿಂಗಾರವಿದ್ದು, ಅದು ಬರಹದ ಅಥವಾ ಪ್ರಿಂಟೆಡ್ ಬಟ್ಟೆಯಿಂದ ಹೊಲಿಯಲ್ಪಟ್ಟಿತ್ತು ಎಂದು ಅರ್ಥೈಸಬೇಕಾಗುತ್ತದೆ. ಇದೇ ಶತಮಾನದ ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣವು ಬಿಜ್ಜಳನ ಆಸ್ಥಾನದ ಪಂಡಿತರು, 'ಮೇಲುಗುಲ್ಲಾಯಿ'ಗಳನ್ನು ಧರಿಸಿದ್ದರು ಎಂದು ಹೇಳುತ್ತದೆ.*

ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರ ಕಾಲದಲ್ಲೆಲ್ಲ 'ಉಷ್ಣೀಷವು' ಸಾಮಾನ್ಯ ತಲೆಯುಡುಗೆಯಾಗಿತ್ತು. ತ್ರಿವಿಕ್ರಮಭಟ್ಟನ ನಲಚಂಪು 'ಮಹೋಷ್ಣೀಷ' ಅಥವಾ ರತ್ನಖಚಿತ, ಕಲಾಪತಿನ ಕೆಲಸವಿದ್ದ ದೊಡ್ಡರುಮಾಲನ್ನು ಹೆಸರಿಸಿದರೆ*, ಭೂಲೋಕ ಮಲ್ಲನ (ಮುಮ್ಮಡಿ ಸೋಮೇಶ್ವರ-೧೧೨೭-೧೧೩೮). ಮಾನಸೋಲ್ಲಾಸವು, ಬಗೆ ಬಗೆಯ ಉಷ್ಣೀಷಗಳು ಓಲಗದ ವೇಷಭೂಷಣಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದನ್ನು ಸೂಚಿಸುತ್ತದೆ.* ಸ್ಥಾನಮಾನದಂತೆ, ರಸಿಕತೆಯ ಪ್ರತೀಕವಾಗಿ ಈ ಜರಿರುಮಾಲು ಅಥವಾ ಪೇಟಿ ಹಲವು ರೂಪಗಳಲ್ಲಿ ರಾಷ್ಟ್ರದಾದ್ಯಂತ ವಿರಾಜಿಸುತ್ತಲೇ ಇತ್ತು-ಶತಶತಕಗಳ ಕಾಲ. ನಂತರ ಕುಲಾವಿಯ ಆಳ್ವಿಕೆ ಪ್ರಾರಂಭವಾಯಿತು! ವಿಜಯ ನಗರದ ಬಳಿಕವೂ ಕುಲಾಯಿಯ ಪ್ರತಿಷ್ಠೆ ಮುಂದರಿದು ಬಂದಂತೆ ತೋರುತ್ತದೆ. ಗೋವಿಂದ ವೈದ್ಯನ 'ಕಂಠೀರವ ನರಸರಾಜ ವಿಜಯ'ದ ಪ್ರಕಾರ, ಆ ದೊರೆಯು, ನವರಾತ್ರಿಯ ಸಂದರ್ಭದ 'ಜಂಬೀ ಸವಾರಿ'ಯಲ್ಲಿ 'ರಂಗು ಮಾಣಿಕ್ಯಗಳ ಕುಲ್ಲಾಯಿ' ಧರಿಸಿಯೇ ಮಂಗಳೋತ್ಸವದಲ್ಲಿ ಪಾಲುಗೊಳ್ಳುತ್ತಿದ್ದನಂತೆ.* ಬೆಂಗಳೂರಿನ ಬೆಳವಣಿಗೆಗೆ ನೆಲೆಗಟ್ಟು













ಕನ್ನಡಿಗರೇ ಮರೆತ ಟೋಪಿ : ಕುಲಾವಿ

1. ವಿರೂಪಾಕ್ಷನ ತುರಾಯಿಯ ಕುಲಾವಿ.
2. ವೀರಭದ್ರನ ಲತೆಗಳು ಹಾಸು ಹೊಕ್ಕಾಗಿರುವ ಕುಲಾವಿ.
3. ಹೂ ಬಳ್ಳಿಗಳ ಕುಸುರಿನ ಕೆಲಸವಿರುವ ಕುಲಾವಿ.
4. ವರ್ತುಲ, ತ್ರಿಕೋನಗಳ ನಕ್ಷೆಯ ಕುಲಾವಿ.
5. ಮುತ್ತು, ಹವಳಗಳಿಂದ ರಚಿತ ಕುಲಾವಿ.
6. ವಜ್ರ, ವೈಡೂರ್ಯಗಳನ್ನು ಕೋಡಿಸಿದ ಕುಲಾವಿ.

ಹಾಕಿದ ಕೆಂಪೇಗೌಡನ ಕಾಲಕ್ಕೂ ಕುಲಾಯಿ ಮೆರೆಯುತ್ತಿತ್ತು ಎಂಬುದು ಅವನ ಪುತ್ಥಳಿಕೆಯಿಂದ ಅರಿತುಕೊಳ್ಳಬಹುದಾಗಿದೆ. ವಿಜಯನಗರದ ವೈಭವ ಕುಗ್ಗಿದಂತೆ ಕುಲಾವಿಯ ಎತ್ತರವೂ ಕಡಿಮೆಯಾಗುತ್ತ ಬಂದಿತು. ನಂತರದ ಶತಕಗಳಲ್ಲಿ ಅದು ಜರಿ ಟೋಪಿಗೆ ಅವಕಾಶ ಮಾಡಿಕೊಟ್ಟಿತು. ಈ ಶತಕದ ನಾಲ್ಕನೆಯ ದಶಕದವರೆಗೂ ಕರ್ನಾಟಕದಲ್ಲಿ ಜರಿ ಕೆಲಸ ಮಾಡಿದ ವೆಲ್ವೆಟ್ ಟೋಪಿಗಳು ಉಳ್ಳವರ ಮಕ್ಕಳ ತಲೆಯ ಮೇಲೆ ರಾರಾಜಿಸುತ್ತಿದ್ದವು - ಗಾಂಧಿ ಟೋಪಿ ಜೋರಾದ ಪೈಪೋಟಿ ಇದ್ದರೂ ಸಹ! ಈಗ ಮಾತ್ರ ತಲೆಯ ಒಳಗನ್ನೇ ಪ್ರತಿಬಿಂಬಿಸುವ ತೆರದಲಿ ಅನಿಸುವಂತೆ ಬರಿದಲೆಯೇ ಸಾಮಾನ್ಯವಾಗಿದೆ. !

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. Dames : ***The book of Duarte Barbosa***

*೨. **ಶ್ರೀಕೃಷ್ಣ ದೇವರಾಯನ ದಿನಚರಿ** : (ಪ್ರ. ಸಂ.) ಸೀತಾರಾಮಯ್ಯ ಎಮ್. ವಿ., ಬೆಂಗಳೂರು ೧೯೮೩, ಪುಟಃ ೧೭...... ಕುಲಾಯಿ, ಕಬಾಯಿ ದಟ್ಟಿಯೀ ದೇಶದ ಹಾಗೆ ಉಡುಗೊರೆ, ಅಡಕೆಯೆಲೆ ಕೊ[illegible] ಕಳಹುವ ಕಟ್ಟಳೆಯಿಲ್ಲವೆಂದು...... ಪುಟ ೨೬

*೩. ರಾಬರ್ಟ್ ಸಿವೆಲ್ : ***ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ,*** (ಕನ್ನಡಕ್ಕೆ-ಡಾ॥ ಸದಾನಂದ ಕನವಳ್ಳಿ) ಹಂಪಿ, ೧೯೯೨, ಡೊಮಿಂಗೊಪ್ಯಾಸ್‌ನ ಕಥನ, ಪುಟ. ೨೮೯

*೪. ***ದೇವಪ್ಪ ಕವಿ ವಿರಚಿತ ರಾಮವಿಜಯ ಕಾವ್ಯ*** : (ಸಂ.) ಟಿ. ಕೇಶವ ಭಟ್., ಬೆಂಗಳೂರು, ೧೯೬೯, ಸಂಧಿ ೪, - ಪದ್ಯ ೬೯

*೫. ***ವಿರೂಪಾಕ್ಷ ಪಂಡಿತಕೃತ ಚೆನ್ನಬಸವಪುರಾಣ*** (ಅಧ್ಯಾಯ ೭-ಪದ್ಯ ೮), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭

*೬. ***ಮಹಾಕವಿ ತ್ರಿವಿಕ್ರಮಭಟ್ಟ ವಿರಚಿತ ನಲಚಂಪೂ*** : ಅಥವಾ ***ದಮಯಂತೀ ಕಥಾ*** (ಸಂಸ್ಕೃತ) : (ಸಂ.) ಕೈಲಾಸಪತಿ (ತ್ರಿಪಾಠೀ), ವಾರಾಣಾಸಿ ೧೯೭೭, ಅಧ್ಯಾಯ ೧ - ಪದ್ಯ - ೫೨

*೭. **Manasollasa of King Somesvara** Pt II: (ಸಂ.) ಶ್ರೀಗೋಂದೇಕರ್ ಜಿ.ಕೆ. ಬರೋಡ, ೧೯೩೯ ಅಧ್ಯಾಯ ೧೧, ವಿಂಶತಿ ೩, ಪದ್ಯ ೨೪

*೮. ***ಗೋವಿಂದ ವೈದ್ಯಕೃತ ಕಂಠೀರವ ನರಸರಾಜ ವಿಜಯ,*** : (ಸಂ.) ಶ್ಯಾಮಾಶಾಸ್ತ್ರಿ ಆರ್., ಮೈಸೂರು ೧೯೭೧ : 'ರಂಗುಮಾಣಿಕದ ಕುಲಾಯಿ ಭೂಪಾಲಗೆ........... ಅಧ್ಯಾಯ' ಪದ್ಯ ೫೯ '**ಶಿರಪೇಷ್‌ತುರಾಯಿ ಕಲ್ಲಿಯನು** ಸರಸಿಜಮುಖಿ ಪಿಡಿದು ನಿಂತಿರ್ದಳು.....' ಅಧ್ಯಾಯ ೨೪, ಪದ್ಯ ೬೯

ಡಾ|| ( ಶ್ರೀಮತಿ ) ರಾಧಾ ಕೃಷ್ಣಮೂರ್ತಿ *

# ಕರ್ನಾಟಕದ ಯುದ್ಧ ನೀತಿಯಲ್ಲಿ ಜ್ಯೋತಿಷ್ಯದ ಪಾತ್ರ

ಜ್ಯೋತಿಷ್ಯವು ವೇದಗಳ ಆರು ಅಂಗಗಳಲ್ಲಿ ಒಂದು ಎಂದು ಹೇಳಲ್ಪಡುತ್ತದೆ. ನಭೋಮಂಡಲದಲ್ಲಿರುವ ಗ್ರಹನಕ್ಷತ್ರಗಳು ಭೂಮಿಯ ಮೇಲಿರುವ ವಸ್ತುಗಳ ಮೇಲೆ ಮುಂದಾಗಿ ಹೇಳ ಬಹುದಾದ ಪ್ರಭಾವವನ್ನು ಬೀರುತ್ತಿರುತ್ತವೆ ಎಂಬ ಮೂಲ ತತ್ತ್ವದ ಆಧಾರದ ಮೇಲೆ ಜ್ಯೋತಿಷ್ಯ ಶಾಸ್ತ್ರ ನಿಂತಿದೆ. ಇದು ಮನುಷ್ಯ ಲೋಕದಲ್ಲಿ ಪರಿಣಾಮ ಬೀರಬಲ್ಲ ಮಳೆ, ಬಿರುಗಾಳಿ, ಸಮುದ್ರದ ಏರಿಳಿತ ಮುಂತಾದವುಗಳ ಬಗ್ಗೆ ಭವಿಷ್ಯ ನುಡಿಯಲು ಸಹಾಯ ವಾಗಿರುವ ಖಗೋಳಶಾಸ್ತ್ರ ಹಾಗೂ ಹವಾಗುಣ ಶಾಸ್ತ್ರಗಳ ಮೂಲತತ್ತ್ವಗಳಿಂದ ಭಿನ್ನವಾದದ್ದೇನು ಅಲ್ಲ.

ಪ್ರಾಚೀನ ಹಾಗೂ ಮಧ್ಯಕಾಲೀನ ಹಿಂದೂ ರಾಜ್ಯ ಪದ್ಧತಿಯನ್ನು ವರ್ಣಿಸುವ ಗ್ರಂಥಗಳ, ಮುಖ್ಯವಾಗಿ ಸಂಸ್ಕೃತ ಗ್ರಂಥಗಳ ಅವಲೋಕನದಿಂದ ನಮಗೆ ತಿಳಿದು ಬರುವುದು ಏನೆಂದರೆ ಜ್ಯೋತಿಷ್ಯಶಾಸ್ತ್ರವು ರಾಜಕುಮಾರರ ವ್ಯಾಸಂಗದ ಒಂದು ಮುಖ್ಯ ಅಂಗವಾಗಿ ಗೊತ್ತುಪಡಿಸಲ್ಪಟ್ಟಿದೆ. ರಾಜ್ಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಮುಖ್ಯ ತೀರ್ಮಾನಗಳು ಜ್ಯೋತಿಷ್ಯಶಾಸ್ತ್ರಕ್ಕೆ ಅನುಗುಣವಾಗಿ ಮಾಡಲ್ಪಡುತ್ತಿದ್ದವು. ಪ್ರಾಚೀನ ಕರ್ನಾಟಕದ ಯುದ್ಧ ಪದ್ಧತಿಗಳಲ್ಲಿ (ಪ್ರಯತ್ನಗಳಲ್ಲಿ) ಜ್ಯೋತಿಷ್ಯ ಅತಿ ಮುಖ್ಯವಾದ ಪಾತ್ರವನ್ನು ವಹಿಸುತ್ತಿತ್ತು. ಸೈನ್ಯದ ಚಲನೆ, ಕಾರ್ಯಾಚರಣೆಯ ಯೋಜನೆ ಮತ್ತು ನಿರ್ದೇಶನ ಹಾಗೂ ವೈರಿಯ ಕೋಟೆಯನ್ನು ಮುತ್ತಿಗೆ ಹಾಕಿ ಎದುರಿಸಲು ಬೇಕಾದ ತಂತ್ರಗಳು ಜ್ಯೋತಿಷ್ಯದ ಲೆಕ್ಕಾಚಾರದಂತೆ ರೂಪಿಸಲ್ಪಡುತ್ತಿದ್ದವು.

ಯುದ್ಧ ನೀತಿಗೆ ಸಂಬಂಧಪಟ್ಟ ಜ್ಯೋತಿಷ್ಯಶಾಸ್ತ್ರವನ್ನು ಯುದ್ಧ ಜಯಾರ್ಣವ ಅಂದರೆ ಯುದ್ಧದ ಶುಭಾಶುಭ ಪರಿಣಾಮವನ್ನು ಸೂಚಿಸುವ ಒಂದು ಶಾಸ್ತ್ರ ಎಂದು ಹೇಳಲ್ಪಟ್ಟಿದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ರಾಜ್ಯಾಂಗಗಳ ಮುಖ್ಯ ಅಂಗಗಳಲ್ಲಿ ಕೋಟೆಗಳಿಗೆ ಬಹಳ ಮಹತ್ವ ಕೊಡಲ್ಪಡುತ್ತಿತ್ತು. ಗಿರಿದುರ್ಗ, ಜಲದುರ್ಗ, ವನದುರ್ಗ, ಸಮುದ್ರದುರ್ಗ ಎಂದು ಅನೇಕ ವಿಧವಾದ ಕೋಟೆಗಳು ಕರ್ನಾಟಕದ ಇತಿಹಾಸದಲ್ಲಿ ಮುಖ್ಯಪಾತ್ರ ವಹಿಸಿವೆ. ಕೋಟೆಗಳು ಸೇನಾ ಪಡೆಗಳಿಗೆ ಅತಿಮುಖ್ಯವಾಗಿದ್ದುದರಿಂದ ಕೋಟೆಗಳನ್ನು ವಶಪಡಿಸಿಕೊಳ್ಳುವುದು ಮತ್ತು ವೈರಿಗಳನ್ನು ನಾಶಪಡಿಸುವುದು ಒಂದು ಮುಖ್ಯ ಕಾರ್ಯಾಚರಣೆ ಹಾಗೂ ವಿವಿಧೋಪಾಯಗಳಿಂದ ಕೂಡಿತ್ತು. ರಾಜನ ಮತ್ತು ಆತನ ಸೈನಿಕರು ಜಯಾಪಜಯ ಪಡೆಯುವುದನ್ನು ಜ್ಯೋತಿಷ್ಯದ ಎಣಿಕೆಯ ವಿಧಾನ ಕೋಟಾಚಕ್ರದ ಮೂಲಕ ಲೆಕ್ಕ ಹಾಕಿ ತಿಳಿದುಕೊಂಡು ಅದಕ್ಕೆ ಅನುಗುಣವಾಗಿ ಯುದ್ಧಕಾರ್ಯಗಳನ್ನು ಮಾಡುತ್ತಿದ್ದರು. ಯುದ್ಧತಂತ್ರಗಳಲ್ಲಿ ಕೋಟೆಗಳನ್ನು ವಶಪಡಿಸಿ ಅದರಲ್ಲಿ ಅಡಗಿರುವ ವೈರಿಯನ್ನು ಪರಾಜಯಗೊಳಿಸುವದು, ಇದು ಅತಿ ಮುಖ್ಯ ಅಂಶ. ಕರ್ನಾಟಕದ ರಾಜರು ''ಕೊಟಾಚಕ್ರ'' ಮುಂತಾದ ಜ್ಯೋತಿಷ್ಯಕ್ಕೆ ಸಂಬಂಧ ಪಟ್ಟ ಯಂತ್ರಗಳನ್ನು ಪ್ರಯೋಗ ಮಾಡಿ ತಮಗೆ ಜಯ ದೊರಕುವ ರೀತಿಯಲ್ಲಿ ಉಪಾಯಗಳನ್ನು ಮಾಡುತ್ತಿದ್ದರು.

ತತೋ ವೇಲಾಪುರೀಂ ಗತ್ವಾ ಚತುರಂಗ ಬಲಾನ್ವಿತಃ
ಪ್ರಾಕಾರಾಶ್ಚ ಬಹಿಸ್ತಸ್ಮಾತ್ ಶಿಬಿರಂ ಪರ್ಯಕಲ್ಪಯತ್
ಕೋಟಾಚಕ್ರಾಭಿಧ್ಯಾನಜ್ಞೈಃ ವಿಜ್ಞಾಯಚ ಬಲಾಬಲಮ್
ಸಮಂತತಶ್ಚ ಪ್ರಾಕಾರಂ ರುರೋಧ ಸಹಸಾ ಬಲೈಃ VII ೧೪

ಕೆಳದಿ ಅರಸನಾದ ಶಿವಪ್ಪನಾಯಕನು ಕೋಟಾಚಕ್ರದ ವಿಧಾನವನ್ನು ಜ್ಯೋತಿಷ್ಯರಿಂದ ತಿಳಿದುಕೊಂಡು ಅದರ ಬಲಾ ಬಲವನ್ನು ಅನುಸರಿಸಿ ವೇವಾಪುರಿ ಕೋಟೆಯನ್ನು ಹಿಡಿದನು ಎಂದು ಹೇಳಲಾಗಿದೆ.

ನರಪತಿಜಯಚರ್ಯ, ಅಗ್ನಿ ಪುರಾಣ ಮುಂತಾದ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ 'ಕೋಟಚಕ್ರ' ಎಂಬ ಯಂತ್ರ ವಿಧಾನ ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ. ಕರ್ನಾಟಕದ ರಾಜರು ಇದನ್ನು

* 'ಶುಭೋದಯ', ೩೮, ೧೧ನೇ ಮುಖ್ಯ ರಸ್ತೆ, ಮಲ್ಲೇಶ್ವರಂ ಪಶ್ಚಿಮ, ಬೆಂಗಳೂರು – ೫೬೦ ೦೫೫

ಪ್ರಯೋಗಿಸುತ್ತಿದ್ದರು ಎಂಬ ವಿಷಯ ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾ, ಶಿವತತ್ತ್ವರತ್ನಾಕರ ಮುಂತಾದ ಗ್ರಂಥಗಳಿಂದ ತಿಳಿದು ಬರುತ್ತದೆ.

ಕೆಳದಿಯ ಬಸವಪ್ಪ ನಾಯಕನು ತನ್ನ ಅಪೂರ್ವ ವಿಶ್ವಕೋಶ ಗ್ರಂಥದಲ್ಲಿ (ಶಿವತತ್ತ್ವರತ್ನಾಕರ) ತನ್ನ ವಂಶದ ಪೂರ್ವಜ ಚೌಡಪ್ಪನಾಯಕನಿಂದ ಪ್ರಾರಂಭಿಸಿ ಕೆಳದಿ ಇತಿಹಾಸವನ್ನು ಸಂಸ್ಕೃತದಲ್ಲಿ ಹೇಳಿದ್ದಾನೆ. ಸಂಸ್ಕೃತ ಸಾಹಿತ್ಯಕ್ಕೆ ಇದು ಒಂದು ಮಹತ್ವವಾದ ಕೊಡುಗೆ. ಈ ಗ್ರಂಥದಲ್ಲಿ, ರಾಜನೀತಿಯಲ್ಲೂ ಮತ್ತು ಯುದ್ಧನೀತಿಯಲ್ಲೂ ಕೋಟಾಚಕ್ರ ಮುಂತಾದ ಜ್ಯೋತಿಷ್ಯದ ಯಂತ್ರ ವಿಧಾನಗಳನ್ನು ಅಳವಡಿಸಿಕೊಂಡಿದ್ದರು ಎಂದು ಸ್ಪಷ್ಟವಾಗಿ ಹೇಳಿದ್ದಾನೆ:

> ದುರ್ಗಸ್ಥೋ ದುರ್ಗಮಶ್ಶತ್ರುಃ ಅಸಾಧ್ಯೋಯೇನ ಸಿಧ್ಯತಿ
> ಕೋಟಾ ಚಕ್ರಾಬಿಧಂ ಶಾಸ್ತ್ರಂ ತತ್ ಬ್ರವೀಮಿ ಸುಧೀಃ ಶೃಣು ॥
> VII ೧೪-೧೪

ಈ ಯಂತ್ರಗಳ ಮೂಲಕ ರಾಶಿ ಗ್ರಹಗಳ ಸ್ಥಾನ ಮಾನಗಳನ್ನು ಅವುಗಳ ಪ್ರಭಾವವನ್ನು ತಿಳಿದುಕೊಂಡು ಅದಕ್ಕೆ ಅನುಗುಣವಾಗಿ ವಿಜಯಯಾತ್ರೆಗೆ ಯಾವ ದಿಕ್ಕಿನಿಂದ, ಯಾವ ಸ್ಥಾನದಿಂದ ಹೊರಡಬೇಕು ಎಂದು ನಿಶ್ಚಯ ಮಾಡಿಕೊಂಡು ಅದರ ಪ್ರಕಾರ ಸೈನ್ಯ ಚಲನೆ ಮಾಡಿದರೆ ಅಸಾಧ್ಯವಾದ ಶತ್ರುವನ್ನೂ ಕೂಡ ಗೆಲ್ಲಬಹುದು ಎಂಬ ನಂಬಿಕೆ ವಿಶ್ವಾಸ ಇತ್ತು.

ಕೋಟಾಚಕ್ರಕ್ಕೆ ಬೇಕಾಗಿರುವ ಚಿತ್ರವನ್ನು ಸಮ ಚತುಷ್ಕೋಣ, ದೀರ್ಘಚತುಷ್ಕೋಣ, ತ್ರಿಕೋಣ, ಮಂಡಲ, ಅಂಡಾಕೃತಿ, ಅರ್ಧಚಂದ್ರ, ಗೋಸ್ತನ, ಧನುಷಾಕಾರ ಮುಂತಾದ ರೂಪದಲ್ಲಿ ಬರೆದು ಅವುಗಳ ಮುಖ್ಯ ಮತ್ತು ಕೋಣ ಬಿಂದುಗಳಲ್ಲಿ ನಕ್ಷತ್ರಗಳನ್ನು ಹಾಗೂ ರಾಶಿಗಳನ್ನು ಕ್ರಮವಾಗಿ ಗುರ್ತಿಸಿ, ಅವುಗಳ ಮೂಲಕ ಗ್ರಹಗಳ ಸ್ಥಿತಿಗಳನ್ನು ಗಣಿಕೆ ಮಾಡಿ ವಿಜಯಯಾತ್ರೆ ಅಥವಾ ದಂಡಯಾತ್ರೆಗೆ ಪ್ರಸ್ಥಾನ ಮಾಡುತ್ತಿದ್ದರು. ಚಿತ್ರದ ಮಧ್ಯದಲ್ಲಿ ಇರುವ ನಕ್ಷತ್ರಗಳ ಜೊತೆ ಹಿಂಸಾಭಾವದ ಪ್ರತಿಕೂಲದ ಗ್ರಹಗಳು ಕೂಡಿ ಇದ್ದರೆ ನಗರನಾಶ ಸೂಚಿಸುತ್ತದೆ. ಮಧ್ಯದಲ್ಲಿ ಪ್ರತಿಕೂಲ ಗ್ರಹಗಳು, ಹೊರಗೆ ಅನುಕೂಲ ಗ್ರಹಗಳಿದ್ದರೆ ಶತ್ರು ನಾಶವಾಗಿ ಕೋಟೆಯನ್ನು ಹಿಡಿಯುವುದು ಖಂಡಿತ।

ಮತ್ತೊಂದು ಚಿತ್ರ ಹೀಗೆ ಇದೆ. ಪೂರ್ವದಿಂದ ಪ್ರಾರಂಭಿಸಿ ಎಂಟು ಮೂಲೆಗಳಲ್ಲಿಯೂ ಕ್ರಮವಾಗಿ ಅ,ಕ,ಚ,ಟ,ತ,ಪ,ಯ,ಸ, ಈ ಅಕ್ಷರಗಳನ್ನು ಬರೆಯಬೇಕು. ಈ ಅಕ್ಷರಗಳು ಕ್ರಮವಾಗಿ ರಣಹದ್ದು, ಬೆಕ್ಕು, ಸಿಂಹ, ಹುಲಿ, ಸರ್ಪ, ಇಲಿ, ಆನೆ ಮತ್ತು ಮೊಲ ಇವುಗಳ ಪ್ರತೀಕ. ಇವುಗಳಲ್ಲಿ ಕೆಲವು ಭಕ್ಷಕ ಪ್ರಾಣಿಗಳು ಮತ್ತೆ ಕೆಲವು ಭಕ್ಷ್ಯ ಪ್ರಾಣಿಗಳು. ಶತ್ರು ಭಕ್ಷ್ಯದಿಕ್ಕಿನಲ್ಲಿ ಇದ್ದರೆ ರಾಜನಿಗೆ ಜಯವಾಗುತ್ತದೆ. ಭಕ್ಷಕ ದಿಕ್ಕಿನಲ್ಲಿ ಶತ್ರು ಇದ್ದರೆ ಅವನನ್ನು ಜಯಿಸುವುದು ಕಷ್ಟಕರ.

ಕೋಟಾಚಕ್ರ ಅಥವಾ ಕೋಷ್ಟಚಕ್ರದಂತೆ ಜ್ಯೋತಿಷ್ಯ ಶಾಸ್ತ್ರದಲ್ಲಿ ರಾಹುಚಕ್ರ, ಕೂರ್ಮಚಕ್ರ ಮುಂತಾದ ಕೆಲವು ಯಂತ್ರ ವಿಧಾನಗಳು ಹೇಳಲ್ಪಟ್ಟಿವೆ. ಇವಲ್ಲದೆ ಕರ್ನಾಟಕವನ್ನು ಆಳುತ್ತಿದ್ದ ರಾಜರು ಸ್ವರ ಬಲಮ್, ಭೂಬಲಮ್ ಮುಂತಾದ ಅಂಶಗಳಿಗೂ ಮಹತ್ವ ಕೊಡುತ್ತಿದ್ದರು.

> ತರುಮಾನ್ನಿತ್ಯಂ ಪ್ರಯೋಕ್ತವ್ಯಾ ಎತೆ ವೈರಿಷು ಭೂಭೃತಾ।
> ಜ್ಞಾತ್ವಾ ಸ್ವರ ಬಲಂ ರಾಜಾ ಮುಹೂರ್ತ ಬಲಮೇವ ಚ।
> ಕುರ್ವೀತಂ ಸರ್ವಕಾರ್ಯಾಣಿ ಸಂಗ್ರಾಮಂ ತು ವಿಶೇಷತಃ ॥

ವಿಜಯಯಾತ್ರೆಗೆ ಹೊರಟಿರುವ ರಾಜನ ಜಯ ಅಥವಾ ಅವನು ನಾಸಾಪುಟದಿಂದ ಉಸಿರಾಡುವ ವಾಯುವಿನ ಬಲಕ್ಕೆ ಅನುಗುಣವಾಗುತ್ತದೆ. ಶುಕ್ಲಪಕ್ಷ, ಕೃಷ್ಣಪಕ್ಷ ಮತ್ತು ತಿಥಿಗಳಿಗೆ ಅನುಸರಿಸಿ ಒಮ್ಮೊಮ್ಮೆ ಚಂದ್ರಸ್ವರ (ವಾಮಸ್ವರ) ಮತ್ತೊಮ್ಮೆ ಸೂರ್ಯಸ್ವರ (ದಕ್ಷಿಣ ಸ್ವರ) ದಿಂದ ಉಸಿರಾಡುತ್ತೇವೆ. ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ನಿಯಮಗಳಿಗೆ ಅನುಗುಣವಾಗಿ ತನ್ನ ಸ್ವರಬಲವನ್ನು ಪರಿಶೀಲಿಸಿ ನಿರ್ಧರಿಸಲ್ಪಟ್ಟ ದಿಕ್ಕಿನಲ್ಲಿ ಹೊರಟರೆ ಅವನಿಗೆ ಜಯವಾಗುತ್ತದೆ.

ಇದೇ ರೀತಿ ''ಭೂಬಲ' ಅಂದರೆ ಭೂಮಿಯ ಬಲವನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪರಿಶೀಲಿಸಿ ವಿಜಯಯಾತ್ರೆಗೆ ಹೊರಡಬೇಕು. ಇದಕ್ಕೂ ಒಂದು ಚಿತ್ರ ಬರೆಯಬೇಕು. ಇದು ಅಷ್ಟಕೋಣದ ಒಂದು ಚಿತ್ರ. ಜಯ ಬಯಸುವ ರಾಜನು ಯೋಗಿನೀ ಬಲವನ್ನು ಕೂಡ ನೋಡಬೇಕು. ಅಷ್ಟಯೋಗಿನೀಗಳೂ ಒಂದೊಂದು ದಿವಸ ಒಂದೊಂದು ದಿಕ್ಕಿನಲ್ಲಿ ಇರುತ್ತಾರೆ. ಅನುಕೂಲವಾಗಿರುವ ಯೋಗಿನೀಯರು ತನ್ನ ಹಿಂದೆ ಅಥವಾ ಪಾರ್ಶ್ವದಿಕ್ಕಿನಲ್ಲಿ ಇರುವಾಗ ರಾಜನು ವಿಜಯಯಾತ್ರೆ ಪಾರ್ರಂಭಿಸ ಬೇಕು (ಬ್ರಹ್ಮಾಣಿ, ಮಾಹೇಶೀ, ಕೌಮಾರಿ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಂಡಿಕಾ, ಮಹಾಲಕ್ಷ್ಮಿ).

ಇದಲ್ಲದೆ ಪಂಚಾಂಗಗಳಲ್ಲಿ ಸೂಚಿಸಲ್ಪಟ್ಟಿರುವ ತಿಥಿಗಳು, ಕರಣ, ಮುಹೂರ್ತ, ಲಗ್ನ, ಯೋಗ ಇತರ ಶಕುನಗಳು ಮತ್ತು ಶರೀರದ ಕಂಪನಗಳನ್ನು ಪರಿಶೀಲಿಸಿ ಯುದ್ಧಕ್ಕೆ ಪ್ರಸ್ಥಾನ ಮಾಡುತ್ತಿದ್ದರು.

ಪ್ರಾಚೀನ ಜ್ಯೋತಿಷ್ಯಶಾಸ್ತ್ರವನ್ನು ಅರ್ಥವಿಲ್ಲದ ಮೂಢ ನಂಬಿಕೆ ಎಂದು ಕೆಲವರು ನಿಂದಿಸಬಹುದು. ಆರು ವೇದಾಂಗಗಳಲ್ಲಿ ಒಂದಾದ ಜ್ಯೋತಿಷ್ಯಶಾಸ್ತ್ರವು ಸರಿಯಾದ ಲೆಕ್ಕಾಚಾರದಿಂದ ನಭೋಮಂಡಲದ ಗ್ರಹಗಳ ಸ್ಥಾನವನ್ನು ಗುರುತಿಸುವುದೇ ಅಲ್ಲದೇ ಪ್ರಕೃತಿಯಲ್ಲಿ ಆಗಬಹುದಾದ ವಿಚಾರಗಳ ವೀಕ್ಷಣೆ, ದೇಹಶಾಸ್ತ್ರ ಹಾಗೂ ನರಮಂಡಳ ತಿಳುವಳಿಕೆ, ಭೂಮಿ ಮತ್ತು ವಾಸಸ್ಥಾನಗಳ

ಬೇರೆ ಬೇರೆ ರೀತಿಯ ಕಂಪನಗಳ ಶಕ್ತಿಯ ಜ್ಞಾನ ಮುಂತಾದುವುಗಳನ್ನು ಗಣಿತ ರೀತಿಯ ಲೆಕ್ಕಾಚಾರದಿಂದ ತಿಳಿಸುತ್ತದೆ. ಅತಿ ಮುಖ್ಯ ಸಾಧನೆಗಳಾದ ಹಾಗೂ ಯುದ್ಧಪ್ರಯತ್ನಗಳಲ್ಲಿ ಉಪಯೋಗಿಸಲ್ಪಡುತ್ತಿದ್ದ ಕೋಟಾಚಕ್ರ, ಭೂಬಲ ಚಕ್ರ ಮುಂತಾದವೂ ನಿರರ್ಥಕ ಎಂಬುದು ಸರಿಯಲ್ಲ. ಜ್ಯೋತಿಷ್ಯ ಶಾಸ್ತ್ರವೂ, ಕೂಡ ನಿಶ್ಚಯವಾಗಿ ವಿಜ್ಞಾನದ ತಳಹದಿ ಹೊಂದಿದೆ ಮತ್ತು ಕರ್ನಾಟಕದ ಅರಸರೂ ಈ ಶಾಸ್ತ್ರಕ್ಕೆ ಮುಖ್ಯತ್ವ ಕೊಟ್ಟು ಈ ಶಾಸ್ತ್ರವನ್ನು ಮತ್ತು ಈ ಶಾಸ್ತ್ರದ ಪಂಡಿತರನ್ನು ಪೋಷಿಸುತ್ತಿದ್ದರು ಎಂಬ ವಿಷಯ ಸ್ಪಷ್ಟವಾಗುತ್ತದೆ. ಕರ್ನಾಟಕದ ರಾಜನೀತಿಯಲ್ಲಿ ಎಷ್ಟು ಮಟ್ಟಕ್ಕೆ ಜ್ಯೋತಿಷ್ಯಶಾಸ್ತ್ರ ಸಹಯೋಗ ನೀಡಿದೆ ಎಂಬುದೇ ಈ ಪ್ರಬಂಧದ ಉದ್ದೇಶ್ಯ.

ಡಾ॥ ಡಿ. ಎಸ್. ಯೋಗೀಶ್ವರಪ್ಪ *

# ಮದ್ದಗಿರಿ ಮಹಾನಾಡ ಪ್ರಭುಗಳ ರಕ್ಷಣಾ ವ್ಯವಸ್ಥೆ

ತುಮಕೂರು ಜಿಲ್ಲೆಯ ಉತ್ತರ ಭಾಗದಲ್ಲಿ ವಿಜಯನಗರ ವಿಜಯನಗರೋತ್ತರ ಕಾಲದಲ್ಲಿ ಮುಮ್ಮಡಿಪಟ್ಟಣ, ಬಿಜ್ಜಾವರ, ಮದ್ದಗಿರಿಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದವರು **ಮಹಾನಾಡ ಪ್ರಭುಗಳು.** ಇವರ ಸಾಮ್ರಾಜ್ಯವನ್ನು ಮುಮ್ಮಡಿ ಸಾಮ್ರಾಜ್ಯವೆಂದೂ, ಈ ಅರಸರನ್ನು ಮುಮ್ಮಡಿ ಪ್ರಭುಗಳೆಂದೂ ಮಹಾನಾಡಪ್ರಭುಗಳೆಂದೂ, ಬಿಜ್ಜಾವರ ಪುರವರಾಧೀಶ್ವರರೆಂದೂ ಕರೆಯಲಾಗಿದೆ.[*೧] ಇಲ್ಲಿ ಮುಮ್ಮಡಿ ಎಂದರೆ ಮೂರನೆಯದು ಎಂದು ಅರ್ಥೈಸಿದರೆ ತಪ್ಪಾಗುತ್ತದೆ. ಇವರ ಇತಿಹಾಸವನ್ನು ಅವಲೋಕಿಸಿದಾಗ ಅನೇಕ ಜನ ರಾಜರ ಹೆಸರಿನ ಮೊದಲು - ಮುಮ್ಮಡಿ ಚಿಕ್ಕಪ್ಪಗೌಡನ ಮಗ ಮುಮ್ಮಡಿ ಸಂಗಪ್ಪಗೌಡ-ಮುಮ್ಮಡಿ ಎಂಬ ಹೆಸರು ಕಂಡುಬರುತ್ತದೆ. ಆದುದರಿಂದ ಇವರು ಆರಂಭದಲ್ಲಿ ಮುಮ್ಮಡಿ ಪಟ್ಟಣದಲ್ಲಿ ನಿಂತು ಆಳ್ವಿಕೆ ಮಾಡತೊಡಗಿದ್ದುದರಿಂದ, ಆ ಊರಿನ ಹೆಸರನ್ನು ತಮ್ಮ ಹೆಸರಿನ ಮೊದಲು ಸೇರಿಸಿಕೊಂಡಿದ್ದಾರೆ ಎಂದು ಹೇಳಬಹುದು. ಈ ಹೆಸರನ್ನೇ ಏಕೆ ಆ ಊರಿಗೆ ನಾಮಕರಣ ಮಾಡಿದರು ಎನ್ನುವುದು ಸಂಶೋಧನಾತ್ಮಕವಾದ ವಿಚಾರ. ಇಂತಹ ಮಹಾನಾಡ ಪ್ರಭುಗಳು ಸುಮಾರು ೩೧/೨ ಶತಮಾನಗಳ ಕಾಲ ತುಮಕೂರು ಜಿಲ್ಲೆಯ ಉತ್ತರ ಭಾಗದಲ್ಲಿ ತಮ್ಮ ಪ್ರಭಾವವನ್ನಿಟ್ಟುಕೊಂಡಿದ್ದುದು ಇತಿಹಾಸದಲ್ಲಿ ದಾಖಲಾಗಿದೆ. ಆದರೆ ಈ ರಾಜ್ಯ ಇಷ್ಟು ದೀರ್ಘಕಾಲ ಅಸ್ತಿತ್ವದಲ್ಲಿರಬೇಕಾಗಿದ್ದರೆ, ಅವರು ಉತ್ತಮವಾದ ರಕ್ಷಣಾವ್ಯವಸ್ಥೆಯನ್ನು ಹೊಂದಿರಲೇಬೇಕು. ಆರಂಭದಲ್ಲಿ ಇವರು ವಿಜಯನಗರದವರಿಗೆ ಅಧೀನರಾಗಿ, ನಂತರ ಕೆಲ ಕಾಲ ಸ್ವತಂತ್ರರಾಗಿ, ಕೊನೆಗೆ ಮೈಸೂರು ಒಡೆಯರ ಅಧೀನಕ್ಕೊಳಪಟ್ಟು ಹೈದರಾಲಿ, ಟಿಪ್ಪುವಿನ ಕಾಲದಲ್ಲಿ ರಾಜ್ಯ ಕಳೆದುಕೊಳ್ಳಬೇಕಾಯಿತು. ಈ ಹಿನ್ನೆಲೆಯಲ್ಲಿ ಇವರ ರಕ್ಷಣಾ ವ್ಯವಸ್ಥೆಯನ್ನು ಪರಿಶೀಲಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಮಹಾನಾಡ ಪ್ರಭುಗಳ ರಕ್ಷಣಾ ವ್ಯವಸ್ಥೆಯನ್ನು ನಾವು ಸೇನಾಬಲ ಮತ್ತು ಕೋಟೆಗಳೆಂದು ಗುರ್ತಿಸಬಹುದು.

ರಾಜ್ಯವನ್ನು ಶತ್ರುಗಳ ದಾಳಿಯಿಂದ ರಕ್ಷಿಸಲು ಹಾಗೂ ತಮ್ಮ ರಾಜ್ಯವನ್ನು ವಿಸ್ತರಿಸಲು ಸೇನೆ ಅವಶ್ಯಕ. ಕೌಟಿಲ್ಯನು ಹೇಳಿರುವ ಸಪ್ತಾಂಗಗಳಲ್ಲಿ ''ಸೇನಾಬಲ'' ಪ್ರಮುಖವಾದ ಅಂಗ. ವಿಜಯನಗರ ಆಡಳಿತ ವ್ಯವಸ್ಥೆಯಲ್ಲಿ ನಾಯಕರನ್ನು ಆಯಾ ಪ್ರಾಂತ್ಯದ ಸೇನಾ ಮುಖಂಡರನ್ನಾಗಿ ನೇಮಿಸಲಾಗಿತ್ತು. ಮದ್ದಗಿರಿಯ ಮಹಾನಾಡ ಪ್ರಭುಗಳು ಇಂತಹ ಒಂದು ವ್ಯವಸ್ಥೆಯ ಗುಂಪಿಗೆ ಸೇರಿದ್ದು, ಇವರು ಶಾಂತಿಪಾಲನೆ, ದಾಳಿಗಳನ್ನು ಹಿಮ್ಮೆಟ್ಟಿಸಲಿಕ್ಕೆ ಮುಂತಾದ ಸಾಂದರ್ಭಿಕ ಸಮಸ್ಯೆಗಳನ್ನು ಎದುರಿಸಲಿಕ್ಕೆ ತಮ್ಮದೇ ಆದ ಸೈನಿಕ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಇವರ ಸೈನ್ಯವನ್ನು ಕುರಿತಾದ ಮಾಹಿತಿಗಳು ಅಲ್ಪವಾದರೂ ಸಮಕಾಲೀನ ಸಾಹಿತ್ಯ ಮತ್ತು ಮೂರ್ತಿಶಿಲ್ಪಗಳ ಆಧಾರದ ಮೇಲೆ ಇವರ ಸೈನ್ಯವನ್ನು ಕುರಿತು ಹೀಗೆ ಹೇಳಬಹುದು. ಇವರು ತ್ರಿರಂಗದಳ - ಕಾಲ್ದಳ, ಅಶ್ವದಳ, ಗಜದಳ-ಸೈನಿಕ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು.[*೨] ಮಹಾನಾಡ ಪ್ರಭುವಾದ ಇಮ್ಮಡಿ ಚಿಕ್ಕಭೂಪಾಲನು ಒಂದು ಸಾವಿರ ಪದಾತಿ, ಒಂದು ಸಾವಿರ ಅಶ್ವದಳವನ್ನು ಹೊಂದಿದ್ದನೆಂದು ಗೊತ್ತಾಗುತ್ತದೆ.[*೩] ಮಧುಗಿರಿ ಸುತ್ತಮುತ್ತಲ ಪ್ರದೇಶಗಳಲ್ಲಿ ದೊರಕಿರುವ ಮೂರ್ತಿಶಿಲ್ಪ ಹಾಗೂ ವೀರಗಲ್ಲುಗಳ ಆಧಾರದ ಮೇಲೆ ಯುದ್ಧದಲ್ಲಿ ಕುದುರೆಗಳನ್ನು ಬಳಸುತ್ತಿದ್ದುದು ಕಂಡುಬರುತ್ತದೆ. ಇವರು ಯುದ್ಧದಲ್ಲಿ ಬಿಲ್ಲು, ಬಾಣ[*೪], ಖಡ್ಗ[*೫], ಈಟಿ[*೬], ಕವಣೆಕಲ್ಲು[*೭] ಮುಂತಾದವುಗಳನ್ನು ಬಳಸುತ್ತಿದ್ದುದೇ ಅಲ್ಲದೆ ತುಪಾಕಿ, ಪೆಟಲು, ಗುಂಡುಗಳನ್ನು[*೮] ಕೂಡಾ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.

ಮಹಾನಾಡ ಪ್ರಭುಗಳ ಸೈನ್ಯವನ್ನು ಸುವ್ಯವಸ್ಥೆಗೊಳಿಸಿದವನೆಂದರೆ,ಇಮ್ಮಡಿ ಚಿಕ್ಕಭೂಪಾಲ. ಏಕೆಂದರೆ,ಇವನು ಮಿಡಿಗೇಸಿಯ

* ರೀಡರ್ ಮತ್ತು ಮುಖ್ಯಸ್ಥ, ಇತಿಹಾಸ ವಿಭಾಗ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು - ೫೭೨ ೧೦೨

ನಾಗಿರೆಡ್ಡಿ, ಕೊರಟಗೆರೆಯ ರಣಭೈರೇಗೌಡ, ಹಾವಳಿಯ ಭೈರೇಗೌಡ, (ವಿಜಯನಗರದ ವೆಂಕಟಪತಿ ರಾಯ ನೊಂದಿಗೆ) ತನ್ನ ರಾಜ್ಯವನ್ನು ರಕ್ಷಿಸಲಿಕ್ಕೆ ಯುದ್ಧ ಮಾಡಬೇಕಾದ ಪ್ರಸಂಗ ಒದಗಿ ಬಂದುದರಿಂದ ಅವನು ಸುಸಜ್ಜಿತ ಬಲಿಷ್ಠ ಸೈನ್ಯವನ್ನು ಕಟ್ಟಲೇಬೇಕಾಯಿತು. ಬಯಲುನಾಡಿನ ಸೀಮೆಯಲ್ಲಿದ್ದ ಈ ಪಾಳೆಯಪಟ್ಟಿಗೆ ಸೀಮಿತವಾದ ಆದಾಯವಿದ್ದುದರಿಂದ ಇದ್ದುದರಲ್ಲಿಯೇ ಅವನು ಪ್ರಯತ್ನಿಸಿ ಆರಂಭದಲ್ಲಿ ಯಶಸ್ಸನ್ನು ಕಂಡರೂ ಕೂಡಾ, ಅಂತಿಮವಾಗಿ ತನ್ನ ರಾಜ್ಯವನ್ನು ಶತ್ರುಗಳ ಧಾಳಿಯಿಂದ ರಕ್ಷಿಸಲಾಗಲಿಲ್ಲ. ಆದರೂ ಇಮ್ಮಡಿ ಚಿಕ್ಕಭೂಪಾಲನೆ ಹಾವಳಿ ಭೈರೇಂದ್ರನಿಂದ ರಾಜ್ಯ ರಕ್ಷಿಸಲು ಮಿಡಿಗೇಸಿಯ ಚನ್ನಪ್ಪನಾಯಕ, ಉಗ್ಗಡದ ದಿವ್ಯಲಿಂಗ, ಕೊಡಗಿಹಳ್ಳಿ ಬಸವ, ದೊಡ್ಡೇರಿಯ ಕಡುಗಲಿ ಕೆಂಪ*[೯] ಬುಕ್ಕಪಟ್ಟಣದ ಕೆಂಪಣ್ಣಗೌಡ, ತೆರೆಯೂರ ನಂಜ, ಗರುಣೆಯ ತೋಟಿ, ಮಣ್ಣೂರ ಮಲ್ಲ*[೧೦], ದಾಳಿವಾಟದ ಸಿದ್ಧ, ಮೋದೆದ ತಿಮ್ಮ, ಬೇಲೆಯ ಹೊನ್ನಗಿರಿ*[೧೧] ಸೂರೇನಹಳ್ಳಿಯ ಕೊಟ್ಟೂರ, ಮುದ್ದೇನಹಳ್ಳಿ ತಮ್ಮ, ತೋವಿನಕೆರೆ ತೋಟಿ ದಳವಾಯಿ*[೧೨], ತಾರಿಗೇರಿಯ ನಾಗಿನಾಯಿಕ, ಪೆನ್ನ, ಮಲ್ಲಿನಾಗ, ಅಗಸರ ಬಸವ*[೧೩] ವೀರ‌ತಿಮ್ಮ ಸೆಟ್ಟಿಪೋತ, ತಳಾರ ಗಜ್ಜಿಗೆ, ಕಾಮಣ್ಣ, ಕೊತ್ತಳ ದಯ್ಯ*[೧೪] ಇವರೊಂದಿಗೆ ಪ್ರಯತ್ನಿಸಿದರೂ ಕೂಡಾ ಫಲವಾಗಲಿಲ್ಲ ಎಂದು ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯವು ತಿಳಿಸುತ್ತದೆ. ಇದು ಮಹಾನಾಡ ಪ್ರಭುಗಳು ರಕ್ಷಣಾ ವ್ಯವಸ್ಥೆಯ ದುರ್ಬಲತೆಯನ್ನು ಸೂಚಿಸುತ್ತದೆ ಎಂದು ಹೇಳಿದರೆ ತಪ್ಪಾಗ ಲಾರದು.

**ಕೋಟೆ**

ಸಪ್ತಾಂಗಗಳಲ್ಲಿ ಮತ್ತೊಂದು ಪ್ರಮುಖ ಅಂಶ ದುರ್ಗ ಅಥವಾ ಕೋಟೆ. ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಕೋಟೆಗಳನ್ನು ಕಟ್ಟಲು ಒತ್ತುಕೊಟ್ಟಿದ್ದಾರೆ. ರಾಜನು ತನ್ನ ಪರಿವಾರ, ಜನರು ಮತ್ತು ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಗೋಡೆ ಮತ್ತು ಬಾಗಿಲುಳ್ಳ ಕೋಟೆಯನ್ನು ಅವಶ್ಯಕವಾಗಿ ಕಟ್ಟಲೇಬೇಕೆಂದು ರಾಜನೀತಿ ಪ್ರಕಾಶದಲ್ಲಿ ಬೃಹಸ್ಪತಿಯ ವಚನವು ಉಲ್ಲೇಖಿಸುತ್ತಿದೆ.*[೧೫] ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಕೋಟೆಯ ಅವಶ್ಯಕತೆಯ ಬಗ್ಗೆ ಸವಿಸ್ತಾರವಾಗಿ ಬರೆದಿದ್ದಾನೆ. ರಾಜನು ತನ್ನ ರಾಜ್ಯದ ಎಲ್ಲೆಯ ನಾಲ್ಕು ದಿಕ್ಕುಗಳಲ್ಲಿ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಯನ್ನು ಕಟ್ಟಬೇಕೆಂದು ಹೇಳಿದ್ದಾನೆ.*[೧೬] ಹೀಗೆ ಅನೇಕ ಪ್ರಾಚೀನ ಗ್ರಂಥಗಳು ಕೋಟೆಯ ಮಹತ್ವವನ್ನು ತಿಳಿಸಿವೆ. ಅಂದಿನಿಂದ ಬ್ರಿಟಿಷರ ಆಡಳಿತದ ಕಾಲದವರೆವಿಗೆ ಭಾರತದಲ್ಲಿ ಕೋಟೆಗಳನ್ನು ಕಟ್ಟುತ್ತಲೇ ಬಂದಿರುವುದು ಕಂಡುಬರುತ್ತದೆ. ಅಂದಿನ ಕಾಲದಲ್ಲಿ ಯುದ್ಧವೆಂದರೆ, ಶತ್ರುರಾಜನ ಅರಮನೆಯನ್ನು ಆಕ್ರಮಿಸಿ ಮೇಲಿದ್ದ ಬಾವುಟವನ್ನು ಉರುಳಿಸಿ ತಮ್ಮ ಬಾವುಟವನ್ನು ಹಾರಿಸಿದರೆ ಗೆದ್ದಂತೆ ಎಂದು ತಿಳಿದುಕೊಂಡಿದ್ದರು. ಇದರಿಂದಾಗಿಯೇ ಅವರು ತಮ್ಮ ಅರಮನೆಯ ಸುತ್ತ ಬಲವಾದ ಕೋಟೆ, ಕೊತ್ತಲಗಳನ್ನು ನಿರ್ಮಿಸುತ್ತಿದ್ದರು. ಕೋಟೆಯ ಸುತ್ತಲೂ ಕಂದಕವನ್ನು ತೋಡಿಸಿ ನೀರು ತುಂಬತ್ತಿದ್ದರು. ಶತ್ರುಗಳು ಸುಲಭವಾಗಿ ರಾಜನಿರುವಲ್ಲಿಗೆ ನುಗ್ಗದಂತೆ ಮಾಡುತ್ತಿದ್ದರು. ಪ್ರಕೃತಿದತ್ತವಾದ ಮತ್ತು ದುರ್ಗಮವಾದ ಬೆಟ್ಟಗಳಿದ್ದರೆ ಅವುಗಳ ಮೇಲೆ ಕೋಟೆಯನ್ನು ನಿರ್ಮಿಸುತ್ತಿದ್ದರು. ಇದಕ್ಕೆ ಮದ್ದಗಿರಿಯ ಮಹಾನಾಡ ಪ್ರಭುಗಳೂ ಹೊರತಾಗಿಲ್ಲ.

ಬಯಲು ಸೀಮೆಯ ಸೆರಗಿನಲ್ಲಿ ಆಳ್ವಿಕೆ ಮಾಡಿದ ಮಹಾನಾಡ ಪ್ರಭುಗಳಿಗೆ ತಮ್ಮದೇ ಆದ ಚರಿತ್ರೆ ಇದೆ. ಆರಂಭದ ರಾಜಧಾನಿಯಾಗಿದ್ದ ಮುಮ್ಮಡಿ ಪಟ್ಟಣದಲ್ಲಿ ತಮ್ಮ ರಕ್ಷಣೆಗಾಗಿ ಅಲ್ಲಿ ಕೋಟೆಯನ್ನು ನಿರ್ಮಿಸಿದ್ದೂ ಕೂಡ ಕಂಡಬರುತ್ತದೆ. ಕೆಲವೇ ದಿನಗಳಲ್ಲಿ ಅವರು ಅದನ್ನು ರಕ್ಷಿಸಲು ವಿಫಲರಾಗಿ ಪರಾಭವ ಹೊಂದಿದರು. ಪ್ರಾಯಶಃ ಇವರ ರಾಜ್ಯ ಇನ್ನೂ ಶೈಶಾವಸ್ಥೆಯಲ್ಲಿ ಇದ್ದುದರಿಂದ ಹಾಗೂ ಅವರಲ್ಲಿ ತಮ್ಮನ್ನು ರಕ್ಷಿಸಿಕೊಳ್ಳಲು ಸರಿಯಾದ ಶಸ್ತ್ರಾಸ್ತ್ರಗಳಿಲ್ಲದೆ ಇದ್ದುದರಿಂದಲೋ ಏನೋ ಅವರು ಮುಮ್ಮಡಿಪಟ್ಟಣವನ್ನು ಉಳಿಸಿಕೊಳ್ಳಲಾರದೆ ಹೋದರು. ಈ ಘಟನೆಯಿಂದ ಮುಂದೆ ಅವರಿಗೆ ಹೊಸ ರಾಜಧಾನಿಯನ್ನು ನಿರ್ಮಿಸಿ ಅದರ ಸುತ್ತ ಬಲವಾದ ಕೋಟೆ ನಿರ್ಮಿಸುವ ಆಲೋಚನೆ ಬಂದಿರಬೇಕು. ನಂತರ ಇವರು ತಮ್ಮ ರಾಜಧಾನಿಯನ್ನು ಬಿಜ್ಜಾವರಕ್ಕೆ ಬದಲಾಯಿಸಿ ಅಲ್ಲಿ ಅವರು ಕೋಟೆ ನಿರ್ಮಿಸಿದರು. ಇಲ್ಲಿಂದಲೇ ಅವರು ರಾಜ್ಯಭಾರ ಮಾಡುತ್ತಿರುವಾಗ ತಮ್ಮ ವ್ಯಾಪ್ತಿಯಲ್ಲಿ ಬರುವ ಸಿದ್ಧಾಪುರ ಎಂಬ ಗ್ರಾಮದಲ್ಲಿ ಕ್ರಿ. ಶ. ೧೫೯೬ರಲ್ಲಿ ಕೋಟೆ ಕೊತ್ತಲ ದೇವಾಲಯಗಳನ್ನು ನಿರ್ಮಿಸಿದರು.*[೧೭] ಅಲ್ಲದೆ ಇವರು ತಮ್ಮ ಪ್ರಜೆಗಳಿಂದಲೇ ಸಾಲ ಪಡೆದು ಕೋಟೆಯನ್ನು ನಿರ್ಮಿಸಿದ್ದುದು ಸ್ವಾರಸ್ಯಕರವಾಗಿದೆ.*[೧೮] ಮಹಾನಾಡ ಪ್ರಭುಗಳು ಕೂಡುತ್ತಿ ಎಂಬಲ್ಲಿ ಕೋಟೆಯನ್ನು ನಿರ್ಮಿಸಲಾರಂಭಿಸಿದರು. ಆಗ ಅವರಿಗೆ ಹಣದ ಕೊರತೆ ಉಂಟಾಯಿತು. ಆ ಸಮಯದಲ್ಲಿ ಅಲ್ಲಿನ ನೂರು ಮನೆಯ ಗೌಡರುಗಳು ಪ್ರಭುಗಳಿಗೆ ೧೮೯೨ ವರಹಗಳನ್ನು ಸಾಲ ನೀಡಿ ಕೋಟೆ ನಿರ್ಮಿಸುವ ಕೆಲಸವನ್ನು ಪೂರೈಸಲು ಸಹಾಯ ಮಾಡಿದರು.

*ರಾಜ ಇಂತಹ ಸಂಕಷ್ಟ ಪರಿಸ್ಥಿತಿಯಲ್ಲಿದ್ದಾಗ ಜಿರಲೆ ಮಲ್ಲಮ್ಮ ಎಂಬುವಳು ಈ ಸಾಲವನ್ನು ತೀರಿಸಿದ್ದೇ ಅಲ್ಲದೆ ದೇವಾಲಯದ ಮುಂದೆ ಮಣ್ಣು ಹಾಕಲು ೨೦ ವರಹ, ಕಲ್ಲು ಹಾಕಲು ೨೦ ವರಹ, ಬಾವಿ ತೋಡಲು ೧೦ ವರಹ, ಪುಣ್ಯ ಮಾಡಿಸಲು ೧ ವರಹ, ಅನ್ನ ಸಂತರ್ಪಣೆಗೆ ೯೦ ವರಹ, ಗುರುಗಳಿಗೆ ೬ ವರಹ, ಹೀಗೆ ಒಟ್ಟು ೨೦೩೯ ವರಹಗಳನ್ನು ದಾನವಾಗಿ ನೀಡಿದಳು. ಇದರಿಂದ ರಾಜ ಮತ್ತು ಪ್ರಜೆಗಳಗಿದ್ದ ಸಂಬಂಧ ಎಂತಹುದು ಎಂಬುದನ್ನು ಅರಿಯಬಹುದು. ಅಲ್ಲದೆ, ಪ್ರಜೆಗಳೂ ಕೂಡಾ ತಮ್ಮ ರಾಜ್ಯದ ರಕ್ಷಣೆಗೆ ಹೇಗೆ ರಾಜನೊಂದಿಗೆ ಕೈ ಜೋಡಿಸುತ್ತಿದ್ದರು ಎಂದು ತಿಳಿದು ಬರುತ್ತದೆ.*

ಹೀಗೆ ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ದಿನದಿಂದ ದಿನಕ್ಕೆ ಪ್ರಬಲರಾಗುತ್ತಿದ್ದ ಮಹಾನಾಡ ಪ್ರಭುಗಳು ತಮ್ಮ ಸುತ್ತಲೂ ಶತ್ರುಗಳ ಪಡೆಯನ್ನೇ ಸೃಷ್ಟಿಸಿಕೊಂಡರು. ಮಿಡಿಗೇಶಿಯ ನಾಗಿರೆಡ್ಡಿ ಕೊರಟಗೆರೆಯ ಪ್ರಭುಗಳು, ಹಾವಳಿಯ ಭೈರೇಂದ್ರ ಸಕಾಲದಲ್ಲಿ ಅವರ ಮೇಲೆ ಆಕ್ರಮಣ ಮಾಡಲು ಸಮಯ ಕಾಯತೊಡಗಿದರು. ಇದರ ಫಲಿತಾಂಶವೇ ಅವರು ತಮ್ಮ ರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಲು ಪ್ರಾರಂಭಿಸಿದ್ದು. ಅವರು ತಮ್ಮ ನೆಲದುರ್ಗವನ್ನು ಬಲಪಡಿಸುವು ದಕ್ಕಿಂತ ಹೆಚ್ಚಾಗಿ ಹೆಚ್ಚು ಸುರಕ್ಷಿತವೂ, ಶತ್ರುಗಳ ಆಕ್ರಮಣವನ್ನು ತಡೆಗಟ್ಟಲು ಸುಲಭ ಆಗುವಂತಹ ಗಿರಿದುರ್ಗ ನಿರ್ಮಿಸುವುದರ ಕಡೆ ಗಮನಹರಿಸಿದರು. ತಮ್ಮ ರಾಜಧಾನಿಯಾಗಿದ್ದ ಬಿಜ್ಜಾವರಕ್ಕೆ ಸಮೀಪವೇ ಒಂದು ಕಡಿದಾದ ಬೆಟ್ಟವಿದ್ದು, ಅಲ್ಲಿ ಜಲ ಸಮೃದ್ಧಿ ಇರುವುದನ್ನು ಮನಗಂಡ ರಾಜ ಇಮ್ಮಡಿ ಚಿಕ್ಕಪ್ಪಗೌಡನು ತನ್ನ ರಾಜ್ಯದ ರಕ್ಷಣೆಗೆ ಸೂಕ್ತ ಸ್ಥಳವೆಂದು ಭಾವಿಸಿ ಅಲ್ಲಿ ಕ್ರಿ. ಶ. ೧೬೦೧ರ ಮಾರ್ಗಶಿರ ಮಾಸದಲ್ಲಿ ಕೋಟೆ ನಿರ್ಮಾಣ ಕಾರ್ಯ ಕೈಗೊಂಡನು.*೧೫ ಈ ಕೋಟೆಯು ಕ್ರಮೇಣ ಅವನ ಉತ್ತರಾಧಿಕಾರಿಗಳ ಕಾಲದಲ್ಲಿ ಅಭಿವೃದ್ಧಿ ಗೊಂಡಿತು. ಮೈಸೂರು ಅರಸರು ಹೈದರಾಲಿ ಮತ್ತು ಟಿಪ್ಪೂಸುಲ್ತಾನ ಹಾಗೂ ಮರಾಠರೂ ಕೂಡಾ ಈ ಕೋಟೆಯನ್ನು ವಿಸ್ತರಿಸಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ. ಇದರಲ್ಲಿ ಮಹಾನಾಡ ಪ್ರಭುಗಳು ಆ ಕಾಲಕ್ಕೆ ಹೊಂದಿಕೆ ಆಗುವಂತಹ ವಿವಿಧ ರೀತಿಯ ರಕ್ಷಣಾ ತಂತ್ರಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಇದರ ರಚನೆಯ ಬಗೆಗೆ ಶ್ರೀ ಎಂ. ಹೆಚ್. ಕೃಷ್ಣ ರವರು ಹಾಗೂ ಡಾ॥ ಚನ್ನಬಸಪ್ಪ ಪಾಟೀಲ್ ರವರು ಅಧ್ಯಯನ ಮಾಡಿ ಕೆಲ ವಿವರಗಳನ್ನು ಸಂಗ್ರಹಿಸಿದ್ದರೂ ಕೂಡಾ, ಈಗ ದೊರಕಿರುವ ಕೆಲ ದಾಖಲೆಗಳೊಂದಿಗೆ ಅದನ್ನು ವಿಸ್ತರಿಸುತ್ತಿದ್ದೇನೆ.

ಮಹಾನಾಡ ಪ್ರಭುಗಳ ರಾಜ್ಯ ಬೆಳದಂತೆಲ್ಲಾ ಅಗತ್ಯಕ್ಕನುಗುಣವಾಗಿ ಕೋಟೆ ಕೊತ್ತಳಗಳ ವಿಸ್ತರಣೆ ಆದಂತೆ ತೋರುವುದು. ಒಂದು ರೀತಿಯಲ್ಲಿ ಕೋಟೆಯ ಬೆಳವಣಿಗೆಯ ಹಿಂದೆ ಮದ್ದಗಿರಿ ರಾಜ್ಯಕ್ಕೆ ಸಂಬಂಧಿಸಿದ ಶಕ್ತಿ ಸಾಮರ್ಥ್ಯದ ಬೆಳವಣಿಗೆಯನ್ನು, ಅದರ ವೈಶಾಲ್ಯ ವಿಸ್ತಾರಗೊಂಡುದನ್ನು ಸೂಕ್ಷ್ಮವಾಗಿ ಅರುಹುತ್ತದೆ. ಈ ರಾಜರ ಮದ್ದಗಿರಿ ಕೋಟೆಯನ್ನೇ ನೋಡಿದ ಆಂಗ್ಲ ಪ್ರವಾಸಿಗನಾದ ಫ್ರಾನ್ಸಿಸ್ ಬುಕಾನನ್ನನು ಈ ರೀತಿ ಉದ್ಗಾರವೆತ್ತಿದ್ದಾನೆ. *೫೦ *''ಪೂರ್ವದತ್ತ ಣಿಂದ ಮದ್ದಗಿರಿ ಯನ್ನು ಸಮೀಪಿಸುತ್ತಿದ್ದಂತೆ ಕಾಣುವ ಸುಂದರ ದೃಶ್ಯವನ್ನು ಇನ್ನಾವ ಬೆಟ್ಟ ದುರ್ಗ ಕಂಡಾಗಲೂ ನಾನು ನೋಡಲೇ ಇಲ್ಲ.''* ಇಂತಹ ಮಧುಗಿರಿ ದುರ್ಗವು ದಕ್ಷಿಣ ಭಾಗದಲ್ಲಿ ಅತ್ಯಂತ ಕಡಿದಾಗಿದ್ದು ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಏಕಶಿಲಾ ಬೆಟ್ಟವಾಗಿದೆ. ಇಂತಹ ಬೆಟ್ಟದಲ್ಲಿ ಕೋಟೆಯನ್ನು ನಿರ್ಮಾಣ ಮಾಡುವುದರ ಜೊತೆಗೆ ತಮ್ಮ ರಕ್ಷಣೆಯನ್ನು ಬಲಪಡಿಸಿಕೊಳ್ಳಲು ಪ್ರಯತ್ನಿಸಿದ್ದು ಕಂಡುಬರುತ್ತದೆ.

• ಈ ಗಿರಿದುರ್ಗದಲ್ಲಿ ಅಂಚಿನಲ್ಲಿಯೇ ಉತ್ತರ ಭಾಗಕ್ಕೆ ಪೇಟೆಯನ್ನು ನಿರ್ಮಿಸಿ ಅದರ ಸುತ್ತ ಕೋಟೆಯನ್ನು ನಿರ್ಮಿಸಲಾಗಿದೆ. ಇದು ಮಣ್ಣಿನಿಂದ ನಿರ್ಮಿತವಾಗಿದ್ದು ಸುತ್ತಲೂ ಕಂದಕವನ್ನು ಹೊಂದಿದೆ. ಒಟ್ಟು ಮೂರು ಕಡೆ ಪ್ರವೇಶ ದ್ವಾರವಿರುವ ಈ ಪೇಟೆಯ ಪೂರ್ವದಿಕ್ಕಿನ ಬಾಗಿಲನ್ನು ಸಂಜೀವರಾಯನ (ಆಂಜನೇಯ) ಅಥವಾ **ಊರುಬಾಗಿಲೆಂದೂ,** ಪಶ್ಚಿಮ ದಿಕ್ಕಿನದನ್ನು **ದಂಡೂರಬಾಗಿಲೆಂದೂ** ಉತ್ತರ ದಿಕ್ಕಿನ ಬಾಗಿಲನ್ನು **ಬೇಡತ್ತೂರ್** ಬಾಗಿಲೆಂದೂ ಕರೆಯಲಾಗುತ್ತಿತ್ತು. ಈಗ ಸುಸ್ಥಿತಿಯಲ್ಲಿರುವ ದಂಡೂರ್ ಬಾಗಿಲಿನ ಎಡ, ಬಲಗಳಲ್ಲಿ ಎರಡು ವೃತ್ತಾಕಾರದ ಕೊತ್ತಳಗಳಿವೆ. ಈ ಕೋಟೆಯು ಉತ್ತರ, ಪೂರ್ವ, ಪಶ್ಚಿಮ ದಿಕ್ಕುಗಳಿಂದ ಸುತ್ತುವರಿದಿದೆ. ದಕ್ಷಿಣಕ್ಕೆ ಬೆಟ್ಟವೇ ಸ್ವಾಭಾವಿಕ ಕೋಟೆಯಾಗಿದೆ. ಈ ಕೋಟೆಯನ್ನು ಪೇಟೆಕೋಟೆ ಅಥವಾ ಹೊರಕೋಟೆ ಎಂದು ಕರೆಯಬಹುದು.

ಹೊರಕೋಟೆ ಮತ್ತು ಬೆಟ್ಟದ ಮಧ್ಯೆ ಇರುವ ಸ್ಥಳವನ್ನು ಕೆಳಕೋಟೆ ಎಂದು ಕರೆಯಬಹುದು. ಇದು ಅತ್ಯಂತ ಬಲಾಢ್ಯವಾಗಿದ್ದು ಬೃಹತ್ ಗಾತ್ರದ ಕಲ್ಲುಗಳಿಂದ ನಿರ್ಮಿತವಾಗಿದೆ. ಒಟ್ಟು ಮೂರು ಪ್ರವೇಶದ್ವಾರವನ್ನು ಹೊಂದಿರುವ ಇದರ ಪೂರ್ವದ ಬಾಗಿಲಿಗೆ ನೀರುಬಾಗಿಲೆಂದೂ, ಪಶ್ಚಿಮದ ಬಾಗಿಲಿಗೆ ಬಂಡಿ ತಿಮ್ಮನಬಾಗಿಲೆಂದೂ ಹಾಗೂ ಉತ್ತರಕ್ಕೆ ರಟ್ಟೆ ಬಾಗಿಲೆಂದೂ ಕರೆಯಲಾಗುತ್ತಿತ್ತು *೫೧ ಇದರೊಳಗಡೆ ಕಲ್ಲಿನಿಂದ ನಿರ್ಮಿಸಿದ ಬೃಹತ್ತಾದ ಉಗ್ರಾಣ, ರಾಜರ ಅರಮನೆ, ಕೋಟೆಯ ಗೋಡೆಗೆ ತಾಗಿದಂತೆ ಅಂಗಡಿಗಳ ಸಾಲುಗಳನ್ನು ಕಾಣುತ್ತೇವೆ. ಹಾಳು ಬಿದ್ದಿರುವ ಅನೇಕ ವಸತಿಗೃಹಗಳೂ, ಇದ್ದು ಬತೇರಿಯ ಮೇಲ್ಭಾಗದಲ್ಲಿ ಫಿರಂಗಿಗಳನ್ನು ಇಡಲು ಅವಕಾಶ ಮಾಡಲಾಗಿತ್ತು. ಅಲ್ಲಿ ಎರಡು ಫಿರಂಗಿಗಳು ಇದ್ದವೆಂದು ಮೆಕಂಜಿ ತಿಳಿಸುತ್ತಾನೆ. ಈ ಭಾಗದಲ್ಲಿ ನೆಲಸಿರುವ ಜನರ ಪೂಜೆಗೋಸ್ಕರ ಕೋದಂಡ ರಾಮಸ್ವಾಮಿ, ಈಶ್ವರ ಮತ್ತು ಆಂಜನೇಯ ದೇವಾಲಯಗಳನ್ನು ನಿರ್ಮಿಸಲಾಗಿತ್ತು. ಈ ಕೆಳಕೋಟೆ ಯಲ್ಲಿರುವ ಕೋವಿಗುಂಡಿಗಳು, ತುಪಾಕಿ ವೇದಿಕೆಗಳು, ಕೋಟೆ ಬುರುಜುಗಳು ಆಗಿನ ಮಹಾನಾಡ ಪ್ರಭುಗಳ ರಕ್ಷಣಾತಂತ್ರಗಳನ್ನು ತಿಳಿಸುತ್ತವೆ. ಇಲ್ಲಿ ಆರು ವೀಕ್ಷಣಾ ವೇದಿಕೆಗಳಿದ್ದು ದಟ್ಟವಾದ ಕಾಡು ಈ ಕೋಟೆಯ ಗೋಡೆಗೆ ಹೊಂದಿಕೊಂಡಂತೆ ಇದ್ದು ಸೈನಿಕ ಚಲನವಲನಗಳಿಗೆ ಅನುಕೂಲವಾಗಿತ್ತು.

ಕೋದಂಡರಾಮ ದೇವಾಲಯದ ಬಯಲನ್ನು ಬಿಟ್ಟು ಮೇಲಕ್ಕೆ ನಡೆದರೆ ನಿಜವಾದ ಗಿರಿದುರ್ಗ ಆರಂಭವಾಗುತ್ತದೆ. ಇಲ್ಲಿಂದ ಮೇಲಿನ ಭಾಗವನ್ನು ಮೇಲಿನಕೋಟೆ ಎಂದು ಕರೆಯಬಹುದು. ಇಲ್ಲಿಂದ ಬೆಟ್ಟದ ತುದಿಯವರೆವಿಗೆ ವಿಭಿನ್ನ

ಹೆಸರುಗಳಿಂದ ಕರೆಯುವ ಹದಿನೈದು ಬಾಗಿಲುಗಳಿದ್ದು ಒಟ್ಟು ಹತ್ತು ಅರ್ಧಚಂದ್ರಾಕೃತಿಯ ಸುತ್ತಿನ ಗೋಡೆಯನ್ನು ಕಾಣಬಹುದು ಈ ಬಾಗಿಲುಗಳ ಹೆಸರನ್ನು ಮೆಕಂಜಿ ತನ್ನ ದಾಖಲೆಯಲ್ಲಿ ತಿಳಿಸಿದ್ದಾನೆ. ಅವುಗಳೆಂದರೆ, ಎಮಿಕೆ ಬಾಗಿಲು, ವಡ್ರ( ಕುಟ್ಟೀ ) ರತಿಬಾಗಿಲು, ಬಕ್ಕಸದ ಬಾಗಿಲು, ಪ. •..ರು ಬಾಗಿಲು, ರಂಗಧಾಮ ಬಾಗಿಲು, ಗಾರೆಬಾಗಿಲು, ಅಂತರಾಳದ ಬಾಗಿಲು, ಕೈಲಾಸದ ಬಾಗಿಲು ಮತ್ತು ತುತ್ತ ತುದಿಯಲ್ಲಿನ ಕುಂಬಿ ಬಾಗಿಲುಗಳು. ಇವುಗಳನ್ನು ಗುರಿತಿಸಲು ಪ್ರಯತ್ನ ಮಾಡಲಾಗಿದೆ. ಪ್ರತಿಯೊಂದು ಸುತ್ತಿನ ಕೋಟೆಯ ಮಧ್ಯೆ ಇರುವ ಅವಶೇಷಗಳನ್ನು ನೋಡಿದರೆ ನಾಡಪ್ರಭುಗಳು ಹಾಗೂ ನಂತರದ ರಾಜರು ಕೋಟೆಯನ್ನು ನಿರ್ಮಿಸಿ, ರಕ್ಷಣೆ ಪಡೆದುಕೊಳ್ಳುವಲ್ಲಿ ಎಂತಹ ನಿಪುಣರು ಹಾಗೂ ತಂತ್ರಗಾರಿಕೆಯನ್ನು ಹೊಂದಿದ್ದರೆಂದು ತಿಳಿಯುತ್ತದೆ. ಪ್ರತಿಯೊಂದು ಸುತ್ತಿನಲ್ಲಿಯು ಸೈನಿಕರಿಗೆ ಅವಶ್ಯಕವಾದಂತಹ ಮದ್ದುಗುಂಡುಗಳನ್ನು ತಯಾರಿಸುವ ಶಸ್ತ್ರಾಸ್ತ್ರವನ್ನು ನಿರ್ಮಿಸಿದ್ದರೆಂಬ ಅಂಶ ಎಂತಹವರಿಗೂ ಆಶ್ಚರ್ಯ ಹುಟ್ಟಿಸುವಂತಹದು. ಅಲ್ಲದೆ ಅಲ್ಲಿಯೇ ಆಹಾರ ತುಂಬಿಡಲು ಕಣಜಗಳು, ಅಡುಗೆ ಮನೆಗಳ, ನೀರಿನ ದೊಣೆ, ರಾಜರು ವಿಶ್ರಮಿಸಿ ಕೊಳ್ಳುವ ಮಹಲ್‌ಗಳನ್ನು ಕಟ್ಟಿದ್ದರೆಂಬ ಅಂಶ ಅವಶೇಷಗಳಿಂದ ತಿಳಿದುಬರುತ್ತದೆ. ಕ್ರಿ. ಶ. ೧೮೦೨ ರಲ್ಲಿ ಈ ಬೆಟ್ಟಕ್ಕೆ ಭೇಟಿ ನೀಡಿದ್ದ ಮೆಕಂಜಿಯು ಇದರೊಳಗಿನ ಕಟ್ಟಡಗಳ ಬಗ್ಗೆ ಅಂಕಿ ಅಂಶಗಳ ಮಾಹಿತಿಯನ್ನು ನೀಡಿದ್ದಾನೆ.

ಕೋದಂಡರಾಮ ದೇವಾಲಯದ ಎಡಭಾಗಕ್ಕೆ ಚಲಿಸಿ ಮುಂದೆ ನಾಲ್ಕನೆಯ ದ್ವಾರದ ಮುಖಾಂತರ ಮಹಾನವಮಿ ದಿಬ್ಬವನ್ನು ಪ್ರವೇಶಿಸುತ್ತೇವೆ. ಅಲ್ಲಿಂದ ಮೇಲಕ್ಕೆ ಹತ್ತಿದರೆ ಎಮಿಕೆ ಗವಿ ಬಳಿ ಬರುತ್ತೇವೆ. ಇದರ ಪಕ್ಕದಲ್ಲಿಯೇ ಐದನೇ ದ್ವಾರವಿದ್ದು ಇದನ್ನು ಎಮಿಕೆಬಾಗಿಲೆನ್ನಬಹುದು. ಕಿರುಬವು ಪ್ರಾಣಿಗಳನ್ನು ಎಳೆದು ತಂದು ಇಲ್ಲಿ ತಿನ್ನುತ್ತಿತ್ತಂತೆ. ಆದುದರಿಂದ ಈ ಹೆಸರು ಬಂದಿರಬಹುದು. ಇದನ್ನು ದಾಟಿ ನಾಲ್ಕೈದು ಮುಂದೆ ಸಾಗಿದರೆ ಮತ್ತೊಂದು ಬಾಗಿಲು ಸಿಗುತ್ತದೆ. ಇದು ಕಿರಿದಾಗಿದ್ದು, ಇದನ್ನೇ ರತಿಬಾಗಿಲೆಂದು ಕರೆಯಬಹುದು. ಇದರ ಮುಖಾಂತರ ಸಾಗಿದರೆ ನಾವು ವಿಶಾಲವಾದ ಬಯಲನ್ನು ಸೇರುತ್ತೇವೆ. ಈ ಸ್ಥಳದಲ್ಲಿ ಅರಮನೆ, ಮೂರು ಮದ್ದಿನ ಮನೆಗಳು, ನಾಲ್ಕು ಕಣಜಗಳು, ಒಂದು ನೀರಿನ ದೊಣೆ ಮತ್ತು ಎಂಟು ಫಿರಂಗಿಗಳಿದ್ದವೆಂದು ಮೆಕಂಜಿ ತಿಳಿಸಿದ್ದಾನೆ.

ಇಲ್ಲಿಂದ ಮುಂದಕ್ಕೆ ಬೆಟ್ಟ ಹತ್ತಲು ಪಶ್ಚಿಮದಿಂದ ಮತ್ತು ದಕ್ಷಿಣದಿಂದ ಎರಡು ದಾರಿ ಇದ್ದು, ಇವುಗಳೆರಡೂ ಆರನೇ ಬಾಗಿಲಿನಲ್ಲಿ ಸಂಧಿಸುತ್ತವೆ. ಇದನ್ನು ಬಕ್ಕಸದ ಬಾಗಿಲು ಎಂದು ಕರೆಯುವರು. ಪ್ರಾಯಶಃ ಈ ಸ್ಥಳದಲ್ಲಿ ಖಜಾನೆಯ ಕಛೇರಿ ಇದ್ದುದರಿಂದ ಈ ಹೆಸರು ಬಂದಿರಬಹುದು. ಆರು ಮತ್ತು ಏಳನೇ ಬಾಗಿಲುಗಳು ಎರಡು ದೊಡ್ಡ ಕೈಸಾಲೆಗಳಿಂದ ಕೂಡಿದ್ದು ಮುಂದೆ ಅರಮನೆಗೆ ದಾರಿ ಮಾಡಿಕೊಡುತ್ತವೆ. ಇಲ್ಲಿ ಚಿಕ್ಕದೇವರಾಜ ಒಡೆಯರ್ ಕಾಲದ ಶಾಸನವೊಂದು ದೊರೆತಿದ್ದು ಅದು ಈ ಬಾಗಿಲ ಹತ್ತಿರ ಒಂದು ಕೊತ್ತಳ ರಾಮಭದ್ರ ಮತ್ತು ಭೂತನಾಥ ಫಿರಂಗಿಗಳಿಂದ ಗುಂಡುಹಾರಿಸಲು ಅನುಕೂಲವಾಗುವಂತೆ ಪ್ರತಿಯೊಂದರ ಸುತ್ತ ಐದು ಕಿಂಡಿಗಳನ್ನುಳ್ಳ ಸುತ್ತುಗೋಡೆ ಮತ್ತು ಬಾಗಿಲ ಮುಂದೆ ಮೆಟ್ಟಿಲುಗಳನ್ನು ನಿರ್ಮಿಸಿದ್ದನ್ನು ತಿಳಿಸುತ್ತದೆ. ಆದುದರಿಂದ ಚಿಕ್ಕದೇವರಾಜ ಒಡೆಯರು ಈ ಕೋಟೆಯನ್ನು ಗೆದ್ದುಕೊಂಡು, ನಂತರ ಇಲ್ಲಿನ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರೆಂದು ನಿಸ್ಸಂಶಯವಾಗಿ ಹೇಳಬಹುದು. ಹೊರಗಿನಿಂದ ಹಾರಿಸಿದ ಫಿರಂಗಿಯ ಗುಂಡುಗಳಿಂದ ರಕ್ಷಣೆ ಪಡೆಯುವುದಕ್ಕಾಗಿ ''ಎದೆಮರೆ ಮೋಪುಗಾವಲನ್ನು'' ಕಟ್ಟಿಸಿದರೆಂದು ಶಾಸನ ತಿಳಿಸುತ್ತದೆ.

ಎಂಟನೇ ಬಾಗಿಲ ಪೂರ್ವಕ್ಕೆ ಎತ್ತರವಾದ ಬಂಡೆಯ ಮೇಲೆ ಬತೇರಿ ಮತ್ತು ಪಶ್ಚಿಮಕ್ಕೆ ಒಂದು ವರ್ತುಲಾಕಾರದ ಕೊತ್ತಳವಿದೆ. ಇಲ್ಲಿ ಎರಡು ಕಣಜಗಳಿದ್ದು, ಕಲ್ಲುಚಪ್ಪಡಿ ಮತ್ತು ಕಂಬತೊಲೆಗಳಿಂದ ಕಟ್ಟಿದ ಈ ಕಣಜಗಳು ಇಂದಿಗೂ ಭದ್ರವಾಗಿವೆ. ಇಲ್ಲಿ ಅಲಂಕಾರಕ್ಕಾಗಿ ಗಾರೆಯಿಂದ ಕಮಾನು ಮತ್ತು ಹೂ ಬಳ್ಳಿಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಇದರಿಂದ ಈ ಬಾಗಿಲನ್ನು ಗಾರೆಬಾಗಿಲೆಂದು ಊಹಿಸಬಹುದು. ಇಲ್ಲಿನ ಅರಮನೆಯ ಮುಂದೆ ಬಲಭಾಗಕ್ಕೆ ಚೌಕಾಕಾರದ ಬೃಹತ್ ದೊಣೆ ಇದೆ. ಇದನ್ನು ಇಟ್ಟಿಗೆ ದೊಣೆ ಎಂದು ಕರೆಯುವರು. ಈ ದೊಣೆಯು ಮಹಾನಾಡ ಪ್ರಭು ಮುಮ್ಮಡಿ ಚಿಕ್ಕಪ್ಪಗೌಡನಿಂದ ನಿರ್ಮಿತಗೊಂಡಿದೆ. ಬೆಟ್ಟದಿಂದ ಹರಿದು ಬಂದ ನೀರು ದೊಣೆಯೊಳಗೆ ಹೋಗುತ್ತದೆ. ಪಕ್ಕದಲ್ಲಿ ಎತ್ತರದಲ್ಲಿ ಕಟ್ಟಿದ ಇಟ್ಟಿಗೆಯ ತೊಟ್ಟಿ ಇದೆ. ಇದಕ್ಕೆ ಸುಟ್ಟ ಮಣ್ಣಿನ ಕೊಳವೆಗಳನ್ನು ಜೋಡಿಸಲಾಗಿದೆ. ನೀರನ್ನು ಇದರೊಳಗೊತ್ತಿ ಅರಮನೆ ಇತರ ಕಟ್ಟಡಗಳಿಗೆ ಸರಬರಾಜು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ.* ಇಂತಹ ಸೌಕರ್ಯವನ್ನು ಪಡೆದಿದ್ದ ಈ ಸ್ಥಳವು ಪ್ರಮುಖ ವ್ಯಕ್ತಿಗಳ ವಾಸಸ್ಥಾನವಾಗಿತ್ತೆಂದು ಊಹಿಸಬಹುದು.

ಈ ಬಯಲಿನ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿ ಹೋದರೆ ಕುಪ್ಪುಗುಂಡ್ಲು ತಲುಪುತ್ತೇವೆ. ಇಲ್ಲಿಯೂ ಮೈಸೂರು ರತಿ ಬಾಗಿಲಿರುವುದು ಇದನ್ನು ಹೈದರಾಲಿಯು ಕ್ರಿ. ಶ. ೧೭೮೩ರ ಶುಭಕೃತು ಸಂವತ್ಸರದಲ್ಲಿ ನಿರ್ಮಾಣ ಮಾಡಿದನೆಂದು ಅಲ್ಲಿನ ಬಾಗಿಲನ ಚೌಕಟ್ಟಿನ ಮೇಲಿನ ಶಾಸನ ತಿಳಿಸುತ್ತದೆ* ಇಲ್ಲಿನ ಕೋಟೆಯ ಸುತ್ತ ನೀರಿನ ಕಂದಕ ಇರುವುದು ಕಾಣುತ್ತದೆ. ಮೆಕಂಜಿಯು ಈ ಸ್ಥಳಕ್ಕೆ ಭೇಟಿ ನೀಡಿದ್ದಾಗ ಎರಡು ಫಿರಂಗಿಗಳಿದ್ದವೆಂದು ಹೇಳಿದ್ದಾನೆ. ಇಲ್ಲಿಂದ ಬೆಟ್ಟದ ಮೇಲಕ್ಕೆ ಕಡಿದಾದ ಬಂಡೆಯಲ್ಲಿ ಕೆತ್ತಿದ ಚಿಕ್ಕಮೆಟ್ಟಿಲುಗಳ ಮುಖಾಂತರ ಸಾಗಿದರೆ ೯ನೇ ಸುತ್ತಿನ ಕೋಟೆಯಲ್ಲಿನ ೧೩ನೇ ಬಾಗಿಲು ಸಿಗುತ್ತದೆ. ಇದನ್ನು ಅಂತರಾಳದ ಬಾಗಿಲು ಎನ್ನುವರು. ಇಲ್ಲಿಂದ ಕೆಳಕ್ಕೆ ಇಣುಕಿ ನೋಡಿದರೆ ಐದು ದೊಣೆಗಳು ಕಾಣುತ್ತವೆ. ಇನ್ನೂ ಮೇಲೆ ಹತ್ತಿದಾಗ ಹತ್ತನೇ

ಕೋಟೆಯ ೧೪ನೇ ಬಾಗಿಲು ಸಿಗುತ್ತದೆ. ಇದನ್ನು ಕೈಲಾಸದ ಬಾಗಿಲು ಎನ್ನುವರು. ಇಲ್ಲಿಗೆ ಬಹಳ ಎಚ್ಚರದಿಂದ ತಲಪಬೇಕು. ಸ್ವಲ್ಪ ಜಾರಿದರೆ ಕೈಲಾಸ ಸೇರಬಹುದು! ಇಲ್ಲಿಂದ ಮುಂದೆ ೧೫ನೆಯ ಹಾಗೂ ಕೊನೆಯ ಕುಂಬಿ ಬಾಗಿಲಿನ ಮುಖಾಂತರ ಗಿರಿಯ ತುತ್ತ ತುದಿಯನ್ನು ತಲುಪುತ್ತೇವೆ. ಈ ಪ್ರದೇಶ ವಿಶಾಲವಾಗಿದ್ದು ಆಯತಾಕಾರದ ಕೋಟೆಯನ್ನು ಹೊಂದಿದೆ. ಇಲ್ಲಿ ನೀರಿನ ಅನುಕೂಲಕ್ಕಾಗಿ ಹನುಮನ ದೊಣೆಯನ್ನು ಮಹಾನಾಡ ಪ್ರಭು ಮುಮ್ಮಡಿ ಚಿಕ್ಕಪ್ಪಗೌಡ ಕಟ್ಟಿಸಿದನು*೨೪ ಇದರ ಪಕ್ಕದಲ್ಲಿ ಮತ್ತೊಂದು ದೊಣೆ ಇದ್ದು ಅದಕ್ಕೆ ನವಿಲಿನದೊಣೆ ಎಂದು ಕರೆಯಲಾಗಿದೆ. ಇಲ್ಲಿ ಗೋಪಾಲಕೃಷ್ಣ ದೇವಾಲಯವೇ ಅಲ್ಲದೆ, ಎಂಟು ಶಸ್ತ್ರಾಗಾರಗಳು ಹಾಗೂ ಕಣಜಗಳು ಇದ್ದವೆಂದು ಮೆಕಂಜಿ ತಿಳಿಸುತ್ತಾನೆ. ಈ ಕೋಟೆಯ ಸುತ್ತ ಅಲ್ಲಲ್ಲಿ ಕಿಟಕಿಯನ್ನು ನಿರ್ಮಿಸಲಾಗಿದ್ದು ಅವುಗಳಿಗೆ ಪಹರೆ ಕಿಟಕಿ ಎಂದು ಕರೆಯಲಾಗಿದೆ. ಸೈನಿಕರು ಇದರ ಮೂಲಕ ದೂರದಿಂದ ಶತ್ರುಗಳು ಬರುವುದನ್ನು ನೋಡಿ ಮುಂದಿನ ಏರ್ಪಾಟನ್ನು ಮಾಡಿಕೊಳ್ಳುವ ಒಂದು ತಂತ್ರವಾಗಿತ್ತು. ಹೀಗೆ ಕ್ರಿ. ಶ. ೧೬೦೧ ರಿಂದ ಕ್ರಿ. ಶ. ೧೮೦೦ರ ವರೆವಿಗೆ ಮದ್ದಗಿರಿ ಅರಸರಿಗೆ, ಮೈಸೂರು ಒಡೆಯರಿಗೆ ರಕ್ಷಣಾಸರೆಯಾಗಿದ್ದ ಮದ್ದಗಿರಿ ದುರ್ಗದಲ್ಲಿ, ಒಡೆಯರ್ ಕಾಲದಲ್ಲಿ ೪೦೦೦ ಅಶ್ವದಳ, ೧೨೦೦೦ ಕಾಲ್ದಳ ಬಿಟ್ಟು ೧೬೦೦೦ ದೇಶಿಯ ಸೈನಿಕರು ಇದ್ದರೆಂದು ಮೆಕಂಜಿಯ ದಾಖಲೆಯಿಂದ ಗೊತ್ತಾಗುತ್ತದೆ. ಇದನ್ನು ನೋಡಿದಾಗ ಮದ್ದಗಿರಿ ರಾಜರು ತಮ್ಮ ಸ್ವಾತಂತ್ರ್ಯ ಕಳೆದುಕೊಂಡು ಒಡೆಯರಿಗೆ ಅಧೀನರಾದಾಗ ಈ ದುರ್ಗದ ಕಾವಲಿಗೆ ಮೈಸೂರರಸರು ಇಷ್ಟೊಂದು ಬೃಹತ್ ಸಂಖ್ಯೆಯ ಸೈನಿಕರನ್ನು ನೇಮಿಸಬೇಕಾದರೆ ಮದ್ದಗಿರಿಯರಸರೂ ಕೂಡಾ ಹೆಚ್ಚು ಕಡಿಮೆ ಇಷ್ಟೇ ಸಂಖ್ಯೆಯ ಸೈನಿಕರನ್ನು ಹೊಂದಿದ್ದರೆಂದು ಊಹಿಸಲವಕಾಶವಿದೆ. ಮುಂದೆ, ಚಿಕ್ಕಪುಟ್ಟ ಪಾಳೆಯ ಪಟ್ಟುಗಳ ದ್ವೇಷಿಯಾಗಿದ್ದ ಹೈದರಾಲಿಯ ಕಾಲದಲ್ಲಿ ಪೂರ್ಣವಾಗಿ ಮಧುಗಿರಿ ಮೈಸೂರಿನವರ ವಶಕ್ಕೆ ಬಂದಾಗ ದುರ್ಗದ ರಕ್ಷಣೆಗೆ ಅವನು ೩೦೦ ಮುಸಲ್ಮಾನ ೨೫೦೦ ದೇಶೀಯ ಕಾಲಾಳುಗಳನ್ನು ನಿಯೋಜಿಸಿದ್ದನು. ಟಿಪ್ಪುವಿನ ಕಾಲದಲ್ಲಿ ದೇಶೀಯ ೩೦೦ ಮುಸಲ್ಮಾನ ೪೦೦ ಸೈನಿಕರು ದುರ್ಗದ ಪಹರೆಯಲ್ಲಿದ್ದರು. ಕ್ರಿ. ಶ. ೧೮೦೦ರಲ್ಲಿ ಬ್ರಿಟಿಷರು ಈ ದುರ್ಗದಲ್ಲಿ ೩೦ ಆಂಗ್ಲ ಸೈನಿಕರು ೫೦ ದೇಶೀಯ ಸೈನಿಕರನ್ನು ನಿಯೋಜಿಸಿದ್ದರು. ಈ ರೀತಿ ೧೬೦೦ ರಿಂದ ೧೭೦೦ರ ಅವಧಿಯಲ್ಲಿ ಅತ್ಯಂತ ಪ್ರಾಮುಖ್ಯತೆ ಗಳಿಸಿದ್ದ ಮಧುಗಿರಿಕೋಟೆಯು, ೧೭೦೦ ರಿಂದ ೧೮೦೦ ರೊಳಗಡೆ-ಮೇಲಿನ ದಾಖಲೆಯ ಆಧಾರದ ಮೇಲೆ ಹೇಳುವುದಾದರೆ ಕ್ರಮೇಣ ಈ ಅವಧಿಯಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತೆಂದು ಗೊತ್ತಾಗುತ್ತದೆ.

## ಆಧಾರ ಸೂಚಿ ಮತ್ತು ಅಡಿಟಿಪ್ಪಣಿಗಳು


*೧. ಎಂ. ಎ. ಆರ್. ೧೯೨೮ ಮಧುಗಿರಿ ೯೯
*೨. ಮಲ್ಲಿಕಾರ್ಜುನ-ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಸಂಧಿ ೧೨, ಪದ್ಯ ೨೪, ೬೧, ೭೬, ೧೩-೨, ೩, ೬ ೧೫-೪
*೩. ಅದೇ ೧೫-೫೨, ೧೩-೯೧
*೪. ಅದೇ ೧೩-೩
*೫. ಅದೇ ೧೨-೨೪
*೬. ಅದೇ ೧೩-೭೬, ೧೪-೫೮
*೭. ಅದೇ ೧೩-೭೭
*೮. ಅದೇ ೧೩-೭೭
*೯. ಅದೇ ೧೩-೨೭
*೧೦. ಅದೇ ೧೩-೨೮
*೧೧. ಅದೇ ೧೩-೨೯
*೧೨. ಅದೇ ೧೩-೩೦
*೧೩. ಅದೇ ೧೩-೩೧
*೧೪. ಅದೇ ೧೩-೩೨
*೧೫. ರಾಜನೀತಿ ಪ್ರಕಾಶ, ಪು..೨೦೨ ವಾರಣಾಸಿ, ೧೯೧೬
*೧೬. ಕೌಟಿಲ್ಯ-ಅರ್ಥಶಾಸ್ತ್ರ, ॥ ೩-೪
*೧೭. ಎ. ಕ. ೧೨, ಮಧುಗಿರಿ-೨೧
*೧೮. ಎಂ. ಎ. ಆರ್. ೧೯೨೯, ಮಧುಗಿರಿ ೯೭
*೧೯. ನಾರಾಯಣಾಚಾರ್ಯ : ಮಧುಗಿರಿ ಚರಿತ್ರೆ, ಪು-೨೧
*೨೦. ಬುಕಾನನ್ : ಎ ಜರ್ನಿ ಫ್ರಂ ಮೈಸೂರು, ಮಲಬಾರ್, ಕೆನರಾ, ಸ.-೧ ಪುಟ. ೨೫೦
*೨೧. ಮೆಕಂಜಿ : ಮೆಮೋರೀಸ್ ಆಫ್ ದಿ ನಾರ್ತ್ನ್ ಫರಗಣಾಸ್ ಆಫ್ ಮೈಸೂರು
*೨೨. ಚನ್ನಬಸಪ್ಪಪಾಟೀಲ್ : 'ಮಹಾನಾಡ ಪ್ರಭುಗಳ ಕೋಟೆ ಕೊತ್ತಲಗಳು, ಮಹಾನಾಡ ಪ್ರಭುಗಳು', (ಸಂ.) ಕಲಬುರ್ಗಿ
*೨೩. ಎ. ಕ. ೧೨, ಮಧುಗಿರಿ - ೧೮
*೨೪. ಎ. ಕ.. ೧೬, ಮಧುಗಿರಿ - ೧೧೬

ಸುಜಾತ ಮಲ್ಲನಗೌಡ *

# ಬಹದ್ದೂರ ಬಂಡಾ ಕೋಟೆ

ಐತಿಹಾಸಿಕ ಹಿನ್ನೆಲೆ : ಕರ್ನಾಟಕದಲ್ಲಿ ಪುನಃ ವಿಭಜಿಸಲ್ಪಟ್ಟ ಜಿಲ್ಲೆಗಳಲ್ಲಿ ಕೊಪ್ಪಳವೂ ಒಂದಾಗಿದೆ. ಕನ್ನಡ ನಾಡಿನ ಇತಿಹಾಸದಲ್ಲಿ ಹಿಂದೆ ಕೊಪ್ಪಳವು ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಧಾರ್ಮಿಕ ವಾಗಿ ಸಮೃದ್ಧಿಯಿಂದ ಮೆರೆದ ಪಟ್ಟಣವಾಗಿತ್ತು ಎಂಬುದು ಅಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತದೆ. ಈ ಪಟ್ಟಣದ ಪಕ್ಕದಲ್ಲಿ ಒಂದು ಸಣ್ಣಗ್ರಾಮವಿದೆ. ಆ ಗ್ರಾಮದ ಹೆಸರು ಬಹದ್ದೂರ ಬಂಡಾ. ಇದು ಕೊಪ್ಪಳದಿಂದ ಕೇವಲ ನಾಲ್ಕು ಕಿ.ಮೀ. ದೂರದಲ್ಲಿದೆ. ಹ್ಯಾಟಿ ರಸ್ತೆಯಿಂದ ಈ ಗ್ರಾಮಕ್ಕೆ ಹೋಗಬಹುದು. ಈ ಗ್ರಾಮದಲ್ಲಿರುವ ಬೆಟ್ಟದ ಮೇಲೆ ಒಂದು ಬಲಿಷ್ಠವಾದ ಕೋಟೆಯು ಎದ್ದು ನಿಂತಿದೆ. ಇಂದಿಗೂ ಇದು ಸುಸ್ಥಿತಿಯಲ್ಲಿ ಕಂಡು ಬರುತ್ತವೆ. ಈ ಊರಿಗೆ ಬಹದ್ದೂರ ಬಂಡಾ ಎಂಬ ಹೆಸರು ಬರಲು ಕಾರಣ ಅಂದು ಕೊಪ್ಪಳವನ್ನು ಆಕ್ರಮಿಸಿದ ನಂತರ ಮೈಸೂರಿನ ಹೈದರಾಲಿಯು ಕೊಪ್ಪಳ ಕೋಟೆಯನ್ನು ಕಟ್ಟಿಸುವ ಸಮಯದಲ್ಲಿ ಇಲ್ಲಿಯೂ ಒಂದು ಕೋಟೆಯನ್ನು ಕಟ್ಟಿಸಲು ಆದೇಶ ಹೊರಡಿಸಿದನು. ಹೈದರಾಲಿಯು ಹಿಂದೆ ಅನೇಕ ವಿಜಯಗಳನ್ನು ಸಾಧಿಸಿದ ಫಲವಾಗಿ ಆತನು ಬಹುದ್ದೂರ ಎಂಬ ಬಿರುದನ್ನು ಹೊಂದಿದ್ದರಿಂದ ಆ ಬಿರುದಾಂಕಿತ ಹೆಸರನ್ನೇ ಈ ಗ್ರಾಮಕ್ಕೆ ಇಟ್ಟಿರುವ ಸಾಧ್ಯತೆ ಇದೆ. ಅಲ್ಲದೆ ಬಂಡಾ ಎನ್ನುವುದು ಕಲ್ಲು ಎಂಬ ಅರ್ಥವನ್ನೂ ಸೂಚಿಸುವುದು. ಇದರ ನೈಸರ್ಗಿಕ ಹಿನ್ನೆಲೆ ನೋಡಿದರೆ ಇಲ್ಲಿ ಕೋಟೆ ಕಟ್ಟಿಸಲು ಅಲ್ಲಿನ ಬಂಡೆ ಪ್ರಶಸ್ತವೆನಿಸಿದ್ದರಿಂದ ಕೋಟೆಯನ್ನು ಸುಲಭವಾಗಿ ನಿರ್ಮಿಸಿ ಈ ಊರಿಗೆ ಬಹದ್ದೂರಬಂಡಾ ಎಂಬ ಹೆಸರನ್ನು ಕೊಟ್ಟಿರಬೇಕು.

## ಕೋಟೆಯ ಉಲ್ಲೇಖ

ಈ ಕೋಟೆಯನ್ನು ಕಟ್ಟಿಸಿದ ಉಲ್ಲೇಖವು ಕೆಲವು ಪ್ರಕಟಿತ ಅಪ್ರಕಟಿತ ಶಾಸನಗಳಿಂದಲೂ ಅಲ್ಲದೆ ಕೆಲವು ಕೃತಿಗಳಿಂದ ಕೋಟೆಯ ರಾಜಕೀಯ ಇತಿಹಾಸವು ಕೂಡ ತಿಳಿದು ಬರುತ್ತದೆ. ಕ್ರಿ.ಶ. ೧೫೮೧ರಲ್ಲಿ ಹೈದರಾಲಿ ಆಳ್ವಿಕೆಯಲ್ಲಿ ಶೇಕ ಮಹಮ್ಮದಖಾನ ಎಂಬ ಕೊಪ್ಪಳ ಕೋಟೆಯ ಮೇಲ್ವಿಚಾರಕನ ಉಸ್ತುವಾರಿಯಲ್ಲಿ ಬಹದ್ದೂರಬಂಡಾ ಕೋಟೆಯನ್ನು ನಿರ್ಮಿಸ ಲಾಯಿತು. ಈ ಕೋಟೆಯಲ್ಲಿನ ಕೆಲವು ಬಾಗಿಲುಗಳ (ಪೂರ್ವ, ಪಶ್ಚಿಮ) ಆಲಂಕಾರಿಕ ಕೆತ್ತನೆಯನ್ನೂ ಮಾಡಿದ ಹಲ್‌ಚಲ್ ಎಂಬ ಕಟ್ಟಡ ನಿರ್ಮಿಸುವವನ ಹೆಸರನ್ನು ಕುರಿತ ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಕ್ರಿ. ಶ. ೧೭೮೩-೮೪ರ ಶಾಸನದಲ್ಲಿ ಈ ಕೋಟೆಯನ್ನು ಮತ್ತೆ ದುರಸ್ತಿ ಕಾರ್ಯ ಮಾಡಿಸಲು ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡಲಾಯಿತು ಎಂದು ಉಲ್ಲೇಖಿ ಸಲಾಗಿದೆ. ಮುಂದೆ ೧೭೮೭ರಲ್ಲಿ ಮರಾಠರು ಮತ್ತು ನಿಜಾಮರು ತಮ್ಮ ಸೈನ್ಯದೊಂದಿಗೆ ಕೊಪ್ಪಳ ಹಾಗೂ ಬಹುದ್ದೂರಬಂಡಾ ಕೋಟೆಗಳ ಮೇಲೆ ದಾಳಿ ಮಾಡಿ ಎರಡು ತಿಂಗಳ ನಂತರ ಈ ಕೋಟೆಯನ್ನು ವಶಪಡಿಸಿಕೊಂಡರು. ನಂತರ ಈ ಜೊತೆಗೂಡಿದ ಕೂಟವು ತ್ವರಿತಗತಿಯಲ್ಲಿ ಉತ್ತರ, ಪೂರ್ವ ಹಾಗೂ ಗಜೇಂದ್ರ ಗಡದಿಂದ ಹಿಂತಿರುಗುವ ವೇಳೆಯಲ್ಲಿ ಇತ್ತ ಟಿಪ್ಪುಸುಲ್ತಾನನು ಬಹದ್ದೂರಬಂಡಾ ಹಾಗೂ ಕೊಪ್ಪಳದ ಮೇಲೆ ದಂಡೆತ್ತಿ ಬಂದನು. ಇವನು ಈ ಕೂಟದ ವಿರುದ್ಧ ಕಾರ್ಯಾಚರಣೆ ಕೈಗೊಂಡು ಕೆಲವು ತಿಂಗಳ ನಂತರ ಬಹದ್ದೂರಬಂಡಾವನ್ನು ವಶಪಡಿಸಿಕೊಂಡನು. ಚದುರಿದ ರಕ್ಷಣಾಸೈನ್ಯವನ್ನು ಅರಬ ಸೈನಿಕರು ಸಮರ್ಥ ರೀತಿಯಿಂದ ಬಲಪಡಿಸಿದರು. ಟಿಪ್ಪುವಿನ ರಕ್ಷಣಾ ಸೈನ್ಯದಲ್ಲಿ ಒಬ್ಬ ಯೋಗ್ಯ ಹಿಂದು ಸೈನಿಕನು ಮರಾಠರ ವಿರುದ್ಧ ಹೋರಾಡಿದಾಗ ಮರಾಠರಿಂದ ಶಿಕ್ಷೆಗೆ ಒಳಪಟ್ಟನು. ಮುಂದೆ ಬಹದ್ದೂರಬಂಡಾ ಏಪ್ರಿಲ್ ೧೭೯೧ರಲ್ಲಿ ಬ್ರಿಟಿಷರ ಕ್ಯಾಪ್ಟನ್ ಅಂಡ್‌ಕ್ರೋಚ್ ವಶಕ್ಕೆ ಹೋಯಿತು. ಅವನು ಆ ಕೋಟೆಯ ರಕ್ಷಣಾ ಸೈನ್ಯವನ್ನು ಬಲಪಡಿಸಲು ಎಲ್ಲ ರೀತಿಯಿಂದ ನೆರವು ಕೊಟ್ಟನು. ಆದರೆ ಅನಿರೀಕ್ಷಿತವಾಗಿ ಇತ್ತ ಬೆಂಗಳೂರು ಆಳ್ವಿಕೆಯಲ್ಲಿ ಕುಸಿತ ಕಂಡುಬಂದುದರಿಂದ ಇವನ ಕಾರ್ಯಾಚರಣೆಯ ದಿಕ್ಕು ಇಲ್ಲಿಂದ ಬದಲಾಯಿತು.

---

* ಆಶ್ರಯ : ಬಿ. ಹಂಪನಗೌಡ, ಮಾಜಿ ಶಾಸಕರು, ಸಿಂಧನೂರು, ರಾಯಚೂರು ಜಿಲ್ಲೆ

### ವಾಸ್ತು ಮಾದರಿ

ಹಿಂದಿನ ಕಾಲದ ನಮ್ಮ ಪಟ್ಟಣ ರಕ್ಷಣೆಯ ಸಲುವಾಗಿ ಬೇರೆ ಬೇರೆ ರೀತಿಯ ಕೋಟೆ - ಕೊತ್ತಳಗಳನ್ನು ನಿರ್ಮಿಸಲಾಗುತ್ತಿತ್ತು. ಇಂತಹ ಕೋಟೆಗಳನ್ನು ಯಾವಾಗಲೂ ಸೈನಿಕ ವಾಸ್ತು ಮಾದರಿಯಲ್ಲಿ ಕಟ್ಟಲಾಗುತ್ತಿತ್ತು. ಇಲ್ಲಿನ ಕೋಟೆಯು ಕೊಪ್ಪಳದಿಂದ ಆಗ್ನೇಯ ದಿಕ್ಕಿಗಿದೆ. ಈ ಭಾಗವೆಲ್ಲವೂ ಗುಡ್ಡಗಳಿಂದ ಸುತ್ತುವರೆದಿದ್ದರಿಂದ ಸಹಜವಾಗಿ ಇದು ಅಭೇದ್ಯ ಕೋಟೆಯಂತೆ ಕಂಡು ಬರುತ್ತಿದ್ದುದರಿಂದ ಈ ಪ್ರದೇಶವು ಕೋಟೆ ಕಟ್ಟಲು ಪ್ರಶಸ್ತವೆನಿಸಿದ್ದರಿಂದ ಈ ಸ್ಥಳವನ್ನು ಕೋಟೆ ಕಟ್ಟಲು ಆಯ್ಕೆ ಮಾಡಿಕೊಳ್ಳಲಾಯಿತು.

### ಕೋಟೆ-ಗೋಡೆ ಮತ್ತು ಕೊತ್ತಳಗಳು

ಬಹದ್ದೂರ ಬಂಡಾ ಕೋಟೆಯನ್ನು ಎರಡು ಸುತ್ತಿನಲ್ಲಿ ನಿರ್ಮಿಸಲಾಗಿದೆ. ಈ ಕೋಟೆಯನ್ನು ಕೊಪ್ಪಳ ಕೋಟೆಯನ್ನು ನಿರ್ಮಿಸುವ ವೇಳೆಯಲ್ಲಿ ಕಟ್ಟಲಾಯಿತು. ಇಲ್ಲಿನ ಕೋಟೆಗೋಡೆಗೆ ಚೌಕಾಕಾರದ ದಪ್ಪನೆಯ ಕಲ್ಲುಗಳನ್ನು ಉಪಯೋಗಿಸಲಾಗಿದೆ. ನಡುವೆ ಯಾವುದೇ ಗಾರೆ, ಸಿಮೆಂಟ್, ಕೆಸರನ್ನು ಮಿಶ್ರಮಾಡಿ ಹೋಗಿಸಿಲ್ಲ. ಈ ಕೋಟೆಯ ಗೋಡೆಯಲ್ಲಿ ಅಡಿಪಾಯ ಹಾಕುವ ತಂತ್ರ ಬಹಳ ಅಚ್ಚರಿಯನ್ನು ಉಂಟುಮಾಡುತ್ತದೆ. ಬೆಟ್ಟದ ಮೇಲೆ ಒಮ್ಮೊಮ್ಮೆ ಗೋಡೆಯನ್ನು ಕಟ್ಟುವಾಗ ಒಮ್ಮೊಮ್ಮೆ ಬಂಡೆ ಇಳಿಜಾರು ಇದ್ದಾಗ ಕಲ್ಲುಗಳು ಕೆಳಗೆ ಬೀಳಬಹುದು. ಇಲ್ಲದಿದ್ದರೆ ಗೋಡೆ ನಂತರದಲ್ಲಿ ಉಬ್ಬ ಬಹುದು. ಅದಕ್ಕಾಗಿ ಗೋಡೆಯ ಕೆಳಗೆ ಕುಸಿಯದ ಹಾಗೆ ಮಾಡಲು ಆ ಬಂಡೆಯ ಕೆಳಗೆ ಕಪ್ಪನೆಯ ಕಲ್ಲುಗಳನ್ನು ಒಡೆದು ಬಿಟ್ಟಿರುತ್ತಾರೆ. ಹೀಗಾಗಿ ಗೋಡೆಯು ಬಹಳ ಗಟ್ಟಿಯಾಗಿ ನಿಲ್ಲುತ್ತದೆ. ಈ ತಂತ್ರವು ಕೋಟೆಯನ್ನು ಬೆಟ್ಟದ ಮೇಲೆ ಕಟ್ಟುವಾಗ ಮಾತ್ರ ಉಪಯೋಗಿಸುತ್ತಾರೆ. ಇಲ್ಲಿನ ಕೊತ್ತಳಗಳು ವೃತ್ತಾಕಾರ ಹಾಗೂ ಅರ್ಧವೃತ್ತಾಕಾರದಲ್ಲಿ ಇವೆ. ಈ ಕೊತ್ತಳಗಳು ಯಾವ ಹೆಸರನ್ನು ಹೊಂದಿಲ್ಲ.

### ಬಾಗಿಲುಗಳು - ರಚನೆಕಾಲ

ಬಹದ್ದೂರಬಂಡಾ ಕೋಟೆಯಲ್ಲಿ ಹಲವು ಹಿರಿದಾದ ಮತ್ತು ಕಿರಿದಾದ ಬಾಗಿಲುಗಳು ಕಂಡು ಬರುತ್ತವೆ. ಈ ಬಾಗಿಲುಗಳು ಯಾವ ಹೆಸರನ್ನು ಹೊಂದಿರುವುದಿಲ್ಲ. ಈಶಾನ್ಯಕ್ಕೆ ಬೆಟ್ಟದ ಮೆಟ್ಟಲು ಏರಿ ಮೇಲೆ ಬಂದಾಗ ಒಂದು ಗುಹೆ ಕಂಡು ಬರುವುದು. ಅಲ್ಲಿ ಒಂದು ಚಿಕ್ಕ ಬಾಗಿಲು ಸಿಗುತ್ತದೆ. ಇದು ಈ ಕೋಟೆಯ ಮೊದಲನೆಯ ಬಾಗಿಲು ಆಗಿರುತ್ತದೆ. ಇದಕ್ಕೆ ಬಾಗಿಲು ಚೌಕಟ್ಟು ಇದೆ. ಯಾವುದೇ ಅಲಂಕಾರಿಕ ಕೆತ್ತನೆ ಇಲ್ಲ. ನಂತರ ದಕ್ಷಿಣಕ್ಕೆ ಬಂದು ಪಶ್ಚಿಮ ದಿಕ್ಕಿಗೆ ಬಂದಾಗ ಅಲ್ಲಿ ಇನ್ನೊಂದು ಬಾಗಿಲು ಇದೆ. ಇದು ಎರಡನೆಯ ಬಾಗಿಲು ಆಗಿರುತ್ತದೆ. ಈ ಬಾಗಿಲಿಗೆ ಚೌಕಟ್ಟು ಇದ್ದು, ಬಾಗಿಲು ಮೇಲೆ ಎರಡು ಸಿಂಹಗಳ ಕೆತ್ತನೆ ಕಂಡು ಬರುತ್ತದೆ. ನಂತರ ಪೂರ್ವಕ್ಕೆ ಬಂದಾಗ ಅಲ್ಲಿ ಒಂದು ಬಾಗಿಲು ಸಿಗುವುದು. ಇದರ ಬಾಗಿಲು ಚೌಕಟ್ಟು ಬಹಳ ಸುಸ್ಥಿತಿಯಲ್ಲಿದೆ. ನಂತರ ಪುನಃ ಪಶ್ಚಿಮ ದಿಕ್ಕಿಗೆ ಬಂದಾಗ ೪ನೆಯ ಬಾಗಿಲು ಸಿಗುತ್ತದೆ. ಇದು ಸುಸ್ಥಿತಿಯಲ್ಲಿದೆ. ಈ ಬಾಗಿಲಿನ ಮೇಲೆ ಒಂದು ಅಪ್ರಕಟಿತ ಶಾಸನವು ಕಂಡು ಬರುತ್ತದೆ. ಈ ಬಾಗಿಲ ಪಶ್ಚಿಮಕ್ಕೆ ಬಂಡೆಯೊಂದರ ಮೇಲೆ ಒಂದು ಅರೇಬಿಕ್ ಶಾಸನವು ಇದ್ದು. ಈಗಾಗಲೇ ಅದು ಪ್ರಕಟಗೊಂಡಿದೆ. ಈ ಶಾಸನವು ಈ ಕೋಟೆಯನ್ನು ಕ್ರಿ. ಶ. ೧೭೮೪-೮೫ರ ವೇಳೆಯಲ್ಲಿ ನಿರ್ಮಿಸಲಾಯಿತೆಂದು ಉಲ್ಲೇಖಿಸುತ್ತಿದೆ. ಬಾಗಿಲು ಒಳಕ್ಕೆ ಬಂದರೆ ಪಶ್ಚಿಮದಲ್ಲಿ ಎರಡು ಕಂಬಗಳಿಂದ ಅಲಂಕೃತವಾದ ಮಂಟಪಗಳಿವೆ. ಒಂದೊಂದು ಮಂಟಪದಲ್ಲಿ ಎರಡು ಗೂಡುಗಳಿವೆ. ಬಾಗಿಲು ಮುಚ್ಚಲು ಒಳಗೆ ಚೌಕಟ್ಟಿನಲ್ಲಿ ಎರಡು ಗುಣಿಗಳಿವೆ. ಈ ಬಾಗಿಲು ಎದುರಿಗೆ ಇನ್ನೊಂದು ಕಿರಿದಾದ ಬಾಗಿಲು ಇದೆ. ಪಕ್ಕದಲ್ಲಿ ಎರಡು ಗುಣಿಗಳಿವೆ. ನಂತರ ವಾಯುವ್ಯ ದಿಕ್ಕಿಗೆ ಬಂದರೆ ಅಲ್ಲಿ ಒಂದು ಕಿರಿದಾದ ಬಾಗಿಲು ಬಹಳ ಸುಸ್ಥಿತಿಯಲ್ಲಿ ಕಂಡು ಬರುತ್ತದೆ. ಇದಕ್ಕೆ ಮೇಲ್ಛಾವಣಿಯೂ ಕೂಡ ಇದೆ. ಕಂಬಗಳಿಗೆ ಕೆತ್ತನೆ ಇಲ್ಲ. ಬೋದಿಗೆಗಳು ಅಲಂಕಾರಿಕವಾಗಿವೆ. ಪಕ್ಕಕ್ಕೆ ಎರಡು ಗುಣಿಗಳಿವೆ. ಬಾಗಿಲು ಮುಚ್ಚಿದ ಮೇಲೆ ಅದನ್ನು ಬಿಗಿಯಾಗಿ ಕೂಡಿಸಲು ಬಾಗಿಲಿನ ಅಕ್ಕ-ಪಕ್ಕದಲ್ಲಿ ಎರಡು ರಂಧ್ರ ಮಾಡಿದ್ದಾರೆ.

### ನಿಟುಗಳು

ಬಹುದ್ದೂರ ಬಂಡಾ ಕೋಟೆಯ ಮೇಲೆ ಅರ್ಧ ವೃತ್ತಾಕಾರದಲ್ಲಿ ಎದ್ದು ನಿಂತಿರುವ ನಿಟುಗಳು ಬಹಳ ಮಹತ್ವವುಳ್ಳವು. ಕಾರಣ ವೈರಿಯ ಕಣ್ಣಿಗೆ ಕಾಣದಂತೆ ಅಡಗಿಕೊಂಡು ಯುದ್ಧ ಮಾಡುವ ತಂತ್ರದಲ್ಲಿ ಇವುಗಳ ಸಂದಿಯಿಂದ ಬಾಣಗಳನ್ನು ಬಿಟ್ಟಾಗ ಬಾಣ ಬಿಡುವವನು ವೈರಿಯ ಕಣ್ಣಿಗೆ ಕಾಣುವುದಿಲ್ಲ. ಬಂದೂಕುಗಳನ್ನು ಉಪಯೋಗಿಸಲು ಪ್ರಾರಂಭಿಸಿದ ಮೇಲೆ ನಿಟುಗಳ ರಚನೆಯಲ್ಲಿ ಬದಲಾವಣೆಯಾಗಿದೆ. ಅರ್ಧ ವೃತ್ತಾಕಾರದ ನಿಟುಗಳು ಕೊಪ್ಪಳ ಕೋಟೆಯಲ್ಲಿ ಕಂಡುಬರುತ್ತವೆ.

### ಕೊಳಗಳು

ಬಹುದ್ದೂರ ಬಂಡಾ ಕೋಟೆಯಲ್ಲಿ ಅನೇಕ ಕೊಳಗಳು ಕಂಡು ಬರುತ್ತವೆ. ಮೂರನೆಯ ಬಾಗಿಲಿನ ಮುಂದುಗಡೆ ಒಂದು ಕೊಳವಿದೆ. ಹಾಗೆ ನಾಲ್ಕನೆಯ ಬಾಗಿಲಿನ ಮುಂದೆಯೂ ಇನ್ನೊಂದು ಕೊಳವಿದೆ. ಐದನೆಯ ಬಾಗಿಲನ್ನು ದಾಟಿದರೆ ಅಲ್ಲಿ ಒಂದು ದೊಡ್ಡ ಆವರಣದಲ್ಲಿ ೪ ಕೊಳಗಳು ಕಂಡುಬರುತ್ತವೆ. ಈ ಕೊಳಗಳು

ಸದಾ ಕಾಲ ನೀರನ್ನು ತುಂಬಿಕೊಂಡು ಕೋಟೆಯ ರಕ್ಷಣೆ ಮಾಡುತ್ತಿದ್ದ ಸೈನಿಕರಿಗೆ ಹಾಗೂ ಇತರ ಉದ್ದೇಶಗಳಿಗೆ ಉಪಯೋಗಿಸಲ್ಪಡುತ್ತಿದ್ದವು.

### ಇತರ ಅವಶೇಷಗಳು

ಬಹುದ್ದೂರಬಂಡಾ ಕೋಟೆಯಲ್ಲಿ ಇವುಗಳಲ್ಲದೆ ಮೂರನೆಯ ಬಾಗಿಲಿನ ಒಳಕ್ಕೆ ಬಂದರೆ ಅಲ್ಲಿ ಒಂದು ಹನುಮಂತನ ಗುಡಿ ಇದೆ. ಅದರ ಎದುರಿಗೆ ಒಂದು ದೀಪಸ್ತಂಭ ಇದೆ. ಐದನೇ ಬಾಗಿಲು ಒಳಗೆ ಬಂದರೆ ಅಲ್ಲಿ ಒಂದು ದೊಡ್ಡ ಆವರಣವಿದ್ದು, ಅಲ್ಲಿ ಒಂದು ಈಶ್ವರ ದೇವಸ್ಥಾನವಿದೆ. ಆ ಮಂದಿರದಲ್ಲಿ ದಕ್ಷಿಣಕ್ಕೆ ಒಂದು ಕಟ್ಟಡವು ಕಾಣುತ್ತದೆ. ಅಲ್ಲದೆ ಬಿದ್ದು ಹೋಗಿರುವ ಇನ್ನಿತರ ಕಟ್ಟಡಗಳು ಇವೆ. ಅಲ್ಲದೆ ಅಲ್ಲಿ ಒಂದು ದೇವಿಯ ಗುಡಿಯೂ ಇದೆ.

### ಉಪ ಸಂಹಾರ

ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬಹುದ್ದೂರ ಬಂಡಾ ಕೋಟೆಯು ಇಂದಿಗೂ ಸುಸ್ಥಿತಿಯಲ್ಲಿ ಕಂಡು ಬರುವುದಕ್ಕೆ ಕಾರಣ ಕೋಟೆಯ ರಚನೆಯಲ್ಲಿ ಬಳಸಿದ ತಂತ್ರ ತುಂಬಾ ವಿಸ್ಮಯಕರವಾದ ತಂತ್ರ. ಈ ಕೋಟೆಯನ್ನು ವಶಪಡಿಸಿ ಕೊಂಡಂತಹ ಅನೇಕ ಅರಸರು, ಅಧಿಕಾರಿಗಳು ಈ ಕೋಟೆಯು ಇನ್ನೂ ಗಟ್ಟಿಯಾಗಿ ನಿಲ್ಲಲು ಸಾಕಷ್ಟು ವೆಚ್ಚ ಮಾಡಿದರು. ಅವರು ಕೋಟೆಯನ್ನು ಹಾಳು ಮಾಡಲಿಲ್ಲ. ಈ ಕಾರಣಕ್ಕಾಗಿ ಕೋಟೆಯು ಇಂದು ಬಹಳ ಸುಸ್ಥಿತಿಯಲ್ಲಿ ಕಂಡು ಬರುತ್ತದೆ. ಇನ್ನೂ ಉಳಿದಿರುವ ಇಂತಹ ಬಲಿಷ್ಠವಾದ ಕೋಟೆಯನ್ನು ಪ್ರಜ್ಞಾವಂತರಾದ ನಾವು ಉಳಿಸಿಕೊಳ್ಳುವುದು ನಮ್ಮೆಲ್ಲರ ಹೊಣೆಯಾಗಿದೆ.

### ಆಧಾರ ಗ್ರಂಥಗಳು


೧. ಹಯವದನರಾವ್ : ಹಿಸ್ಟರಿ ಆಫ್ ಮೈಸೂರು: ಸಂಪುಟ ೩

೨. ರಾಯಚೂರು ಗೆಜೆಟಿಯರ್

೩. ಆನ್ಯೂಯಲ್ ರಿಪೋರ್ಟ್ ಆನ್ ಇಂಡಿಯನ್ ಎಪಿಗ್ರಫಿ, ೧೯೪೪-೪೫ ಸಂ. ಸಿ. ೧೩೯, ೧೪೨

೪. ಜರ್ನಲ್ ಆಫ್ ದಿ ಹೈದ್ರಾಬಾದ್ ಆರ್ಕಿಯಾಲಜಿಕಲ್ ಸೊಸಾಯಿಟಿ, ೧೯೧೬, ಪು. ೯೪

೫. ಸ್ವತಃ ಕ್ಷೇತ್ರಕಾರ್ಯ ಕೈಗೊಂಡು ಟಿಪ್ಪಣಿ ಸಂಗ್ರಹ ಮಾಡಿದ್ದು

ಎಸ್. ವೈ. ಸೋಮಶೇಖರ್ *

# ಕೂಡ್ಲಿಗಿ ತಾಲ್ಲೂಕಿನ 'ವೀರನ ದುರ್ಗ'ದ ಕೋಟೆ

ಬಳ್ಳಾರಿ ಜಿಲ್ಲೆಯು ಶಿಲಾಯುಗಗಳ ಕಾಲದಿಂದಲೂ ಮಾನವನಿಗೆ ತಾಣವಾಗಿ ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಪ್ರಸಿದ್ಧಿ ಹೊಂದಿರುವುದು ನೈಜನೀಯ ಸಂಗತಿ. ಅಂತೆಯೇ ವಿವಿಧ ಬಗೆಯ ಕೋಟೆಗಳನ್ನು ಈ ಜಿಲ್ಲೆ ಒಳಗೊಂಡಿದೆ. ಅವುಗಳಲ್ಲಿ ಹಂಪೆ, ಬಳ್ಳಾರಿ, ಗುಡೇಕೋಟೆ, ಜರಿಮಲೆ, ಸಂಡೂರು, ಕರಡಿದುರ್ಗ ಮತ್ತು ಉಚ್ಚಂಗಿ ದುರ್ಗ ಕೋಟೆಗಳು ಮುಖ್ಯವಾಗಿವೆ. ಇವುಗಳಂತೆಯೇ ಇದುವರೆಗೆ ಬೆಳಕಿಗೆ ಬಾರದ ಹಾಗೂ ವ್ಯವಸ್ಥಿತವಾಗಿ ನಿರ್ಮಾಣವಾಗಿರುವ ಕೋಟೆಗಳಲ್ಲಿ ವೀರನ ದುರ್ಗವೂ ಒಂದು. ಇದು ಕೂಡ್ಲಿಗಿಯಿಂದ ಏಳು ಕಿ.ಮೀ. ದೂರದಲ್ಲಿದೆ. ಆದರೆ ಈ ಕೋಟೆಯನ್ನು ಕುರಿತು ಇದುವರೆಗೆ ಸರಿಯಾದ ಅಧ್ಯಯನ ನಡೆದಿಲ್ಲ. ಸ್ಥಳೀಯರು ಕೋಟೆಯನ್ನು ಒಳಗೊಂಡ ಬೆಟ್ಟವನ್ನು ಹೆಸರಿಸುತ್ತಿರುವುದು ಬೀರಲಗುಡ್ಡವೆಂದು. ಬೀರಲಗುಡ್ಡವೆಂಬುದು ವೀರನಗುಡ್ಡ ಎಂಬುದುರ ಅಪಭ್ರಂಶ ರೂಪ. ವೀರನಗುಡ್ಡವು ಕೋಟೆಯನ್ನು ಒಳಗೊಂಡ ವಸತಿ ನೆಲೆಯನ್ನು ಹೊಂದಿರುವುದರಿಂದ ವೀರನದುರ್ಗವೆಂಬುದಾಗಿ ಕರೆಯಲ್ಪಟ್ಟಿದೆ.

## ಕೋಟೆಯ ಕಾಲ

ವಿಜಯನಗರ ಸಾಮ್ರಾಜ್ಯಾವಧಿಯಲ್ಲಿ ಪಾಳೆಯಪಟ್ಟುಗಳ ಬೆಳವಣಿಗೆಯನ್ನು ಕಾಣುತ್ತೇವೆ. ಅದರ ಪತನಾನಂತರ ಈ ಪಾಳೆಯಪಟ್ಟುಗಳು ಸ್ವತಂತ್ರ ಹಾಗೂ ಅಧೀನವಾಗಿ ತಮ್ಮ ಶಕ್ತ್ಯಾನುಸಾರ ರಾಜ್ಯ ವಿಸ್ತರಣೆ ಮಾಡುತ್ತಾ ಬಂದವು. ಈ ಪಾಳೆಯಪಟ್ಟುಗಳು ತಮ್ಮ ರಾಜ್ಯದ ಸಂರಕ್ಷಣೆಯ ದೃಷ್ಟಿಯಿಂದ ಕೋಟೆಗಳನ್ನು ಕಟ್ಟಲಾರಂಭಿಸಿದವು. ಈ ಅವಧಿಯಲ್ಲಿ ನಿರ್ಮಾಣ ವಾದ ನೂರಾರು ಕೋಟೆಗಳನ್ನು ಕರ್ನಾಟಕದಾದ್ಯಂತ ಕಾಣ ಬಹುದು. ಕರ್ನಾಟಕದ ಇಂತಹ ಹಲವು ಪಾಳೆಯ ಪಟ್ಟುಗಳಲ್ಲಿ ಹರಪನಹಳ್ಳಿಯೂ ಒಂದು. ಇದು ಕ್ರಿ. ಶ. ೧೫೬೭ ರಲ್ಲಿ ದಾದಯ್ಯ ನಾಯಕನಿಂದ ಆರಂಭವಾಯಿತು. ಕ್ರಿ. ಶ. ೧೮೨೦ರಲ್ಲಿ ಇಮ್ಮಡಿ ಸೋಮಶೇಖರನಾಯಕನ ಪತ್ನಿ ನೀಲಮ್ಮಾಜಿಯವರೆಗೆ ನಡೆಸಿದ ಈ ಮನೆತನದ ಆಳ್ವಿಕೆ ಬ್ರಿಟೀಷರಿಂದ ಕೊನೆಗೊಂಡಿತು. ಸುಮಾರು ೨೨೦ ವರ್ಷಗಳ ಅವಧಿಯಲ್ಲಿ ಹರಪನಹಳ್ಳಿ ಪಾಳೆಯಗಾರರು ರಾಜ್ಯ ವಿಸ್ತರಿಸುವ ನಿಟ್ಟಿನಲ್ಲಿ ತಮ್ಮ ಸೈನಿಕ ನೆಲೆಗಳನ್ನು ಹಲವೆಡೆ ಸ್ಥಾಪಿಸಿದರು. ಅವುಗಳಲ್ಲಿ ಬಾಗಳಿ, ಚಿಗಟೇರಿ, ತಂಬ್ರಹಳ್ಳಿ, ಕುರದಗುಡ್ಡೆ, ಹೊಳಲು, ಉಚ್ಚಂಗಿದುರ್ಗ, ಕರಡಿದುರ್ಗ ಮತ್ತು ವೀರನದುರ್ಗಗಳು ಮುಖ್ಯವಾಗಿವೆ. ವೀರನದುರ್ಗದಲ್ಲಿ ಸೈನ್ಯದ ಒಂದು ಭಾಗವನ್ನು ಇಡಲಾಗಿದ್ದಿತೆಂಬುದು ಕೋಟೆಯ ಅವಶೇಷ ಗಳಿಂದ ಮತ್ತು ಅಂದು ಗುರಿಕಾರ ಪಡೆಯಲ್ಲಿ ಯೋಧರಾಗಿದ್ದ ಮನೆತನಗಳಿಂದ ವ್ಯಕ್ತವಾಗುತ್ತದೆ.

'ವೀರನದುರ್ಗ' ಎಂಬ ಹೆಸರು ಇಲ್ಲಿ ಆಳ್ವಿಕೆ ನಡೆಸಿದ 'ವೀರನಾಯಕ' ಎಂಬುವವನಿಂದ ಬಂದಿದೆ. ಈತನೇ ಈ ಕೋಟೆಯನ್ನು ಕಟ್ಟಿಸಿದನೆಂಬುದು ಸ್ಥಳೀಯ ಮೂಲಗಳಿಂದ ತಿಳಿದುಬರುವ ಅಂಶ. ಕ್ರಿ. ಶ. ೧೬೩೫ರಿಂದ ೧೬೬೭ ರ ವರೆಗೆ ಹರಪನಹಳ್ಳಿಯ ಪಾಳೆಯಗಾರನಾಗಿದ್ದ ವೀರ ಮುಮ್ಮಡಿ ನಾಯಕನೇ ಸ್ಥಳೀಯರು ಉಲ್ಲೇಖಿಸುವ ವೀರನಾಯಕ ನಿರಬಹುದು. ವೀರ ಮುಮ್ಮಡಿನಾಯಕನು (ಬಸವಂತನಾಯಕ) ತನ್ನ ರಾಜ್ಯ ವಿಸ್ತರಣ ಸಮಯದಲ್ಲಿ ವೀರನದುರ್ಗದ ಕೋಟೆಯನ್ನು ಕಟ್ಟಲು ಆರಂಭಿಸಿರಬೇಕು. ಜರಿಮಲೆಯ ಪಾಳೆಯಗಾರರ ಆಳ್ವಿಕೆಗೆ ವೀರನದುರ್ಗವು ಒಳಪಟ್ಟಿದ್ದಿತೆಂದೂ, ಅದನ್ನು ಹರಪನಹಳ್ಳಿ ಪಾಳೆಯಗಾರರು ಬಲಾತ್ಕಾರವಾಗಿ ಕಿತ್ತುಕೊಂಡರೆಂಬ ಸಂಗತಿಯೂ ತಿಳಿದುಬರುತ್ತದೆ.

## ಕೋಟೆಯ ಅವಶೇಷಗಳು

ವೀರನದುರ್ಗವು ನಿಸರ್ಗದತ್ತವಾದ ಬೆಟ್ಟವನ್ನು ಬಳಸಿ

* ಯೋಜನಾ ಸಹಾಯಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ – ೫೮೩ ೨೨೧

ನಿರ್ಮಿಸಿದ ಗಿರಿದುರ್ಗ. ವಸತಿ ತಾಣವಾಗಿದ್ದ ಈ ಕೋಟೆಯನ್ನು ಸ್ಥಳೀಯರು ಏಳುಬಾಗಿಲ ಊರು ಎಂದು ಕರೆಯುತ್ತಾರೆ. ಇದಕ್ಕೆ ಪೂರಕವಾಗಿ ಐದು ಬಾಗಿಲುಗಳ ಅವಶೇಷಗಳಿದ್ದು ಉಳಿದ ಬಾಗಿಲುಗಳು ಕಾಣಬರುತ್ತಿಲ್ಲ. ಕೋಟೆಯ ಗೋಡೆಗಳಲ್ಲಿ ಐದು ಸುತ್ತಿನ ಗೋಡೆಗಳು ಉತ್ತರ ದಿಕ್ಕಿಗೆ ವಿಸ್ತಾರವಾಗುತ್ತಾ ಬಂದಿವೆ. ಉಳಿದ ಎರಡು ಸುತ್ತಿನ ಕೋಟೆಯ ಅವಶೇಷಗಳು ಭಗ್ನವಾಗಿವೆ. ಇಲ್ಲಿನ ಕೋಟೆ ಮತ್ತು ಇತರ ಸ್ಮಾರಕಾವಶೇಷಗಳು ದನಗಾಯಿ ಹಾಗೂ ಕಾಲನ ದವಡೆಗೆ ಸಿಕ್ಕು ನಲುಗಿವೆ. ಈಗ ಉಳಿದ ೫ ಸುತ್ತು ಕೋಟೆಗಳಲ್ಲಿ ಮೂರು ಕೋಟೆಗಳು ಪ್ರಮುಖ ವಸತಿ ತಾಣ ಗಳಾಗಿದ್ದವು. ಇಲ್ಲಿ ಶೈವ ದೇಗುಲವಿದ್ದು ಯಾವುದೇ ಮೂರ್ತಿ ಇರುವುದಿಲ್ಲ. ಇದು ರುದ್ರಯ್ಯನ ಮಠವೆಂದೂ, ಕೆಲವರಿಂದ ಕೊಟ್ಟೂರೇಶ್ವರ ಮಠವೆಂದೂ ಕರೆಯಲ್ಪಡುತ್ತದೆ. ಇದರ ನವರಂಗದಲ್ಲಿ ವೀರಗಲ್ಲಿದೆ. ಇದು ಎರಡು ಹಂತಗಳನ್ನು ಹೊಂದಿದ್ದು, ವೀರನು ಕದನದಲ್ಲಿ ಶತ್ರುಗಳೊಂದಿಗೆ ಹೋರಾಡುವ ಹಾಗೂ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ಚಿತ್ರಣಗಳಿವೆ. ಇದರಲ್ಲಿ ಶಾಸನವಿದ್ದು, ಅಕ್ಷರಗಳು ಸ್ಪಷ್ಟವಾಗಿವೆ. ಈ ದೇಗುಲದ ಬಲಭಾಗದಲ್ಲಿ ರುದ್ರಯ್ಯನ ಬಾವಿಯಿದೆ. ಇದರಲ್ಲಿ ಸದಾ ಕಾಲವೂ ನೀರು ತುಂಬಿರುತ್ತದೆ. ವಿಶಾಲವಾದ ಹೊಂಡ ಇದಾಗಿದ್ದು, ವೀರನದುರ್ಗದ ಜನರಿಗೆ ಜೀವನೆಲೆ ಆಗಿದ್ದಿತು. ಕೋಟೆಯ ಮೇಲ್ಭಾಗದಲ್ಲಿ ೩೦ ಅಡಿಗಳಷ್ಟು ಆಳದ ಬಾವಿಗಳಿದ್ದು, ಇದರಲ್ಲಿ ಬಾವಿಯಂತೆ ಎಲ್ಲಾ ಕಾಲದಲ್ಲಿಯೂ ನೀರು ಇರುತ್ತಿರಲಿಲ್ಲ. ರುದ್ರಯ್ಯನ ಮಠದ ಮುಂದೆ ಹೊನ್ನೂರು ಸ್ವಾಮಿ ಮಠವೆಂದು ಕರೆಯುವ ಇತ್ತೀಚಿಗೆ ನಿರ್ಮಿಸಿದ ಕಟ್ಟಡವಿದೆ. ಈ ಮಠದಿಂದ ಮುಂದೆ ಕೋಟೆಯನ್ನು ಹತ್ತಲು ಆರಂಭಿಸಿದರೆ ಮೊದಲು ಸಿಗುವುದೇ *ಒನಕೆ ಕಿಂಡಿ*. ವೀರನದುರ್ಗದ ಪ್ರಮುಖ ದ್ವಾರವಿದು. ಈ ಬಾಗಿಲನ್ನು ಎರಡು ಬೃಹತ್ ಬಂಡೆಗಳ ಸಂದಿಯನ್ನು ಬಳಸಿ ಕಟ್ಟಲಾಗಿದೆ. ಕರ್ನಾಟಕದ ಚಿತ್ರದುರ್ಗ, ಹಂಪೆ ಮೊದಲಾದೆಡೆಗಳಲ್ಲಿ ಒನಕೆ ಕಿಂಡಿಗಳಿರುವುದನ್ನು ಪ್ರೊ॥ ಲಕ್ಷ್ಮಣ್ ತೆಲಗಾವಿಯವರು ಗುರುತಿಸಿದ್ದಾರೆ. ಈ ಮೇಲಿನ ಸ್ಥಳಗಳಲ್ಲಿರುವ ಒನಕೆ ಕಿಂಡಿಗಳ ಲಕ್ಷಣಗಳನ್ನು ಇಲ್ಲಿನ ಒನಕೆ ಕಿಂಡಿಯು ಹೋಲುವುದರಿಂದ ಅವರ ಸಂಶೋಧನೆಗೆ ಇದು ಮತ್ತೊಂದು ಆಕರವಾಗಬಲ್ಲದು. ಈ ಒನಕೆ ಕಿಂಡಿಗೆ ಕಂಚಿನ ಕದಗಳನ್ನು ಜೋಡಿಸಲಾಗಿದ್ದಿತ್ತೆಂಬುದು ಸ್ಥಳೀಯರಿಂದ ತಿಳಿದುಬರುವ ಅಂಶ. ಇಲ್ಲಿಂದ ೧೫ ಕಿ.ಮೀ. ದೂರದ ಕೊಟ್ಟೂರಿಗೆ ವಿವಾಹ ಮಾಡಿಕೊಟ್ಟ ಹೆಂಗಸೊಬ್ಬಳು ರಾತ್ರಿ ವೇಳೆ ಈ ಕಂಚಿನ ಕದಗಳನ್ನು ಮುಚ್ಚಿದ ಶಬ್ದ ಕೇಳಿ ಮಲಗುವ ಹೊತ್ತಾಯಿತೆಂದು ತಿಳಿದು ಹಾಲಿಗೆ ಹೆಪ್ಪುಹಾಕುತ್ತಿದ್ದಳೆಂಬುದು ಇಲ್ಲಿನ ಜನರಲ್ಲಿರುವ ಪ್ರತೀತಿ. ಬೀರಲಗುಡ್ಡ ಗ್ರಾಮದ ಸುಮಾರು ೧೦೦ ವರ್ಷಗಳಷ್ಟು ವಯಸ್ಸಾದ ಸಿದ್ದಮ್ಮ ಎಂಬುವರು ಹೇಳುವಂತೆ, ಕಳೆದ ೬೦ ವರ್ಷಗಳ ಹಿಂದೆ ಬೀರಲಗುಡ್ಡದ ಜನರು ಕೋಟೆಯ ಒಳಗೇ ವಾಸವಾಗಿದ್ದರು. ಪ್ಲೇಗ್‌ನ ಹಾವಳಿಯಿಂದ ಈಗಿನ ಗ್ರಾಮಕ್ಕೆ ಸ್ಥಳಾಂತರಿಸ ಬೇಕಾಯಿತು. ಕೋಟೆಯ ಒಳಗಿರುವ ಆಂಜನೇಯ ಗುಡಿಯ ಬಳಿ ತಮ್ಮ ಮನೆಯಿತ್ತೆಂದೂ ಅವರು ನೆನೆಯುತ್ತಾರೆ. ಇದರಿಂದ ವೀರನದುರ್ಗವು ವಸತಿ ತಾಣವಾಗಿದ್ದುದಂತೂ ಸ್ಪಷ್ಟ.

ಒನಕೆ ಕಿಂಡಿಯನ್ನು ದಾಟಿ ಕೋಟೆಯನ್ನು ಹತ್ತಲನು



ನಾಲ್ಕನೇ ಸುತ್ತಿನ ಕೋಟೆ ಮತ್ತು ಬುರುಜು

ವಾಗುವಂತೆ ನಿರ್ಮಿಸಿದ ಕಲ್ಲು ಹಾಸಿನ ದಾರಿಯನ್ನು ಹಿಡಿದು ಮುನ್ನಡೆದರೆ ನಡುವಲಕೇರಿ ಬಾಗಿಲು ಸಿಗುವುದು. ಬಾಗಿಲ ಹೆಸರೇ ಸೂಚಿಸುವಂತೆ ದುರ್ಗದ ಮಧ್ಯ ಭಾಗವಿದು. ಇಲ್ಲಿ ವಸತಿಯ ಅವಶೇಷಗಳಿದ್ದು, ಶಾನುಭೋಗ ಮತ್ತಿತರ ಅಧಿಕಾರಿಗಳ ಮನೆಗಳು ಇಲ್ಲಿಯೇ ಇದ್ದವು. ಇಂದಿಗೂ ವಿಶಾಲವಾದ ತಳಪಾಯವುಳ್ಳ ಮನೆಯ ಅವಶೇಷಗಳನ್ನು ಶಾನುಭೋಗರ ಮನೆಯೆಂದೇ ಜನರು ಗುರುತಿಸುತ್ತಾರೆ. ಈ ಮನೆತನದವರು ಇತ್ತೀಚೆಗೆ ಹೊಸಪೇಟೆಗೆ ಹೋಗಿ ನೆಲೆಸಿದರೆಂಬುದಾಗಿಯೂ ಹೇಳಲಾಗುತ್ತದೆ. ನಡುವಲಕೇರಿಯನ್ನು ದಾಟಿದರೆ ಮತ್ತೊಂದು ಕೋಟೆಯ ಸುತ್ತು ಸಿಗುವುದು. ಈ ಕೋಟೆಯನ್ನು ತುಂಬಾ ಉದ್ದವಾಗಿಯೂ, ವ್ಯವಸ್ಥಿತವಾಗಿಯೂ ಕಟ್ಟಲಾಗಿದೆ. ವಿಶಾಲವಾದ ಬುರುಜುಗಳನ್ನು ಹೊಂದಿದ ಕೋಟೆಯ ಗೋಡೆಯಲ್ಲಿ ಕೋವಿಗಳನ್ನಿಟ್ಟು ಗುಂಡು ಹಾರಿಸಲು ಅನುವಾಗುವ ಕೋವಿಕಿಂಡಿಗಳಿವೆ. ವೀರನದುರ್ಗಕ್ಕೆ ಬಳಸಿದ ಶಿಲೆ ಸ್ಥಳೀಯವಾಗಿ ದೊರೆಯುವ ಕಣಶಿಲೆಯಾಗಿದೆ. ಇಲ್ಲಿ ಹಂಪೆ ಮತ್ತು ಚಿತ್ರದುರ್ಗ ಕೋಟೆಗಳನ್ನು ಬಳಸಿದಂತೆ ಬೃಹತ್ ಗಾತ್ರದ ಕಲ್ಲುಗಳನ್ನು ತುಂಡರಿಸ ಬಳಸಲಾಗಿದೆ.

ವೀರನದುರ್ಗದ ಮೇಲ್ಭಾಗದ ಕೇಂದ್ರದಲ್ಲಿ ಮಲಿಯಮ್ಮ ದೇವಾಲಯ, ಮನೆಯ ಅವಶೇಷಗಳು, ಧಾನ್ಯ ಸಂಗ್ರಹಿಸುವ

ಅಗೇವುಗಳನ್ನು ಕಾಣಬಹುದು. ಮಲಿಯಮ್ಮ ಇಲ್ಲಿನ ಜನರ ಆಧಿದೇವತೆಯಾಗಿದ್ದು, ಇಲ್ಲಿ ಶ್ರಾವಣಮಾಸದ ಮಧ್ಯ ಮಂಗಳ ವಾರದಂದು ವಿಶೇಷ ಪೂಜೆ ನಡೆಯುತ್ತದೆ. ಇದರ ಹಿಂಬದಿಯಲ್ಲಿ ಎತ್ತರವಾದ ಬೃಹತ್ ಬಂಡೆಯಿದೆ. ಇದನ್ನು ಮಲಿಯಮ್ಮನ ಗುಂಡು ಎಂದು ಕರೆಯುತ್ತಾರೆ. ತಪ್ಪಿತಸ್ಥರಿಗೆ ಶಿಕ್ಷೆಯಾಗುತ್ತಿದ್ದ ಸ್ಥಳವಿದು. ಕೈದಿಗಳು ಮತ್ತಿತರರನ್ನು ಇಲ್ಲಿಂದ ನೂಕಿ ಕೊಲ್ಲುತ್ತಿದ್ದರು. ಕೋಟೆಯಲ್ಲಿ ವಾಸವಾಗಿದ್ದ ಗುರಿಕಾರರ ಮನೆತನಗಳು ಈಗಿನ ಬೀರಲಗುಡ್ಡ ಗ್ರಾಮದಲ್ಲಿದೆ. ಇವು ಹರಪನಹಳ್ಳಿ ಪಾಳೆಯಗಾರರ ಸೈನ್ಯದಲ್ಲಿ ಗುರಿಕಾರರ ಪ್ರಮುಖ ತಂಡವೇ ಇದ್ದುದಕ್ಕೆ ಪುಷ್ಟಿ ನೀಡುತ್ತದೆ. ಈ ಮನೆತನಗಳಲ್ಲಿ ಇಂದಿಗೂ ಬಂದೂಕು, ಕತ್ತಿ, ಗುರಾಣಿಗಳಿವೆ.

### ಟಿಪ್ಪುವಿನೊಂದಿಗೆ ಕದನ

ಹರಪನಹಳ್ಳಿ ಸಂಸ್ಥಾನವು ಸೋಮಶೇಖರ ನಾಯಕನ ಕಾಲದಲ್ಲಿ ಪ್ರಸಿದ್ಧಿ ಹೊಂದಿ ವಿಸ್ತಾರಗೊಂಡಿತು. ವಿಜಯನಗರ ಪತನಾನಂತರ ಆಳ್ವಿಕೆ ನಡೆಸಿದ ಶ್ರೀರಂಗದೇವರಾಯನ ಬಲಗೈ ಯಂತೆ ಈತನು ಕಾರ್ಯ ನಿರ್ವಹಿಸಿದ್ದನು. ವಿಜಯನಗರದ ಅರಸರ ನಂತರ ಹರಪನಹಳ್ಳಿಯು ಹೈದರ್ ಮತ್ತು ಟಿಪ್ಪುಸುಲ್ತಾನರ ಅಧೀನಕ್ಕೊಳಪಟ್ಟಿತು. ಅಂದು ಆಳ್ವಿಕೆ ನಡೆಸುತ್ತಿದ್ದ ಬಸಪ್ಪ ನಾಯಕನ ಅವಧಿಯಲ್ಲಿ ಟಿಪ್ಪುಸುಲ್ತಾನನು ೧೭೮೭-೮೮ರಲ್ಲಿ ತುಂಗಭದ್ರಾ ತೀರದೆಡೆಗೆ ತನ್ನ ಸೇನೆಯನ್ನು ತೆಗೆದುಕೊಂಡು ಕೊಪ್ಪಳ ಮತ್ತಿತರ ಕೋಟೆಗಳನ್ನು ವಶಪಡಿಸಿಕೊಂಡು ಹಿಂದಿರುಗುವಾಗ ಕೆಲವು ಸಾಮಂತ ನಾಯಕರನ್ನು ಅಡಗಿಸುವ ಸಲುವಾಗಿ ಸಂಚು ಹಾಕಿದ್ದನು. ಅವರ ಕೋಟೆಗಳನ್ನು ನಾಶಪಡಿಸುವ ಹಾಗೂ ಸಂಪತ್ತನ್ನು ಕೊಳ್ಳೆ ಹೊಡೆಯುವ ಗುಪ್ತ ಯೋಜನೆ ಇದಾಗಿದ್ದಿತು. ಅದರಂತೆ ಟಿಪ್ಪು ಸುಲ್ತಾನನು ಕೊಟ್ಟೂರು, ನಾರಾಯಣದೇವರ ಕೆರೆ, ಹರಪನಹಳ್ಳಿ, ಉಚ್ಚಂಗಿದುರ್ಗಗಳಿಗೆ ಒಂದೇ ವೇಳೆಗೆ ಮುತ್ತಿಗೆ ಹಾಕಿ ನಾಯಕನನ್ನು ಸುಸ್ತುಗೊಳಿಸಬೇಕೆಂದಿದ್ದನು. ಆ ಸಮಯದಲ್ಲಿ ನಾಯಕರಸ ಬಸಪ್ಪ ನಾಯಕನನ್ನು ಸೆರೆ ಹಿಡಿದು ಕಬ್ಬಾಳದುರ್ಗಕ್ಕೆ ಕಳುಹಿಸಲಾಯಿತು. ಈ ಮೇಲಿನ ಕೋಟೆಗಳು ವಶವಾದ ನಂತರ ವೀರನದುರ್ಗಕ್ಕೂ ದಾಳಿ ಮಾಡಲೆತ್ನಿಸಿದನು. ಈ ಕೋಟೆಯಲ್ಲಿ ರಾಮಯ್ಯ ನಾಯಕನೆಂಬ ಅಧಿಕಾರಿಯು ಟಿಪ್ಪುಸುಲ್ತಾನನ ವಿರುದ್ಧ ವೀರಾವೇಶದಿಂದ ಹೋರಾಡಿದನು. ಒಂದು ವಾರದ ಕಾಲ ಕದನ ನಡೆದರೂ ವಶವಾಗದೆ ಹಿಂದಿರುಗಿದ ಟಿಪ್ಪುಸುಲ್ತಾನ ಮರಳಿ ಈ ಕಡೆ ಸುಳಿಯಲಿಲ್ಲ. ರಾಮಯ್ಯನಾಯಕನ ಶಿಲಾಶಾಸನವನ್ನು ಚಿಕ್ಕೆರೂರು ಗೋವಿಂದಚಾರ್ಯರು ಗುರುತಿಸಿದ್ದು, ಅದು ಇಂದು ಉಳಿದಿರುವುದಿಲ್ಲ. ಟಿಪ್ಪುಸುಲ್ತಾನನೊಂದಿಗೆ ನಡೆದ ಕದನವನ್ನು ನೆನಪಿಸುವ *ರಕ್ತ ಬಾಳಯ್ಯನ ಕಟ್ಟೆಯು* ಕಾಳಗ ನಡೆದ ಆವರಣದಲ್ಲಿದೆ. ಕಾಳಗದಲ್ಲಿ ಮಡಿದ ಸೈನಿಕರ ರಕ್ತವು ಈ ಕಟ್ಟೆಯಲ್ಲಿ ಶೇಖರವಾಯಿ ತೆಂಬುದು ಸ್ಥಳೀಯರ ನಂಬಿಕೆ. ಜರಿ ಮಲೆಯು ಇಲ್ಲಿಗೆ ಸುಮಾರು ೧೦ ಕಿ.ಮೀ. ಹತ್ತಿರದಲ್ಲಿದ್ದು ವೀರನದುರ್ಗವನ್ನು ವಶಪಡಿಸಿ ಕೊಳ್ಳಲು ಇವರೀರ್ವರ ನಡುವೆ ಆಗಾಗ ಘರ್ಷಣೆಗಳು ನಡೆದಿರುವ ಸಾಧ್ಯತೆ ಇದೆ.

ಹೀಗೆ ವೀರನದುರ್ಗವು ಹರಪನಹಳ್ಳಿ ಪಾಳೆಯಗಾರರ ಆಳ್ವಿಕೆಯಲ್ಲಿ ಮಹತ್ವದ ಪಾತ್ರವಹಿಸಿ, ಇತ್ತೀಚಿನವರೆಗೆ ಜೀವಂತ ವಾಗಿದ್ದುದು ವ್ಯಕ್ತವಾಗಿತ್ತದೆ. ಇನ್ನು ಹೆಚ್ಚಿನ ಸಂಶೋಧನೆ ಕೈಗೊಳ್ಳ ಬೇಕಾಗಿದ್ದು, ಒಟ್ಟಿನಲ್ಲಿ ಇದು ಹರಪನಹಳ್ಳಿ ಪಾಳೆಯಗಾರರ ಚರಿತ್ರೆಗೆ ಇಂಬು ಕೊಡಬಲ್ಲದು.

(ಶ್ರೀ ವಿರೂಪಾಕ್ಷಿ, ಶ್ರೀ ಎಂ. ಕೊಟ್ರೇಶ ಹಾಗೂ ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡು ಮಾಹಿತಿಗಳನ್ನು ನೀಡಿದ ಬೀರಲ ಗುಡ್ಡದ ಗುರಿಕಾರರ ತಿಪ್ಪೇಸ್ವಾಮಿಯವರಿಗೆ ತುಂಬುಹೃದಯದ ಕೃತಜ್ಞತೆಗಳು.)

### ಆಕರಗಳು

*೧. *ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ್* - ೧೯೭೨
*೨. *ಮೈಸೂರು ಗ್ಯಾಜೆಟಿಯರ್* : (ಸಂ) ಸಿ. ಹೆಚ್. ಹಯವದನರಾವ್, ೧೯೧೦-೧೪
*೩. *ಹರಪನಹಳ್ಳಿ ಪಾಳೆಯಗಾರರು*, ಚಿಕ್ಕೆರೂರು ಗೋವಿಂದಚಾರ್ಯರ ಹಸ್ತಪ್ರತಿ
*೪. ಕು ಬಾ. ಸದಾಶಿವಪ್ಪ (೧೯೯೭) : *ಹರಪನಹಳ್ಳಿ ಪಾಳೆಯಗಾರರು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
*೫. 'ವೀರನದುರ್ಗ - ಒಂದು ಪರಿಚಯ' *ವಾಲ್ಮೀಕಿ ಕಿರಣ*, ೧೯೯೮, ರಾಜನಹಳ್ಳಿ

ಡಾ॥ ಚೆನ್ನಬಸಪ್ಪ ಎಸ್. ಪಾಟೀಲ *

# ಬಿಜಾಪುರದ ತೋಪುಗಳು

ಬಿಜಾಪುರವು ಕ್ರಿ.ಶ. ೧೪೮೯ ರಿಂದ ೧೬೮೬ರ ವರೆಗೆ ಆಳಿದ ಆದಿಲ್‌ಷಾಹಿ ಅರಸರ ರಾಜಧಾನಿಯಾಗಿತ್ತು. ಇಲ್ಲಿರುವ ಕೋಟೆಯು ಭಾರತದ ಬೃಹತ್ ಕೋಟೆಗಳಲ್ಲೊಂದು. ದೀರ್ಘವೃತ್ತಾಕಾರವಾಗಿರುವ ಈ ಕೋಟೆಯ ಸುತ್ತಳತೆ ಸುಮಾರು ೧೦ ಕಿ.ಮೀ. ಕೋಟೆ ಗೋಡೆಯಲ್ಲಿ ವಿವಿಧ ಆಕಾರದ ೯೬ ಕೊತ್ತಳಗಳಿವೆ. ಕೆಲವು ಕೊತ್ತಳಗಳ ಮೇಲೆ ತೋಪುಗಳಿವೆ.

ದೂರದಲ್ಲಿರುವ ವೈರಿಯನ್ನು ಕೊಲ್ಲಲು ಬಾಣ ಬಿಡುವುದು ಅಥವಾ ಈಟಿ/ಭರ್ಜಿಯನ್ನು ಎಸೆಯುವುದು ಬಹಳ ಹಿಂದಿನಿಂದ ರೂಢಿಯಲ್ಲಿದ್ದ ಪದ್ಧತಿಯಾಗಿತ್ತು. ಮದ್ದು ಗುಂಡುಗಳನ್ನು ಉಪಯೋಗಿಸಲು ಪ್ರಾರಂಭಿಸಿದ ನಂತರ ಯುದ್ಧ ತಂತ್ರದಲ್ಲಿ ಮಹತ್ತರವಾದ ಬದಲಾವಣೆಯಾಯಿತು. ಮದ್ದುಗುಂಡುಗಳನ್ನು ಬಂದೂಕು ಮತ್ತು ತೋಪುಗಳಿಂದ ಹಾರಿಸುವುದು ಪ್ರಾರಂಭವಾಯಿತು. ಬಹಳ ದೂರ ಮತ್ತು ಬಹಳ ಶಕ್ತಿಶಾಲಿಯಾದ ಮದ್ದುಗುಂಡುಗಳನ್ನು ಹಾರಿಸಲು ಹೆಚ್ಚು ಸಾಮರ್ಥ್ಯವಿರುವ ಬೃಹದಾಕಾರದ ತೋಪುಗಳ ಅವಶ್ಯಕತೆಯಿತ್ತು. ಇಂತಹ ಬೃಹದಾಕಾರದ ತೋಪುಗಳು ಬಿಜಾಪುರ ಕೋಟೆಯಲ್ಲಿವೆ.

ತೋಪುಗಳನ್ನು ತಯಾರಿಸುವ ವಿಧಾನವನ್ನು ಪರಿಗಣಿಸಿದರೆ ಎರಡು ವಿಧವಾದ ತೋಪುಗಳಿರುವುದು ತಿಳಿಯುತ್ತದೆ. ಮೊದಲನೆಯದು ಬಹಳ ಸರಳವಾದ ವಿಧಾನ. ಕಬ್ಬಿಣದ ಉದ್ದನೆಯ ಪಟ್ಟಿಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದರಂತೆ ಕೊಳವೆಯಾಕಾರದಲ್ಲಿ ಜೋಡಿಸಿ, ಕೊಳವೆಯ ಮೇಲೆ ಅಗಲವಾದ ಬಳೆಗಳನ್ನು ಒಂದಕ್ಕೆ ಮತ್ತೊಂದು ತಾಗುವಂತೆ ಸಾಲಾಗಿ ತೊಡಿಸಿ, ಕೆಂಪಾಗುವಂತೆ ಕಾಯಿಸಿ, ಪಟ್ಟಿಗಳು ಮತ್ತು ಬಳೆಗಳು ಪರಸ್ಪರ ಬೆಸೆದುಕೊಳ್ಳುವಂತೆ ಮಾಡುವುದು. ಎರಡನೆಯದು ಎರಕ ಹೊಯ್ದು ಬೇಕಾದ ಆಕಾರದ ತೋಪನ್ನು ತಯಾರಿಸುವುದು. ಬಿಜಾಪುರದಲ್ಲಿ ಈ ಎರಡು ವಿಧದ ಒಟ್ಟು ೧೩ ತೋಪುಗಳಿವೆ.

ಕೋಟೆಯ ಪಶ್ಚಿಮ ಭಾಗದಲ್ಲಿರುವ ಫತ್ಕೆ ಬಾಗಿಲಿನ ಉತ್ತರಕ್ಕೆ ಇರುವ ಶೇರ್ಜಾ ಬುರುಜಿನ ಮೇಲೆ **ಮಾಲಿಕ್-ಇ-ಮೈದಾನ್ ತೋಪು** ಇದೆ. ಈಶಾನ್ಯ ಭಾಗದಲ್ಲಿ ಗೋಳಗುಮ್ಮಟದ ಪಶ್ಚಿಮಕ್ಕೆ ಆಲಿ ಬುರುಜಿನ ಮೇಲೆ ಒಂದು ತೋಪು ಇದೆ. ಪೂರ್ವ ದಿಕ್ಕಿನಲ್ಲಿ ಅಲ್ಲಾಪುರ ಬಾಗಿಲಿನ ದಕ್ಷಿಣಕ್ಕಿರುವ ಕೊತ್ತಳದ ಮೇಲೆ **ಮುಸ್ತಫಾಬಾದ್ ತೋಪು** ಇದೆ. ದಕ್ಷಿಣ ದಿಕ್ಕಿಗೆ ಬಾಗಲಕೋಟೆ ರಸ್ತೆಯ ಹತ್ತಿರವಿರುವ ಲಂಡಾ ಖಸ್ಸಾಬ್ ಬುರುಜಿನ ಮೇಲೆ ಎರಡು ತೋಪುಗಳಿವೆ. ಪಶ್ಚಿಮ ದಿಕ್ಕಿನಲ್ಲಿಯ ಮಕ್ಕಾ ಬಾಗಿಲಿನ ಫರಂಗಿಶಾಹ ಬುರುಜಿನ ಮೇಲಿದ್ದ ತೋಪು ಮತ್ತು ವಾಯುವ್ಯ ದಿಕ್ಕಿನಲ್ಲಿರುವ ಶಹಪುರ ಬಾಗಿಲಿನ ಅಹಮದ್ ಬುರುಜಿನ ಮೇಲಿದ್ದ ತೋಪು ಈಗ ಗೋಳಗುಮ್ಮಟದ ಮುಂದಿರುವ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿವೆ. ವಾಯುವ್ಯ ದಿಕ್ಕಿನ ಸುಂದಾ ಬುರುಜಿನ ಮೇಲಿನ ತೋಪು, ಆಗ್ನೇಯ ದಿಕ್ಕಿನ ಒಂದು ಬುರುಜಿನ ಮೇಲಿನ ತೋಪು ಮತ್ತು ನೈರುತ್ಯ ದಿಕ್ಕಿನ ಒಂದು ಬುರುಜಿನ ಮೇಲಿನ ತೋಪು ಈಗ ಅವುಗಳ ಸ್ವಸ್ಥಾನಗಳಲ್ಲಿಲ್ಲ. ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿರುವ ಆರು ತೋಪುಗಳಲ್ಲಿ ಇವು ಸೇರಿರಬಹುದು. ಮಾಲಿಕ್-ಇ-ಮೈದಾನ್ ತೋಪು ಇರುವ ಶೇರ್ಜಾ ಬುರುಜಿನ ಪಶ್ಚಿಮಕ್ಕೆ ಕೋಟೆ ಗೋಡೆಯಿಂದ ಸ್ವಲ್ಪ ದೂರದಲ್ಲಿ ಪ್ರತ್ಯೇಕವಾದ ದೊಡ್ಡ ಬುರುಜು ಇದೆ. ಇದನ್ನು ಹೈದರ್ ಬುರುಜು ಅಥವಾ ಉಪರಿ ಬುರುಜು ಎಂದು ಕರೆಯುತ್ತಾರೆ. ಇದರ ಮೇಲೆ ಲಂಬಚರಿ ಹೆಸರಿನ ತೋಪು ಮತ್ತು ಇನ್ನೊಂದು ತೋಪು ಇವೆ.

**೧. ಮಾಲಿಕ್-ಇ-ಮೈದಾನ್ ತೋಪು :** ಲಂಡಾ ಖಸ್ಸಾಬ್ ಕಬ್ಬಿಣದ ತೋಪನ್ನು ಬಿಟ್ಟರೆ ಇದು ಬಿಜಾಪುರದಲ್ಲಯೇ ಅತಿ ದೊಡ್ಡ ತೋಪು. ಕಂಚಿನಿಂದ ಎರಕ ಹೊಯ್ದು ಮಾಡಿದ ಈ ತೋಪು ೫೫ ಟನ್ ಭಾರವಿದೆ. ಇದರ ಮೈಯನ್ನು ಉಜ್ಜಿ

* ಉಪನಿರ್ದೇಶಕರು, ಕರ್ನಾಟಕ ಸರ್ಕಾರ ಪ್ರಾಚ್ಯ ಮತ್ತು ವಸ್ತು ಸಂಗ್ರಹಾಲಯಗ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು - ೫೭೦ ೦೦೧

ನಯಮಾಡಲಾಗಿದೆ. ಇದರ ಮೂತಿ ಸಿಂಹದ ಆಕಾರದಲ್ಲಿದೆ. ಎರಡು ಬದಿಗೂ ಬಾಯಲ್ಲಿ ಚೂಪಾದ ಹಲ್ಲುಗಳಲ್ಲಿ ಒಂದೊಂದು ಆನೆಯನ್ನು ಹಿಡಿದುಕೊಂಡಿರುವಂತೆ ತೋರಿಸಲಾಗಿದೆ. ಮೂಗಿನ ತುದಿಯು ಗುರಿ ಇಡಲು ಅನುಕೂಲವಾಗಿದೆ. ಕಿವಿಗಳಲ್ಲಿ ರಂಧ್ರಗಳನ್ನು ಕೊರೆದು ಬಳೆಗಳನ್ನು ಹಾಕಲು ಅನುವು ಮಾಡಲಾಗಿದೆ. ತೋಪಿನ ಎರಡು ಬದಿಗಳಲ್ಲಿ ಎರಡೆರಡು ರಂಧ್ರಗಳುಳ್ಳ ಹಿಡಿಕೆಗಳಿವೆ. ಇವುಗಳಲ್ಲಿ ಈಗ ಒಂದರಲ್ಲಿ ಮಾತ್ರ ಬಳೆ ಇದೆ.

ಈ ತೋಪಿನ ಮೇಲೆ ಮೂರು ಶಾಸನಗಳಿವೆ. ಇದನ್ನು ತುರ್ಕಿಯ ಹಸನ್ ರೂಮಿಯ ಮಗ ಮುಹಮ್ಮದ್ ಮಾಡಿದನೆಂದು ಒಂದು ಶಾಸನ ತಿಳಿಸುತ್ತದೆ. ಮತ್ತೊಂದು ಶಾಸನ ಇದನ್ನು ತಯಾರಿಸಿದ ವರ್ಷ ಹಿಜರಿ ೯೫೬* (ಕ್ರಿ.ಶ. ೧೫೪೯) ಮತ್ತು ಅಬೂಲ್ ಘಾಜಿ ನಿಜಾಮ್‌ಷಾಹ ಮತ್ತು ಖಾನ್ ಮುರಾದರ ಹೆಸರನ್ನು ತಿಳಿಸುತ್ತದೆ. ನಿಜಾಮ್‌ಷಾಹನು ಅಹಮದ್ ನಗರದಲ್ಲಿ ಆಳುತ್ತಿದ್ದುದರಿಂದ ಇದನ್ನು ಅಲ್ಲಿಯೇ ತಯಾರಿಸಲಾಗಿದೆ. ಮೂರನೇ ಶಾಸನವು ಔರಂಗಜೇಬನು ಹಿಜರಿ ೧೦೯೭ (ಕ್ರಿ.ಶ. ೧೬೮೫-೮೬) ರಲ್ಲಿ ಬಿಜಾಪುರವನ್ನು ಜಯಿಸಿದ್ದನ್ನು ದಾಖಲಿಸುತ್ತದೆ.

೨. ಅಲಿ ಬುರುಜಿನ ಮೇಲಿನ ತೋಪು : ಇದನ್ನು ಪಟ್ಟಿ ಮತ್ತು ಬಳೆಗಳಿಂದ ಮಾಡಿದೆ. ಇದರ ನಾಲ್ಕು ಜೊತೆ ಹಿಡಿಕೆಗಳಲ್ಲಿ ಈಗ ಬಳೆಗಳಿಲ್ಲ. ನೆಲೆಗೊಳಿಸುವುದಕ್ಕಾಗಿ ಪಕ್ಕದಲ್ಲಿ ಎರಡು ಮುಂಚಾಚುಗಳಿವೆ. ಹಿಡಿಕೆಗಳ ಅಂಚನ್ನು ಮಣಿಯಾಕಾರದಿಂದ ಮತ್ತು ಮೇಲ್ಭಾಗದಲ್ಲಿ ಮೇಲೆ ಚಾಚಿರುವ ಭಾಗದಲ್ಲಿ ಗುರಿ ಇಡುವುದಕ್ಕಾಗಿ ಆಯತಾಕಾರದ ಚಿಕ್ಕ ರಂಧ್ರವಿದೆ.

೩. ಮುಸ್ತಫಾಬಾದ್ ತೋಪು : ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ತಯಾರಿಸಲಾಗಿದೆ. ಇದರ ಹಿಂದಿನ ಭಾಗವು ಹೆಚ್ಚು ದಪ್ಪವಾಗಿದೆ. ನಾಲ್ಕು ಜೊತೆ ಹಿಡಿಕೆಗಳಿದ್ದು ಅವುಗಳಲ್ಲಿ ಬಳೆಗಳಿವೆ. ಒಂದು ಬದಿಯಲ್ಲಿ ಒಂದು ಮತ್ತೊಂದು ಬದಿಯಲ್ಲಿ ಎರಡು ಬಳೆಗಳು ಈಗ ಇಲ್ಲ. ನೆಲೆಗೊಳಿಸುವುದಕ್ಕಾಗಿ ಪಕ್ಕದಲ್ಲಿ ದಪ್ಪಗಿರುವ ಎರಡು ಮುಂಚಾಚುಗಳಿವೆ. ಮುಂಭಾಗದಲ್ಲಿ ಮೂತಿಯ ಮೇಲೆ ಮಲಿಕ್ ಸಂಡಲ್‌ನನ್ನು ಹೆಸರಿಸುವ ಎರಡನೇ ಇಬ್ರಾಹಿಂ ಆದಿಲ್ ಷಾಹನ ಕ್ರಿ.ಶ. ೧೫೯೭ರ ಶಾಸನವಿದೆ. ಮೂತಿಯ ಮೇಲ್ಭಾಗದಲ್ಲಿ ಮೇಲೆ ಚಾಚಿಕೊಂಡಿರುವ ಭಾಗದಲ್ಲಿ ಗುರಿ ಇಡುವುದಕ್ಕಾಗಿ ಆಯತಾಕಾರದ ರಂಧ್ರವಿದೆ. ಕುತ್ತಿಗೆ ಭಾಗದಲ್ಲಿ ದೇಹದ ಒಂದು ಹೆಚ್ಚುವರಿ ಬಳೆಯಿದೆ.

೪. ಲಂಡಾ ಖಾಸ್ಸಬ್ ಬುರುಜಿನ ಮೇಲಿನ ದೊಡ್ಡ ತೋಪು: ಉದ್ದ ಮತ್ತು ಗಾತ್ರದಲ್ಲಿ ಇದು ಬಿಜಾಪುರದಲ್ಲಿಯೇ ಅತಿ ದೊಡ್ಡ ತೋಪು. ಇದರ ತೂಕ ೪೭ ಟನ್‌ಗಳೆಂದು ಅಂದಾಜು ಮಾಡಲಾಗಿದೆ. ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ತಯಾರಿಸಿದೆ. ಇದರ ನಾಲ್ಕು ಜೊತೆ ಹಿಡಿಕೆಗಳಲ್ಲಿ ಈಗ ಬಳೆಗಳಿಲ್ಲ. ನೆಲೆಗೊಳಿಸುವುದಕ್ಕಾಗಿ ಪಕ್ಕದಲ್ಲಿ ದಪ್ಪಗಿರುವ ಎರಡು ಮುಂಚಾಚುಗಳಿವೆ. ಕುತ್ತಿಗೆಯ ಹತ್ತಿರ ದೇಹದ ಮೇಲೆ ಒಂದು ಹೆಚ್ಚುವರಿ ಬಳೆಯಿದ್ದು ಅದರ ಮುಂಭಾಗವನ್ನು ಹಗ್ಗದ ಆಕಾರದಲ್ಲಿ ಅಲಂಕರಿಸಿದೆ. ಮೂತಿಯ ಮೇಲ್ಭಾಗದಲ್ಲಿ ಮೇಲೆ ಚಾಚಿ ಕೊಂಡಿರುವ ತ್ರಿಕೋನಾಕಾರದ ಭಾಗದಲ್ಲಿ ಗುರಿ ಇಡಲು ರಂಧ್ರವಿದೆ. ಯುದ್ಧ ಸಂದರ್ಭದಲ್ಲಿ ಶಕ್ತಿಶಾಲಿಯಾದ ಗುಂಡೊಂದು ಇದರ ಮೂತಿಗೆ ಬಡಿದಿರುವುದರಿಂದ ಆಗಿರುವ ತಗ್ಗಿನ ಗುರುತು ಕಾಣುತ್ತದೆ.

೫. ಲಂಡಾಖಾಸ್ಸಬ್ ಬುರುಜಿನ ಮೇಲಿನ ಚಿಕ್ಕ ತೋಪು : ಇದು ಚಿಕ್ಕ ತೋಪು. ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ತಯಾರಿಸಲಾಗಿದೆ. ನೆಲೆಗೊಳಿಸುವುದಕ್ಕಾಗಿ ಮಾಡಿದ ಮೂರು ಜೊತೆ ಮುಂಚಾಚುಗಳಿವೆ.

೬. ಲಂಬಚರ್ರಿ ತೋಪು : ೯.೩೫ ಮೀ. ಉದ್ದವಿರುವ ಈ ತೋಪು ಬಿಜಾಪುರದ ತೋಪುಗಳಲ್ಲಿಯೇ ಅತಿ ಉದ್ದವಾದದ್ದು. ಬಹಳ ದೂರದವರೆಗೆ ಗುಂಡು ಹಾರಿಸುವ ಸಾಮರ್ಥ್ಯ ಹೊಂದಿರುವುದರಿಂದ ಇದನ್ನು ಲಂಬಚರ್ರಿಯೆಂದು ಕರೆಯಲಾಗುತ್ತಿದೆ. ದೂರದವರೆಗೆ ಗುಂಡು ಹಾರಿಸಲು ಅನುಕೂಲವಾಗುವಂತೆ ವಿಶೇಷವಾಗಿ ನಿರ್ಮಿಸಿದ ಅತಿ ಎತ್ತರವಾದ ಹೈದರ್ ಬುರುಜಿನ ಮೇಲೆ ನೆಲೆಗೊಳಿಸಿದೆ. ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ತಯಾರಿಸಲಾಗಿದೆ. ಹಿಂಭಾಗವು ಹೆಚ್ಚು ದಪ್ಪವಾಗಿದೆ. ಕುತ್ತಿಗೆಯ ಹತ್ತಿರ ದೇಹದ ಮೇಲೆ ಒಂದರ ಮೇಲೆ ಮತ್ತೊಂದರಂತೆ ಎರಡು ಹೆಚ್ಚುವರಿ ಬಳೆಗಳನ್ನು ಬೆಸೆಯಲಾಗಿದೆ. ಇದರ ಉದ್ದೇಶ ಹೆಚ್ಚು ಬಲ ನೀಡುವುದು. ತೋಪಿನ ಮೇಲ್ಭಾಗದಲ್ಲಿರುವ ಮೂರು ಜೊತೆ ಹಿಡಿಕೆಗಳಲ್ಲಿ ಬಳೆಗಳಿವೆ. ಒಂದು ಬದಿಯ ಎರಡು ಬಳೆಗಳು ಈಗ ಇಲ್ಲ. ಮಧ್ಯದ ಕೆಳಭಾಗವನ್ನು ನೆಲೆಗೊಳಿಸುವುದಕ್ಕಾಗಿ ವಿಶೇಷ ಆಕಾರದಲ್ಲಿ ರೂಪುಗೊಳಿಸಲಾಗಿದೆ. ಈ ಭಾಗದ ಬಳೆಗಳಿಗೆ ಈ ರೂಪ ಕೊಡಲಾಗಿದೆ. ಮಧ್ಯದಲ್ಲಿ ಸಮತಟ್ಟಾದ ಭಾಗವಿದೆ. ಅದರ ಹಿಂದೆ ಮತ್ತು ಮುಂದೆ ಮುಂಚಾಚುಗಳಿವೆ.

೭. ಹೈದರ್ ಬುರುಜಿನ ಮೇಲಿನ ಮತ್ತೊಂದು ತೋಪು : ಇದು ಸಹ ಪಟ್ಟಿ ಮತ್ತು ಬಳೆಗಳಿಂದ ಮಾಡಿದೆ ೬.೦೭ ಮೀ. ಉದ್ದವಾದ ತೋಪು. ಇದರ ಹಿಂಭಾಗವು ದಪ್ಪವಾಗಿದೆ. ಮೇಲ್ಭಾಗದಲ್ಲಿ ಎರಡು ಜೊತೆ ಮುಂಚಾಚುಗಳಿದ್ದು ಇವುಗಳಲ್ಲಿದ್ದ ಬಳೆಗಳು ಈಗ ಇಲ್ಲ. ಮಧ್ಯಭಾಗದಲ್ಲಿಯ ಹೆಚ್ಚುವರಿ ಬಳೆಯಿಂದ ಪಕ್ಕಕ್ಕೆ ಮುಂಚಾಚಿರುವ ಭಾಗವನ್ನು ನೆಲೆಗೊಳಿಸುವುದಕ್ಕಾಗಿ ರೂಪಿಸಲಾಗಿದೆ. ಇದರ ಪಕ್ಕದಲ್ಲಿಯ ಬಳೆಗಳನ್ನು ಸಹ ಕೆಳಭಾಗದಲ್ಲಿ ಚಾಚಿಕೊಂಡು ನೆಲೆಗೊಳಿಸಲು ಅನುಕೂಲವಾಗುವಂತೆ ರೂಪಿಸಲಾಗಿದೆ.

೮. **ಸಂಗ್ರಹಾಲಯದಲ್ಲಿರುವ ೧ನೇ ತೋಪು :** ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ಮಾಡಿದೆ. ಆದರೆ ದೇಹದ ಬಳೆಗಳ ಅಳತೆ ಮತ್ತು ಆಕಾರಗಳಲ್ಲಿ ಏಕರೂಪತೆ ಇಲ್ಲ ಮತ್ತು ಬಳೆಗಳು ಒಂದಕ್ಕೊಂದು ಸರಿಯಾಗಿ ಸೇರಿಲ್ಲ. ಈ ತೋಪಿನ ಕೆಲಸ ಒರಟಾಗಿದೆ. ಹಿಂಭಾಗವು ಉಳಿದ ಭಾಗಕ್ಕಿಂತ ದಪ್ಪವಾಗಿದೆ. ಮುಂಭಾಗವನ್ನು ಸಿಂಹದ ಮೂರ್ತಿಯಂತೆ ರೂಪಿಸಲಾಗಿದೆ. ಅಗಲವಾಗಿ ಬಾಯಿ ತೆರೆದ ಸಿಂಹದ ಕಣ್ಣು, ಮೂಗು, ಕಿವಿ, ಮೀಸೆ ಮತ್ತು ಹಲ್ಲುಗಳನ್ನು ಉತ್ತಮವಾಗಿ ರೂಪಿಸಲಾಗಿದೆ. ಮಾಲಿಕ್-ಇ-ಮೈದಾನದ ಮೂರ್ತಿಯನ್ನು ಹೋಲುವಂತೆ ಮಾಡುವ ಪ್ರಯತ್ನ ಇಲ್ಲಿ ನಡೆದಂತೆ ಕಾಣುತ್ತದೆ. ಆದರೆ ಇಲ್ಲಿ ಸಿಂಹದ ಬಾಯಿಯಲ್ಲಿ ಆನೆ ಇಲ್ಲ. ನೆಲೆಗೊಳಿಸುವುದಕ್ಕಾಗಿ ಮಧ್ಯ ಭಾಗದಲ್ಲಿ ಒಂದು ಜೊತೆ ಮುಂಚಾಚುಗಳಿವೆ. ಹಿಂದೆ ಇದು ಇಬತ್ ಬುರುಜಿನ ಮೇಲೆ ಇತ್ತು.

೯. **ಸಂಗ್ರಹಾಲಯದಲ್ಲಿರುವ ೨ನೇ ತೋಪು :** ಇದನ್ನು ಸಹ ಪಟ್ಟಿ ಮತ್ತು ಬಳೆಗಳಿಂದ ಮಾಡಿದೆ. ಬಳೆಗಳ ಆಕಾರ ಮತ್ತು ಅಳತೆ ಏಕರೂಪವಾಗಿದ್ದು, ಇದರ ನಿರ್ಮಾಣ ಉತ್ತಮವಾಗಿದೆ. ಮೇಲ್ಭಾಗದಲ್ಲಿ ನಾಲ್ಕು ಜೊತೆ ಹಿಡಿಕೆಗಳಿದ್ದು ಅವುಗಳಲ್ಲಿ ಬಳೆಗಳಿವೆ. ಮೂತಿಯ ಹತ್ತಿರ ಬಲಪಡಿಸುವುದಕ್ಕಾಗಿ ಒಂದು ಹೆಚ್ಚುವರಿ ಬಳೆಯನ್ನು ಹಾಕಲಾಗಿದೆ. ಮುಂಭಾಗದಲ್ಲಿ ತ್ರಿಕೋನಾಕಾರದಲ್ಲಿ ಮೇಲೆ ಚಾಚಿಕೊಂಡಿರುವ ಭಾಗದ ಮಧ್ಯದಲ್ಲಿ ಗುರಿ ಇಡಲು ಆಯತಾಕಾರದ ರಂಧ್ರವಿದೆ. ನೆಲೆಗೊಳಿಸುವುದಕ್ಕಾಗಿ ಮಧ್ಯಭಾಗದಲ್ಲಿ ಒಂದು ಜೊತೆ ಮುಂಚಾಚುಗಳಿವೆ. ಹಿಂಭಾಗದ ಮೇಲ್ಭಾಗದಲ್ಲಿ ಪಂಜ್-ಮನಿ-ಆದಿಲ್‌ಶಾಹ ಎಂದು ಬರೆದ ಚಿಕ್ಕ ಶಾಸನವಿದೆ. ಈ ತೋಪು ಹಿಂದೆ ಅಹಮದ್ ಬುರುಜಿನ ಮೇಲಿತ್ತು.

೧೦. **ಸಂಗ್ರಹಾಲಯದಲ್ಲಿರುವ ೩ನೇ ತೋಪು :** ಎರಕ ಹೊಯ್ದು ಮಾಡಿದ ಕಬ್ಬಿಣದ ತೋಪಿನ ಮೈಯನ್ನು ತಾಮ್ರ ಹಿತ್ತಾಳೆಯನ್ನು ಹುದುಗಿಸಿ (inlay) ಅಲಂಕರಿಸಲಾಗಿದೆ. ಮುಂದಿನ ಅರ್ಧ ಭಾಗವು ಕೊಳವೆಯಾಕಾರದಲ್ಲಿದ್ದು ಹಿಂದಿನ ಅರ್ಧ ಭಾಗವು ೧೨ ಬದಿಗಳನ್ನು ಹೊಂದಿದೆ. ಮುಂದಿನ ಅರ್ಧ ಭಾಗವನ್ನು ಹೂಗಳ ವಿನ್ಯಾಸಗಳಿಂದ ಮತ್ತು ಹಿಂದಿನ ಅರ್ಧ ಭಾಗವನ್ನು ಬಳ್ಳಿಯ ವಿನ್ಯಾಸದಿಂದ ಅಲಂಕರಿಸಲಾಗಿದೆ. ಹಿಂದಿನ ತುದಿಯು ಚೌಕಾಕಾರದಲ್ಲಿದ್ದು ಮುಂದಿನ ತುದಿಯನ್ನು ಪ್ರಾಣಿಯ ಆಕಾರದಲ್ಲಿ ಮಾಡಲಾಗಿದೆ. ಪ್ರಾಣಿಯು ದಪ್ಪವಾದ ಉಬ್ಬಿದ ಕಣ್ಣು, ಉದ್ದವಾದ ಮೂಗು ಮತ್ತು ತೆರೆದ ಬಾಯಿಯಲ್ಲಿ ಚೂಪಾದ ಹಲ್ಲುಗಳನ್ನು ಹೊಂದಿದೆ. ಪ್ರತ್ಯೇಕವಾಗಿ ಸೇರಿಸಿದ ಕಿವಿಗಳು ಮುಗಿದು ಹೋಗಿವೆ. ಕುತ್ತಿಗೆಯ ಬಳಿ ಹಗ್ಗ ಕಟ್ಟಿದ ರೀತಿಯ ಅಲಂಕಾರವಿದೆ. ಮೇಲೆ ಇದ್ದ ಎರಡು ಜೊತೆ ಹಿಡಿಕೆಗಳು ಮುರಿದು ಹೋಗಿವೆ. ಮಧ್ಯದ ಕೆಳಭಾಗದಲ್ಲಿ ಕೆಳಕ್ಕೆ ಚಾಚಿದ ಸಮತಟ್ಟಾದ ಭಾಗವಿದ್ದು ಇದರ ಮಧ್ಯದಲ್ಲಿ ರಂಧ್ರವಿದೆ. ಈ ರಂಧ್ರವನ್ನು ತೋಪನ್ನು ನೆಲೆಗೊಳಿಸುವುದಕ್ಕಾಗಿ ಮಾಡಲಾಗಿದೆ. ಇದನ್ನು ಫತೆ ದರ್ವಾಜದಿಂದ ಸಂಗ್ರಹಿಸಲಾಗಿದೆ.

೧೧. **ಸಂಗ್ರಹಾಲಯದಲ್ಲಿರುವ ೪ನೇ ತೋಪು :** ಎರಕ ಹೊಯ್ದು ಮಾಡಿದ ಈ ತೋಪಿನ ಹಿಂಭಾಗಕ್ಕೆ ಹೆಚ್ಚು ಬಲವನ್ನು ನೀಡಲು ಹೆಚ್ಚುವರಿಯಾಗಿ ಬಳೆಗಳನ್ನು ತೊಡಿಸಲಾಗಿದೆ. ಬಳೆಗಳ ಹಿಂಭಾಗದಲ್ಲಿ ಸಿಂಹದ ಮೂತಿಯ ಆಕಾರವನ್ನು ಮಾಡಿರುವುದರಿಂದ ಅದರ ಬಾಯಿಯಿಂದ ಎರಕ ಹೊಯ್ದ ಭಾಗ ಹೊರ ಬರುವಂತೆ ಕಾಣುತ್ತದೆ. ಸಿಂಹವು ಉಬ್ಬಿದ ಕಣ್ಣು, ಮೂಗು, ಚಿಕ್ಕ ಕಿವಿ, ಹಲ್ಲು ಮತ್ತು ಮುಂದೆ ಚಾಚಿದ ನಾಲಗೆಯನ್ನು ಹೊಂದಿದೆ. ತೋಪಿನ ಮೂತಿಯು ದುಂಡಗಿನ - ೧೫ ಬದಿಗಳ - ದುಂಡಗಿನ ಭಾಗಗಳನ್ನು ಹೊಂದಿದೆ. ಮೂತಿಯ ಭಾಗವನ್ನು ಹುದುಗಿಸಿ (inlay) ಮಾಡಿದ ಹೂ ಮತ್ತು ಬಳ್ಳಿಯಿಂದ ಅಲಂಕರಿಸಲಾಗಿದೆ. ಮೂತಿಯ ಮುಂದಿನ ಮುಖ ಭಾಗವನ್ನು ೧೨ ವೃತ್ತಾಕಾರದ ಶಾಸನಗಳಿಂದ ಅಲಂಕರಿಸಲಾಗಿದೆ. ಈ ಶಾಸನಗಳಲ್ಲಿ ೧೨ ಇಮಾಮರ ಹೆಸರುಗಳಿವೆ. ಮೂತಿಯ ಮೇಲೆ ಚಾಚಿಕೊಂಡಿರುವ ಭಾಗದ ಮಧ್ಯದಲ್ಲಿ ಗುರಿ ಇಡಲು ಆಯತಾಕಾರದ ರಂಧ್ರವಿದೆ. ರಂಧ್ರದ ಪಕ್ಕದಲ್ಲಿ ರಂಧ್ರಕ್ಕೆ ಅಭಿಮುಖವಾಗಿ ಒಂದು ಕಾಲು ಎತ್ತಿಕೊಂಡು ನಿಂತು, ತಲೆಯನ್ನು ಹಿಂದಕ್ಕೆ ತಿರುಗಿಸಿ, ಬಾಯಿ ತೆರೆದು ನಿಂತುಕೊಂಡ ಎರಡು ಸಿಂಹಗಳಿವೆ. ಮೇಲೆ ನಾಲ್ಕು ಜೊತೆ ಹಿಡಿಕೆಗಳಿದ್ದು ಅವುಗಳಲ್ಲಿ ಬಳೆಗಳಿವೆ. ಒಂದು ಬದಿಯ ಎರಡು ಬಳೆಗಳು ಈಗ ಇಲ್ಲ. ನೆಲೆಗೊಳಿಸುವುದಕ್ಕಾಗಿ ಎರಡು ಜೊತೆ ಮುಂಚಾಚುಗಳನ್ನು ಬದಿಗಳಲ್ಲಿ ಮಾಡಲಾಗಿದೆ. ಈ ತೋಪನ್ನು ಸಹ ಫತೆದರ್ವಾಜದಿಂದ ಸಂಗ್ರಹಿಸಲಾಗಿದೆ.

೧೨. **ಸಂಗ್ರಹಾಲಯದಲ್ಲಿರುವ ೫ನೇ ತೋಪು:** ಎರಕ ಹೊಯ್ದು ಮಾಡಿದ ಮಿಶ್ರಲೋಹದ ಈ ತೋಪು ೫೪ ಸೆಂ.ಮೀ. ಉದ್ದವಿದ್ದು, ಬಿಜಾಪುರದ ತೋಪುಗಳಲ್ಲಿ ಅತಿ ಚಿಕ್ಕದಾಗಿದೆ. ಮೂತಿಯ ಭಾಗವು ಅಗಲವಾಗಿದ್ದು ದೇಹದ ಭಾಗವನ್ನು ಅನೇಕ ಉಬ್ಬಿದ ಮತ್ತು ಒಳಸರಿದ ಪಟ್ಟಿಕೆಗಳ ಆಕಾರದಿಂದ ಅಲಂಕರಿಸಿರುವುದರಿಂದ ಹೊಯ್ಸಳ ಅಥವಾ ಕಲ್ಯಾಣ ಚಾಲುಕ್ಯರ ಕಾಲದ ಕಂಬಗಳ ಭಾಗದಂತೆ ಕಾಣುತ್ತದೆ. ನೆಲೆಗೊಳಿಸುವುದಕ್ಕಾಗಿ ಮಧ್ಯ ಭಾಗದಲ್ಲಿ ಒಂದು ಜೊತೆ ಮುಂಚಾಚುಗಳಿವೆ. ಇದರ ಬಾಯಿ ಉದ್ದಕ್ಕೆ ಅನುಗುಣವಾಗಿರದೆ, ಹೆಚ್ಚು ಅಗಲವಾಗಿರುವುದರಿಂದ ಇದನ್ನು ಕಚ್ಚಬಚ್ಚ ಎಂದು ಕರೆಯುತ್ತಾರೆ. ಇದನ್ನು ಸಹ ಫತೆದರ್ವಾಜದಿಂದ ಸಂಗ್ರಹಿಸಲಾಗಿದೆ.

೧೩. **ಸಂಗ್ರಹಾಲಯದಲ್ಲಿರುವ ೬ನೇ ತೋಪು :** ಇದನ್ನು ಪಟ್ಟಿ ಮತ್ತು ಬಳೆಗಳಿಂದ ಮಾಡಿದೆ. ಕುತ್ತಿಗೆ ಭಾಗದಲ್ಲಿ ಸರಪಳಿಯ



ಮಾಲಿಕ್-ಇ-ಮೈದಾನ್ ತೋಪು, ಬಿಜಾಪುರ



ಮಾಲಿಕ್-ಇ-ಮೈದಾನ್ ತೋಪು, ಬಿಜಾಪುರ



ಅಲಿಬುರುಜಿನ ಮೇಲಿನ ತೋಪು, ಬಿಜಾಪುರ



ಮುಸ್ತಫಾಬಾದ್ ತೋಪು, ಬಿಜಾಪುರ



ಲಂಡಾಖಾಸ್ಸಬ್ ಬುರುಜಿನ ಮೇಲಿನ ದೊಡ್ಡ ತೋಪು, ಬಿಜಾಪುರ



ಲಂಡಾಖಾಸ್ಸಬ್ ಬುರುಜಿನ ಮೇಲಿನ ಚಿಕ್ಕ ತೋಪು, ಬಿಜಾಪುರ



ಲಂಬಚರ್ರಿ ತೋಪು, ಬಿಜಾಪುರ



ವಸ್ತು ಸಂಗ್ರಹಾಲಯದಲ್ಲಿರುವ ೧ನೇ ತೋಪು, ಬಿಜಾಪುರ



ವಸ್ತು ಸಂಗ್ರಹಾಲಯದಲ್ಲಿರುವ ೨ನೇ ತೋಪು, ಬಿಜಾಪುರ



ವಸ್ತುಸಂಗ್ರಹಾಲಯದಲ್ಲಿರುವ ೩ನೇ ತೋಪು, ಬಿಜಾಪುರ



ವಸ್ತು ಸಂಗ್ರಹಾಲಯದಲ್ಲಿರುವ ೪ನೇ ತೋಪು, ಬಿಜಾಪುರ



ವಸ್ತು ಸಂಗ್ರಹಾಲಯದಲ್ಲಿರುವ ೬ನೇ ತೋಪು, ಬಿಜಾಪುರ

ಅಲಂಕಾರವಿದೆ. ಮೂತಿಯ ರಂಧ್ರದ ಸುತ್ತಲೂ ಹಗ್ಗದ ಅಲಂಕಾರವಿದೆ. ಮುಂದಿನ ತುದಿಯ ಮೇಲೆ ಮನುಷ್ಯನ ಮೂಗಿನ ಆಕಾರದ ಭಾಗವಿದ್ದು ಹಿಂದಿನ ತುದಿಯ ಮೇಲೆ ಮೇಲೆ ಚಾಚಿದ ಭಾಗದಲ್ಲಿ ರಂಧ್ರವಿದೆ. ರಂಧ್ರದ ಮೂಲಕ ಮೂಗಿನ ತುದಿಯನ್ನು ನೋಡಿ ಗುರಿ ಇಡಲಾಗುತ್ತಿತ್ತು. ಮೇಲ್ಭಾಗದಲ್ಲಿ ಎರಡು ಜೊತೆ ಹಿಡಿಕೆಗಳಿದ್ದು ಅವುಗಳಲ್ಲಿಯ ಬಳೆಗಳು ಈಗ ಇಲ್ಲ. ನೆಲೆಗೊಳಿಸಲು ಮಧ್ಯಭಾಗದಲ್ಲಿ ಒಂದು ಜೊತೆ ಮುಂಚಾಚುಗಳಿವೆ. ಇದನ್ನು ಮಾಲಿಕ್ ಸಂದಲ್ ಬಾಗ್‌ನಿಂದ ಸಂಗ್ರಹಿಸಲಾಗಿದೆ.

ಮಾಲಿಕ್-ಇ-ಮೈದಾನ್ ತೋಪನ್ನು ಕ್ರಿ.ಶ. ೧೫೬೫ರ ಯುದ್ಧದಲ್ಲಿ ಬಳಸಲಾಗಿತ್ತೆಂದು ಹೇಳಲಾಗುತ್ತದೆ. ಆ ಯುದ್ಧದಲ್ಲಿ ಇಂತಹದೆ **ಖಡಕ್ ಬಿಜಲಿ** ಎಂಬ ಹೆಸರಿನ ಮತ್ತೊಂದು ತೋಪನ್ನು ಬಳಸಲಾಗಿತ್ತೆಂದು ಸಹ ಹೇಳಲಾಗುತ್ತದೆ. ಮೊಘಲ್ ಚಕ್ರವರ್ತಿ ಔರಂಗಜೇಬನು ಈ ತೋಪನ್ನು ದಿಲ್ಲಿಗೆ ಸಾಗಿಸಲು ಪ್ರಯತ್ನಿಸಿದಾಗ ಮಲಪ್ರಭಾ ಮತ್ತು ಕೃಷ್ಣಾ ನದಿಗಳ ಸಂಗಮ ಸ್ಥಾನದಲ್ಲಿ ನದಿಗೆ ಬಿದ್ದು ನೀರಿನಲ್ಲಿ ಮುಳುಗಿತೆಂದು ಹೇಳಲಾಗುತ್ತದೆ.

ರಚನೆ, ವಿನ್ಯಾಸ ಮತ್ತು ಐತಿಹಾಸಿಕ ದೃಷ್ಟಿಯಿಂದ ಬಿಜಾಪುರದ ತೋಪುಗಳು ಭಾರತದ ತೋಪುಗಳ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ.

(ಕೃತಜ್ಞತೆಗಳು : ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಬಿಜಾಪುರ ವಸ್ತು ಸಂಗ್ರಹಾಲಯದ ಸಹಾಯಕ ಅಧೀಕ್ಷಕ ಪುರಾತತ್ವಜ್ಞರಾದ ಶ್ರೀ ಆರ್. ಎಸ್. ಕುಲಕರ್ಣಿಯವರು ಮಾಹಿತಿ ಸಂಗ್ರಹಿಸಲು ನೆರವು ನೀಡಿರುವರು. ಅವರಿಗೆ ನನ್ನ ಕೃತಜ್ಞತೆಗಳು.)

ಕರುಣಾ ಮಂಗಳವೇಢೆ *

# ಕರ್ನಾಟಕದಲ್ಲಿ ವೈಷ್ಣವ ಗೀತಿ ಮನೋಹರರ್

ವೈಷ್ಣವ ಧರ್ಮವು ಸಾಂಸ್ಕೃತಿಕವಾಗಿ ಬೆಳೆದುದರ ಬಗ್ಗೆ ಅಭ್ಯಸಿಸುವಾಗ "ವೈಷ್ಣವಗೀತಿ ಮನೋಹರರ್" ಗಮನ ಸೆಳೆಯುತ್ತಾರೆ. ಕರ್ನಾಟಕದ ಕೆಲವು ಶಾಸನಗಳಲ್ಲಿ ಕಾಣುವ ಇವರ ಬಗೆಗೆ ಕೆಲವು ವಿದ್ವಾಂಸರು ಗಮನ ಸೆಳೆದಿದ್ದಾರೆ. ಅವರುಗಳು ಮುಖ್ಯವಾಗಿ ಕರ್ನಾಟಕದಲ್ಲಿ ವೈಷ್ಣವ ಧರ್ಮವನ್ನು ಚರ್ಚಿಸುವಾಗ ವೈಷ್ಣವಗೀತಿ ಮನೋಹರರ್ ಬಗೆಗೆ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

ಡಾ॥ ಚಿದಾನಂದಮೂರ್ತಿಗಳು ತಮ್ಮ ಮಹಾಪ್ರಬಂಧದ ಏಳನೆಯ ಅಧ್ಯಾಯದಲ್ಲಿ ವೈಷ್ಣವ ಧರ್ಮದ ಉಗಮ, ವಿಕಾಸಗಳ ಬಗೆಗೆ ಅನೇಕ ವಿದ್ವಾಂಸರ ಚರ್ಚೆಗಳ ಮೂಲಕ ತಮ್ಮ ವಿಷಯದ ಚೌಕಟ್ಟಿನಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಮುಂದೆ ಕರ್ನಾಟಕದಲ್ಲಿ ವೈಷ್ಣವ ಧರ್ಮದ ಪ್ರಾಚೀನತೆ ಪ್ರಾಶಸ್ತ್ಯದ ವಿವರಣೆಗಳನ್ನು ಕೊಡುತ್ತಾ ವೈಷ್ಣವಗೀತಿಮನೋಹರರನ್ನು ಶಾಸನಗಳು ಉಲ್ಲೇಖಿಸಿವೆ ಎಂದು ಹೇಳುತ್ತಾರೆ.[*೧] ಮತ್ತು 'ವೈಷ್ಣವಗೀತಿ' ಎನ್ನುವುದು ಭಾಗವತ ಅಥವಾ ಪಾಂಚರಾತ್ರಪಂಥದ ಪಾಂಚ ರಾತ್ರಾಗಮಗಳನ್ನು ಸೂಚಿಸುವುದೆಂದು ಊಹಿಸಬಹುದು...[*೨(ಅ)] ಎನ್ನುತ್ತಾರೆ.[*೨(ಆ)]

ಡಾ॥ ಎಚ್. ಎಸ್. ಗೋಪಾಲರಾವ್ ಅವರು ತಮ್ಮ ಮಹಾಪ್ರಬಂಧದ ಏಳನೆಯ ಅಧ್ಯಾಯದಲ್ಲಿ ವೈಷ್ಣವ ಧರ್ಮದ ಸಂಕ್ಷಿಪ್ತ ವಿವರಣೆಯನ್ನು ನೀಡುತ್ತಾ ಶಾಸನಗಳ ಮೂಲಕ ಕರ್ನಾಟಕದಲ್ಲಿನ ವೈಷ್ಣವ ಧರ್ಮದ ಪ್ರಾಚೀನತೆಯನ್ನು ದಾಖಲಿಸಿದ್ದಾರೆ. ವೈಷ್ಣವಗೀತಿಮನೋಹರರ ಬಗೆಗೆ ಡಾ॥ ಚಿದಾನಂದಮೂರ್ತಿ ಅವರ ಅಭಿಪ್ರಾಯವನ್ನು ಸಮರ್ಥಿಸುತ್ತಾ 'ಇವರು ವೈಷ್ಣವ ಧರ್ಮದ ಕುರುಹುಗಳಲ್ಲಿ ಒಂದಾಗಿರುವವರು' ಎಂದು ಊಹಿಸುತ್ತಾರೆ.[*೩]

ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನಡೆದಿರುವ ಈ ಅಧ್ಯಯನಗಳಲ್ಲಿ ಧರ್ಮಗಳಿಗೆ ಸಂಬಂಧಿಸಿದ ಅಧ್ಯಾಯಗಳಲ್ಲಿ 'ವೈಷ್ಣವಗೀತಿ ಮನೋಹರರು' ಉಲ್ಲೇಖಗೊಂಡಿದ್ದಾರೆ. ಸಾಂಸ್ಕೃತಿಕ ಚೌಕಟ್ಟಿನಲ್ಲಿ ಲಲಿತಕಲೆಗಳ ದೃಷ್ಟಿಯಿಂದ ವೈಷ್ಣವಗೀತಿ ಮನೋಹರರನ್ನು ಗಮನಿಸಿದಾಗ ಇವರು ಧರ್ಮದ ಚೌಕಟ್ಟಿನಲ್ಲಿ ಮಾತ್ರವಲ್ಲದೆ ದೇವಾಲಯದ ಸಂಪ್ರದಾಯವಾಗಿದ್ದ ರಂಗಭೋಗದ ಕುಟುಂಬಕ್ಕೆ ಸೇರಿದವರಾಗಿರಬಹುದೆಂಬ ಒಂದು ಪ್ರಮೇಯವೇ ಈ ಪ್ರಬಂಧಕ್ಕೆ ಕಾರಣವಾಗಿದೆ.

ನಮಗೆ ದೊರೆತಿರುವ ಶಾಸನಗಳ[*೪] ಪ್ರಕಾರ ವೈಷ್ಣವ ಗೀತಿ ಮನೋಹರರು 'ರಂಗಭೋಗ' ಸಂಪ್ರದಾಯದ ಕುಟುಂಬಕ್ಕೆ ಸೇರಿದವರಾಗಿರಬಹುದು. ದೇವಾಲಯಗಳಲ್ಲಿ ದೈವಮೂರ್ತಿಯೇ ಇವರ ಮುಖ್ಯ ಕಸುಬು. ವಿಶೇಷವಾಗಿ ವಿಷ್ಣುವಿಗೆ ಸಂಬಂಧಪಟ್ಟ ಗೀತೆಗಳನ್ನು ರಾಗವಾಗಿ ಮನೋಹರವಾಗಿ ಕೇಳುಗರ ಹೃದಯ ತಟ್ಟುವಂತೆ, ಅವರ ಧರ್ಮದ ಬಗ್ಗೆ ಅಭಿಮಾನ, ಗೌರವ, ಭಕ್ತಿ, ಕೆರಳಿಸುವುದು... ಇವರ ವೃತ್ತಿಯಾಗಿರಬಹುದು. ಸುಮಾರು ಕ್ರಿ.ಶ. ೧೧೦೧[*೪(ಅ)], ೧೦೦೭[*೪(ಆ)], ೧೧೭೯[*೪(ಇ)] ಅಂದರೆ ೧೨ನೆಯ ಶತಮಾನದ ಕರ್ನಾಟಕದ ಶಾಸನಗಳಲ್ಲಿ ಇವರ ಉಲ್ಲೇಖಗಳನ್ನು ಕಾಣುತ್ತೇವೆ.

ಈ ಶಾಸನಗಳು ದೊರೆತ ಸ್ಥಳ ಲಕ್ಕುಂಡಿ ಮತ್ತು ಸುತ್ತ ಮುತ್ತಲ ಪ್ರದೇಶ. ಈ ಕಾಲಕ್ಕೆ ಲಕ್ಕುಂಡಿಯು ಒಂದು ಪ್ರಮುಖ ಜೈನ ಹಾಗೂ ಶೈವ ಕೇಂದ್ರವಾಗಿತ್ತು. ನಮಗೆ ದೊರೆತ ಮುಖ್ಯ ಶಾಸನಗಳಲ್ಲಿ ಒಂದು ಲಕ್ಕುಂಡಿಯ ಜೈನ ಬಸದಿಯ ಬಳಿ ಇದೆ. ಈ ಶಾಸನದ ವಿವರಣೆಗಳನ್ನು ಗಮನಿಸಿದಾಗ, ದಾನ ಕೊಟ್ಟವಳು ಅತ್ತಿಮಬ್ಬೆ. ದಾನಕೊಟ್ಟ ಉದ್ದೇಶ; ಜೈನಧರ್ಮದ ಪ್ರತಿಪಾಲನೆ.

ಮಹಾಜನರನ್ನು (ಬ್ರಾಹ್ಮಣರನ್ನು) ವೈಷ್ಣವಗೀತಿ ಮನೋಹರರಾಗಿದ್ದ "ಏಕೈಕ ಪಂಡಿತ"ರೆಂದು ವರ್ಣಿಸುತ್ತಾ ಬಸದಿಯ ಪೂಜಾನಿಮಿತ್ತವಾಗಿ ದಾನವನ್ನು ನೀಡಲಾಗಿದೆ.[*೫] ಈ ಶಾಸನದ ಪ್ರಕಾರ ಬಹುಶಃ ಆ ಕಾಲದ ಮಹಾಜನರೇ ವೈಷ್ಣವಗೀತಿ ಮನೋಹರರ್ ಆಗಿದ್ದಿರಬಹುದೆಂದು ದಾಖಲೆಗಳ ಆಧಾರದ

---

* ೮೬೬, ೧೪ನೇ ಅಡ್ಡರಸ್ತೆ, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು - ೫೬೦ ೦೮೬

ಹಿನ್ನೆಲೆಯಲ್ಲಿ ಊಹಿಸಬಹುದಾಗಿದೆ. ಇವರ ಮುಖ್ಯ ಕಸುಬು ವೈಷ್ಣವ ಧರ್ಮದ ಪ್ರಚಾರವಾಗಿರಬಹುದು. ಮುಂದೆ ಕಾಲಾನುಕ್ರಮದಲ್ಲಿ (ಈ ಶಾಸನದ ಕಾಲಕ್ಕೆ) ವೈಷ್ಣವ ಧರ್ಮದ ಪ್ರಚಾರ ವಷ್ಟೇ ಅಲ್ಲದೆ ಉಳಿದ ಧರ್ಮಗಳ ಪ್ರಚಾರವೂ ಇವರ ಕಸುಬಾಗಿರಬಹುದು.

ಲಕ್ಕುಂಡಿಯ ಸುತ್ತಮುತ್ತಲ ಪ್ರದೇಶಗಳಲ್ಲಿ ದೊರೆತಿರುವ ಶಾಸನಗಳಲ್ಲಿ ಮಹಾಜನರನ್ನು ವೈಷ್ಣವಗೀತಿ ಮನೋಹರರ್, ವಿಕ್ರಿಕ ಪಂಡಿತರ್ ಎಂದು ವರ್ಣಿಸಲಾಗಿದೆ. ಬಹುಶಃ ವೈಷ್ಣವಗೀತಿ ಮನೋಹರರು ಒಂದು ಕಾಲದಲ್ಲಿ ವೈಷ್ಣವ ಧರ್ಮ ಪ್ರಚಾರಕರಾಗಿ ಉಗಮಗೊಂಡು ಕಾಲಾನುಕ್ರಮದಲ್ಲಿ ಕೇವಲ ವೈಷ್ಣವ ಧರ್ಮದ ಪ್ರಚಾರಕರಾಗಿ ಉಳಿಯದೆ, 'ಸರ್ವಧರ್ಮ ಸಮನ್ವಯಕ'ರಾಗಿದ್ದಿರಬೇಕು. ಜೈನ, ಶೈವ, ವೈಷ್ಣವ ಧರ್ಮದ ಪರಿಪಾಲನೆ, ಪೋಷಣೆ, ಪ್ರಚಾರವನ್ನು ನಾವು ರಂಗಭೋಗ ಸಂಪ್ರದಾಯದಲ್ಲಿ ಕಾಣುತ್ತೇವೆ. ರಂಗಭೋಗವು ಯಾವುದೇ ಧರ್ಮಕ್ಕೆ, ಪಂಗಡಕ್ಕೆ ಸೀಮಿತವಾಗಿರಲಿಲ್ಲ. *ಈ ಒಂದು ಕಾರಣದಿಂದ ವೈಷ್ಣವಗೀತಿ ಮನೋಹರರನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಬರುವ ಲಲಿತಕಲೆಗಳ ಕುಟುಂಬಕ್ಕೆ ಸೇರಿದವರಾಗಿರಬೇಕೆಂದು ತಿಳಿಯಬಹುದು.*

ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಂಗೀತದ ಹಿನ್ನೆಲೆಯಲ್ಲಿ ಗಮನಿಸಿದಾಗ ಕ್ರಿ.ಶ. ೫ರಿಂದ ೮ನೆಯ ಶತಮಾನದವರೆಗೆ ಇದ್ದಿರಬಹುದೆಂದು ತಜ್ಞರು ಅಭಿಪ್ರಾಯ[illegible] ಪಟ್ಟಿರುವ ಆಳ್ವಾರರು ವಿಷ್ಣುಭಕ್ತರು. ಇವರಲ್ಲಿ ಬ್ರಾಹ್ಮಣೇತರರೂ ಇದ್ದರು. ಶೈವಮತದ ನಾಯನಾರ್‌ಗಳಂತೆ ಭಕ್ತಿಯನ್ನೇ ಮುಕ್ತಿಗೆ ಪ್ರಧಾನ ಶಕ್ತಿಯನ್ನಾಗಿ ಬಳಸಿಕೊಂಡರು. ಇವರು ಪುದುತ್ತಾಳ್ವಾರ್, ಪೈಯ್ಯಾಳ್ವಾರ್, ಪೊಯ್ಗೈ ಆಳ್ವಾರರು, ಪೂರ್ವಾಚಾರ್ಯರು, ತಿರುಪ್ಪಾಣಿ, ತಿರುಮೊಟುರ್ಕೈ, ತಿರುಮುಗ್ಗೈ, ಕುಲಶೇಖರ, ತೊಣ್ಡರಡಿಪ್ಪೊಡಿ, ಮಧುರಕವಿ, ನಮ್ಮಾಳ್ವಾರ್, ನಾಥಮುನಿ, ಉಯ್ಯಕೊಂಡಾರ್, ಆಳವಂದಾರರು..... ಇತ್ಯಾದಿ. ಈ ಆಳ್ವಾರುಗಳು ರಚಿಸಿದ 'ತಿರುವಾಯ್ಮೊಳಿ' ಮುಂತಾದ ಗೀತೆಗಳು- ಚತುರ್ವೇದದ ಸಾರವನ್ನೊಳಗೊಂಡು ದ್ರಾವಿಡವೇದವೆಂದು ಖ್ಯಾತವಾಗಿವೆ.[illegible]

ಕ್ರಿ.ಶ. ೯ನೆಯ ಶತಮಾನದ ಕೊನೆ ಮತ್ತು ೧೦ನೆಯ ಶತಮಾನದ ಆದಿಭಾಗದಲ್ಲಿ ಶ್ರೀರಂಗದಲ್ಲಿ ರಂಗನಾಥಾಚಾರ್ಯರೆಂಬ ವೈಷ್ಣವ ಪಂಡಿತರು ವಾಸಿಸುತ್ತಿದ್ದರು. ಇವರಿಗೆ ನಾಥಮುನಿ ಎಂದು ಹೆಸರು... ಈ ನಾಥ ಮುನಿಗಳು ನಮ್ಮಾಳ್ವರ ಪದ್ಯಗಳನ್ನು ಸಂಕಲಿಸಿ ಪ್ರಚಾರಕ್ಕೆ ತಂದರು. **'ತಿರುವಾಯ್ ಮೊಳಿ'** ಯೊಳಗಿನ ಪದ್ಯಗಳನ್ನು ವೈಷ್ಣವ ಗುಡಿಗಳಲ್ಲಿ ರಾಗಬದ್ಧವಾಗಿ ಹಾಡುವ ಪದ್ಧತಿಯನ್ನು ಇವರೇ ಆರಂಭ ಮಾಡಿದರು.... ಇವರ ಮೊಮ್ಮಗ ಯಾಮುನಾಚಾರ್ಯರು ವೈಷ್ಣವ ಧರ್ಮದ ಪ್ರಚಾರಕ್ಕಾಗಿ ದಕ್ಷಿಣ ದೇಶದಲ್ಲಿ ಯತ್ರಾರ್ಥಿಯಾಗಿ ಓಡಾಡಿದರು....[illegible] ಇದು ನಮ್ಮ ಅಧ್ಯಯನಕಾಲದ ಅವಧಿಯ ಸಮಕಾಲೀನ ಪೂರಕ ಇತಿಹಾಸವಾಗಿದೆ. ತಮಿಳು ನಾಡಿನ ಅನೇಕ ದೇವಾಲಯಗಳಲ್ಲಿ 'ತಿರುವಾಯ್ ಮೊಳಿ' ಗೀತೆಗಳನ್ನು ಸಂಪ್ರದಾಯಬದ್ಧವಾಗಿ ಹಾಡುವ ಪದ್ಧತಿ ಇಂದಿಗೂ ನಡೆದು ಬಂದಿದೆ. ಈ ಗೀತೆಗಳನ್ನು 'ಹಾಡುವ ಕಲಾವಿದರು' ಇಂದಿಗೂ ಇದ್ದಾರೆ ಎಂಬ ವಿಷಯವು ಈ ಪ್ರಬಂಧ ಮಂಡನೆಯ ಸಂದರ್ಭದಲ್ಲಿ ಮಾಹಿತಿಯಾಗಿ ಒದಗಿ ಬಂದಿತು. ನೃತ್ಯದ ಹಿನ್ನೆಲೆಯಲ್ಲಿ ಇಂದು ಉತ್ತರಭಾರತದಲ್ಲಿ ಪ್ರಸಿದ್ಧವಾಗಿರುವ 'ಕಥಕ್' ನೃತ್ಯದ ಬಗ್ಗೆ ಗಮನ ಹರಿಸಿದಾಗ ಈ ನೃತ್ಯ ಪರಂಪರೆಯೂ ಬೆಳವಣಿಗೆ ಬಹಳ ವಿಶೇಷವಾದದ್ದೆನಿಸುತ್ತಿದೆ. ಅನೇಕ ಶತಮಾನಗಳಿಂದ ದೇವಾಲಯಗಳಲ್ಲಿ ಹಾಡುಗಳನ್ನು ರಾಗವಾಗಿ ಹಾಡುತ್ತಾ ಕಥೆಯನ್ನು ವಿವರಿಸುವ ಸಂಪ್ರದಾಯಸ್ಥ ದೇವಾಲಯದ ಸೇವಾವರ್ಗದವರಿಗೆ ಸಂಬಂಧಪಟ್ಟವರು, ಇಂದಿನ 'ಕಥಕ್' ನೃತ್ಯದ ಪೂರ್ವಜರು ಅಥವಾ ಮೂಲ ಪುರುಷರು ಎಂಬುದು ತಿಳಿದು ಬರುತ್ತದೆ. ಮುಖ್ಯವಾಗಿ ಇವರು ವೈಷ್ಣವ ಧರ್ಮದ ಪ್ರತಿಪಾದನೆಗಾಗಿ ದೇವಾಲಯಗಳಲ್ಲಿ ವೈಷ್ಣವ ಧರ್ಮದ ಕಥೆಗಳನ್ನು ಬಹಳ ಮನೋಹರವಾಗಿ ಕಥೆಗಳ ರೂಪದಲ್ಲಿ ಹಾಡುತ್ತಾ, ನರ್ತಿಸುತ್ತಿದ್ದರು ಎಂಬ ವಿಷಯ ಬಹಳ ಮುಖ್ಯವಾಗುತ್ತದೆ.

*.....It is said that the teachers of these Devadasis were a class of 'Brahmins', who were expert musicians and dancers attached to the temples. They were also excellent narrators and story tellers and used to interprete the incidents from the Rāmāyana and Mahabharata and Purāna with gestures and music. The sanskrit word 'Kathak' or 'kathika' means a narrator or a story-teller. The present kathakas who incidentally happen to be Brahmins explain the term 'Kathak'- kathan kari so kathak kahāyē!*

*Therefore, though definite historical proof is wanting one can infer that the kathaks of today belong to this age. Old 'Tradition' of temples age old Tradition of temple musicians. The kathak dance derives its name from the community of kathaks who are the custodians of the art...."*[illegible]

ಈ ಎಲ್ಲಾ ಆಯಾಮಗಳಲ್ಲಿ ಗಮನಿಸಿದಾಗ ವೈಷ್ಣವ ಗೀತಿ ಮನೋಹರರ್ ಪಾಂಚರಾತ್ರಾಗಮದರಷ್ಟೇ ಅಲ್ಲದೆ ರಂಗಭೋಗ ಸಂಪ್ರದಾಯದ ಪರಿವಾರ ಅಥವಾ ಕುಟುಂಬಕ್ಕೆ ಸೇರಿದವರಾಗಿರಬಹುದು ಎಂಬುದು ನಮ್ಮ ಊಹೆ.

## ಅಡಿಟಿಪ್ಪಣಿ

*೧. ಡಾ || ಚಿದಾನಂದ ಮೂರ್ತಿ : ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ***, ಪುಟ ೧೬೪, ೧೬೫

*೨(a). – ಅದೇ – ಪುಟ ೧೬೬

*೨(b). ಎಸ್. ಸಿ. ನಂದೀಮಠ : ***ಕನ್ನಡ ನಾಡಿನ ಚರಿತ್ರೆ*** ೨, ಪುಟ ೨೬೬, ಪಾಂಚರಾತ್ರಾಗಮಗಳು ವೇದಗಳಂತೆ ಅಪೌರುಷೇಯಗಳೆಂದು ನಂಬುತ್ತಾರೆ. ಇವುಗಳ ಸಂಖ್ಯೆ ೧೦೮ ಎಂದು ಪ್ರತೀತಿ ಇದೆಯಾದರೂ ಡಾ || ಶ್ರೇಡಾರ್ ಅವರು ೨೧೫ ವೈಷ್ಣವಾಗಮಗಳ ಪಟ್ಟಿಯನ್ನು ಕೊಟ್ಟಿರುವರು........ ಇವು ಮಹಾಭಾರತದ ತರುವಾಯ ಮತ್ತು ಕ್ರಿ.ಶ. ೮೦೦ ಕ್ಕೆ ಪೂರ್ವದಲ್ಲಿ ಹುಟ್ಟಿರಬೇಕು.

*೩. ಡಾ || ಎಚ್. ಎಸ್. ಗೋಪಾಲರಾವ್ : ***ಶಾಸನಗಳ ಹಿನ್ನೆಲೆಯಲ್ಲಿ, ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ***

*೪(a). S.I.I. Vol. XVIII, No. 104, ಕ್ರಿ. ಶ. ೧೧೦೧

*೪(b). S.I.I. Vol. XI, No. 52, ಕ್ರಿ. ಶ. ೧೦೦೭

*೪(c). K.I. Vol. II, No. 10 of 1940 - 41, ಕ್ರಿ. ಶ. ೧೦೭೯

*೫. S.I.I. Vol. XVIII, No. 104, ಕ್ರಿ.ಶ. ೧೧೦೧

*೬. ಎಸ್. ಸಿ. ನಂದೀಮಠ – ***ಕನ್ನಡ ನಾಡಿನ ಚರಿತ್ರೆ***, ೨., ಪುಟ ೧೦೪

*೭. ***ಭಾರತೀಯ ಸಂಸ್ಕೃತಿದರ್ಶನ*** : (ಸಂ.) ಅ. ನ. ಕೃಷ್ಣರಾಯ, ಪುಟ ೨೮೫

*೮. ಎಸ್. ಸಿ. ನಂದೀಮಠ, ಅದೇ., ಪುಟ. ೧೦೪ – ೧೦೫

*೯. Projesh Banergi - ***KATHAK THROUGH AGES***, Page 8

ನಾ. ಗೀತಾಚಾರ್ಯ *

# ಕೀರ್ತನ ಸಾಹಿತ್ಯದಲ್ಲಿ ಶ್ರೀವೈಷ್ಣವ ಪರಂಪರೆ – ಹೊಸ ಶೋಧ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅತ್ಯಂತ ಪ್ರಮುಖ ಪ್ರಕಾರವಾಗಿರುವ ಹರಿದಾಸ ಅಥವ ಕೀರ್ತನ ಸಾಹಿತ್ಯ ಪರಂಪರೆ ನಾಲ್ಕು ಘಟ್ಟಗಳಲ್ಲಿ ಬೆಳೆದಿದೆಯೆಂಬುದು ಸರ್ವವಿದಿತ. ನರಹರಿ ತೀರ್ಥರು, ಶ್ರೀಪಾದರಾಜರಿಂದ ಇದರ ಆರಂಭಕಾಲವನ್ನೂ ಪುರಂದರದಾಸ, ಕನಕದಾಸ, ವಾದಿರಾಜರು, ವೈಕುಂಠದಾಸರ ಕಾಲವನ್ನು ಉನ್ನತಿಯ ಕಾಲವೆಂದೂ ವಿಜಯದಾಸರು ಗೋಪಾಲ ದಾಸರು, ರಾಘವೇಂದ್ರ ತೀರ್ಥರು, ಜಗನ್ನಾಥದಾಸರು ಮುಂತಾದವರ ಕಾಲವನ್ನೂ ಮೂರನೇ ಘಟ್ಟ ಅಥವ ವಿಸ್ತಾರ ಕಾಲವೆಂದೂ ವೇಣುಗೋಪಾಲ ದಾಸರು, ಪ್ರಾಣೇಶ ವಿಠಲರು ಮುಂತಾದವರ ಕಾಲವನ್ನು ನಾಲ್ಕನೇ ಅಥವ ಅವನತಿಯ ಕಾಲವೆಂದೂ ಸಾಮಾನ್ಯವಾಗಿ ಗುರುತಿಸಲಾಗುತ್ತಿದೆ.

ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗದ ಜೊತೆ ಜೊತೆಗೇ ಹರಿದಾಸ ವಾಙ್ಮಯವೂ ಜನಜನಿತವಾಗಿ ಸಾಮ್ರಾಜ್ಯದ ಪತನಾನಂತರ ಅದರ ಜನಪ್ರಿಯತೆಯೂ ಕುಂದಿತು ಎಂಬುದು ಇತಿಹಾಸಕಾರರ ಅಭಿಪ್ರಾಯ. "ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗದಲ್ಲಿ ಪುರಂದರ ಕನಕದಾಸರು ನಾಡಿನಾದ್ಯಂತ..... ವಾದಿರಾಜರು ದಕ್ಷಿಣ ಕನ್ನಡದಾದ್ಯಂತ ವೈಕುಂಠದಾಸರು ಬೇಲೂರಿನ ಸುತ್ತಮುತ್ತ ಬೆಳೆಸುವುದರ ಮೂಲಕ ೧೬೦೦ರ ವರೆಗೆ ಹರಿದಾಸ ಸಾಹಿತ್ಯ ಪ್ರಸರಿಸಿತ್ತು........ ಅನಂತರ ಕಾರಣಾಂತರದಿಂದ ಹರಿದಾಸ ಪರಂಪರೆ ಅಷ್ಟಾಗಿ ಸ್ಪಷ್ಟವಾಗಿ ಮುಂದುವರಿಯಲಿಲ್ಲ. ಪುರಂದರದಾಸರ ಶಿಷ್ಯರೂ ವೈಕುಂಠ ದಾಸರ ಶಿಷ್ಯರೂ ವಾದಿರಾಜರ ಶಿಷ್ಯರೂ ಏನು ಕಾರಣದಿಂದಲೋ ಹೊರಗೆ ಬರಲಿಲ್ಲ. ಹೆಸರು ಪಡೆಯಲಿಲ್ಲ. ಪದಗಳನ್ನೂ ರಚಿಸಿದಂತೆ ಕಾಣಲಿಲ್ಲ"*೧. ಸಾಹಿತ್ಯ ಚರಿತ್ರಕಾರರಿಂದ ಹಿಡಿದು ಹೆಚ್ಚು ಕಡಿಮೆ ಎಲ್ಲ ವಿದ್ವಾಂಸರೂ ಈ ಅಭಿಪ್ರಾಯವನ್ನೇ ಹೊಂದಿದ್ದಾರೆ. ಈ ಕಾಲದಲ್ಲಿ ನಡೆದ ರಾಜಕೀಯ ಸ್ಥಿತ್ಯಂತರಗಳು ಆ ಮೂಲಕ ಸಮಾಜ ಜೀವನ ಮತ್ತು ಧರ್ಮದ ಮೇಲಾದ ಆಘಾತಗಳು ಇದಕ್ಕೆ ಕಾರಣವೆಂದೂ ಊಹಿಸುತ್ತಾರೆ.

ಮಾಧ್ವಮತ ತತ್ವಗಳ ಮುಖ್ಯವಾಹಿನಿಯಾಗಿ ಕೀರ್ತನ ಸಾಹಿತ್ಯವನ್ನೂ ಗುರುತಿಸಲಾಗುತ್ತಿದೆ. ಈವರೆಗಿನ ಅಧ್ಯಯನವೂ ಇದೇ ಹಿನ್ನೆಲೆಯಲ್ಲಿ ನಡೆದು ಬಂದಿದೆ. ಅದ್ವೈತ (ಸ್ಮಾರ್ತ) ಸಂಪ್ರದಾಯದ ಕೀರ್ತನಕಾರರೂ ಇರುವುದನ್ನು ಕಳೆದ ದಶಕದಲ್ಲಿ ಬೆಳಕಿಗೆ ತರಲಾಗಿದೆ. ಚಿದಾನಂದವಧೂತ, ತಿಮ್ಮಪ್ಪದಾಸರು, ನಾರಾಯಣದಾಸರು, ಶಿವರಾಮಶಾಸ್ತ್ರಿಗಳು, ಪಾವಂಜೆ, ಬೇಟೆ ರಾಯ ದೀಕ್ಷಿತರು ಮುಂತಾದವರ ಅದ್ವೈತ ಪರವಾದ ಕೀರ್ತನೆಗಳು ಪ್ರಕಟಗೊಂಡಿವೆ. ಎಂ. ವಿ. ಸೀತಾರಾಮಯ್ಯನವರು ಈ ಕೀರ್ತನ ಪರಂಪರೆಯನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ*೨ ಈ ಹಿನ್ನೆಲೆಯಲ್ಲಿ ದ್ವೈತಕೀರ್ತನ ಪರಂಪರೆಯೊಂದಿಗೆ ಅದ್ವೈತ ಕೀರ್ತನ ಪರಂಪರೆಯೂ ಸೇರಿದಂತಾಗಿದೆ.

ವೈದಿಕ ಧರ್ಮದ ಇನ್ನೊಂದು ಪ್ರಮುಖ ಶಾಖೆಯಾದ ವಿಶಿಷ್ಟಾದ್ವೈತದಲ್ಲೂ ಕೀರ್ತನ ಪರಂಪರೆಯೊಂದು ಬೆಳೆದು ಬಂದಿರುವುದನ್ನು ಈ ದಶಕದಲ್ಲಿ ಗುರುತಿಸುವ ಪ್ರಯತ್ನಗಳು ನಡೆದಿವೆ. ಈಗಾಗಲೆ ಒಂದೆರಡು ಲೇಖನಗಳು, ಕೃತಿಗಳು ಪ್ರಕಟವಾಗಿದ್ದೂ ಅವುಗಳನ್ನು ಹೀಗೆ ಪಟ್ಟಿಮಾಡಬಹುದು :

೧. ನಾರಾಯಣಶರ್ಮ ಕೀರ್ತನೆಗಳು : ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರ, ದೊಡ್ಡಹೆಕ, ಜಿಚ್ಚಾ. ೧೯೯೩
೨. ರಂಗದಾಸರ ಕೀರ್ತನೆಗಳು : ಅದೇ – ೧೯೯೪
೩. ಮೂವರು ಶ್ರೀ ವೈಷ್ಣವ ಹರಿದಾಸರು : ಕರ್ನಾಟಕ ಲೋಚನ, ಡಿಸೆಂಬರ್ ೧೯೯೫ (ಸಂ. ೪-೭)
೪. ತುಮಕೂರು ಜಿಲ್ಲೆಯ ಮೂವರು ಕೀರ್ತನಕಾರರು : ತುಮಕೂರು ಜಿಲ್ಲಾ ಕ.ಸಾ.ಪ.ತುಮಕೂರು ೧೯೯೬.
೫. ಕನ್ನಡ ಸಾಹಿತ್ಯದಲ್ಲಿ ಶ್ರೀವೈಷ್ಣವ ಹರಿದಾಸ ಪರಂಪರೆ :

* ಕನ್ನಡ ರೀಡರ್, ಕನ್ನಡ ಸ್ನಾತಕೋತ್ತರ ವಿಭಾಗ, ಶೇಷಾದ್ರಿಪುರಂ ಕಾಲೇಜ್, ಬೆಂಗಳೂರು – ೫೬೦ ೦೨೦

ಭೂಷಣ ಸರ್ವಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು (ಅಪ್ರಕಟಿತ)

೬. ಮೂವರು ಶ್ರೀವೈಷ್ಣವ ಹರಿದಾಸರ ಕೀರ್ತನೆಗಳು: ನಾರಾಯಣಶರ್ಮ ಸಂಸ್ಕೃತಿ ಕೇಂದ್ರ, ದೊಡ್ಡ ಹೆಜ್ಜಾಜಿ (ಅಪ್ರಕಟಿತ)

ಈ ಎಲ್ಲ ಲೇಖನ ಮತ್ತು ಪುಸ್ತಕಗಳು ಇದೇ ಲೇಖಕನಿಂದ ಕನ್ನಡಕ್ಕೆ ಪರಿಚಯವಾಗಿದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು. ಈ ಮೇಲಿನ ಉಲ್ಲೇಖಗಳಲ್ಲಿ ಪರಿಚಿತವಾಗಿರುವ ಶ್ರೀವೈಷ್ಣವ ಕೀರ್ತನಕಾರರ ಜೊತೆಗೆ ಇನ್ನೂ ಕೆಲವರನ್ನು ಪರಿಚಯಿಸುವುದು ಪ್ರಸ್ತುತ ಲೇಖನದ ಉದ್ದೇಶ.

ವಾಸ್ತವವಾಗಿ ಕೀರ್ತನ ಸಾಹಿತ್ಯದ ಅಧ್ಯಯನದಲ್ಲೇ ಬಹುಮಟ್ಟಿಗೆ ಎಲ್ಲ ವಿದ್ವಾಂಸರೂ ವಿಶಿಷ್ಟಾದ್ವೈತ ಸಾಹಿತ್ಯದ ಪ್ರಭಾವವನ್ನು ಗುರುತಿಸುತ್ತಾರೆ. ಕನಕದಾಸರು ಆರಂಭದಲ್ಲಿ ವಿಶಿಷ್ಟಾದ್ವೈತ ಅನುಯಾಯಿಗಳಾಗಿದ್ದರೆಂದೂ ಅವರ ಸಮಕಾಲೀನರೂ ಪ್ರಮುಖ ಕೀರ್ತನಕಾರರೂ ಆಗಿರುವ ಬೇಲೂರು ವೈಕುಂಠದಾಸರನ್ನು ಶ್ರೀವೈಷ್ಣವರೇ ಎಂದೂ ವಿದ್ವಾಂಸರು ಸ್ಪಷ್ಟವಾಗಿ ಸೂಚಿಸಿದ್ದಾರೆ. ಮೂರನೇ ಘಟ್ಟದ ನಂತರ ಕೀರ್ತನ ಸಾಹಿತ್ಯ ಮುಂದುವರಿಕೆಯನ್ನು ಪಡೆದದ್ದೇ ಚಿಕದೇವರಾಜನ ಕಾಲದ ಶ್ರೀವೈಷ್ಣವ ಸಾಹಿತ್ಯದ ಮೂಲಕ ಎಂದು ವಿದ್ವಾಂಸರು ಗ್ರಹಿಸಿದ್ದಾರೆ. ''ಹರಿದಾಸ ಸಾಹಿತ್ಯದ ಕೀರ್ತನ ಪ್ರಕಾರವನ್ನು ಶ್ರೀವೈಷ್ಣವ ಕವಿಗಳು ಬಳಸಿಕೊಂಡರು''; ''ಹರಿಸಂಕೀರ್ತನೆಗಳ ಭಂಡಾರಕ್ಕೆ ಗೀತಗೋಪಾಲವು.......ಮೆಚ್ಚುವಂತಹ ಗೀತ ನಿಧಿಯನ್ನು ನೀಡಿರುತ್ತದೆ.[*]'' ಎಂದು ಹೇಳುತ್ತಲೇ ಶ್ರೀವೈಷ್ಣವ ಸಾಹಿತ್ಯ ಅಂದರೆ ವಿಶಿಷ್ಟಾದ್ವೈತ ವಿಚಾರಗಳು ಸಾಹಿತ್ಯದ ಮುಖ್ಯವಾಹಿನಿಯಲ್ಲಿ ಬರಲೇ ಇಲ್ಲ ಎಂದು ಅಭಿಪ್ರಾಯ ಪಡುತ್ತಾರೆ.[*]

ಆದರೂ ಶ್ರೀವೈಷ್ಣವ ಸಂಪ್ರದಾಯದ ಕೀರ್ತನೆಗಳನ್ನು ಈವರೆಗೆ ಯಾವ ವಿದ್ವಾಂಸರೂ ಪ್ರತ್ಯೇಕವಾಗಿ ಗುರುತಿಸಿರಲಿಲ್ಲ. ಬೇಲೂರು ವೈಕುಂಠದಾಸರನ್ನು ಶ್ರೀವೈಷ್ಣವರು ಎಂದೇ ಪ್ರತಿಪಾದಿಸಿದ್ದರೂ ಅವರ ಕೀರ್ತನೆಗಳೂ ಪ್ರಚಲಿತವಿದ್ದರೂ ಅವುಗಳ ಬಗೆಗೆ ಹೆಚ್ಚಿನ ಅಧ್ಯಯನ ನಡೆದೇ ಇಲ್ಲ. ಉಡುಪಿಯ ಮಧ್ವಸಿದ್ಧಾಂತ ಗ್ರಂಥಾಲಯದ ಪ್ರಕಟನೆಗಳಲ್ಲೂ; ಲಿಂಗಸೂಗೂರಿನ ಗೋರಿಬಾಳ ಹನುಮಂತರಾಯರ ಕೃತಿಗಳಲ್ಲಿ ವೈಕುಂಠದಾಸರ ಕೃತಿಗಳು ಅಚ್ಚಾಗಿದ್ದರೂ ಏಕೋ ಏನೊ ಅವುಗಳ ಬಗೆಗೆ ವಿದ್ವಾಂಸರು ಈವರೆಗೆ ವಿಶೇಷ ಗಮನ ಹರಿಸದಿರುವುದು ಆಶ್ಚರ್ಯದಾಯಕವಾಗಿದೆ. ಇತ್ತೀಚಿನ ಅಧ್ಯಯನ ಗ್ರಂಥಗಳವರೆಗೆ ದಾಸ ಸಾಹಿತ್ಯದ ಗ್ರಂಥಗಳಲ್ಲೆಲ್ಲ ಇವರನ್ನು ಉಲ್ಲೇಖಿಸಿದ್ದರೂ ಹೆಚ್ಚಿನ ವಿವರಗಳನ್ನು ನೀಡದಿರುವುದು ಕಂಡುಬರುತ್ತದೆ. ವಾದಿರಾಜರು, ಕನಕದಾಸರು, ಪುರಂದರದಾಸರು ಅಚ್ಯುತದಾಸರು (?) ಮುಂತಾದ ಅನೇಕ ದಾಸರುಗಳು ಇವರನ್ನು ಸ್ತುತಿಸುವಷ್ಟರ ಮಟ್ಟಿಗೆ ಬೇಲೂರು ವೈಕುಂಠದಾಸರು ಪ್ರಮುಖರಾಗಿದ್ದಾರೆ. ಎಸ್. ಕೆ. ರಾಮಚಂದ್ರರಾವ್ ಅವರ ಈ ಒಂದು ಸಣ್ಣ ವಿವರಣೆಯನ್ನು ಬಿಟ್ಟರೆ ಬೇರೆಯಾವ ಗ್ರಂಥದಲ್ಲಿಯೂ ಇವರ ಬಗೆಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

''ಕನಕದಾಸರೊಡನೆ ಕೂಡಿಕೊಂಡು ಹರಿದಾಸ್ಯದ ಕಳೆಯನ್ನು ಮತ್ತಷ್ಟು ಹೆಚ್ಚಿಸಿದ ಇನ್ನೊಬ್ಬರು ದಾಸರೆಂದರೆ ಬೇಲೂರು ವೈಕುಂಠದಾಸರು. ಅವರು ಬೇಲೂರಿನವರು. ಬಾಳಿನ ಬಹುಭಾಗವನ್ನು ಬೇಲೂರಿನಲ್ಲಿಯೇ ಕಳೆದವರು. ಅವರು ವ್ಯಾಸತೀರ್ಥರ ಬಳಿ ಶಿಷ್ಯವೃತ್ತಿ ಮಾಡಿದ್ದರೋ ಇಲ್ಲವೋ ಖಚಿತವಾಗಿ ತಿಳಿದುಬರುವುದಿಲ್ಲ. ಆದರೆ ಪುರಂದರದಾಸರಿಗೂ ಅವರಿಗೂ ಗೆಳೆತನವಿದ್ದುದರ ಉಲ್ಲೇಖಗಳಿವೆ. ಕನಕದಾಸರಂತೂ ವೈಕುಂಠದಾಸರ ಹಿರಿಮೆಯನ್ನು ಒಂದು ಪದದಲ್ಲಿ ಉಳಿಸಿಯೇ ಇದ್ದಾರೆ. ಈ ದಾಸರು ಶ್ರೀವೈಷ್ಣವ ಸಂಪ್ರದಾಯದವರು. ಅವರು ರಚಿಸಿರುವ ಕೀರ್ತನೆಗಳಲ್ಲಿ 'ವೈಕುಂಠಕೇಶವ' ಎನ್ನುವ ಮುದ್ರಿಕೆಯಿದೆ. ಕನಕದಾಸರೂ ಶ್ರೀವೈಷ್ಣವ ದೀಕ್ಷೆಯನ್ನು ತಳೆದವರು. ಕೇಶವನೇ ಅವರ ಇಷ್ಟದೈವ. ಇವು ವೈಕುಂಠದಾಸರಿಗೂ ಅವರಿಗೂ ಒದಗಿದ ಹೆಚ್ಚಿನ ಮೈತ್ರಿಗೆ ಕಾರಣಗಳಿರಬಹುದು. ಅಂತೂ ವೈಕುಂಠದಾಸರ ಕೀರ್ತನೆಗಳಲ್ಲಿ ಪ್ರಪತ್ತಿಧರ್ಮ ಎದ್ದು ಕಾಣುತ್ತದೆ. ಅವರ ಕೀರ್ತನೆಗಳನ್ನೆಲ್ಲ ಕಲೆಹಾಕಿ ಪ್ರಕಟಿಸುವ ಕೆಲಸವನ್ನೂ ನಡೆದಿಲ್ಲ.''[*] ಬೇಲೂರು ಕೇಶವದಾಸರ 'ಶ್ರೀ ಕರ್ನಾಟಕ ಹರಿಭಕ್ತಿ ವಿಜಯ'ದಲ್ಲಿ ಇವರ ಬಗ್ಗೆ ರಂಜನೀಯವಾದ ಕಥಾ ವಿವರಣೆಯಿದೆ. ಅವರ ವಂಶಸ್ಥರಿಂದಲೇ ಈ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ ಎಂದು ಅವರು ತಿಳಿಸಿರುವುದರಿಂದ ಸದ್ಯಕ್ಕೆ ಇವೇ ವೈಕುಂಠದಾಸರ ಬಗ್ಗೆ ನಮಗಿರುವ ಅಧಿಕೃತ ಮಾಹಿತಿ ಗಳೆನಿಸುತ್ತವೆ.

ದಾಸಸಾಹಿತ್ಯದ ಉನ್ನತಿಯ ಕಾಲದಲ್ಲೇ ಕಾಣಿಸಿಕೊಂಡಿರುವ ಬೇಲೂರು ವೈಕುಂಠದಾಸರಲ್ಲದೆ ಜೈಮಿನಿ ಭಾರತದ ಕವಿ ಲಕ್ಷ್ಮೀಶನ ಹೆಸರಿನಲ್ಲೂ ಹತ್ತು ಕೀರ್ತನೆಗಳು ಲಭ್ಯವಿವೆ.[*] ೧೯೫೬ರಲ್ಲೇ ಇದು ಬೆಳಕಿಗೆ ಬಂದಿದ್ದರೂ ಯಾವ ವಿದ್ವಾಂಸರೂ – ನನ್ನ ಗಮನಕ್ಕೆ ಬಂದಂತೆ – ಈ ಬಗ್ಗೆ ಗಮನ ಹರಿಸಿಲ್ಲ. ಇವರಿಬ್ಬರೂ ಸ್ಪಷ್ಟವಾಗಿ ಶ್ರೀವೈಷ್ಣವ ಕೀರ್ತನಕಾರರೇ ಆಗಿದ್ದಾರೆ. ಇತಿಹಾಸಕಾರರು ಗುರುತಿಸುವ ಕ್ರಿ. ಶ. ೧೭೦೦ರ ಸುಮಾರಿನ ಚಿಕ್ಕದೇವರಾಜನ ಕಾಲದ ವಿಶಿಷ್ಟಾದ್ವೈತ ಸಾಹಿತ್ಯ 'ನಾಲ್ಕನೇ ಘಟ್ಟದ ಕೀರ್ತನ ಸಾಹಿತ್ಯದ ಬೆಳವಣಿಗೆಗೆ ಪ್ರೇರಕವಾಗಿದೆ' ಎಂಬ ಮಾತುಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು. 'ಹರಿದಾಸ ಸಾಹಿತ್ಯದ ಕೀರ್ತನ ಪ್ರಭಾವವನ್ನು ಶ್ರೀವೈಷ್ಣವ ಕವಿಗಳು ಬಳಸಿಕೊಂಡರು'[*] ''ಹರಿಸಂಕೀರ್ತನೆಗಳ ಭಂಡಾರಕ್ಕೆ

ಗೀತಗೋಪಾಲವು ಉನ್ನತವಾದ ಅಲ್ಲದಿದ್ದರೂ ತುಂಬ ಮೆಚ್ಚುವಂಥ ಗೀತ ನಿಧಿಯನ್ನು ನೀಡಿರುತ್ತದೆ.''*೮ ಎಂಬ ಹಿಂದಿನ ಉಲ್ಲೇಖಗಳನ್ನು ಇಲ್ಲಿ ಮತ್ತೊಮ್ಮೆ ನೆನಪಿಸಿ ಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಚಿಕ್ಕದೇವರಾಜನ ಗೀತಗೋಪಾಲ, ಸಿಂಗಿರಾರ್ಯನ 'ಗೀತರಂಗೇಶ್ವರ', ಚಿಕ್ಕೊಪಾಧ್ಯಾಯನ ' ಚಿಕ್ಕದೇವರಾಯ ಶೃಂಗಾರ ಪದಗಳು', 'ರಂಗನಾಥನ ಲಾಲೀ ಪದಗಳು', ಆನಂತರದ ಕಳಲೆ ಕಾಂತರಾಜನ ಮಗಳಾದ ಚೆಲುವಾಂಬೆಯ 'ವೆಂಕಟಾಚಲ ಮತ್ತು ಅಲಮೇಲು ಮಂಗಮ್ಮ ಲಾಲೀ ಪದಗಳು' ಮುಂತಾದ ಕೃತಿಗಳು*೯ ಶ್ರೀವೈಷ್ಣವ ಕೀರ್ತನ ಸಾಹಿತ್ಯದಲ್ಲಿ ಬರಬಲ್ಲವೆನಿಸಿದರೂ ಇವು ನಿರ್ದಿಷ್ಟ ವಸ್ತು- ವಿಷಯಕ ಕೀರ್ತನ ಪ್ರಕಾರದ ಕೃತಿಗಳಾಗಿ ನಿಲ್ಲುತ್ತವೇನೋ ಎಂಬ ಅಭಿಪ್ರಾಯ ಮೂಡುತ್ತದೆ.*೧೦ ಆದರೂ ಈ ಬಗ್ಗೆ ಪರಿಶೀಲಿಸುವ ಅಗತ್ಯವಿದೆ. ಇವರನ್ನು ಹೊರತುಪಡಿಸಿಯೂ ಇದುವರೆಗಿನ ಅಧ್ಯಯನದಿಂದ ನನ್ನ ಗಮನಕ್ಕೆ ಬಂದಿರುವ ಶ್ರೀವೈಷ್ಣವ ಕೀರ್ತನಕಾರರಾಗಿಯೇ ಕಾಣಿಸಿಕೊಂಡಿರು ವವರನ್ನು ಈ ರೀತಿ ಪಟ್ಟಿಮಾಡಬಹುದು.

ನನ್ನ ಈ ಮೊದಲಿನ ಲೇಖನ, ಪುಸ್ತಕಗಳಲ್ಲಿ ಈಗಾಗಲೆ ಸಾಹಿತ್ಯಲೋಕಕ್ಕೆ ಪರಿಚಿತವಾಗಿರುವ ರಂಗದಾಸರು (ಕ್ರಿ. ಶ. ೧೮೩೦) ಶಾಮಶರ್ಮರು (ಕ್ರಿ.ಶ. ೧೮೯೧) ಮತ್ತು ನಾರಾಯಣ ಶರ್ಮರು (ಕ್ರಿ. ಶ. ೧೯೧೨)ಗಳಲ್ಲಿ ರಂಗದಾಸರು ಮತ್ತು ನಾರಾಯಣಶರ್ಮರ ಕೀರ್ತನೆಗಳು ಪ್ರಕಟವಾಗಿದ್ದು ಶಾಮ ಶರ್ಮರ ಕೀರ್ತನೆಗಳು ಇನ್ನೂ ಪ್ರಕಟವಾಗಬೇಕಿದೆ. ಇವರುಗಳ ಬಗ್ಗೆ ಈಗಾಗಲೆ ಮಾಹಿತಿಗಳನ್ನೂ ಲೇಖನ - ಪುಸ್ತಕಗಳಲ್ಲಿ ಪ್ರಕಟಿಸಿರುವುದರಿಂದ ಇಲ್ಲಿ ಪುನರಾವರ್ತಿಸದೆ ಈವರೆಗಿನ ನನ್ನ ಪರಿವೀಕ್ಷಣೆಯಲ್ಲಿ ಕಂಡುಬಂದ ಹೆಚ್ಚಿನ ಕೀರ್ತನಕಾರರ ಮಾಹಿತಿಗಳನ್ನು ಮಾತ್ರ ನೀಡುತ್ತಿದ್ದೇನೆ. ಈ ಎಲ್ಲ ಮಾಹಿತಿಗಳೂ ಅಪೂರ್ಣವಾಗಿದ್ದು ಅಸಮಗ್ರವಾಗಿದ್ದು ಹೆಚ್ಚಿನ ಸಂಶೋಧನೆ ಅತ್ಯಗತ್ಯವಾಗಿದೆ.

**೧. ಬೇಲೂರು ವೈಕುಂಠದಾಸರು :** (ಕ್ರಿ. ಶ. ಸು. ೧೫೫೦) ಬೇಲೂರಿನ ಚನ್ನಕೇಶವನ ಆರಾಧಕರು. 'ವೇಲಾಪುರಾಧೀಶ' 'ವೈಕುಂಠ ಕೇಶವ' ಅಂಕಿತಗಳಲ್ಲಿ ಸಾವಿರಾರು ಕೀರ್ತನೆಗಳನ್ನು ರಚಿಸಿದ್ದಾರೆಂದು ಪ್ರತೀತಿಯಿದೆ. ವಿವಿಧ ಆಕರಗಳಿಂದ ಈವರೆಗೆ ಸು. ೩೫ ಕೀರ್ತನೆಗಳನ್ನು ಸಂಗ್ರಹಿಸಲಾಗಿದೆ. ಇವರನ್ನು ಕುರಿತು ವಾದಿರಾಜರು, ಕನಕದಾಸರು, ಪುರಂದರದಾಸರು ಮತ್ತು ಇತರರು ರಚಿಸಿರುವ ಸು. ೧೦ ಕೀರ್ತನೆಗಳೂ ಇವೆ. ಶ್ರೀವೈಷ್ಣವ ಕೀರ್ತನ ಪರಂಪರೆಯಲ್ಲಿ ಇವರೇ ಆದ್ಯ ಕೀರ್ತನಕಾರರಾಗುತ್ತಾರೆ. ಇವರ ಕೀರ್ತನೆಗಳು ಎಲ್ಲ ಪ್ರಮುಖ ಗ್ರಂಥಗಳಲ್ಲೂ ಕಾಣಿಸಿಕೊಂಡಿದ್ದರೂ ಪ್ರತ್ಯೇಕವಾಗಿ ಗುರುತಿಸಿಲ್ಲ. ವಿಶಿಷ್ಟಾದ್ವೈತ ಕೀರ್ತನ ಪರಂಪರೆಯು ಕೀರ್ತನ ಸಾಹಿತ್ಯದ ಎರಡನೇ ಘಟ್ಟದಲ್ಲೇ ಇವರ ಕೀರ್ತನೆಗಳ ಮೂಲಕ ದಾಖಲಾಗುತ್ತದೆ. ಹೆಬ್ಬಾರ್ ಶ್ರೀವೈಷ್ಣವರೆಂದು ಇವರನ್ನು ಗುರುತಿಸಲಾಗಿದೆ.*೧೧

**೨. ಕವಿಲಕ್ಷ್ಮೀಶ :** ಕ್ರಿ.ಶ.೧೬೦೦ ಜನಪ್ರಿಯ ಕವಿ ಜೈಮಿನಿ ಭಾರತದ ಕರ್ತೃ ಲಕ್ಷ್ಮೀಶನ ಹೆಸರಿನಲ್ಲಿ ಹತ್ತು ಕೀರ್ತನೆಗಳು ಮಾತ್ರ ಅಚ್ಚಾಗಿದ್ದರೂ ಇನ್ನೂ ಅನೇಕ ಹಾಡುಗಳನ್ನು ರಚಿಸಿದ್ದಾನೆಂದು ಊಹಿಸಲಾಗಿದೆ.

ವಾಸ್ತವವಾಗಿ ಕೀರ್ತನ ಸಾಹಿತ್ಯ ಪರಂಪರೆಯ ಅಧ್ಯಯನದಲ್ಲೇ ವಿಶಿಷ್ಟಾದ್ವೈತ ತತ್ವದ ವಿಚಾರವನ್ನು ಬಹುಮಟ್ಟಿಗೆ ಎಲ್ಲ ವಿದ್ವಾಂಸರೂ ಪ್ರಸ್ತಾಪಿಸಿದ್ದಾರೆ. ಕನಕದಾಸರನ್ನು ಶ್ರೀವೈಷ್ಣವ ಮತಾನುಯಾಯಿಗಳೆಂದೂ ಅವರ ಸಮಕಾಲೀನರೂ ಪ್ರಮುಖ ಬಹಳ ಹಿಂದೆಯೇ ಈ ಕೀರ್ತನೆಗಳು ಬೆಳಕಿಗೆ ಬಂದಿದ್ದರೂ ಬೇಲೂರು ವೈಕುಂಠದಾಸರು ಹೇಗೋ ಹಾಗೆಯೇ ಕೀರ್ತನಕಾರ ಲಕ್ಷ್ಮೀಶನೂ ವಿದ್ವಾಂಸರ ಗಮನಕ್ಕೆ ಬಂದಿಲ್ಲ. ವೈಕುಂಠದಾಸರಿಂದ ಆರಂಭವಾದ ಶ್ರೀವೈಷ್ಣವ ಕೀರ್ತನ ಪರಂಪರೆಯ ಮುಂದುವರಿಕೆಯನ್ನು ಲಕ್ಷ್ಮೀಶನ ಕೀರ್ತನೆಗಳಲ್ಲಿ ಗುರುತಿಸಬಹುದು. 'ಲಕ್ಷ್ಮೀಶ', 'ದೇವಪುರ ಲಕ್ಷ್ಮೀಕಾಂತ' ಮುದ್ರಿಕೆಗಳಲ್ಲಿ ಇವನ ಕೀರ್ತನೆಗಳಿವೆ. 'ಲಕ್ಷ್ಮೀಕಾಂತ ಹೆಬ್ಬಾರ' ಎಂದು ಲಕ್ಷ್ಮೀಶನನ್ನು ಹೆಸರಿಸುತ್ತಾರೆ.*೧೨

**೩. ತುಳಸಿ ರಾಮದಾಸರು :** (ಕ್ರಿ. ಶ. ಸು. ೧೮೩೦) ಮೂಲತಃ ಆಂಧ್ರದವರಾದರೂ ಬೆಂಗಳೂರಿನ ದಂಡು ಪ್ರದೇಶದ ಕೋಲ್ಸ್ ಪಾರ್ಕ್‌ನಲ್ಲಿ (ಫ್ರೇಜರ್‌ಟೌನ್) ಇದ್ದವರು. ಕಳೆದ ಶತಮಾನದಲ್ಲಿ ಅತ್ಯಂತ ಜನಪ್ರಿಯ ಹರಿಕಥಾ ವಿದ್ವಾಂಸರಾಗಿ ಹೆಸರುಗಳಿಸಿದ್ದರು. ಕೋಲಾರ, ಬೆಂಗಳೂರು, ಜಿಲ್ಲೆಗಳ ಎಲ್ಲ ತಾಲೂಕುಗಳಲ್ಲೂ ಇವರು ಸ್ಥಾಪಿಸಿರುವ ''ಭಾರ್ಗವ ರಾಮಭಜನ ಮಂದಿರ''ಗಳು ಇಂದಿಗೂ ಇವರ ಸಾಧನೆಯ ಕುರುಹಾಗಿವೆ. ಬೆಂಗಳೂರಿನಲ್ಲಿ ಇವರು ಇದ್ದ ಸ್ಥಳ 'ತುಳಸಿರಾಮದಾಸ ಮಠ'ವಾಗಿ ಆ ಮಠದ ರಸ್ತೆ 'ತುಳಸೀ ರಾಮದಾಸ ಮಠದ ರಸ್ತೆ'ಯಾಗಿ ಇಂದಿಗೂ ಉಳಿದಿದೆ.

ಇವರ ಬಗ್ಗೆ ಅನೇಕ ದಂತ ಕಥೆಗಳು ಈ ಭಾಗಗಳಲ್ಲಿ ಲಭ್ಯವಿವೆ. ಇವರ ೪ ಶಿಷ್ಯ ಪರಂಪರೆ ಅಪಾರವಾಗಿದೆ. ಇವರನ್ನು ಕುರಿತು ೩೦೦ಕ್ಕೂ ಹೆಚ್ಚು ಕೀರ್ತನೆಗಳು ಲಭ್ಯವಿವೆ. ಇವರೂ ೨೫೦ಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದಾರೆ. ಆದರೆ ಎಲ್ಲವೂ ಬಹುಪಾಲು ತೆಲುಗಿನಲ್ಲಿವೆ. ಕನ್ನಡದಲ್ಲಿ ಸು. ೨೦ ಕೀರ್ತನೆಗಳು ದೊರಕುತ್ತವೆ. ದಕ್ಷಿಣ ಕರ್ನಾಟಕದ ಹರಿಕಥೆ ಮತ್ತು ಭಜನೆ ಮಂದಿರಗಳ ಇತಿಹಾಸ ಹುಡುಕುತ್ತ ಹೋದರೆ ತುಳಸಿ ರಾಮದಾಸರಿಂದಲೇ ಅವು ಆರಂಭವಾಗಿರುವಂತೆ ತೋರುತ್ತವೆ. ಇವರು ಮಾಡುತ್ತಿದ್ದ 'ರಾಮಕಥೆ' ಹರಿಕಥೆಯಿಂದಲೇ ಇವರ ಹೆಸರಿಗೆ 'ತುಳಸಿ' ವಿಶೇಷಣ ಅಂಟಿಕೊಂಡಿದೆ. ಇವರು ಮೈಸೂರು

ಮಹಾರಾಜರಿಂದಲೂ ಅನೇಕ ಮಠಗಳಿಂದಲೂ ಮಾನ್ಯ ರಾಗಿದ್ದಾರೆ. ಇವರನ್ನು ಕುರಿತೇ 'ತುಳಸೀರಾಮದಾಸ ಚರಿತ್ರಮು' ಎಂಬ ಹರಿಕಥೆ ತೆಲುಗಿನಲ್ಲಿ. ಇವರ ಶಿಷ್ಯಪರಂಪರೆಯಲ್ಲಿ ಪ್ರಚಲಿತವಿದೆ.*೧೩ 'ತುಳಸೀರಾಮ' ಇವರ ಕೀರ್ತನೆಗಳ ಮುದ್ರಿಕೆ ಯಾಗಿದೆ.

೪. **ಚನ್ನಪಟ್ಟಣದ ಅಹೋಬಲದಾಸ** : (ಕ್ರಿ. ಶ. ಸು. ೧೮೫೦) ಇವರು 'ತುಳಸಿರಾಮದಾಸರ ಪ್ರಿಯ ಶಿಷ್ಯ' ಎಂದೇ ತಮ್ಮನ್ನು ಕರೆದುಕೊಂಡಿರುವುದಲ್ಲದೆ 'ತುಳಸಿರಾಮದಾಸ' ಎಂಬ ಅಂಕಿತವನ್ನೇ ತಮ್ಮ ಕೀರ್ತನೆಗಳಿಗೆ ಬಳಸಿದ್ದಾರೆ. ಚನ್ನಪಟ್ಟಣ ದವರಾದರೂ ಸ್ಥಳದಲ್ಲಾಗಲಿ ಇತರೆಡೆಗಳಲ್ಲಾಗಲಿ ಇವರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ. ಸು. ೧೨೫ ಕೀರ್ತನೆಗಳು ವೇದಾಂತ ಸಿದ್ಧಾಂತ ಎಂಬ ಕಂದ ಕೃತಿಗಳನ್ನೊಳಗೊಂಡ 'ಅಹೋಬಲದಾಸರ ಕೀರ್ತನೆಗಳು' ಎಂಬ ಮುದ್ರಿತ ಪುಸ್ತಕ ವೊಂದು ಲಭ್ಯವಿದೆ. ಕವಿ ಚರಿತ್ರಕಾರರಾದ ಆರ್. ನರಸಿಂಹಾ ಚಾರ್ ಅವರು ತಮ್ಮ ೩ನೇ ಸಂಪುಟದಲ್ಲಿ 'ಇವನು ಒಬ್ಬ ಶೂದ್ರ ಕವಿ, ಕೀರ್ತನೆಗಳನ್ನು ರಚಿಸಿದ್ದಾನೆ' ಎಂದಷ್ಟೇ ಉಲ್ಲೇಖಿಸಿದ್ದಾರೆ. ಇವರ ಕೃತಿಗಳಲ್ಲಿ 'ಶ್ರೀವೈಷ್ಣವ ಪರಿಭಾಷೆ ದಟ್ಟವಾಗಿರುವು ದರಿಂದ ಈಗಲೇ ಮತದ ಬಗ್ಗೆ ಏನೂ ಹೇಳಲು ಬರುವುದಿಲ್ಲ. ಇವರು ಶ್ರೀವೈಷ್ಣವರೇ ಅಥವ ವಿಶಿಷ್ಟಾದ್ವೈತ ಮತದ ಅನು ಯಾಯಿಯೇ ಎಂಬ ಬಗ್ಗೆ ಶೋಧಿಸಬೇಕಾಗಿದೆ. ಏನೇ ಆದರೂ ಇವರ ಕೀರ್ತನೆಗಳಂತೂ ಶ್ರೀವೈಷ್ಣವ ಕೀರ್ತನೆಗಳಾಗಿರುವುದು ಸ್ಪಷ್ಟವಾಗಿದೆ.

೫. **ಆಸೂರಿ ರಾಮಸ್ವಾಮಿ ಅಯ್ಯಂಗಾರ್** : (ಕ್ರಿ. ಶ. ೧೮೮೮) ಮೂಲತಃ ಮೈಸೂರಿನ ಕೇರಳಾಪುರದವರಾದರೂ ಸಾಲಿಗ್ರಾಮದಲ್ಲಿ ಜನಿಸಿ ಬಾಲ್ಯ ಕಳೆದು ಮೈಸೂರು ಸರ್ಕಾರದ ಸೇವೆಯಲ್ಲಿದ್ದು ನಿವೃತ್ತರಾಗಿ ಬೆಂಗಳೂರು ವಾಸಿಗಳಾಗಿದ್ದರು. ಇವರು ಕನ್ನಡ, ಸಂಸ್ಕೃತ, ತಮಿಳು ವಿದ್ವಾಂಸರಾಗಿ 'ಸರಳಕವಿ' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ೧. ಭರತ ಭಕ್ತಿ ಕಾವ್ಯ, ೨. ಶ್ರೀನಿವಾಸ ಲೀಲಾವಿಲಾಸ, ೩. ಶ್ರೀಗೋಕರ್ಣ ಮಹಿಮಾದರ್ಶ, ೪. ಮಾರುತಿ ಭಕ್ತಿದರ್ಪಣ, ೫. ಶ್ರೀ ಆಳ್ವಾರರ ಚರಿತ್ರೆ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಸಾವಿರಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗುತ್ತಿದ್ದರೂ ಸು. ೪೨೫ ಕೀರ್ತನೆಗಳ ಹಸ್ತಪ್ರತಿ ಅವರ ವಂಶಸ್ಥರಲ್ಲಿ ಲಭ್ಯವಿದೆ.*೧೪ 'ಮಾಂಗಿರೀಶ', ಇವರ ಕೀರ್ತನೆಗಳ ಅಂಕಿತ. ದಾಸರ ಮನೆದೇವರು ಹಾಸನ ಜಿಲ್ಲೆಯ ಮಾವಿನ ಕೆರೆಯ ರಂಗನಾಥನಾದ್ದರಿಂದ ಆ ದೈವವನ್ನು ಅಂಕಿತದಲ್ಲಿ ಸಾಕ್ಷಾತ್ಕರಿಸಿಕೊಂಡಿದ್ದಾರೆ. ಅಪ್ರತಿಮ ದೈವಭಕ್ತನಾಗಿ ಆಳ್ವಾರರ ಪ್ರಬಂಧಗಳನ್ನು ಅನುಸಂಧಾನ ಮಾಡು ತ್ತಿದ್ದರೆಂದೂ ದೇವರನಾಮಗಳನ್ನು ರಚಿಸುತ್ತಿದ್ದರೆಂದೂ ಇವರ ಅನೇಕ ದೇವರ ನಾಮಗಳು ಅನೇಕ ಕಡೆ ಪ್ರಚಲಿತ ವಾಗಿವೆಯೆಂದು ಹೇಳಲಾಗುತ್ತಿದೆ. ಹಲವು ಸಂಪ್ರದಾಯದ ಹಾಡುಗಳ ಹಸ್ತಪ್ರತಿಗಳಲ್ಲಿ 'ಮಾಂಗಿರೀಶ ಮುದ್ರಿಕೆಯ ದೇವರ ನಾಮಗಳು ದೊರಕುತ್ತವೆ. ಹರೇಕೃಷ್ಣ ಪಂಥ'ದ ಭಜನೆಗಳಲ್ಲಿ ಸಾಯಿಭಜನೆಗಳಲ್ಲಿ ಆಕಾಶವಾಣಿಯಲ್ಲಿ ಇವರ ಕೀರ್ತನೆಗಳು ಬಳಕೆಯಲ್ಲಿದ್ದವು ಎಂದು ಇವರ ಶಿಷ್ಯರು, ವಂಶಸ್ಥರು ಹೇಳುತ್ತಾರೆ.

೬. **ಬಡಣ್ಣಯ್ಯಾಚಾರ್** : ಕಳೆದ ಶತಮಾನದ ಅಂತ್ಯಭಾಗ ದಲ್ಲಿದ್ದವರೆಂದು ಹೇಳುವ ಇವರನ್ನು 'ಅಣ್ಣಾವ ಧೂತರು' ಎಂದೂ ಕರೆಯುತ್ತಿದ್ದರು. ಹೊಸಕೋಟೆ ತಾಲೂಕಿನ ಕಲ್ಕುಂಟೆಯವರೆಂದು ಕೆಲವರು ಹೇಳುತ್ತಾರಾದರೂ ಸ್ಥಳದಲ್ಲಿ ಇವರ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಇವರ ವಂಶಸ್ಥರೂ ನನ್ನ ಗಮನಕ್ಕೆ ಬಂದಿಲ್ಲ. ಇವರ ಬಗ್ಗೆ ಅನೇಕ ದಂತಕಥೆಗಳು ಲಭ್ಯವಿವೆ. ಬೇಲೂರು ಕೇಶವದಾಸರು ನೀಡುವ ಅಲ್ಪ ವಿವರವೇ ಸದ್ಯಕ್ಕೆ ಇವರ ಬಗ್ಗೆ ಇರುವ ಮಾಹಿತಿ.*೧೫ ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆಂದೂ ಆಶು ಕವಿತೆಗಳಂತೆ ಕುಳಿತಲ್ಲೆ, ಕಂಡಂತೆ ಹಾಡುತ್ತಿದ್ದರೆಂದೂ ಇವರು ಮುಟ್ಟಿದ್ದೆಲ್ಲ ಚಿನ್ನವಾಗುತ್ತಿತ್ತೆಂದೂ ಪ್ರತೀತಿಯಿದೆ. ಇವರು ಅವಧೂತರಾಗಿ ಬಾಳಿ ಬದುಕಿರುವ ಸಾಧ್ಯತೆಯಿರುವು ದರಿಂದ ಇವರ ರಚನೆಗಳು ಕೀರ್ತನೆಗಳೋ, ತತ್ವಪದಗಳೋ ಹೇಳಬರುವುದಿಲ್ಲ. ಇವರನ್ನೂ ಶ್ರೀವೈಷ್ಣವ ಧರ್ಮೀಯರು ಎಂದೇ ಖಚಿತವಾಗಿ ಗುರುತಿಸಲಾಗುತ್ತಿದೆ. 'ವಿಠಲವ್ಯಾಸ' ಇವರ ಕೃತಿಗಳ ಅಂಕಿತವಾಗಿದ್ದು ಈವರೆಗೆ ಕೇವಲ ೩-೪ ಕೀರ್ತನೆಗಳು ಮಾತ್ರ ಲಭ್ಯವಾಗಿವೆ.

೭. **ಎಸ್. ಸಂಪತ್ತಯ್ಯಂಗಾರ್** : (ಕ್ರಿ. ಶ. ೧೮೯೯) ತುಮಕೂರಿನ ಸಿದ್ದಲಿಂಗೇಶ್ವರ ಸಂಸ್ಕೃತ ಕಾಲೇಜಿನ ಪ್ರಾಚಾರ್ಯ ರಾಗಿದ್ದ ಸಂಸ್ಕೃತ ಕನ್ನಡ ತಮಿಳು ಇಂಗ್ಲಿಷ್ ವಿದ್ವಾಂಸರಾಗಿದ್ದ ಶ್ರೀಯುತರು ಸುಮಾರು ೧೦ ಗ್ರಂಥಗಳನ್ನು ರಚಿಸಿದ್ದಾರೆ. ಹಲವು ಉಪನಿಷತ್ತುಗಳ ವ್ಯಾಖ್ಯಾನ 'ತಿರುಪ್ಪಾವೈ ಹೃದಯಂ' ಪ್ರಾಣಾ ಯಾಮ, ಪಾದುಕಾದರ್ಶನ ಕೆಲವು ಮುಖ್ಯ ಕೃತಿಗಳು. ಕೆಲವು ಕಾಲ ಶ್ರೀವೈಷ್ಣವ ಸಿದ್ಧಾಂತ ಪ್ರಚಾರಿಣೀ ಸಭಾದ ಅಧ್ಯಕ್ಷರಾಗಿ 'ಆನಂದ' ಎಂಬ ಶ್ರೀವೈಷ್ಣವ ಸಾಹಿತ್ಯ ಪ್ರಚಾರ ಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸಿದ್ದರು. ಈ ಪತ್ರಿಕೆಯ ಸಂಚಿಕೆಗಳಲ್ಲಿ ಸು. ೧೦ ದೇವರ ನಾಮಗಳನ್ನು ಪ್ರಕಟಿಸಿದ್ದಾರೆ. 'ಶಿಲ್ಪರಾಯ' ಇವರ ಮುದ್ರಿಕೆ. ಆಧ್ಯಾತ್ಮಿಕ ತತ್ವ ಚಿಂತನೆಗಳನ್ನೊಳಗೊಂಡ ಈ ಕೀರ್ತನೆ ಗಳಲ್ಲಿ ಆದಿಪ್ರಾಸವನ್ನು ಅನುಸರಿಸಿಲ್ಲದಿರುವುದು ವಿಶೇಷ ಸಂಗತಿ. ಈ ಕೀರ್ತನೆಗಳು ಇವರ ವಂಶಸ್ಥರಲ್ಲಿ ಲಭ್ಯವಿದೆ.

೮. **ನಂಜನಗೂಡು ತಿರುಮಲಾಂಬ** : (ಕ್ರಿ.ಶ.೧೮೮೭) ಆಧುನಿಕ ಕನ್ನಡದ ಮೊಟ್ಟಮೊದಲ ಮಹಿಳಾ ಲೇಖಕಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಇವರು 'ಶ್ರೀಪಾದರೇಣು' ಅಂಕಿತದಲ್ಲಿ

ಸು. ೧೨೮ ಕೀರ್ತನೆಗಳನ್ನು ರಚಿಸಿದ್ದಾರೆ. ೧೯೦೧-೨ರಲ್ಲಿ ತನ್ನ ಹದಿನಾಲ್ಕನೇ ವರ್ಷದಲ್ಲಿ ಭಗವಂತನಲ್ಲಿ ಮೊರೆಯಿಡುತ್ತಿದ್ದ ಕೃತಿಗಳು' ಎಂದು ಅವುಗಳ ಬಗ್ಗೆ ಬರೆಯುತ್ತಾರೆ.*೨೬

**೯.ಯದುಗಿರಿಯಮ್ಮ :** (ಕ್ರಿ. ಶ. ೧೮೮೦-೯೦) ಮೇಲು ಕೋಟೆಯವರಾದ ಶ್ರೀಮತಿಯವರು ರಮ್ಯವರದಾಚಾರ್ ಮತ್ತು ಸೀತಮ್ಮನವರ ಮಕ್ಕಳೆಂದೂ ಬಾಲ್ಯದಿಂದಲೂ ಆಧ್ಯಾತ್ಮ ಚಿಂತನೆಯಲ್ಲೇ ಬೆಳೆದವರೆಂದೂ ಶ್ರೀವೈಷ್ಣವ ಧಾರ್ಮಿಕ ಸಾಹಿತ್ಯದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆಂದೂ ಅನೇಕ ದೇವರನಾಮಗಳನ್ನು ರಚಿಸಿದ್ದಾರೆಂದೂ ಹೇಳಲಾಗಿದೆ. ಆದರೆ ದೇವರನಾಮಗಳು ಈವರೆಗೆ ಲಭ್ಯವಾಗಿಲ್ಲ. ಆಂಡಾಳ (ತಮಿಳು ನಾಡಿನ ಶ್ರೀವೈಷ್ಣವ ಪ್ರಾಚೀನ ಭಕ್ತಿ) ಕುರಿತ ಒಂದು ಕೀರ್ತನೆ ಮಾತ್ರ ಉಪಲಬ್ಧವಿದೆ.*೨೭

ಈ ಇಬ್ಬರು ಮಹಿಳಾ ಕೀರ್ತನಕಾರರ ಜೊತೆಗೆ 'ಶ್ರೀದೇವಿ' ಕಾವ್ಯನಾಮದಲ್ಲಿ ಮಂಡ್ಯದ ಶ್ರೀರಂಗಮ್ಮ ಅವರು ಶ್ರೀವೈಷ್ಣವ ಧಾರ್ಮಿಕ ಸಾಹಿತ್ಯದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆಂದು ತಿಳಿದುಬಂದಿದ್ದು ಇವರೂ ಹಲವಾರು ದೇವರನಾಮಗಳನ್ನು ಬರೆದಿದ್ದಾರೆಂದು ಹೇಳಲಾಗುತ್ತಿದೆ. ಈ ಬಗ್ಗೆ ಹೆಚ್ಚಿನ ಶೋಧನೆ ಆಗಬೇಕಾಗಿದೆ. ಶ್ರೀವೈಷ್ಣವ ಕೀರ್ತನ ಪರಂಪರೆಯಲ್ಲಿ ಮಹಿಳಾ ಕೀರ್ತನಕಾರರೂ ಕಾಣಿಸಿಕೊಂಡಿರುವುದು ಒಂದು ವಿಶೇಷ.

**೧೦. ವೆಂಕಟವರದಾರ್ಯ ಸರಗೂರು** (ಕ್ರಿ. ಶ. ಸು. ೧೮೯೦) : ಇವರ ಹೆಸರಿನಲ್ಲಿ 'ಶ್ರೀನಿವಾಸ ಸಂಕೀರ್ತನಂ' ಎಂಬ ಒಂದು ಗ್ರಂಥದ ಉಲ್ಲೇಖವಿದ್ದು ಇದರಲ್ಲಿ ೧೦೨ ಕೀರ್ತನೆಗಳಿವೆ. ೧೯೨೪ರಲ್ಲಿ ನಂಜನಗೂಡಿನ ಸನ್ಮಾರ್ಗದರ್ಶಿ ಕಾರ್ಯಾಲಯದಲ್ಲಿ ಇದು ಮುದ್ರಣವಾಗಿದೆ ಎಂದು ತಿಳಿದುಬರುತ್ತದೆ. ಇವರೂ ಶ್ರೀವೈಷ್ಣವ ಕೀರ್ತನಕಾರರೇ ಆಗಿದ್ದು ಇವರ ಬಗ್ಗೆ ಹೆಚ್ಚಿನ ಮಾಹಿತಿಗಳು ಸದ್ಯಕ್ಕೆ ಲಭ್ಯವಾಗಿಲ್ಲ. ಇವರ ಕೃತಿಗಳ ಅಂಕಿತವೂ ಗೋಚರವಾಗಿಲ್ಲ.

೧೧. **'ಕೋಸಲಪುರವಾಸ'** ಅಂಕಿತದಲ್ಲಿ ಸು. ೧೬ ಕೀರ್ತನೆಗಳು ಹಸ್ತಪ್ರತಿಯೊಂದರಲ್ಲಿ ಲಭ್ಯವಾಗಿದ್ದು ಇದರ ಕೀರ್ತನಕಾರರ ಬಗ್ಗೆ ಮಾಹಿತಿ ಇಲ್ಲ. ರಾಮನನ್ನು ಕುರಿತು ವಿಶೇಷವಾಗಿ ಸ್ತುತಿಸಲಾಗಿದೆಯಲ್ಲದೆ ಸಂಸ್ಕೃತ ಭಾಷೆಯ ಪ್ರಾಚುರ್ಯವಿದೆ. ರಾಮಾನುಜರು ಮತ್ತು ಶ್ರೀವೈಷ್ಣವ ಆಳ್ವಾರ ರನ್ನು ಸ್ತುತಿಸಿರುವ ಒಂದೆರಡು ರಚನೆಗಳೂ ಇದರಲ್ಲಿರು ವುದರಿಂದ ಇವರನ್ನು ಶ್ರೀವೈಷ್ಣವ ಕೀರ್ತನಕಾರರು ಎನ್ನಲಡ್ಡಿಯಿಲ್ಲ. 'ರಂಗಮುನೀಂದ್ರ', 'ರಂಗೇಶ್ವರ' ಎಂಬ ಹೆಸರುಗಳು ಈ ಕೀರ್ತನೆ ಗಳಲ್ಲಿ ದೊರಕುತ್ತವೆ. ಇಷ್ಟರಿಂದಲೇ ಕೀರ್ತನಕಾರರ ಹೆಸರನ್ನು ಖಚಿತವಾಗಿ ಊಹಿಸಲು ಸಾಧ್ಯವಾಗದು.

ಸದ್ಯಕ್ಕೆ ಮಾಹಿತಿಗಳು ಲಭ್ಯವಿರುವ ಕೀರ್ತನೆಗಳು ದೊರಕಿ ರುವ ಈ ಹನ್ನೊಂದು ಕೀರ್ತನಕಾರರನ್ನು ಶ್ರೀವೈಷ್ಣವ ಕೀರ್ತನ ಪರಂಪರೆಗೆ ನೂತನವಾಗಿ ಸೇರ್ಪಡೆ ಮಾಡಲಡ್ಡಿಯಿಲ್ಲ. ಈ ಮೊದಲೇ ಪರಿಚಿತರಾಗಿರುವ ಮೂವರೂ ಸೇರಿ ಒಟ್ಟು ಹದಿ ನಾಲ್ಕು ಜನ ಶ್ರೀವೈಷ್ಣವ ಕೀರ್ತಕಾರರ ೪೦೦ಕ್ಕೂ ಹೆಚ್ಚು ಕೀರ್ತನೆಗಳು ಲಭ್ಯವಾದಂತಾಗಿದೆ. ಶೋಧನೆಯನ್ನು ಮುಂದುವರಿಸಿ ದರೆ ಇನ್ನೂ ಕೆಲವರು ದೊರಕುವ ಸಾಧ್ಯತೆಯಿದೆ. ಮೇಲ್ನೋಟಕ್ಕೇ ಕಂಡುಬಂದಂತೆ ಈ ಕೆಲವರನ್ನು ಹೆಸರಿಸಬಹುದಾಗಿದೆ.

೧. ಅರೆಯರ್, ಮೇಲುಕೋಟೆ ೨. ಆನ. ಶ್ರೀನಿವಾಸ ಯ್ಯಂಗಾರ್, ೩. ಆರ್. ಬೆಲ್ಲಮ್ಮ, ೪. ದೇವಶಿಖಾಮಣಿ ತಿರುಮಲಯ್ಯಂಗಾರ್, ೫. ಆರ್. ಚೆಲುವಮ್ಮ, ೬.ಜಗ್ಗು ಸಿಂಗಿರಾರ್ಯ, ೭. ಕೃಷ್ಣಯ್ಯಂಗಾರ್ ೮. ಆರ್. ಕಲ್ಯಾಣಮ್ಮ ೯. ತಿರುಮಲೆ ರಾಜಮ್ಮ, ೧೦. ಎಂಬಾರ್ ಶ್ರೀನಿವಾಸಾಚಾರ್ ಮುಂತಾದವರ ಹೆಸರಿನಲ್ಲಿರುವ ಗ್ರಂಥಗಳಲ್ಲಿ ಕೀರ್ತನೆಗಳನ್ನು ರಚಿಸಿರುವ ಉಲ್ಲೇಖಗಳಿವೆ. ಆದರೆ ಪ್ರತ್ಯೇಕ ಕೀರ್ತನ ಕೃತಿಗಳೇ ಕಂಡುಬರುವುದಿಲ್ಲ. ಇವುಗಳ ಬಗ್ಗೆ ಹೆಚ್ಚಿನ ಶೋಧನೆ ನಡೆಯಬೇಕಾಗಿದೆ.

ಹೀಗೆ ಆಧುನಿಕ ಕೀರ್ತನಕಾರರನ್ನು ಹೊರತುಪಡಿಸಿದರೂ ಶ್ರೀವೈಷ್ಣವ ಕೀರ್ತನ ಪರಂಪರೆ ಕಳೆದ ಶತಮಾನದಲ್ಲಿ ಗಟ್ಟಿಯಾಗಿಯೇ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ ಎಂಬುದನ್ನು ತಳ್ಳಿಹಾಕಲಾಗುವುದಿಲ್ಲ. ಮುಖ್ಯ ಹರಿದಾಸ ವಾಹಿನಿಯ ಜೊತೆ ಜೊತೆಗೇ ಕಾಣಿಸಿಕೊಂಡಿರುವ ಶ್ರೀವೈಷ್ಣವ ಕೀರ್ತನ ಪರಂಪರೆ ಕೀರ್ತನ ಸಾಹಿತ್ಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗುವಂತಹದು.

ಸದ್ಯಕ್ಕೆ ಲಭ್ಯವಿರುವ ಶ್ರೀವೈಷ್ಣವ ಕೀರ್ತನೆಗಳನ್ನು ಪರಿಶೀಲಿಸಿದಾಗ ಇವು ದ್ವೈತ ಮತ್ತು ಅದ್ವೈತಕ್ಕಿಂತ ಭಿನ್ನವಾದ ಪರಿಭಾಷೆಯಲ್ಲಿಯೇ ರಚನೆಯಾಗಿರುವುದು ಕಂಡುಬರುತ್ತದೆ. ಶ್ರೀವೈಷ್ಣವ ತತ್ವವಾದ 'ಶರಣಾಗತಿಮಾರ್ಗ' ಅಥವ 'ಪ್ರಪತ್ತಿಧರ್ಮ ಈ ಎಲ್ಲ ಕೀರ್ತನೆಗಳ ಮುಖ್ಯಭಾವ. ಸಾಮಾನ್ಯವಾಗಿ ದ್ವೈತವೆಂದರೆ ಹರನನ್ನೂ ಒಪ್ಪಿಕೊಂಡು ಹರಿಸರ್ವೋತ್ತಮತ್ವವನ್ನು ಹೇಳುವು ದೆಂದೂ ಅದ್ವೈತವೆಂದರೆ ಹರಿಹರ ಅಭೇದವನ್ನು ಪ್ರತಿಪಾದಿಸು ವುದೆಂದೂ ವಿಶಿಷ್ಟಾದ್ವೈತವೆಂದರೆ ಹರನಿರಾಕರಣೆಯೊಂದಿಗೆ ಹರಿ ಸರ್ವೋತ್ತಮತ್ವವನ್ನು ಸಾರುವುದೆಂದೂ ಗ್ರಹಿಸಬಹುದು. ಈ ತತ್ವಕ್ಕೆ ಅನುಗುಣವಾಗಿಯೇ ಶ್ರೀವೈಷ್ಣವ ಕೀರ್ತನೆಗಳಿವೆ. ಇಲ್ಲಿಯ ಗುರುಸ್ತುತಿ ಕೀರ್ತನೆಗಳೆಲ್ಲ ಶ್ರೀವೈಷ್ಣವ ಆಳ್ವಾರರು ಮತ್ತು ಆಚಾರ್ಯರ ಸ್ತುತಿಗಳಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಪರಿಭಾಷೆಯನ್ನು ನೀಡಿರುವುದನ್ನು ನೋಡಬಹುದು ಶ್ರೀವೈಷ್ಣವ ಧರ್ಮದ ಮುಖ್ಯ ಸಾಹಿತ್ಯ ವಿರುವುದು ತಮಿಳಿನಲ್ಲಾದ್ದರಿಂದ ಆ ಧಾರ್ಮಿಕ ಕೃತಿಗಳ ಉಲ್ಲೇಖ, ಅಲ್ಲಿಯ ಭಕ್ತರ - ಆಳ್ವಾರ್-ಆಚಾರ್ಯರ ರಸಮಯ

ಸಂಗತಿಗಳನ್ನು ಹೇಳುವ ಕಥೆಗಳ ಸೂಚನೆ, ಈ ಕೀರ್ತನೆಗಳಲ್ಲಿ ಧಾರಾಳವಾಗಿ ಕಂಡುಬರುತ್ತವೆ. ಹರಿಯ ಅದರಲ್ಲೂ ವಿಶೇಷವಾಗಿ ಕೇಶವಾದಿನಾಮಗಳ ಸ್ತುತಿ ಇಲ್ಲಿ ಎದ್ದು ಕಾಣುವ ಸಂಗತಿಯಾಗಿದೆ. ಪ್ರಪತ್ತಿಧರ್ಮದ ಎಲ್ಲ ತಿರುಳೂ ಈ ಕೀರ್ತನೆಗಳಲ್ಲಿ ಮಡುಗಟ್ಟಿ ನಿಂತಿರುವುದನ್ನು ಯಾರಾದರೂ ಸುಲಭವಾಗಿ ಗುರುತಿಸಬಹುದು. ಮುಖ್ಯ ಕೀರ್ತನಸಾಹಿತ್ಯದ ಎಲ್ಲ ಲಕ್ಷಣಗಳಿಗೂ ಬದ್ಧವಾಗಿಯೂ ವಿಶಿಷ್ಟಾದ್ವೈತ ತತ್ವಗಳನ್ನು ವಿಶೇಷವಾಗಿ ಮೈಗೂಡಿಸಿಕೊಂಡಿರುವುದರಿಂದ ಈ ಕೀರ್ತನ ಪರಂಪರೆಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರತ್ಯೇಕ ಅಧ್ಯಾಯ ರೂಪುಗೊಳ್ಳುವ ಅಗತ್ಯವಿದೆ.

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಎಸ್. ಕೆ. ರಾಮಚಂದ್ರರಾವ್: **ದಾಸ ಸಾಹಿತ್ಯ**, ಐಬಿಎಚ್, ಪು. ೮೯

*೨. ಎಂ. ವಿ. ಸೀ : **ಹರಿದಾಸರು ಮತ್ತು ಅನುಭಾವ ಕವಿಗಳು**, ರಾಘವ ಪ್ರಕಾಶನ, ಬೆಂ. ೧೯೮೭

*೩. ರಂ. ಶ್ರೀ. ಮುಗಳಿ: **ಕನ್ನಡ ಸಾಹಿತ್ಯ ಚರಿತ್ರೆ**, ಪು. ೩೦, ೩೦೩; ಎಂ. ವಿ. ಸೀ. **ಹರಿದಾಸರು ಮತ್ತು ಅನುಭಾವ ಕವಿಗಳು** ಪು. ೫೪

*೪. ಹೆಚ್ಚಿನ ವಿವರಗಳಿಗೆ ನೋಡಿ : ನಾ. ಗೀತಾಚಾರ್ಯ, **ತುಮಕೂರು ಜಿಲ್ಲೆಯ ಮೂವರು ಕೀರ್ತನಕಾರರು**, ಕ. ಸಾ. ಪ., ತುಮಕೂರು, ಪು. ೧೫

*೫. **ದಾಸ ಸಾಹಿತ್ಯ**, ಐ. ಬಿ. ಎಚ್. ಬೆಂ. ೧೯೮೭, ಪು. ೮೭

*೬. ನೋಡಿ : ಜೈಮಿನಿ ಭಾರತ : (ಸಂ.) ದೇವುಡು ನರಸಿಂಹ ಶಾಸ್ತ್ರೀ ಮತ್ತು ಬಿ. ಶಿವಮೂರ್ತಿಶಾಸ್ತ್ರೀ ಕನ್ನಡ ಸಂಸ್ಕೃತಿ ಇಲಾಖೆ, ೧೯೮೫, (ಪ್ರ. ಮು. ೧೯೫೬)

*೭. ರಂ. ಶ್ರೀ. ಮುಗಳಿ, ಕ. ಸಾ. ಪ. ಪು. ೩೦

*೮. ಅದೇ. ಪು. ೩೦೩

*೯. ಈ ಕೆಲವು ವಿವರಗಳನ್ನು ಶ್ರೀ ಎಂ. ಆರ್. ನರಸಿಂಹನ್, ಬೆಂಗಳೂರು, ಅವರ ಅಪ್ರಕಟಿತ ಶ್ರೀವೈಷ್ಣವ ಸಾಹಿತ್ಯ ಚರಿತ್ರೆಯಿಂದ ಪಡೆಯಲಾಗಿದೆ.

*೧೦. ಈ ಬಗೆಯ ಹಲವು ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಪ್ರಚಲಿತವಿವೆ, ಉದಾ : ತಿಮ್ಮಪ್ಪದಾಸರ ಶ್ರೀಕೃಷ್ಣ ಬಾಲಲೀಲೆ - ಬೃಹತ್ ಕೀರ್ತನಕಾವ್ಯ. ಕನ್ನಡ ಸಾಹಿತ್ಯದಲ್ಲಿ ಕೀರ್ತನೆ ಪ್ರಕಾರದಲ್ಲಿ ಬೃಹತ್‌ಕಾವ್ಯ ಕೃತಿಗಳನ್ನು ಬರೆದಿರುವ ಉದಾಹರಣೆಗಳು ಹಲವಾರಿದ್ದರೂ ಈ ಬಗೆಗೂ ಹೆಚ್ಚಿನ ಚರ್ಚೆಯಾಗಿಲ್ಲವೆಂದೇ ನಮ್ಮ ಅಭಿಪ್ರಾಯ. ಸಾಹಿತ್ಯ ಚರಿತ್ರೆಯ ನಿರ್ಮಾಪಕರು ಇದನ್ನು ಒಂದು ಸಾಹಿತ್ಯ ಪ್ರಕಾರವನ್ನಾಗಿ ಇದುವರೆಗೆ ಯಾವ ಗ್ರಂಥದಲ್ಲೂ ಗುರುತಿಸಿಲ್ಲ. ಚಂಪೂ, ಷಟ್ಪದಿಗಳಂತೆ 'ಕೀರ್ತನ ಕಾವ್ಯ'ಗಳನ್ನೂ ಪ್ರತ್ಯೇಕ ಪ್ರಕಾರವಾಗಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ.

*೧೧. ನೋಡಿ. ಬೇಲೂರು ಕೇಶವದಾಸರು : **ಶ್ರೀ ಕರ್ನಾಟಕ ಭಕ್ತಿ** ವಿಜಯ- ೭ನೇ ಮುದ್ರಣ ೧೯೯೪

*೧೨. ಹೆಚ್ಚಿನ ವಿವರಗಳಿಗೆ ನೋಡಿ : ದೇವುಡು ನರಸಿಂಹಶಾಸ್ತ್ರಿ, ಬಿ. ಶಿವಮೂರ್ತಿ ಶಾಸ್ತ್ರಿಗಳು ಸಂಪಾದಿಸಿರುವ ಜೈಮಿನಿ ಭಾರತದ ಅನುಬಂಧ (ಉಲ್ಲೇಖ. ೬)

*೧೩. ಇದನ್ನು ಒಳಗೊಂಡು ಇವರ ಎಲ್ಲ ಕೀರ್ತನೆಗಳು ಒಂದು ಅಚ್ಚಾದ ಪುಸ್ತಕ ಚನ್ನಪಟ್ಟಣದಲ್ಲಿ ಈಗಲೂ ಇವರ ಕೀರ್ತನೆಗಳನ್ನು ಹಾಡುತ್ತ ದಾಸವೃತ್ತಿಯನ್ನು ನಡೆಸುತ್ತಿರುವ ಇವರ ಶಿಷ್ಯಪರಂಪರೆಯ ಕೊಂಡಿಯಂತಿರುವ 'ದಾಸರಾಮಣ್ಣ' ಅವರ ಬಳಿ ಲಭ್ಯವಿದೆ

*೧೪. *'ಹರಿಭಜನ ಕುಸುಮವಲ್ಲರಿ' ಭಾಗ ೧, ೨*, ಕೃಷ್ಣ ಮುದ್ರಣಾಲಯ ಮೈಸೂರು ೧೯೨೫ ಎಂಬ ಗ್ರಂಥವೊಂದು 'ರಾಮಸ್ವಾಮಿ ಅಯ್ಯಂಗಾರ್ ಕೆ. ಸಾಲಗ್ರಾಮ, ಅವರ ಹೆಸರಿನಲ್ಲಿ ಲಭ್ಯವಿದ್ದು ಇದು ಅವರದ್ದೇ ಎಂದು ಖಚಿತವಾಗಿದೆ. ಇದರಲ್ಲಿರುವ ಕೀರ್ತನೆಗಳು (ಸು. ೧೧೦) ಈ ಹಸ್ತಪ್ರತಿಯಲ್ಲಿರುವದೇ ಅಥವ ಬೇರೆಯವೇ ಎಂಬುದನ್ನು ಪರಿಶೀಲಿಸಬೇಕು.

*೧೫. ನೋಡಿ : **ಶ್ರೀ ಕರ್ನಾಟಕ ಭಕ್ತಿ** ವಿಜಯ , ಅದೇ.

ಡಾ || ಸೂರ್ಯನಾಥ ಕಾಮತ್ *

# ಮಲೆನಾಡಿನ ಮೂರು ನಾಥಪಂಥ ಕೇಂದ್ರಗಳು

ನಾಥಪಂಥವು ಭಾರತದ ಒಂದು ಪ್ರಸಿದ್ಧ ಧಾರ್ಮಿಕ ಪಂಥ. ಶಿವ ಮತ್ತು ಭೈರವನ ಆರಾಧನೆಗೆ ಇದರಲ್ಲಿ ಮಹತ್ವವಿದ್ದರೂ ಇತರ ದೈವತಗಳ ಆರಾಧನೆಯೂ ಇದರಲ್ಲಿ ಸಮಾವಿಷ್ಟವಾಗಿದೆ. ಮಂಗಳೂರು ಬಳಿಯ ಕದ್ರಿ, ಬೆಳಗಾವಿ ಜಿಲ್ಲೆಯ ಹಂಡಿ ಬಡಿಗನಾಥ, ನಿಪ್ಪಾಣಿ ಬಳಿಯ ಅಪ್ಪಾಚಿವಾಡಿ ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ ಇವೆಲ್ಲ ಈ ಪಂಥದ ಗಣ್ಯಕೇಂದ್ರಗಳು. ೧೯೫೦ರ ಒಂದು ಪತ್ರದಂತೆ, ನಾಥಪಂಥದ ಮುಖ್ಯಸ್ಥ ಗೋರಖಪುರದ ಮಹಂತ ವೈದ್ಯನಾಥರು ಕದ್ರಿಯ ನಾಥಪಂಥದ ಸ್ವಾಮಿಗಳಿಗೆ ಕರ್ನಾಟಕದ ಒಕ್ಕಲಿಗರು, ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯರು (ಕಲಾಬತ್‌ನ ನೇಕಾರರಾದ ಪಟ್ಟೆಗಾರರು) ಹಾಗೂ ಭಾವಸಾರ ಕ್ಷತ್ರಿಯರು (ಮರಾಠಿ ದರ್ಜಿಗಳು) ಈ ಮಠದ ಶಿಷ್ಯರೆಂದು ಹೇಳಲಾಗಿದೆ (ಮಾಕೋನಹಳ್ಳಿ ದೊಡ್ಡಪ್ಪಗೌಡ, 'ಪಾರಂಪರ ಶೈವರು ಮತ್ತು ಗೌಡಸಮಾಜ', ಮೂಡಿಗೆರೆ, ೧೯೫೫, ಪು. ೬೫-೬೬).

ನಾಥಪಂಥವು ಶುದ್ಧಯೋಗಕ್ಕೆ ಮಹತ್ವಕೊಟ್ಟ ಸಂಪ್ರದಾಯ. ಮಹಾರಾಷ್ಟ್ರದಲ್ಲಿ ದತ್ತಾತ್ರೇಯನೇ ಈ ಪಂಥದ ಸ್ಥಾಪಕನೆಂದೂ ನವನಾಥರಲ್ಲಿ ಅವನೇ ಮುಖ್ಯನೆಂದೂ ಹೇಳಿದೆ. ಆದರೆ ಈ ದತ್ತಾತ್ರೇಯನು ಪುರಾಣೋಕ್ತ ಅತ್ರಿ-ಅನಸೂಯೆಯರ ಪುತ್ರನೇ ಅಥವಾ ಆ ಹೆಸರಿನ ಸಂತನೇ ತಿಳಿಯದು. ದತ್ತಾತ್ರೇಯನ ಅವತಾರವೆಂದು ನಂಬಲಾದ ಅನೇಕ ಸಂತರೂ ಇದ್ದಾರೆ. ನಾಥಪಂಥವು ಕರ್ನಾಟಕದಲ್ಲಿ ದತ್ತಾತ್ರೇಯ ಭಕ್ತಿಯಿಂದಲೂ ಜನಪ್ರಿಯವಾದುದು ಕಾಣಬರುತ್ತದೆ. ಕರ್ನಾಟಕದ ಚಿಕ್ಕಮಂಗಳೂರು ಜಿಲ್ಲೆಯಲ್ಲಿ ಚಂದ್ರದ್ರೋಣ ಪರ್ವತವೆಂದು ಪ್ರಾಚೀನ ಶಾಸನಗಳು ಕರೆದ ಬಾಬಾಬುಡಾನ್ ಗಿರಿಯೆಂಬ ಪರ್ವತ ಶ್ರೇಣಿಗಳಲ್ಲಿ ಮೂರು ದತ್ತಪೀಠಗಳಿವೆ. ಅವುಗಳಲ್ಲಿ ಇನಾಂ ದತ್ತಾತ್ರೇಯ ಪೀಠವೆಂಬ ಸ್ಥಳವು ಈಗ ಮುಸಲ್ಮಾನರ ಆಡಳಿತಕ್ಕೆ ಸೇರಿದೆ. ಭಿಷಗ್ನಿಮಠ ಹಾಗೂ ಮುತ್ತಿನಪುರದ ಫಲಾಹಾರಸ್ವಾಮಿ ಮಠಗಳು ವೀರಶೈವರ ಆಡಳಿತದಲ್ಲಿ ಇವೆ ("ಚಿಕ್ಕಮಂಗಳೂರು ಜಿಲ್ಲಾ ಗ್ಯಾಸೆಟಿಯರ್," ೧೯೮೧, ಪು. ೬೪-೬೫). ಈ ಲೇಖಕನು ಸ್ವತಃ ಅಲ್ಲಿ ಹೋದಾಗ ತಿಳಿದುಕೊಂಡಂತೆ ಇವೆರಡೂ ವೀರಶೈವ ಜಂಗಮರ ಆಡಳಿತಕ್ಕೆ ಒಳಪಟ್ಟಿವೆ.

ಇದರಲ್ಲಿ ಶ್ರೀಫಲಾಹಾರ ಮಠದ ೧೬೦೨ರ ಒಂದು ಶಾಸನದಲ್ಲಿ "ಶ್ರೀ ಗುರುದತ್ತಾತ್ರೇಯಪೀಠದ ಶ್ರೀಪಳಾರ ಮಠದ ಸ್ವಾಮಿಗಳು" ಎಂದು ಹೇಳಿ, ಮಠವು ದತ್ತಾತ್ರೇಯ ಪೀಠವೆಂದು ಸ್ಪಷ್ಟಪಡಿಸಿದೆ. ('ಎಫಿಗ್ರಾಫಿಯಾ ಕರ್ನಾಟಿಕಾ' ಸಂ. ೬., ಚಿಕ್ಕ ಮಂಗಳೂರು ಸಂ. ೧೧೦). ೧೬೦೬ರ ಶಾಸನದಂತೆ ಮಠವು ಚಂದ್ರದ್ರೋಣ ಪರ್ವತದಲ್ಲಿ ಇದೆ (ಚಿಕ್ಕಮಂಗಳೂರು ನಂ. ೧೦೮) ಎಂದು ತಿಳಿಸಿ ಈ ಪರ್ವತದ ರಕ್ಷಕರು ಎಂದು ಭೈರವರು, ಗಣೇಶ್ವರ, ಮಹಾಕಾಳಿ, ವೀರಭದ್ರ, ನರಸಿಂಹ, ನವದುರ್ಗೆ, ನವನಾಥರು ಇದ್ದಾರೆಂದು ಹೇಳಿದೆ. 'ನವನಾಥರು' ಎಂದಾಗ ಇಲ್ಲಿ ನಾಥಪಂಥದ ಉಲ್ಲೇಖ ಸ್ಪಷ್ಟವಾಗುತ್ತದೆ. ಇಲ್ಲಿ ಹೇಳಿದ ಭೈರವ, ನವನಾಥರೂ ನಾಥಪಂಥಕ್ಕೆ ಹೊರಗಾದವರಲ್ಲ. ಬಹುಪಾಲು ನಾಥಪಂಥದ ಕೇಂದ್ರಗಳಲ್ಲಿ (ಉದಾ : ಆದಿಚುಂಚನಗಿರಿ) ಭೈರವನೇ ಮುಖ್ಯದೇವರು. ನವದುರ್ಗೆಯರೂ ಇಲ್ಲಿ ಅಷ್ಟೇ ಮಹತ್ವ ಪಡೆದಿದ್ದಾರೆ.'ಶಕ್ತಿಯುಕ್ತ' (ಶಕ್ತಿದೇವಿಯ ಸಹಿತನಾದ) ಶಿವನ ಆರಾಧನೆಗೆ ನಾಥಪಂಥ ಮಹತ್ವ ನೀಡಿದ್ದು "ಶಕ್ತಿಯನ್ನು ಹೊರತುಪಡಿಸಿದ ಶಿವ ವಾಸ್ತವವಾಗಿ ಶವ" ಎಂಬ ನಾಥಪಂಥದ ತತ್ತ್ವವನ್ನು ಢೇರೆ ಎಂಬ ವಿದ್ವಾಂಸರು ಹೇಳಿದ್ದಾರೆ. (ರಾ. ಚಿಂ. ಢೇರೆ 'ಶ್ರೀಗುರುಗೋರಕನಾಥ ಚರಿತ್ರ ಆಣಿ ಪರಂಪರಾ-ನಾಥ ಸಂಪ್ರದಾಯಾ ಚಾ ಇತಿಹಾಸ-ಮರಾಠಿ, ಮುಂಬೈ, ೧೯೫೯, ಪು. ೩೬).

---

* ಮುಖ್ಯಸಂಪಾದಕರು (ನಿವೃತ್ತ), ಕರ್ನಾಟಕ ಗ್ಯಾಸೆಟಿಯರ್, 'ಕೀರ್ತಿ' ೬೯೮, ೧೧ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು – ೫೬೦ ೦೧೯

ನಾಥಪಂಥದ ಭಕ್ತರಲ್ಲಿ ಒಕ್ಕಲಿಗರು ಭಾವಸಾರ ಹಾಗೂ ಸೋಮವಂಶ ಕ್ಷತ್ರಿಯರುಗಳ ಸಮಾವೇಶವಿದೆಯೆಂದು ಈಗಾಗಲೇ ಹೇಳಿದೆ. ೧೭೧೭ರ ಶಾಸನದಂತೆ (ಚಿಕ್ಕಮಗ. ನಂ. ೧೧೯) ಫಲಾಹಾರಸ್ವಾಮಿಮಠದ ಅನುಯಾಯಿಗಳ ಪಟ್ಟಿ ಹೀಗಿದೆ: ಕೃಷ್ಣಾನದಿಯ ದಕ್ಷಿಣಕ್ಕೆ 'ಆರರ್‍ರಿಯರು, ಶೆಟ್ಟಿವರ್ತಕರು, ಗೌಉಡುಗಳು, ರಡಿ ಒಕ್ಕಲುತನದವರು, ಕುಂಚಿಗರು, ಕಡಪೆಜನರು ಸಹಾ.....' ಇಲ್ಲಿ 'ಆರರ್‍ರಿಯರು' ಎಂದರೆ ಮರಾಠರು, ಗೌಡರು, ರೆಡ್ಡಿಗಳು, ಕುಂಚಿಟಿಗರನ್ನು ಗುರುತಿಸಬಹುದು. ಇನ್ನು 'ಕಡಪೆ ಜನ ಸಹಾ' ಎಂದು ಶಾಸನದಲ್ಲಿ ಸೂಚಿಸಿರುವ ಇತರ ಜಾತಿಗಳೆಂದರೆ ಸುಡುಗಾಡುಸಿದ್ಧರು, ಜೆಡೆಯೋಗಿಗಳು, ಜಂಗತ್ಲಿರೂ, ಪಾಕನಾಟ್ಟಿ, ಮರಿನಗೊಲ್ಲರು, ಹೆಳವರು, ಉಪ್ಪಿನಾತ್ತರುಗಳು (ಉಪ್ಪಾರರು?)ಹಾಲುವಕ್ಕಿಯವರು, ಪಂಡರು, ಗಣಾಯಿತ್ತಾದವರು, ಕಾಡುಸಿದ್ಧರು ಹಾಗೂ ಗಾರ್ದಪ್ಪ ಗೊಲ್ಲರು. ೧೭೦೫ರ ಶಾಸನದಲ್ಲಿ (ನಂ. ೧೧೦) ಸುಡುಗಾಡುಸಿದ್ಧರು, ಪಾಕನಾದನವರು, ಜೆಡೆಯೋಗಿಗಳ ಜೊತೆ ಗೋಲುಕೊಂಡೇರು, ಜಂಗಲರ್‍ರು, ಉಪ್ಪಿನಕಂಗಳರ್‍ರು ಎಂಬ ಜಾತಿಗಳನ್ನು ಮಠದ ಶಿಷ್ಯವರ್ಗದಲ್ಲಿ ಹೇಳಿದೆ. ಉಪ್ಪಿನಕಂಗಳರ್‍ರು ಎಂಬುದು ಉಪ್ಪಿನ ಕೊಳಗ ಎಂಬ ಒಕ್ಕಲಿಗರು ಇರಬಹುದು. ೧೭೦೭ರ ಶಾಸನದಲ್ಲಿ ಉಪ್ಪಿನರಾಮಪ್ಪ ಎಂಬಾತನ ಉಲ್ಲೇಖವಿದ್ದು ಆತ ಉಪ್ಪಾರರವನಿರಬಹುದು. ಈ ಮಠವು ಶ್ರೀಶೈಲ ಸೂರ್ಯಸಿಂಹಾಸನಕ್ಕೆ ಸಂಬಂಧಿಸಿದ್ದೆಂದು (ನಂ. ೧೧೯) ೧೭೦೭ರ ಶಾಸನ ಹೇಳಿದ್ದು ನಂದಿನಾಥ, ಭೃಂಗಿನಾಥ ವೀರಭದ್ರದೇವರು ಮುಖ್ಯವಾದ ಸಿಂಹಾಸನ ಇದೆಂದು ಹೇಳಿದೆ. ಶ್ರೀಶೈಲವು ನಾಥಪಂಥದ ಗಣ್ಯ ಕೇಂದ್ರವಾಗಿತ್ತು (ಇಲ್ಲಿಯೇ ನಾಥಪಂಥ ಸ್ಥಾಪನೆಯಾದುದೆಂಬ ಅಭಿಪ್ರಾಯ ಥೇರೆಯವರದು).

ಭಿಷಗ್ನಿ ಮಠವನ್ನು ''ಶ್ರೀಗುರು ದತ್ತಾತ್ರೇಯ ಆದಿ ಗದ್ದಿಗೆ ಇನಾಂ ಭಿಷಗ್ನಿಮಠ'' ಎಂದಿದ್ದು ಇದಕ್ಕೆ ಕೆಳದಿ ಸೋಮಶೇಖರ ನಾಯಕನು (ಹಿರಿಯನೋ ಕಿರಿಯನೋ ತಿಳಿಯದು) ದಾನ ನೀಡಿದ ಉಲ್ಲೇಖವಿದೆ. ದಾನಪಡೆದವರು ಪ್ರಭುಲಿಂಗ ಶಿವಾಚಾರ್ಯ ಸ್ವಾಮಿಗಳೆಂಬವರು (ಚಿ. ಮ. ಜಿ. ಗ್ಯಾಜೆಟಿಯರ್, ಪು. ೫೭೦). ಈ ಮಠದ ದಾಖಲೆಗಳಲ್ಲಿ ಕೆಳದಿನಾಯಕರ ಕಾಲದಿಂದ ಈ ಮಠವು ವೀರಶೈವರ ಆಡಳಿತಕ್ಕೆ ಒಳಪಟ್ಟುದಾಗಿದ್ದು ಈಗಲೂ ಹಾಗೇ ಇದೆ. ಮರಾಠಿಗರು, ವಿಶೇಷತಃ ಭಾವಸಾರ ಕ್ಷತ್ರಿಯರು ಈ ಮಠಕ್ಕೆ ಈಗಲೂ ಭಕ್ತರು.

ಇನಾಂ ದತ್ತಾತ್ರೇಯ ಪೀಠದಲ್ಲಿ ಬಾಬಾಬುಡನ್ ಎಂಬ ಮುಸ್ಲಿಂ ಸಂತನ ಸಮಾಧಿ ಇದೆ. ಜಂಬಿಟ್ಟಿಗೆಯ ಈ ಚಿಕ್ಕ ರಚನೆಯಲ್ಲಿ ಒಂದು ಭಾಗದಲ್ಲಿ ದತ್ತಾತ್ರೇಯ ಪೀಠವೆಂದು ಪರಿಚಿತವಾದ ಒಂದು ಗದ್ದುಗೆಯಂಥ ಭಾಗವಿದ್ದು ಇಲ್ಲಿ ದತ್ತಾತ್ರೇಯರದೆಂಬ ಪಾದುಕೆ, ದೀಪ ಮುಂತಾದ ಹಿಂದೂ ಪೂಜೆ ಸಲಕರಣೆಗಳಿವೆ. ಮುಸಲ್ಮಾನ ಫಕೀರನೊಬ್ಬ ತಾನು ತೆಂಗಿನಕಾಯಿ ಒಡೆದು ಕರ್ಪೂರದಾರತಿ ಮಾಡಿ ಬಂದ ಭಕ್ತರಿಗೆ ತೀರ್ಥ ಕೊಡುತ್ತಾನೆ. ಬಹುಶಃ ದತ್ತಾತ್ರೇಯ ಎಂಬ ಹೆಸರಿನ ಸಂತರು ಇಲ್ಲಿ ವಾಸ, ಧ್ಯಾನಮಾಡಿರಬೇಕು.

ದತ್ತಪಂಥಕ್ಕೆ ಮುಸಲ್ಮಾನ ಭಕ್ತರೂ ಇದ್ದರು. ಚಾಂಗ ದೇವನೆಂಬ ನಾಥಪಂಥದ ಸಂತನಿಗೆ ಮುಸಲ್ಮಾನ ಭಕ್ತರೂ ಇದ್ದರೆಂದು ಥೇರೆ ಹೇಳಿದ್ದಾರೆ (ಮೇಲಿನ ಕೃತಿ, ಪು. ೧೯೯). ಚಾಂಗದೇವನೆಂಬ ಯೋಗಿಯು ಹುಲಿಯ ಮೇಲೆ ಕೂತು ಜ್ಞಾನದೇವನೆಂಬ ಸಂತನನ್ನು ಕಾಣಹೋದನೆಂಬ ಮಹಾರಾಷ್ಟ್ರದಲ್ಲಿ ನಡೆದ ಘಟನೆಯ ಐತಿಹ್ಯ ಪ್ರಸಿದ್ಧವಾಗಿದೆ. ಈ ಚಾಂಗ ದೇವನನ್ನು 'ಬಾಬಾ ಬಾಗಸವಾರ' ಎಂದು ಮುಸಲ್ಮಾನರು ಕರೆಯುತ್ತಿದ್ದಾರೆ ('ಹುಲಿಯ ಸವಾರ' ಎಂದರ್ಥ). ಈತನ ಆರಾಧನೆ ಧಾರವಾಡ ಜಿಲ್ಲೆಯ ಯವನೂರಲ್ಲಿ ಈಗಲೂ ನಡೆಯುತ್ತಿದ್ದು ಹಿಂದೂಗಳೂ ಮುಸಲ್ಮಾನರೂ ಇದರಲ್ಲಿ ಪಾಲುಗೊಳ್ಳುತ್ತಾರೆ. (ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೯೫೫, ಪು. ೯೯೭). ನಾಥಪಂಥದ ಅನುಯಾಯಿಗಳಲ್ಲಿ ಸಂತ ಕಬೀರರೂ ಸೇರಿದ್ದು ಅವರ ರಾಮಭಕ್ತಿ ಪ್ರಸಿದ್ಧವಾದುದು.

ಇನಾಂ ದತ್ತಾತ್ರೇಯಪೀಠವೂ ಹಿಂದೆ ವೀರಶೈವರ ಜಂಗಮರ ಆಡಳಿತಕ್ಕೆ (ಉಳಿದ ಜಿಲ್ಲೆಯ ಇತರ ಎರಡರಂತೆ) ಸೇರಿತ್ತೆಂದು ಸ್ಥಳೀಯರು ಹೇಳುತ್ತಾರೆ. ದತ್ತಾತ್ರೇಯನ ಭಕ್ತರಾದ ಮುಸಲ್ಮಾನ ಪೀರರೊಬ್ಬರು ಇಲ್ಲಿ ಅಂದಿಗೆ ೧೦೦ ವರ್ಷಗಳ ಹಿಂದೆ ಬಂದು ನೆಲೆಸಿದರೆಂದು ೧೮೩೭ರ ಒಂದು ಕೋರ್ಟ್ ದಾಖಲೆ ಹೇಳುತ್ತದೆ. (ಈ ದಾಖಲೆಯ ಛಾಯಾಪ್ರತಿಯಂತೆ ೧೮೩೭ರ ದಾವೆ, ಅಪೀಲ್ ನಂ. ೨೩, ಹುಜೂರ್ ಅದಾಲತ್, ಸಯ್ಯದ್ ಹುಸೇನ್ ಖಾದ್ರಿ- ವಾದಿ, ಸೈಯದ್ ಮೊಹಿದಿನ್‌ಷಾ ಖಾದ್ರಿ-ಪ್ರತಿವಾದಿ) ಎಂದರೆ ದತ್ತಾತ್ರೇಯ ಪೀಠಕ್ಕೆ ಮುಸಲ್ಮಾನ ಸಂತ (ಪೀರ್) ಬಂದುದು ೧೭೩೭ರ ಸುಮಾರಿಗೆ ಎಂದು ಈ ದಾಖಲೆಯ ವಾದಿಯ ಫಿರ್ಯಾದಿ ಸಿದ್ಧಪಡಿಸುತ್ತದೆ. ಎಂದರೆ ಹೈದರ್ ಅಲಿಯ ಕಾಲದಿಂದ ಅವರಿಗೆ ಈ ದತ್ತಪೀಠದಲ್ಲಿ ಅವರಿಗೆ ಕೆಲವೊಂದು ಹಕ್ಕುಗಳು ಬಂದುದು ಕಾಣಸುತ್ತದೆ. ಇಸ್ಮಾಯಿಲ್ ಷಾ ಖಾದ್ರಿ ಎಂಬುವರು ಈ ಸಂತರಾಗಿದ್ದರು. ಬುಡನ್ ಷಾ ಖಾದ್ರಿ ಅವರ ಹಿರಿಯ ಪುತ್ರ. ಇವರ ಈ ಪರಂಪರೆ ಭಾರೀ ಪ್ರಾಚೀನವೇನೂ ಇಲ್ಲ.

ಈ ದತ್ತಪೀಠದ ಒಳಗಡೆ ಇರುವ ಒಂದು ಸಮಾಧಿಯೇ ಅಲ್ಲದೆ ಅದರ ಪರಿಸರದಲ್ಲಿ ಈಗ ಹತ್ತಿಪ್ಪತ್ತು ಮುಸ್ಲಿಂ ಸಮಾಧಿಗಳಿವೆ. ಪೀಠದಲ್ಲಿ ದತ್ತಾತ್ರೇಯ ಸ್ವಾಮಿಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಕಾಣಿಕೆ ನೀಡಿದ ಎರಡು ಶಾಸನಯುಕ್ತ ಬೆಳ್ಳಿಯ ದಂಡಗಳು ಇದ್ದುವೆಂದು ಹಯವದನರಾಯರು

ಹೇಳಿದ್ದಾರೆ. (ಮೈಸೂರು ಗ್ಯಾಸೆಟಿಯರ್, ಸಂಪುಟ ೫, ೧೯೩೦, ಪು. ೧೧೩೭). **'ಗಾಳಿಪೂಜೆ ಕೆಂಚ'** ಎಂಬ ಭೈರವ ಆರಾಧನೆಯ ಒಂದು ಕಂಬವು ಇಲ್ಲಿ ಹೊರಗಡೆ ಕೆರೆಯ ಬಳಿ ಇದೆ. ಪೀಠದ ಆಡಳಿತವು ಬಾಬಾಬುಡನ್‌ರ ವಂಶಸ್ಥರಲ್ಲಿ ಇದೆ. ಆದರೆ ದತ್ತಾತ್ರೇಯನ ಪೂಜೆ ಅಲ್ಲಿ ನಡೆಯುತ್ತಿದೆ. ಪೂಜೆ ಮಾಡುವ ಫಕೀರ ಹಿಂದೂ ಪದ್ಧತಿಯಂತೆ ಆರಾಧನೆ ಮಾಡುತ್ತಾನೆ. ಮಲೆನಾಡಿನ ಮಧ್ಯೆ ನಾಥಪಂಥ ಮೂಲದ ಈ ಪೀಠಗಳು ಇಂದಿಗೂ ಇರುವುದು ವಿಶೇಷ.

ಒಕ್ಕಲಿಗ, ಲಿಂಗಾಯಿತರಿಂದ ಹಿಡಿದು ಸುಡುಗಾಡುಸಿದ್ಧರು ಹಾಗೂ ಮರಾಠಿಜನ ಇದರ ಭಕ್ತರಾಗಿರುವ ಸಮನ್ವಯ ವಿಶಿಷ್ಟವಾದುದು. ಇನಾಂ ದತ್ತಾತ್ರೇಯ ಪೀಠದೊಳಗಿದ್ದ ದೀಪ, ಪಾದುಕೆಗಳನ್ನು ನಡುವೆ ಕಿತ್ತುಹಾಕಲಾಗಿತ್ತೆಂದು ಹೇಳಲಾಗಿದೆ. ಸಮನ್ವಯದ ಇಂಥ ಸಾಧಕ ಸಂಗತಿಗಳಿಗೆ ಅಡಚಣೆ ತರಲಾಗದು. ಎಲ್ಲ ಮಠಗಳಲ್ಲೂ ಎಲ್ಲ ಭಕ್ತರಿಗೂ ಮುಕ್ತ ಅವಕಾಶವಿರಬೇಕೆಂದೇ ಅವರ ಹಕ್ಕನ್ನು ದಾಖಲೆಗಳು ಸಾರಿ ಹೇಳುತ್ತವೆ.

ಪ್ರೊ॥ ಜಿ. ಎಸ್. ದೀಕ್ಷಿತ್ *

# ಬಿಜ್ಜಳನ ಸಾವಿನ ಬಗೆ ಮತ್ತು ಕಾಲ

ವೀರಶೈವ ಪುರಾಣಗಳು ಬಿಜ್ಜಳನನ್ನು ಬಸವಣ್ಣನವರ ಅನುಯಾಯಿಗಳಾದ ಜಗದೇವ ಮೊಲ್ಲಬೊಮ್ಮಯ್ಯಗಳು ಕೊಂದರೆಂದು ಹೇಳುತ್ತವೆ. ಇದಕ್ಕೆ ಕಲ್ಯಾಣ ಕ್ರಾಂತಿಯೆನ್ನುತ್ತಾರೆ. ಇದು ನಡೆದದ್ದು ಕ್ರಿ. ಶ. ೧೧೬೭-೬೮ರಲ್ಲಿ ಎಂದು ಸಾಧಾರಣವಾಗಿ ಎಲ್ಲರೂ ಒಪ್ಪಿಕೊಂಡಿದ್ದಾರೆ. ಈ ಅಭಿಪ್ರಾಯಗಳನ್ನು ಪ್ರಶ್ನಿಸಿ ಅವುಗಳ ಖಚಿತತೆಯನ್ನು ಗೊತ್ತು ಮಾಡುವುದು ಈ ಪ್ರಬಂಧದ ಉದ್ದೇಶ.

೧೯೯೭ರ ಕ.ಇ. ಅಕಾದೆಮಿಯ ಶಿರ್ಸಿ ಸಮ್ಮೇಳನದಲ್ಲಿ[*೧] ಕಲ್ಯಾಣಕ್ರಾಂತಿಯಾಗಿದ್ದು ೧೧೬೭-೬೮ರಲ್ಲಿ ಅಲ್ಲ ಅದು ಆಗಿದ್ದು ೧೧೮೪ರಲ್ಲಿ ಆಗಿರಬಹುದೆನ್ನುವ ಆಶಯದ ಪ್ರಬಂಧಗಳನ್ನು ಓದಿದೆ. ೧೧೮೪ರಲ್ಲಿ ಚಾಳುಕ್ಯ ನಾಲ್ಕನೆಯ ಸೋಮೇಶ್ವರನು ತನ್ನ ಸೇನಾಪತಿ ಬಮ್ಮಯ್ಯನ ಸಹಾಯದಿಂದ ಕಲಚುರಿಗಳನ್ನು ಸೋಲಿಸಿದನು. ಅದೇ ಯುದ್ಧದಲ್ಲಿ ಬಮ್ಮಯ್ಯನು ಕಲಚರಿ ಕುಲ ಕಾಲಾನಲ ನೆನ್ನುವ ಬಿರುದನ್ನು ಧರಿಸಿದನೆಂದು ಅದೇ ವರ್ಷದ ಅಣ್ಣಿಗೇರಿ ಶಾಸನವು ಹೇಳುತ್ತದೆ. ಆದ್ದರಿಂದ ಅವನೂ ಬಿಜ್ಜಳನ ಕೊಲೆಗಾರರಲ್ಲಿ ಒಬ್ಬನೆಂದು ವಾದಿಸಿದೆನು. ಈ ಪ್ರಬಂಧವನ್ನು ಕೇಳಿದ ನನ್ನ ಸ್ನೇಹಿತ ಡಾ॥ ಹೆಚ್. ಚಂದ್ರಶೇಖರರು ಈ ಅಭಿಪ್ರಾಯಕ್ಕೆ ವಿರುದ್ಧ ಅಭಿಪ್ರಾಯವಿರುವ ಡಾ॥ ಬಿ. ಜಿ. ಎಲ್. ಸ್ವಾಮಿಯವರ ಲೇಖನವನ್ನು ನನ್ನ ಅವಗಾಹನೆಗೆ ತಂದುಕೊಟ್ಟು ಉಪಕರಿಸಿದರು[*೨] ಅವರೇ ಆ ಲೇಖನವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಅನುವಾದವು "ಕಲಚೂರಿ ಎರಡನೇ ಬಿಜ್ಜಳನ ಸಾವನ್ನು ಕುರಿತು" ಎನ್ನುವ ಶೀರ್ಷಿಕೆಯಲ್ಲಿ ಅಕ್ಟೋಬರ್ ೧೯೯೮ರ "ಬಸವಪಥ"ದಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಬಿಜ್ಜಳನ ಸಾವು ೧೧೬೭-೬೮ರಲ್ಲಿ ಆಯಿತೆಂದು ಹೇಳಿದೆ ಸಾವಿನ ಬಗೆಗೆ ಡಾ॥ ಸ್ವಾಮಿಯವರ ಅಭಿಪ್ರಾಯವು ವೀರಶೈವಪುರಾಣಗಳ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿದೆ. ಪುರಾಣಗಳು ಬಸವಣ್ಣನವರ ಅನುಯಾಯಿಗಳು ಕೊಂದರೆಂದು ಹೇಳಿದರೆ, ಸ್ವಾಮಿಯವರು ಧಾರ್ಮಿಕ ಕಾರಣಕ್ಕಿಂತ ಈ ಕೊಲೆ ರಾಜಕೀಯ ಕಾರಣದಿಂದ ಆಗಿರಬಹುದೆಂದೆನ್ನುತ್ತಾರೆ.

ತಮ್ಮ ವಾದಕ್ಕೆ ಅವರು ತೆಲುಗಿನಲ್ಲಿರುವ ನಂದೂರು ತಾಮ್ರ ಶಾಸನವನ್ನು ಮತ್ತು ಅದೇ ಭಾಷೆಯಲ್ಲಿರುವ ಕೇಯೂರ ಬಾಹುಚರಿತೆಯನ್ನು ಉದಾಹರಿಸುತ್ತಾರೆ.[*೩] ಬಿಜ್ಜಳನ ಸಾವಿಗೆ ಆಂಧ್ರಪ್ರದೇಶದ ಗುಂಟೂರು ಸಮೀಪದಲ್ಲಿರುವ ವೆಲನಾಡು ಕಲ್ಯಾಣದ ಚಾಳುಕ್ಯರಿಗೂ ತಮಿಳುನಾಡಿನ ಚೋಳರಿಗೂ ಯುದ್ಧಕ್ಕೆ ಕಾರಣವಾಗಿತ್ತು. ಆರನೇ ವಿಕ್ರಮಾದಿತ್ಯ ಈ ವೆಲನಾಡನ್ನು ಗೆದ್ದಿದ್ದ. ಕುಲೋತ್ತುಂಗ ಚೋಳ ಅದನ್ನು ವಶಪಡಿಸಿಕೊಂಡ. ಚಾಳುಕ್ಯರು ಮತ್ತು ಕಲಚುರಿಗಳು ತಮ್ಮ ಹಕ್ಕನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ನಂದೂರು ಶಾಸನದ ಪ್ರಕಾರ ವೆಲನಾಡಿನ ರಾಜೇಂದ್ರ ಚೋಳನ ಸೇನಾಪತಿ ಕೊಮ್ಮಣ್ಣನಿಗೂ ಬಿಜ್ಜಳನ ಅಳಿಯ ಎರಡನೆ ಚಾವುಂಡನಿಗೂ ಕೋಚೆರ್ಲಕೋಟಾ ಎನ್ನುವಲ್ಲಿ ಯುದ್ಧವಾಯಿತು. ಈ ಯುದ್ಧದಲ್ಲಿ ಚಾವುಂಡನು ಸತ್ತನು. ಡಾ॥ಸ್ವಾಮಿಯವರ ಪ್ರಕಾರ ಅಳಿಯ ಚಾವುಂಡನ ಜತೆಗೆ ಬಿಜ್ಜಳನೂ ಈ ಯುದ್ಧದಲ್ಲಿ ಪಾಲುಗೊಂಡಿರಬೇಕು ಮತ್ತು ಆ ಯುದ್ಧದಲ್ಲಿ ಅವನು ಸತ್ತಿರಬೇಕು ಇಲ್ಲವೇ ಗಾಯಗೊಂಡಿರಬೇಕು. ಗಾಯಗೊಂಡ ನಂತರ ಕಲ್ಯಾಣಕ್ಕೆ ಬಂದು ಸತ್ತಿರಬೇಕೆಂದು ಊಹಿಸುತ್ತಾರೆ. ಈ ಊಹೆಗೆ ಅವರು ಕೊಡುವ ಕಾರಣವೆಂದರೆ (೧) ೧೧೬೭-೬೮ರ ನಂತರ ಬಿಜ್ಜಳನ ಶಾಸನಗಳು ಸಿಗುವುದಿಲ್ಲ. ಆದ್ದರಿಂದ ಅವನು ಅಷ್ಟೊತ್ತಿಗೆ ಸತ್ತಿರಬೇಕು. (೨) ಹರಪನಹಳ್ಳಿ ತಾಲ್ಲೂಕಿನ ಕುಂಜಾಪುರದ ಒಂದು ಶಾಸನದಲ್ಲಿ "ಬಿಜ್ಜಗ ಶಿರಚ್ಛೇದಕ"ನೆನ್ನುವ ಬಿರುದನ್ನು ಗುತ್ತಲದ ಒಬ್ಬ ರಾಜನಿಗೆ ಕೊಟ್ಟಿದೆ.[*೪] ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಬಿರುದನ್ನು ಹೊತ್ತವನು ಗುತ್ತಗಮಲ್ಲದೇವ. ಅವನು ೧೧೬೭-೬೮ರಲ್ಲಿ ಬಿಜ್ಜಳನನ್ನು ಕೊಂದಿರಬೇಕೆನ್ನುತ್ತಾರೆ. ಡಾ॥ ಸ್ವಾಮಿ

---

* 'ಸ್ವಸ್ತಿ', ನಂ. ೧, ನವೋದಯ ನಗರ, ಧಾರವಾಡ - ೫೮೦ ೦೦೩

ಯವರು ಶ್ರೀ ಜೋಯಿಸರ ವಾದವನ್ನು ಅನುಮೋದಿಸಿ, ಈ ಕೊಲೆ ಕೋಚೆರ್ಲ ಕೋಟೆಯ ಕದನದ ನಂತರ ನಡೆದಿರಬೇಕೆನ್ನುತ್ತಾರೆ.

ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರ ವಾದವನ್ನು ಅಂದರೆ ಗುತ್ತಲದ ಮಲ್ಲಿದೇವನು ''ಬಿಜ್ಜಗ ಶಿರಚ್ಛೇದಕ''ನು ಎನ್ನುವ ವಾದವನ್ನು ಒಪ್ಪುವುದು ಕಷ್ಟ. ಯಾಕೆಂದರೆ , ಈ ತ್ರುಟಿತ ಶಾಸನದಲ್ಲಿ ತೇದಿಯಿಲ್ಲ*೫ ಬಿಜ್ಜಗ ಶಿರಚ್ಛೇದಕನೆಂದು ಆ ಶಾಸನದಲ್ಲಿದ್ದರೂ, ಕಲಚುರಿಯವರಲ್ಲಿ ಇರುವ ಮೂವರು ಬಿಜ್ಜಳರಲ್ಲಿ ಯಾವ ಬಿಜ್ಜಳನೆಂದು ಹೇಳುವುದು ದುಸ್ತರ. ಮೊದಲನೆ ಬಿಜ್ಜಳ, ಪ್ರಸಿದ್ಧ ಎರಡನೆ ಬಿಜ್ಜಳನ ಪೂರ್ವಜ, ಪ್ರಸಿದ್ಧ ಬಿಜ್ಜಳ ಎರಡನೆಯವನು, ಮೂರನೆಯವನು ಎರಡನೆಯ ಬಿಜ್ಜಳನ ಮೊಮ್ಮಗ, ವೀರ ಬಿಜ್ಜಳ. ತೇದಿಯಿಲ್ಲದ ಈ ಶಾಸನದಿಂದ ಯಾವ ಬಿಜ್ಜಳ ಹತನಾದನೆಂದು ಹೇಳಲು ಬರುವುದಿಲ್ಲ. ಈ ಮೂವರಲ್ಲದೆ, ಬೇರೆ ವಂಶದಲ್ಲಿಯೂ ಅದೇ ಕಾಲದಲ್ಲಿ ಬಿಜ್ಜಳನೆನ್ನುವವರಿದ್ದಾರೆ. ''ಬಿಜ್ಜಗ ಶಿರಚ್ಛೇದಕ'' ನೆಂದಾದ ಮೇಲೆ ಈ ಶಾಸನದಲ್ಲಿ ಅಕ್ಷರಗಳಿಲ್ಲ. ಮುಂದೆ ಕೆಲವು ಸಾಲುಗಳಾದ ಮೇಲೆ ಮಲ್ಲಿದೇವನ ಹೆಸರು ಬರುತ್ತದೆ. ಆದ್ದರಿಂದ ಅವನೇ ಬಿಜ್ಜಳನನ್ನು ಕೊಂದನೆಂದು ಈ ಶಾಸನದಿಂದ ಹೇಳಲು ಬರುವುದಿಲ್ಲ. ಕೆಲವು ವಿದ್ವಾಂಸರು ಈ ಶಾಸನ ಎರಡನೆ ಬಿಜ್ಜಳನ ಕಾಲದ್ದಲ್ಲ, ಆರನೆ ವಿಕ್ರಮಾದಿತ್ಯನ ಕಾಲದ್ದೆಂದು ತಿಳಿದಿದ್ದಾರೆ. ಹೀಗೆ ಅನೇಕ ಕಾರಣಗಳಿಂದ ಬಿಜ್ಜಳನ ಸಮಸಾಮಯಿಕ ಮಲ್ಲಿದೇವ ಅವನ ಕೊಲೆಗಾರನೆಂದು ಈ ಶಾಸನ ಹೇಳುವುದಿಲ್ಲ.

ಇನ್ನು ಡಾ || ಸ್ವಾಮಿಯವರು ಊಹಿಸಿದ ಹಾಗೆ ಬಿಜ್ಜಳನು ಕೋಚೆರ್ಲಕೋಟೆಯ ಕದನದಲ್ಲಿ ಭಾಗವಹಿಸಿದ್ದನೆನ್ನುವ ಊಹೆಯನ್ನು ಒಪ್ಪುವುದಾಗುವುದಿಲ್ಲ. ಆ ಯುದ್ಧ ನಡೆದಾಗ (೧೧೬೭-೬೮) ತನ್ನ ರಾಜ್ಯದಲ್ಲಿಯೇ ಪರಿಸ್ಥಿತಿ ಅವನ ಹತೋಟಿಯಲ್ಲಿರಲಿಲ್ಲ. ನನ್ನ ಈ ಮೊದಲನೆ ಲೇಖನದಲ್ಲಿ*೬ ಹೇಳಿದ ಹಾಗೆ ಬಿಜ್ಜಳನು ೧೧೬೭ರಲ್ಲಿ ಪದತ್ಯಾಗಮಾಡಿ ತನ್ನ ಎರಡನೆ ಮಗ ಸೋವಿದೇವನಿಗೆ ಪಟ್ಟ ಕಟ್ಟಿದ್ದರಿಂದ ಅವನ ಇತರ ಮಕ್ಕಳು ಮತ್ತು ಇತರ ಬಂಧುಗಳಲ್ಲಿ ತಿಕ್ಕಾಟ ಆರಂಭವಾಯಿತು. ಅದೇ ಹೊತ್ತಿಗೆ ಬಸವಣ್ಣನವರ ಧಾರ್ಮಿಕ ಚಳುವಳಿಯು ಪ್ರಬಲವಾಯಿತು. ಬಿಜ್ಜಳ-ಬಸವಣ್ಣನವರಲ್ಲಿ ಮತೀಯ ಭಿನ್ನಾಭಿಪ್ರಾಯಗಳು ವಿಕೋಪಕ್ಕೆ ಹೋದವು. ಬಸವಣ್ಣನವರಿಗೆ ಪ್ರಚಂಡ ಜನ ಬಲವಿರುವುದನ್ನು ನೋಡಿ ಬಿಜ್ಜಳನು ಅವರ ಕೊಲೆ ಮಾಡಬೇಕೆಂದು ಹೊಂಚು ಹಾಕುತ್ತಿದ್ದನು. ಇಂತಹ ಧಾರ್ಮಿಕ ಮತ್ತು ರಾಜಕೀಯ ಪರಿಸ್ಥಿತಿ ಕಲ್ಯಾಣದಲ್ಲಿರುವಾಗ ಅದನ್ನು ಬಿಟ್ಟು ದೂರದ ಆಂಧ್ರಕ್ಕೆ ಕ್ಷುಲ್ಲಕ ಕಾರಣಕ್ಕೆ ಯುದ್ಧ ಮಾಡಲು ಹೋಗಿದ್ದನೆನ್ನುವುದು ಅಸಂಭವ. ತನಗೆ ಹೋಗಲಿಕ್ಕೆ ಆಗುವುದಿಲ್ಲ ವೆಂದೇ ತನ್ನ ಅಳಿಯ ಚಾವುಂಡನನ್ನು ಕಳಿಸಿರಬೇಕು.

ಬಿಜ್ಜಳ ಯುದ್ಧದಲ್ಲಿ ಸಾಯದಿದ್ದರೆ ಹೇಗೆ ಸತ್ತನೆನ್ನುವ ಪ್ರಶ್ನೆ ಉಳಿಯುತ್ತದೆ. ವೀರಶೈವ ಪುರಾಣಗಳು ಹೇಳುವ ಅಭಿಪ್ರಾಯಕ್ಕೆ ಅನುಕೂಲವಾಗುವ ಕೆಲವು ಆಧಾರಗಳು ಈಚೆಗೆ ಹೊರಬರುತ್ತಿವೆ. ಇತ್ತೀಚೆಗೆ ಡಾ || ಬಿ. ವಿ. ಶಿರೂರರಿಗೆ*೭ ಯಲಬುರ್ಗಿಯ ಹಿರೇಮಠದಲ್ಲಿ ಧೂಪದ ರಾಜೇಶಕೃತ ''ಮೊಲ್ಲೆ ಬೊಮ್ಮಯ್ಯಗಳ ಕಾವ್ಯ''ವೊಂದು ಲಭಿಸಿದೆ. ಸು. ೧೬೫೦ರಲ್ಲಿ ಇದನ್ನು ಬರೆದಿರಬೇಕೆಂದು ಹೇಳುತ್ತಾರೆ. ಇದರಲ್ಲಿ ಜಗದೇವನೊಂದಿಗೆ ಬಿಜ್ಜಳನನ್ನು ಕೊಂದ ವ್ಯಕ್ತಿ ''ಮೊಲ್ಲೆ ಬೊಮ್ಮಯ್ಯ''ನೆಂದು ಸ್ಪಷ್ಟವಾಗಿ ಹೇಳಿದೆ. ಸಿಂದ ವಂಶದ ಎರಡನೇ ಚಾವುಂಡನು ಈ ಮೊಲ್ಲೆ ಬೊಮ್ಮಯ್ಯನಿಗೆ ಒಂದು ಶಾಸನವನ್ನು ಕೊಟ್ಟನೆಂದು ಅದರಲ್ಲಿ ಹೇಳಿದೆ. ಆದರೆ ಆ ಶಾಸನ ಲಭ್ಯವಿಲ್ಲ. ಕಾವ್ಯದಲ್ಲಿಯ ಮಾಹಿತಿಯನ್ನು ಅಂದರೆ ಮೊಲ್ಲೆಬೊಮ್ಮಯ್ಯನ ಅಸ್ತಿತ್ವವನ್ನು ಒಂದು ಶಾಸನವು ಬೆಂಬಲಿಸುತ್ತದೆ. ಈ ಶಾಸನವು*೮ ರೋಣ ತಾಲ್ಲೂಕಿನ ಕೋಡಿಕೊಪ್ಪ ಗ್ರಾಮದ ಮೂಲ ಬ್ರಹ್ಮ ದೇವರ ಗುಡಿಯಲ್ಲಿ ಸಿಕ್ಕಿದೆ. ಇವರ ತೇದಿ ಕ್ರಿ. ಶ. ೧೧೪೪. ಅದರಲ್ಲಿ ಮೊಲ್ಲೆಯ ಬೊಮ್ಮಣ್ಣ ತನ್ನ ಊರಿನ ನೂರಾನಾಲ್ವರು ಮಹಾಜನಗಳ ಸಮ್ಮುಖದಲ್ಲಿ ದಾನ ಮಾಡಿದ ವಿವರಗಳಿವೆ. ಇವುಗಳ ಪ್ರಕಾರ ಮೊಲ್ಲೆ ಬೊಮ್ಮಣ್ಣನು ತನ್ನ ಮನೆಯ ದೇವರು ಕಿರು ನರೆಯಂಗಲ್ಲಿನ ಶ್ರೀ ಬ್ರಹ್ಮೇಶ್ವರ ದೇವರಿಗೆ ದತ್ತಿಯನ್ನು ಕೊಟ್ಟಿದ್ದಾನೆ. ಮೇಲೆ ಹೇಳಿದ ಕಾವ್ಯವು ಅವನ ಮನೆ ದೈವ ಕರುಗಲ್ಲ ಬೊಮ್ಮನೆಂದು ಹೇಳುತ್ತದೆ. ಎರಡರಲ್ಲಿಯೂ ಅವನ ಮನೆದೇವರು ಬ್ರಹ್ಮದೇವನೆಂದು ಹೇಳಿದೆ. ಆದ್ದರಿಂದ ಮೊಲ್ಲ ಬೊಮ್ಮಯ್ಯನು ಶಾಸನವಿರುವ ನರೆಯಂಗಲ ಪ್ರಾಂತದಲ್ಲಿ ಹುಟ್ಟಿದವನೆಂದು ಸ್ಪಷ್ಟವಾಗುತ್ತದೆ.

ಈ ಶಾಸನ ಮತ್ತು ಕಾವ್ಯದಲ್ಲಿಯ ಮಾಹಿತಿಯನ್ನು ಅಲ್ಲಿಯ ಜನರ ನಂಬಿಕೆಯು ಪೋಷಿಸುತ್ತದೆಂದು ಡಾ || ಶಿರೂರರು ಹೇಳುತ್ತಾರೆ. ಇಂದಿಗೂ ಕೋಡಿಕೊಪ್ಪ ಗ್ರಾಮದಲ್ಲಿ ಅಲ್ಲಿಯ ಕಲ್ಲಪ್ಪನ ಗುಡಿಯ ಮುಂದಿನ ಕಟ್ಟೆಯ ಎರಡು ಕಲ್ಲುಗಳನ್ನು ಮೊಲ್ಲೆಬೊಮ್ಮಯ್ಯ ಮತ್ತು ಜಗದೇವಯ್ಯ ಎಂದು ಪೂಜಿಸುತ್ತಾರೆ. ಇದೇ ರೀತಿ ನರೇಗಲ್ಲಿನ ಕಲ್ಮೇಶ್ವರ ದೇವಾಲಯ ಮತ್ತು ಕಲ್ಲೂರಿನ ಕಲ್ಲಿನಾಥ ದೇವಾಲಯಗಳ ಮುಂದಿರುವ ಎರಡು ಕಲ್ಲುಗಳನ್ನು ಮೊಲ್ಲ ಬೊಮ್ಮಯ್ಯ ಮತ್ತು ಜಗದೇವಯ್ಯಗಳೆಂದು ಪೂಜಿಸುತ್ತಾರೆ.

ಹೀಗೆ ಮೊಲ್ಲೆಬೊಮ್ಮಯ್ಯ ಮತ್ತು ಜಗದೇವಯ್ಯಗಳು ಬಿಜ್ಜಳನ ಕೊಲೆಗಾರರೆಂದು ಯಲಬುರ್ಗಿ ಮತ್ತು ರೋಣ ತಾಲ್ಲೂಕುಗಳಲ್ಲಿಯ ಐತಿಹ್ಯ ಮತ್ತು ಶಾಸನ ಮತ್ತು ಮೊಲ್ಲೆ ಬೊಮ್ಮಯ್ಯಗಳ ಕಾವ್ಯ ಮತ್ತು ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತ್ರ ಮತ್ತು ಬಸವಪುರಾಣಗಳು ಹೇಳುತ್ತವೆ.

ಮೊಲ್ಲೆಬೊಮ್ಮಯ್ಯನು ಐತಿಹಾಸಿಕ ವ್ಯಕ್ತಿಯೆಂದು ಕೋಡಿಕೊಪ್ಪದ ಶಾಸನ ಹೇಳುತ್ತದೆ. ಮತ್ತು ಅದೇ ಶಾಸನ ಮೊಲ್ಲಬೊಮ್ಮ ಒಬ್ಬನ ಹೆಸರೆಂದು ಹೇಳುತ್ತದೆ. ಕೆಲವು ನಂತರದ ಪುರಾಣಗಳು ಇವರು ಮಲ್ಲಯ್ಯ ಮತ್ತು ಬಮ್ಮಯ್ಯ ಎನ್ನುವ ಇಬ್ಬರು ವ್ಯಕ್ತಿಗಳೆಂದು ಹೇಳುತ್ತವೆ. ಈಗ ಅದು ಒಬ್ಬ ವ್ಯಕ್ತಿಯ ಹೆಸರೆನ್ನುವುದು ಖಚಿತ. ಈ ಶಾಸನದ ಕಾಲದಲ್ಲಿ (೧೧೪೪) ಈ ಮೊಲ್ಲಬೊಮ್ಮಯ್ಯ ಒಬ್ಬ ಅಧಿಕಾರಿಯಾಗಿದ್ದ.

ಮೇಲೆ ಹೇಳಿದ ಕೋಡಿಕೊಪ್ಪದ ಮೊಲ್ಲೆಬ್ರಹ್ಮದೇವರ ದೇವಸ್ಥಾನದಲ್ಲಿರುವ ಇನ್ನೊಂದು ಮೊಲ್ಲೆಬೊಮ್ಮನ ಶಾಸನ ಈಚೆಗೆ ನನ್ನ ಲಕ್ಷ್ಯಕ್ಕೆ ಬಂತು. ಅದರ ತೇದಿ ಕ್ರಿ. ಶ. ೧೧೨೦-೨೧. ಅದರಲ್ಲಿ ಅಂಕಕಾರ ಹಕ್ಕದ ಅಧಿಷ್ಠಾಯಕ ಮೊಲ್ಲೆಬೊಮ್ಮನು ತನ್ನ ಮನೆದೇವರು ಬ್ರಹ್ಮದೇವರಿಗೆ ದತ್ತಿಯನ್ನು ಕೊಟ್ಟ ವಿವರಗಳಿವೆ. ಈ ಶಾಸನದ*೯ ಕಾಲದಲ್ಲಿ ಅವನ ವಯಸ್ಸು ೨೦ ಎಂದು ಇಟ್ಟುಕೊಂಡರೆ ಅವನು ೧೧೬೨ರ ಕಲ್ಯಾಣದ ಕ್ರಾಂತಿಯಲ್ಲಿ ಬಿಜ್ಜಳನನ್ನು ಕೊಂದಾಗ ೬೨ ವಯಸ್ಸಿನವನಿರಬಹುದು. ೧೧೨೦-೨೧ರಲ್ಲಿ ಸಣ್ಣ ಅಧಿಕಾರಿಯಾಗಿದ್ದ ಮೊಲ್ಲಬೊಮ್ಮಯ್ಯ ಅಥವಾ ಬಮ್ಮಯ್ಯ (ಎರಡು ಹೆಸರೂ ಎರಡೂ ಶಾಸನಗಳಲ್ಲಿವೆ). ಮುಂದೆ ಚಾಳುಕ್ಯ ನಾಲ್ಕನೆ ಸೋಮೇಶ್ವರ ಸೇನಾಧಿಪತಿಯಾಗಿ ಬಿಜ್ಜಳನನ್ನು ಕೊಂದಿರಬಹುದು ಅಥವಾ ಮೊಲ್ಲಬೊಮ್ಮಯ್ಯ ಬೇರೆ, ಸೇನಾಧಿಪತಿ ಬಮ್ಮಯ್ಯ ಬೇರೆ ಎಂದಾದರೆ, ಸೇನಾಧಿಪತಿ, ಬಿಜ್ಜಳನನ್ನು ಬಿಟ್ಟು ಉಳಿದ ಕಲಚುರಿಗಳನ್ನು ನಾಶಮಾಡಿರಬೇಕು.

ಕೊಲೆಗಾರರ ವಿಷಯದಲ್ಲಿ ಸಂದಿಗ್ಧತೆಯಿದ್ದರೂ ಕೊಲೆಯ ಕಾಲ ೧೧೬೨-೬೪ರೊಳಗಿನ ಕಾಲದಲ್ಲಿ ಇಂತಹ ಅನುಮಾನಕ್ಕೆ ಆಸ್ಪದವಿಲ್ಲ. ಬಿಜ್ಜಳನ ಸಾವಿಗೂ ಮತ್ತು ಬಸವಣ್ಣನವರ ಐಕ್ಯಕ್ಕೂ ಬಹಳ ಅಂತರವಿಲ್ಲದಿರುವುದರಿಂದ ಬಿಜ್ಜಳನ ಸಾವು ಸು. ೧೧೬೨-೬೪ರಲ್ಲಿ ಬಸವಣ್ಣನವರು ಐಕ್ಯರಾಗಿದ್ದು ಸು. ೧೧೬೫-೬೭ರಲ್ಲಿ ಎಂದು ಇಟ್ಟುಕೊಳ್ಳಬಹುದು. ಮತ್ತು ಅವರ ಸಮಕಾಲೀನರು ಮತ್ತು ಸಮವಯಸ್ಕರು ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಐಕ್ಯರಾಗಿದ್ದು ಕ್ರಿ. ಶ. ೧೧೬೭ ರಲ್ಲಿ ಅನ್ನುವುದಕ್ಕೆ ಅದೇ ವರ್ಷದ ಸಂಗಮೇಶ್ವರದ ಅವರ ಶಾಸನವು*೧೦ ಮತ್ತು ಅದರ ಪಕ್ಕದಲ್ಲಿರುವ ವೆಲ್ಲಟೂರಿನಲ್ಲಿರುವ ಅವರ ಸಮಾಧಿಯು ನಿರ್ವಿವಾದದ ಸಾಕ್ಷಿಗಳಾಗಿವೆ. *೧೧

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ''ಇತಿಹಾಸ ದರ್ಶನ'' ೧೯೯೭, **ಕಲ್ಯಾಣದ ಕ್ರಾಂತಿಯ ಕಾಲ,** ಈ ಲೇಖನ ಅದರ ಮುಂದಿನ ಭಾಗ

*೨. B. G. L. Swamy, ***"On the death of Kalachuri Bijjala"***, QJMS, LXXXI Nos 1-2, Jan-June, 1980

*೩. "Nandur Inscript ion", Ed. B. V. Krishna Rao, EI-29

*೪. ಹುಲ್ಲೂರ ಶ್ರೀನಿವಾಸ ಜೋಯಿಸ್ : ''ಬಿಜ್ಜಗ ಶಿರಚ್ಛೇದಕ'', ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂಪುಟ ೩೫, ಸಂಚಿಕೆ ೧ : ೧೯೫೦

*೫. SII IX (1) No. 217, ಕುಂಚೂರು ಅಥವಾ ಕುಂಜಾಪುರದ ಶಾಸನ

*೬. ಮೊದಲನ ಟಿಪ್ಪಣಿಯಲ್ಲಿನ ಲೇಖನ ನೋಡಿ

*೭. ಡಾ || ಬಿ. ವಿ. ಶಿರೂರ : ''ಬಿಜ್ಜಳನನ್ನು ಕೊಂದ ಮೊಲ್ಲೆ ಬೊಮ್ಮಯ್ಯ'' **ಸಾಧನೆ**

*೮ SII XV No. 28, ಕೋಡಿಕೊಪ್ಪದ ಶಾಸನ, ಕ್ರಿ. ಶ. ೧೧೪೪

*೯. JBBRAS XI J. F. Fleet, Old Canarese and Sanskrit Inscriptions relating to the Chieftains of Sindavamsa, PP. 247-251

*೧೦. Telangana Inscriptions II. No. 14, P. 214

*೧೧. **ಕನ್ನಡ ವಿಶ್ವಕೋಶ,** ಕರ್ಣಾಟಕ ವಿಷಯ, ಮಲ್ಲಿಕಾರ್ಜುನ ಪಂಡಿತಾರಾಧ್ಯರ ಬಗೆಗೆ ಬರೆದಿದ್ದನ್ನು ನೋಡಿ

ಪಿ. ವಿ. ಕೃಷ್ಣಮೂರ್ತಿ *

# 'ಪುಲಿನಾಡು' ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ

ಕೋಲಾರ ಜಿಲ್ಲೆಯ ಮುಳಬಾಗಲು, ಶ್ರೀನಿವಾಸಪುರ, ಚಿತ್ತೂರು ಜಿಲ್ಲೆಯ ಪುಂಗನೂರು, ಪಲಮನೇರು, ಉತ್ತರ ಆರ್ಕಾಡು ಜಿಲ್ಲೆಯ ಗುಡಿಯಾತ್ತಂ ಮುಂತಾದ ತಾಲೂಕುಗಳಲ್ಲಿನ ಶಾಸನಗಳಲ್ಲಿ ಪುಲಿನಾಡಿನ ಪ್ರಸ್ತಾಪ ಬಂದಿದೆ. ಪುಲಿನಾಡು, ಪುಲಿನಾಡಜಿವತ್ತು, ಪುಲಿನಾಡು-೬೦, ಪುಲಿನಾಟ್ಟು ಎಂದು ಹೆಸರಿಸಲ್ಪಟ್ಟಿರುವ ಪ್ರದೇಶದಲ್ಲಿ ಇಂದಿನ ಮುಳಬಾಗಲು ತಾಲೂಕಿನ ಪೂರ್ವಭಾಗ, ಶ್ರೀನಿವಾಸಪುರ ತಾಲೂಕಿನ ದಕ್ಷಿಣ ಭಾಗ, ಪುಂಗನೂರು ತಾಲೂಕಿನ ಪಶ್ಚಿಮಾರ್ಧ ಭಾಗ, ಗುಡಿಯಾತ್ತಂ ತಾಲೂಕಿನ ಉತ್ತರ ಭಾಗಗಳು ಅಂತರಗತ ವಾಗಿದ್ದವು. ಈ ಪ್ರದೇಶವು ಮುಖ್ಯವಾಗಿ ಪಾಲಾರ್ ಮತ್ತು ಕೌಂಡಿನ್ಯ ನದಿಗಳ ಮಧ್ಯಪ್ರದೇಶವಾಗಿದೆ. ಪೂರ್ವ ಘಟ್ಟಗಳ ಪಶ್ಚಿಮ ಸೆರಗಿನಲ್ಲಿ ಬರುವ ಈ ಪ್ರದೇಶ ಸಮುದ್ರ ಮಟ್ಟದಿಂದ ಸುಮಾರು ೬೬೦ ರಿಂದ ೮೮೫ ಮೀಟರುಗಳಷ್ಟು ಎತ್ತರದಲ್ಲಿರುವ ಮೈಸೂರು ಪ್ರಸ್ಥ ಭೂಮಿಗೆ ಹೊಂದಿಕೊಂಡಿದೆ. ಈ ಪ್ರದೇಶದಲ್ಲಿ ಅಲ್ಲಲ್ಲೆ, ಚದುರಿದಂತೆ ಬೆಟ್ಟಗುಡ್ಡಗಳಿದ್ದು ಇಂದಿಗೂ ಹಲವು ಸಂರಕ್ಷಿತ ಕಾಡುಗಳಿವೆ. ಈ ಬೆಟ್ಟಗುಡ್ಡಗಳಲ್ಲಿ ಕಲ್ಲಾಸರೆಗಳೂ ಇದ್ದು ಆದಿಮಾನವನ ನಿವಾಸ ಸ್ಥಾನವಾಗಿದ್ದಿತೆನ್ನುವುದಕ್ಕೆ ಆಧಾರವಾಗಿವೆ.

ಈ ಪ್ರದೇಶದ ಶಿಲೆಗಳು ಮೆಟಾ ಮೊರ್ಫೋಸ್ಡ್ ಕ್ಯಾಂಬ್ರಿನ್ ರಾಕ್ಸ್ (meta morphosed Combrian rocks) ಗುಂಪಿಗೆ ಸೇರಿದ್ದು ಅನೇಕ ಲೋಹಗಳ ಆಗರವಾಗಿರುತ್ತದೆ. ಅಲ್ಲದೆ ಈ ಪ್ರದೇಶದ ಪೂರ್ವಭಾಗದ ಮರಳುಮಣ್ಣು ಬಳೆಗಳ ತಯಾರಿಕೆಗೆ ಯೋಗ್ಯವಾದ ಚೌಳುಪ್ಪಿನಿಂದ ಕೂಡಿದೆ. ಈ ನಾಡಿನ ಉತ್ತರದ ಬೆಟ್ಟಗಳ ಬುಡದಲ್ಲಿ ಕಬ್ಬಿಣದ ಮರಳು ಸಂಗ್ರಹವಾಗುವುದೊಂದು ವಿಶೇಷ. ವಿಶೇಷವಾಗಿ ಆವುಲಪಲ್ಲಿ, ಕುಂದೂರ್ ಮತ್ತು ಚಂಬಕೂರು ಎಂಬಲ್ಲಿ ಈ ಕಬ್ಬಿಣದ ಮರಳು ಸಂಗ್ರಹವಾಗುತ್ತಿದ್ದು, ಅಲ್ಲಿ ಅತಿಪ್ರಾಚೀನ ಕಾಲದಿಂದಲೂ ಅದನ್ನು ಸಂಸ್ಕರಿಸಿ ಕಬ್ಬಿಣ ಉಕ್ಕುಗಳನ್ನಾಗಿಸಿ ಹತಾರಗಳ ತಯಾರಿಕೆಯ ಕೈಗಾರಿಕೆ ಅಸ್ತಿತ್ವದಲ್ಲಿದೆ. ಚೌಡೆಪಲ್ಲಿ ಸಂತೆಯಲ್ಲಿ ಆ ಹತಾರಗಳು ಇಂದಿಗೂ ಮಾರಾಟವಾಗುತ್ತಿವೆ ಎಂದು ತಿಳಿದುಬರುತ್ತದೆ.

೧೯೬೭-೬೮ರ ಅವಧಿಯಲ್ಲಿ ಪ್ರೊ॥ ಎಸ್. ಆರ್. ರಾವ್ ಅವರ ನೇತೃತ್ವದಲ್ಲಿ ಐ. ಕೆ. ಶರ್ಮ, ಸಿ. ಮರ್ಗಬಂಧನ್ ಮತ್ತು ಕೆ. ಕೃಷ್ಣಮೂರ್ತಿ ಅವರುಗಳು ಈ ಪ್ರದೇಶದಲ್ಲಿ ಸರ್ವೇಕ್ಷಣೆ ನಡೆಸಿ, ಅನೇಕ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗ ಮತ್ತು ಕೆಲವು ನವ ಶಿಲಾಯುಗದ ನಿವೇಶನಗಳನ್ನು ಬೆಳಕಿಗೆ ತಂದರು. ಅವುಗಳಲ್ಲಿ ದೊಡ್ಡ ಕಡತ್ತೂರು, ಕೆಂದಟ್ಟಿ ಮತ್ತು ಬನಹಳ್ಳಿಗಳು ಮುಖ್ಯವಾಗಿದ್ದು ನವಶಿಲಾಯುಗ-ಬೃಹತ್ ಶಿಲಾಯುಗ ಅವಧಿಯ ನಿವೇಶನಗಳನ್ನು ಒಳಗೊಂಡಿರುವ ಬನಹಳ್ಳಿ ನಿವೇಶನವು, ದಕ್ಷಿಣ ಭಾರತದಲ್ಲೇ ಅತಿದೊಡ್ಡದೆಂದು ಅಭಿಪ್ರಾಯ ಪಡಲಾಗಿದೆ. ಪಾಲಾರ್ ನದಿಯ ಮೇಲ್‌ದಂಡೆಗೆ ಬರುವ ಈ ಪ್ರದೇಶವನ್ನು ಬೆಟ್ಟದಬನಹಳ್ಳಿ ಎಂದೂ ಕರೆಯುತ್ತಾರೆ. ಈ ಬೆಟ್ಟ ಹಾಗೂ ಅಲ್ಲಿಗೆ ೧ ಕಿ. ಮೀ. ಅಂತರದಲ್ಲಿರುವ ಕುದ್ರೆನತ್ತ ಅಥವಾ ಗರನತ್ತ ಎಂಬಲ್ಲಿಯೂ ಅಸಂಖ್ಯಾತ ಕಲ್ಲಾಸರೆಗಳು ಇರುವುದನ್ನು ಪುರಾತತ್ವಜ್ಞರು ಗುರುತಿಸಿರುತ್ತಾರೆ. ಹಾಗಾಗಿ ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದ ಮಾನವನ ಚಟುವಟಿಕೆಗಳ ಆಗರವಾಗಿದ್ದಿತು ಎಂಬುದರಲ್ಲಿ ಸಂಶಯವಿಲ್ಲ. ಅಂತೆಯೇ ಈ ಶೋಧನೆಗಳಿಂದ ಶಾತವಾಹನ-ಪಲ್ಲವ ಪೂರ್ವದ ಜನವಸತಿಯ ಬಗ್ಗೆ ಈ ಪ್ರದೇಶ ಬೆಳಕು ಚೆಲ್ಲತೊಡಗಿದೆ. ಹಾಗಾಗಿ ಇದು ಅತಿಮುಖ್ಯ ಸಾಂಸ್ಕೃತಿಕ ಔನ್ನತ್ಯವನ್ನು ಕಂಡ ಪ್ರದೇಶವಾಗಿದ್ದಿತೆಂದು ಊಹಿಸಬಹುದಾಗಿದೆ.

ಪಶುಪಾಲನಾಕೃಷಿ ಹಂತದ ಸಂದರ್ಭದಲ್ಲಿ ತಮ್ಮ ಸಾಮರ್ಥ್ಯ ಪ್ರದರ್ಶಿಸಿ ಆರ್ಥಿಕವಾಗಿಯೂ ಶಕ್ತಿಶಾಲಿಗಳಾಗ ಬಯಸಿದ ಈ ಪ್ರದೇಶದಲ್ಲಿ, ಸ್ಥಳೀಯ ನಾಯಕರು ಬಹುಪ್ರಾಚೀನ ಕಾಲದಲ್ಲೇ ತುರುಗಳ ಅಪಹರಣವೇ ಮುಂತಾದವುಗಳನ್ನು ಆರಂಭಿಸಿರ

* ಜಿ ಬಿ ಜಿ - ೫೧೦, ೧೨ನೇ ಅಡ್ಡರಸ್ತೆ, ಎಚ್. ಎ. ಎಲ್. ನ್ಯೂಟೌನ್‌ಶಿಪ್, ಮಾರತ್ತಹಳ್ಳಿ, ಬೆಂಗಳೂರು - ೫೬೦ ೦೩೭



78°
79°
80°
14°
13°
ದಕ್ಷಿಣ ಮಧ್ಯಪೂರ್ವ ಭಾರತ
ಪುಲಿನಾಡು
ಕೈದುಂಬರು
ನೊಳಂಬವಾಡಿ
ಎಂಬಾಡಿ
ಪುಂಗನೂರು
ಮಂಗಳ
ಹೆಬ್ಬಣಿ
ಕರ್ಶನಪಲ್ಲೆ
ಬಂಗವಾಡಿ
ಪೆದ್ದವಲಗತ್ತೂರು
ಮಣಿಗಟ್ಟುಗೊಲ್ಲಪಳ್ಳಿ
ಕೋಳಾಲ
ಗಂಗವಾಡಿ
ವಡುಗವಟಿ ಪನ್ನಿರ್ಚ್ಛಾಸಿರ
ಪೆರ್ಬ್ಬಾಣವಾಡಿ
(ಬ್ಬಾಣರವಾಡಿ)
ಚಿತ್ತೂರು
ಪಾಲಾರ್
ಬಾಣಪುರಂ
ತಿರುವೇಂಗಡ
ತೊಂಡೈಮಂಡಲ
ತಿರುವಲ್ಲಂ
ಜಾವಡಿ ಬೆಟ್ಟಗಳು
ದಕ್ಷಿಣ ಪಿನಾಕಿನಿ
ತಗಡೂರು
N

ಬೇಕು. ಕಾಲಾಂತರದಲ್ಲಿ ಈ ರೀತಿಯ ಗೋಗ್ರಹಣವು ಯುದ್ಧಪೂರ್ವದ ಒಂದು ವಿಧಿಯಾಗಿ ವ್ಯಾಪಕವಾಗಿ ಬಳಕೆಯಾಗಿರುವುದು ಕಂಡುಬುತ್ತದೆ. ಹಾಗಾಗಿ ಈ ಪ್ರದೇಶದ ಮೂಲ ನಿವಾಸಿಗಳು ಪ್ರಧಾನವಾಗಿ ಪಶುಪಾಲನ ಹಂತದ ಕುಟುಂಬ ಜನರೇ ಆಗಿರಬೇಕು. ಕರ್ನಾಟಕದ ವೀರ ಜನಾಂಗಗಳಲ್ಲಿ ಬೇಡರಂತೆ ಕುರುಬರೂ ಮುಖ್ಯರಷ್ಟೆ. ತಮಿಳು ಸಂಗಂ ಸಾಹಿತ್ಯದ ಕೃತಿಗಳಾದ ತೊಲಕಾಪ್ಪಿಯಂ ಮತ್ತು ಅಹನಾನೂಱು ಕೃತಿಗಳಲ್ಲಿ ಬಂದಿರುವ ವಿವರಗಳ ಹಿನ್ನೆಲೆಯಲ್ಲಿ ಈ ಪ್ರದೇಶ ವಡಗರ ಪ್ರದೇಶವಾಗಿತ್ತೆಂದು ಹೇಳುಬಹುದಾಗಿದೆ. ವಡಗರು ಎಂದರೆ ಬಡಗರು=ಉತ್ತರದವರು ಎಂದು ಅರ್ಥ. ಇವರು ಉದ್ದನೆಯವರೆಂದೂ ತಮಿಳಿನಿಂದ ಭಿನ್ನವಾದ ಕಲ್ಲಾನೀಣ್‌ಮೊಟಿ ಯಲ್ಲಿ ಮಾತನಾಡುತ್ತಾರೆಂದು ಹೇಳಲಾಗಿದೆ. 'ವಡುಗರು' ಮೌರ್ಯರ ಸೇನಾಮುಖಿಗಳಾಗಿದ್ದರೆಂದು ಅದೇ ಕೃತಿಯಿಂದ ತಿಳಿದುಬರುತ್ತದೆ. ಹಾಗಾಗಿ ಈ ವಡಗರು ಅತ್ಯಂತ ಧೈರ್ಯಶಾಲಿಗಳಾಗಿದ್ದರು ಎಂದಂತಾಯಿತು.

ಈ ಪ್ರದೇಶವನ್ನು ಪುಲ್ಲಿಯೆಂಬುವನು ಆಳಿದನು. ಆತನನ್ನು ಕೊಳ್ಳವರ್-ಕೋಮಾನ್, ಕಲ್ಲಾವ್ ಇಳ್ಳೈಯಾರ್ ಪೆರುಮಗನ್ ಎಂದು ಮುಂತಾಗಿ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ಅನಂತರದ ಕಾಲದಲ್ಲಿ ಮುತ್ತುರಾಯರ್ ಎಂಬುವರು ಈ ಪ್ರದೇಶವನ್ನು ಆಳಿದರು. ಅವರೂ, ಮೇಲೆ ಉಕ್ತವಾದ 'ಪುಲ್ಲಿ' ಎಂಬುವನೂ ಕಳವರ್ ಎಂಬ ಬುಡಕಟ್ಟಿನವರೆಂದು ಗುರುತಿಸ ಲಾಗಿದೆ. ಇವರು 'ಪುಲ್ಲಿಕುನ್ಱಂ' ಎಂಬ ಬೆಟ್ಟಕ್ಕೆ ಸೇರಿದವರೆಂದು ಅಹನಾನೂಱು ಕೃತಿಯಲ್ಲಿ ಹೇಳಲಾಗಿದೆ. ಪುಲ್ಲಿಕುನ್ಱಂ ಯಾವುದು ಎಂಬುದನ್ನು ಖಚಿತವಾಗಿ ಗುರುತಿಸಬೇಕಾದ ಅಗತ್ಯವಿದೆ. ಪ್ರಾಯಶಃ ಮದನಪಲ್ಲಿ ಸಮೀಪದ 'ಪುಲಿಕೊಂಡ' (ಉ. ೭೮ಪ ೨೬' ಪೂ. ೧೩ಏಳ೨' ) ಎಂಬುದೇ ಇದಾಗಿರಬಹುದು. ಮುಂದೆ ಪಶ್ಚಿಮಕ್ಕೆ ಬಂದ ಇವರು ಕಲಿಕುಲದವರೆಂದು ಕರೆಯಿಸಿಕೊಂಡರು. ಕೊಳ್ಳವರ್ ಎಂಬುದರ ಅಪಭ್ರಂಶ ರೂಪವೇ ಕಳವರ್ - ಅದೇ ಮುಂದೆ ಕಳಭ್ರ ಮತ್ತು ಕಳಪ್ಪಿರರ್ ಎಂದಾಯಿತೆಂದು ತೋರುತ್ತದೆ. ಈ ಕಳಭ್ರರೆ ದಕ್ಷಿಣ ಭಾರತದ, ಅದರಲ್ಲೂ ತಮಿಳುನಾಡಿನ ಇತಿಹಾಸದಲ್ಲಿ ಅಲ್ಲೋಲ ಕಲ್ಲೋಲವೆಬ್ಬಿಸಿದ ಪ್ರಸಿದ್ಧ ಪ್ರಚಂಡ ವೀರರೆಂದು ನಾವು ಭಾವಿಸಬಹುದಾಗಿದೆ.

'ಮುತ್ತಾ' ಎಂದರೆ ಹಿರಿಯ ಅಥವಾ ಪೂರ್ವಿಕ ಎಂಬರ್ಥ ವಿದೆ. ಮುತ್ತುರಾಯರ್ ಅಂದರೆ ಮೂಲ ನಿವಾಸಿಗಳು ಎಂಬರ್ಥದ ಆದಿರಾಜರೆನ್ನಬಹುದು.

'ಪುಲಿನಾಡು' ಎಂಬುದು ಪುಲಿ+ನಾಡು ಎಂಬ ಎರಡು ಶಬ್ದಗಳಿಂದಾಗಿದೆ. ನಾಡು ಎಂದರೆ ಪ್ರದೇಶ. 'ಪುಲಿ' ಎಂಬುದಕ್ಕೆ ನಿಘಂಟುಗಳು ವಿವಿಧ ಅರ್ಥಗಳನ್ನು ನೀಡುತ್ತವೆ. ಪುಲಿ ಎಂಬುದರ ಸಾಮಾನ್ಯಾರ್ಥ ಹುಲಿ ಎಂದು ಕರೆಯುವ ಒಂದು ವನ್ಯಮೃಗ ವಿಶೇಷ. ಆದರೆ ಅದರ ಜ್ಞಾತಿ ಪದಗಳಾದ ಪುಲ್, ಪುಲಕ, ಪುಲಿಂದ, ಪುಲಿನ, ಪುಳಿ ಎಂಬುವಕ್ಕೆ ವಿಧವಿಧವಾದ ಅರ್ಥ ಗಳಿರುವುದು ಕಂಡುಬರುತ್ತದೆ.

ಪುಲ್=ಹುಲ್ಲು/ಕ್ಷುದ್ರವಸ್ತು, ಪುಲಕ=ರೋಮಾಂಚನ, ಪುಲಿಂದ=ಬೇಡ, ಕಿರಾತ; ಪುಲಿನ=ಉಸುಬು, ಮರಳಿನ ದಡ; ಪುಳಿ=ಹುಳಿ, ಹುಣಿಸೆ ಮರದ ತೋಪು ಎಂಬ ಅರ್ಥಗಳಿವೆ.

ಜಾನಾಂಗಿಕವಾಗಿ ವೀರ ಜನಾಂಗವಾದ 'ಪುಲಿಂದ' ಅಂದರೆ ಬೇಡರಿಂದ ಕೂಡಿದ ಪ್ರದೇಶವೇ? ಭೌಗೋಳಿಕವಾಗಿ ಪುಲಿನ =ಉಸುಬು, ಚೌಳುಪ್ಪುಗಳಿಂದ ಕೂಡಿದ ಪ್ರದೇಶವೇ? ನೈಸರ್ಗಿಕವಾಗಿ ಪುಳಿ=ಹುಣಿಸೆಮರ - ತೋಪುಗಳಿಂದ ಕೂಡಿರುವ ಪ್ರದೇಶವೇ? ಇಲ್ಲವೆ ಹಿಂದೆ ಉಲ್ಲೇಖಿಸಿದ ಕಳವರ್ ಜನಾಂಗದ 'ಪುಲ್ಲಿ' ಎಂಬ ನಾಯಕನ ಸ್ಮಾರಕವಾಗಿ ನೆಲೆನಿಂತ ನಾಡೇ 'ಪುಲಿನಾಡು'? ಎಂಬುದನ್ನು ಸದ್ಯಕ್ಕೆ ಖಚಿತವಾಗಿ ನಿರ್ಧರಿಸುವುದು ಕಠಿಣ. ಏಕೆಂದರೆ ಪುಲಿನಾಡಿನ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ಇಂದಿಗೂ ಹುಣಸೆಮರಗಳ ಆಧಿಕ್ಯವಿದೆ. ಉಸುಬಿನಿಂದ ಬಳೆ-ಕಬ್ಬಿಣ-ಕೈಗಾರಿಕೆಗಳು ಈ ಪ್ರದೇಶದಲ್ಲಿರುವುದನ್ನು ಮೇಲೆ ಪ್ರಸ್ತಾಪಿಸಿದೆ. ಇನ್ನೂ ಒಂದು ವಿಶೇಷವೆಂದರೆ ಈ ಪ್ರದೇಶದಲ್ಲಿ ಹುಲಿಸ್ಮಾರಕ ವೀರಗಲ್ಲುಗಳ ಹೆಚ್ಚಳ (ಬಹಳಷ್ಟು ಶಾಸನ ರಹಿತ) ಕೂಡ ಗಮನಾರ್ಹ ಸಂಗತಿಗಳಾಗಿವೆ. ಹೀಗಾಗಿ ಒಂದು ರೀತಿಯ ಸಂಕೀರ್ಣ ಸ್ಥಿತಿಗತಿಯನ್ನು ಪಡೆದಿರುವ 'ಪುಲಿನಾಡು' ಪ್ರದೇಶದ ನಾಮ ನಿಷ್ಪತ್ತಿ ಇದೇ ಎಂದು ಸದ್ಯಕ್ಕೆ ಖಚಿತವಾಗಿ ನಿರ್ಧರಿಸುವುದು ಕಷ್ಟಸಾಧ್ಯದ ಸಂಗತಿಯಾಗಿದೆ.

ಶಾತವಾಹನರ ಗೌತಮಿಪುತ್ರ ಶಾತಕರ್ಣಿಯ ನಾಸಿಕ ಶಾಸನದ ''ತಿ ಸಮುದ ತೋಯಪೇತ ವಾಹನಸ' ಎಂಬ ಮಾತಿನ ಹಿನ್ನೆಲೆಯಲ್ಲಿ, ಅವರು ಮೂರು ಸಮುದ್ರಗಳ ಅಂದರೆ ಇಡೀ ದಕ್ಷಿಣ ಭಾರತದ ಅಧಿಪತಿಗಳಾಗಿದ್ದರೆ? ಎಂಬುದು ಸಂಶಯಾಸ್ಪದ. ಪುಲಿನಾಡು ಪ್ರದೇಶ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೇ? ಎಂಬುದನ್ನು ಬಹಳ ಖಚಿತವಾಗಿ ಹೇಳುವುದು ಕಷ್ಟವಾಗುತ್ತದೆ. ಆದರೆ ಪಲ್ಲವರ ಕಾಲದಲ್ಲಿ ಈ ಪ್ರದೇಶ ಅವರ ನೇರ ಆಳ್ವಿಕೆಗೆ ಅಲ್ಲದಿದ್ದರೂ ಅವರ ಸಾಮಂತರ ಆಳ್ವಿಕೆಗೆ ಈ ಪುಲಿನಾಡು ಸೇರಿದ್ದಿರಬಹುದು. ಈ ಪ್ರದೇಶವನ್ನು ಆಗ್ಗೆ ಪೆರ್ಬಾಣ ವಂಶದ ರಾಜರು ಆಳುತ್ತಿದ್ದರು. ಪೆರ್ಬಾಣರು ಕದಂಬ ಮಯೂರಶರ್ಮನ ಅಧೀನಕ್ಕೊಳಪಟ್ಟಾಗ ಅವರನ್ನು ನಿಗ್ರಹಿಸಲು ಪಲ್ಲವರು ಗಂಗ ವಂಶದ ಕೊಂಗುಣಿವರ್ಮನನ್ನು ನೇಮಿಸಿದರೆಂದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ. ಶ. ೭ನೇ ಶತಮಾನದಲ್ಲಿ ಪಲ್ಲವರ ಮಾಂಡಲಿಕರಾದ ರೇನಾಡಿನ ಚೋಳರ ಆಳ್ವಿಕೆ ಪುಲಿನಾಡಿನ ಮೇಲೆ ಸ್ಥಾಪಿತಗೊಂಡಿತು. ಆಗ್ಗೆ ಬಾಣರು ವೈದುಂಬರ ಅಧೀನರಾಗಿ ಈ ಪ್ರದೇಶವನ್ನು ಆಳುತ್ತಿದ್ದರೆಂದು ತೋರುತ್ತದೆ.

ಕಾಲಾಂತರದಲ್ಲಿ ಗಂಗ, ಬಾಣ, ನೊಳಂಬ ಮತ್ತೆ ಗಂಗ ರಾಷ್ಟ್ರಕೂಟ, ರೇನಾಡು ಚೋಳ, ವೈದುಂಬರ ಆಳ್ವಿಕೆಗೆ ಈ ಪುಲಿನಾಡು ಒಳಪಟ್ಟು ಅಂತಿಮವಾಗಿ ಹತ್ತನೆಯ ಶತಮಾನದ ಕೊನೆಗೆ ಚೋಳರ ಆಕ್ರಮಣಕ್ಕೆ ಒಳಪಟ್ಟಿತು. ಆಗ ಪುಲಿನಾಡು *ಜಯಗೊಂಡ ಚೋಳಮಂಡಲದ ಪಡುವೂರ್ ಕೊಟ್ರಂಗೆ ಸೇರಿದ ಪೆರುಂಬಾಣಪಾಡಿಯ ಭಾಗವೆಂದು ಪರಿಗಣಿತವಾಯಿತು.* ಈ ನಾಡನ್ನು ಮಯಿಮನ ಪಲ್ಲವರೆಯರ್, ದೋಸಿ ಅರಸರ್, ಪೃಥ್ವೀ ಪತಿಯ ಮಗ ವಿಕ್ಕಿಯಣ್ಣ, ವಜ್ರದೇವ, ಚೋಳಮಹಾರಾಜ, ರಾಮರಸಯ್ಯ, ಕಾಡವಗಣಪತಿಯಾರ್, ಇರುಮಡಿ ಚೋಳ ಮೂವೇನ್ದ ವೇಳಾನ್, ಶಿವರಾಯ ಮುಂತಾದವರು ಮೇಲೆ ಹೇಳಿದ ಪ್ರಸಿದ್ಧ ಅರಸುಮನೆತಗಳ ಪ್ರತಿನಿಧಿಗಳಾಗಿ ಆಳಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಕ್ರಿಸ್ತಶಕ ಎಂಟನೆಯ ಶತಮಾನದ ಅನಂತರದಲ್ಲಿ ಕಂಡುಬಂದಿರುವ ಶಾಸನಗಳಲ್ಲಿ ಶೇಕಡ ೮೦ರಷ್ಟು; ವೀರಗಲ್ಲು ಶಾಸನಗಳಾಗಿದ್ದು, ಬಹುಮಟ್ಟಿಗೆ ಕನ್ನಡ ಭಾಷೆ ಯಲ್ಲಿಯೇ ಇವೆ. ಅವುಗಳಲ್ಲಿ ಹೆಚ್ಚಿನವು ತುರುಗಾಳಗಕ್ಕೆ ಸೇರಿದವಾಗಿರುವುದು ಗಮನಾರ್ಹ ಸಂಗತಿ. ಈ ವೀರಗಲ್ಲು ಶಾಸನಗಳ ಅಧ್ಯನದಿಂದ ದಕ್ಷಿಣ ಭಾರತದ ಇತಿಹಾಸದಲ್ಲಿ ಈ ಪುಲಿನಾಡು ಪ್ರದೇಶವು ಮಹತ್ವದ ಸ್ಥಾನಪಡೆದ್ದಿತೆಂಬುದನ್ನು ಕಂಡುಕೊಳ್ಳಬಹುದಾಗಿದೆ. ಈ ಪುಲಿನಾಡು ಮತ್ತು ಇದರ ಆಸುಪಾಸಿನ ಪ್ರದೇಶದಲ್ಲೇ ಮೇಲೆ ಉಲ್ಲೇಖಿಸಿದ ಸಾಮ್ರಾಜ್ಯ ಶಾಹಿ ಅರಸುಮನೆತನಗಳವರು ತಮ್ಮ ಅಧಿಕಾರ ಶಕ್ತಿಗಳನ್ನು ವಿಸ್ತರಿಸಲು - ಸ್ಥಾಪಿಸಲು ಹಲವು ನಿರ್ಣಾಯಕ ಘೋರ ಯುದ್ಧಗಳನ್ನು ನಡೆಯಿಸಿರುವುದು ಕಂಡುಬರುತ್ತದೆ. ಅಂತಹ ಯುದ್ಧಗಳಲ್ಲಿ 'ಪೆರ್ಮಾವಿ', 'ಮಿನುಕಿ', 'ಕೊಯಟ್ಟೂರು', 'ಸೊರೆಮಡಿ', 'ಮಂಗಲ', 'ತಕ್ಕೋಳ' ಮುಂತಾದ ಸ್ಥಳಗಳಲ್ಲಿ ನಡೆದ ಯುದ್ಧಗಳು ಮುಖ್ಯವಾದುವಾಗಿವೆ.

ಚೋಳರ ಅನಂತರದ ಕಾಲದಲ್ಲೂ, ಹೊಯ್ಸಳ, ವಿಜಯನಗರ, ಮರಾಠ, ಆರ್ಕಾಡು ನವಾಬ, ಹೈದರಾಲಿ, ಟಿಪ್ಪು ಬ್ರಿಟಿಷರ ಹಲವಾರು ಯುದ್ಧಗಳು ಈ ಪ್ರದೇಶದಲ್ಲೇ ನಡೆದಿರು ವುದು ಕಂಡುಬರುತ್ತದೆ. ಹಾಗಾಗಿ ಇದೊಂದು ಆಯಕಟ್ಟಿನ ಪ್ರದೇಶವಾಗಿದ್ದಿತೆಂದು ಹೇಳಬಹುದು.

ಈ ಮೇಲಿನ ವಿವರಣೆಯನ್ನು ಗಮನಿಸಿದರೆ ಪುಲಿನಾಡು ತನ್ನ ಇತಿಹಾಸದಲ್ಲಿ ಬಹುಕಾಲ ಯಾವೊಂದು ಅರಸು ಮನೆತನದ ಆಳ್ವಿಕೆಗೆ ದೀರ್ಘಕಾಲ ಅಧೀನವಾಗಿರುತ್ತಿದ್ದುದು ಕಂಡು ಬರುವು ದಿಲ್ಲ. ಇದಕ್ಕೆ ಮುಖ್ಯ ಕಾರಣ ಈ ಮೊದಲೇ ಹೇಳಿರುವಂತೆ ಸಾಮ್ರಾಜ್ಯಶಾಹಿ ಅರಸರ ಆಕ್ರಣಗಳು.

**ಯುದ್ಧ** : ಪಲಮನೇರು ತಾಲೂಕು ಕಲಗತ್ತೂರು, ಗ್ರಾಮದ ನೊಳಂಬಾದಿ ಅರಸನ ಶಾಸನವು ಗಂಗರಾಜನ ಆಜ್ಞೆಯ ಮೇರೆಗೆ ಪುಲಿನಾಡಿನ ಮೇಲೆ ಆಕ್ರಮಣ ನಡೆದು, **ಕಾಡುವೆಟ್ಟಿ** ಮತ್ತು ಮೃಡುವ ಎನ್ನುವವರು **ಪೆರ್ಮಾವಿ** ಎಂಬ ಊರನ್ನು ಆಕ್ರಮಿಸಿ ಸುಡುತ್ತಾರೆ. ಆಗ ಬಾಣರು ಅವರನ್ನು ಎದುರಿಸಿ ಕತ್ತಿಯುದ್ಧ ನಡೆದು ಆ ಸ್ಥಳವನ್ನು ಮರಳಿ ಪಡೆಯುತ್ತಾರೆ.

ಇಂತಹ ಯುದ್ಧಗಳು ಪೃಥ್ವೀಪತಿಯ ಮಗ ವಿಕ್ಕಿಯಣ್ಣ ಮತ್ತು ಪಲ್ಲವ ಧವಳ ಎಂಬುವರ ಮಧ್ಯೆ ನಡೆದ ಬಗ್ಗೆ ಕರ್ಶಪಲ್ಲೆ ವೀರಗಲ್ಲು ಶಾಸನ ತಿಳಿಸುತ್ತದೆ. ನೊಳಂಬರ ವಿರುದ್ಧ ವಾಣರಸರ ಆಜ್ಞೆಯ ಮೇರೆಗೆ ಕೆನ್ದಲೆಗ ಪೆರ್ಗ್ಗಂಗ ಮತ್ತು ಅವನ ಮಗ ದೇವಯ್ಯ ಎಂಬುವರು **ಮೀನುಕಿ** ಎಂಬಲ್ಲಿ ಹೋರಾಡಿ ಮಡಿದಾಗ ಬಾಣ ವಿದ್ಯಾಧರ ಮೆಚ್ಚಿ ಬಾಳ್ಗಲ್ಚು ದತ್ತಿ ನೀಡಿರುವ ವಿವರ ಬೂಡಿದೆಪಲ್ಲೆ ಶಾಸನದಿಂದ ತಿಳಿದುಬರುತ್ತದೆ. ಮೊದುಗಲಪಲ್ಲಿ ವೀರಗಲ್ಲು ಶಾಸನ ಕೊಂಗುಣಿ ಅರಸರ ಅಪ್ಪಣೆಯ ಮೇರೆಗೆ ನೊಳಂಬ ದೊರೆ ಪುಲಿನಾಡಿನ **ಕೊಯಟ್ಟೂರ**ನ್ನು ಆಕ್ರಮಿಸಿ ಕೊಂಡುದನ್ನು ತಿಳಿಸುತ್ತದೆ.

**ತುರುಗಾಳಗ** : ತುರುಗಾಳಗಕ್ಕೆ ಸಂಬಂಧಿಸಿದ ವೀರಗಲ್ಲುಗಳು ಬೋಡಿನಾಯಿನಿಪಲ್ಲಿ, ರಾಮಚಂದ್ರಾಪುರ, ಏಟೂರು, ವನಮಲ ದಿಣ್ಣೆ, ಬೈರಗಾನಪಲ್ಲಿ, ಸ್ಥಳಗಳಲ್ಲಿ ದೊರೆತಿದ್ದು ಕನ್ದತೂರು, ಮಂಗಲ, ಮುಂತಾದ ಸ್ಥಳಗಳಲ್ಲಿ ತುರುಗಾಳಗಗಳು ನಡೆದಿರು ವುದನ್ನು ದಾಖಲಿಸುತ್ತವೆ.

**ಊರಳಿವು** : ರಾಜೇಂದ್ರ ಚೋಳನ ಕ್ರಿ. ಶ. ೧೦೬೮ರ ಶಾಸನ ವನಮಲ ದಿಣ್ಣೆಯಲ್ಲಿದ್ದು ಎಡೆಯೂರು ಎಂಬ ಗ್ರಾಮದ ಊರಳಿವಿನ ಸಂದರ್ಭದಲ್ಲಿ ಪೊಲ್ಲೆಯ ಎಂಬುವನು ಮಡಿದದ್ದನ್ನು ದಾಖಲಿಸುತ್ತದೆ.

**ಕಲ್ನಾಡು ದತ್ತಿ** : ವೀರಗಲ್ಲುಗಳಿಗೆ ಸಂಬಂಧಿಸಿದಂತೆ 'ಕಲ್ನಾಡು' ಎಂಬ ದತ್ತಿಯನ್ನು ಕೊಡುವುದು ತಿಳಿದ ವಿಷಯವೇ. ಈ ಪ್ರದೇಶದ ಬೋಡಿನಾಯಿನಿಪಲ್ಲಿ, ರಾಮಚಂದ್ರಾಪುರ, ಕಲಗತ್ತೂರು, ಬೈರಗಾನಪಲ್ಲಿ ಸ್ಥಳಗಳಲ್ಲಿನ ವೀರಗಲ್ಲುಗಳಲ್ಲಿ 'ಕಲ್ನಾಡು', 'ಕಲ್ನಾಟು' ದತ್ತಿಯ ಪ್ರಸ್ತಾಪಬಂದಿದೆ. ಇಲ್ಲಿನ 'ಕಲ್ನಾಡು' ಎಂಬುದು ಕಲ್ಲನ್ನು ನೆಡು, ಸ್ಥಾಪಿಸು ಎಂಬ ಅರ್ಥದಲ್ಲಿ ಬಳಸಲಾಗಿದೆ. ಇದು ವೀರನಿಗೆ ದತ್ತಿಯಾಗಿ ನೀಡಿದ ಭೂಮಿಯಲ್ಲಿ ನೆಟ್ಟ ಶಾಸನಕಲ್ಲು, ದತ್ತಿಯನ್ನು ಸೂಚಿಸುತ್ತದೆ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ವೀರರಿಗೆ ದತ್ತಿ ನೀಡುವ ಸಂದರ್ಭದಲ್ಲಿ 'ನಾಟ್ಟುಕಲ್ಲು' ಎಂಬ ಪ್ರಯೋಗವಿದೆ. ಅದು ಇಲ್ಲಿ ನಾಟ್ಟುಕಲ್ಲು >ಕಲ್ನಾಟ್ಟು > ಕಲ್ನಾಡು > ಎಂದು ಪಲ್ಲಟವಾಗಿ ಬಳಕೆಗೆ ಬಂದಿರಬಹುದು. ಈ ರೀತಿ ಪಲ್ಲಟವಾಗುವುದು ಒಂದು ಭಾಷೆಯ ಇತಿಹಾಸದಲ್ಲಿ ಸಾಮಾನ್ಯ ಅಂಶವೆಂದು ಡಾ॥ ಆರ್. ಶೇಷಾಶಾಸ್ತ್ರಿ ಅವರು ತಮ್ಮ **ಕರ್ನಾಟಕದ ವೀರಗಲ್ಲುಗಳು** ಕೃತಿಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ.

**ಬಾಳ್ಗಲ್ಚು :** ವೀರರಿಗೆ ಬಾಳ್ಗಲ್ಚು ಗೌರವವನ್ನು ನೀಡಿರುವ ವಿವರ ಬೂಡಿದೆಪಲ್ಲಿ ವೀರಗಲ್ಲು ಶಾಸನದಿಂದ ತಿಳಿಯುತ್ತದೆ. 'ಬಾಳ್ಗಲ್ಚು' ಎಂದರೆ ಬಾಳನ್ನು (ಕತ್ತಿಯನ್ನು) ಕಚ್ಚುವುದು (ತೊಳೆಯುವುದು) ಎಂದರ್ಥ. ವೀರನೊಬ್ಬನು ಹೋರಾಟವೊಂದರಲ್ಲಿ ಹೋರಾಡಿದಾಗ ಆತನ ಖಡ್ಗಕ್ಕೆ ಅಂಟಿಕೊಂಡಿರುವ ರಕ್ತದ ಕಲೆಗಳನ್ನು ತೊಳೆಯುವುದರ ಮೂಲಕ ಆತನನ್ನು ಗೌರವಿಸಿ, ಆತನ ಸಾಹಸಕ್ಕೆ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನೀಡುವ ದತ್ತಿಯನ್ನು ಸೂಚಿಸುವಂತಹದಾಗಿದೆ.

**ದೇವದಾನಗಳು :** ಪುಲಿನಾಡನ್ನು ಪ್ರಸ್ತಾಪಿಸುವ ಬಹುತೇಕ ಶಾಸನಗಳು ವೀರಗಲ್ಲು ಶಾಸನಗಳೇ ಆಗಿದ್ದು ಅವೆಲ್ಲವೂ ಬಹುಮಟ್ಟಿಗೆ ೧೦ನೇ ಶತಮಾನದ ಒಳಗಿನವಾಗಿವೆ. ಹತ್ತನೆಯ ಶತಮಾನದ ಅನಂತರದ ಶಾಸನಗಳು ಬಹುಮಟ್ಟಿಗೆ ದೇವದಾನಗಳಿಗೆ ಸಂಬಂಧಿಸಿದವಾಗಿದ್ದು ಚೋಳ, ಹೊಯ್ಸಳ, ವಿಜಯನಗರ ಅರಸರ ಕಾಲಕ್ಕೆ ಸಂಬಂಧಿಸಿದವಾಗಿವೆ.

ಗುಡಿಯಾತ್ತಂ ತಾಲೂಕಿನ ಎಡಪಂಜಾಣಿಯ ಕಾಶೀ ವಿಶ್ವೇಶ್ವರ ದೇವಾಲಯ, ಯಾಟವಾಕಿಲಿಯ ಚಂದ್ರಮೌಳೀಶ್ವರ ದೇವಾಲಯ, (ಇರುಗೀಶ್ವರ ಮುಡ್ಡೆಯ ಮಹಾದೇವರ್‌ರಿಗೆ ಭೂದತ್ತಿ) ಪೆದ್ದನೆಗವರದ ಮಲ್ಲಿಕಾರ್ಜುನ ದೇವಾಲಯಗಳ (ನಂದಾ ದೀವಿಗೆಗೆ ಕೆರೆ ಕೆಳಗಣ ಭೂಮಿ ದತ್ತಿ) ದೇವರುಗಳಿಗೆ ಚೋಳರ ಕಾಲದಲ್ಲಿ ದತ್ತಿ ಬಿಟ್ಟಿರುವುದು ಕಂಡುಬರುತ್ತದೆ. ಹೊಯ್ಸಳರ ಹಾಗೂ ವಿಜಯನಗರ ಕಾಲದ ಶಾಸನಗಳು ಪುಲಿನಾಡಿನ ಪ್ರದೇಶದ ಗ್ರಾಮಗಳನ್ನೋ ಗ್ರಾಮಗಳ ಆದಾಯವನ್ನೋ ಕೋಲಾರದ ಬೆಟ್ಟದ ತೇರಹಳ್ಳಿಯ ಗಂಗಾಧರೇಶ್ವರ, ಸೀತಿಬೆಟ್ಟದ ಭೈರವೇಶ್ವರ ದೇವರಿಗೆ ಅಮೃತಪಡಿ, ನಂದಾದೀಪ ಮುಂತಾದ ಪೂಜಾ ಕೈಂಕರ್ಯಗಳಿಗಾಗಿ ದತ್ತಿ ಬಿಡಿಸಿರುವುದನ್ನು ದಾಖಲಿಸುತ್ತವೆ.

**ವಾಣಿಜ್ಯ :** ಪುಲಿನಾಡಿನ ಶಾಸನಗಳಲ್ಲಿ ವಾಣಿಜ್ಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ – ಬೆಳಕು ಚೆಲ್ಲುವ ಹಲವು ಶಾಸನಗಳಿದ್ದು ಬಳಿಗಾರನಾದ ರಾಮೇಶ್ವರಹರಪಲ್ಲಯ್ಯ, ಗವಜಿಸೆಟ್ಟಿಯ ಮಗ ಕರವಯ್ಯ ಎನ್ನುವವನಿಗೆ 'ಮುಮ್ಮಡಿ ಗವಜಿಪಲ್ಲವಾದಿತ್ಯ ನೊಳಂಬ ಸೆಟ್ಟಿ' ಎಂಬ ಹೆಸರನ್ನು ಕೊಟ್ಟು ಪಟ್ಟಕಟ್ಟುವ ವಿವರ ಬಂದಿದೆ. ಅಲ್ಲದೆ ಆತನಿಗೆ ಕುದುರೆ, ಕೊಡೆ ಕುಂಚ, ತಳಿಗೆ, ಅಡ್ಡಣಿಗೆ, ಗದ್ದಿಗೆ, ಆಳಪಣ್ಣುವಕೆ? ಕೀಲ್ಬಟ್ಟು? ಎಂಬ ರಾಜ ಚಿಹ್ನೆಗಳನ್ನು ನೀಡಿ ಗೌರವಿಸಿರುವುದು ಕಂಡು ಬರುತ್ತದೆ. ಅಲ್ಲದೆ ಪುಲಿನಾಡಿನ ಕೊಳತೂರನ್ನು ಪಲ್ಲವಾದಿತ್ಯಪುರವೆಂದು ಹೆಸರಿಟ್ಟು ಅದನ್ನು ನಕರವನ್ನಾಗಿ ಮಾಡಿ ವೈಶ್ಯದತ್ತಿಯಾಗಿ 'ನೊಳಮ್ಬ ಸೆಟ್ಟಿ'ಗೆ ದತ್ತಿ ನೀಡಲಾಗಿದೆ.

ಪೃಥ್ವೀರಾಮಸೆಟ್ಟಿ ಎಂಬ ವೀರನ ಪ್ರಸ್ತಾಪ ವಿಟೂರು ವೀರಗಲ್ಲಿನಲ್ಲಿ ಬಂದಿದೆ.

ಹೀಗೆ ಪುಲಿನಾಡು, ಒಂದು ಸಂಕೀರ್ಣವಾದ ಭೌಗೋಳಿಕ, ಪರಿಸರದ ಹಿನ್ನೆಲೆಯನ್ನು ಪಡೆದು, ಗಮನಾರ್ಹ ಪ್ರಾಗೈತಿಹಾಸಿಕ, ಚಾರಿತ್ರಿಕ ಮಹತ್ತವನ್ನು ಹೊಂದಿರುವ ಪ್ರದೇಶವಾಗಿದೆ. ಪ್ರಾಚೀನ ಕಾಲದಲ್ಲಿ ಈ ಪ್ರದೇಶವು ಅಚ್ಚಗನ್ನಡ ಪ್ರದೇಶವಾಗಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಈ ಅಂಶವನ್ನು ಅಲ್ಲಿನ ಶಾಸನಗಳು ದೃಢಪಡಿಸುತ್ತವೆ. ಈಗ ಪುಲಿನಾಡು ಪ್ರದೇಶವು ಸಾಂಸ್ಕೃತಿಕವಾಗಿ ಸಂಕೀರ್ಣತೆಯಿಂದ ಕೂಡಿರುವುದು ಒಂದು ವಿಶೇಷ ಸಂಗತಿಯಾಗಿದೆ. ಕನ್ನಡ, ತಮಿಳು ಮತ್ತು ತೆಲುಗು ಭಾಷೆಗಳ ಸಂಗಮ ಸ್ಥಾನ ಆದಾಗಿದೆ. ಈ ಎಲ್ಲಾ ಭಾಷೆ ಮತ್ತು ಸಂಸ್ಕೃತಿಗಳು ಪರಸ್ಪರ ಪ್ರಭಾವ ಬೀರಿ, ಒಂದು ರೀತಿಯ ವಿಶಿಷ್ಟ ವಿಭಿನ್ನ ರೀತಿಯ ವಾತಾವರಣ ಇಂದು ಅಲ್ಲಿ ತಲೆಯೆತ್ತಿರುವುದನ್ನು ನಾವು ಕಾಣಬಹುದಾಗಿದೆ. ಕಳೆದ ಶತಮಾನಗಳಲ್ಲಿ ಹೈದರ್-ಟಿಪ್ಪು ಆರ್ಕಾಡುನವಾಬ ಹಾಗೂ ಬ್ರಿಟೀಶರ ಮಧ್ಯ ನಡೆದ ಅನೇಕ ಯುದ್ಧಗಳಿಗೆ ಈ ಪ್ರದೇಶ ಆಡುಂಬೊಲವಾಗಿದ್ದಿತು. ಕ್ರೈಸ್ತ ಮಿಷಿನರಿಗಳ ಚಟುವಟಿಕೆಗಳೂ ಈ ಪ್ರದೇಶದಲ್ಲಿ ಪ್ರಬಲವಾಗಿ ನಡೆಯಿತು. ಇವೆಲ್ಲವೂ ಪರೋಕ್ಷವಾಗಿ ಅಲ್ಲಿನ ಇಂದಿನ ಸ್ಥಿತಿ ಗತಿಗಳಿಗೆ ಕಾರಣವಾಗಿವೆ.

## ಆಧಾರ ಸೂಚಿ


*ಎಪಿಗ್ರಾಫಿಯಾ ಕರ್ನಾಟಿಕ,* ಸಂಪುಟ X, (ಕೋಲಾರ ಜಿಲ್ಲೆಯ ಶಾಸನಗಳು), ಬೆಂಗಳೂರು, ೧೯೦೫

ಆರ್. ಶೇಷಶಾಸ್ತ್ರಿ; *ಕರ್ನಾಟಕದ ವೀರಗಲ್ಲುಗಳು,* ಕ. ಸಾ. ಪ., ಬೆಂಗಳೂರು, ೧೯೮೩

Madras Dristrict Manuals, ***North Arcot,*** Madras, 1894

C. Krishnamurthy., *Banahalli - A Neolithic site,* ***Archaeology in Karnataka,*** (Ed). A. Sundara, Mysore, 1990

M. D. Sampath., ***Chittoor through the Ages,*** Delhi, 1980

K. A. Neelakantasastry., ***A History of South India, Madras, 1955***

***South Indian Inscriptions*** , Vol. IX

***Annual Reports on Indian Epigraphy,*** 1894 onwards

ಎಸ್. ಪರಶಿವಮೂರ್ತಿ *

# ಮಗರ ಮುನ್ನೂರು

ಕರ್ನಾಟಕದಲ್ಲಿ ಆಳಿದ ರಾಜ ಮನೆತನಗಳಲ್ಲಿ ಬನವಾಸಿಯ ಕದಂಬರು, ತಲಕಾಡ ಗಂಗರು, ಬಾದಾಮಿ ಚಾಳುಕ್ಯರು, ಮಾಳಖೇಢದ ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು, ದೋರಸಮುದ್ರದ ಹೊಯ್ಸಳರು, ದೇವಗಿರಿಯ ಯಾದವರು, ವಿಜಯನಗರದ ಅರಸರು ಪ್ರಮುಖರು. ಈ ರಾಜ ಮನೆತನಗಳ ಆಳ್ವಿಕೆಯ ಕಾಲದಲ್ಲಿ ಅವರ ಸಾಮಂತರಾಗಿದ್ದು, ಅವರ ಉನ್ನತಿಗೆ ಅವನತಿಗೆ ಕಾರಣರಾದ ಕೆಲವು ಮಹಾಮಂಡಳೇಶ್ವರರು, ಸಾಮಂತರು ಹಲವರಿದ್ದಾರೆ. ಅವರಲ್ಲಿ ಬಾಣರು, ನೊಳಂಬರು, ಗೋವೆಯ ಕದಂಬರು, ಹಾನುಗಲ್ಲು ಕದಂಬರು, ಉಚ್ಚಂಗಿ ಪಾಂಡ್ಯರು, ನಿಡಗಲ್ಲು ಚೋಳರು, ಕಲಚೂರಿಗಳು ಮುಖ್ಯರು, ಇವರಲ್ಲದೆ ಇನ್ನೂ ಕೆಲವು ಸಾಮಂತರು, ತುಂಡರಸರು ಇವರಷ್ಟೇ ಪ್ರಾಮುಖ್ಯತೆ ಪಡೆದಿದ್ದರೂ ಅವರ ಬಗ್ಗೆ ದಾಖಲೆಗಳು ಅಸ್ಪಷ್ಟ; ಕೆಲವರ ಬಗ್ಗೆ ದುರ್ಲಭವೆಂದೇ ಹೇಳಬೇಕು. ದೊರೆಯುವ ಅಸ್ಪಷ್ಟ ದಾಖಲೆಗಳ ಸಹಾಯದಿಂದ ಚಿಕ್ಕಪುಟ್ಟ ಸಾಮಂತರ ಬಗ್ಗೆ ಇರುವ ಶಾಸನ, ಸಾಹಿತ್ಯ ಮತ್ತು ವಾಸ್ತುಶಿಲ್ಪಗಳನ್ನು ಉಪಯೋಗಿಸಿ ಕೊಂಡು ಅವರು ಆಳುತ್ತಿದ್ದ ಪ್ರದೇಶ, ಅವರ ಅಧಿರಾಜರುಗಳಿಗೆ ನೀಡುತ್ತಿದ್ದ ಸಹಾಯ, ಸಹಕಾರ, ಅಡಚಣೆಗಳ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಿದರೆ ಇತಿಹಾಸದ ಎಷ್ಟೋ ವಿವಾದಗ್ರಸ್ಥ ವಿಷಯಗಳ ಮೇಲೆ ಬೆಳಕು ಬೀಳುವ ಸಾಧ್ಯತೆ ಇದೆ.

ಪ್ರಸ್ತುತ ಮಗರ ಮುನ್ನೂರು, ಇಂತಹ ಪ್ರಯತ್ನಗಳಲ್ಲೊಂದು. ಪ್ರಾರಂಭದಲ್ಲಿ ಮಗರ ರಾಜ್ಯದ ಉಲ್ಲೇಖ ತಲಕಾಡು ಗಂಗರ ನಾಲ್ಕನೇ ರಾಜಮಲ್ಲನ ಕೆರೆಗೋಡಿ ರಂಗಾಪುರದ ತಾಮ್ರ ಶಾಸನದಲ್ಲಿ ಸಿಕ್ಕುತ್ತದೆ. *೧ ಈ ಶಾಸನದಲ್ಲಿ ನೀರ್ಗುಂದ ನಾಡಿನ ಜೊತೆಯಲ್ಲಿ 'ಮಗರ ವಿಷಯದ' ಆಲೂರು ಗ್ರಾಮವನ್ನು *'ವಿಳಯಕಾರನ್ ತ್ರಿಮೂರ್ತಿ ತ್ರಿಪುರಹರ ವಿಹಿತ ನೇತ್ರ ಶಿವಾಚಾರ್ಯ'* ನೆಂಬುವನಿಗೆ ದಾನ ಕೊಟ್ಟಿರುವ ವಿಷಯ ತಿಳಿದು ಬರುತ್ತದೆ. ಈ ಶಾಸನದ ಕಾಲ ೪ನೇ ರಾಜಮಲ್ಲನ ಕಾಲವಾದ ಕ್ರಿ. ಶ. ೯೭೫. ಅನಂತರ ಮಗರ ರಾಜ್ಯದ ಹೆಸರು ಹೊಯ್ಸಳರ ಕಾಲದಲ್ಲಿ 'ಮಗರ ಮುನ್ನೂರು' 'ಮಗಧ ಮುನ್ನೂರು' ಎಂದು ಕಾಣಿಸಿಕೊಳ್ಳುತ್ತದೆ. 'ಮಗಧ ಎಂಬ ಶಬ್ದದಿಂದ' 'ಮಗರ' ಎಂಬುದು ಬಂದಿದೆಯೋ ಅಥವಾ ಲಿಪಿಕಾರನ ದೋಷದಿಂದ ಆದುದೋ ತಿಳಿಯದು. ಆದರೆ ಶಾಸನಗಳಲ್ಲಿ ಹೆಚ್ಚು ಬಾರಿ 'ಮಗರ' ಎಂಬ ಶಬ್ದವೇ ಇರುವುದರಿಂದ ಅದೇ ಸರಿಯಾದ ಹೆಸರಿರಬೇಕು. *೨ ಮಗರ ರಾಜ್ಯದ ವ್ಯಾಪ್ತಿಯು ಇಂದಿನ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಪೂರ್ಣಭಾಗ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೋಕಿನ ಪೂರ್ವಭಾಗ, ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೋಕಿನ ಪಶ್ಚಿಮ ಭಾಗಗಳನ್ನು ಒಳಗೊಂಡಿದ್ದ ಪ್ರದೇಶವಾಗಿತ್ತೆಂದು ಆರ್. ನರಸಿಂಹಾಚಾರ್ ರವರು ಅಭಿಪ್ರಾಯ ಪಡುತ್ತಾರೆ. *೩

ಕೆಲವು ವಿದ್ವಾಂಸರು, 'ಮಗರ' ಶಬ್ದ 'ಮಗಧ'ದಿಂದಲೇ ಬಂದಿದೆ ಎಂದು ಹೇಳಿ ಉತ್ತರಭಾರತದ ಇತಿಹಾಸದಲ್ಲಿ ನವನಂದನರನ್ನು ಮೌರ್ಯರು ಹೊರದೂಡಿದ ಮೇಲೆ ನವನಂದರಿಗೆ ಸೇರಿದ್ದ ಎಲ್ಲಾ ಪ್ರದೇಶಗಳು ಮೌರ್ಯರ ವಶಕ್ಕೆ ಬಂದವು; ಅವುಗಳಲ್ಲಿ ಕುಂತಳವೂ ಸೇರಿತ್ತು. ಮೌರ್ಯ ವಂಶಸ್ಥನೋ ಅವರ ಅಧಿಕಾರಿಯೋ ಕುಂತಳದಲ್ಲಿ ಉಳಿದು ಮಗಧ ರಾಜ್ಯ ಸ್ಥಾಪನೆ ಮಾಡಿದ ಸಾಧ್ಯತೆಗಳಿವೆ ಎಂದು ಹೇಳುತ್ತಾರೆ. *೪ ಆದರೆ 'ಮಗಧ' ಎಂಬುದು 'ಮಗರ' ಆಗುವ ಸಾಧ್ಯತೆಗಳ ಬಗ್ಗೆ ಅನುಮಾನ ಉಳಿಯುತ್ತದೆ. ಭಾಷಾ ಶಾಸ್ತ್ರಗಳು. ಈ ಪದದ ಉಗಮದ ಬಗ್ಗೆ ಬೆಳಕು ಚೆಲ್ಲಬೇಕು. ಈ ಪದ ಹೀಗೆಯೇ ಬಂದಿದೆ ಎಂದು ಹೇಳಲು ಆಧಾರಗಳು ಸಾಲದು. ಹೊಯ್ಸಳರು ಹೊಂದಿರುವ 'ಮಗರರಾಜ್ಯ ನಿರ್ಮೂಳನ' ಎಂಬ ಬಿರುದು, 'ಪಾಂಡ್ಯ ದಿಸಾಪಟ್ಟ' 'ಕಾಡವರಾಯನ ಬೆಂಕೊಂಡ', 'ಚೋಳ ರಾಜ್ಯ ಪ್ರತಿಷ್ಠಾಚಾರ್ಯ' ಎಂಬ ಪ್ರಶಸ್ತಿಗಳೊಂದಿಗೆ ಬಂದಿರುವುದರಿಂದ ಮಗರಿಗರಿಗೂ, ತಮಿಳು ನಾಡಿಗೂ ಸಂಬಂಧ ಇರಬಹುದೇ? 'ಮಗರ ವಿಷಯ'

---

* ಮೇಲಣ ಮಠ, ಅರಸೀಕೆರೆ - ೫೭೩ ೧೦೩

ಗಂಗವಾಡಿ ೯೬,೦೦೦ ಪ್ರದೇಶಕ್ಕೆ ಸೇರಿದ್ದು ಅನಂತರ ನೊಳಂಬವಾಡಿ ೩೨,೦೦೦ ಪ್ರದೇಶಕ್ಕೆ ಸೇರಿರುವುದು ಕಂಡುಬರುತ್ತದೆ. ಹಂಜೇರಿನಲ್ಲಿ ನೊಳಂಬರು ಕ್ರಿ. ಶ. ೯೭೪ ರ ಹೊತ್ತಿಗೆ ಗಂಗರಾಜ ಮಾರಸಿಂಹನಿಂದ ಸೋತು ತಮ್ಮ ನಿಷ್ಠೆಯನ್ನು ಕಲ್ಯಾಣಿ ಚಾಲುಕ್ಯರಿಗೆ ವರ್ಗಾಯಿಸಿ ತಮ್ಮ ರಾಜಧಾನಿಯನ್ನು ಕಂಪಿಲಿಗೆ ಬದಲಾಯಿಸಿದರು. ಈ ವೇಳೆಗೆ ಮಗರ ರಾಜ್ಯ ಕಲ್ಯಾಣಿ ಚಾಲುಕ್ಯರ ಅಧೀನದಲ್ಲಿದಿದ್ದುದು ಕಂಡುಬರುತ್ತದೆ.* ಮಗರ ರಾಜ್ಯದ ರಾಜಧಾನಿ 'ಹುಳಿಯೇರು', ಇಂದಿನ ಚಿಕ್ಕನಾಯಕನಹಳ್ಳಿ ತಾಲ್ಲೋಕಿನಲ್ಲಿರುವ ಹುಳಿಯಾರು, ಆಗಿದ್ದು ಅದರ ಅಧಿಪತಿಗಳ ಮೂಲ ಪುರುಷ 'ಸ್ಥಿರ ಗಂಭೀರ' ಎಂದು ಚಿಕ್ಕನಾಯಕನ ಹಳ್ಳಿ ಶಾಸನ ಹೇಳುತ್ತದೆ.* ಆದರೆ ಅದೇ ತಾಲ್ಲೋಕು ಮುದ್ದೇನಹಳ್ಳಿ ಶಾಸನ ಹುಳಿಯೇರು ನಾಡಿನ ಅರಸರ ಮೂಲಪುರುಷ 'ಬ್ರಹ್ಮ' ಅಥವ 'ಕರಿಬೊಮ್ಮ' ಎಂದು ಹೇಳುತ್ತದೆ. ಆರ್. ನರಸಿಂಹಾಚಾರ್‌ರವರು 'ಸ್ಥಿರ ಗಂಭೀರ' ಎಂಬುದು ವ್ಯಕ್ತಿಯ ಹೆಸರಲ್ಲ. ನೊಳಂಬರಿಗಿದ್ದ ಬಿರುದುಗಳಲ್ಲೊಂದು ಎಂದು ಅಭಿಪ್ರಾಯ ಪಡುತ್ತಾರೆ.* ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೋಕಿನ 'ಕಣಕಟ್ಟೆ' ಶಾಸನ ಸ್ಥಿರ *ಗಂಭೀರ* ನೊಳಂಬನ ಪಿರಿಯರಸಿ 'ಶ್ರೀ ನಾರಿಯನ್ನು' ಶತ್ರುಗಳು ಬಂದಿಯಾಗಿ ಕೊಂಡೊಯ್ಯುತ್ತಿದ್ದಾಗ ಬ್ರಹ್ಮನು ಶತ್ರುಗಳನ್ನು ಕೊಂದು ಪಟ್ಟದರಸಿಯನ್ನು ಬಿಡಿಸಿಕೊಂಡು ಬಂದನೆಂದು ಹೇಳಿದೆ.* 'ಸ್ಥಿರ ಗಂಭೀರ' ಎಂಬ ಹೆಸರು ಮಗರ ರಾಜ್ಯವನ್ನು ಆಳುತ್ತಿದ್ದವರಿಗೂ ಅನ್ವಯವಾಗುವುದರಿಂದ ಮಗರ ವಂಶಸ್ಥರಿಗೂ ನೊಳಂಬರಿಗೂ ಏನಾದರೂ ಸಂಬಂಧವಿದ್ದಿತೇ?

ಚಿಕ್ಕನಾಯಕನಹಳ್ಳಿ ತಾಲ್ಲೋಕಿಗೆ ಸೇರಿದ ಮುದ್ದೇನಹಳ್ಳಿ ಕಲ್ಲೇಶ್ವರ ದೇವಸ್ಥಾನದ ಶಾಸನದಲ್ಲಿ ಹೊಯ್ಸಳ ಸಾಮಂತ ಲಕುಮಯ್ಯನಾಯಕನ ವಂಶಾವಳಿಯನ್ನು ಹೇಳುವಾಗ ಈ ವಂಶದ ಮೂಲ ಪುರುಷ 'ಬ್ರಹ್ಮ' ಅಥವ 'ಕರಿಬೊಮ್ಮ' ಎಂದು ಹೇಳಿದೆ. ಈತನು ಚಾಳುಕ್ಯ ಚಕ್ರವರ್ತಿ 'ಆಹವಮಲ್ಲ' ನಿಂದ 'ಉಗ್ರಾರಿ ತಳಪ್ರಹಾರಿ' ಎಂಬ ಬಿರುದನ್ನು 'ವೀರ ನೊಳಂಬ ಪರಮೇಶ್ವರನ ಪಿರಿಯರಸಿ 'ಶ್ರೀ ನಾರಿಯನ್ನು' ಶತ್ರುಗಳು ಕೊಂಡೊಯ್ಯುತ್ತಿದ್ದಾಗ ಶತ್ರುಗಳನ್ನು 'ತಳಪ್ರಾಹಾರದಿಂದ ಕೊಂದು ಪಿರಿಯರಸಿಯನ್ನು ತಂದೊಪ್ಪಿಸಿದ್ದಕ್ಕೆ ಈ ಬಿರುದನ್ನು ಪಡೆದನು. ಈ ಶಾಸನದಲ್ಲಿ ಉಲ್ಲೇಖಿಸಿರುವ 'ವೀರ ನೊಳಂಬ ಪರಮೇಶ್ವರ' ಬಹುಶಃ 'ತ್ರೈಲೋಕ್ಯ ನನ್ನಿ ನೊಳಂಬ' ನಾಗಿರಬೇಕು. ಆಹವಮಲ್ಲ ೧ನೇ ಸೋಮೇಶ್ವರ. ನನ್ನಿ ನೊಳಂಬನು ಆಹವಮಲ್ಲನ ಬಂಧುವು ಹಾಗೂ ಸಾಮಂತನೂ ಆಗಿದ್ದುದರಿಂದ ಮಗರ 'ಬ್ರಹ್ಮ'ನಿಗೆ 'ಉಗ್ರಾರಿ ತಳಪ್ರಹಾರಿ' ಎಂಬ ಬಿರುದನ್ನು ಕೊಡಿಸಿರಬೇಕು. ಅನಂತರ ಈ ಬ್ರಹ್ಮನು ಚಾಳುಕ್ಯ ಸೈನ್ಯದಲ್ಲಿ ದೊಡ್ಡಂಕವನ್ನು ಗೆದ್ದುದರಿಂದ 'ದೊಡ್ಡಂಕ ಬಡಿವ' ಎಂಬ ಬಿರುದನ್ನು ಆಹವಮಲ್ಲನಿಂದ ಪಡೆದನು. ಈ ಶಾಸನದಲ್ಲಿ ಮಗರರಾಜ್ಯದ ಅಧಿಪತಿಗಳ ವಂಶಾವಳಿಯನ್ನು ವಿವರವಾಗಿ ಕೊಡಲಾಗಿದೆ.




ಈ ಶಾಸನ ಮಗರ ಮೂನ್ನೂರನ್ನು ಆಳುತ್ತಿದ್ದ ಅರಸರ ವಂಶಾವಳಿಯನ್ನಷ್ಟೇ ಅಲ್ಲ ಸಾಮಂತ ಚಟ್ಟನ ಮತ್ತು ಸಾಮಂತ ಲಕುಮಯ್ಯ ನಾಯಕನ ಸಾಮಂತರ ವಂಶಾವಳಿಯನ್ನು ಕೂಡ ಕೊಟ್ಟಿದೆ.

***ಸಾಮಂತ ಬಿಟ್ಟಿದೇವನ ಸಾಮಂತ ಹೆಗ್ಗಡೆ ಬೀಚಣನ ವಂಶಾವಳಿ:***

ಅರಸೀಕೆರೆಯ ಕಾಳಗೌಡ + ಕೆಂಚಗೌಡಿ
|
ಕರಿಯಮಗೌಡ + ಕೇತಗೌಂಡಿ
|
ಕಾಳಗೌಂಡ
|
ಹೆಗ್ಗಡೆ ಬೀಚಣ + ಹೋಚಲಾಂಬಿಕೆ
|
ಹೆಗ್ಗಡೆ ಗೋಪ

***ಸಾಮಂತ ಲಕುಮಯ್ಯನಾಯಕನ ಸಾಮಂತ ಚಿಕ್ಕ ಚಂಡೆಯ ಮುದೇನಾಯಕನ ವಂಶಾವಳಿ :***

ಜಕ್ಕೆಯ ನಾಯಕ + ಮಾರವ್ವೆನಾಯಕಿತಿ
|
ಹಿರಿಯ ಚಂಡೆಯ ಮುದೇನಾಯಕ + ಮಾರಲೆ ನಾಯಕಿತಿ
|
ಚಿಕ್ಕ ಚಂಡೆಯ ಮುದೇನಾಯಕ

ಮೇಲೆ ಕೊಟ್ಟಿರುವ ಮಗರ ರಾಜ್ಯವನ್ನಾಳಿದ ರಾಜರುಗಳ ವಂಶಾವಳಿಯಲ್ಲಿ ಬರುವ ಬ್ರಹ್ಮ, ಅಹವಮಲ್ಲ, ಸಾಮಂತ ಭೀಮ ಇವರುಗಳು ಕಲ್ಯಾಣಿ ಚಾಳುಕ್ಯರ ಸಾಮಂತರಾಗಿದ್ದುದು. ತಿಳಿದು ಬರುತ್ತದೆ. ಸಾಮಂತ ಭೀಮನ ಕಾಲದಲ್ಲಿ ಇವರು ಹೊಯ್ಸಳ ವಿಷ್ಣುವರ್ಧನನ ಸಾಮಂತರಾದರು. ಇವರು ಹೊಯ್ಸಳರ ಸಾಮಂತರಾಗಿದ್ದರೂ ಕೂಡ ಹೊಯ್ಸಳ ೨ನೇ ನರಸಿಂಹನ ಕಾಲಕ್ಕೆ ಹೊಯ್ಸಳರು 'ಮಗರ ರಾಜ್ಯ ನಿರ್ಮೂಳನ' ಎಂಬ ಬಿರುದು ಹೊಂದಿದ್ದಕ್ಕೆ ಕಾರಣ ತಿಳಿಯದು.*

ಕ್ರಿ. ಶ. ೧೧೭೦ರ ವೇಳೆಗೆ ಚಾಳುಕ್ಯ ಸಾಮ್ರಾಜ್ಯದ ಭಾಗಗಳನ್ನು ದೇವಗಿರಿಯ ಯಾದವರು ಮತ್ತು ಹೊಯ್ಸಳರು ಆಕ್ರಮಣ ಮಾಡಿ ಆದಷ್ಟು ಪ್ರದೇಶಗಳನ್ನು ತಮ್ಮ ರಾಜ್ಯಗಳಿಗೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ಮಗರಿಗಳಲ್ಲಿ ಕೆಲವರು ದೇವಗಿರಿಯಾದವರ ಪಕ್ಷ ವಹಿಸಿರುವಂತೆ ಕಾಣುತ್ತದೆ. ದೇವಗಿರಿಯಾದವ ದೊರೆ ೫ನೇ ಬಿಲ್ಲಮನು ಹೊಯ್ಸಳ ೨ನೇ ಬಲ್ಲಾಳನ ಮೇಲೆ ಅನೇಕ ಬಾರಿ ದಂಡೆತ್ತಿ ಬಂದು ಸೋಲನ್ನು ಅನುಭವಿಸಿರುವುದು ತಿಳಿದು ಬರುತ್ತದೆ. ಕ್ರಿ. ಶ. ೧೧೮೭ರ ದಕ್ಷಿಣ ಸೊಲ್ಲಾಪುರ ತಾಲ್ಲೋಕಿನ 'ಮಂಡ್ರೂಪ್'ನ ಶಾಸನದಲ್ಲಿ.*೧೦ 'ಮಗರ ರಾಮ' 'ಖೆಯಿದೇವ'ನು – ಈ ಹೆಸರು ಬಿಜಾಪುರ ಜಿಲ್ಲೆಯ ಶಾಸನಗಳಲ್ಲಿ 'ಸೋಯಿದೇವ' ಎಂದಿದೆ. ೫ನೇ ಭಿಲ್ಲಮನ ಸಾಮಂತನಾಗಿ ಆಳುತ್ತಿದ್ದುದು ತಿಳಿದು ಬರುತ್ತದೆ. ಇವನ ಪತ್ನಿ ಹಂಸಲಾದೇವಿ ಇವರ ಮಕ್ಕಳು ಲಕ್ಷ್ಮೀದೇವ, ಪೆಜ್ಜಣ, ಸಂಗಮ ದೇವ ಮತ್ತು ಖೆಯಿಸಹಾಣಿ ಅಥವ ಸೋಯಿಸಹಾಣಿ ಇವರೆಲ್ಲಾ ಭಿಲ್ಲಮನ ಮಗ ಜೈತುಗಿ ಮತ್ತು ಮೊಮ್ಮಗ ಸಿಂಘಣನಲ್ಲಿ ಮಹಾಪ್ರಧಾನರು, ಸಾಮಂತರು, ಸಾಹಣಿಗಳಾಗಿದ್ದಂತೆ ಶಾಸನಗಳಿಂದ ತಿಳಿದು ಬರುತ್ತದೆ. ಇವರೆಲ್ಲರೂ ತಮ್ಮನ್ನು 'ಮಗರ ಮುರಾರಿ' 'ಮಕರಧ್ವಜ' ಎಂದು ಕರೆದುಕೊಂಡಿರುವುದು ಸೋಲ್ಲಾಪುರ ಮತ್ತು ಬಿಜಾಪುರ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಾಗಿದೆ. ಇದೇ ಶಾಸನದಲ್ಲಿ ೫ನೇ ಭಿಲ್ಲಮನಿಗೆ 'ಸಿತಗರ ಬಲಾಡ್ಯ' ಎಂಬ ಬಿರುದು ಇರುವುದು ಮತ್ತು ಮಗರ ಬ್ರಹ್ಮನ ವಂಶದವರಿಗೆ 'ಸಿತಗರ ಗಂಡ' ಎಂಬ ಬಿರುದು ಇರುವುದನ್ನು ಗಮನಿಸಿದರೆ ಇವರು ಸಿತಗರ ಬಲವನ್ನು ನಾಶ ಮಾಡಿದರೆಂದು ಊಹಿಸಬಹುದು. ಈ ಬಿರುದನ್ನು ಮಗರ ಭೀಮನಿಗೆ 'ಸಿತಗರನ್ನು ಪಡಿದು ಕೊಂದದ್ದಕ್ಕೆ' ಹೊಯ್ಸಳ ವಿಷ್ಣುವರ್ಧನನು ಕೊಟ್ಟಂತೆ ಶಾಸನದಲ್ಲಿ ಹೇಳಿದೆ.*೧೧ ಈ ಸಮಯದಲ್ಲಿ ಮಗರಿಗರು ಹೊಯ್ಸಳರ ಸಾಮಂತರಾಗಿದ್ದು ದೇವಗಿರಿಯಾದವರ ಸಾಮಂತರಾಗಿದ್ದಿರಬಹುದಾದ ಸಿತಗರನ್ನು ಸೋಲಿಸಿರಬೇಕು. ಆದರೆ ೨ನೇ ಬಲ್ಲಾಳನ ಕಾಲಕ್ಕೆ ಇವರು ದೇವಗಿರಿ ಯಾದವರ ಸಾಮಂತರಾಗಿ ಬದಲಾಗಿರಬೇಕು. 'ಮಂಡ್ರೂಪ್' ಶಾಸನದ ಖೆಯ್ಮದೇವನ ಮಗ ಲಕ್ಷ್ಮೀದೇವನು ಸಿಂಘಣನ ಮಹಾಪ್ರಧಾನ ನಾಗಿದ್ದಾಗ ಅವನು ಮತ್ತು ಅವನ ಅಧಿಕಾರಿಗಳು ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಈ ಲಕ್ಷ್ಮೀದೇವನಿಗೆ 'ಗಂಡತಲ ಪ್ರಹಾರಿ' 'ರಿಪುಗಂಡ ಕುತೂಹಳ ಕಾಲದಂಡ' 'ಮಾಂಡಳಿಕ ಮುಖದರ್ಪಣ' 'ಹೊಯ್ಸಳ ಬೇಂಟೆಕಾರ' 'ಚಾವುಂಡ ಸಿರ ಪ್ರಘಟ್ಟ ಕುಳೀಶಂ' ಎಂಬ ಪ್ರಶಸ್ತಿಗಳು ಇದೇ ಶಾಸನದಲ್ಲಿ ಕಂಡು ಬರುತ್ತದೆ. ಇವನ ತಮ್ಮದಿರಿಗೆ 'ಮಗರ ಮುರಾರಿ' 'ರಿಪು ಸಂಹರಣ ಗಂಧವಾರಣ' 'ಮಕರ ಧ್ವಜ' ಮುಂತಾದ ಬಿರುದುಗಳು ಇದ್ದುವು. ಮಗರ ಮುರಾರಿ ಸಂಗಮದೇವನನ್ನು 'ಶಿವಪಾದ ಪಯೋರುಹ ಭ್ರಿಂಗ', ಮಗರ ಮುರಾರಿ ವಿಜ್ಜಣನನ್ನು 'ಭೂರಿಭುಜಪ್ರತಾಪ' 'ಖೆಯಿಸಹಾಣಿ' ಯನ್ನು 'ಮಕರಾಗ್ರಣಿ' ಎಂದು ಕರೆದಿರುವುದು ಕಂಡು ಬರುತ್ತದೆ.*೧೨ ಈ ಬಿರುದುಗಳಲ್ಲಿ 'ಹೊಯ್ಸಳ ಬೇಂಟೆಕಾರ' ಎಂಬ ಬಿರುದು ಇವರಿಗೆ ಹೊಯ್ಸಳಗ ಮೇಲಿದ್ದ ಹಗೆತನವನ್ನು ಎತ್ತಿ ತೋರಿಸುತ್ತದೆ. ಆದರಂತೆ ಹೊಯ್ಸಳರು ಹೊಂದಿದ್ದ 'ಮಗರ ರಾಜ್ಯ ನಿರ್ಮೂಳನ' ಎಂಬ ಬಿರುದು ಇವರನ್ನು ಕುರಿತದ್ದೇ ಇರಬೇಕು. ಈ ಮಗರಿಗಳು ಹೊಯ್ಸಳರ ಪ್ರತಿಸ್ಪರ್ಧಿಗಳಾದ ದೇವಗಿರಿ ಯಾದವರನ್ನು ಕೂಡಿಕೊಂಡು ಹೊಯ್ಸಳ ರಾಜ್ಯದ ಮೇಲೆ ಧಾಳಿ ಮಾಡಿ ತಮ್ಮ ದ್ವೇಷವನ್ನು ತೀರಿಸಿಕೊಂಡಿರುವಂತೆ ಕಾಣುತ್ತದೆ. ಈ ಶಾಸನದ ಕಾಲ ಕ್ರಿ. ಶ. ೧೧೮೮ ಈ ವೇಳೆಗಾಗಲೇ ಮಗರಿಗಳು ಹೊಯ್ಸಳರ ಶತ್ರುಗಳಾಗಿದ್ದು ಹೊಯ್ಸಳರಿಂದ ಇವರ ರಾಜ್ಯ

* [ಹೊಯ್ಸಳರು ನಿರ್ಮೂಲ ಮಾಡಿದ 'ಮಗರ ರಾಜ್ಯ' 'ಮುಗದೈಮಂಡಲ' ಎಂಬುದು ತಮಿಳುನಾಡಿನ ಇಂದಿನ ಧರ್ಮಪುರಿ, ಸೇಲಂ ಮತ್ತು ದ. ಆರ್ಕಾಡು ಜಿಲ್ಲಾ ಪ್ರದೇಶವಾದ ಹಲವು ಭಾಗಗಳನ್ನು ಒಳಗೊಂಡಿತ್ತು – (ಸಂ.)]

ನಿರ್ಮೂಲವಾಗಿರಬೇಕು. ಈ ಕೆಲಸ ಹೊಯ್ಸಳ ೧ನೇ ನರಸಿಂಹನ ಕಾಲದಲ್ಲೋ ಅಥವ ೨ನೇ ಬಲ್ಲಾಳನ ಕಾಲದಲ್ಲೋ ನಡೆದಿರಬೇಕು.

ಸೊಲ್ಲಾಪುರ ಜಿಲ್ಲೆಯ ಅನೇಕ ಶಾಸನಗಳಲ್ಲಿ ಖಿಯ್ಯಿದೇವನ ಹೆಸರು ಕಂಡು ಬರುತ್ತದೆ. ಇದೇ ಕಾಲದಲ್ಲಿ ಸೊಲ್ಲಾಪುರ ಜಿಲ್ಲೆಗೆ ಹೊಂದಿಕೊಂಡಿರುವ ಬಿಜಾಪುರ ಜಿಲ್ಲೆಯ ಶಾಸನಗಳಲ್ಲಿ ಮಗರ ಮುರಾರಿ ಸೋಯಿದೇವ, ಸೋಯಿದೇವರಸ, ಸೋಯಿದೇವನಾಯಕ ಎಂಬ ಹೆಸರುಗಳ ಉಲ್ಲೇಖ ಇರುವುದರಿಂದ*[೧೩] ಮತ್ತು ಆ ಕಾಲದಲ್ಲಿ ಸೋಯಿದೇವ ಎಂಬ ಹೆಸರು ಹೆಚ್ಚು ಪ್ರಚಲಿತವಾಗಿದ್ದು ಸೊಲ್ಲಾಪುರ ಜಿಲ್ಲೆಯ ಶಾಸನಗಳಲ್ಲಿ ಕಂಡು ಬರುವ ಖೆಯ್ಯಿದೇವ ಎಂಬ ಹೆಸರು ಸೋಯಿದೇವ ಎಂಬ ಹೆಸರಿನ ರೂಪಾಂತರವಿರ ಬಹುದೇ? ಅಥವಾ ಅದೇ ವಂಶದ ಬೇರೊಬ್ಬನ ಹೆಸರೇ? ಹೇಳುವುದು ಕಷ್ಟ ಆದರೂ ಅವನ ಕಳಚೂರ್ಯ ನಿರ್ಮೂಳನ, ಯಾದವ ರಾಜ್ಯ ಪ್ರತಿಷ್ಠಾಪನಾ, ಹೊಯ್ಸಳದಿಸಾಪಟ್ಟ ಎಂಬ ಪ್ರಶಸ್ತಿಗಳನ್ನು ಗಮನಿಸಿದರೆ*[೧೪] ಸೋಯಿದೇವ ಎಂಬ ಹೆಸರೇ ಖೆಯ್ಯಿದೇವ ಎಂದು ಆಗಿರುವ ಸಾಧ್ಯತೆಗಳಿವೆ. ಈ ಮಗರಿಗರ ಉಲ್ಲೇಖ ಪುನಃ ಧಾರವಾಡ ಜಿಲ್ಲೆಯ ಹಾವೇರಿ ತಾಲ್ಲೋಕಿನ ಹತ್ತಿಮತ್ತೂರು ಗ್ರಾಮದಲ್ಲಿ ದೊರೆತಿರುವ ಹದಿಮೂರನೇ ಶತಮಾನಕ್ಕೆ ಸೇರಿರಬಹುದಾದ ಶಾಸನದಲ್ಲಿ 'ಮಗರ ಮೂರಾರಿ ಮಾದರಸ' ಎಂಬುವವನ ವಿಷಯ ಪ್ರಸ್ತಾಪವಾಗಿದೆ. ಮತ್ತು ಕಾಲ ನಿರ್ದೇಶನವಿಲ್ಲದ ಮತ್ತೊಂದು ಶಾಸನ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೋಕಿನ ತಾಳಗುಂದ ಹೋಬಳಿಯ ಬಂದಳಿಕೆ ಗ್ರಾಮದಲ್ಲಿರುವ ವೀರಭದ್ರದೇವರ ದೇವಸ್ಥಾನದ ಮುಂದಿರುವ ವೀರಗಲ್ಲಿನಲ್ಲಿ ಬಹುಶಃ ಹೊಯ್ಸಳ ಸಾಮಂತನೊಬ್ಬನ 'ಬೆಸದಿಂ ಮಗರ ಬೂವಣ' ಹಲವರನ್ನು ತಿವಿದು ಕೆಲಸವರನ್ನು ಕೊಂದು ಸುರಲೋಕ ಪ್ರಾಪ್ತನಾದ ವಿಷಯ ಬರುತ್ತದೆ. ಇದರ ನಂತರ ಮಗರಿಗರ ವಿಷಯ ಪ್ರಸ್ತಾಪವಾದ ಶಾಸನಗಳು ದೊರೆತಂತೆ ಕಾಣುವುದಿಲ್ಲ.

ಸೊಲ್ಲಾಪುರ ಜಿಲ್ಲೆಯ 'ಮಂಡ್ರೂಪ್' ಶಾಸನದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೇ ದೇವಗಿರಿಯಾದವ ೬ನೇ ಭಿಲ್ಲಮನಿಗೆ 'ವಿಂಯು ಕುಲ ಕುಂಜರ ಮೃಗೇಂದ್ರ' ಎಂಬ ಪ್ರಶಸ್ತಿ ಇದೆ. ಹೊಯ್ಸಳ ರಾಜ ೩ನೇ ಬಲ್ಲಾಳನ ಕಾಲದಲ್ಲಿ ಮಗರ ಮುನ್ನೂರರ ರಾಜಧಾನಿ ಹುಳಿಯೇರಿನಲ್ಲಿ 'ವಿಂಯು ದೇವರಾಣೆ' 'ಎಂಬುವವನು ೩ನೇ ಬಲ್ಲಾಳನ ಸಾಮಂತನಾಗಿ ಆಳುತ್ತಿದ್ದದ್ದು ತಿಳಿದು ಬರುತ್ತದೆ. ಈತನಿಗೆ 'ಪೊದೆಯರಾಯ ವಿಂಯು ದೇವರಾಣೆ' ಎಂಬ ಹೆಸರಿದ್ದು ಈತನು ವಿಂಯು ಕುಲಕ್ಕೆ ಸೇರಿದವನು ಮಗರಿಗರು ಹೊಯ್ಸಳರನ್ನು ಬಿಟ್ಟು ದೇವಗಿರಿಯಾದವರನ್ನು ಸೇರಿದಂತೆ ವಿಂಯು ಕುಲದವರು ಯಾದವರನ್ನು ಬಿಟ್ಟು ಹೊಯ್ಸಳರನ್ನು ಸೇರಿ ದೇವಗಿರಿ ಯಾದವರ ಮೇಲೆ ಸೇಡು ತೀರಿಸಿಕೊಂಡಂತೆ ಕಾಣುತ್ತದೆ. ಈ ವಿಂಯು ಕುಲದ ಮೂಲ ಯಾವುದೋ ತಿಳಿಯದು. ಸೊಲ್ಲಾಪುರ ತಾಲ್ಲೋಕಿನ ಕುಂಬರಗಾವೆ ಕರಪಣದ ಲನಂದೂರು ಮುನ್ನೂರು 'ತೀರ್ಥದ ಎಕ್ಕುರುಕದ ರಾಮೇಶ್ವರ ದೇವರಿಗೆ*[೧೫] ಚಾಳುಕ್ಯ ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಕ್ರಿ. ಶ. ೧೦೮೨ರಲ್ಲಿ ತೀರ್ಥದ ಎಕ್ಕುರುಕದ ರಾಮೇಶ್ವರ ದೇವರ ಪ್ರಧಾನ ಅರ್ಚಕ ಲಾಕುಳ ಶೈವ ವಿಮಲಶಕ್ತಿ ಪಂಡಿತದೇವರಿಗೆ ಗ್ರಾಮವನ್ನು ದತ್ತಿಯಾಗಿ ಇವನ ಸಾಮಂತ ಕಲಚುರಿ ಜೋಗಮನು ಕೊಟ್ಟಿರುವ ವಿಷಯ ಎರಡು ಶಾಸನಗಳಲ್ಲಿ ಉಲ್ಲೇಖವಾಗಿದೆ.*[೧೬] ಇಲ್ಲಿ ಗಮನಿಸಬೇಕಾದ ವಿಷಯ 'ತೀರ್ಥ' ಎಂಬ ಊರು. ಇದು ಸೊಲ್ಲಾಪುರ ಜಿಲ್ಲೆಯಲ್ಲಿ ಇಂದೂ ಇರುವುದು. ಪ್ರಸ್ತುತ ಮಗರ ಮೂನ್ನೂರ ರಾಜಧಾನಿ ಹುಳಿಯಾರಿನ ಸಮೀಪದಲ್ಲಿ ತೀರ್ಥ, ತೀರ್ಥಪುರ ಎಂಬ ಊರು ಮತ್ತು ತೀರ್ಥರಾಮೇಶ್ವರ ದೇವರ ದೇವಾಲಯವಿದೆ – ಇದೇ ತೀರ್ಥಪುರ ಕನ್ನಡದ ಶ್ರೇಷ್ಠ ವಿದ್ವಾಂಸರ ಲ್ಲೊಬ್ಬರಾದ ತೀ.ನಂ. ಶ್ರೀಕಂಠಯ್ಯನವರ ಜನ್ಮಸ್ಥಳ – ಈ ತೀರ್ಥ ರಾಮೇಶ್ವರ ಚಿಕ್ಕನಾಯಕನ ಹಳ್ಳಿಯಲ್ಲಿ ಆಳುತ್ತಿದ್ದ ನಾಯಕರುಗಳ (ಪಾಳೆಯಗಾರರು) ಮನೆದೇವರಾಗಿದ್ದು ಅವರ ಆರಾಧ್ಯದೈವವಾಗಿದ್ದದ್ದು ತಿಳಿದು ಬಂದಿದೆ. ಇದರ ಸಮೀಪದಲ್ಲಿಯೇ ಗೋಡೆಕೆರೆ ಎಂಬ ಗ್ರಾಮದಲ್ಲಿ ಶಿವಯೋಗಿ ಸಿದ್ಧರಾಮೇಶ್ವರನ ಸ್ಮಾರಕವಿದೆ. 'ತೀರ್ಥ', ತೀರ್ಥ ರಾಮೇಶ್ವರ ಮತ್ತು ಶಿವಯೋಗಿ ಸಿದ್ಧರಾಮೇಶ್ವರನ ಸ್ಮಾರಕಗಳನ್ನು ಮಗರ ವಂಶದ ರಾಜರುಗಳು ದೇವಗಿರಿ ಯಾದವ ರಾಜ್ಯ ಮುಸಲ್ಮಾನರ ಧಾಳಿಗೆ ತುತ್ತಾಗಿ ನಾಶವಾದ ನಂತರ ಪುನಃ ದಕ್ಷಿಣಕ್ಕೆ ವಲಸೆ ಬಂದು ತಮ್ಮ ಮೂಲಸ್ಥಳವನ್ನು ಸೇರಿದ ಮೇಲೆ ನಿರ್ಮಿಸಿ ಕೊಂಡಿರಬೇಕು. ಸೊನ್ನಲಿಗೆ ಶಿವಯೋಗಿ ಸಿದ್ಧರಾಮೇಶ್ವರನು ಪ್ರಾರಂಭದಲ್ಲಿ ಲಾಕುಳಶೈವನಾಗಿದ್ದು ಅನಂತರ ವೀರಶೈವನಾಗಿ ಮಾರ್ಪಟ್ಟ ವಿಷಯವನ್ನು ಗಮನಿಸಿದರೆ, ಲಾಕುಳಶೈವ ಪರಂಪರೆಯ ತೀರ್ಥದ ರಾಮೇಶ್ವರ ಸೊನ್ನಲಿಗೆಯ ಸಮೀಪದಲ್ಲೇ ಇರುವುದನ್ನು ಗಮನಿಸಿದರೆ ಇದೇ ಪರಂಪರೆಗೆ ಶಿವಯೋಗಿ ಸಿದ್ಧರಾಮೇಶ್ವರ ಸೇರಿದವನಾಗಿದ್ದನೆಂದು ಊಹಿಸಬಹುದು.

ಈ ಎಲ್ಲಾ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ಮಗರ ರಾಜ್ಯದ ರಾಜಧಾನಿ ಹುಳಿಯಾರು ಅಥವಾ ಹುಳಿಯೇರಿನ ಸುತ್ತ ಮುತ್ತ ಇರುವ ಗ್ರಾಮಗಳಲ್ಲಿ ದೊರೆಯುವ ಶಾಸನಗಳನ್ನು ಸೊಲ್ಲಾಪುರ ಜಿಲ್ಲೆಯ ಶಾಸನಗಳೊಂದಿಗೆ ವಿಮರ್ಶಿಸಿದರೆ ಏಳುವ ಪ್ರಶ್ನೆಗಳಿವು:

೧) *ಮಗರಿಗರು ಯಾರು? ಇವರಿಗೂ ತಮಿಳು ಮೂಲದ ಪಾಂಡ್ಯರು, ಚೋಳರು ಕಾಡವರಿಗೂ ಇದ್ದ ಸಂಬಂಧವೇನು?*

೨) *ಮಗರಿಗರು ನೊಳಂಬವಾಡಿ ಪ್ರದೇಶದಲ್ಲಿದ್ದು, ನೊಳಂಬ ರೊಂದಿಗೆ ಚಾಳುಕ್ಯ ರಾಜ್ಯದಲ್ಲಿ ಸೇರಿ ಅವರ ಸಾಮಂತ*

ರಾಗಿದ್ದರು. ನೊಳಂಬರಿಗೂ, ಮಗರಿಗರಿಗೂ ಸಂಬಂಧವಿತ್ತೆ? ಇದ್ದರೆ ಎಂಥಾ ಸಂಬಂಧ?

೩) ಸೊಲ್ಲಾಪುರ ಜಿಲ್ಲೆಯ ಶಾಸನಗಳಲ್ಲಿ ಕಂಡುಬರುವ ಮಗರಿಗರು 'ಶ್ರೀ ಸಿದ್ಧನಾಥ ದೇವರಿಗೆ' ''ಶ್ರೀ ತೀರ್ಥದ ರಾಮೇಶ್ವರ ದೇವರಿಗೆ, ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೆ'' ದಾನ ದತ್ತಿಗಳನ್ನು ನೀಡಿರುವುದನು ಗಮನಿಸಿದರೆ, ಅವರು ಶಿವಯೋಗಿ ಸಿದ್ಧರಾಮೇಶ್ವರನ ಪ್ರಭಾವಲಯದಲ್ಲಿ ಬಂದಿರುವುದು ತಿಳಿದು ಬರುತ್ತದೆ. ಮಗರ ರಾಜ್ಯದ ರಾಜಧಾನಿ ಹುಳಿಯಾರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಶಿವಯೋಗಿ ಸಿದ್ಧರಾಮೇಶ್ವರನ ಸ್ಮಾರಕಗಳು ತೋರುಗದ್ದುಗೆಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು ಕರ್ನಾಟಕದ ಯಾವ ಭಾಗದಲ್ಲೂ ಇಷ್ಟು ಸ್ಮಾರಕಗಳು ಒಂದೇ ಪ್ರದೇಶದಲ್ಲಿಲ್ಲ. ಈ ಎರಡು ಪ್ರದೇಶಗಳಿಗೂ ಸಂಬಂಧವಿರಬಹುದೇ?

೪. ಸೊನ್ನಲಿಗೆಯ ಶಿವಯೋಗಿ ಸಿದ್ಧರಾಮೇಶ್ವರ, ಅದೇ ಪ್ರದೇಶದಲ್ಲಿರುವ ತೀರ್ಥರಾಮೇಶ್ವರ ಮತ್ತು ಚಿಕ್ಕ ನಾಯಕನಹಳ್ಳಿ ತಾಲ್ಲೋಕಿನಲ್ಲಿರುವ ತೀರ್ಥಪುರ, ತೀರ್ಥರಾಮೇಶ್ವರ, ಶಿವಯೋಗಿ ಸಿದ್ಧರಾಮೇಶ್ವರನ ಸ್ಮಾರಕಗಳಿಗೂ ಸಂಬಂಧವಿರಬಹುದೇ?

೫. ತೀರ್ಥಪುರದ ಪರಿಸರದಲ್ಲಿರುವ ಯರೆಕಟ್ಟೆ ಎಂಬಲ್ಲಿ ರಾಜ್ಯ ಸ್ಥಾಪನೆಮಾಡಿದ ಚಿಕ್ಕನಾಯಕನಹಳ್ಳಿ ನಾಯಕರುಗಳು ಮತ್ತು ಹಾಗಲವಾಡಿ ನಾಯಕರುಗಳು ತೀರ್ಥ ರಾಮೇಶ್ವರನ ಮತ್ತು ಶಿವಯೋಗಿ ಸಿದ್ಧರಾಮೇಶ್ವರನ ಪರಮ ಭಕ್ತರಾಗಿರುವುದು, ಮಗರ ರಾಜ್ಯವಾಳಿದ ಮಗರಿಗರ ವಂಶದವರೇ ಇರಬಹುದೇ?

೬. ಕರ್ನಾಟಕದ ಪಾಳೆಯಗಾರರಲ್ಲಿ ಮಹಾನಾಡ ಪ್ರಭುಗಳೆಂದು ಹೆಸರಾದ ಮಧುಗಿರಿಯ ಪಾಳೆಯಗಾರರು ಸೊನ್ನಲಿಗೆಯ ಸಿದ್ಧರಾಮೇಶ್ವರ ಆಶೀರ್ವಾದ ಪಡೆದು ಒಂದು ರಾಜ್ಯ ಸ್ಥಾಪನೆ ಮಾಡಿದರೆಂಬ ಹೇಳಿಕೆಯ ಬಗ್ಗೆ ವಿಚಾರ ಮಾಡಿದರೆ ಇವರಿಗೂ ಮಗರಿಗರಿಗೂ ಸಂಬಂಧವಿರಬಹುದೇ? ಅಥವಾ ಸೊನ್ನಲಿಗೆಯಿಂದ ಬಂದು ನೆಲಸಿದ ಮಗರಿಗರು ಇವರೇ ಇರಬಹುದೇ?

ಈ ವಿಷಯಗಳ ಬಗ್ಗೆ ಸಮಗ್ರ ಸಂಶೋಧನೆ ನಡೆದರೆ ಹಲವು ಪ್ರಶ್ನೆಗಳಿಗೆ ಉತ್ತರ ದೊರೆಯಬಹುದು ಮತ್ತು ಸಾಮಂತ ರಾಜ ಮನೆತನಗಳ ಚರಿತ್ರೆಯ ತಪ್ಪಿದ ಎಳೆಗಳು ಸಿಕ್ಕಬಹುದು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. ಇಸಿ ವಾಲ್ಯೂಂ ೧೪ ಸಪ್ಲಿಮೆಂಟರಿ ಇನ್‌ಸ್ಕ್ರೀಪಷನ್ ನಂ. ೧೪೦, ತಿಪಟೂರು ತಾಲ್ಲೋಕು, ಕೆರೆಗೋಡಿ ರಂಗಾಪುರದ ಪರದೇಶಿಕೇಂದ್ರ ಸ್ವಾಮಿಗಳ ಮಠದ ತಾಮ್ರಶಾಸನ

*೨. ಇಸಿ ವಾಲ್ಯೂಂ ೧೪, ಸಪ್ಲಿಮೆಂಟರಿ ಇನಸ್ಕ್ರೀಪಷನ್ ನಂ. ೫೮, ೬೨, ೭೦, ಚಿಕ್ಕನಾಯ್ಕನಹಳ್ಳಿ ತಾಲ್ಲೋಕು

*೩. ಅರ್ಕಿ. ಸರ್ವೆ ಆಫ್ ಮೈಸೂರು, ವಾರ್ಷಿಕ ವರದಿ ೧೯೧೦-೧೯೧೧, (ಸಂ) ಆರ್. ನರಸಿಂಹಾಚಾರ್

*೪. ಈ ವಿಷಯವನ್ನು ನನ್ನ ಗಮನಕ್ಕೆ ತಂದವರು ಖ್ಯಾತ ಶಾಸನತಜ್ಞ ಶ್ರೀ ಸೀತಾರಾಮ ಜಾಗೀರ್‌ದಾರ್‌ರವರು

*೫. ಇಸಿ. ವಾಲ್ಯೂಂ ೧೪ ಸ.ಇನ್.ನಂ. ೬೨ ಚಿಕ್ಕನಾಯಕನಹಳ್ಳಿ ತಾಲ್ಲೋಕು, ಮುದ್ದೇನಹಳ್ಳಿ ಶಾಸನ, ಕಲ್ಲೇಶ್ವರ ದೇವಾಲಯದಲ್ಲಿರುವ ಶಾಸನ

*೬. ಇಸಿ ೯, ಸಿ. ಕೆ. ೨೧, ಚಿಕ್ಕನಾಯಕನಹಳ್ಳಿ ಶಾಸನ

*೭. ಇಸಿ ೫, ನಂ. ೫೫, ಅರಸೀಕೆರೆ ತಾಲ್ಲೋಕು, ಕಣಕಟ್ಟೆ ಶಾಸನ

*೮. ಇಸಿ ವಾಲ್ಯೂಂ ೧೪, ನಂ. ೯೮, ಚಿಕ್ಕನಾಯಕನಹಳ್ಳಿ

*೯. ಅದೇ ನಂ. ೬೨

*೧೦. ಡಾ॥ ಶ್ರೀನಿವಾಸ ರಿತ್ತಿ ಮತ್ತು ಆನಂದ ಕುಂಬಾರ : ಇನ್. ಫ್ರಮ್ ಸೊಲ್ಲಾಪುರ ಡಿಸ್ಟ್ರಿಕ್ಟ್ ನಂ. ೨೩

*೧೧. ಇಸಿ ೫, ಅರಸೀಕೆರೆ ತಾ॥ ಕಣಕಟ್ಟೆ ಶಾಸನ., ನಂ. ೫೫

*೧೨. ಡಾ॥ ಶ್ರೀನಿವಾಸ ರಿತ್ತಿ, ಆನಂದ ಕುಂಬಾರ : ಇನ್‌ಸ್ಕ್ರಿಪಷನ್ ಫ್ರಂ ಸೊಲ್ಲಾಪುರ ಡಿಸ್ಟ್ರಿಕ್ಟ್ ನಂ. ೨೩

*೧೩. ಸೌ. ಇಂಡಿಯನ್ ಇನ್‌ಸ್ಕ್ರಿಪ್ಷ್‌ನ್ ಶಾಸನ ಸಂಖ್ಯೆ ೧೮೦ ವಾ. ೨೦, ಕಡಲೇವಾಡ ಸಿಂದಗಿ ತಾಲ್ಲೋಕು, ಬಿಜಾಪುರ ಜಿಲ್ಲೆ.

*೧೪. ಅದೇ ನಂ. ೧೮೩ ವಾ. ೨೦ ನಾಡ, (ಕಾರಾಡ್) ಇಂಡಿ ತಾಲ್ಲೋಕು, ಬಿಜಾಪುರ ಜಿಲ್ಲೆ

*೧೫. ಡಾ॥ ಶ್ರೀನಿವಾಸ ರಿತ್ತಿ ಮತ್ತು ಆನಂದ ಕುಂಬಾರ : ಅದೇ, ನಂ. ೪, ತೀರ್ಥ, ಸೌತ್ ಸೊಲ್ಲಾಪುರ

*೧೬. ಅದೇ, ನಂ. ೧, ಕಳಚುರಿಯರ ಜೋಗಮನ ಆಳ್ವಿಕೆಯ ಕಾಲ ೧೧೮೨

ಎಸ್. ಕೆ. ಮೇಲಾಕಾರ *

# ಕುಳಿಗೇರಿ : ಒಂದು ಅಗ್ರಹಾರ ಭತ್ತಗ್ರಾಮ-ಘಟಿಕಾಸ್ಥಾನ - ಒಂದು ಟಿಪ್ಪಣಿ

ಗುಲಬರ್ಗಾ ಜಿಲ್ಲೆಯ ಜೆವರ್ಗಿ ತಾಲೂಕಿನ ಕೃಷ್ಣಾ ಭೀಮಾ ನದಿಗಳ ಮಧ್ಯ ದೋ ಅಬ್ ಪ್ರದೇಶದಲ್ಲಿ ಬರುವ **ಕುಳಿಗೇರಿ** ಜೆವರ್ಗಿಯಿಂದ ನೈಋತ್ಯಕ್ಕೆ ೫೫ ಕಿ. ಮೀ. ಶಹಾಪೂರದಿಂದ ೪೦ ಕಿ. ಮೀ. ಸಿಂದಗಿಯಿಂದ ಆಗ್ನೇಯಕ್ಕೆ ೪೨ ಕಿ.ಮೀ. ದೂರದಲ್ಲಿ ಸಿಂದಗಿ ಶಹಾಪೂರ ರಸ್ತೆಯಲ್ಲಿ ನಾಗರಹಳ್ಳಿ ತಾಂಡಾ ಅಡ್ಡ ರಸ್ತೆಯಿಂದ ನೈಋತ್ಯಕ್ಕೆ ಸು. ೪ ಕಿ. ಮೀ. ಅಂತರದಲ್ಲಿ ಬರುವ ಚಾರಿತ್ರಿಕ ಮಹತ್ವದ ಊರಾಗಿದೆ. [*೧]

ಪ್ರಸ್ತುತದಲ್ಲಿ ೨೬ ಶಾಸನಗಳು ಗಮನಕ್ಕೆ ಬಂದಿದ್ದು ಅದರಲ್ಲಿ ೨೪ ಶಾಸನಗಳು ಕಲ್ಯಾಣ ಅರಸರ ಕಾಲದವುಗಳಾಗಿದ್ದು ೨ ಯಾದವರ ಕಾಲದ ಶಾಸನಗಳಾಗಿವೆ. ಈ ಶಾಸನಗಳ ಆಧಾರಿತವಾಗಿ ಪ್ರಾಚೀನ ಕರ್ನಾಟಕದಲ್ಲಿ ಕುಳಿಗೇರಿಯೂ ಸಹ ಒಂದು ಅಗ್ರಹಾರ - ಬತ್ತಗ್ರಾಮ-ಮಹಾಘಟಿಕಾಸ್ಥಾನವಾಗಿ ಕೀರ್ತಿ ಪಡೆದಿತ್ತು ಎಂದು ಪರಿಚಯಿಸುವುದೇ ಈ ಪ್ರಬಂಧದ ಉದ್ದೇಶವಾಗಿದೆ.

## ಕುಳಿಗೇರಿಯ ಸ್ಥಳನಾಮ

ಶಾಸನಗಳಲ್ಲಿ ಕುಳಿಗೇರಿಯನ್ನು ಕುಣೆಲಂಗೆರೆ, ಕುಣಿಯ ಲಂಗೆಱೆ, ಕುಳಿಗೇರಿ ಎಂದು ಉಲ್ಲೇಖಿಸಿದ್ದನ್ನು ಕಾಣುತ್ತೇವೆ. ಈ ಸ್ಥಳನಾಮವನ್ನು ವಾರ್ಗಿಕವಾಗಿ ಗಮನಿಸಿದರ ತಗ್ಗು ಇಲ್ಲವೆ ನೀರಿನಾಶ್ರಯದ ಪ್ರದೇಶವನ್ನು ಪ್ರತಿನಿಧಿಸುವಂತೆ ತೋರುತ್ತದೆ. ಕೇರಿ-ಗೇರಿ ತುಳುವಿನಲ್ಲಿ 'ಕೇರಿ', ತೆಲುಗಿನಲ್ಲಿ ಗೇರಿ ಎಂದು ಕಂಡು ಬರುವ ಇವುಗಳ ಅರ್ಥ ಊರು, ಪಟ್ಟಣ, ಊರಿನಭಾಗ ಎಂದಾಗುತ್ತದೆ. ಡಾ॥ ಆರ್. ಸಿ. ಹಿರೇಮಠರು ಕೆರೆ ಗೆರೆ - (ಕೆ)ಕೆರೆಯಿಂದ ಜಲಾಶಯದಿಂದ ಬಂದಿದೆ ಎಂದು ಸೂಚಿಸಿದ್ದಾರೆ. [*೨]

## ಅಗ್ರಹಾರವಾಗಿ ಕುಳಿಗೇರಿ

ಕ್ರಿ. ಶ. ೧೦೮೮ರ ಶಾಸನವು [*೩] ಅಗ್ರಹಾರ ಕುಣೆಲಂಗೆರೆಯ ಬಗ್ಗೆ ಉಲ್ಲೇಖ ನೀಡುತ್ತಿದ್ದು, ಕಲ್ಯಾಣದ ಅರಸ ತ್ರಿಭುವನ ಮಲ್ಲದೇವರು ಕಲ್ಯಾಣಪುರ ನೆಲೆವೀಡಿನಿಂದ ಆಳ್ವಿಕೆ ಮಾಡುತ್ತಿರುವಾಗ ಪ್ರಖ್ಯಾತ ಹಿರಣ್ಯಗರ್ಭ ಮುಖಿಕಮಳ ವಿನಿರ್ಗತನುದ ಶಬ್ದಜಾಲ ಪರಿಪೂರ್ಣಮಂ ಶಾಸ್ತ್ರಪಾರಗರಂ, ಅಧ್ಯಾಪಕ ಯುಜನ, ಯಾಜನ, ಪ್ರದಾನ ಧ್ಯಾನ ಸಮಾಧಿ ಸಮಸ್ತರಾದ ಅಗ್ರಹಾರ ಕುಣೆಲಂಗೆರೆಯ ಊರಿನ ಒಡೆಯರು ಹಾಗೂ ಮಹಾಜನರು ಬ್ರಾಹ್ಮಣರು ರುದ್ರೇಶ್ವರ ಸಮ್ಮುಖದಲ್ಲಿ ಇರೆಯೂರಗುಂಡ ಕೆರೆಯ ನೂರನ್ನು ಧರ್ಮ ಬಿಟ್ಟ ವಿಷಯವನ್ನು ತಿಳಿಸುವುದು. ೧೦೫೨ರ ಶಾಸನ. [*೪] ಬಿಬ್ಬೇಶ್ವರ ತಪೋಧನರು ಮತ್ತು ಮಾಣಿಗಳಿಗೆಂದು ದಾನಕೊಟ್ಟ ವಿಷಯವನ್ನು ತಿಳಿಸಿದರೆ, ಜಗದೇಕ ಮಲ್ಲನ ಕಾಲಕ್ಕೆ ಸೇರಿದ ಶಾಸನವೊಂದು ರೆಬ್ಬರಕರ ಸಾಮಂತ ಸಿಂದನ ದಾಸಿಯೂ ಕುಣೆಲಂಗೆರೆಯಲ್ಲಿ ತಾನು ಮಾಡಿಸಿದ ಸರ್ವೇಶ್ವರ ದೇವರಿಗೆ ಮತ್ತು ಕುಳಿಗೇರಿ ಅಗ್ರಹಾರದಲ್ಲಿ ಓದುವ ಕೇಳುವ ತಪೋಧನರಿಗೆಂದು ದಾನಕೊಟ್ಟ ವಿಷಯವನ್ನು ತಿಳಿಸುತ್ತಾ ಬಿಬ್ಬೇಶ್ವರ ದೇವರನ್ನು ಹೆಸರಿಸುತ್ತದೆ. ಈ ಹಿನ್ನೆಲೆಯಲ್ಲಿ ಕುಳಿಗೇರಿಯೂ ಅಗ್ರಹಾರವಾಗಿತ್ತೆಂದು ತಿಳಿದು ಬರುತ್ತದೆ.

## ಭತ್ತಗ್ರಾಮವಾಗಿ ಕುಳಿಗೇರಿ

ಪ್ರಸ್ತುತವಾಗಿ ಬೆಳಕಿಗೆ ಬಂದ ಕ್ರಿ. ಶ. ೧೧೦೦ರ ಶಾಸನವು [*೫] "ಬತ್ತಗ್ರಾಮ ಕುಣೆಲಂಗೆಱೆ ಎಂದು ಪ್ರಸ್ತಾಪಿಸಿದರೆ, ಕ್ರಿ. ಶ. ೧೧೦೫ರ ಶಾಸನವು [*೬] ೬ನೇ ವಿಕ್ರಮಾದಿತ್ಯನ ಸಹೋದರಿ ಮೈಳಲದೇವಿಯು ಚಂದ್ರಲಾದೇವಿಯ ಸನ್ನಿಧಾನದಲ್ಲಿ ಸನ್ನತಿಯ ಚಂದ್ರಲಾಪರಮೇಶ್ವರಿ ತ್ರಿಭುವನಮಲ್ಲನ ತುಲಾಭಾರ ಮಹೋತ್ಸವ ಸಂದರ್ಭದಲ್ಲಿ ತನ್ನ ಆಳ್ವಿಕೆಯಲ್ಲಿದ್ದ "ಬತ್ತಗ್ರಾಮ ಕುಣೆಲಂಗೆರೆಯ" ಹಂಪಕವಿಯ ಮಗ ಮಹಾದೇವಣ್ಣನಿಗೆ ಹೊರ್ಕ್ಕಾಣೆಯ ಧರ್ಮವಾಗಿ ಮಾಗಣಗೇರೆಯ ೪೮ ಗೇಣ

* ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩

ಕೋಲಲ್ಲಿ ಭೂಮಿಯನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಇಲ್ಲಿಯ ನಾಗೇಶ್ವರ ದೇವಾಲಯದ ಮುಂದಿರುವ ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಕ್ರಿ. ಶ. ೧೨ನೇ ಶತಮಾನಕ್ಕೆ ಸೇರಿದ ಶಾಸನವು[*೭] ಮಹಾದಂಡನಾಯಕ ಮಹಾವಿಷ್ಣುದೇವರು ಕುಣಿಲಂಗೆರೆಯ ಹಿರಿಯ ಸ್ಥಾನದ ನಾಗೇಶ್ವರ ಭೋಗೇಶ್ವರ ಹಾಗೂ ರಾಮೇಶ್ವರ ದೇವರ ಸ್ಥಾನಾಚಾರ್ಯರಾದ ಶ್ರೀ ನಾಗರಾಶಿ ಪಂಡಿತರಿಗೆ ವಿವಿಧ ಸುಂಕಗಳನ್ನು ದಾನ ಬಿಟ್ಟ ಸಂದರ್ಭದಲ್ಲಿ ದೂರದ ಧಾರವಾಡ ಜಿಲ್ಲೆಯ ತಿಳುವಳಿ, ಕೋಣಗಿರಿ, ಸವಣೂರ ಮುಂತಾದ ಊರುಗಳ ಗಾತ್ರಿಕರನ್ನೊಳಗೊಂಡ ತಂಬಲಿಗ ಸಾಸಿರ್ವರು, ದೇವರ ನೈವೇದ್ಯಕ್ಕೆಂದು ದಾನಕೊಟ್ಟ ಬಗ್ಗೆ ತಿಳಿಸುತ್ತದೆ. ಯಾದವ ಅರಸ ೨ನೇ ಜೈತುಗಿದೇವನ ಆಳ್ವಿಕೆಯ ೨ನೇ ವರ್ಷ ಅಂದರೆ ಕ್ರಿ. ಶ. ೧೧೯೪ಕ್ಕೆ ಸೇರಿದ ಇನ್ನೊಂದು ಶಾಸನವು[*೮] ವಿವಿಧ ವರ್ತಕರು ಒಂದಾಗಿ ನಾಗರಾಶಿಯ ಪಂಡಿತರು ನಾಗೇಶ್ವರ ದೇವರ್ಗೆ ರಾವಿಶೆಟ್ಟಿಯ ರಾಮೇಶ್ವರ ದೇವರ್ಗೆ ದತ್ತ ಬೋಗಿಸೆಟ್ಟಿಯ ಬೋಗೇಶ್ವರ ದೇವರುಗಳಿಂದ ವಿವಿಧ ಸುಂಕಗಳನ್ನು ದಾನಬಿಟ್ಟ ಸಂದರ್ಭದಲ್ಲಿ ಅರಸನ ಅಧಿಕಾರಿಗಳು ಅರವಟ್ಟಿಗೆಯನ್ನು ದಾನಕೊಟ್ಟ ವಿಷಯ ತಿಳಿಸುತ್ತದೆ. ಅಲ್ಲದೆ ಭೂಮಾಪನಕ್ಕೆ ಬಳೆಸುತ್ತಿದ್ದ ಮೈಳಬ್ಬೇಶ್ವರ ಕೋಲನ್ನು ಉಲ್ಲೇಖಿಸಿದೆ.

೧೨ನೇ ಶತಮಾನಕ್ಕೆ ಸೇರಿದ ಯಾದವ ಅರಸ ಜೈತುಗಿಯ ಆಳ್ವಿಕೆಯ ಇನ್ನೊಂದು ಶಾಸನ ಶ್ರೀ ಮನ್ಮಳದೇವಿಯರು ''ಬತ್ತಗ್ರಾಮ ಕುಣಿಲಂಗೆಱೆಯ ಬಿಬ್ಬೇಶ್ವರ ದೇವರ ಬಳಿಯ ಮೂಡಲ್ವಯ್ಯತ್ತು ಮತ್ತರು ೫೦ ಕೆಯ್ಯಂ ಕೇರಿಗೆ ಆರು ಗದ್ಯಾಣ ಪೊನ್ನು ಅರುವಣಮಂ ತೆತ್ತು ಸರ್ವಬಾದಾ ಪರಿಹಾರವಾಗಿ ಊರುಂ ಅರಸುಂ ಕಾಪಡುವಂತಾಗಿ ಬಿಟ್ಟರು ಎಂದು ತಿಳಿಸುತ್ತದೆ. ೧೧೨೫ರ ಮತ್ತೊಂದು ಶಾಸನವು[*೯] ಬಿಬ್ಬೇಶ್ವರ ದೇವರಿಗೆ ವರ್ತಕರು ಹಲವಾರು ಸುಂಕಗಳನ್ನು ದಾನಬಿಟ್ಟ ಬಗ್ಗೆ ಹೇಳುತ್ತದೆ. ಇಲ್ಲಿಯ ಕ್ರಿ. ಶ. ೧೧೦೦ರ ಇನ್ನೊಂದು ಶಾಸನವು[*೧೦] ಬಹಳ ಹಾಳಾಗಿದ್ದು ಯುವರಾಜ ಮಲ್ಲಿಕಾರ್ಜುನ ಹಾಗೂ ''ರಾಣಿಯ ಬತ್ತಗ್ರಾಮ'' ಆಗಿತ್ತೆಂದು ತಿಳಿಸುವುದು. ಹೀಗೆ ಈ ಊರು ಮೊದಲು ಅಗ್ರಹಾರವಾಗಿ ಕಾಲಾನಂತರ ಭತ್ತಗ್ರಾಮವಾಗಿ ಕರೆಯಿಸಿ ಕೊಂಡಿತ್ತೆಂದು ಶಾಸನಗಳಿಂದ ತಿಳಿಯುವುದು.

ಈ ಬತ್ತಗ್ರಾಮದ ಬಗ್ಗೆ ನಾಡಿನ ಅನೇಕ ಶಾಸನಗಳಲ್ಲಿ ಉಲ್ಲೇಖ ಬರುತ್ತಿದ್ದು ಅದನ್ನೇ ಪ್ರಥಮ ಬಾರಿಗೆ ಡಾ॥ ಎಸ್.ಕೆ. ಕೊಪ್ಪಾರವರು, ಡಾ॥ ಎಂ. ಎಂ. ಕಲಬುರ್ಗಿಯವರು ಹಾಗೂ ಆರ್. ಸಿ. ಹಿರೇಮಠರವರು: (ಸಂ) ಶಾಸನ ಸಂಪದ, ಪುಟ -೨೨ ಹಾಗೂ ಪಂಪನ ಅಗ್ರಹಾರ-ರನ್ನನ ಬೆತ್ತಗಾಪಿ, ಶಾಸನ ವ್ಯಾಸಂಗ - ೨, ಪುಟ ೪೪ರಲ್ಲಿಯ ಲೇಖನಗಳನ್ನು ಬಳಸಿಕೊಂಡು ಇತಿಹಾಸ ದರ್ಶನ ಸಂಪುಟ-೫ ಪುಟ-೧೦೬ರಲ್ಲಿ ೧ ಆಗ್ರಹಾರ-ಬತ್ತಗ್ರಾಮ ಒಂದು ಟಿಪ್ಪಣಿ ಕುರಿತು ಹೇಳುವಾಗ ಬತ್ತಗಾವೆ ಇದು ಅಗ್ರಹಾರದ ಪರ್ಯಾಯ ನಾಮ, ಬತ್ತಗ್ರಾಮವೆಂದರೆ ಸ್ವಂತ ಉಪಭೋಗಕ್ಕೆ ಪಡೆದ ಗ್ರಾಮ, ಅಂದರೆ ಈಗಿನ ಅರ್ಥದಲ್ಲಿ ಇನಾಮು ಅಥವಾ ಜಹಗೀರುಗ್ರಾಮ ಎಂಬ ವಿದ್ವಾಂಸರ ಅಭಿಪ್ರಾಯ ಕೈಬಿಟ್ಟು, ಅದು ಬ್ರಾಹ್ಮಣರ ಉಪಭೋಗಕ್ಕೆ ಕೊಟ್ಟಿರುವ ಊರು, ಅಗ್ರಹಾರಕ್ಕಿರುವ ಇನ್ನೊಂದು ಹೆಸರೆಂದು ಸ್ಪಷ್ಟಪಡಿಸಿರುವುದನ್ನು ಗಮನಿಸಬಹುದು; ಹಾಗೆಯೇ ಶಾಸನೋಕ್ತ ವಿಷಯಗಳ ವಿವರವಾದ ಪರಿಶೀಲನೆ ಅಗತ್ಯವಾಗಿದೆ. ಅವುಗಳ ಅರ್ಥವನ್ನು ಶಿಕ್ಷಣ ಸಂಸ್ಥೆಗಳಿಗಷ್ಟೆ ಸೀಮಿತಗೊಳಿಸದೇ ಹೊಸ ದೃಷ್ಟಿಕೋನದಲ್ಲಿ ಗಮನಿಸುವುದು ಅವಶ್ಯವಾಗಿದೆ.

**ಘಟಿಕಾಸ್ಥಾನವಾಗಿ ಕುಳಿಗೇರಿ**

ಕ್ರಿ. ಶ. ೧೨೬೫ರ ಶಾಸನದಲ್ಲಿ[*೧೧] ''ಕುಣಿಲಂಗೆರೆ'' ಎಂದು ಉಲ್ಲೇಖಿಸುವುದನ್ನು ಗಮನಿಸಲಾಗಿದೆ. ಯಾದವ ಅರಸ ಮಾದೇವರಾಯನು ದೇವಗಿರಿಯ ನೆಲೆವೀಡಿನೊಳ್ ಆಳ್ವಿಕೆ ನಡೆಸುತ್ತಿರುವಾಗ ಅಲ್ಲಿಯ ಮಹಾಮಂಡಳೇಶ್ವರ ಗಣಪತಿ ದೇವರಸರು ಸೇರಿದಂತೆ ವ್ಯಾಪಾರಿಗಳು ಪ್ರಮುಖ ಅಧಿಕಾರಿಗಳು ಕೂಡಿ ಕುಣಿಲಂಗೆರೆಯ ''ಮಹಾಘಟಿಕಾಸ್ಥಾನದ'' ಅಮಿತಲಿಂಗ ವಿಷಪ್ರಹಾರಿ ನಾಗೇಶ್ವರ ಬಬ್ಬೇಶ್ವರ ದೇವರ ಆಚಾರ್ಯ ಎಳಮೇಲ ಸಿಂಹಪರ್ಷಿ ಮಂಡಳಿಯ ಶಿಷ್ಯರಾದ ಸೋಮೇಶ್ವರ ದೇವರಿಗೆ ೩೦೦ ಮತ್ತರು, ಹೊಲ ಒಂದು, ತೋಟ ೪, ಗಾಣ ಹಾಗೂ ೩ ಕೇರಿಯ ಅಯಗಳನ್ನು, ದಾನಬಿಟ್ಟ ವಿಷಯವನ್ನು ತಿಳಿಸುವುದು.

ಅಗ್ರಹಾರ, ಬತ್ತಗ್ರಾಮ-ಘಟಿಕಾಸ್ಥಾನವಾಗಿ ಮೆರೆದ ಕುಳಿಗೇರಿಯು ಸಕಲ ಕ್ಷೇತ್ರದಲ್ಲಿ ಸಮೃದ್ಧಿಯನ್ನು ಸಾಧಿಸಿ ೧೩ನೇ ಶತಮಾನದ ಕಾಲಕ್ಕೆ ಪಟ್ಟಣವಾಗಿತ್ತೆಂದೂ ಶ್ರೀಮತ್ಸಪಟ್ಟಣ ಕುಣಿಲಿಂಗೆರೆ ಎಂದೂ ೧೩ನೇ ಶತಮಾನದ ಶಾಸನವು[*೧೨] ಉಲ್ಲೇಖಿಸುವುದನ್ನು ಗಮನಿಸಲಾಗಿದೆ. ಹೀಗೆ ಕುಳಿಗೇರಿಯೂ ಉನ್ನತ ಮಟ್ಟದಲ್ಲಿ ಪ್ರಸಿದ್ಧಿ ಪಡೆದು ಶೋಭಿಸುತ್ತಿತ್ತು. ಅದರ ಕುರಿತು ಕ್ರಿ. ಶ. ೧೨೬೫ರ ಶಾಸನವೊಂದು[*೧೩] ನಾರಿಯ ಹಣೆಯ ಮೇಲಿನ ಸಿಂಧೂರ (ತಿಲಕ)ಕ್ಕೆ ಹೋಲಿಸಿ ವರ್ಣಿಸಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಕುಳಿಗೇರಿಯ ಶಾಸನಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿ ಅದೊಂದು ಅಗ್ರಹಾರ-ಬತ್ತ ಗ್ರಾಮ ಮತ್ತು ಘಟಿಕಾಸ್ಥಾನವಾಗಿ ಪ್ರಾಚೀನ ಕರ್ನಾಟಕದಲ್ಲಿ ತನ್ನದೆ ಆದ ಇತಿಹಾಸ ಪಡೆದಿತ್ತು; ಅಲ್ಲದೇ ವಾಸ್ತುಶಿಲ್ಪಗಳ ದೃಷ್ಟಿಯಿಂದಲೂ ಈ ಗ್ರಾಮ ಗಮನಾರ್ಹವಾಗಿದೆ. ಇಲ್ಲಿನ ಶಾಸನ ಶಿಲ್ಪ ದೇವಾಲಯಗಳನ್ನು ಆಧರಿಸಿ ಹೆಚ್ಚಿನ ಅಧ್ಯಯನ ಮುಂದುವರೆಸಲಾಗಿದೆ. ಹೀಗೆ ಪೌರಾಣಿಕ ಹಿನ್ನೆಲೆ ಐತಿಹಾಸಿಕ ವಾಗಿಯೂ ಪ್ರಸಿದ್ಧಿ ಪಡೆದಿತ್ತು ಎನ್ನುವುದಕ್ಕೆ ಇಲ್ಲಿ ದೊರೆಯುವ ಅಪಾರ ಸಂಖ್ಯೆಯ ಶಾಸನಗಳು ದೇವಾಲಯಗಳು ಶಿಲ್ಪಗಳು ಸಾಕ್ಷಿಯಾಗಿವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. *ಗುಲಬರ್ಗಾ ಜಿಲ್ಲಾ ಗ್ಯಾಸೆಟೀಯರ್*, ಕರ್ನಾಟಕ ಸರ್ಕಾರ, ಬೆಂಗಳೂರು

*೨. ಡಾ॥ ಆರ್. ಸಿ. ಹಿರೇಮಠ: 'ಕರ್ನಾಟಕದಲ್ಲಿ ಸ್ಥಳನಾಮಗಳು' *ಜೆ. ಕೆ. ಯೂ ಎಚ್*. ವ್ಯಾಲೂಮ್ ನಂ. ೧೫ ಪುಟ-೯೭ ಜೂ-೧೯೬೧

*೩. ಹನುಮಾಕ್ಷಿ ಗೋಗಿ : *ಕಲಬುರ್ಗಿ ಜಿಲ್ಲೆಯ ಶಾಸನಗಳು* ನಂ.೧೬,

*೪. ಅದೇ, ನಂ. ೧೪

*೫. ಅದೇ, ನಂ. ೧೯

*೬. ಅದೇ, ನಂ. ೨೦

*೭. ಅದೇ, ನಂ. ೨೭

*೮. ಅದೇ, ನಂ. ೨೭

*೯. ಅದೇ, ನಂ. ೨೧

*೧೦. ಅದೇ, ನಂ. ೨೧

*೧೧. ಅದೇ,

*೧೨. ಅದೇ, ನಂ. ೩೮, ಪು. ೩೨೧

*೧೩. ಅದೇ, ನಂ. ೩೯ ಪು. ೩೯೩

*೧೪. ಹನುಮಾಕ್ಷಿ ಗೋಗಿ : *ಕಲಬುರ್ಗಿ ಜಿಲ್ಲೆಯ ಶಾಸನಗಳು* ಶಿವಪ್ರಕಾಶನ, ನವನಗರ ಹುಬ್ಬಳ್ಳಿ (ಕುಳಿಗೇರಿ ಶಾಸನಗಳು)

*೧೫ ಡಾ॥ ಬಿ. ಆರ್. ಹಿರೇಮಠ ಮತ್ತು ಹನುಮಾಕ್ಷಿ ಗೋಗಿ: *ಮುದೇನೂರು ಮತ್ತು ಯಡ್ರಾಮಿ ಶಾಸನಗಳು*, ಹುಬ್ಬಳ್ಳಿ (ನವನಗರ)

*೧೬. ಡಾ॥ ಆರ್. ಸಿ. ಹಿರೇಮಠ "ಕರ್ನಾಟಕದಲ್ಲಿ ಸ್ಥಳನಾಮಗಳು"; *ಜ ಕೆ ಯು ಎಚ್* ವ್ಯಾಲ್ಯೂಂ ನಂ. ೫ ಪಿ-೯೭-೧೯೬

*೧೭. ಡಾ॥ ಎಸ್. ಕೆ. ಕೊಪ್ಪಾ "ಅಗ್ರಹಾರ ಬತ್ತಾಗ್ರಾಮ ಒಂದು ಟಿಪ್ಪಣಿ", *ಇತಿಹಾಸ ದರ್ಶನ* ಸಂಪುಟ-೫, ಪುಟ-೧೦೬

*೧೭. *ಗುಲಬರ್ಗಾ ಜಿಲ್ಲಾ ಗ್ಯಾಸೆಟೀಯರ್*, ಅದೇ.

*೧೮. *ಶಾಸನ ಸಂಪದ* : (ಸಂ) ಡಾ॥ ಆರ್. ಸಿ. ಹಿರೇಮಠ, ಎಂ. ಎಂ. ಕಲಬುರ್ಗಿ, ಪು. ೨೨

*೧೯. *ಪಂಪಭಾರತಂ*, ಭಾಗ - ೨, ಅ ೧೪ : (ಪ್ರ. ಸಂ.), ಕೆ. ವಿ. ಪುಟ್ಟಪ್ಪ, ಪುಟ. ೫೬-೫೭

ಪ್ರೊ॥ ಬಿ. ಜಿ. ಆಮ್ಮಣಗಿ *

# ಹಳ್ಳಿಗಳ ರಚನಾ ವಿಧಾನದಲ್ಲಿ ಹತ್ತರಗಿ ಗ್ರಾಮ

ನಮ್ಮ ದೇಶ ಹಳ್ಳಿಗಳ ನಾಡು. ಪಟ್ಟಣಗಳ ಬೀಡು. ಇವು ಭಾರತದ ನರನಾಡಿಗಳಿದ್ದಂತೆ. ಇವುಗಳ ಜಾಲ ರಾಷ್ಟ್ರದ ತುಂಬೆಲ್ಲಾ ಪಸರಿಸಿದೆ. ಹಳ್ಳಿಯೆಂದರೆ, ಊರು, ಗ್ರಾಮ. ಈ ಹಳ್ಳಿಗಳು ಆದಿಕಾಲದಲ್ಲಿಯೇ ಹುಟ್ಟಿ ಬೆಳೆದು, ಉಳಿದು ಬಂದಿವೆ. 'ಹಳ್ಳಿಗಳ ಹುಟ್ಟಿಗೆ ಮೂಲ ಕಾರಣ ಬೇಸಾಯ. ಮಾನವ ಭೂಮಿಯನ್ನು ಉತ್ತಿ, ಬಿತ್ತಿ ಬೆಳೆ ತೆಗೆಯತೊಡಗಿದಾಗ ಹಳ್ಳಿಯ ಉದಯ ಪ್ರಾರಂಭವಾಯಿತು. ನವಶಿಲಾ ಯುಗದಲ್ಲಿ (ಕ್ರಿ.ಪೂ. ೧೦,೦೦೦ ವರ್ಷ) ಮಾನವನ ಜೀವನದಲ್ಲಿ ಬದಲಾವಣೆಯ ಗಾಳಿ ಬೀಸಿ ಆತ ಒಂದೆಡೆಗೆ ನೆಲೆ ನಿಲ್ಲುವಂತಾಯಿತು. ಆದ್ದರಿಂದ "ಬಹುಜನ ವಸತಿ"ಗಳೇ ಹಳ್ಳಿಗಳೆನಿಸಿದವು. ಕೃಷಿ ಕುಟುಂಬಗಳು, ಅವುಗಳಿಗೆ ಸಂಬಂಧಿಸಿದ ಉಪಕಸಬುಗಳ ಪರಿವಾರಗಳು ಹತ್ತಿರ ಹತ್ತಿರವಾಗಿ ನೆಲೆಸುವ ನೆಲೆಗಳೇ ಊರು ಅಥವಾ ಗ್ರಾಮಗಳಾದವು. ಋಗ್ವೇದದ ಕಾಲದಷ್ಟೊತ್ತಿಗೆ ಗ್ರಾಮಗಳು ಪೂರ್ಣವಾಗಿ ವಿಕಾಸವಾಗಿ ಮುಂದೆ ಅವು ಶಾಶ್ವತ ನೆಲೆಗಳಾದವು.*[1] ರಾಜ್ಯ, ರಾಷ್ಟ್ರದ ಪ್ರಧಾನ ಘಟಕ ಗಳಾದವು. ಈ ಹಳ್ಳಿಗಳೇ ಭಾರತದ ಬೆನ್ನೆಲುಬಾಗಿ, ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಾದವು. ಚಾರ್ಲ್ಸ್ ಮೆಟ್‌ಕಾಫ್, "ಗ್ರಾಮೀಣ ಸಮುದಾಯಗಳನ್ನು ಇತರರಿಂದ ಸ್ವತಂತ್ರವಾದ, ತಮಗೆ ಬೇಕಾದ ಎಲ್ಲವನ್ನೂ ಪಡೆದುಕೊಂಡಿರುವ ಪುಟ್ಟರಾಜ್ಯ ಗಳೆಂದು" ಕರೆದಿದ್ದಾನೆ.

ಪ್ರಾಚೀನ ಕಾಲದಲ್ಲಿ ರಾಜನೇ ಗ್ರಾಮಾಧಿಕಾರಿಗಳನ್ನು ನೇಮಿಸುವ ಪದ್ಧತಿಯಿತ್ತು. ಆದರೆ ಗ್ರಾಮಗಳ ಆಡಳಿತ ಗಾವುಂಡರ ಮುಖಾಂತರ ಗ್ರಾಮ ಸಭೆಯ ತತ್ವದ ಮೇಲೆ, ಪ್ರಜಾಪ್ರಭುತ್ವದ ಮಾದರಿಯಲ್ಲಿ ನಡೆಯುತ್ತಿತ್ತು. ಗಾವುಂಡ (ಗೌಡ), ಅವರ ಸಿಬ್ಬಂದಿ ಮತ್ತು ಅವರ ಪರಿವಾರದವರು ಗ್ರಾಮ ರಕ್ಷಣೆಯನ್ನು ಮಾಡುತ್ತಿದ್ದರು.

ಹಳ್ಳಿಗಳನ್ನು ಸ್ಥೂಲವಾಗಿ ಎರಡು ವಿಧವಾಗಿ ವಿಂಗಡಿಸಬಹುದು. *ಒಂದು ಸಂಘಟಿತ ಹಳ್ಳಿಗಳು.* ಎರಡನೆಯದಾಗಿ *ಅಸಂಘಟಿತ ಹಳ್ಳಿಗಳು.*

ಮೊದಲನೆಯ ಪ್ರಕಾರದ ಹಳ್ಳಿಗಳು ಆಡಳಿತಾತ್ಮಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಸಂಘಟಿತವಾದವುಗಳು. ಇವುಗಳಲ್ಲಿ ಕೆಲವು ಹಳ್ಳಿಗಳು 'ಅಗ್ರಹಾರ', 'ಬ್ರಹ್ಮಪುರಿ'ಗಳಾಗಿ, ವಿದ್ಯಾ ಮತ್ತು ವ್ಯಾಪಾರದ ಕೇಂದ್ರಗಳಾಗಿ, ದೇವಾಲಯಗಳ ಸುಮುಚ್ಚಯವಾಗಿ ಬೆಳೆದವುಗಳಾಗಿರುವದನ್ನು ನಮ್ಮ ನಾಡಿನ ಇತಿಹಾಸವನ್ನು ಅವಲೋಕಿಸಿದಾಗ ಕಂಡುಬರುತ್ತದೆ. ಯಾವದೇ ಒಂದು ಹಳ್ಳಿ ಯಾವದಾದರೊಂದು ದೇವಾಲಯ ಅಥವಾ ಬಸದಿ ಇಲ್ಲವೆ ವಿಹಾರವನ್ನು ಹೊಂದಿರುವುದು ಸಾಮಾನ್ಯವಾದರೂ ಶಿಲ್ಪಕಲಾಯುಕ್ತ ದೇವಾಲಯದ ಹಳ್ಳಿಗಳು ಹೆಚ್ಚು ಮಹತ್ವದವು ಗಳೆಂದು ಪರಿಗಣಿಸಲಾಗುತ್ತದೆ. ನಿದರ್ಶನವಾಗಿ ಬದಾಮಿ, ಐಹೊಳೆ, ಬೇಲೂರು, ಹಳೆಬೀಡುಗಳನ್ನು ಹೆಸರಿಸಬಹುದು. ರಚನಾ ವಿಧಾನ ದೃಷ್ಟಿಯಿಂದ ಆಲೋಚಿಸಿದಾಗ ಸಾಮಾನ್ಯವಾಗಿ *ಹಳ್ಳಿಗಳ ಆಕಾರ ದುಂಡಗಿನದಾಗಿದ್ದು ಹಲವು ಓಣಿಗಳಿಂದ ಕೂಡಿರುತ್ತದೆ.*

ಎರಡನೆಯ ಪ್ರಕಾರದ ಹಳ್ಳಿಗಳು ಯಾವ ದೃಷ್ಟಿಯಿಂದಲೂ ಸಂಘಟಿತವಾಗಿರದೆ ಉಪಜೀವನಕ್ಕಾಗಿ ನಿರ್ಮಿಸಿಕೊಂಡ ಗ್ರಾಮ ಗಳೆಂದು ಹೇಳಬಹುದು. ಇವು ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವುಗಳಾಗಿದ್ದು ಸಂಘಟಿತ ಹಳ್ಳಿಗಳ ಅಧೀನಕ್ಕೊಳ ಪಟ್ಟಿರುತ್ತಿದ್ದವು. ಈ ಹಳ್ಳಿಗಳು ಹೊಳೆ, ಹಳ್ಳ, ರಸ್ತೆಗುಂಟ ಉದ್ದವಾಗಿಯೇ ಬೆಳೆದು ಬಂದವು. ತದನಂತರ ಗುಡ್ಡದ ಓರೆಗಳಲ್ಲಿ, ಎತ್ತರದ ಪ್ರದೇಶಗಳಲ್ಲಿ ಅರ್ಥಾತ್ ನೀರಿನ ಸೌಲಭ್ಯವಿರುವ ತಾಣಗಳಲ್ಲಿ (ಕೆರೆ, ಬಾವಿಗಳು ಇರುವಲ್ಲಿ) ಕೃಷಿಗೆ ಅನುಕೂಲ ವಿರುವ ಭೂ ಪ್ರದೇಶಗಳಲ್ಲಿ ಊರುಗಳು ವಿಕಾಸವಾದವು.

ಪೂರ್ವಕಾಲದ ಸಂಘಟಿತಹಳ್ಳಿ ತನ್ನ ರಕ್ಷಣೆಗಾಗಿ ಊರ

---

* ೩೫೨, 'ಬಸವ ನಿಲಯ', ೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಮಾರುತಿ ದೇವಾಲಯದ ಸಮೀಪ, ನಾರಾಯಣಪುರ, ಧಾರವಾಡ - ೫೮೦ ೦೦೮

ಸುತ್ತಲ್ನಾ ಗೋಡೆ ಕಟ್ಟಿಸಿಕೊಂಡು ಒಂದೆರಡು ಕಡೆಗೆ ಪ್ರವೇಶ ದ್ವಾರಗಳನ್ನು ಹೊಂದಿರುತ್ತಿತ್ತು. ಹಳ್ಳಿ ಪ್ರಮುಖ ಹೆದ್ದಾರಿಯ ಮೇಲಿದ್ದರೆ ವೈರಿಗಳ ದಾಳಿಗಳನ್ನು ದೂರದಿಂದಲೇ ವೀಕ್ಷಿಸಲು 'ಹುಡೆ'ಗಳೆಂಬ ಕಲ್ಲು ಮಣ್ಣಿನ ಗುಮ್ಮಟಗಳನ್ನು ಕಟ್ಟಿಸಿ ಕೊಂಡಿರುತ್ತಿದ್ದರು. ಅಲ್ಲಿ ಒಬ್ಬ ಕಾವಲುಗಾರನಿರುತ್ತಿದ್ದೂ ಆತ ಬರುಹೋಗುವ ಸೈನ್ಯದ ಚಲನವಲನಗಳನ್ನು ನೋಡಿ, ಕಹಳೆ ಊದಿ ಜನರನ್ನು, ಊರ ಗಾವುಂಡ ಮತ್ತು ಅವನ ಸಿಬ್ಬಂದಿಯನ್ನು ಎಚ್ಚರಿಸಿ ದಾಳಿಯನ್ನು ಎದುರಿಸಲು ಸಜ್ಜುಗೊಳಿಸುತ್ತಿದ್ದನು. ಹಳ್ಳಿಯ ಪ್ರತಿಯೊಂದು ಮನೆಯಲ್ಲೂ ಒಬ್ಬ ಯೋಧನಿರುತ್ತಿದ್ದನೆಂದು ತಿಳಿದು ಬರುತ್ತದೆ. ಇವರೆಲ್ಲ ಕೂಡಿ ದಾಳಿಯನ್ನು ಹಿಮ್ಮೆಟ್ಟಿಸಲು ಹೋರಾಡುತ್ತಿದ್ದರು. ಇದು ಅಂದಿನ ಹಳ್ಳಿಯ ಸಂರಕ್ಷಣಾ ವಿಧಾನವಾಗಿದ್ದಿತು.

ಇಂಥ ಹಳ್ಳಿಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕ ವಾಗಿ ಮುಂದುವರೆದವುಗಳಾಗಿದ್ದವು. ದೇವಾಲಯಗಳು, ಬಸದಿಗಳು, ವಿಹಾರಗಳು ಪಟ್ಟಣ-ಹಳ್ಳಿಗಳ ಮುಖ್ಯ ಅಂಗ ಗಳಾಗಿದ್ದವು. ಗ್ರಾಮೀಣ ಸಂಸ್ಕೃತಿಯ ಪ್ರಮುಖ ಭಾಗಗಳಾಗಿದ್ದವು. ಹಳ್ಳಿಗಳ ಜೀವನದಲ್ಲಿ ದೇವಾಲಯಗಳ ಪಾತ್ರ ಬಲು ಹಿರಿದು.

### ಗ್ರಾಮದ ಪ್ರಾಚೀನತೆ

ರಾಷ್ಟ್ರೀಯ ಹೆದ್ದಾರಿ ನಾಲ್ಕರ ಮೇಲೆ, ಬೆಳಗಾವಿಯಿಂದ ಸುಮಾರು ೩೩ ಕಿ.ಮಿ. ದೂರದಲ್ಲಿ ಹತ್ತರಗಿ ಎಂಬ ಗ್ರಾಮವಿದೆ. (ತಾ॥ ಹುಕ್ಕೇರಿ, ಜಿ॥ ಬೆಳಗಾವಿ) ಗಿರಿ (ಸಹ್ಯಾದ್ರಿ) ಹತ್ತರವೇ ಇರುವದರಿಂದ ಹತ್ತರಗಿ (ಹತ್ತರ+ಗಿರಿ → ಹತ್ತರಗಿ) ಎಂಬ ಹೆಸರನ್ನು ಪಡೆದಿದೆ. ಈ ಊರಿನಿಂದ ೨ಂದು ಕಿ.ಮೀ. ಅಂತರದಲ್ಲಿ ಬೀಳು ಇತ್ತು. ಅಲ್ಲಿ ಆಗಾಗ ದಂಡು ಬಿಡುತ್ತಿದ್ದುದರಿಂದ, ಅಂದರೆ ಠಾಣೆ (ಬಿಡಾರ, ವಸತಿ) ಹಾಕುತ್ತಿದ್ದುದರಿಂದ ತದನಂತರ ಬ್ರಿಟಿಷರ ಕಾಲದಲ್ಲಿ ಠಾಣಾ ಹತ್ತರಗಿ ಎಂದು ಹೆಸರಿಸಲಾಯಿತು. ಇಂದಿಗೂ ಸರಕಾರಿ ದಾಖಲೆಗಳಲ್ಲಿ ಠಾಣಾ ಹತ್ತರಗಿಯಾಗಿಯೇ ಉಳಿದಿದೆ. ಈ ದಂಡಿನ ಬೀಡಿನಲ್ಲಿ ವಿಮಾನವು (ಬಹುಶಃ ಮಿಲ್ಟ್ರಿ ವಿಮಾನ, ಇಬ್ಬರೇ ಚಾಲಕರಿದ್ದರಂತೆ.) ೧೯೩೦ರಲ್ಲಿ ತಾಂತ್ರಿಕ ತೊಂದರೆ ಯಿಂದ ಕೆಳಕ್ಕೆ ಇಳಿದು ನಂತರ ಪೆಟ್ರೋಲ್ ಹಾಕಿಕೊಂಡು ಏರಲು ಹೊರಟಾಗ ಮರಕ್ಕೆ ಡಿಕ್ಕಿ ಹೊಡೆದು ದುರಂತಕ್ಕೀಡಾದುದು ಇಂದು ಇತಿಹಾಸ.

ಈ ಗ್ರಾಮವು ಅತಿ ಪ್ರಾಚೀನ ಕಾಲದಲ್ಲಿಯೇ ಅಸ್ತಿತ್ವ ದಲ್ಲಿತ್ತೆಂಬುದು ಇಲ್ಲಿಯ ಬೃಹತ್ ಶಿಲಾಸಂಸ್ಕೃತಿ ನೆಲೆಯ ಸಂಶೋಧನೆಯಿಂದ ಕಂಡುಬಂದಿದೆ.

ಹಳ್ಳದ ಎಡ ದಂಡೆಗುಂಟ ಜನರು ವಾಸಿಸುತ್ತಿದ್ದರೆಂದು ಡಾ॥ಅ. ಸುಂದರ ಅವರು ಕಂಡು ಹಿಡಿದಿದ್ದಾರೆ. ಆದರೆ ಈಗ ಅಲ್ಲಿ ಹಳ್ಳಿ ಇರದೆ ಹಳ್ಳದ ಬಲದಂಡೆಯ ಮೇಲೆ ಸ್ಥಿತವಾಗಿದೆ. ಇಲ್ಲಿಯ ಶಿಲಾಗೋರಿಗಳ ವೈಶಿಷ್ಟ್ಯ ಈ ರೀತಿಯಿದೆ: "ಕೆಲವು ಸಲ ಎರಡು ಮೂರು ದುಂಡಾದ ಗೋರಿಯ ಗುಡ್ಡೆಗಳು ಸಮತಲಾಕೃತಿಗಳಲ್ಲಿ (ಅಥವಾ ವರ್ತುಲಾಕಾರದ ಸಾಲುಗಳಲ್ಲಿ) ಕಲ್ಲುಗುಡ್ಡೆಗಳ ತುದಿಗಳು ಒಂದನ್ನೊಂದು ಸ್ಪರ್ಶಿಸುವಲ್ಲಿ ಏಕೀಭವಿಸುತ್ತವೆ. ಕಾರಣ ಅವು ತೋರಿಕೆಯಲ್ಲಿ ಉದ್ದವಾದ ದಿಣ್ಣೆಗಳಂತೆ ಕಾಣುತ್ತವೆ. ಇಂಥ ಸುಮಾರು ನಾಲ್ಕು ಗೋರಿಗಳು ಹತ್ತರಗಿಯಲ್ಲಿ ದೊರೆಯುತ್ತವೆ. ಬಹುಶಃ ಅವು ಬೇರೆ ಬೇರೆ ಸಮಯದಲ್ಲಿ ನಿಲ್ಲಿಸಿದವುಗಳು ಆಗಿರಬಹುದು. ಒಂದಕ್ಕೊಂದು ಸಮೀಪದಲ್ಲಿಯೇ ಸ್ಥಿತವಾದ ಬೃಹತ್ ಶಿಲಾಗೋರಿಗಳು ಮುಂಬರುವ ಸಮಯದಲ್ಲಿ ಉದ್ದವಾದ ಕಲ್ಲುಗುಡ್ಡೆಗಳನ್ನು ನಿಲ್ಲಿಸಲು ದಾರಿ ಮಾಡಿಕೊಟ್ಟಿರಬೇಕು. ಇವು ಅನೇಕ ಕೋಣೆಗಳನ್ನು ಉಳ್ಳವುಗಳಾಗಿದ್ದವು. ಬಹು ಕ್ವಚಿತ್ ಆಗಿ ಕೋಣೆಯು ತನ್ನ ದೊಡ್ಡ ಅಳತೆಯನ್ನು ಅಂದರೆ - ೧.೮೦ಮೀ × ೧.೫೫ಮೀ ದಷ್ಟು ಇರಬಹುದಾಗಿದ್ದಿತು. ಅದೂ ಹತ್ತರಗಿಯಲ್ಲಿ, ಒಳ ಪ್ರದೇಶದಲ್ಲಿ ಇಷ್ಟು ದೊಡ್ಡದಾದ ಕೋಣೆ ಅತಿ ವಿರಳ ಉದಾಹರಣೆಯಾಗಿದೆ. ಹತ್ತರಗಿಯಲ್ಲಿ ಮಾರ್ಗಕೋಣೆಯು (Passage Chamber) ಷಡ್ಭುಜ ರಚನಾಕ್ರಮದ್ದಾಗಿರುವುದು ಒಂದು ವಿಶೇಷವಾಗಿದೆ.

ಇನ್ನೊಂದು ವಿಧವಾದ ಬೃಹತ್ ಶಿಲಾಯುಗದ ಗೋರಿಗಳು ಬಹಳ ಕಡಿಮೆಯ ಸಂಖ್ಯೆಯಲ್ಲಿ ದೊರೆತಿವೆ. ಇವು ಮಾರ್ಗ-ಕೋಣೆಯ ಗೋರಿಗಳ ಸಾಲುಗಳಲ್ಲಿಯೇ ಕಾಣಸಿಗುತ್ತವೆ. ಈ ಸ್ಥಳಗಳೆಂದರೆ ಹತ್ತರಗಿ, ಹುನ್ನೂರ, ಬಡಕುಂದ್ರಿ, ಹಿಡಕಲ್. ಈ ಮಾರ್ಗ-ಕೋಣೆಗಳನ್ನು ಸಣ್ಣ ಚೌಕಾಕಾರದ ಬಿಳುಪುಗಲ್ಲಿನ ಪಡಿಗಲ್ಲುಗಳಿಂದ (Sandstone Slabs) ರಚಿಸಲಾಗಿದೆ. ಇವು ಈ ಸ್ಥಳದ ಸುತ್ತಮುತ್ತಲಿನ ಪ್ರದೇಶಗಳಲ್ಲಿ, ತಮಗೆ ಅನುಕೂಲಕರ ವಾದ ಆಕಾರಗಳಲ್ಲಿ ದೊರೆಯುತ್ತಿದ್ದವು.."[೨]

ಜನರು ಕಲ್ಲುಗೋರಿಗಳನ್ನು **'ಮುನಿಗುಹೆ'**ಗಳೆಂದು ಕರೆಯುತ್ತಾರೆ. ಇಂಥವು ರಾಷ್ಟ್ರೀಯ ಹೆದ್ದಾರಿಯ ಆಚೆಗೆ ಕಾರೀ ಮಡ್ಡಿ (ಮರಡಿ)ಯಲ್ಲಿ ಸುಮಾರು ನೂರು ವರ್ಷಗಳ ಹಿಂದೆ ಇದ್ದವೆಂದು ಊರು ಹಿರಿಯರು ಇಂದಿಗೂ ಹೇಳುತ್ತಾರೆ.

ಹತ್ತರಗಿ ಗ್ರಾಮವು ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಯಾವುದೋ ಒಂದು ಐತಿಹಾಸಿಕ ಕಾಲಘಟ್ಟದಲ್ಲಿ, ಭೌಗೋಳಿಕ ಕಾರಣಕ್ಕಾಗಿ ಅಂದರೆ ಹಳ್ಳದ ಪ್ರವಾಹದ ಹೊಡೆತದಿಂದ ತಪ್ಪಿಸಿಕೊಳ್ಳಲು ಮೊದಲ ನಿವೇಶನದ ಪೂರ್ವದಿಕ್ಕಿನಲ್ಲಿ ಸ್ಥಳಾಂತರವಾಯಿತೆಂದು ತಿಳಿದುಬರುತ್ತದೆ. ಇದಕ್ಕೆ ನಡಹತ್ತರಗಿ ಯೆಂದು ಕರೆಯತೊಡಗಿದರು. ಪೂರ್ವದ ಹತ್ತರಗಿ ಮತ್ತು ಹಾಳೂರ - (ಮೂಲದಲ್ಲಿ ಹಳ್ಳದ ಊರು ಆಗಿರಬೇಕು). ಯಮಕನಮರಡಿ ಮಧ್ಯದಲ್ಲಿ ಪುನಃ ಸ್ಥಾಪಿತವಾದುದರಿಂದ ಇದಕ್ಕೆ ನಡುಹತ್ತರಗಿ

ಯೆಂದು ನಾಮಕರಣವಾಯಿತು. ಈ ಊರು ನಾಲ್ಕು ಅಗಸೆಯ ಬಾಗಿಲುಗಳನ್ನು ಹೊಂದಿತ್ತು, ೧) ಹಳ್ಳದ ಅಗಸೆ, ೨) ದಡ್ಡಿಯ ಅಗಸೆ, [೩] ಕೆರೆವು ಅಗಸೆ, [೪] ಹುಕ್ಕೇರಿಯ ಅಗಸೆ, ಈ ಊರು ತನ್ನ ಸುತ್ತೆಲ್ಲಾ ರಕ್ಷಣಾ ಗೋಡೆಯನ್ನಲ್ಲದೆ ನಾಲ್ಕೂ ದಿಕ್ಕಿನಲ್ಲಿ ಹುಡೆಗಳನ್ನು ಹೊಂದಿತ್ತು. ಇದೊಂದು ದೊಡ್ಡ ಗ್ರಾಮವಾಗಿರುವು ದರೊಂದಿಗೆ, ವಿಜಯನಗರ ಕಾಲದಲ್ಲಿ ವ್ಯಾಪಾರದ ಪಡಮೂಲೆಯೂ ಆಗಿತ್ತೆಂದು ತಿಳಿದುಬರುತ್ತದೆ.

ಹಾಳೂರ ಹಾಳಾದ ಮೇಲೆ ಅಲ್ಲಿಯ ನಿವಾಸಿ ವಿರೂಪಾಕ್ಷ ಪಂತ ಎಂಬುವನು ನಡಹತ್ತರಗಿಯ ದಕ್ಷಿಣ ದಿಕ್ಕಿನಲ್ಲಿ ದೊಡ್ಡದಾದ ಕೆರೆಯೊಂದನ್ನು ಕಟ್ಟಿಸಿ ಅದರ ಕಲ್ಲುಗಳಿಂದ ನಡಹತ್ತರಗಿಯ ಮಧ್ಯದಲ್ಲಿ ದೊಡ್ಡದಾದ, ಅಲೆ ಎತ್ತರವಾದ (೫೦'ಎತ್ತರ) ಹುಡೆಯನ್ನು ತನ್ನ ತಂಗಿಯ ಹೆಸರಿನಿಂದ ಕಟ್ಟಿಸಿ ಅದರ ಸುತ್ತಮುತ್ತಲಿನ ಪ್ರದೇಶಕ್ಕೆ ಯಮಕನಮರಡಿ (ಯಮನಕ್ಕನ +ಮರಡಿ = ಯಮಕನಮರಡಿ) ಎಂದು ನಾಮಕರಣ ಮಾಡಿದನು. ವಾಸ್ತವವಾಗಿ ಇದೆಲ್ಲ ನಡಹತ್ತರಗಿಯ ಗ್ರಾಮ ಪ್ರದೇಶವೇ. ಕಾಲಾಂತರದಲ್ಲಿ ನಡಹತ್ತರಗಿ ಎಂಬ ಹೆಸರು ಅಳಿದು ಯಮಕನಮರಡಿಯಾಗಿಯೇ ಉಳಿಯಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹತ್ತರಗಿಯ ಸರ್ವೆ ನಂಬರದಲ್ಲಿ ೩೦೦೦ ಎಕರೆ ಹೊಲಗಳಿದ್ದರೆ, ಯಮಕನಮರಡಿಯ ಸ.ನಂ.ದಲ್ಲಿ ಕೇವಲ ೬೦೦ ಎಕರೆ ಹೊಲಗಳಿವೆ.

ಪ್ರಸ್ತುತ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡ ಹತ್ತರಗಿ ತನ್ನ ಸುತ್ತಲೂ ರಕ್ಷಣಾ ಗೋಡೆ ಮತ್ತು ಪಶ್ಚಿಮ ಭಾಗದಲ್ಲಿ ಹೆದ್ದಾರಿಗೆ ಮುಖವಾಗಿ ಒಂದು ಚಿಕ್ಕ ಹುಡೆಯೂ ಇತ್ತು. ನಾವು ಚಿಕ್ಕವರಿದ್ದಾಗ ನೋಡಿದುದುಂಟು. ಆದರೆ ಊರ ಜನರೇ ಅದನ್ನು ನಾಶಮಾಡಿ ಅದರ ಜಾಗೆಯಲ್ಲಿ ಮನೆಯನ್ನು ಕಟ್ಟಿಸಿಕೊಂಡಿದ್ದಾರೆ. ನೂರು ವರುಷಗಳ ಹಿಂದೆ ಮೊದಲು ಉತ್ತರ ದಿಕ್ಕಿನಲ್ಲಿದ್ದ ಚಾವಡಿ ನಂತರ ಊರ ಮಧ್ಯದಲ್ಲಿ ಆ ಮೇಲೆ ದಕ್ಷಿಣಕ್ಕೆ ಸ್ಥಳಾಂತರವಾಯಿತು. ಈ ಚಾವಡಿ ಈಗ ಊರ ದಕ್ಷಿಣದ ಅಗಸೆಯ ಹತ್ತಿರ ಬಂದಿದೆ. ಇದು ಬ್ರಿಟಿಷ್ ಕಾಲದ ಆಡಳಿತ ಕಾರ್ಯಾಲಯದಂತಿತ್ತು. ಗೌಡ ಕುಲಕರ್ಣಿಗಳೇ ಅಧಿಕಾರಿಗಳು.

ಈ ಊರು ಪ್ರಮುಖ ರಾಷ್ಟ್ರೀಯ ಹೆದ್ದಾರಿಯ ಮೇಲೆ ಇರುವದರಿಂದ ಆಗಾಗ ದಾಳಿಗಳು ಆಗುತ್ತಿದ್ದವು. ಇತಿಹಾಸದ ಪುಟಗಳನ್ನು ಅವಲೋಕಿಸಿದಾಗ ರಾಜಕೀಯವಾಗಿ, ಆಡಳಿ ತಾತ್ಮಕವಾಗಿ ಹತ್ತರಗಿಯನ್ನೊಳಗೊಂಡ ಹುಕ್ಕೇರಿ ವಿಭಾಗವು ಬಾದಾಮಿ ಮತ್ತು ಕಲ್ಯಾಣ ಚಾಲುಕ್ಯರ ಅಧೀನಕ್ಕೊಳಪಟ್ಟು, ನಂತರ ಅಲ್ಲಾ ಉದ್ದೀನ ಖಿಲಜಿ ಆಡಳಿತದಲ್ಲಿ ಮಲಿಕ ಕಾಫರನಿಂದ ನಿಯಮಿಸಲ್ಪಟ್ಟ ಅಸದ್ ಖಾನನು ಹುಕ್ಕೇರಿಯಲ್ಲಿ ನೆಲೆಸಿ ರಾಜ್ಯ ಕಾರಭಾರ ಮಾಡಿದನು. ಬಿಜಾಪುರದ ಯುಸುಫ್ ಆದಿಲನು ಪಡೆದ ಬಹಮನೀ ಭಾಗಗಳಲ್ಲಿ ಹುಕ್ಕೇರಿ, ರಾಯಬಾಗ, ಬೆಳಗಾವಿಗಳು ಪ್ರಮುಖವಾಗಿದ್ದವು. ಕ್ರಿ.ಶ. ೧೬೩೬ರಲ್ಲಿ ಮೊಗಲ ಸೈನ್ಯ, ತದನಂತರ ಅಹಮದನಗರ ಸೈನ್ಯ ರಾಯಬಾಗ, ಹುಕ್ಕೇರಿಗಳನ್ನು ಕೊಳ್ಳೆ ಹೊಡೆಯಿತು. [೫] ಈ ಹಿನ್ನೆಲೆಯಲ್ಲಿ ಹತ್ತರಗಿ ಗ್ರಾಮವೂ ಕೂಡ ದಾಳಿಗೆ ತುತ್ತಾಗಿದೆ. ಹೀಗೆ ಮಧ್ಯಕಾಲೀನ ಹುಕ್ಕೇರಿ ಭಾಗದ ಜನ ಜೀವನ ಲೂಟಿ, ಹಿಂಸೆ, ದಾಳಿಗಳಿಂದ ಜರ್ಜರಿತವಾಗಿತ್ತು. ಬಿಜಾಪುರದ ಆದಿಲಶಾಹೀ ಪತನಾನಂತರ ಈ ಪ್ರದೇಶವು ಕೆಲಕಾಲ ಪೇಶ್ವೆಯವರ, ತದನಂತರ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟು ನೆಮ್ಮದಿಯ ಉಸಿರನ್ನು ಬಿಡುವಂತಾಯಿತು.

ದಾಳಿಗಳು ನಡೆದಾಗ ಜನ-ಜೀವನ ಅಸ್ತವ್ಯಸ್ತವಾಗುತ್ತಿತ್ತು. ಹಳ್ಳಿಗಳು ತತ್ತರಿಸುತ್ತಿದ್ದವು. ವಿಜಯನಗರ ರಾಜ್ಯದ ಪತನದ ನಂತರ ಬೆಳಗಾವಿ ಜಿಲ್ಲೆಯು ವಿಜಾಪುರದ ಆಡಳಿತಕ್ಕೆ ಒಳ ಪಟ್ಟಿದ್ದರಿಂದ ಇವರ ವೈರಿಗಳಾದ ಮೊಗಲರ, ಮರಾಠರ ದಾಳಿಗಳು ಆಗಾಗ ನಡೆಯುತ್ತಿದ್ದವು. ಜೀವದ ಭಯದಿಂದ ಜನರು ಊರನ್ನು ತ್ಯಜಿಸಿ ಬೇರೆಡೆಗೆ ಪಲಾಯನ ಗೈಯ್ಯುತ್ತಿದ್ದರು. ಸ್ಥಳೀಯರ ಹೇಳಿಕೆಯಂತೆ, ''ಸೈನ್ಯ ಬರುವುದು ಗೊತ್ತಾದಾಗ ಜನರು ಮನೆಯನ್ನು ತೆರವು ಮಾಡಿ ತಮ್ಮ ಹತ್ತಿರವಿದ್ದ ಬೆಳ್ಳಿ-ಬಂಗಾರ, ನಗ-ನಾಣ್ಯಗಳನ್ನು ತೆಗೆದುಕೊಂಡು ದೂರದ ದೇವಾಲಯಗಳಲ್ಲಿ ಅಡಗಿಕೊಂಡು ತಾತ್ಪೂರ್ತಿಕವಾಗಿ ಇರುತ್ತಿದ್ದರು. ಇಲ್ಲವೆ ಹೊಲಗಳಲ್ಲಿಯ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ದಾಳಿಕಾರರು ತಿರುಗಿ ಹೋದ ಮೇಲೆ ಮನೆಗಳಿಗೆ ಮರುಳುತ್ತಿದ್ದರಂತೆ.''[೬] ಇಂಥಹದೇ ಹೇಳಿಕೆಯನ್ನು ರಾಯಬಾಗದ ಜನರಿಂದಲೂ ಕೇಳುತ್ತೇವೆ: ''ಹಗಲು ಒಂದು ಕಡೆ ಇದ್ದರೆ ರಾತ್ರಿಯಲ್ಲಿ ಇನ್ನೊಂದು ಕಡೆ ಇರಬೇಕಾಗುತ್ತಿತ್ತು-ದಾಳಿಕಾರರ - ಭಯದಿಂದ'' ಹೆಚ್ಚಿನ ದಾಳಿಗಳೆಲ್ಲ ವಿಜಾಪುರದ ಆದಿಲಶಾಹಿಗಳ-ಮರಾಠಾ-ಪೇಶ್ವೆಯವರ ಆಳಿಕೆಯ ಅವಧಿಯಲ್ಲಿ ನಡೆದವುಗಳು. ಅವರು ಪರಸ್ಪರ ವೈರಿಗಳಾಗಿದ್ದರು. ಒಬ್ಬರ ರಾಜ್ಯದ ಹಳ್ಳಿಗಳನ್ನು ಮತ್ತೊಬ್ಬರು ಲೂಟಿ ಮಾಡುವುದು ಸಾಮಾನ್ಯವಾಗಿತ್ತು. ಶಿವಾಜಿಯ ಮಗ ಸಂಭಾಜಿ ರಾಯಬಾಗವನ್ನು ಬರ್ಬರ ರೀತಿಯಿಂದ ಲೂಟಿ ಮಾಡಿದ್ದುದು ಇತಿಹಾಸದ ಪುಟಗಳಲ್ಲಿ ದಾಖಲೆಯಾಗಿ ಉಳಿದಿದೆ. ಊರ ಸಂರಕ್ಷಣೆಗಾಗಿ ಗಾವುಂಡ (ಗೌಡ) ಮತ್ತು ಅವರ ಪರಿವಾರ, ಸಿಬ್ಬಂದಿಯಿದ್ದರೂ ಕೂಡ ದೊಡ್ಡ ಸೈನ್ಯದ ಮುಂದೆ ಅಸಹಾಯ ಕರಾಗುತ್ತಿದ್ದರು.

*ಐತಿಹಾಸಿಕ ಸಂಗತಿಗಳನ್ನು ಪುಷ್ಟೀಕರಿಸಲು ಲಿಖಿತ ದಾಖಲೆಗಳು ಮೌನವಾದಾಗ ಪರಂಪರಾಗತ ಹೇಳಿಕೆಗಳು ಆಧಾರವಾಗುತ್ತವೆ.* ಅವುಗಳಲ್ಲಿ ಸತ್ಯಾಂಶವಿದ್ದೇ ಇರುತ್ತದೆ. ಈ ಹಿನ್ನೆಲೆಯಲ್ಲಿ ಮೇಲಿನ ಪರಂಪರಾಗತ ಕಥನದಲ್ಲಿ ನಿಜಾಂಶವಿದೆ.

**ಶಿಲ್ಪಕಲೆ :** ಚಾಲುಕ್ಯರ ಸಾಮ್ರಾಜ್ಯ ವಿಸ್ತರಿಸಿದಂತೆ ಅವರ ಶೈಲಿಯ ವೈಭವದ ವಿಕಾಸ, ವಿಸ್ತಾರವೂ ಆಯಿತು. ಆದ್ದರಿಂದಲೇ ಚಾಲುಕ್ಯ ಶೈಲಿಯ ದೇವಾಲಯಗಳನ್ನು ಉತ್ತರ ಕರ್ನಾಟಕ ದಲ್ಲೆಲ್ಲಾ ಕಾಣುತ್ತೇವೆ. ನಿದರ್ಶನವೆಂಬಂತೆ ಹತ್ತರಗಿಯಲ್ಲಿ ಎರಡು ಶಿವ ದೇವಾಲಯಗಳಿವೆ.

**ಕಲ್ಲೇಶ್ವರ ದೇವಾಲಯ :** ಊರ ಮಧ್ಯದಲ್ಲಿ ಪೂರ್ವಾಭಿಮುಖ ವಾಗಿ ಈ ದೇವಾಲಯವಿದೆ. ದೇವಾಲಯದ ಕಾಲ, ನಿರ್ಮಿತಿ ಕುರಿತು ಶಾಸನಗಳೇನೂ ದೊರೆತಿಲ್ಲ. ಇನ್ನಿತರ ಲಿಖಿತ ದಾಖಲೆಗಳು ಈವರೆಗೂ ಲಭ್ಯವಾಗಿಲ್ಲ. ಸ್ಥಳೀಯರ ಹೇಳಿಕೆಯಂತೆ ಈ ಗುಡಿಯನ್ನು ಬ್ರಾಹ್ಮಣರ ಪರಿವಾರದ ಸದಸ್ಯೆಯೊಬ್ಬಳು ಕಟ್ಟಿಸಿರುವಳಂತೆ! ಬಹುಶಃ ಪೇಶ್ವೆಯವರ ಕಾಲದಲ್ಲಿ ಶ್ರೀಮಂತ ಕುಟುಂಬದವರು ಈ ದೇವಾಲಯ ಶಿಥಿಲವಾಗತೊಡಗಿದಾಗ ಗಾರೆ-ಗಚ್ಚುಗಳಿಂದ ದುರಸ್ತಿ ಮಾಡಿಸಿರಬಹುದು. ಏಕೆಂದರೆ ಗುಡಿಯ ಮೇಲ್‌ಛಾವಣಿಯ ಮೇಲೆ ಗಚ್ಚಿನ ಲೇಪವಿದೆ. ಅಲ್ಲದೆ ಪೂರ್ವ ದಿಕ್ಕು ಹೊರತುಪಡಿಸಿ ಮೂರು ದಿಕ್ಕಿನಲ್ಲಿ ಮೂರಡಿಯ ಕಟ್ಟೆಯನ್ನು ಕಟ್ಟಿದ್ದಾರೆ. ಈ ಮಂದಿರ ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾಗಿದ್ದರೂ ಇದಕ್ಕೆ ಶಿಖರವಿಲ್ಲ. ಆದರೆ ಕಲ್ಲಿನ ಮೇಲ್‌ಛಾವಣಿಯಿದೆ. ಗರ್ಭಗುಡಿ, ಅಂತರಾಳ, ಸಭಾಮಂಟಪವನ್ನೊಳಗೊಂಡ ಈ ದೇವಾಲಯ ಕಪ್ಪು ಕಲ್ಲಿನ ಆವರಣ ಗೋಡೆಯನ್ನು ಹೊಂದಿದೆ; ಕೇವಲ ಕಲ್ಲುಕಂಬಗಳ ಮೇಲೆ ನಿಂತಿಲ್ಲ; ಸಭಾಮಂಟಪದ ಮೇಲೆ ಮೇಲ್‌ಛಾವಣಿಯಿಲ್ಲ; ಇದು ತೆರೆದ (open) ಮಂಟಪ ವಾಗಿದೆ. ಆದರೆ ಸುತ್ತೆಲ್ಲಾ ಕಪ್ಪು ಕಲ್ಲಿನ ಆವರಣ ಗೋಡೆಯಿದೆ. ತಳಭಾಗಕ್ಕೆ ಕಪ್ಪು ಕಲ್ಲಿನ ಚೌಕಾದ ದೊಡ್ಡ ಹೊದಿಕೆಗಳನ್ನು ಹಾಕಲಾಗಿದೆ. ಈ ಗುಡಿಯ ನಿರ್ಮಾಣ ಅಪೂರ್ಣವಾಗಿದೆ ಯೆಂಬುದು ತೆರೆದ ಸಭಾಮಂಟಪದಿಂದಲೇ ಗೊತ್ತಾಗುತ್ತದೆ.

ಗರ್ಭಗುಡಿ ವಿಸ್ತಾರ ೧೦'×೧೦' ವಿದ್ದು ಇದರ ಮಧ್ಯದಲ್ಲಿ ಅರೆಕೆಂಪು ಕಲ್ಲಿನ ಶಿವಲಿಂಗವಿದೆ. ಇಡೀ ದೇವಾಲಯವೆಲ್ಲ ಕಲ್ಲಿನ ಗೋಡೆಗಳ ಮೇಲೆಯೇ ನಿಂತಿದೆ. ಶಿವಾಲಯದೊಳಗಿನ ಕಂಬಗಳು ಅಲ್ಲಿ ಸಾದಾ ಸುಳುವುಗಳಿಂದ ಕೂಡಿವೆ. ಅಂತರಾಳ ೧೧'×೧೧' ಇದ್ದು ಇದರ ಕಲ್ಲು ಚೌಕಟ್ಟಿನ ಮಗ್ಗಲು ದುಂಡಾದ ಜಾಲಂದರವಿದೆ. ಸಭಾಮಂಟಪದ ವಿಸ್ತಾರ ೧೮'×೧೮' ಇದೆ.

**ಶಿಖರೇಶ್ವರ ದೇವಾಲಯ :** ಇದೊಂದು ಉತ್ತರಾಭಿಮುಖವಾದ ಶಿವದೇವಾಲಯ. ಇದಕ್ಕೆ ಎತ್ತರವಾದ ಶಿಖರವಿರುವದರಿಂದ ಇದಕ್ಕೆ ಶಿಖರೇಶ್ವರ ದೇವಾಲಯವೆನ್ನುವರು. ಮೂಲ ಹೆಸರು ತಿಳಿದು ಬಂದಿಲ್ಲ. ಈಗಿನ ಶಿಖರದ ಎತ್ತರ ಸುಮಾರು ೬-೭ ಅಡಿ ಇದ್ದು, ಇನ್ನೂ ಇದರಷ್ಟೇ ಇರಬಹುದಾದ ಶಿಖರದ ಮೇಲ್ಭಾಗ ಬಿದ್ದು ಹೋಗಿದೆ. ಶಿಖರದ ತಳವಿನ್ಯಾಸ ಅಗಲವಾಗಿದ್ದು ಮೇಲೆ ಹೋದಂತೆ ಕಿರಿದಾಗುತ್ತ ಹೋಗುತ್ತದೆ. ಇದರ ಮುಂದೆ ಖುಲ್ಲಾ ಜಾಗೆಯಿದೆ. ಇಲ್ಲಿಯ ಕಲ್ಲುಗಳನ್ನೆಲ್ಲ ಹೊರಗಿನಿಂದಲೇ ತರಿಸಲಾಗಿದೆ. ಸುಮಾರು ಎರಡನೇ ಶತಮಾನದಲ್ಲಿ, ಚಾಲುಕ್ಯ ಶೈಲಿಯಲ್ಲಿ ಈ ದೇವಾಲಯವನ್ನು ಸಂಪೂರ್ಣವಾಗಿ ಕಪ್ಪು ಕಲ್ಲುಗಳಿಂದಲೇ ಕಟ್ಟಲಾಗಿದೆ. ಗಚ್ಚು-ಗಾರೆಯಿಲ್ಲದೆ ಒಂದರ ಮೇಲೊಂದು ಚೌಕಾದ ಕಲ್ಲುಗಳನ್ನು ಇಟ್ಟು ನಿರ್ಮಿಸಲಾಗಿದೆ. ಇದು ಆಗಿನ ಕಟ್ಟಡದ ತಾಂತ್ರಿಕತೆ. ಈ ಗುಡಿಯ ನಿರ್ಮಾಣದ ಕಾಲ ಮತ್ತು ನಿರ್ಮಾಪಕರನ್ನು ಗುರುತಿಸಲು ಯಾವ ಶಿಲಾಲೇಖ, ಶಿಲಾಶಾಸನ ಲಭ್ಯವಿಲ್ಲ. ಅವು ಇದ್ದಿರಬಹುದಾದರೂ ಕಾಲಗರ್ಭದಲ್ಲಿ ನಾಶವಾಗಿ ಹೋಗಿರ ಬಹುದು.

ಗರ್ಭಗುಡಿ ೮'×೮' ಅಳತೆಯದಿದ್ದು ಹೊಳಪುಳ್ಳ ಸುಂದರವಾದ ಈಶ್ವರ ಲಿಂಗವಿದೆ. ಪಿಂಡ ಮತ್ತು ಪಾಣಿಪೀಠಗಳೆರಡೂ ಕಪ್ಪು ಕಲ್ಲಿನಲ್ಲಿವೆ. ಈ ಈಶ್ವರಲಿಂಗ ಸುಮಾರು ಎರಡು ಅಡಿಯಷ್ಟು ಎತ್ತರದ ಅಧಿಷ್ಠಾನದ ಮೇಲೆ ಇದೆ. ಗರ್ಭಗುಡಿಯ ಮೇಲ್ ಛಾವಣಿ ಕಲ್ಲಿನ ಹೊದಿಕೆಗಳಿಂದ ನಿರ್ಮಿತವಾಗಿದೆ. ಮೂರು ಪ್ರವೇಶ ದ್ವಾರಗಳಿದ್ದು, ಚೌಕಟ್ಟುಗಳೆಲ್ಲ ಸಂಪೂರ್ಣ ಕಪ್ಪು ಕಲ್ಲಿನವುಗಳೇ ಆಗಿವೆ. ಆದರೆ ಮೂಲತಃ ಬಾಗಿಲುಗಳೇ ಇಲ್ಲ. ಇತ್ತೀಚೆಗೆ ಸ್ಥಳೀಯರು ಮೊದಲನೆಯ, ಎರಡನೆಯ ದ್ವಾರಗಳು ಕಟ್ಟಿಗೆ ಮತ್ತು ಕಬ್ಬಿಣ ಬಾಗಿಲುಗಳನ್ನು ಕೂಡ್ರಿಸಿದ್ದಾರೆ. ಮಧ್ಯದ ಚೌಕಟ್ಟಿನ ಮಗ್ಗುಲಿನ ಕಲ್ಲು ಕಂಬಗಳು ಜಾಲಂದರಗಳಿಂದ ಕೂಡಿವೆ. ಬಾಗಿಲು ವಾಡದ ಮೇಲೆ ಸ್ವಲ್ಪ ಸುಳುವುಗಳು ಕಂಡುಬರುತ್ತವೆ.

ಅಂತರಾಳದ ವಿಸ್ತಾರ ೧೨'×೧೨' ಇದೆ. ಇದರ ಮೇಲ್ ಛಾವಣಿ ಮತ್ತು ಚೌಕಟ್ಟು ಕಲ್ಲಿನವೇ ಆಗಿವೆ.

**ಸಭಾ ಮಂಟಪ :** ವಿಶಾಲವಾದ ರಂಗಮಂಟಪದಲ್ಲಿ ನಾಲ್ಕು ಕಂಬಗಳಿದ್ದು ಇವುಗಳ ಮೇಲೆಯೇ ಮೇಲ್‌ಛಾವಣಿ ನಿಂತಿದೆ. ಇದಕ್ಕೆ ಕಲ್ಲ ಹಾಸು ಇದೆ. ಈ ನಾಲ್ಕೂ ಕಂಬಗಳ ಮೇಲೆ ಸುಳುವು ಇದೆ. ಉತ್ತರ ದಿಕ್ಕಿಗೆ ಮುಖ್ಯ ಪ್ರವೇಶ ದ್ವಾರವಿದ್ದು ಪೂರ್ವ-ಪಶ್ಚಿಮ ದಿಕ್ಕಿನಲ್ಲಿಯೂ ಪ್ರವೇಶ ದ್ವಾರಗಳು ಸಾಂಪ್ರದಾಯಿಕ ಚಾಲುಕ್ಯ ಶೈಲಿಯಲ್ಲಿವೆ. ಇವುಗಳ ಬಹುಭಾಗ ಬಿದ್ದು ಹೋಗಿದ್ದು ಈಗ ಪೂರ್ಣವಾಗಿ ಕಲ್ಲಿನ ಗೋಡೆಯನ್ನು ಕಟ್ಟಿ ಬಂದ ಮಾಡಲಾಗಿದೆ. ಗರ್ಭಗುಡಿ ಮತ್ತು ಅಂತರಾಳದ ನಡುವೆ ಕಲ್ಲಿನ ಚೌಕಟ್ಟು ಮಾತ್ರವಿದ್ದು ಬಾಗಿಲು ಇಲ್ಲ. ಸಭಾಮಂಟಪದ ಮಧ್ಯದಲ್ಲಿ ನಂದಿಯ ವಿಗ್ರಹವಿದೆ. ಇದು ಮೂಲ ನಂದಿಯಲ್ಲ. ಮೊದಲಿನದು ದೊಡ್ಡದಿದ್ದು ಭಿನ್ನವಾಗಿದ್ದರಿಂದ ಅದನ್ನು ತೆಗೆದು ಹೊಸದನ್ನು ಕೂಡ್ರಿಸಿದ್ದಾರೆ. ಇದು ಚಿಕ್ಕದಿದೆ. ಸಭಾ ಮಂಟಪದ ಗೋಡೆಗಳಲ್ಲಿ ಐದು ದೇವಕೋಷ್ಠಗಳಿವೆ. ಒಂದರಲ್ಲಿ ಶೇಷಶಾಯೀ ವಿಷ್ಣುವಿನ ಮೂರ್ತಿಯಿದೆ. ಶೇಷ ಹೆಡೆ ತೆರೆದಿದ್ದಾನೆ. ವಿಷ್ಣು ಮೂರ್ತಿ ಭಿನ್ನವಾಗಿದ್ದರೂ ಪೂಜೆ ಮಾಡುತ್ತಾರೆ. ಇದನ್ನು ಎಲ್ಲಿಂದಲೋ ತಂದು ಇಟ್ಟಂತೆ ಕಾಣುತ್ತದೆ. ಉಳಿದ ದೇವ





ಕೋಷ್ಠಗಳು ಖಾಲಿ ಇವೆ. ವಿಷ್ಣುವಿನ ಕೈಗಳು ಮುರಿದಿವೆ. ಈ ಮೂರ್ತಿ ಸುಮಾರು ೨೧/೨ ಅಡಿ ಉದ್ದ ಎರಡು ಅಡಿ ಅಗಲವಿದೆ. ಗುಡಿಯ ಹಿಂದೆ ಮತ್ತು ಎಡ-ಬಲಗಳಲ್ಲಿ ಸಾಕಷ್ಟು ವಿಶಾಲವಾದ ಖುಲ್ಲಾ ಜಾಗೆಯಿದೆ. ಆದರೆ ಪೂರ್ವ ದಿಕ್ಕಿನ ಭಾಗವನ್ನು ಸ್ಥಳೀಯರೊಬ್ಬರು ತಮ್ಮದೆಂದು ಸಾಧಿಸಿ ಮನೆಗಳನ್ನು ಕಟ್ಟಿಸಿದ್ದಾರೆ. ಆದರೆ ಪೂಜೆ ನಡೆಯಲು ವ್ಯವಸ್ಥೆಯನ್ನು ಮಾಡಿದ್ದಾರೆ. ಇಡೀ ಗುಡಿಗೆ ವಿದ್ಯುತ್‌ಕರಣ ಮಾಡಿಸಲಾಗಿದೆ. ಸಭಾ ಮಂಟಪದ ವಿಸ್ತಾರ ೧೬'×೧೬'. ಇದರ ಕಲ್ಲುಗಳು ದೊಡ್ಡವಿದ್ದು ಚಾಲುಕ್ಯ ಶೈಲಿಯಲ್ಲಿವೆ.



ಶಿಖರದ ಮುಂದಿನ ಖುಲ್ಲಾ ಜಾಗಾದಲ್ಲಿ ಹುಲ್ಲು ಬೆಳದು ನಿಂತಿದೆ.

ಇದರ ಸೌಂದರ್ಯೀಕರಣ, ಹೂ-ತೋಟ ಮಾಡುವಿಕೆಯ ಕಡೆಗೆ ಯಾರ ಗಮನವೂ ಹೋಗಿಯೇ ಇಲ್ಲ. ದುರಸ್ತಿ, ನಿರ್ವಹಣೆಯ ಕೊರತೆಯಿಂದಾಗಿ ಈ ದೇವಾಲಯ ಶಿಥಿಲವಾಗುತ್ತ ನಡೆದಿದೆ. ಕಾಲಾಂತರದಲ್ಲಿ ಬಿದ್ದು ಹೋಗುವ ಸಂಭವವಿದೆ. ವಿಶಿಷ್ಟ ರೀತಿಯ ಶಿಖರ ಮತ್ತು ಶಿಲ್ಪಕಲಾ ಸೌಂದರ್ಯವುಳ್ಳ ಈ ಗುಡಿ ಹಾಳಾಗುತ್ತಿರುವುದು ವಿಷಾದನೀಯ. ಪ್ರಾಚ್ಯವಸ್ತು ವಿಭಾಗ ದವರಾದರೂ ಇದನ್ನು ಸಂರಕ್ಷಿಸುವುದು, ಸುಸ್ಥಿತಿಯಲ್ಲಿಡುವುದು ಸೂಕ್ತ. ಆದರಿಂದ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡಿ ದಂತಾಗುತ್ತದೆ.

*ಸಾಹಿತ್ಯ :* ಗ್ರಾಮದ ಇತಿಹಾಸದಲ್ಲಿ ಒಬ್ಬ ಕವಿ ಆಗಿ ಹೋಗಿದ್ದಾನೆ. ಅವನ ಹೆಸರು ಕವಿಚೆನ್ನ. ಕಾಲ ಸು. ೧೭೫೦. ಇವನು ಶಿಬಿರಾಯ ಚರಿತ್ರೆಯನ್ನು ಬರೆದ ವೀರಶೈವ ಕವಿ. ಹತ್ತರಕಿಯ ವೀರನ ನೆನೆದು ಎಂದು ಇವನ ಕಾವ್ಯದಲ್ಲಿ ಬರುವುದರಿಂದ ಇವನು ಹತ್ತರಕಿ(ಗಿ)ಯವನಾಗಿರಬಹುದೆಂದು ಕರ್ನಾಟಕ ಕವಿಚರಿತೆಕಾರರ ಅಭಿಪ್ರಾಯವಾಗಿದೆ. 'ಶಿಬಿರಾಯನ ಚರಿತ್ರೆ' ತ್ರಿಪದಿಯಲ್ಲಿದ್ದು ೫ ಸಂಧಿ, ೫೨೩ ಪದ್ಯಗಳನ್ನು ಒಳಗೊಂಡಿದೆ. ಈ ಕವಿ ಗಣಪತಿ, ಸರಸ್ವತಿ, ಹತ್ತರಕಿ(ಗಿ)ಯ ವೀರಭದ್ರ, ಏಳೂರ ಮಾಣಿಕೇಶ್ವರ ಮುಂತಾದ ದೇವರುಗಳನ್ನು ನೆನೆಸಿದ್ದಾನೆ. *೫

ಐತಿಹಾಸಿಕತೆ, ಶಿಲ್ಪಕಲೆ, ಸಾಹಿತ್ಯ ಅಲ್ಪ ಪ್ರಮಾಣದಲ್ಲಿ ಯಾದರೂ ಹೊಂದಿದ ಹತ್ತರಗಿ ಗ್ರಾಮ ನಮ್ಮ ಸಾಂಸ್ಕೃತಿಕ ಪರಂಪರೆಯ ಪಳೆಯುಳಿಕೆಯಾಗಿ ನಿಂತಿದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಶೋಧ ಅವಶ್ಯಕ. ಹೊಸ ಸಂಶೋಧನೆಯಿಂದ ಹೆಚ್ಚಿನ ಅಂಶಗಳ ಗೋಚರಿಸಬಹುದು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. *ಕನ್ನಡ ವಿಶ್ವಕೋಶ* - ಸಂಪುಟ ಆರು., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪುಟ. ೮೦೧

*೨. A. Sundara : ***Early Chamber Tombs of South India***

*೩ ***Belagaum Dist Gazetter,*** (Revised Edition.) (p. 18, 19 & 20)

*೪ ಪರಂಪರಾಗತ ಹಿರಿಯರ ಹೇಳಿಕೆ - ನಮ್ಮ ಮುತ್ತಜ್ಜಿಯಿಂದ

*೫. ಆರ್. ನರಸಿಂಹಾಚಾರ್ಯ : *ಕರ್ನಾಟಕ ಕವಿ ಚರಿತೆ* , ಪು. ೨೫೪ - ೫೫,
ಟಿಪ್ಪಣಿ : - ಕ.ಕ.ಚ ಲೇಖಕರು ತಮ್ಮ ಪುಸ್ತಕದ ಅಡಿ ಟಿಪ್ಪಣಿಯಲ್ಲಿ ಹತ್ತರಕಿ ಎಂದರೆ ಬಿಜಾಪುರ ಜಿಲ್ಲೆಯ ಅರ್ಥಗಾ ಎಂದು ತರ್ಕಿಸಿದ್ದಾರೆ. ಆದರೆ ಅದು ಹತ್ತರಕಿಯಲ್ಲ. ಅಲ್ಲಿಯ ಜನರಿಗೆ ಅರ್ಥಗಾ ಅನ್ನಲು ಬಾರದ್ದರಿಂದ ಬಾಯಿನುಡಿಯಲ್ಲಿ ಹತ್ತರಕಿಯಾಗಿ, ಸರಕಾರಿ ದಾಖಲೆಗಳಲ್ಲಿ (Govt. Records) ಅರ್ಥಗಾವಾಗಿಯೇ ಇದೆ. ಅಲ್ಲದೆ ಅಲ್ಲಿ ಪುರಾತನ ವೀರಭದ್ರ ದೇವಾಲಯವಿಲ್ಲ. ಏಳೂರ (ಯಳ್ಳೂರ) ಗ್ರಾ. ಬೆಳಗಾವಿ ತಾಲೂಕಿನಲ್ಲಿದೆ, (ಜಿ. ಬೆಳಗಾವಿ)

ಡಾ॥ ಚೆನ್ನಕ್ಕ ಪಾವಟೆ *

# ಉಳವಿಯ ಕಡೆ ಬಾಗಿಲು : ಚಿಂತನ

'ಉಳವಿಯ ಕಡೆಯ ಬಾಗಿಲು', 'ಉಳವಿಯ ಕಡೆ ಬಾಗಿಲು' ಎಂಬ ಪದವೇ ಸಂಶೋಧಕರ ಕುತೂಹಲ ಕೆರಳಿಸುವಂತಿದೆ. ಉಳವಿ, ಉತ್ತರ ಕನ್ನಡ ಜಿಲ್ಲೆಯ ಅಂದಿನ ಕ್ಯಾಸನೂರ ಅರಣ್ಯ ಸೀಮೆಗೆ ಸೇರಿದ ಪ್ರದೇಶ ವೀರಶೈವರ ಪ್ರಾಚೀನ ಶರಣಕ್ಷೇತ್ರ. ಹನ್ನೆರಡನೆಯ ಶತಮಾನದ ಚನ್ನಬಸವಾದಿ ಶಿವಶರಣರು ನೆಲೆನಿಂತ ಪುಣ್ಯಭೂಮಿ. ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿಯ ಆರು ಪ್ರಸಿದ್ಧ ವೀರಶೈವ ಕೇಂದ್ರಗಳೆನಿಸಿದ ಶ್ರೀಶೈಲ, ಹಂಪೆ, ಲಕ್ಷ್ಮೇಶ್ವರ, ಗುಮ್ಮಳಾಪುರ, ಕಲ್ಯಾಣ ಹಾಗೂ ಉಳವಿಗಳು ಪ್ರಮುಖವೆನಿಸಿವೆ.

ಅಂದು, ಶಿವಶರಣರು ಕಲ್ಯಾಣದಿಂದ ಅತ್ಯಂತ ಪ್ರಯಾಸಕರ ದುರ್ಗಮ ಅರಣ್ಯ ಪ್ರದೇಶಗಳಲ್ಲಿ ಹಾಯ್ದು, ನೋವು ನಲಿವನ್ನು ಅನುಭವಿಸಿ ಉಳಿವಿ ಕ್ಷೇತ್ರಕ್ಕೆ ಬಂದು ನೆಲೆನಿಂತರು. ಅಂದಿನ ಗಂಭೀರ ಇತಿಹಾಸವನ್ನು ಶಾಸನಗಳು ಹೇಳಿದರೂ, ಅಧಿಕೃತವಾಗಿ ಉಳವಿ ಇತಿಹಾಸವನ್ನೊಳಗೊಂಡವು ಎರಡು ಕೃತಿಗಳು. ೧) ಸೋದೆಯ ಸದಾಶಿವರಾಯನ **ಉಳುವೆಯ ಮಹಾತ್ಮೆ** ಒಂದಾದರೆ, ೨) ಉಳವಿ ಚನ್ನಬಸವೇಶ್ವರ **ವಾರ್ಧಕವೆಂಬುದು** ಅಜ್ಞಾತ ಕವಿಕೃತಿ. ಉಳವಿಯ ಪ್ರಾಚೀನ ಇತಿಹಾಸ ವಿವರಿಸುವಲ್ಲಿ ಎರಡು ಕೃತಿಗಳು ತುಂಬ ಮಹತ್ವದ ಆಕರಗಳೆನಿಸಿವೆ. 'ಉಳುವೆ ಮಹಾತ್ಮೆ' ಕೃತಿ ಇಂದಿನವರೆಗೆ ಶಿವಶರಣರ ಅಜ್ಞಾತವಾಗಿದ್ದ ಪೂರ್ವಾರ್ಧದ ದಂಡಿನದಾರಿ ತಿಳಿಸಿದರೆ, ಉತ್ತರಾರ್ಧದ ದಾರಿಯನ್ನು ವೀರಶೈವ ಉಳಿದ ಕೃತಿಗಳಿಗಿಂತ ಭಿನ್ನವಾಗಿ ಹೇಳಿದ ಸದಾಶಿವರಾಯನ ಸಂಶೋಧಕ ದೃಷ್ಟಿಯನ್ನು ಪ್ರತಿಬಿಂಬಿಸುವಂತಿದೆ.

ಇಲ್ಲಿಯವರೆಗೆ ಶರಣರ ದಂಡಿನದಾರಿಯ ಸೂಕ್ಷ್ಮ ವಿವೇಚನೆ ಕೈಕೊಂಡ ಕೃತಿಗಳಲ್ಲಿ ಕಾಲಜ್ಞಾನ, ತುರುಗಾಹಿ ರಾಮಣ್ಣ, ರೇಚಣ್ಣನ ವಚನಗಳು, ವಿರೂಪಾಕ್ಷನ ಚೆನ್ನಬಸವ ಪುರಾಣ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ್ಯ, ಶರಣಲೀಲಾಮೃತಗಳಿಗೆ ಭಿನ್ನವಾಗಿ ಸೋದೆ ಸದಾಶಿವರಾಯನ 'ಉಳುವೆ ಮಹಾತ್ಮೆ' ಸಂಶೋಧನಾತ್ಮಕ ವಿವೇಚನಾ ಕೃತಿಯೆನಿಸಿದೆ. ಅದರಲ್ಲಿ ಕಲ್ಯಾಣ ಕ್ರಾಂತಿಯ ತರುವಾಯ ಶರಣರ ದಂಡು ಚೆನ್ನಬಸವಣ್ಣನವರ ನೇತೃತ್ವದಲ್ಲಿ ಕಲ್ಯಾಣದಿಂದ ಪರವತಾಬಾದ (ಗುಲಬರ್ಗ ತಾಲೂಕು) ಪೇರಜಾಬಾದ (ಫಿರೋಜಾಬಾದ, ಗುಲಬರ್ಗ ತಾಲೂಕು) ಕೊಳಕೂರು (ಜೇವರಗಿ ತಾಲೂಕು) ಬಡದಳ ಸತ್ತೀಗೆರೆ (ಸವದತ್ತಿ ತಾಲೂಕು) ಮುರಗೋಡ (ಸವದತ್ತಿ ತಾಲೂಕು) ಹುಬ್ಬಳ್ಳಿ, ಬಂಕಾಪುರ, ಹಾನಗಲ್ಲು ಮಳಿಗೆ (ಮಳಗಿ, ಮುಂಡಗೋಡ ತಾಲೂಕು), ಜಾಂಗಲಕ್ಷೇತ್ರ (ಜಗಳಬೆಟ್ಟ, ಸೂಪಾ ತಾಲೂಕು)ಕ್ಕೆ ಬಂದು, ಅಲ್ಲಿಯ ರಾಮೇಶ್ವರ ದರ್ಶನ ಪಡೆದು ಘಟ್ಟವನ್ನಿಳಿದು ಸೋದೆಯಪುರ (ಸಿರ್ಸಿ ತಾಲೂಕು)ವನ್ನು ಪ್ರವೇಶಿಸುತ್ತದೆ. ಸೋದೆಯಲ್ಲಿ ಸೋಮೇಶಲಿಂಗ, ಪಂಚಬ್ರಹ್ಮೇಶ್ವರ ಲಿಂಗ ಹಾಗೂ ಪಂಚಮಠಗಳನ್ನು ಸಂದರ್ಶಿಸಿದ ಶರಣರ ದಂಡು ಉಳುವೆಯ ಪುಣ್ಯಕ್ಷೇತ್ರದ ಕಡೆಗೆ ಪಯಣಿಸಿದೆ. ಮಾರ್ಗಮಧ್ಯದಲ್ಲಿ ತುಂಬೆಯ ಬೀಡಿನ (ಯಲ್ಲಾಪುರ ತಾಲೂಕು) ಲಂಬೋದರ, ಹನುಮ, ಸದಾಶಿವಲಿಂಗವನ್ನು ಭಕ್ತಿಯಿಂದ ಕಂಡು ಬೆನಕನಘಟ್ಟ (ಯಲ್ಲಾಪುರ ತಾಲೂಕು) ಅಂಜನಾನದಿ (=ಕರಿಹೊಳೆ=ಕಾಳಿನದಿ) ಬಿಲ್ವವನಗಳನ್ನು ದಾಟ ಯಲ್ಲಾಪುರಕ್ಕೆ ಆಗಮಿಸಿದೆ. ಅಲ್ಲಿಯ ಕರಿಹೊಳೆ ಮಠದ ಜಂಗಮತತಿಗಳನ್ನು ಕಂಡು ಜರಿಪರ್ವತದ ಮೂಲಕ ಬಿದುರೆಪುರ(ಬಿದರಳ್ಳಿ, ಯಲ್ಲಾಪುರ ತಾಲೂಕು)ಕ್ಕೆ ಬರುತ್ತಾರೆ. ಆಮೇಲೆ ಹೆಬ್ಬಳವಳ್ಳಿಯ (ಹೆಬ್ಬಳ, ಸಿರ್ಸಿ ತಾಲೂಕು), ಹತ್ತಿರವಿರುವ ಪರ್ವತ, ಪಂಚಲಿಂಗವಿರುವ ಗುಹೆಯಲ್ಲಿಗೆ ನಡೆದು ಬರುತ್ತಾರೆ. ಅಲ್ಲಿಂದ ಉಳುವೆಯ ಕಡೆಗೆ ಮುನ್ನಡೆಯುತ್ತಾರೆ'' ಎಂದು ಸದಾಶಿವರಾಯ ಉಳುವೆ ಮಹಾತ್ಮೆಯಲ್ಲಿ ಅಷ್ಟೇ ಸ್ಪಷ್ಟವಾಗಿ, ಸಂಶೋಧಿತವಾಗಿ ತಿಳಿಸಿರುವನು.

* ರೀಡರ್, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ , ಧಾರವಾಡ – ೫೮೦ ೦೦೩

'ಉಳವಿ ಚೆನ್ನಬಸವೇಶ್ವರ ವಾರ್ಧಕ' ಕನ್ನಡ ಸಂಶೋಧನೆ ಸಂಸ್ಥೆಯ ಅಪ್ರಕಟಿತ ಹಸ್ತಪ್ರತಿ. ಇತ್ತೀಚೆಗೆ 'ಶರಣಕ್ಷೇತ್ರ ಉಳವಿ' ಕೃತಿಯಲ್ಲಿ ಪ್ರಕಟಿತಗೊಂಡಿದೆ. ಚನ್ನಬಸವಣ್ಣನೊಂದಿಗೆ ಬಂದಂಥ ಶಿವಶರಣರು ಸೋದೆಯ ಅನಂತರ ಸೂಪಾ ಹತ್ತಿರದ 'ಜಗಳ್ ಪೇಟ್' ಇಂದಿನ ಜಗಳಬೆಟ್ಟದ ಮೂಲಕ ಹಾಯ್ದು ಮುಂದುವರೆದರೆಂದು ತಿಳಿಸುವ ಕೃತಿ. ''ಸುಧಾಪುರದರಸು ಮಾಳ್ಪ ಬಂಧುರ ಬಸವೇಶ್ವರನುತ್ಸವ''ವೆಂಬ ಮಾತು ಸದಾಶಿವರಾಯನ ಸಮಕಾಲೀನದಲ್ಲಿಯೆ ರಚಿತವಾದ ಈ ಕೃತಿಯ ಮಹತ್ವ ತಿಳಿಸುವಂತಿದೆ.

ಕಾಶಿಗಿಂದಧಿಕಮೆನಿಸುವ ಫಲಗಳಿಂ
ಲೇಸಿನಿಂ ಕೇತಾರಕಿಂದಧಿಕಮೆನಿಸು
ವಂಸುರಂತಪ ವಿರಹಿತತ್ವದಿಂ ಶ್ರೀಶೈಲದಧಿಕಮೆನಿಸಿ ಮೆರೆಗುಂ
ಕ್ಲೇಶಬಡಿಸುವ ಕಂಬಿಭಾರ ವಿರಹಿತದಿ ರಾ
ಮೇಶಕಿಂದಧಿಕಮೆಂದೆನಿಸಿ ರಾಜಿಪುದು ಭವ
ಪಾಶಮೋಚನ ಚೆನ್ನಬಸವನ ನಿವಾಸದಿಂದುಳುವಿಗೆಣೆಗಾಣೆ
ನಿಳೆಯೊಳ್ ॥

ಎಂಬ ಪದ್ಯ ಕಾಶಿ ಕೇದಾರ ಶ್ರೀಶೈಲ, ರಾಮೇಶಕ್ಕಿಂತ, ಉಳವಿಕ್ಷೇತ್ರ, ಅಧಿಕವಾಗಿದ್ದುದನ್ನು ತುಂಬ ಅರ್ಥವತ್ತಾಗಿ ಸೂಚಿಸಿದೆ.

ಸೋದೆಯಿಂದ ಉಳವಿಗೆ ಹೊರಟು ಶರಣರು ಮಾರ್ಗ ಮಧ್ಯದಲ್ಲಿ ದಟ್ಟಕಾಡನ್ನು ದಾಟಿ ಮುಂದೆ ಪ್ರಯಾಣಿಸಿದ್ದರೆನ್ನಬೇಕು. ಅಲ್ಲಿ ಉದ್ದಕ್ಕೂ ನಂದಿಕಂಬಗಳು ಅಥವಾ ಕೂಗು ಬಸವನ ಕಂಬಗಳು ಲಭಿಸುತ್ತವೆ. ಈ ವಿಷಯಕವಾಗಿ ಡಾ॥ ಬಿ. ಎಸ್. ಗದ್ದಗಿಮಠ ಅವರು ''ನಂದಿಕಂಬಗಳು ವೀರಶೈವ ಸ್ಮಾರಕಗಳಾಗಿವೆ. ತೊರಗಲ್ಲಿನಿಂದ ಉಳಿವಿಯ ಬಾಗಿಲವರೆಗೆ ಈ ಭಾಗದಲ್ಲಿ ಸುತ್ತುಮುತ್ತಲಿನ ಕಂಬಗಳಿಗೆ ಹೇಳುವ 'ಕೂಗು ಬಸವನ ಕಲ್ಲು' ನಾಮಾಂಕಿತಗಳಿವೆ. ಕೆಲವು ಕಂಬಗಳಲ್ಲಿ ಶಿವಶರಣರು ಸಿದ್ಧರಾಮನ ವಚನಾಂಕಿತವುಳ್ಳ ಶಾಸನಗಳನ್ನು ಕೆತ್ತಲಾಗಿದೆ. ಶಿವಶರಣರು ಉಳಿವಿಗೆ ಹೋಗುವಾಗ ಈ ಕಂಬಗಳಿರುವ ಸ್ಥಳಗಳಲ್ಲಿ ವಿಶ್ರಾಂತಿ ಪಡೆದು ಹೋಗಿರುವರೆಂಬ ಐತಿಹ್ಯ ಇಂದಿಗೂ ಜನಮನದಲ್ಲಿ ನೆಲೆನಿಂತಿದೆ. ಯಲ್ಲಾಪುರದ ಹತ್ತಿರವಿರುವ ಕೋ ಬಸಪ್ಪ ಎಂಬ ಸ್ಥಳದ ಹೆಸರೂ ಇದನ್ನೇ ಸೂಚಿಸುವಂತಿದೆ'' ಎಂದಿರುವರು.

ಈಗ ನಾವು ಗಮನಿಸುವದು ಚನ್ನಬಸವಾದಿ ಶಿವಶರಣರ ಸ್ಮಾರಕಗಳಲ್ಲಿ ಒಂದಾದ 'ಉಳವಿಯ ಕಡೆ ಬಾಗಿಲು' ಎಂಬ ಮೂರು ಕಲಾತ್ಮಕ ಚೌಕಟ್ಟುಗಳ ವಿಚಾರ. ಶರಣರ ದಂಡು ಪ್ರಯಾಣಗೈಯುತ್ತ ಮುರುಗೋಡಿನವರೆಗೆ ನಡೆದು ಬಂದಿದ್ದಿತಷ್ಟೇ. ಮುರುಗೋಡದ ಪ್ರಕೃತಿದತ್ತವಾದ ರಹಸ್ಯ ಗವಿ ಕೆಲಕಾಲವಾದರೂ ಶಿವಶರಣರಿಗೆ ವಚನ ಸಾಹಿತ್ಯ ರಕ್ಷಣೆ ಕೈಕೊಳ್ಳಲು ಗುಪ್ತಸ್ಥಳವೆನಿಸಿರಲಿಕ್ಕೂ ಸಾಕು. ಏಕಕಾಲದಲ್ಲಿ ಸಾವಿರಾರು ಶಿವಶರಣರು ಕುಳಿತು ಧ್ಯಾನ ಕೈಕೊಳ್ಳಲು ಅನುಕೂಲವಾಗುವಷ್ಟು ವಿಶಾಲವಾದ ಅಷ್ಟೇ ರಹಸ್ಯವಾದ ಗುಹೆ. ನೆಲಸಮವಾದ ಬಯಲು ಜಾಗದಲ್ಲಿ ಇಲ್ಲಿ ಗುಹೆಯಿದೆ ಎಂಬುದೂ ಅಷ್ಟೇ ರಹಸ್ಯವಾಗಿರುವಂಥದು.

ಶಿವಶರಣರು ಮುರುಗೋಡಿನ ಈ ರಹಸ್ಯಗುಹೆಯಲ್ಲಿ ತಂಗಿರುವಾಗ ಗೋವೆ ಕದಂಬ ದೊರೆಗಳ ನೆರವಿನಿಂದ ಉಳುವಿ ಕ್ಷೇತ್ರದ ಪುಣ್ಯಭೂಮಿಯನ್ನು ತಮ್ಮ ಅಂತಿಮ ನೆಲೆಯನ್ನಾಗಿ ತೆಗೆದುಕೊಳ್ಳಲು ನಿರ್ಧರಿಸಿದಂತಿದೆ. ಅದರ ಸ್ಮರಣೆಗಾಗಿ ಈ ಪರಿಸರದಲ್ಲಿರುವ ಉಳವಿಯ ಕಡೆ ಬಾಗಿಲು ಎಂದು ಕರೆಸಿಕೊಳ್ಳುವ ಕಲ್ಲಿನ ಚೌಕಟ್ಟುಗಳು ಜನದ ಭಕ್ತಿಶ್ರದ್ಧೆಗಳನ್ನು ಸಂಪಾದಿಸಿ ಕೊಂಡಿವೆ. ಮುರುಗೋಡಿನ ಹೊರವಲಯದಲ್ಲಿ ಒಂದು, ನೆರೆಯ ಕಾರಿಮನೆಯ ಹೊಲದ ಆವರಣದಲ್ಲಿ ಒಂದು, ಅಲ್ಲಿಯೆ ಸಮೀಪದಲ್ಲಿದ್ದ ಮೈಲಾರ ಲಿಂಗನ ದೇವಸ್ಥಾನದ ಹೊರಜತ್ತಿನಲ್ಲಿ ಒಂದು-ಹೀಗೆ ಆ ಪರಿಸರದಲ್ಲಿರುವ ಮೂರು ಚೌಕಟ್ಟುಗಳು ಐತಿಹಾಸಿಕ ಪಳಿಯುಳಿಕೆಗಳೆಂಬ ಗೌರವಕ್ಕೆ ಸಾಕ್ಷಿಯಾಗಿವೆ. ಅವುಗಳ ಮೇಲೆ ಯಾವುದೇ ಬರಹಗಳಿಲ್ಲ.

ಚೌಕಾಕಾರದ ಕಟ್ಟೆಯ ಮೇಲೆ ಅದರ ದುಪ್ಪಟ್ಟು ಎತ್ತರದಲ್ಲಿ ಕಟ್ಟಿದ ಚೌಕಾಕಾರದ ಕಟ್ಟೆ, ಅದರ ಮೇಲೆ ಷಟ್‌ಕೋನಾಕೃತಿಯ ಕಲಾತ್ಮಕ ವಿನ್ಯಾಸಗಳಿಂದೊಡಗೂಡಿದ ಎರಡು ಸ್ತಂಭಗಳು, ಅವುಗಳ ಮೇಲೆ ಎರಡು ವೃತ್ತಾಕಾರದ ಗುಮ್ಮಟಗಳು, ಅದರ ಮೇಲೆ ಎರಡು ವಿನ್ಯಾಸಗಳಿಂದ ಕೂಡಿದ ಬೋದುಗೆಗಳು, ಆ ಎರಡು ಬೋದುಗೆಗಳನ್ನು ಒಂದುಗೂಡಿಸಿರುವ ಒಂದು ತೊಲೆ, ಮೂರು ಚೌಕಟ್ಟುಗಳು ಒಂದೇ ರೀತಿಯ ಕಲಾತ್ಮಕ ವಿನ್ಯಾಸ ಹೊಂದಿವೆ. ಅಷ್ಟೇ ಆಕರ್ಷಕವಾಗಿವೆ. ಮೂರನೆಯ ಚೌಕಟ್ಟಿನ ತದಿಯ ಮೇಲೆ ೩ ದಳದ ಪತ್ರಿಯ ಸಂಕೇತವಾಗಿ ಶಿವಶರಣರು ಉಳವಿಗೆ ಹೋಗುವಾಗ ನೆಲೆನಿಂತ ಸ್ಥಳಗಳಲ್ಲಿ ನಿಲ್ಲಿಸಿದ ಚೌಕಟ್ಟುಗಳು ಎಂದು ಜನವಂತಿ, ಐತಿಹ್ಯಗಳು ಹೇಳುತ್ತವೆ. ಇವನ್ನು ಶರಣರ ಇತಿಹಾಸದ ಹಿನ್ನೆಲೆಯಲ್ಲಿ ನಾವು ಗಮನಿಸಿದರೆ ಮುಂದೆ ಬರುವ ಪ್ರಯಾಣಿಕರಿಗೆ ಶರಣರ ದಂಡಿನ ದಾರಿಯ ಸೂಚಕವಾಗಿ ಈ ಚೌಕಟ್ಟುಗಳನ್ನು ಕಾಲಾಂತರದ ಶರಣಾಭಿಮಾನಿಗಳು ನಿಲ್ಲಿಸಿರಬೇಕೆನಿಸುತ್ತದೆ.

ಶರಣರು ನಡೆದ ಮಾರ್ಗವನ್ನು ಅರಿಸಿಕೊಂಡು

ಬರುವವರಿಗೆ ಮಾರ್ಗದ ಗುರುತಿನ ಸಂಕೇತಗಳೆಂಬಂತೆ ಅಂದು ಅವು ಕೆಲಸ ಮಾಡಿರಬೇಕೆನಿಸುತ್ತವೆ. ಇಂಥ ಗುರುತಿನ ಸಂಕೇತಗಳು ಮುರುಗೋಡದಲ್ಲಿದ್ದಂತೆ ದಂಡಿನ ದಾರಿಗುಂಟ ಇರಬೇಕು. ಕಾಲಾಂತರದಲ್ಲಿ ಅವೆಲ್ಲ ನಾಶವಾಗಿ, ಮುರುಗೋಡದ ಮೂರು ಚೌಕಟ್ಟುಗಳು ಮಾತ್ರ ಶರಣರ ಸ್ಮಾರಕಗಳೆಂಬಂತೆ ಉಳಿದು ಕೊಂಡು ಬಂದಿರಬೇಕೆನಿಸುತ್ತದೆ.

ಉಳವಿಯ ಸಂದರ್ಶನ ಮಾಡುವಲ್ಲಿ ಶಿವಶರಣರಿಗೆ ಮುರುಗೋಡೆ ಉಳವಿಯ ಕಡೆ ಬಾಗಿಲು ಎಂಬಂತೆ ಕಂಡದ್ದರಿಂದ ಸಾಂಕೇತಿಕವಾಗಿ ರಚಿತವಾದವು. ಇಲ್ಲಿಯ ಚೌಕಟ್ಟುಗಳು ಎನ್ನಬಹುದು. ಇವೇ ಕಾಲಾಂತರದಲ್ಲಿ ಉಳವಿಯ ಕಡೇ ಬಾಗಿಲು ಗಳೆಂಬಂತೆ ಇತಿಹಾಸ ಪ್ರಸಿದ್ಧ ಕುರುಹುಗಳಾಗಿ ಉಳಿದು ನಿಂತಿವೆ.

ಏನೇ ಆದರೂ ಶಿವಶರಣರ ದಂಡಿನ ದಾರಿಯ ವಿಸ್ತೃತ ಅಧ್ಯಯನದ ಕೊರತೆ, ಶರಣರ ಮಾರ್ಗಮಧ್ಯದ ಅವಶೇಷಗಳ ಕೂಲಂಕಷ ಅಧ್ಯಯನದ ಕೊರತೆ ಇಂದು ಸಂಶೋಧಕರನ್ನು ಕಾಡುತ್ತಿದೆ. ಶಿವಶರಣರು ಕಲ್ಯಾಣದಿಂದ ಉಳುಮೆಗೆ ಬಂದ ದಾರಿಯ ಸಮಗ್ರಶೋಧ ಇನ್ನೂ ವ್ಯವಸ್ಥಿತವಾಗಿ ನಡೆಯಬೇಕಿದೆ. ಎಂಟುನೂರು ವರ್ಷ ಕಳೆದರೂ ಈ ದಾರಿಯನ್ನು ಅಕ್ಕಪಕ್ಕದ ಹಳ್ಳಿಯ ಜನ 'ದಂಡಿನ ದಾರಿ' ಎಂದು ನೆನಪಿಟ್ಟು ಕರೆಯುತ್ತಿರುವದು ಅದರ ಐತಿಹಾಸಿಕ ಮಹತ್ವಕ್ಕೆ ನಿದರ್ಶನವೆನ್ನುವಂತಿದೆ.

ಡಾ॥ ವಿಠ್ಠಲ ಪೋತದಾರ *

# ಪ್ರಾಚೀನ ಕರ್ನಾಟಕದಲ್ಲಿ ಬಿಟ್ಟಿ ( ಉಚಿತ ಸೇವೆ ) ಪ್ರಚಲಿತವಿತ್ತೆ?

ತೆರಿಗೆಯ ಬದಲಾಗಿ ಉಚಿತ ಸೇವೆಯನ್ನು ಸರ್ಕಾರದ ಆದೇಶದ ಅನ್ವಯ ನೀಡುವ ಪದ್ಧತಿ ಭಾರತದಲ್ಲಿ ಪೂರ್ವ ಕಾಲದಿಂದಲೂ ಪ್ರಚಲಿತವಿದ್ದುದನ್ನು ಕಾಣುತ್ತೇವೆ. ಈ ವ್ಯವಸ್ಥೆಯ ಅಡಿಯಲ್ಲಿ ತೆರಿಗೆ ನೀಡಲು ಸಾಧ್ಯವಾಗದವರು ಆ ಮೊತ್ತಕ್ಕೆ ಸಮನಾದ ಸೇವೆಯನ್ನು ಸಲ್ಲಿಸುವುದು ಪ್ರಾಚೀನ ಕಾಲದ ತೆರಿಗೆ ಪದ್ಧತಿಯ ಒಂದು ಅಂಗವಾಗಿದ್ದಿತು. ದೊರೆಯಿಂದ ರಕ್ಷಣೆ ಪಡೆದವರೆಲ್ಲರೂ ಅದಕ್ಕೆ ಬದಲಾಗಿ ಕಾಣಿಕೆಯನ್ನು ನೀಡಬೇಕು ಎನ್ನುವ ತತ್ವಕ್ಕೆ ಅನುಗುಣವಾಗಿ ಈ ಪದ್ಧತಿಯೂ ಸಹ ತೆರಿಗೆ ವ್ಯವಸ್ಥೆಯಲ್ಲಿ ಸೇರ್ಪಡೆಗೊಂಡು ಕ್ರಮೇಣವಾಗಿ ಪ್ರಾಧಾನ್ಯತೆಯನ್ನು ಪಡೆಯತೊಡಗಿತು. ನಂತರದಲ್ಲಿ ತೆರಿಗೆ ಪದ್ಧತಿಯಲ್ಲಿ ಅನೇಕ ಬದಲಾವಣೆಗಳು ಬಂದರೂ ಸಹ ಉಚಿತ ಸೇವೆಯನ್ನು ಒದಗಿಸುವದು ಕಡ್ಡಾಯವಾಗತೊಡಗಿತು. ಪ್ರಾಚೀನ ಕಾಲದ ಸಾಹಿತ್ಯ ಮತ್ತು ಶಾಸನಗಳಲ್ಲಿ ಇದನ್ನು ವಿಷ್ಟಿ ಎಂದು ಕರೆಯಲಾಗಿದೆ.

'ಅರ್ಥಶಾಸ್ತ್ರ'ದಲ್ಲಿ ಕೌಟಿಲ್ಯನು ಸಮಾಹರ್ತ ಎಂಬ ಅಧಿಕಾರಿಯನ್ನು ಹೆಸರಿಸಿ ಈತನು ತನ್ನ ಅಧೀನಕ್ಕೆ ಒಳಪಟ್ಟ ಪ್ರದೇಶದ ವಿವಿಧ ಗ್ರಾಮಗಳ ಪಟ್ಟಿ, ಈ ಪ್ರದೇಶದಲ್ಲಿಯ ಬೆಳೆ, ಜಾನುವಾರು, ಅರಣ್ಯ ಉತ್ಪನ್ನ ಮುಂತಾದವುಗಳ ವಿವರಗಳನ್ನು ಹೊಂದುವುದರ ಜೊತೆಗೆ ವಿಷ್ಟಿಯ ಬಗ್ಗೆ ಮಾಹಿತಿಯನ್ನು ಹೊಂದಿರಬೇಕೆಂದು ಸೂಚಿಸುತ್ತಾನೆ.*[೧] ಅರ್ಥಶಾಸ್ತ್ರಕ್ಕೆ ಟಿಪ್ಪಣಿಯನ್ನು ನೀಡಿದ ಮತ್ತೊಬ್ಬ ರಾಜನೀತಿಜ್ಞ, ಭಟ್ಟಸ್ವಾಮಿ ''ತೆರಿಗೆ ಬದಲಾಗಿ ಗ್ರಾಮದ ಜನತೆಯಿಂದ ಒತ್ತಾಯ ಪೂರ್ವಕವಾಗಿ ಪಡೆದ ಉಚಿತ ಸೇವೆಯೇ (forced labour) ವಿಷ್ಟಿ ಎಂದು ವ್ಯಾಖ್ಯಾನಿಸು ತ್ತಾನೆ.*[೨] ಮನುಸ್ಮೃತಿ ಮುಂತಾದ ಧರ್ಮಶಾಸ್ತ್ರ ಗ್ರಂಥಗಳಲ್ಲಿಯೂ ಸಹ ಈ ವ್ಯವಸ್ಥೆಯ ಕುರಿತು ಉಲ್ಲೇಖವಿದ್ದು, ಈ ರೀತಿಯ ಸೇವೆ ಯನ್ನು ನಿಗದಿಯಾದ ದಿನಗಳವರೆಗೆ ಜನರಿಂದ ಪಡೆಯ ಲಾಗುತ್ತಿತ್ತು ಎಂದು ವಿವರಿಸಲಾಗಿದೆ.*[೩] ಶಾಸನಗಳಲ್ಲಿ ಇದನ್ನು ತೆರಿಗೆ ವ್ಯವಸ್ಥೆಯ ಒಂದು ಅಂಗವಾಗಿ ವಿವರಿಸುವದರ ಜೊತೆಗೆ ಇತರ ತೆರಿಗೆಗಳ ಸಂಗಡ ಹೆಸರಿಸಲಾಗಿದೆ. ಶಾಸನಗಳ ಅಧ್ಯಯನ ದಿಂದ ಈ ವ್ಯವಸ್ಥೆ ಭಾರತದಲ್ಲಿ ಮೌರ್ಯರ ಕಾಲದಿಂದಲೂ (ಸುಮಾರು ಕ್ರಿ. ಪೂ. ೪ನೆಯ ಶತಮಾನ) ಪ್ರಾರಂಭವಾಗಿ ಅನೇಕ ಶತಮಾನಗಳವರೆಗೆ ಅವ್ಯಾಹತವಾಗಿ ಮುಂದುವರೆದುದನ್ನು ಕಾಣುತ್ತೇವೆ.

ಕನ್ನಡ ಶಾಸನಗಳಲ್ಲಿ ಸಂಸ್ಕೃತ ಪದವಾದ ವಿಷ್ಟಿ ಬದಲಾಗಿ 'ಬಿಟ್ಟಿ' ಎಂಬ ಪದದ ಪ್ರಯೋಗ ಪ್ರಚಲಿತವಿದ್ದು ಇದನ್ನೂ ಸಹ ಒಂದು ತೆರಿಗೆಯಾಗಿ ಪರಿಗಣಿಸಲಾಗಿತ್ತು. ಉದಾಹರಣೆಗೆ, ಕ್ರಿ. ಶ. ೧೨೭೧ರ ಶಾಸನದ ಸಾಲುಗಳನ್ನು ಗಮನಿಸಬಹುದು - ''ಈ ಗದ್ದೆಗೆ ಸೇಸೆ, ಸಿದ್ಧಾಯ, ಖಾಣ ಅಭ್ಯಾಗತೆ-ಕಿರುಕುಳ ಪಟ್ಟಬಂಧ ಪುತ್ರೋತ್ಸಾಹ ಆನೆಯ ಸೇಸೆ ಕುದುರೆಯ ಸೇಸೆ ಕವಕ ಸೇಸೆ ಬಿಟ್ಟಿ ಸೊಲ್ಲಗೆ....... ಮುಖ್ಯವಾಗಿ ಎಲ್ಲಾ ತೆರೆಯನೂ*[೪]..... ಕ್ರಿ. ಶ. ೮೭೨ ಶಾಸನವು 'ನೀರುಣಿ ಸುಂಕ'ದ ಜೊತೆಗೆ 'ಬಿಟ್ಟಿ'ಯ ಬಗ್ಗೆ ಉಲ್ಲೇಖಿಸುತ್ತದೆ.*[೫] ಆದರೆ ಕ್ರಿ. ಶ. ೧೨೧೩ರ ಶಾಸನವು ವಿಶಿಷ್ಟವಾದ ಮಾಹಿತಿಯನ್ನು ನೀಡುತ್ತದೆ - ''ಶೂದ್ರರುಂ ಕಾರುಕರುಂ ಬಿಟ್ಟಿ ಬೆಸಂ ಮಾಡುವರು (ಅಂದರೆ ಶೂದ್ರರು ಕುಶಲಕರ್ಮಿಗಳು ಉಚಿತ ಸೇವೆಯನ್ನು ಸಲ್ಲಿಸುತ್ತಿದ್ದರು).*[೬] ಕ್ರಿ. ಶ. ೯೯೨ರ ಶಾಸನದಿಂದ ಈ ವ್ಯವಸ್ಥೆಯಿಂದ ಕೆಲವರ್ಗದ ಜನತೆಗೆ ರಿಯಾಯತಿ ದೊರೆತ*[೭] ಉಲ್ಲೇಖವೂ ದೊರೆಯುತ್ತದೆ. (''ಪಂಚಮಠ ಸ್ಥಾನಕ್ಕಂ ಬಿಟ್ಟಿ ಇಲ್ಲ'') ಈ ಎಲ್ಲ ಶಾಸನಗಳ ವಿವರಗಳು ಪ್ರಾಚೀನ ಕರ್ನಾಟಕದಲ್ಲಿ ಈ ವ್ಯವಸ್ಥೆ ಜಾರಿಯಲ್ಲಿದ್ದ ಅಂಶವನ್ನು ಸಾಬೀತು ಪಡಿಸುತ್ತವೆ.

ಆದರೆ 'ವಿಷ್ಟಿ' ಅಥವಾ 'ಬಿಟ್ಟಿ'ಯ ಸ್ವರೂಪವೇನು ಎಂಬುದು ಸ್ಪಷ್ಟವಾಗುವುದಿಲ್ಲ. ಸರ್ಕಾರದ ಅಧಿಕಾರಿಗಳು ತೆರಿಗೆ ನೀಡಲು

---

* ಇತಿಹಾಸ ಉಪನ್ಯಾಸಕ, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು, ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪

ವಿಫಲರಾದ ವ್ಯಕ್ತಿಗಳನ್ನು ಕರೆಸಿ ತಮಗೆ ಸರಿಯೆನಿಸಿದ ಕೆಲಸಗಳನ್ನು ಮಾಡಲು ಆಜ್ಞಾಪಿಸುತ್ತಿರಬಹುದು. ಉದಾಹರಣೆಗೆ ಪ್ರವಾಸದಲ್ಲಿರುವ ಅಧಿಕಾರಿಗಳ ಸೇವೆ, ರಸ್ತೆ ಮತ್ತು ಕಟ್ಟಡಗಳ ರಿಪೇರಿ ಜೊತೆಗೆ ಶ್ರಮದಾಯಕವಾದ ಕೆರೆಗಳ ನಿರ್ಮಾಣ ಮುಂತಾದವುಗಳನ್ನು ವಹಿಸಿಕೊಟ್ಟ ಉಲ್ಲೇಖಗಳೂ ದೊರೆಯುತ್ತವೆ.*೮ ಇವರನ್ನು ಸೇನೆಯ ಸೇವೆಯಲ್ಲಿ ಬಳಸಿಕೊಂಡದ್ದು ಸಹ ಉಂಟು. ಕುದುರೆ, ಆನೆ, ರಥಗಳು, ಸೈನಿಕರ ಜೊತೆಗೆ ವಿಷ್ಟಿ ಅಥವಾ ಉಚಿತ ಸೇವೆಯನ್ನು ಒದಗಿಸುವ ಜನ ಸೇನೆಯಲ್ಲಿರುತ್ತಿದ್ದರು ಎಂಬುದಾಗಿ **ಮಹಾಭಾರತ** ತಿಳಿಸುತ್ತದೆ.*೯ ಈ ಜನರ ಸೇವೆಯನ್ನು ಸೈನಿಕ ಕೆಲಸಗಳಿಗೆ ಹೊರತಾಗಿ ಅಂದರೆ ಭಾರವಾದ ವಸ್ತುಗಳ ಮತ್ತು ಆಯುಧಗಳ ಸಾಗಾಟ, ಯುದ್ಧ ಭೂಮಿಯಲ್ಲಿ ಗಾಯಾಳು ಸೈನಿಕರಿಗೆ ಶುಶ್ರೂಷೆ ಮತ್ತು ಸಹಾಯ ಮುಂತಾದವುಗಳಿಗೆ ಬಳಸಿಕೊಂಡಿರಬೇಕು. **ಪಂಪಭಾರತ**ದಲ್ಲಿಯ ಉಲ್ಲೇಖವನ್ನು ಗಮನಿಸಿದರೆ ಇವರನ್ನು ಯುದ್ಧಭೂಮಿಗೆ ತೆರಳುವಾಗ ಧ್ವಜವಾಹಕ ಅಥವಾ ಧ್ವಜದಾಳು (Flag bearers) ರೂಪದಲ್ಲಿ ಸೇನೆಯಲ್ಲಿ ಬಳಸಿಕೊಂಡಿರುವ ಸಾಧ್ಯತೆ ಕೂಡ ಕಂಡು ಬರುತ್ತದೆ.*೧೦

ಕೊನೆಯದಾಗಿ ತೆರಿಗೆ ಸಂಗ್ರಹಣೆಯ ವಿಷಯದಲ್ಲಿ ಇಷ್ಟು ಕಠಿಣವಾದ ಧೋರಣೆಯನ್ನು ಅನುಸರಿಸಬೇಕೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕೌಟಿಲ್ಯನ ಪ್ರಕಾರ 'ದೇಶದ ಅಸ್ತಿತ್ವಕ್ಕಾಗಿ ಯಾವುದೇ ರೀತಿಯ ಹಣ ಸಂಗ್ರಹಣೆಯೂ ಸಮ್ಮತವಾದದ್ದೇ.' ಈ ರೀತಿಯ ಹಣದ ಸಂಗ್ರಹಣೆಗಾಗಿ ಮೋಸದ ತಂತ್ರಗಳನ್ನು ಕೂಡ ಬಳಸಬಹುದು ಎಂದು ಆತನು ತಿಳಿಸುತ್ತಾನೆ.*೧೧ ಇಂತಹ ಕೆಲವು ಉದಾಹರಣೆಗಳನ್ನು ಗಮನಿಸಿದ ಪ್ರೊ॥ ನೀಲಕಂಠ ಶಾಸ್ತ್ರಿಯವರು ''ಪ್ರಾಚೀನ ಕಾಲದಲ್ಲಿಯ ತೆರಿಗೆ ವ್ಯವಸ್ಥೆ ದಮನಕಾರಿಯಾಗಿತ್ತು'' ಎಂದು ಅಭಿಪ್ರಾಯಪಟ್ಟಿದ್ದರು.*೧೨ ಆದರೆ ಪ್ರೊ॥ ಅಳತೇಕರ ಇಂತಹ ವಿಚಾರವನ್ನು ಒಪ್ಪುವುದಿಲ್ಲ.*೧೩

ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ತೆರಿಗೆ ವ್ಯವಸ್ಥೆಯಲ್ಲಿ ಕಾಲಕ್ರಮದಲ್ಲಿ ಅನೇಕ ಬದಲಾವಣೆಗಳು ಉಂಟಾದುದನ್ನು ನಾವು ಗಮನಿಸಬಹುದು. ವಿಶೇಷವಾಗಿ ವಿಜಯನಗರದ ಕಾಲಕ್ಕೆ ಅನೇಕ ಸಣ್ಣ ಕಸಬುಗಳ ಮೇಲೆ ಸಹ ತೆರಿಗೆ ವಿಧಿಸಲು ಪ್ರಾರಂಭಿಸಿದ್ದನ್ನು ಕಾಣಬಹುದು. (ನಾವಿಂದ ತೆರೆ ಮುಂತಾದವು). ಬದಲಾಗುತ್ತಿದ್ದ ರಾಜಕೀಯ ಸನ್ನಿವೇಶ, ಹೆಚ್ಚುತ್ತಿದ್ದ ಸೈನಿಕ ವೆಚ್ಚವನ್ನು ಸರಿದೂಗಿಸಲು ದೊರೆಗಳು ಅನೇಕ ಕಠಿಣವಾದ ತೆರಿಗೆ ಅಂಶಗಳನ್ನು ಜಾರಿಗೆ ತಂದರು. ಈ ನಿಟ್ಟಿನಲ್ಲಿ ತೆರಿಗೆ ನೀಡಲು ವಿಫಲರಾದವರಿಂದ 'ವಿಷ್ಟಿ'ಯನ್ನು ಪಡೆದುದು ಸಮಂಜಸವೆನಿಸತೊಡಗಿತು. ಈ ರೀತಿಯಾಗಿ ವೈದಿಕ ಕಾಲದಿಂದ ಪ್ರಾರಂಭವಾದ ತೆರಿಗೆ 'ಬಲಿ'ಯನ್ನು ಜನರು ಸ್ವಯಂ ವಂತಿಗೆಯಾಗಿ ನೀಡಿದರೆ ನಂತರದ ಕಾಲದಲ್ಲಿ ತೆರಿಗೆ ನೀಡುವುದು ಕಡ್ಡಾಯವಾದುದರ ಹಿನ್ನೆಲೆಯಲ್ಲಿ 'ಬಿಟ್ಟಿ'ಯನ್ನು ಗಮನಿಸಿದರೆ ಇದನ್ನು ತೆರಿಗೆಯ ಒಂದು ಭಾಗವಾಗಿ ಒಪ್ಪಿಕೊಳ್ಳಬಹುದು.

*[ಹೊಯ್ಸಳರಿಗೂ ಮಾಂಡಲಿಕರಾಗಿದ್ದ ಕೊಂಗಾಳ್ವರ ಕೊಡಗಿನ ಕ್ರಿ. ಶ. ೧೧೭೫ರ ನಂದಿಗುಂದ ಶಾಸನದಲ್ಲಿ 'ಬಿಟ್ಟಿಬೆಸ'ವನ್ನು ಕೇರಿಯೊಂದರ ಜನಕ್ಕೆ ಪರಿಹಾರವಾಗಿ ಬಿಟ್ಟ ಸಂದರ್ಭವು 'ಬಲವಂತ ದುಡಿಮೆ'ಯನ್ನು ಸೂಚಿಸಬಹುದೆಂದು ರೈಸರ ಮತ. ಚಂಗಾಳ್ವರ ೧೩ನೇ ಶತಮಾನದ ಗೋಣಿಮರೂರು ಶಾಸನದ 'ಬಿಟಿ'ಯನ್ನು ಹಾಗೆಯೆ ಅವರು ಅರ್ಥೈಸಿದ್ದಾರೆ. ಆದರೆ ಕೊಡಗಿನ ಪರಂಪರೆಯಲ್ಲಿ ಪಡೆದ (ಜಮ್ಮ) ಭಟ್ಟಿ ಜಮೀನಿಗೆ ಸರ್ಕಾರಕ್ಕೆ ಸಲ್ಲಿಸಬೇಕಿದ್ದ ಒಂದು ಬಗ್ಗೆ 'ಮುಯ್ಯಾಳುಸೇವೆ' ಪಡೆದ ಫಲಕ್ಕೆ ಪ್ರತಿಫಲಸೇವೆ ಎಂಬರ್ಥವಿದೆ. ಚಂಗಾಳ್ವರ ಶಾಸನದಲ್ಲಿ ಈ ಅರ್ಥಕ್ಕೆ ಒತ್ತುಕಾಣುತ್ತದೆ. ಹಾಲೇರಿ ಅರಸರಲ್ಲಿ ಈ ಅರ್ಥವೇ ಪ್ರಚಲಿತವಿದ್ದುದು ಕಾಣುತ್ತದೆ.-(ಸಂ.)]*

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. **ಅರ್ಥಶಾಸ್ತ್ರ** ॥ ೩೫.೧
*೨. Kher N. N : ***Agrarian and Fiscal Economy***, P. 300
*೩. Altekar A. S : ***State and Government in Ancient India,*** P. 28
*೪. EC VII (Rev. Edn.), Ng. 74
*೫. SII IX Pt. I, No. 15
*೬ Ibid XV, No. 159
*೭. Ibid XV, pt.I, 177 No. 159
*೮. Altekar A. S. : ***op. cit.***, P. 28
*೯. **ಮಹಾಭಾರತ,** ಶಾಂತಿಪರ್ವ, ೧೨೧ ಶ್ಲೋಕ ೪೪
*೧೦. ಚಿದಾನಂದಮೂರ್ತಿ. ಎಂ : ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*** ಕ್ರಿ. ಶ. ೪೫೦-೧೧೫೦, ಪು. ೨೫೬
*೧೧. M. H. Gopal : ***Mauryan Public Finance,*** PP. 134
*೧೨. Sastri KAN : ***A History of South India,*** P. 316
*೧೩. Altekar A. S : op cit., PP. 283-84

ಬಿ. ಪಂಪಾದೇವಿ *

# ಅರಸು ಮನೆತನವಲ್ಲಿ ವೈದಿಕ ಸಂಪ್ರದಾಯ


"ಅರಸು'' ಎಂಬ ಹೆಸರು ಮೈಸೂರು ಪ್ರಾಂತ್ಯದವರಿಗೆ ಬಹಳಷ್ಟು ಚಿರಪರಿಚಿತ. ಮಾಜಿ ಮುಖ್ಯಮಂತ್ರಿ ದೇವರಾಜು ಅರಸುರವರಿಂದ ಕರ್ನಾಟಕದ ಜನತೆಗೆ ಪರಿಚಿತವಿರುವ ಅರಸು ಜನಾಂಗ, ಬಹಳಷ್ಟು ಕಡಿಮೆ ಜನ ಸಂಖ್ಯೆಯನ್ನು ಹೊಂದಿರುತ್ತದೆ. ಮೈಸೂರಿನ ಒಡೆಯರು ಈ ಜನಾಂಗಕ್ಕೆ ಅಥವಾ ಜೊತೆಗೆ ಸೇರಿರುವುದರಿಂದ ಇದಕ್ಕೆ ವಿಶೇಷವಾದ ಸ್ಥಾನವಿದೆ. ಈ ಸಮುದಾಯದವರು ಅನೇಕ ರೀತಿ-ರಿವಾಜುಗಳು, ಪದ್ಧತಿಗಳನ್ನು ಹೊಂದಿದ್ದು ಒಂದು ರೀತಿಯ ವಿಭಿನ್ನ ಸಂಸ್ಕೃತಿಯನ್ನು ಹೊಂದಿರುವುದನ್ನು ಕಾಣಬಹುದು.

ಇವರ ಬಗ್ಗೆ ಅಧ್ಯಯನವನ್ನು ನಡೆಸಲು ಹೊರಟಾಗ ನನಗೆ ಒಂದು ವಿಷಯ ಸ್ಪಷ್ಟವಾಗುತ್ತಾ ಹೋಯಿತು. ಇವರು ತಾವು ವೈದಿಕ ಸಂಪ್ರದಾಯಸ್ಥರು ಎಂದು ಹೇಳಿಕೊಂಡರೂ ಸಂಪೂರ್ಣವಾಗಿ ಈ ಪದ್ಧತಿಯನ್ನು ಆಚರಣೆಯಲ್ಲಿ ಇರಿಸಿಕೊಳ್ಳದೇ ಇರುವುದು. ನನ್ನ ಈ ಪ್ರಸ್ತುತ ಲೇಖನಕ್ಕೆ ಉಪಯೋಗಿಸಿರುವ ಮೂಲಾಧಾರಗಳೆಂದರೆ ಪ್ರಥಮವಾಗಿ ಮೌಕಿಕ ಆಧಾರಗಳು. ಅನುಭವ ಮತ್ತು ಒಂದೆರಡು ಸಾಹಿತ್ಯಾಧಾರಗಳು. (The Mysore tribes & Castes - Vol II - L.K. Ananetha Krishna Iyer,) *ಅರಸು ಜನಾಂಗ ಒಂದು ಅಧ್ಯಯನ* : ಎಂ. ನಂಜಮ್ಮಣ್ಣಿ etc.,)

ಇವರಲ್ಲಿ ಜೈನ, ವೀರಶೈವ ಹಾಗೂ ವೈದಿಕ ಸಂಪ್ರದಾಯಗಳನ್ನು ಗಮನಿಸಬಹುದು. ಜೈನ ಆಚರಣೆ ಬಹಳಷ್ಟು ಸೀಮಿತವಾಗಿದೆ. ಕೆಲವೊಂದು ಕುಟುಂಬದವರು ತಾವು ಜೈನ ಸಂಪ್ರದಾಯಸ್ಥರಾಗಿದ್ದು ಈಗ ಬಳಕೆಯಲ್ಲಿ ಇಲ್ಲ ಎಂದು ಸ್ಪಷ್ಟಪಡಿಸುತ್ತಾರೆ. ಉದಾಹರಣೆಗೆ - ಕೆಲವೊಂದು ಮನೆಯವರು ಇಂದಿಗೂ ಶ್ರಾದ್ಧ ದಿನದಂದು ಗೋವುಗಳಿಗೆ 'ವಾಯಸ' ಅಥವಾ 'ಎಡೆ'ಯನ್ನು ನೀಡುತ್ತಾರೆ. ಬಸದಿಗಳಿಗೆ ಹೋಗಿ ಪೂಜೆ ಮಾಡಿಸುತ್ತಾರೆ. ಇಷ್ಟು ಬಿಟ್ಟರೆ ಮತ್ತಾವ ಜೈನ ಪದ್ಧತಿಯನ್ನು ಕಾಣಲು ಸಾಧ್ಯವಿಲ್ಲ.

ಇವರ ಹೆಸರುಗಳನ್ನು ಗಮನಿಸಿದರೆ ಶಿವ ಮತ್ತು ವಿಷ್ಣು ಎರಡರ ಬಳಕೆಯನ್ನು ಕಾಣಬಹುದು. ಆದರೆ ಅನೇಕ ಹೆಸರುಗಳ ಮುಂದಿನ ಅರಸು ಎಂಬುದನ್ನು ತೆಗೆದರೆ ಉದಾ : ಬಸವರಾಜು ಅರಸು, ಲಿಂಗರಾಜು ಅರಸು, ವೀರರಾಜ ಅರಸು ಇತ್ಯಾದಿಗಳಲ್ಲಿ ಆಗ ಉಳಿಯುವ ಪದಗಳೆಂದರೆ ಬಸವ, ಲಿಂಗ, ವೀರ ಇತ್ಯಾದಿ. ಇವು ವೀರಶೈವ ಪಂಗಡದವರ ಬಳಕೆಯಲ್ಲಿರುವ ಹೆಸರುಗಳೆಂಬಂತೆ ಕಾಣಿಸುತ್ತದೆ. ಇವರೂ ಸಹ ವೀರಶೈವರಂತೆ ಮಠಗಳನ್ನು ಹೊಂದಿರುತ್ತಾರೆ. ಈ ಮಠಗಳ ಗುರುಗಳು ಅರಸು ಜನಾಂಗದವರೇ ಆಗಿದ್ದು ವಂಶಪಾರಂಪರ್ಯವಾಗಿ ಮುಂದುವರೆಯುತ್ತಾ ಬಂದಿರುತ್ತಾರೆ. ಇವರ ಮಠಗಳು ಚೊಪ್ಪನಕಾಡನಪುರ ಮತ್ತು ಕಪಡಿ ಎಂಬ ಸ್ಥಳಗಳಲ್ಲಿವೆ. ಈ ಮಠಗಳಲ್ಲಿ ಅನೇಕ ವಿಧಿ- ನಿಯಮಗಳು, ನಡತೆ ನಡವಳಿಕೆಗಳು ವೀರಶೈವ ಮಠಗಳ ರೀತಿಯದಿದ್ದಂತೇ ಇರುವುದನ್ನು ಗಮನಿಸಬಹುದು.

ಇವರ ಅಂತ್ಯಕ್ರಿಯೆಯಲ್ಲೂ ಸಹ ವಿಭಿನ್ನ ರೀತಿಯಿಂದ ಇರುವುದನ್ನು ಕಾಣಬಹುದು. ಇವರಲ್ಲಿ ವೈದಿಕ ಸಂಪ್ರದಾಯದಂತೆ ದಹನ ಕ್ರಿಯೆಯೂ ಇದ್ದು ಸಮಾಧಿ ಪದ್ಧತಿಯೂ ಇದೆ. ಇವರು ಮಣ್ಣು ಮಾಡುವ ಅಥವಾ ಹೂಳುವ ಪದ್ಧತಿಯನ್ನು ಅನುಸರಿಸಿದರೂ ನಂತರದ ಎಲ್ಲಾ ಕ್ರಿಯೆಗಳಿಗೆ ಅಥವಾ ಸಂಸ್ಕಾರಗಳಿಗೆ ವೈದಿಕ ಪುರೋಹಿತರನ್ನೇ ಆಶ್ರಯಿಸುತ್ತಾರೆ. ಇವರ ಜನಾಂಗದಲ್ಲಿ ಇವರವರೇ ಆದ ಪುರೋಹಿತರು ಇರುವುದಿಲ್ಲ. ಇವರು ಸ್ಮಾರ್ಥ ಬ್ರಾಹ್ಮಣ ಪುರೋಹಿತರಿಂದ ಎಲ್ಲಾ ಸಂಸ್ಕಾರಗಳನ್ನು ನಡೆಸುತ್ತಾರೆ. ಇವರ ವಿವಾಹ ಕಾಲದಲ್ಲೇ ಆಗಲಿ, ಉಪಾಕರ್ಮ ಶಾಸ್ತ್ರದಲ್ಲಾಗಲಿ ಎಲ್ಲಾ ಸಂದರ್ಭಗಳಲ್ಲು ಬ್ರಾಹ್ಮಣ ಪುರೋಹಿತರನ್ನೇ ಅವಲಂಬಿಸಿರುತ್ತಾರೆ. ಇವರಲ್ಲೂ ಸೂತಕ,

---

* ಇತಿಹಾಸ ಉಪನ್ಯಾಸಕಿ, ಜೆ. ಎಸ್. ಎಸ್. ಪ್ರಥಮ ದರ್ಜೆ ಮಹಿಳಾ ಕಾಲೇಜು, ಲನೇ ಬ್ಲಾಕ್ ಜಯನಗರ, ಬೆಂಗಳೂರು

ಪುರಡು, ಸಂಧ್ಯಾವಂದನೆ ಹೀಗೆ ಹಲವು ಹತ್ತಾರು ವೈದಿಕ ಸಂಪ್ರದಾಯಗಳು ಇವೆ. ಆದರೆ ಎಲ್ಲವೂ ಸಂಪೂರ್ಣವಾಗಿ ವೈದಿಕತೆಯಿಂದ ಕೂಡಿರುವುದಿಲ್ಲ. ಈ ವಿಷಯವನ್ನು ಆಳವಾಗಿ ಅಧ್ಯಯನ ನಡೆಸುತ್ತಾ ಹೋದ ಹಾಗೆ ನನಗೆ ಕಂಡು ಬಂದ ಅಂಶವೆಂದರೆ ಇದರ ಸಂಪ್ರದಾಯಗಳು 'ಅನುಕರಣೆ' ಯಿಂದ ಕೂಡಿದೇಯೇ ಹೊರತು ಮೂಲ ಸ್ವಾರೋಪದಿಂದ ಕೂಡಿದ್ದಾಗಿದ್ದಲ್ಲ.

ವೈದಿಕ ಸಂಪ್ರದಾಯಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಸಮಾಜದಲ್ಲಿ ಅದಕ್ಕೆ ಸಲ್ಲುತ್ತಿರುವ ಗೌರವ ಮತ್ತು ಉನ್ನತ ಸ್ಥಾನದಿಂದ ಮಾತ್ರ. ತಮ್ಮನ್ನೂ ಶ್ರೇಷ್ಠರೆಂದು ಕರೆಸಿಕೊಳ್ಳಲು ಇವರು ಈ ಆಚರಣೆಗೆ ಹೆಚ್ಚು ಒಲವು ತೋರಿಸಿರುವುದನ್ನು ನೋಡಬಹುದು. ಈ ವೈದಿಕ ಸಂಪ್ರದಾಯ ಹೆಚ್ಚು ಆಚರಣೆಗೆ ಬರಲು ''ರಾಜಾಶ್ರಯ''ವೂ ಕಾರಣವಾಗಿದೆ. ಒಡೆಯರುಗಳು ಎಲ್ಲಾ ಸಂದರ್ಭದಲ್ಲೂ ವೈದಿಕ ಪರಂಪರೆಯನ್ನು ಒಳಪಡಿಸಿ ಕೊಂಡಿದ್ದ ಕಾರಣ ವೈದಿಕ ಸಂಪ್ರದಾಯ ಹೆಚ್ಚು ಪ್ರಚಲಿತವಾಗಿದೆ ಎಂಬುದು ಗಮನಿಸಬೇಕಾದ ಅಂಶ. ರಾಜರು ಸ್ಥಾಪಿಸಿದ "Chamaraja Ursu Boarding School" ಮತ್ತು Vanivilas Ursu Girls School" ಈ ದಿಶೆಯಲ್ಲಿ ಹೆಚ್ಚಿನ ಪಾತ್ರವನ್ನು ವಹಿಸಿರುತ್ತವೆ. ಇಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಗಳಿಗೆ ಉಪನಯನ, ಸಂಧ್ಯಾವಂದನೆ ಮುಂತಾದವುಗಳ ಬಗ್ಗೆ ತಿಳಿಸ ಲಾಗುತ್ತಿತ್ತು. ಗಾಯತ್ರಿಮಂತ್ರದ ಪುಸ್ತಕವನ್ನು ಉಚಿತವಾಗಿ ಎಲ್ಲಾ ಕುಟುಂಬ ದವರಿಗೆ ಹಂಚಲಾಗಿತ್ತು. ಹೀಗೆ ಈ ಅರಸು ಸಮುದಾಯದಲ್ಲಿ ವೈದಿಕ ಸಂಪ್ರದಾಯ ಬಳಕೆಗೆ ಬಂದಿರುವುದನ್ನು ಕಾಣಬಹುದು.

ಇವರ ಪೋಷಾಕನ್ನು ಗಮನಿಸಿದರೆ ಅದೂ ಸಹ ಮಾದರಿ ಕಾಲಕ್ಕೆ ಅಥವಾ ಆಧುನಿಕ ಕಾಲಕ್ಕೆ ಸೇರಿದ್ದಂತೆ ಇದೆ. ಗಂಡಸರು ಉದ್ದನೆಯ ಕೋಟು (Long Coat) ಸುರವಾಳ್ ಅಥವಾ ಷರಾಯಿಯನ್ನು ಧರಿಸಿ ತಲೆಯ ಮೇಲೆ ಪೇಟವನ್ನು ಧರಿಸುತ್ತಾರೆ. ವಿವಾಹ ಸಮಯದಲ್ಲಿ ವಧುವಿಗೆ ವಿಶೇಷವಾದ ರೀತಿಯಲ್ಲಿ ಸೀರೆಯನ್ನು ಉಡಿಸುತ್ತಾರೆ. ವಿವಾಹಿತ ಸ್ತ್ರೀಯನ್ನು ಬಹಳ ಸುಲಭವಾಗಿ ಗುರುತಿಸಬಹುದು. ಕಾಲಿಗೆ ಚಿನ್ನದುಂಗುರ ಮತ್ತು ಎಡಗೈ ತೋರುಬೆರಳಿಗೆ ವಂಕಿಯಾಕಾರದ ಉಂಗುರವನ್ನು ಧರಿಸಿರುತ್ತಾರೆ. ಆದ್ದರಿಂದ ಇವರ ಉಡುಪಿನಲ್ಲಿ ಸಹ ಆದಿಕಾಲದ ಅಥವಾ ಪುರಾತನ ಕಾಲದ ರೀತಿಯನ್ನು ಅಳವಡಿಸಿಕೊಂಡಿಲ್ಲ ದಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಈ ಜನಾಂಗದವರ ಸಂಸ್ಕೃತಿ ಒಂದು ''ಸಮಿಶ್ರ ಸಂಸ್ಕೃತಿ'' ಎಂದೂ ಅಥವಾ ''ಅನುಕರಣಾ ಪದ್ಧತಿ'' ಎಂದೂ ಹೇಳಬಹುದು.

ಡಾ|| ಹೆಚ್. ಎಸ್. ಉಷಾರಾಣಿ *

# ಶಾಸನೋಕ್ತ ಯಾತ್ರೆ – ಒಂದು ಆರ್ಥಿಕ ವಿವೇಚನೆ

ದೇಶದ ವಿವಿಧ ಭಾಗಗಳಲ್ಲಿರುವ ಯಾತ್ರಾ ಸ್ಥಳಗಳು ಭೌಗೋಳಿಕವಾಗಿ, ಧಾರ್ಮಿಕವಾಗಿ ಸಾಮಾಜಿಕವಾಗಿ ವೈವಿಧ್ಯತೆಯಲ್ಲಿ ಏಕತೆ ಕಾಣುವಂತೆ ಮಾಡಿವೆ. ಇಂದು ಯಾತ್ರೆ ದುಬಾರಿ ವೆಚ್ಚದಿಂದ ಕೂಡಿದ್ದರೂ ಆಸಕ್ತರು ಯಾತ್ರೆ ಕೈಗೊಳ್ಳುವುದನ್ನು ಬಿಟ್ಟಿಲ್ಲ. ಸುಮಾರು ೧೮೦ ವರ್ಷದ ಹಿಂದೆ ಕೈಗೊಂಡ ಯಾತ್ರೆಗೆ ಸಂಬಂಧಪಟ್ಟದ್ದೇ ಪ್ರಸ್ತುತ ಲೇಖನ.

ಮೈಸೂರಿನ ಕ್ರಿ. ಶ. ೧೮೩೦ರ ಶಾಸನವು (ಎಪಿಗ್ರಾಫಿಯಾ ಕರ್ನಾಟಿಕ ಸಂ. ೫, ಪರಿಷ್ಕೃತ ಆವೃತ್ತಿ, ಮೈಸೂರು ೫) ಮೈಸೂರಿನ ಶ್ರೀ ಪ್ರಸನ್ನವೆಂಕಟೇಶ ದೇವರ ಭಕ್ತರು ಹಾಗೂ ಪವಾಡ ಪುರುಷರೆನಿಸಿದ್ದ ಸುಬ್ಬರಾಯದಾಸರಿಗೆ ಭಾಗೀರಥಿ ಯಾತ್ರೆ ಹೋಗುವಂತೆ ಸ್ವಪ್ನವಾದ ಪ್ರಕಾರ, ಅವರು ಅಂದಿನ ಮುಮ್ಮಡಿ ಕೃಷ್ಣರಾಜ ಒಡೆಯರ ಅಪ್ಪಣೆ ಪಡೆದು ಹೊರಟ ಯಾತ್ರೆ, ಸಂದರ್ಶಿಸಿದ ಸ್ಥಳಗಳು ಹಾಗೂ ಪಡೆದ ಬಿರುದುಗಳು ಇತ್ಯಾದಿಗಳ ವಿವರವನ್ನೊಳಗೊಂಡಿದೆ.

ಪ್ರಯಾಣ ಕಾಲದಲ್ಲಿ ಬಳಸಲು ರಾಜಮರ್ಯಾದೆಯಿಂದ ಕೊಟ್ಟ ಸಾಮಗ್ರಿಗಳೇ ಅವರು ಕೊಂಡೊಯ್ದ ಸಂಪತ್ತಿನ ಬಗ್ಗೆ ತಿಳಿಸುತ್ತವೆ. ಅದರಂತೆ, ಮುತ್ತುರತ್ನ ಮಿಶ್ರಿತವಾದ ತಂಡುಲವನ್ನು ೨ ಭಗಸೆ ಭವನಾಸಿ ಭಿಕ್ಷಾ ತುಂಬಲಾಗಿತ್ತು. ದೇವರಿಗೆ ಕೊಟ್ಟ ಪಾಲಖಿ ೧, ಛತ್ರಿ ೧, ಶ್ವೇತ ಛತ್ರಿ ೧, ಅಪ್ತಾಗಿರಿ ೧, ಚಪ್ಪರಿ ೨, ಬೆಳ್ಳಿಕೋಲು ಜೊತೆ ೧, ಕುದುರೆ ಮೇಲೆ ಡಂಕೆ ೧, ಆನೆ ಮೇಲೆ ಜರಿಪಟಕ ಸಾಹ ೧, ವಂಟೆ ೧, ಘಂಟೆ ಹಾಕಿದ ಬಂಗಾರದ ತೊಡೆ ೧, ಕಾಲಿಗೆ ಬೆಳ್ಳಿ ತೊಡೆ ಜಂಗು ೧ ಎಂಬ ವಿವರ ದೊರೆಯುತ್ತದೆ.

ಆ ವೇಳೆಗಾಗಲೇ ಮೈಸೂರು ಬ್ರಿಟಿಷ್ ಕಮಿಷನರ್ ಆಳ್ವಿಕೆಗೆ ಒಳಪಟ್ಟಿದ್ದುದರಿಂದ "ಕುಂಪಣಿ ಸೀಮೆಗೆ ರಸೀಡಂಟ್ಟು ರಹದಾರಿ ಸಹ ಬರಸಿಕೊಟ್ಟ" ಎಂದು ಉಲ್ಲೇಖಿಸಲಾಗಿದೆ. ಅಧಿಕೃತ ಅನುಮತಿ ಪಡೆದಿದ್ದುದಂತೂ ಖಚಿತ.

ಸುಬ್ಬರಾಯ ದಾಸರು ಅನುಸರಿಸಿದ ಯಾತ್ರಾಮಾರ್ಗ ಹೀಗಿದೆ : "ಸ್ವಾಸಲಿ, ಶೃಂಗೇರಿ, ಉಡುಪಿ, ಶಿರೂರು, ಹೊಳೆಯಾರ ದರ್ಶಿಸಿ ಕರ್ನಾಟಕದಿಂದ ಕೂಡ್ಲಿ ಹರಿಹರ, ಸವಣೂರು ಮಾರ್ಗವಾಗಿ ಮಹಾರಾಷ್ಟ್ರದ ಪಂಢರಾಪುರ, ಕೊಲ್ಹಾಪುರ, ನಾಸಿಕ್, ತ್ರಿಯಂಬಕ್ ದಾಟಿ ಮಧ್ಯಪ್ರದೇಶದ ವೊಂಕಾರ, ಜೋಳಿ ಮಹೇಶ್ವರ್ ಮಾರ್ಗವಾಗಿ ಯಿಂದೂರಿಗೆ ಹೋದರು. ಅಲ್ಲಿಂದ ಉಜ್ಜೈನಿ ದಾಟಿ ಉತ್ತರ ಪ್ರದೇಶದ ಚಿತ್ರಕೂಟ, ಪ್ರಯಾಗ, ಕಾಶಿ, ಗಯಾಕ್ಷೇತ್ರ ಯಾತ್ರೆ ಮಾಡಿಕೊಂಡು ಗಂಡಕಿ ಗಂಗಾ ಸಂಗಮ ಪಟ್ಟಣ, ಜನಕಪುರ, ಜನಕಕುಂಡಾ, ಜನರ್ಮಡಿ, ಪಿನಾಕಿನೀ ಧನುಕ್ಷೇತ್ರ, ಲಕನೂರು, ಗೋಮತಿ, ಅಯೋಧ್ಯಾ, ನೈಮಿಷಾರಣ್ಯದಿಂದ ಬ್ರಹ್ಮಾವರ್ತಕ್ಕೆ ಬಂದು ನಂತರ ಪರೀಕ್ಷಿತಗಡ, ಹಸ್ತಿನಾಪುರಿ, ಜ್ವಾಲಾಪುರಿ, ಕನಕನಕ್ಷೇತ್ರ, ಹರಿದ್ವಾರ, ದೇವಪ್ರಯಾಗ ಮಾರ್ಗವಾಗಿ ನಾರಾಯಣ ಆಶ್ರಮ ದರ್ಶನಮಾಡಿ ಪ್ರಭಾಸಕ್ಷೇತ್ರ, ಕುರುಕ್ಷೇತ್ರ, ಪದ್ಮವ್ಯೂಹ, ಗೋವರ್ಧನ ನಂದಿಗ್ರಾಮ, ಭರತಪುರ, ಮಧುರ, ಗೋಕುಲ, ಬೃಂದಾವನ ಯಾತ್ರೆ ಮಾಡಿಕೊಂಡು ಲಷ್ಕರ್ ಗ್ವಾಲೆರಿಗೆ ಬಂದು ಜಾಸಿ ಸಂಸ್ಥಾನಕ್ಕೆ ಭೇಟಿಕೊಟ್ಟು, ನಾಗಪುರ, ಹೈದರಾಬಾದು, ಕರ್ನೂಲ, ಹಂಪೆ ಯಿರೂಪಾಕ್ಷ ಮಾರ್ಗವಾಗಿ ಗದ್ವಾಲಕ್ಕೆ ಬಂದು ರಾಘವೇಂದ್ರಪುರ, ತಿರುಪತಿ ಘಟಿಕಾಚಲದಿಂದ ಕಂಚಿ, ಚನ್ನಪಟ್ಟಣ, ಆರಣಿ, ಪುಂಗನೂರು, ಚಿದಂಬರಂ, ಮಯೂರ, ಶಂಕಮುಖಿಯಿಂದ ಕುಂಭಕೋಣಕ್ಕೆ ಬಂದು ನವತಿರುಪತಿ ಮಾರ್ಗವಾಗಿ ರಾಮೇಶ್ವರದಿಂದ, ಕನ್ಯಾಕುಮಾರಿ, ಅನಂತಶಯನ ಜನಾರ್ಧನದಿಂದ ತಿರುಚಿನಾಪಲ್ಲಿ 'ಅಣುತಾಂಬ್ರಪರ್ಣಿ' ಶ್ರೀರಂಗ ತಿರುಮಕೂಡ್ಲು ಸಂಗಮದ ಸೋಸಲೆಗೆ ಶ್ರೀಸ್ವಾಮಿಗಳವರಲ್ಲಿ ಗಂಗಾಭಿಷೇಕ ಮಾಡಿಸಿದರಲ್ಲದೆ ಮನ್ಮಥ ಸಂವತ್ಸರ ಕಾರ್ತಿಕ ಶು. ೧೫ ದಿವ್ಯ ಮರಿಯಾದೆಯಿಂದ ನಂಮ ಅರಮನೆಗೆ" ಕರೆದುಕೊಂಡು ಬಂದರೆಂದಿದೆ. ಇಲ್ಲಿ ಯಾತ್ರಾ ಮಾರ್ಗ ಪುನರಾವರ್ತನೆಯಾಗಿಲ್ಲ.

* ೪೩೩, 'ಇ' ಬ್ಲಾಕ್, ಜೆ. ಪಿ. ನಗರ, ಮೈಸೂರು – ೫೭೦ ೦೦೮

ಯಾತ್ರಾ ಅವಧಿಯಲ್ಲಿ ಆಯಾ ಸ್ಥಳಗಳ ಪ್ರಮುಖರಿಂದ ಸಂಗ್ರಹಿಸಿದ ಸಾಮಗ್ರಿಗಳು ಗಮನಾರ್ಹ.

೧. ಶೃಂಗೇರಿ ಶ್ರೀ ನರಸಿಂಹ ಭಾರತಿ ಸ್ವಾಮಿಗಳು ಕೊಟ್ಟದ್ದು ಬೆಳ್ಳಿಘಂಟೆ
೨. ಉಡುಪಿಯ ಶ್ರೀ ಕೃಷ್ಣಾಮಠದ ಶ್ರೀಪಾದಂಗಳು ಕೊಟ್ಟದ್ದು- ಜಯಗಂಟೆ ೧
೩. ಪೇಜಾವರ ಸ್ವಾಮಿಗಳು ಕೊಟ್ಟದ್ದು- ಕರದಿವಿಗೆ ೧
೪. ಶಿರೂರು ಸ್ವಾಮಿಗಳು ಕೊಟ್ಟದ್ದು - ನಾರಾಯಣಾರ್ತಿ ೨ ಕಾಳೆ - ೧
೫. ಪುತ್ತಿಗೆ ಸ್ವಾಮಿಗಳಿಂದ - ಹಯಗ್ರೀವ ಪ್ರತಿಮೆ ೧
೬. ಕಾಣ್ವ ಸ್ವಾಮಿಗಳು ಕೊಟ್ಟದ್ದು ಲಕ್ಷ್ಮೀವೆಂಕಟರಮಣ ಪ್ರತಿಮೆ ೧
೭. ಕೊಲ್ಹಾಪುರದಲ್ಲಿ ತಾಂಬ್ರಶಾಸನ ಹಾಕಿಕೊಟ್ಟದ್ದು - ನವಪತ್ತು ಬಿರುದು ೧
೮. ಚಿಂಚಿಣಿ ನಾನಾ ಸಾಹೇಬರು ಕೊಟ್ಟದ್ದು - ಸುರಣ ಬಿರುದು
೯. ಯಿಂದೂರಿನ ಹೊಳಕರ ಮಲ್ಹಾರರಾವ್ ಮಾರ್ತಾಂಡ ಯೆಂದು ವಿಳಾಸ ಹಾಕಿಕೊಟ್ಟದ್ದು - ವೊಂಟಚವುರಿ ಬಿರುದು ೧
೧೦. ಬ್ರಹ್ಮಾವರ್ತದ ಶ್ರೀಮಂತ ಬಾಜೆರಾಯ ಕೊಟ್ಟದ್ದು - ಸಿಂಹಲಲಾಟ ಹಾಕಿಸಿದ ಬಂಗಾರದ ತೊಡೆ ಬಿರುದು -೧
೧೧. ಲಷ್ಕರಗ್ವಾಲೆರಿಯ ಸಿಂಧ್ಯಾನ ಹೆಂಡತಿ ಬಾಜಾಬಾಯಿ ದೇವರ ಪೌಲಬಿಗೆ ಕೊಟ್ಟದ್ದು - ಪಂಚಕಲಶದ ಬಿರುದು
೧೨. ಜಾಸಿ ಸಂಸ್ಥಾನದ ಶ್ರೀಮಂತ ನಾಯಕರು ಕೊಟ್ಟದ್ದು - ನಗಾರಿ ಆನೆ ಬಿರುದು
೧೩. ನಾಗಪುರದ ಅರಸು - ಗಂಟೆ ಹಾಕಿಸಿಕೊಟ್ಟ ಬೆಳ್ಳಿಸಿಂಹಲಲಾಟ ಬಿರುದು
೧೪. ಹೈದರಾಬಾದಿನ ಚಂದುಲಾಲ - ವಿಳಾಸ ಹಾಕಿಸಿಕೊಟ್ಟ ಹೊರ್ಚಲ ಬಿರುದು
೧೫. ಕಂನೂಲ ನವಾಬ - ಬಂಗಾರದ ಕಳಸ ಹಾಕಿಸಿಕೊಟ್ಟ ಟೊಪಿ ಬಿರುದು
೧೬. ಗದ್ವಾಲದ ಅರಸು ದೇವರಿಗೆ ಕೊಟ್ಟದ್ದು - ಮುತ್ತಿನ ಕಂಠೀ
೧೭. ಪುಂಗನೂರ ಅರಸು ಕೊಟ್ಟದ್ದು - ಭಲೂಕುಚರ್ಮದ ಬಿರುದು ಗಗ್ರದ ಭಾಲೆ ಜೋಡಿ ೧
೧೮. ಜನಾರ್ಧನದಿಂದ ತೋತಾದ್ರಿ ಜೀಯರು ಕೊಟ್ಟದ್ದು - ಹನುಮಂತಧ್ವಜ ಗರುಡಧ್ವಜ

ಮೇಲ್ಕಂಡ ಚಿನ್ನ ಬೆಳ್ಳಿ ತಾಮ್ರ ಬಿರುದುಗಳ ತೂಕ ಎಷ್ಟೆಂಬುದು ಗೊತ್ತಾಗುವುದಿಲ್ಲ. ಅಂತೂ ಭೇಟಿ ನೀಡಿದ ಪ್ರಮುಖ ಸ್ಥಳಗಳಲ್ಲಿ ಸ್ಥಳೀಯ ಮುಖ್ಯಸ್ಥರಿಗೆ ಖರ್ಚು ಬಿದ್ದಿದೆ. ಯಾತ್ರಾ ಅವಧಿಯಲ್ಲಿ ಕೈಗೊಂಡ ಕಾರ್ಯಗಳು ಇಂತಿವೆ.

೧. ಕಾಶಿಕ್ಷೇತ್ರದ ಹನುಮಂತ ಘಾಟಿಯಲ್ಲಿ ಶ್ರೀ ವ್ಯಾಸರಾಯರ ಮಠ ಕಟ್ಟಿಸಿ ಗೋಪಾಲಕೃಷ್ಣ ಹನುಮಂತ ದೇವರ ಪ್ರತಿಷ್ಠೆ ಮಾಡಿಸಿ ರಾಜರು ಕಟ್ಟಿಸಿದ ಶಿವಾಲಯ ದಲ್ಲಿ ಲಿಂಗ ಪ್ರತಿಷ್ಠೆ ಮಾಡಿಸಿದರು.
೨. ಕುಂಭ ಕೋಣಂನಲ್ಲಿ - ಕೊಲಂ ಶ್ರೀನಿವಾಸರಾಯರ ಕುಟುಂಬ ಕೊಟ್ಟ ಸ್ಥಳದಲ್ಲಿ ಪ್ರಾಣದೇವರ ಪ್ರತಿಷ್ಠೆ ಮಾಡಿಸಿದರು.
೩. ಅಣುತಾಂಬ್ರಪರ್ಣಿ ತೀರದಲ್ಲಿ - ದೇವಸ್ಥಾನ ಕಟ್ಟಿಸಿ ಹನುಮಂತೇಶ್ವರ ಪ್ರತಿಷ್ಠೆ ಮಾಡಿಸಿದರು. ಅಲ್ಲಲ್ಲಿ ಸೀಮೆ ಅರಸುಗಳು ನೀಡಿದ ರಹದಾರಿಯಿಂದಾಗಿ ಹೆಚ್ಚಿನ ಸ್ಥಳಗಳನ್ನು ದರ್ಶಿಸಿದ್ದರೆಂಬುದು ತಿಳಿಯುತ್ತದೆ.

ಉಲ್ಲೇಖಿತ ಶಾಸನ ಪ್ರಸನ್ನ ವೆಂಕಟೇಶ್ವರ ದೇವಸ್ಥಾನದ ರಥೋತ್ಸವ ಇತ್ಯಾದಿ ಉತ್ಸವಕ್ಕೆ ತಿಂಗಳಿಗೆ ೧೦೦ ರೂಪಾಯಿ ದಾನ ನೀಡಲಾಗಿತ್ತೆಂದು ಹಾಗೂ ಬಳಿಕೆರೆಯಲ್ಲಿ ಕಟ್ಟಿಸಿದ ಅನ್ನಛತ್ರಕ್ಕೆ ಕಂಠೀರಾಯಿ ೩೭೮೦ ವರಹ ನೀಡಿದ್ದನ್ನು ದಾಖಲಿಸುತ್ತದೆ. ಇದೇ ರೀತಿ ಯಾತ್ರೆಯ ಖರ್ಚಿಗೆಂದು ಮಂಜೂರು ಮಾಡಿದ ಹಣ, ಸುಬ್ಬರಾಯದಾಸರೊಡನೆ ತೆರಳಿದ ಶಿಷ್ಯವರ್ಗ ಅವರ ನಿರ್ವಹಣೆಯ ವೆಚ್ಚ ಯಾತ್ರೆಯ ಅವಧಿ ನಮೂದಿಸಿದ್ದಲ್ಲಿ ಒಂದು ಅಪೂರ್ವ ದಾಖಲೆಯಾಗಿರುತ್ತಿತ್ತು. ಏಕೆಂದರೆ ಶಾಸನದ ಕಾಲ ವನ್ನು ವೀಕ್ಷಿಸಿದಾಗ ಆಧುನಿಕ ಕಾಲದ ಶಾಸನವೆಂಬುದರಲ್ಲಿ ಸಂದೇಹವಿಲ್ಲ. ಇನ್ನೂ ಸಂಪೂರ್ಣ ಭಾರತ ಬ್ರಿಟಿಷ್‌ರ ನಿಯಂತ್ರಣ ಕ್ಕೊಳಪಟ್ಟಿರಲಿಲ್ಲ. ಆದಾಗ್ಯೂ ಬ್ರಿಟಿಷ್ ದಂಡಯಾತ್ರೆಗಳ ವೆಚ್ಚ ಭರಿಸುವ ದಾಖಲೆಗಳನ್ನು ಸ್ಥಳೀಯರಿಗೆ ನೀಡುವ ಪರಿಪಾಠ ವಂತೂ ಇತ್ತು.

ಸುಬ್ಬರಾಯದಾಸರು ಧಾರ್ಮಿಕ ರಾಯಭಾರಿಯಂತೆ ದೇಶದ ವಿವಿಧ ಭಾಗಗಳನ್ನು ಸಂದರ್ಶಿಸಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಇಂತಹ ಮಹನೀಯರ ಯಾತ್ರೆಗೆ ತಗುಲಿದ ವೆಚ್ಚ ದಾಖಲಿಸುವಲ್ಲಿ ಸ್ಥಳೀಯರು ವಿಫಲರಾಗಿದ್ದಾರೆಂಬ ಕೊರತೆ ಶಾಸನದಲ್ಲಿ ಎದ್ದುಕಾಣುತ್ತದೆ. ಆದರೆ ಮತ್ತೊಮ್ಮೆ ಚಿಂತಿಸಿದಾಗ, ಶ್ರೀ ಚಂದ್ರಶೇಖರ ಅವರ ಸಲಹೆಯಂತೆ ದಿನಕ್ಕೆ ೧೦ ಕಿ. ಮೀ. ಕ್ರಮಿಸಿದ್ದರೂ ೩೫೦೦ ಕಿ. ಮೀ. ದೂರ ಕ್ರಮಿಸಲು ಎಂಟು ತಿಂಗಳ ಅವಧಿಯನ್ನಾದರೂ ತೆಗೆದುಕೊಂಡಿರಬಹುದು. ಹಾಗೆಯೇ ಅಂದು ಹಣ ಮಂಜೂರು ಮಾಡುವ ಬದಲು ಧವಸ ಧಾನ್ಯಗಳನ್ನಿತ್ತು ಯಾತ್ರಾರ್ಥಿಗಳನ್ನು ನೋಡಿಕೊಳ್ಳುವ ಹೊಣೆಗಾರಿಕೆ ಅಲ್ಲಲ್ಲಿ ಸ್ಥಳೀಯರದ್ದಾಗಿತ್ತೆಂಬ ಡಾ॥ ಹಾವನೂರರ ಅಭಿಪ್ರಾಯ, ಸಲಹೆ ಸಮ್ಮತಿಸಬಹುದಾಗಿದೆ.

ಡಾ॥ ಮಂಜುಳಾ ಹುಲ್ಲಹಳ್ಳಿ *

# ಪದಿನಾಲ್ಕು ನಾಡರಸರು : ಒಂದು ಅವಲೋಕನ

ಆಧುನಿಕ ಹೋಬಳಿ ಅಥವಾ ತಾಲ್ಲೂಕಿಗೆ ಸಂವಾದಿಯಾಗಿ 'ನಾಡು' ಹತ್ತನೇ ಶತಮಾನದ ಸುಮಾರಿನಲ್ಲಿ ಬಳಕೆಯಲ್ಲಿದ್ದು ದನ್ನು ಆ ಕಾಲದ ಶಾಸನಗಳಿಂದ ತಿಳಿಯಬಹುದು. ಇಂತಹ ಹಲವು ನಾಡುಗಳು ಒಂದಾಗಿ ಸೇರಿ ಅಧಿಕಾರ ಚಲಾಯಿಸಿದಾಗ ಸೇರಿದ ಒಟ್ಟು ನಾಡುಗಳ ಸಂಖ್ಯೆಯಿಂದ ಆ ಮುಖ್ಯ ನಾಡನ್ನು ಸಂಕೇತಿಸಿರುವುದನ್ನು ಮೈಸೂರು ಸೀಮೆಯಲ್ಲಿ ಪ್ರಚಲಿತವಿರುವ ಪದಿನಾಡು, ಪದಿನಾಲ್ಕು ನಾಡು, ಪದಿನೆಂಟು ನಾಡು ಎಂಬ ಸಂಯುಕ್ತ ಪದಗಳಲ್ಲಿ ಗುರುತಿಸಬಹುದು.

ಪ್ರಸ್ತುತ ವಿಷಯವಾದ ಪದಿನಾಲ್ಕುನಾಡಿನ ವ್ಯಾಪ್ತಿಗೆ ಇಲ್ಲಿ ಉಲ್ಲೇಖಿಸಲಾಗಿರುವ ನಾಡುಗಳು ಸೇರಿರಬಹುದೆಂದು ಈ ಪ್ರದೇಶದ ಶಾಸನಗಳು, ಬೆಟ್ಟದ ಕೋಟೆ ಕೈಫೀಯತ್ತು ಮತ್ತಿತರ ಆಧಾರಗಳಿಂದ ಊಹಿಸಬಹುದು. ಅವುಗಳೆಂದರೆ, ಕುಡುಗು ನಾಡು, ಕಾರೆನಾಡು, ಹೊಕುನಾಡು, ಅಂಣೆನಾಡು, ಹಿರಿಯನಾಡು, ಎಡತಲೆನಾಡು, ಕುಮಾರನ ನಾಡು(ತೊರೆನಾಡು) ಹುಲ್ಲನ ಹಳ್ಳಿಯನಾಡು, ಹುರನಾಡು, ಎಡೆಯಾಲನಾಡು, ಕಣಲನಾಡು, ಸುಗುನಾಡು, ನವಿಲೆನಾಡು ಮತ್ತು ಬಯಲ್ನಾಡು. ಈ ಹದಿನಾಲ್ಕು ನಾಡುಗಳನ್ನು ಒಳಗೊಂಡು ಮೈಸೂರು ಸೀಮೆಯ ಆಗ್ನೇಯ, ದಕ್ಷಿಣ ಮತ್ತು ನೈರುತ್ಯ ಭಾಗಗಳಲ್ಲಿ ಹರಿಡಕೊಂಡು 'ಪದಿನಾಲ್ಕು ನಾಡು' ಎಂದು ಹೆಸರಾದ ಈ ನಾಡಿನ ಉಲ್ಲೇಖ ಕ್ರಿ. ಶ. ೧೨೧೦ರ ನಂತರ ವಿಶೇಷವಾಗಿ ಕಾಣದೊರೆಯುತ್ತದೆ. ಆದರೆ ಈ ನಾಡಿನದೇ ಭಾಗಗಳಾದ ನುಗುನಾಡು (ಹೆ. ಕೋ. ೫೮ ಕ್ರಿ. ಶ. ೧೦೨೦), ನವಿಲುನಾಡು (ಹೆ. ಕೋ. ೭-೧೦೩೭) ಕಾರೆನಾಡು (ನಂಗೂ ೩೨೭ ಕ್ರಿ.ಶ. ೧೧೬೪) ಬಯಲ್ನಾಡು (ಗು. ಪೇ. ೨೧೯-೧೧ನೇ ಶ.) ಮುಂತಾದವುಗಳು ಇದಕ್ಕೂ ಮುನ್ನವೇ ಶಾಸನಗಳಲ್ಲಿ ಉಕ್ತವಾಗಿರುವುದನ್ನು ಗಮನಿಸಬಹುದು.

ಈ ಹದಿನಾಲ್ಕು ನಾಡುಗಳಲ್ಲಿ ಪ್ರತಿಯೊಂದು ನಾಡೂ ಪ್ರತ್ಯೇಕ ಆಡಳಿತ ಕೇಂದ್ರವಾಗಿದ್ದು ಆಯಾ ನಾಡುಗಳಿಗೇ ಪ್ರಭುಗಳು ಇರುತ್ತಿದ್ದರು. ಆದರೆ ಒಟ್ಟಾರೆ ರಾಜ್ಯನಿರ್ವಹಣೆಗೆ ಶಾಸನಗಳಿಗೆ, ಧರ್ಮಕಾರ್ಯಗಳಿಗೆ ಈ ಹದಿನಾಲ್ಕು ನಾಡುಗಳ ಸಮಸ್ತ ಪ್ರಭುಗಳುಡರು ಒಪ್ಪಬೇಕಾಗಿತ್ತು ಎಂಬ ಅಂಶ ಅಂದಿನ ಆಡಳಿತ ವಿಕೇಂದ್ರೀಕರಣಕ್ಕೆ ಒಳ್ಳೆಯ ನಿದರ್ಶನವಾಗಿದೆ.

ಈ ಪದಿನಾಲ್ಕು ನಾಡಿನ ಬಗೆಗೆ ಬಿ. ಎಲ್. ರೈಸ್ ಅವರು 'Mysore and Coorg from Inscriptions'ನಲ್ಲಿ ಚರ್ಚಿಸುತ್ತ 'ಹೊಯ್ಸಳಬಲ ತನ್ನ ಅವನತಿಯ ಅಂಚನ್ನು ಮುಟ್ಟುತ್ತಿದ್ದಾಗ, ಮೂರನೇ ಬಲ್ಲಾಳನ ಆಳ್ವಿಕೆಯಲ್ಲಿದ್ದ ಗಣ್ಯಮಂತ್ರಿ ಮಾಲಂಗಿ ಯಲ್ಲಿ ಬಾಲಶಾಲೆ ಸ್ಥಾಪಿಸಿದ ಪೆರುಮಾಳೆ ದಣ್ಣಾಯಕ, ಅವನ ಮಗ ಪದಿನಾಲ್ಕು ನಾಡನ್ನು ಆಳುತ್ತಿದ್ದ ಮಾಧವ ದಣ್ಣಾಯಕ ಎಂದು ಹೇಳುತ್ತಾರೆ. 'ಕರ್ನಾಟಕ ಇತಿಹಾಸ ದರ್ಶನ'ದಲ್ಲಿ ಇಮ್ಮಡಿ ಬಲ್ಲಾಳನ ಮಂತ್ರಿ ಪೆರುಮಾಳ ದಣ್ಣಾಯಕನು ಈ 'ಪದಿನಾಲ್ಕು ನಾಡು' ಎಂಬ ಪುಟ್ಟರಾಜ್ಯದ ಮೂಲಪುರುಷ ಎಂದು ಉಕ್ತ ವಾಗಿದೆ. 'ಕರ್ನಾಟಕ ಪರಂಪರೆ'ಯು ಈ ರಾಜ್ಯವನ್ನು ಮುಮ್ಮಡಿ ಬಲ್ಲಾಳನ ಮಂತ್ರಿಯಾಗಿದ್ದ ಪೆರುಮಾಳೆ ದಣ್ಣಾಯಕನು ಸ್ಥಾಪಿಸಿ ದನು ಎಂದು ಹೇಳುತ್ತದೆ. ಮೈಸೂರು ಗೆಜಟೀರ್‌ನಲ್ಲಿ ಹೊಯ್ಸಳ ಸಾಮ್ರಾಜ್ಯದ ವಿವರದೊಂದಿಗೆ ಪದಿನಾಲ್ಕು ನಾಡಿಗೆ ಸಂಬಂಧಿ ಸಿದ ಹಲವು ವಿಷಯಗಳು ಲಭ್ಯವಾಗುತ್ತವಾದರೂ ಇಲ್ಲಿ 'ಹದಿನಾಲ್ಕು ನಾಡು' ಎಂಬ ಸ್ವಯಂ ರಾಜ್ಯದ ಬಗೆಗೆ ಉಲ್ಲೇಖ ವಿಲ್ಲ. ಪರಿಷ್ಕೃತ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಪೀಠಿಕೆಯಲ್ಲಿ ನೀಡಿರುವ ವಿವರಗಳು ಚದುರಿಹೋಗಿವೆ.

ಈ ಹಿನ್ನೆಲೆಯಲ್ಲಿ ದೊರೆತಿರುವ ಶಾಸನಗಳ ಪರಿಶೀಲನೆ ಯಿಂದ ಈ ಕೆಳಗಿನ ಮಾಹಿತಿಗಳನ್ನು ಪಡೆಯಬಹುದು. ಹೊಯ್ಸಳ ರಾಜ್ಯದ ಪ್ರತಿನಿಧಿಗಳು ಸರ್ವಾಧಿಕಾರಿ, ದಣ್ಣಾಯ್ಕ, ಮಹಾಪ್ರಧಾನ ಮುಂತಾದ ಗೌರವಸೂಚಕ ಪದವಿಗಳನ್ನು ಪಡೆದು ರಾಜ್ಯ ನಿರ್ವಹಿಸುತ್ತಿದ್ದರು. ಆದರೆ ಈ ಪದವಿ

---

* ಫಾರ್ಮಾಸಿಸ್ಟ್, ಪ್ರಾ. ಆ. ಕೇಂ. ಹುಲ್ಲಹಳ್ಳಿ, ನಂಜನಗೂಡು ತಾಲೂಕು-೫೭೧ ೩೦೪

ವಂಶಪಾರಂಪರ್ಯವಾಗಿರಲಿಲ್ಲ. ಪದಿನಾಲ್ಕು ನಾಡಿನ ವ್ಯಾಪ್ತಿಯನ್ನೇ ಗಮನದಲ್ಲಿಟ್ಟುಕೊಂಡು ವಿಚಾರ ಮಾಡಿದರೆ, ಕ್ರಿ. ಶ. ೧೧೬೨-೬೩ರಲ್ಲಿ ಸರ್ವಾಧಿಕಾರಿ ಮಲ್ಲಿಕಾರ್ಜುನ ದಣ್ಣಾಯ್ಕ ಗುಂಡ್ಲಪೇಟೆ ಪ್ರಾಂತ್ಯದಲ್ಲಿ, ೧೧೭೧ರಲ್ಲಿ ಸರ್ವಾಧಿಕಾರಿ ಹೆಗ್ಗಡೆ ಕಲ್ಲಯ್ಯನು ಬೆಳಚಲವಾಡಿ ಭಾಗದಲ್ಲಿ ೧೧೯೬- ೯೭ರಲ್ಲಿ ಕುಮಾರ ಲಕ್ಷ್ಮೀದೇವ ದಣ್ಣಾಯ್ಕನು ಗುಂಡ್ಲುಪೇಟೆ ಮತ್ತು ನಂಜನಗೂಡು ಭಾಗಗಳಲ್ಲಿ ೧೨೧೦ರಲ್ಲಿ ಶ್ರೀಮನ್ಮಹಾಪ್ರಧಾನ ಪೆರಿಯದಣ್ಣಾಯ್ಕರು ಕೊಳ್ಳೇಗಾಲ ಪ್ರಾಂತ್ಯದಲ್ಲಿ ೧೨೧೧ರಲ್ಲಿ ಹಿರಿಯ ದಂಡನಾಯಕರು ಹೆಗ್ಗಡದೇವನಕೋಟೆಯಲ್ಲಿ (ಹೆ. ಕೋ. ಇವರಿಬ್ಬರೂ ಒಬ್ಬನೇ ವ್ಯಕ್ತಿ ಇರಬಹುದೆ?) ೧೨೧೮ರಲ್ಲಿ ಶ್ರೀಮನ್ಮಹಾಪ್ರಧಾನ ಮಾಧವ ದಣ್ಣಾಯ್ಕ ಮತ್ತು ಕೇಶವ ದಣ್ಣಾಯ್ಕರು ಇದೇ ಕಂದೇಗಾಲ ಪಟ್ಟಣದಲ್ಲಿ ೧೨೨೧ರಲ್ಲಿ ಶ್ರೀಮನ್ಮಹಾಪ್ರಧಾನ ಶ್ರೀರಂಗ ಡಣಾಯಕರು ಕಲ್ಲಹಳ್ಳಿ ಭಾಗದಲ್ಲಿ ಅಧಿಕಾರ ಪಡೆದಿದ್ದುದನ್ನು ಕಾಣಬಹುದು.

ಈ ಅವಧಿಯ ನಂತರ ಇಲ್ಲಿ ಅಸ್ತಿತ್ವದಲ್ಲಿದ್ದ ನಾಡುಗಳೆಲ್ಲಾ ಒಗ್ಗಟ್ಟಾಗಿ 'ಪದಿನಾಲ್ಕು ನಾಡು' ಎಂಬ ಒಂದು ನಾಡನ್ನು ಆಯೋಜಿಸಿಕೊಂಡು, ಎಲ್ಲ ನಾಡುಗಳ ಪ್ರಭುಗವುಂಡ ಗಳಿಗೆ ಸಮ್ಮತನಾದ ಒಬ್ಬ ವ್ಯಕ್ತಿ ಈ ಒಟ್ಟು ನಾಡಿನ ಆಡಳಿತ ಸೂತ್ರ ವಹಿಸಿಕೊಂಡಿರಬಹುದು.

'ಪದಿನಾಲ್ಕು ನಾಡು' ಎಂದು ಈ ನಾಡಿನ ಮೊದಲ ಸ್ಪಷ್ಟ ಉಲ್ಲೇಖ ದೊರೆಯುವುದು ಕ್ರಿ. ಶ. ೧೨೧೦ರ ಮುಡಿಗೊಂಡ (ಕೊ. ಗಾ. ೧೧೦) ಶಾಸನದಲ್ಲಿ. ತಮಿಳು ಭಾಷೆಯಲ್ಲಿರುವ ಇದರಲ್ಲಿ ಪದಿನಾಲ್ಕುನಾಟ್ಟು ಸಮಸ್ತ ಪ್ರಭುಗವುಂಡಂಗಳು ನಿರ್ವಹಿಸಿದ ವ್ಯಾಪಾರದ ಅಸ್ಪಷ್ಟ ವಿವಿರ ಇದೆ. ೧೨೧೧ರಲ್ಲಿ ಈ ಪದಿನಾಲ್ಕು ನಾಡ ಸಮಸ್ತ ಪ್ರಭುಗವುಡಗಳು ಸೇರಿ ನುಗುನಾಡಿನ ಕಲ್ಲಂಬಾಳು ಕಲಿಯುಗ ರಾಮೇಶ್ವರ ದೇವರಿಗೆ ನೀಡಿರುವ ದತ್ತಿಯ ವಿವರ ಇದ್ದರೆ (ಹೆ.ಕೋ. ೭೪) ೧೨೧೮ರಲ್ಲಿ ಇದೇ ಹದಿನಾಲ್ಕು ನಾಡ ಸಮಸ್ತ ಪ್ರಭುಗಉಡಂಗಳು ಇದೇ ಸ್ಥಳದ ಯಜ್ಞಕಾಮೇಶ್ವರ ದೇವರಿಗೆ ದತ್ತಿ ನೀಡಿದ್ದಾರೆ. (ಹೆ. ಕೋ. ೮೧, ೮೩) ಕ್ರಿ. ಶ. ೧೨೪೭ರ ಯಡೂರು ಶಾಸನದಲ್ಲಿ (ಚಾ.ನ. ೧೨೮) ಪದಿನಾಟ್‌ನಾಡ ಸಮಸ್ತ ಪ್ರಭುಗೌಡಗಳು ಮೂಗೂರು ಪ್ರದೇಶದ ನಾಯ್ಕ ದೇವರಿಗೆ ನೀಡಿರುವ ದತ್ತಿಯ ಉಲ್ಲೇಖವಿದೆ. ಕ್ರಿ. ಶ. ೧೨೭೭ರ ಮೂಗೂರು ಶಾಸನವು (ತಿ. ನ. ೨೬೧) ಕುಮಾರನ ನಾಡಾದ ತೊರೆನಾಡನ್ನು ದೇಸೀನಾಥ ಎಂಬುವನು ಆಳುತ್ತಿದ್ದ ನೆಂದು ಪ್ರಸ್ತಾಪಿಸಿ ಮೂಗೂರನ್ನು ಹದಿನಾಲ್ಕುನಾಡಿಗೆ ಸ್ಥಿರ ವಾದುದು ಎಂದು ಕೈವಾರಿಸುತ್ತದೆ. ೧೨೭೮ರ ಮುಡಿಗೊಂಡದ ತಮಿಳು ಶಾಸನವು (ಕೊ. ಗಾ. ೧೧೨) ಪದಿನಾಲುನಾಟ್ಟು ಸಮಸ್ತ ಪ್ರಭುಗಉಡಗಳು ಮತ್ತು ಪದಿನೆಂಟುನಾಡ ಹಿರಿಯರನ್ನು ಪ್ರಸ್ತಾಪಿಸುತ್ತದೆ. ೧೨೯೪ರ ಹೊಮ್ಮದ ಶಾಸನವು (ಚಾ. ನ. ೧೪೯) ಹದಿನಾಲ್ಕುನಾಡ ಸಮಸ್ತ ಪ್ರಭುಗಉಡಗಳು ನೀಡಿದ ದತ್ತಿಯನ್ನು ವಿವರಿಸಿ ಇದಕ್ಕೆ ಹದಿನಾಲ್ಕು ನಾಡೊಪ್ಪವನು ಹಾಕಿದೆ. ಹೀಗೆ ಹದಿನಾಲ್ಕು ನಾಡಿಗೆ ಸೇರಿ ಕುಮಾರನನಾಡು, ನುಗುನಾಡು, ನವಿಲೆನಾಡು, ಕುಡಗುನಾಡು ಎಂದೆಲ್ಲಾ ಪ್ರತ್ಯೇಕ ಅಸ್ತಿತ್ವ ಉಳಿಸಿಕೊಂಡಿದ್ದ ಈ ನಾಡುಗಳೆಲ್ಲಾ ಪೆರುಮಾಳೆದೇವ ದಣ್ಣಾಯ್ಕನ ಮಗ ಮಾಧವದಣ್ಣಾಯ್ಕನ ವೇಳೆಗೆ ಇಡಿಯಾಗಿ 'ಪದಿನಾಲ್ಕು ನಾಡು' ಎಂದೇ ಚಲಾವಣೆಗೆ ಬಂದುದನ್ನು ೧೩೧೦ರ ನಂತರದ ಶಾಸನಗಳು ಸ್ಪಷ್ಟಪಡಿಸುತ್ತವೆ. ಈ ಪ್ರಕ್ರಿಯೆ ಪೆರುಮಾಳೆ ದೇವ ದಣ್ಣಾಯ್ಕನ ಕಾಲದಿಂದಲೇ ಆರಂಭವಾಗಿರಬಹುದಾದ ಸಾಧ್ಯತೆ ಹೆಚ್ಚಿನದಾಗಿರುವುದರಿಂದ ಇವನಿಗೆ ಹದಿನಾಲ್ಕು ನಾಡನ್ನು ಸ್ಥಾಪಿಸಿದ ಕೀರ್ತಿ ಕೊಡುವುದಕ್ಕಿಂತ ಈ ಎಲ್ಲಾ ನಾಡುಗಳನ್ನು ಒಂದು ಮುಖ್ಯವಾದ ಆಡಳಿತದ ಕೆಳಗೆ ತಂದವನು ಎಂದು ಗುರುತಿಸುವುದು ಸೂಕ್ತವಾಗುತ್ತದೆ.

ಇತಿಹಾಸಜ್ಞರ ಗಮನವನ್ನು ವಿಶೇಷವಾಗಿ ಸೆಳೆದಿರುವ ಈ ಪೆರುಮಾಳೆದೇವ ದಣ್ಣಾಯ್ಕನ ಹೆಸರು ಚಾಮರಾಜನಗರ, ಕೊಳ್ಳೇಗಾಲ, ಮೈಸೂರು, ಗುಂಡ್ಲುಪೇಟೆ, ನಂಜನಗೂಡು, ನರಸೀಪುರ ಮುಂತಾದ ಪ್ರದೇಶಗಳ ಶಾಸನಗಳಲ್ಲಿ ಲಭ್ಯವಾದರೂ ಈತ ನಂಜನಗೂಡು ಪ್ರದೇಶದ ಎಡತಲೆಯನ್ನು ತನ್ನ ಮುಖ್ಯ ಕಾರ್ಯಕ್ಷೇತ್ರವಾಗಿಸಿಕೊಂಡಿದ್ದ ಎಂಬುದನ್ನು ಹೆಡತಲೆ (ನಂಗೂ ೩೪೦) ಮತ್ತು ಹೆಮ್ಮರಗಾಲ (ನಂಗೂ ೩೨೯) ಶಾಸನಗಳು ಅಸ್ಪಷ್ಟವಾಗಿ ಹೇಳಿದರೆ ಮೇಲುಕೋಟೆ ಶಾಸನಗಳು (ಪಾಂ. ಪು. ೧೬೧, ೧೮೫) ಸ್ಪಷ್ಟವಾಗಿಯೇ ಎಡತಲೆಯ ಪೆರುಮಾಳದೇವ ದಣ್ಣಾಯಕ ಎಂದು ಹೇಳುತ್ತವೆ. ಈ ಪೆರುಮಾಳೆ ದಂಣ್ಣಾಯ್ಕನ ತಂದೆ ಭೀಮೆಯ ದಣ್ಣಾಯ್ಕ ಎಂಬುದನ್ನು ಹೆಮ್ಮರಗಾಲದ ಶಾಸನ (ನಂಗೂ ೩೨೯) ಮುಸುಕಾಗಿಯೂ ಕೊತ್ತಲವಾಡಿ ಶಾಸನ (ಚಾ. ನ. ೩೦೯) ನೇರವಾಗಿಯೂ ನಿರ್ದೇಶಿಸುತ್ತವೆ. ಕ್ರಿ.ಶ. ೧೨೯೦ರಲ್ಲಿ ತಡಿಮಾಲಂಗಿ ಶಾಸನದಲ್ಲಿ (ತಿ.ನ. ೨೩೮) ತಡಿಮಾಲಂಗಿಯಲ್ಲಿ ಬಾಲಶಾಲೆ ತೆರೆದನೆಂದು ಉಲ್ಲೇಖಿತನಾಗಿರುವ ಶ್ರೀ ವಿಷ್ಣುದೇವ ಮತ್ತು ಮಂಚಾಂಬಿಕೆಯರ ಪುತ್ರ, ಮಹಾಪ್ರಧಾನ ಪೆರುಮಾಳ ದೇವದಣ್ಣಾಯ್ಕನಿಗಿಂತ ಈತ ಸಂಪೂರ್ಣ ಭಿನ್ನ. ಈ ತಡಿ ಮಾಲಂಗಿಯ ಪೆರುಮಾಳೆದೇವ ದಣ್ಣಾಯ್ಕನ ಇದೇ ಬಿರುದುಗಳು ಮತ್ತು ವಿವರಗಳು ಬೆಳ್ಳೂರು (ನಾ ಮಂ. ೮೨ ಕ್ರಿ. ಶ. ೧೨೬೯), ಹೊಳೆನರಸೀಪುರ (ಹೊ. ನ. ೧, ಕ್ರಿ. ಶ. ೧೨೭೬), ಹಾನಗಲ್ಲು (ಅ. ಗೂ. ೩೯ ಕ್ರಿ.ಶ. - ೧೨೮೦), ಬೆಳ್ಳೂರು (ನಾ. ಮಂ. ೭೩, ೭೬ ಕ್ರಿ. ಶ. ೧೨೮೪, ಈ ಶಾಸನಗಳಲ್ಲಿ ಇವನ ಮಗ ಚಕ್ರವರ್ತಿ ದಣ್ಣಾಯ್ಕ ಎಂದೂ ತಿಳಿಯಬರುತ್ತದೆ) ಹಾಗಲಹಳ್ಳಿ (ಮದ್ದೂರು ೮೧-ಕ್ರಿ. ಶ. ೧೨೯೨) ಕಳಿಂಗನಹಳ್ಳಿ (ನಾ. ಮಂ. ೧೨೫, ೧೩ನೇ ಶ.) ಮುಂತಾದ ಶಾಸನಗಳಲ್ಲಿ ದೊರೆಯುವುದರಿಂದ ತಡಿ ಮಾಲಂಗಿ ಶಾಸನದ ಮಹಾಪ್ರಧಾನ ಪೆರುಮಾಳೆದಂಣ್ಣಾಯ್ಕ

ನದು ಹೆಚ್ಚುಕಡಿಮೆ ಹೊಯ್ಸಳ ಸಾಮ್ರಾಜ್ಯ ವ್ಯಾಪ್ತಿಯ ಕಾರ್ಯಕ್ಷೇತ್ರವಾದರೆ, ಎಡತಲೆಯ ಮಹಾಪ್ರಧಾನ ಪೆರುಮಾಳೆ ದೇವದಂಣ್ಣಾಯ್ಕ ಪದಿನಾಲ್ಕುನಾಡಿಗೆ ಸೇರಿದ ಪ್ರಾದೇಶಿಕ ನಾಯಕ ಎಂಬುದನ್ನು ಖಚಿತವಾಗಿ ತಿಳಿಯಬಹುದು. ಆದರೆ ಒಂದೇ ಅವಧಿಯಲ್ಲಿ ಒಂದೇ ಹೆಸರು ಮತ್ತು ಅಧಿಕಾರಗಳ ಇಬ್ಬರು ವ್ಯಕ್ತಿಗಳು ಶಾಸನೋಕ್ತರಾಗಿರುವುದು ಅನೇಕ ಸಂಶೋಧಕರಿಗೆ ದಾರಿ ತಪ್ಪಿಸಿರುವುದನ್ನು ಕಾಣಬಹುದು. ಜೊತೆಗೆ ೧೩-೧೪ನೇ ಶತಮಾನದ ಎಡತಲೆ ಶಾಸನ (ನಂಗೂ ೩೪೬) ಉಲ್ಲೇಖಿಸುವ ಅಲ್ಲಾಳದೇವ, ವಿಮ್ಮಯ್ಯ, ನಾರಾಯಣ ಮತ್ತು ಗೌಡಯ್ಯ ಇವರುಗಳ ತಂದೆ ಪೆರುಮಾಳದೇವ ಮತ್ತು ಕ್ರಿ. ಶ. ೧೩೩೨ರ ಹುಲ್ಲಹಳ್ಳಿ ಶಾಸನದಲ್ಲಿ (ನಂಗೂ ೧೩೮) ಉಲ್ಲೇಖಿತನಾಗಿರುವ ಪೆರುಮಾಳೆದೇವರಸ ಒಬ್ಬನೇ ಆಗಿರುವ ಸಾಧ್ಯತೆ ಇದ್ದು ಆತನೂ ಈ ಹದಿನಾಲ್ಕು ನಾಡ ಪೆರುಮಾಳೆ ದಂಣ್ಣಾಯ್ಕನಿಗಿಂತ ಭಿನ್ನ ಎಂಬುದು ಸ್ಪಷ್ಟವಾಗುತ್ತದೆ.

ಪದಿನಾಲ್ಕುನಾಡ ಪೆರುಮಾಳೆದೇವ ದಣ್ಣಾಯ್ಕನ ತಂದೆಯೂ ದಣ್ಣಾಯ್ಕನೇ ಆಗಿರುವುದರಿಂದ, ಯಾವುದಾದರೂ ಒಂದು ನಾಡಿನ (ಬಹುಶಃ ಎಡತಲೆ ನಾಡು) ಅಧಿಪತಿಯಾಗಿದ್ದು ನಂತರ ಇವನ ಮಗ ಪೆರುಮಾಳೆ ದಂಣ್ಣಾಯ್ಕ ರಾಜಕೀಯವಾಗಿ ಪ್ರಬಲನಾಗಿ ಪದಿನಾಲ್ಕುನಾಡನ್ನು ಒಟ್ಟಾಗಿಸುವ ಪ್ರಯತ್ನಕ್ಕೆ ಕೈ ಹಾಕಿರಬಹುದು. ಹೊಯ್ಸಳ ಸಾಮ್ರಾಟ ಸೋಮೇಶ್ವರನ ಕಾಲದಲ್ಲಿಯೇ ಅಧಿಕಾರ ವಹಿಸಿಕೊಂಡ ಇವನು ಮುಮ್ಮಡಿ ಬಲ್ಲಾಳನ ಆಳ್ವಿಕೆಯ ಪೂರ್ವಾರ್ಧದವರೆಗೆ ಸುಮಾರು ನಲವತ್ತೈದು ವರುಷಗಳ ಕಾಲ ರಾಜಕೀಯವಾಗಿ ಸಕ್ರಿಯನಾಗಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಇವನು ಕ್ರಿ.ಶ. ೧೨೪೭ರಲ್ಲಿ ಮೋಗೂರು ಪ್ರದೇಶದ ನಾಯ್ಕದೇವರಿಗೆ ಯಡೂರನ್ನು ದಾನವಾಗಿ ನೀಡಿದ್ದರೆ (ಚಾ. ನ. ೧೨೮), ಕ್ರಿ. ಶ. ೧೨೪೮ರಲ್ಲಿ ಅಗರ ಗ್ರಾಮವನ್ನು ಪುನರ್ನಿರ್ಮಾಣ ಮಾಡಿದ್ದಾನೆ. (ಯಳಂ ೧೩೬). ಕ್ರಿ. ಶ. ೧೨೭೫ರ ದೇವಗಳ್ಳಿ ಶಾಸನವು (ಮೈ. ೨೦೪) ಇವನ ಹೆಸರನ್ನು ಉಲ್ಲೇಖಿಸಿದ್ದರೆ, ಕ್ರಿ. ಶ. ೧೨೮೩-೮೪ರ ಆಲತ್ತೂರು ಶಾಸನದಲ್ಲಿ (ಗು. ಪೇ. ೩೪) ಈತ ಪೃಥ್ವೀರಾಜ್ಯಂಗೆಯ್ಯುತ್ತಿದ್ದ ವಿಷಯ ಇದೆ. ಇದೇ ಅವಧಿಯ ಯಳಂದೂರು (ಯಳಂ. ೭) ಮತ್ತು ತಾಯೂರು ಶಾಸನಗಳು (ನಂಗೂ ೨೦೭) ಕೂಡ ಇವನ ಹೆಸರನ್ನು ಉಲ್ಲೇಖಿಸುತ್ತವೆ. ನರಸಮಂಗಲದ ಶಾಸನದಲ್ಲಿ (ಚಾ. ನ. ೨೯೬) ಅಲ್ಲಿನ ಜನಾರ್ಧನಪೆರುಮಾಳ್‌ಗೆ ಈತ ನೀಡಿರುವ ದತ್ತಿಯ ವಿವರ ಉಕ್ತವಾಗಿದ್ದರೆ ಕ್ರಿ. ಶ. ೧೨೯೨ರ ಹೆಮ್ಮರಗಾಲದ ಶಾಸನದಲ್ಲಿ (ನಂಗೂ ೩೨೯) ಶ್ರೀಮನ್ಮಹಾಪ್ರಧಾನ ಗೋಪಿಯ ದಣ್ಣಾಯ್ಕನ ಮಗ ಭೀಮೆಯದಣ್ಣಾಯ್ಕ, ಅಲ್ಲಾಳದೇವದಣ್ಣಾಯ್ಕ ಮಗ ಮಂಚಯ ದಣ್ಣಾಯ್ಕ (ಈ ಅಲ್ಲಾಳದೇವ ದಣ್ಣಾಯ್ಕ ಹೆ. ಕೋ.೪೮ರ ಬೆಳತೂರು ಶಾಸನದಲ್ಲಿ ಉಲ್ಲೇಖಿತನಾದವನಿರಬಹುದು.) ಭೀಮೆಯದಣ್ಣಾಯ್ಕನ ಮಗ ಸಕಳೇಯ ದಣ್ಣಯ್ಕರೊಡನೆ ಈತನ ಹೆಸರು ದಾಖಲಾಗಿದೆ. ಇದೇ ಅವಧಿಯ ಎಡತಲೆ ಶಾಸನ (ನಂಗೂ ೩೪೦) ಕೂಡ ಈ ನಾಲ್ವರು ದಣ್ಣಾಯ್ಕರ ಹೆಸರುಗಳನ್ನು ಹೇಳುತ್ತದೆ. ಇದರ ವಿವರ ನೋಡಿದರೆ ಬೆಟ್ಟದಕೋಟೆ ಕೈಫಿಯತ್ತು (ಕೆ. ಎ. ೪೦೦, ಕು. ಕ. ಅ. ಸಂ. ಮೈಸೂರು) ವಿವರಿಸುವ ಮೂಡಲಕೋಟೆ ನವದಣ್ಣಾಯ್ಕರ ವಿವರ ನೆನಪಾಗುತ್ತದೆ. ವಿವಿಧ ಘಟನೆಗಳ ಸರಮಾಲೆಯನ್ನು ಉಲ್ಲೇಖಿಸಿ ಹಿಂಡಿಸಂಡಿಗೆಯ ಕಾರಣದಿಂದ ಛಿದ್ರವಾದ ಈ ನಾಡಿನ ನಾಲ್ವರು ಸಹೋದರರು ಎಡತಲೆಗೆ ಬಂದು ನೆಲೆಸಿದರು ಎಂದು ಹೇಳುತ್ತಾ ಈ ವಂಶ ದವರೆಂದು ಹಲವು ಹೆಸರುಗಳನ್ನು ನೀಡುತ್ತಲೇ ಶ್ರೀರಂಗಪಟ್ಟಣ ಮತ್ತು ಮೈಸೂರು ಒಡೆಯರ ವಿವರಕ್ಕೆ ಬರುವ ಈ ಕೈಫಿಯತ್ತು ಕ್ರಿ. ಶ. ೧೮೦೦ರ ಸುಮಾರಿನಲ್ಲಿ ರಚಿತವಾಗಿದ್ದು ಪ್ರಧಾನವಾಗಿ ಊಹೆಯ ಮೇಲೇ ಅವಲಂಬಿತವಾಗಿದೆ ಎಂದು ಹೇಳಬಹುದು.

ಕ್ರಿ. ಶ. ೧೨೮೫ರ ಆಲದೂರು ಶಾಸನವು (ಚಾ. ನ. ೧೦೮) ಪೆರುಮಾಳೆದೇವ ದಣ್ಣಾಯ್ಕನ ಮಗ ಲಕ್ಷ್ಮೀನಾರಾಯಣದೇವ ದಣ್ಣಾಯ್ಕನ ಹೆಸರನ್ನು ಹೇಳುತ್ತದೆ. ಕ್ರಿ. ಶ. ೧೨೮೨ರ ಕುಲಗಣ (ಚಾ. ನ. ೩೪೬) ಮತ್ತು ಕ್ರಿ. ಶ. ೧೨೮೮ರ ಕಾವೇರಿಪುರ (ತಿ. ನ. ೩೧೬) ಶಾಸನಗಳು ಹೇಳುವ ಶ್ರೀಮನ್ಮಹಾಪ್ರಧಾನ ಕೇತೆಯ(ಗಿ) ದಣ್ಣಾಯ್ಕನೂ ಪೆರುಮಾಳ ದಣ್ಣಾಯ್ಕನ ಮಗನೇ ಹೌದು. ಇವರಿಬ್ಬರೂ ತಂದೆಯ ಕಾಲದಲ್ಲೇ ರಾಜ್ಯ ನಿರ್ವಹಿಸುತ್ತಿದ್ದರೆಂಬುದು ಗಮನಾರ್ಹ. ಕ್ರಿ. ಶ. ೧೩೦೩ರ ಕೊತ್ತಲವಾಡಿ ಶಾಸನವು (ಚಾ. ನ. ೩೦೯) ಭೀಮೆಯದಣ್ಣಾಯ್ಕನ ಮಗ ಪೆರುಮಾಳೆ ದಂಡನಾಥನ ಸುಪುತ್ರರಾದ ಮಾಧವದಣ್ಣಾಯ್ಕ ಮತ್ತು ಕೇತೆಯದಣ್ಣಾಯ್ಕ ಎಂದು ಸ್ಪಷ್ಟವಾಗಿ ಹೇಳಿ ಇವರು ತೆರಕಣಾಂಬಿಯಲ್ಲಿ ವರದರಾಜನನ್ನು ಪ್ರತಿಷ್ಠಾಪನೆ ಮಾಡಿದ ವಿವರ ನೀಡುತ್ತದೆ. ಅಂದರೆ ಈ ವೇಳೆಗೆ ರಾಜಧಾನಿ ಎಡತಲೆಯಿಂದ ತೆರಕಣಾಂಬಿಗೆ ಬದಲಾಗಿರಬಹುದು. ೧೩-೧೪ನೇ ಶತಮಾನದ್ದೆಂದು ಗುರುತಿಸಲಾಗಿರುವ ಮೇಲುಕೋಟೆ ಶಾಸನ (ಪಾಂ. ಪು. ೧೬೧) ಕೂಡ ಇವರಿಬ್ಬರ ಹೆಸರನ್ನೂ ಹೇಳುವುದರಿಂದ ಅದೂ ಈ ಅವಧಿಯದೇ ಆಗಿರುವ ಸಾಧ್ಯತೆ ಇದೆ. ಕ್ರಿ. ಶ. ೧೩೨೭ರ ಬಪ್ಪನಹಳ್ಳಿ ಶಾಸನ (ಹೆ. ಕೋ. ೪೭) ಉಲ್ಲೇಖಿಸುವ, ನವಿಲೆನಾಡನ್ನು ಆಳುತ್ತಿದ್ದ, ಬಪ್ಪನಹಳ್ಳಿಯನ್ನು ಪೆರುಮಾಳೆಪುರ ಅಗ್ರಹಾರವನ್ನಾಗಿ ಸ್ಥಾಪಿಸಿದ ಪೆರುಮಾಳೆದೇವರ ಮಕ್ಕಳು ಹೆಗ್ಗಡೆ ದೇವನನ್ನು ಪೆರುಮಾಳೆದೇವ ದಣ್ಣಾಯ್ಕನ ಮತ್ತೊಬ್ಬ ಮಗ ಎಂದು ಊಹಿಸಿದರೆ ಒಟ್ಟು ಈತನ ನಾಲ್ವರು ಮಕ್ಕಳು ಲೆಕ್ಕಕ್ಕೆ ಸಿಕ್ಕಿದಂತಾಗುತ್ತದೆ.

ಇವರಲ್ಲಿ ಮಾಧವದಣ್ಣಾಯ್ಕನು ವಿಶೇಷವಾದ ಖ್ಯಾತಿಯನ್ನು ಗಳಿಸಿ ಶ್ರೇಷ್ಠವಾದ ಆಡಳಿತ ನೀಡಿರುವುದನ್ನೂ, ಈ ಪ್ರದೇಶದಲ್ಲಿ ಘನತೆವೆತ್ತ ದೇವಾಲಯಗಳನ್ನು ನಿರ್ಮಿಸಿ, ಅಗ್ರಹಾರಗಳನ್ನು ಸ್ಥಾಪಿಸಿ ಸುಖದ ರಾಜ್ಯವನ್ನು ಪಾಲಿಸಿರುವುದನ್ನು ಹಲವಾರು ಶಾಸನಗಳು ಕೈವಾರಿಸಿವೆ. ಕ್ರಿ. ಶ. ೧೩೧೦ರ ತ್ರಿಯಂಬಕಪುರ ಶಾಸನವು (ಗು. ಪೇ. ೧೫೨) ತೆರಕಣಾಂಬಿಯ ನೆಲೆವೀಡಿನಲ್ಲಿ ಹದಿನಾಲ್ಕುನಾಡನ್ನು ಪಾಲಿಸುತ್ತಿದ್ದ ಮಾಧವ ದಣ್ಣಾಯ್ಕನು ತಂದೆಯ ಹೆಸರಿನಲ್ಲಿ ನಿರ್ಮಿಸಿದ ಪೆರುಮಾಳಿಪುರ ಅಗ್ರಹಾರದ ಬಗೆಗೆ ಹೇಳಿದರೆ ಕ್ರಿ. ಶ. ೧೩೧೪ರ ಎಡತಲೆ ಶಾಸನವು (ನಂಗೂ ೩೪೭) ಇವನ ಅನುಮತಿಯಿಂದ ನಿರ್ಮಿಸಿಕೊಂಡ ಗದ್ದೆಯ ಬಗೆಗೆ ತಿಳಿಸುತ್ತದೆ. ಕ್ರಿ. ಶ. ೧೩೧೫ರಲ್ಲಿ ಗೋವರ್ಧನಗಿರಿಯಲ್ಲಿ (ಇಂದಿನ ಹಿಮವದ್ ಗೋಪಾಲಸ್ವಾಮಿ ಬೆಟ್ಟ) ಗೋಪಿನಾಥ ದೇವರನ್ನು ಪ್ರತಿಷ್ಠೆ ಮಾಡಿದುದನ್ನು ಕಣ್ಣಾಗಾಲ ಶಾಸನವು (ಗು. ಪೇ. ೨೨೩), ಕ್ರಿ. ಶ. ೧೩೧೬ರಲ್ಲಿ ವಿದ್ಯಾನಿಧಿ ಪ್ರಸನ್ನ ಕೇಶವಪುರ ಎಂಬ ಅಗ್ರಹಾರ ಸ್ಥಾಪಿಸಿದುದನ್ನು ಬಸವಾಪುರದ ಶಾಸನವೂ (ಚಾ. ನ. ೨೩೫) ಹೇಳುತ್ತವೆ. ಇದೇ ಅವಧಿಯಲ್ಲಿ ಈತನ ಮನೆಗೊಡವನಾದ ಮಾರಗೊಂಡನು ಹರದನಹಳ್ಳಿಯಲ್ಲಿ (ಈ ಹರದನಹಳ್ಳಿ ಅಥವಾ ಮರ್ಗ್ಗಿಯೇ ಮಾಧವ ದಣ್ಣಾಯ್ಕನ ಜನ್ಮಸ್ಥಳ ಎಂಬುದನ್ನು ಕ್ರಿ. ಶ. ೧೩೪೦ರ ಹರದನಹಳ್ಳಿ ಶಾಸನಗಳು (ಚಾ.ನ. ೨೭೫, ೨೭೬, ೨೭೭, ೨೭೮) ಸ್ಪಷ್ಟವಾಗಿ ತಿಳಿಸುತ್ತವೆ.) ಈಗ ದಿವ್ಯಲಿಂಗೇಶ್ವರ ಎಂದು ಪ್ರಖ್ಯಾತಿ ಪಡೆದಿರುವ ಅಣಿಲೇಶ್ವರ ದೇವಾಲಯವನ್ನು ನಿರ್ಮಿಸಿರುವುದನ್ನು ಹರದನಹಳ್ಳಿ ಶಾಸನ (ಚಾ.ನ. ೨೬೩) ವಿವರಿಸಿದರೆ ಕ್ರಿ. ಶ. ೧೩೧೮ರಲ್ಲಿ ಅಲ್ಲಪ್ಪ ದಣ್ಣಾಯ್ಕರ ಅರಸಿ ಚಾಮವ್ವೆ ದಣ್ಣಾಯ್ಕತಿಯು ತೆರಕಣಾಂಬಿಯಲ್ಲಿ ನಿರ್ಮಿಸಿದ ಗೋಪಿನಾಥದೇವರಿಗೆ ಬಲ್ಲಾಳದೇವರಸನು ತನಗೆ ಸಕಾರುಣ್ಯದಿಂದ ಕರುಣಿಸಿದ್ದ ಕೆಲ್ಲಿಗೇರಿಯನ್ನು ಸಮರ್ಪಿಸಿದುದನ್ನು ಕಿಲಗೇರಿಯ ಶಾಸನ (ಚಾ. ನ. ೩೦೬) ಉಲ್ಲೇಖಿಸುತ್ತದೆ. ಇದೇ ಅವಧಿಯಲ್ಲಿ ಬೊಮ್ಮಲಾಪುರದಲ್ಲಿ ಮಾಧವ ಸಮುದ್ರವೆಂಬ ಕೆರೆ ಇವನ ಹೆಸರಿನಲ್ಲಿ ನಿರ್ಮಾಣವಾದುದನ್ನು ಮತ್ತು ಇವನ ಅಪ್ಪಣೆಯನ್ನು ಪಡೆದು ಕೆಂಪಣ್ಣನೆಂಬುವನು ರಾಮದೇವರಿಗೆ, ಮೂಲಸ್ಥಾನ ದೇವರಿಗೆ ಮತ್ತು ಗ್ರಾಮದೇವತೆಗೆ ಗದ್ದೆಯನ್ನು ಬಿಟ್ಟುದನ್ನು ಬೊಮ್ಮಲಾಪುರ ಶಾಸನ (ಗು. ಪೇ. ೧೭೪) ತಿಳಿಸುತ್ತದೆ. ಕ್ರಿ. ಶ. ೧೩೧೯ರಲ್ಲಿ ಈತ ಮೇಲುಕೋಟೆ ನಾರಾಯಣನಿಗೆ ನೀಡಿರುವ ಧರ್ಮವನ್ನು ಮೇಲುಕೋಟೆ ಶಾಸನ (ಪಾ. ಪು. ೧೮೫) ಹೇಳಿದರೆ ಕ್ರಿ. ಶ. ೧೩೨೧ರಲ್ಲಿ ಸರ್ವಬಾಧಾ ಪರಿಹಾರಕ್ಕಾಗಿ ಕೂರನೂರನ್ನು ದಾನ ಮಾಡಿರುವ ವಿಷಯವನ್ನು ಸತ್ಯಾಗಾಲದ ಶಾಸನ (ಕೊ. ಗಾ. ೩೦) ತಿಳಿಸುತ್ತದೆ. ಆದರೆ ಈತ ಕ್ರಿ. ಶ. ೧೩೨೦ರ ವೇಳೆಗೆ ಅಧಿಕಾರದಿಂದ ವಿರಮಿಸಿದ್ದು ಈತನ ಮಗ ಭರತಜೀಯ ದಣ್ಣಾಯ್ಕನು ಪದಿನಾಲ್ಕು ನಾಡಿನ ಆಡಳಿತ ಸೂತ್ರ ಹಿಡಿದಿದ್ದ ವಿಷಯವನ್ನು ರಾಘವಾಪುರ ಶಾಸನ (ಗು. ಪೇ. ೪೦) ತಿಳಿಸುತ್ತದೆ. ಮಾಧವ ದಣ್ಣಾಯ್ಕನ ಮತ್ತೊಬ್ಬ ಮಗನ ಹೆಸರೂ ಕೇತೆಯ ದಣ್ಣಾಯ್ಕ ಎಂದೇ ಇದ್ದು ಈತ ರಾಘವದೇವರ ಹೆಸರಿನಲ್ಲಿ ಅಗ್ರಹಾರ ನಿರ್ಮಿಸಿದ ವಿವರವನ್ನೂ ಇದೇ ಶಾಸನ ಒದಗಿಸುತ್ತದೆ.

ಕ್ರಿ. ಶ. ೧೩೨೭ರ ವೇಳೆಗೆ ಈ ಕೇತೆಯ ದಣ್ಣಾಯ್ಕನೇ ಪೃಥ್ವೀರಾಜ್ಯಂಗೆಯ್ಯುತ್ತಿದ್ದ ವಿವರ ಹೆಗ್ಗವಾಡಿ ಶಾಸನದಲ್ಲಿ (ಗು. ಪೇ. ೧೭೯) ಉಕ್ತವಾಗಿದ್ದರೆ, ಕ್ರಿ. ಶ. ೧೩೩೨ರ ಹುಲ್ಲಹಳ್ಳಿ (ನಂಗೂ ೧೩೮) ಮತ್ತು ಕ್ರಿ. ಶ. ೧೩೩೪ರ ಕಂದಾಗಾಲ ಶಾಸನಗಳಿಂದ (ಗು. ಪೇ. ೧೫೫) ಈತ ಪದಿನಾಲ್ಕು ನಾಡನ್ನು ಪರಿಪಾಲಿಸುತ್ತ ತೆರಕಣಾಂಬಿಯಿಂದ ರಾಜ್ಯವಾಳುತ್ತಿದ್ದ ಎಂಬುದು ಸ್ಪಷ್ಟವಾಗುತ್ತದೆ. ಕ್ರಿ. ಶ. ೧೩೩೮ರ ಬಲ್ಲಹಳ್ಳಿ ಶಾಸನದಲ್ಲಿ (ಗು. ಪೇ. ೭೪) ಕೋಲುಗುಣದ ನಂಬಿಯರು (ಅರ್ಚಕರು(?)) ತಂನ ಮಗನ ಹೆಸರಿಟ್ಟುದಕ್ಕೆ ಈ ಕೇತೆಯದಣ್ಣಾಯ್ಕನು ಧಾರಾಪೂರ್ವಕವಾಗಿ ನೀಡಿದ ಮಣ್ಣಿನ ವಿವರ ಉಕ್ತವಾಗಿದೆ. ಆದರೆ ಈ ಮಗನ ಹೆಸರು ತಿಳಿಯಬರುವುದಿಲ್ಲ. ಕ್ರಿ. ಶ. ೧೩೩೯ರ ಜ್ಯೋತಿಗೌಡನಪುರ ಶಾಸನವು (ಚಾ. ನಂ. ೩೦) ಈ ಕೇತೆಯ ದಣ್ಣಾಯ್ಕನ ಮನೆಯ ಪರಮವಿಶ್ವಾಸಿ ಮಂತ್ರಿ ಬ್ರಹ್ಮಣ್ಣ ನಿರ್ಮಿಸಿದ ಆಲಯದ ಬಗೆಗೆ ಹೇಳುತ್ತದೆ. ಕ್ರಿ. ಶ. ೧೩೪೪ರ ದೊಡ್ಡಬೆಲಹಾಳು ಶಾಸನದಲ್ಲಿ (ಪಿ. ಪ. ೧೨೨) ಉಕ್ತನಾಗಿರುವ ಕೇತೆಯ ದಣ್ಣಾಯ್ಕನು ಮಹಾಪ್ರಧಾನಿ ನಾಗಿಯದಣ್ಣಾಯ್ಕನ ಮಗ ಎಂದಿರುವುದರಿಂದ ಈತ ಅವನಿಗಿಂತ ಭಿನ್ನ ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ. ಶ. ೧೩೩೭ರ ನರಸಮಂಗಲದ ಬಿಲ್ಲಚೊಕ್ಕಯ ದಂಣ್ಣಾಯ್ಕ (ಚಾ. ನ. ೨೯೫) ಇದೇ ಅವಧಿಯ ಕಣೆಯಾಲದ ಬೀರೆಯ ದಣ್ಣಾಯ್ಕರ ಕುಮಾರ ಗೋಪಿನಾಥ (ನಂಗೂ ೧೪೬), ಕ್ರಿ. ಶ. ೧೩೩೮ರ ಹಳಗನಹಳ್ಳಿಯ ಶ್ರೀಮನ್ಮಹಾಪ್ರಧಾನ ಸಿಂಗೆಯದಣ್ಣಾಯ್ಕ (ಪಿ. ಪ. ೧೯) ೧೪ನೇ ಶ.ದ ಮೊತ್ತ ಶಾಸನದಲ್ಲಿ ಉಕ್ತನಾಗಿರುವ ಮೂಡಲಕೋಟೆ ಗೋವಂಣ ಒಡೆಯ (ನಂಗೂ ೧೫೩) ಇವರೆಲ್ಲರಲ್ಲೂ ಪದಿನಾಲ್ಕುನಾಡ ಬಿರುದುಗಳೇ ಕಂಡುಬರುವುದರಿಂದ ಇವರು ದಾಯಾದಿಗಳಿರಬಹುದು ಅಥವಾ ಪದಿನಾಲ್ಕು ನಾಡಿಗೆ ಸೇರಿದ ಎಲ್ಲ ನಾಡುಗಳ ಮಹಾಪ್ರಭುಗಳೂ ಈ ಬಿರುದುಗಳನ್ನು ಸಾಮಾನ್ಯವಾಗಿ ಧರಿಸುವ ವಿದ್ಯಮಾನ ಇದ್ದಿರಬಹುದು.

ಈ ಅವಲೋಕನದಿಂದ ದೊರೆಯುವ ಪದಿನಾಲ್ಕು ನಾಡರಸರ ಸ್ಥೂಲ ಚಿತ್ರಣವನ್ನು ಹೀಗೆ ಪಡೆಯಬಹುದು




ಮುಂದೆ ಹೊಯ್ಸಳ ಸಾಮ್ರಾಜ್ಯದ ಅವನತಿಯೊಂದಿಗೇ ಪದಿನಾಲ್ಕುನಾಡಿನ ಆಡಳಿತ ವೈಭವವೂ ಮಸುಕಾಗಿ ಆಗ ಪ್ರವರ್ಧಮಾನಕ್ಕೆ ಬರುತ್ತಿದ್ದ ಉಮ್ಮತ್ತೂರು ಒಡೆಯರ ಅಧೀನಕ್ಕೆ ನಾಡು ಒಳಗಾಗಿ ತೆರಕಣಾಂಬಿ ಅವರ ರಾಜಧಾನಿಯಾಗಿ ಮುಂದು ವರಿದುದನ್ನು ಮುಂದಿನ ಅವಧಿಯ ಶಾಸನಗಳು ಸ್ಪಷ್ಟಪಡಿಸುತ್ತವೆ. ಆದರೂ ಹದಿನಾಲ್ಕು ನಾಡು' 'ಸಮಸ್ತನಾಡು' ಎಂಬ ಅರ್ಥದಲ್ಲಿ ಬಳಕೆಯಲ್ಲಿ ಉಳಿದುಕೊಂಡುದನ್ನು ಕ್ರಿ. ಶ. ೧೩ನೇ ಶತಮಾನದ ಹಾರೋಹಳ್ಳಿ ಶಾಸನದಲ್ಲಿ (ಮೈ ೧೯೯) ಉಲ್ಲೇಖಿತವಾಗಿರುವ ಹದಿನಾಲ್ಕುನಾಡು ಸಮಸ್ತ ಪ್ರಭುಗೌಡಗಳೊಪ್ಪ ಎಂಬಲ್ಲಿ ಗಮನಿಸಬಹುದು. ಕ್ರಿ. ಶ. ೧೬ನೇ ಶತಮಾನದ ಕಲ್ಲಹಳ್ಳಿ ಶಾಸನ (ನಂಗೂ ೧೬೨) ಹೇಳುವ 'ಹದಿನಾಲ್ಕುನಾಡ ಹಿರಿಯರು ನಂಜುಂಡೇಶ್ವರ ದೇವರಿಗೆ ನೀಡಿರುವ ದತ್ತಿ' ಎಂಬಲ್ಲೂ ಇದೇ ಅರ್ಥವನ್ನು ಕಾಣಬಹುದು. ಒಟ್ಟಿನಲ್ಲಿ ಇಂದಿಗೂ ಈ ಪದ ಈ ಪ್ರದೇಶದ ಆಡುಮಾತಿನಲ್ಲಿ 'ಹದ್ನಾಕ್ನಾಡೂ ಒಪ್ಪಾ ಮಾತು ಕಲಾ ಇದು.' 'ಹದ್ನಾಕ್ನಾಡಾಗೆಲ್ಲೂ ಸಿಕ್ಕಾಕಿಲ್ಲಾ ನೋಡು' ಎಂಬಲ್ಲಿ ಪಡೆನುಡಿಯಾಗಿ ಉಳಿದುಹೋಗಿದೆ.


**ಆಧಾರ ಸೂಚಿ :**

೧. ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕೃತ ಸಂಪುಟಗಳು – ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು
ಸಂ. III – ಗುಂಡ್ಲುಪೇಟೆ, ನಂಜನಗೂಡು, ಹೆಗ್ಗಡ ದೇವನ ಕೋಟೆ
ಸಂ. IV – ಚಾಮರಾಜನಗರ, ಯಳಂದೂರು, ಕೊಳ್ಳೇಗಾಲ, ಹುಣಸೂರು, ಪಿರಿಯಾಪಟ್ಟಣ
ಸಂ. V – ಮೈಸೂರು, ತಿ. ನರಸೀಪುರ, ಕೃಷ್ಣರಾಜನಗರ
ಸಂ. VI – ಕೃಷ್ಣರಾಜಪೇಟೆ, ಪಾಂಡವಪುರ, ಶ್ರೀರಂಗಪಟ್ಟಣ

ಸಂ. VII – ನಾಗಮಂಗಲ, ಮಂಡ್ಯ, ಮದ್ದೂರು, ಮಳವಳ್ಳಿ

ಸಂ. VIII – ಹೊಳೆನರಸೀಪುರ, ಅರಕಲಗೂಡು, ಹಾಸನ, ಆಲೂರು

೨. *ಕರ್ನಾಟಕ ಇತಿಹಾಸ ದರ್ಶನ* – ಎಂ. ವಿ. ಕೃಷ್ಣರಾವ್, ಎಂ. ಕೇಶವಭಟ್

೩. *ಕರ್ನಾಟಕ ಪರಂಪರೆ* – (ಸಂ) ಆರ್. ಆರ್. ದಿವಾಕರ

೪. *ಇತಿಹಾಸ ದರ್ಶನ*, ಸಂ. ೧೩ – (ಸಂ) ಎಂ. ಜಿ. ನಾಗರಾಜ್, ಪಿ. ವಿ. ಕೃಷ್ಣಮೂರ್ತಿ

೫. *'ನಂಜನಗೂಡು': ಒಂದು ಸಾಂಸ್ಕೃತಿಕ ಅಧ್ಯಯನ* * – ಡಾ॥ ಎಚ್. ಪಿ. ಮಂಜುಳ (ಅಪ್ರಕಟಿತ ಮಹಾಪ್ರಬಂಧ)

೬. *ಬೆಟ್ಟದಕೋಟೆ ಕೈಫಿಯತ್ತು* – ಕೆ.ಎ. ೪೦೦ – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು

೭. ***Karnataka State Gazetter,*** Mysore District - (C.Ed) Suryanath. U. Kamat

೮. ***Mysore and Coorg from Inscriptions*** - B. L. Rice

ಬಿ. ಎಸ್. ರಾಮಭಟ್ಟ*

# ಬೆಳಗುತ್ತಿ ಅರಸರು

ಕರ್ನಾಟಕದಲ್ಲಿ ಆಳಿದ ಅಜ್ಞಾತ ಅರಸೊತ್ತಿಗೆಗಳಲ್ಲಿ ಬೆಳಗುತ್ತಿಯೂ ಒಂದಾಗಿದೆ. ಇದು ಹೊನ್ನಾಳಿ ತಾಲ್ಲೂಕಿನ ಒಂದು ಗ್ರಾಮವಾಗಿದ್ದು ಶತಮಾನಗಳ ಹಿಂದೆ ಒಂದು ಸುಪ್ರಸಿದ್ಧ ರಾಜಧಾನಿಯಾಗಿತ್ತು. ಇಲ್ಲಿ ಎರಡು ಅರಸುಮನೆತನಗಳು ಆಡಳಿತ ನಡೆಸಿವೆ. ಇವರ ಕಾಲದಲ್ಲಿ ಕಟ್ಟಿಸಿದ ಕೋಟೆ, ಅರಮನೆ, ಕಟ್ಟಡಗಳು, ದೇವಾಲಯಗಳು ಮತ್ತು ಅನೇಕ ಅವಶೇಷಗಳು ಅನಾಥವಾಗಿ ಬಿದ್ದುಕೊಂಡಿವೆ.

**ಪ್ರಾಚೀನ ಇತಿಹಾಸ:** ಬೆಳಗುತ್ತಿ, ತೀರ್ಥರಾಮೇಶ್ವರ ಮತ್ತು ಇದರ ಬಳಿಯ ಕಲಬುಗಿರಿಯು ಪ್ರಾಚೀನ ತೀರ್ಥಕ್ಷೇತ್ರಗಳೆಂದು ಪರಿಗಣಿಸಲಾಗಿದೆ. ಬೆಳಗುತ್ತಿಗೆ ಶಾಸನಗಳಲ್ಲಿ ಅವಂತಿ,*೧ ಬೆಳಗವರ್ತಿ*೨ ಬೆಳಗವತ್ತಿ*೩ ಮತ್ತು ಬೆಳಗುತ್ತಿ*೪ ಎಂದು ಉಲ್ಲೇಖಿಸಿದೆ. ಬೆಳಗುತ್ತಿಯಲ್ಲಿ ಮೊದಲು ಆಳುತ್ತಿದ್ದ ಸಿಂಧ್ಯರು ಉತ್ತರ ಭಾರತದ ಒಂದು ರಾಜವಂಶದವರೆಂದು ಹೇಳಲಾಗಿದೆ. ಇವರು ಮೊದಲು ಮಹಾರಾಷ್ಟ್ರದ ಇರಂಬರಗೆಯಲ್ಲಿ ಆಳುತ್ತಿದ್ದ ಕ್ರಿ.ಶ. ಸು. ೪೦೦ ರಲ್ಲಿ ದೊರೆಯಾಗಿದ್ದ ನಿಡುದೋಳ ಸಿಂಧ್ಯವಂಶದ ಮೂಲ ಪುರುಷನೆಂದು ಶಾಸನಗಳಲ್ಲಿ ಹೇಳಿದ *೫ ಸಿಂಧ್ಯವಂಶವು ಹಲವು ಶಾಖೆಗಳಾಗಿ ವಂಶೀಕರು ಯಲಬುರ್ಗ, ಕುರುಗೋಡು ಮತ್ತು ಬೆಳಗುತ್ತಿಯಲ್ಲಿ ಆಡಳಿತ ನಡೆಸಿದರು. ಕ್ರಿ. ಶ. ೧೩೧೨ರಲ್ಲಿ ಬೆಳಗುತ್ತಿಯಲ್ಲಿ ಆಳುತ್ತಿದ್ದ ಕಾಮಯ್ಯನೇ ಸಿಂಧ್ಯವಂಶದ ಕೊನೆಯ ದೊರೆ. ಇವನು ದೇವಗಿರಿಯಾದವರ ಸಾಮಂತನಾಗಿದ್ದನು. ಸಿಂಧ್ಯರ ಕಾಲದ ಬೆಳಗುತ್ತಿಯ ಇತಿಹಾಸವನ್ನು ತಿಳಿಯಲು ಸು. ೩೦ ಶಿಲಾಶಾಸನಗಳು ಲಭ್ಯವಿದೆ.

**ವಿಜಯನಗರದ ಕಾಲ :** ಸಿಂಧ್ಯ ಅರಸರ ಆಡಳಿತದ ನಂತರ ಬೆಳಗುತ್ತಿಯಲ್ಲಿ ವಿಜಯನಗರ ಕಾಲದ ಆಡಳಿತವು ಆರಂಭವಾಯಿತು. ಈ ಕೆಳಗಿನ ಆಕರಗಳು ಇದರ ಇತಿಹಾಸವನ್ನು ತಿಳಿಸುತ್ತವೆ.

೧. ಬಿ. ಪಿ. ರಾಮರಾಜ ಅರಸ್‌ರವರು ಪ್ರಕಟಿಸಿದ ಬೆಳಗುತ್ತಿ ಅರಸರ ವಂಶ ವೃತ್ತಾಂತ (ಕುದುರೆ ರಾಯರ ವೃತ್ತಾಂತ).
೨. ಕೆಳದಿ ನೃಪ ವಿಜಯ.
೩. ಮಲೆನಾಡು ಚೀಫ್ಸ್ ಮೈಸೂರು ಆರ್ಕಿಲಾಜಿಕಲ್ ರಿಪೋರ್ಟ್ಸ್, ವಾಲ್ಯುಮ್ ೧೨.
೪. ಚಿತ್ರದುರ್ಗ ಬಖೈರ್ - ಇದನ್ನು ಎಸ್. ಶ್ರೀಕಂಠಶಾಸ್ತ್ರಿಯವರು ೧೯೨೭ರಲ್ಲಿ ಮಿಥಿಕ್ ಸೊಸೈಟಿಯ ಜರ್ನಲ್‌ನಲ್ಲಿ ಪ್ರಕಟಿಸಿದ್ದಾರೆ.
೫. ಮೈಸೂರು ಒಡೆಯರ ರಹದಾರಿ ಹುಕುಮುಗಳು.
೬. ಬೋಳೆನರಸಪ್ಪನಾಯಕನ ಕ್ರಿ. ಶ. ೧೬೯೦ರ ಒಂದು ಶಿಲಾಶಾಸನ.
೭. ಪರಮಾಣು ಮತ್ತು ಶ್ರೀಮುಖ.

ಪ್ರಸ್ತುತ ಈ ಪ್ರಬಂಧದಲ್ಲಿ ಇತರ ಆಕರಗಳೊಂದಿಗೆ ಪ್ರಮುಖವಾಗಿ ಎಸ್. ಶ್ರೀಕಂಠಶಾಸ್ತ್ರಿಯವರ ನೋಟ್ಸ್ ಆನ್ ದಿ ಬೆಳಗುತ್ತಿ ರಿಕಾರ್ಡ್ಸ್ ಎಂಬ ಲೇಖನವನ್ನು ಆಕರವಾಗಿಟ್ಟುಕೊಳ್ಳಲಾಗಿದೆ. ಇದನ್ನು ೧೯೪೫ರ ಏಪ್ರಿಲ್‌ನಲ್ಲಿ ಬೆಂಗಳೂರಿನ ಮಿಥಿಕ್ ಸೊಸೈಟಿಯು ಪ್ರಕಟಿಸಿದೆ.

ವಿಜಯನಗರದಲ್ಲಿ ಬುಕ್ಕರಾಯನು ಆಳುತ್ತಿದ್ದಾಗ ಮಲೆನಾಡಿನಲ್ಲಿ ಬೇಡರ ಕನ್ನೆನಾಯಕ ಎಂಬುವನು ಬೆದರಕೋಟೆ ಮತ್ತು ಚಂದ್ರಗುತ್ತಿ ಎಂಬಲ್ಲಿ ಕೋಟೆಯನ್ನು ಕಟ್ಟಿಸಿ ೮೦ ಸಾವಿರ ಯೋಧರ ಒಂದು ಪಡೆಯನ್ನೂ ಕಟ್ಟಿ ಸುತ್ತ ಮುತ್ತಲಿನ ಸೀಮೆ ಮತ್ತು ಬೆಳಗುತ್ತಿಯನ್ನೂ ಸಹ ಆಕ್ರಮಿಸಿಕೊಂಡಿದ್ದ. ಆಗ ಬೆಳಗುತ್ತಿಯಲ್ಲಿ ವೆಂಕಟಾದ್ರಿ ಎಂಬುವನು ಆಳುತ್ತಿದ್ದನೆಂದು ತಿಳಿಯುತ್ತದೆ.

ಬುಕ್ಕರಾಯನ ಅನುಮತಿ ಪಡೆದ ಚೆಲುವ ರಂಗಪ್ಪನು ಆನೆಗೊಂದಿಯ ನರಪತಿಯ ಬಿರುದಾವಳಿಗಳೊಂದಿಗೆ ಸೈನ್ಯ ಮತ್ತು ಸಂಪತ್ತಿನೊಂದಿಗೆ ಕ್ರಿ. ಶ. ಸು. ೧೩೫೪ರಲ್ಲಿ ಹೊನ್ನಾಳಿ ತಾ. ನ. ತುಂಗಭದ್ರ ದಡದ ದಿಡಗೂರಿಗೆ ಬಂದನು. ಚೆಲುವರಂಗಪ್ಪನು ಬುಕ್ಕರಾಯನ ಮೊಮ್ಮಗ ಹಾಗೂ ದೇವರಾಯನ ಮಗನೆಂದು

* (ಎ) ಉಪನ್ಯಾಸಕ, 'ಪದ್ಮಶ್ರೀ', ನಂ. ೧೩೯ ಇ. ಬ್ಲಾಕ್, ೩ ಕ್ರಾಸ್ ಗೋಪಾಲಗೌಡ ಬಡಾವಣೆ: ಗೋಪಾಲ, ಶಿವಮೊಗ್ಗ - ೫೭೭ ೨೦೧

ಹೇಳಲಾಗಿದೆ. ಬುಕ್ಕರಾಯನ ಸೇನಾಪತಿ ವೀರಭದ್ರನಾಯಕನಿಂದ ಕನ್ನೆನಾಯಕನನ್ನು ಸೋಲಿಸಲು ಆಗಲಿಲ್ಲ. ಕ್ರಿ. ಶ. ೧೩೬೧ರಲ್ಲಿ ಚೆಲುವರಂಗಪ್ಪನು ಕನ್ನೆನಾಯಕನನ್ನು ಸೋಲಿಸಿ ಸೆರೆಹಿಡಿದನು. ಬೆಳಗುತ್ತಿಯನ್ನು ವಶಪಡಿಸಿಕೊಂಡನು. ಇವನಿಂದ ಬೆವುಲೆ ಎಂಬ ಬಿರುದನ್ನು ಮತ್ತು ಹಳದಿ ಧ್ವಜವನ್ನು ಪಡೆದನೆಂದೂ ಹೇಳಲಾಗಿದೆ. ಬುಕ್ಕರಾಯನು ಈ ಪ್ರಾಂತ್ಯದ ಆಡಳಿತವನ್ನು ಚೆಲುವರಂಗಪ್ಪನಿಗೆ ನೀಡಿದನು. ಆದರೆ ಅಭ್ರಮಾದವನ ಮಗನಾದ ವೆಂಕಟಾದ್ರಿಯು ಕನ್ನೆನಾಯಕನನ್ನು ಸೋಲಿಸಿ 'ಬೆವುಲೆ' ಬಿರುದು ಪಡೆದನೆಂದು ಕುದುರೆ ರಾಯರ ವೃತ್ತಾಂತದಲ್ಲಿದೆ.

ಚೆಲುವರಂಗಪ್ಪನು ತನ್ನ ರಾಜಧಾನಿ ದಿಡಗೂರಿನಿಂದ ಬೆಳಗುತ್ತಿರಾಜ್ಯದ ಆಡಳಿತ ನಡೆಸಿದನು. ದಿಡಗೂರು ಸು. ೧೫೦ ವರ್ಷಗಳ ಕಾಲ ರಾಜಧಾನಿಯಾಗಿದ್ದು ಮೊದಲು ಹೊನ್ನಾಳಿ ನಂತರ ಬೆಳಗುತ್ತಿಗೆ ರಾಜಧಾನಿಯನ್ನು ಸ್ಥಳಾಂತರಿಸಲಾಯಿತು. ಇವನು ದಿಡಗೂರಿನಿಂದ ಆಳುತ್ತಿದ್ದಾಗ ಕ್ರಿ. ಶ. ೧೩೬೧ರಿಂದ ಹೊನ್ನಾಳಿ ಕೋಟೆಯನ್ನು ಕಟ್ಟಲು ಆರಂಭಿಸಿ ಇದನ್ನು ೧೩೮೧ರಲ್ಲಿ ಮುಗಿಸಿದನು. ಅಲ್ಲದೆ ಚಂದ್ರಗುತ್ತಿ, ಕೌಲೆದುರ್ಗ ಮತ್ತು ನಡುಗಣಿ (ಉಡುಗಣಿ) ಯಲ್ಲೂ ಕೋಟೆಕಟ್ಟಿಸಿದನು. ಇವನೂ ಸಹ ಅಗ್ರಹಾರಗಳನ್ನು ಸ್ಥಾಪಿಸಿದನು. ಜಮೀನಿಗೆ ಕಂದಾಯವನ್ನು ನಿಗದಿಗೊಳಿಸಿ ರಾಯರೇಖೆ ಎಂಬ ಶಿಸ್ತನ್ನು ಜಾರಿಗೆ ತಂದನು. ಇವನು ೧೩೬೧ ರಿಂದ ೧೩೮೧ರ ವರೆಗೆ ಆಡಳಿತ ನಡೆಸಿದ್ದಾನೆ.

ಚೆಲುವರಂಗಪ್ಪನ ನಂತರ ೧೩೮೨ ರಿಂದ ೧೪೯೫ರ ವರೆಗೆ ಮಾರಭೂಪ, ಸುರಭೂಪ, ದೇವರಾಯ ಮತ್ತು ಅಭ್ರಮಾದವರು ಬೆಳಗುತ್ತಿಯಿಂದ ಆಳುತ್ತಿದ್ದರು. ೧೪೬೦ರಿಂದ ೧೪೮೭ರ ವರೆಗೆ ಆಳುತ್ತಿದ್ದ ಅಭ್ರಮಾದವನ ಮಗನಾದ ಬೆವುಲೆ ವೆಂಕಟಾದ್ರಿಯು ಇಕ್ಕೇರಿಯಲ್ಲಿ ಅಘೋರೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಹೇಳಲಾಗಿದೆ. ಇದರ ಬಗ್ಗೆ ಒಂದು ತೆಲುಗು ಶಾಸನವಿದೆ. ಈ ದೇವಾಲಯವನ್ನು ನೋಡಿಕೊಳ್ಳಲು ಧರ್ಮದರ್ಶಿಗಳನ್ನು ಮತ್ತು ಸೇವಕರನ್ನು ನೇಮಿಸಿದನು. ಕೆಳದಿ ನೃಪವಿಜಯದಲ್ಲಿ ಈ ದೇವಾಲಯವನ್ನು ದೊಡ್ಡ ಸಂಕಣ್ಣ ನಾಯಕನು ಕಟ್ಟಿಸಿದನೆಂದು ಹೇಳಿದೆ. ** ಇದರಿಂದ ದೊಡ್ಡ ಸಂಕಣ್ಣ ನಾಯಕನಿಗಿಂತ ಮೊದಲು ಈ ಸ್ಥಳದಲ್ಲಿ ವೆಂಕಟಾದ್ರಿಯು ಕಟ್ಟಿಸಿದ್ದ ದೇವಾಲಯವಿದ್ದ ಸಂಭವವಿದೆ. ನಂತರ ದೊಡ್ಡ ಸಂಕಣ್ಣನಾಯಕನು ಈ ದೇವಾಲಯವನ್ನು ಭವ್ಯವಾಗಿ ನಿರ್ಮಿಸಿ ೩೨ ಕೈಗಳ ಅಘೋರೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿರಬಹುದು. ** ವೆಂಕಟಾದ್ರಿಯನಂತರ ರಾಮಕೋಟೆರಾಯನು ೧೪೯೦ರಿಂದ ೧೫೧೫ರ ವರೆಗೆ ಆಳಿದ್ದಾನೆ. ಆಗ ಬೆಳಗುತ್ತಿ ಮತ್ತು ಹೊನ್ನಾಳಿಯಲ್ಲಿ ಎರಡು ಅರಸು ಮನೆತನಗಳ ಆಡಳಿತ ನಡೆಯುತ್ತಿತ್ತು. ಇದನ್ನು ಒಪ್ಪದೆ ಆನೆಗೊಂದಿಯ ಪ್ರೌಢದೇವರಾಯನು ಹೊನ್ನಾಳಿಯನ್ನೂ ವಶಪಡಿಸಿಕೊಂಡು ರಾಮಕೋಟೆರಾಯನೇ ಬೆಳಗುತ್ತಿಯ ಅಧಿಕೃತ ಅರಸನೆಂದು ಮನ್ನಣೆ ನೀಡಿದನು. ವಾಸ್ತವಿಕವಾಗಿ ದಾಸಪ್ಪನು ಈ ಘಟನೆಗೆ ಕಾರಣವಾದ ವ್ಯಕ್ತಿಯೆಂದು ಹೇಳಲಾಗಿದೆ. ಈ ಪ್ರೌಢದೇವರಾಯನು ೧೪೯೨ರಲ್ಲಿ ಪಟ್ಟಕ್ಕೆ ಬಂದ ಸಾಳುವನರಸಿಂಹ ಅಥವಾ ಇವನ ಮಗ ಇಮ್ಮಡಿ ನರಸಿಂಹನಾಗಿರಬಹುದು ಎಂಬ ಅಭಿಪ್ರಾಯವಿದೆ.

ರಾಮಕೋಟೆಯ ನಂತರ ಇವನ ಮಗನಾದ ಯಲ್ಲಣ್ಣನು ೧೫೧೬ರಿಂದ ೧೫೫೧ರ ವರೆಗೆ ಆಳಿದನೆಂದು ಕುದುರೆರಾಯರ ವೃತ್ತಾಂತದಲ್ಲಿದೆ. ಕೈಫಿಯತ್ತಿನಲ್ಲಿ ಯಲ್ಲಣ್ಣನ ಹೆಸರನ್ನು ಕೈಬಿಟ್ಟಿದೆ. ಆದರೂ ಕುದುರೆ ರಾಯರ ವೃತ್ತಾಂತದಲ್ಲಿ ಹೇಳಿರುವಂತೆ ದಾಸಪ್ಪನು ೧೫೧೫ ರಿಂದ ೧೫೭೧ರ ವರೆಗೆ ಆಳಿದನೆಂದು ಸಾಮಾನ್ಯವಾಗಿ ಒಪ್ಪಲಾಗಿದೆ.

ವಿಜಯನಗರ ರಾಜವಂಶದ ತಿರುಮಲರಾಯನನ್ನು ಬಿಜಾಪುರದ ಸುಲ್ತಾನನು ಸೋಲಿಸಿದನು. ಇದರಿಂದ ಆಡಳಿತಕ್ಕೆ ಉತ್ತರಾಧಿಕಾರಿಗಳು ಇಲ್ಲವಾಯಿತು. ಆಗ ಮಂತ್ರಿಗಳು ಬೆಳಗುತ್ತಿಗೆ ಬಂದು ದಾಸಪ್ಪನ ಮಗನಾದ ವೆಂಕಟರಾಯನನ್ನು ಆಡಳಿತಕ್ಕೆ ಆಹ್ವಾನಿಸಿದರು. ದಾಸಪ್ಪನ ಒಪ್ಪಿಗೆಯಂತೆ ವೀರ ವೆಂಕಟರಾಯನಿಗೆ ಆನೆಗೊಂದಿಯಲ್ಲಿ ಪಟ್ಟಾಭಿಷೇಕವಾಯಿತು. ಹೀಗೆ ಬೆಳಗುತ್ತಿ ಅರಸುವಂಶದವರಿಂದ ವಿಜಯನಗರದ ರಾಜವಂಶವು ಮತ್ತೆ ಬೆಳಗಿತು ಎಂದು ಹೇಳಲಾಗಿದೆ. ದಾಸಪ್ಪನು ಒಳ್ಳೆಯ ಆಡಳಿತಗಾರ ಇವನು ಹೊನ್ನಾಳಿಯನ್ನು ವಶಪಡಿಸಿಕೊಂಡ ನಂತರ ಈ ಕೆಳಗಿನಂತೆ ಜಹಗೀರಿಯನ್ನು ನೀಡಿದನು.

೧. *ಹಾಲಸಿದ್ದಪ್ಪನಿಗೆ - ಆಯನೂರು, ಗಂಗೂರು, ಅಣ್ಣಗೇರಿ (ಆನವೇರಿ?)*

೨. *ಚಿನ್ನಣ್ಣ ಬೊಮ್ಮಣ್ಣ - ಕುಂಸಿ*

೩. *ಕೆಂಗೆ ಹನುಮಪ್ಪನಾಯಕ - ಸಂತೆಬೆನ್ನೂರು, ಹೊಸೂರು, ಚಿನ್ನಿಕಟ್ಟೆ*

- ಮೇಲಿನಂತೆ ಜಹಗೀರಿ ನೀಡಿರುವುದನ್ನು ಕುದುರೆರಾಯರ ವೃತ್ತಾಂತದಲ್ಲಿ ಹೇಳಿಲ್ಲ.

**ಅವನತಿಯ ಹಾದಿಯಲ್ಲಿ** : ಸಂತೆ ಬೆನ್ನೂರಿನ ಕೆಂಗೆ ಹನುಮಪ್ಪ

---

** (ಸಾಗರದ ಕೈಫಿಯತ್ತಿನಲ್ಲಿಯು ಹಿರೇಸಂಕಣ್ಣನಾಯಕರು 'ವೀರಭದ್ರನ ಪಟಾ ಬರಶಿಕೊಂಡು ಯಿಕ್ಕೇರಿಗೆ ಒಂದು ಅಲ್ಲಿ ಅಘೋರ ವೀರಭದ್ರ ದೇವರ ಮೂರ್ತಿಯನ್ನು ಮುವತ್ತಯೆರಡು ಹಸ್ತಕ್ಕೆ ಮುವತ್ತಯೆರಡು ಆಯುಧ ವಿಶಿಷ್ಟವಾಗಿ ಶಿಲುಪಿ ಶ್ಯಾಗ್ರ (ಶಿಲ್ಪ ಶಾಸ್ತ್ರ) ಮೇರಿಗೆ ವೆಂಕಟಪ್ಪನಾಯಕನು ಅಘೋರೇಶ್ವರ ಯಂಬದಾಗಿ ಲಿಂಗಪ್ರತಿಷ್ಠೆ ಮಾಡಿದ ಬಗ್ಗೆಯೂ ತಿಳಿಸಿದೆ. ಹೀಗಿರುವಲ್ಲಿ ಬಹುಶಃ ವೆಂಕಟಾದ್ರಿ ಕಟ್ಟಿಸಿದ್ದ ದೇಗುಲವೂ ಹಾಳುಬಿದ್ದಾಗ ಸಂಕಣ್ಣನಾಯಕ ಹೊಸ ಪ್ರತಿಷ್ಠೆ ಮಾಡಿಸಿದ.)

ಮತ್ತು ತರೀಕೆರೆಯ ಪಾಳೆಯಗಾರರು ದಂಗೆ ಎದ್ದು ಸ್ವತಂತ್ರರಾದರು. ಆಗ ದಾಸಪ್ಪನು ಇವರನ್ನು ಅಡಗಿಸಲು ಬಂಕಾಪುರದ ರಂಗರಾಯನ ಸಹಾಯವನ್ನು ಕೇಳಿದನು. ಆದರೆ ರಂಗರಾಯನು ಹನುಮಪ್ಪನಿಂದ ೫ ಸಾವಿರ ವರಹಗಳನ್ನು ಪಡೆದು ತಟಸ್ಥನಾದನು. ಆಗ ದಾಸಪ್ಪನು ಬಿಜಾಪುರದ ಸುಲ್ತಾನನ ನೆರವನ್ನು ಕೇಳಿಕೊಂಡನು. ಆಗ ಸುಲ್ತಾನನು ಬಿಲಾನಖಾನನೆಂಬ ಸೇನಾಪತಿಯೊಂದಿಗೆ ಸೈನ್ಯವನ್ನು ಕಳುಹಿಸಿದನು. ಆದರೆ ಖಾನನು ಬೆಳಗುತ್ತಿಯ ರಾಜ್ಯವನ್ನು ಕೈವಶಮಾಡಿಕೊಂಡು ಬಿಜಾಪುರಕ್ಕೆ ಸೇರಿಸಿದನು. ಬಿಲಾನಖಾನನು ಸುಲ್ತಾನನ ಆದೇಶದಂತೆ ದಾಸಪ್ಪನ ವಂಶಜರು ಜೀವ ನಡೆಸಲು ಉಡುಗಣಿ, ಮಹದೇವಪುರ, ಹಾರನಹಳ್ಳಿ, ಚಂದ್ರಗುತ್ತಿ ಮುಂತಾದ ೭ ತಾಲ್ಲೂಕುಗಳ ೮೬ ಗ್ರಾಮಗಳನ್ನು ನೀಡಿದನೆಂದು ಬೆಳಗುತ್ತಿಯ ಕೈಫಿಯತ್ತಿನಲ್ಲಿದೆ. ದಾಸಪ್ಪನ ಮಗನಾದ ಎರಡನೆಯ ವೆಂಕಟಾದ್ರಿ (೧೫೭೧-೧೬೧೬) ಬೆಳಗುತ್ತಿಯಲ್ಲಿದ್ದ ಬಿಲಾನಖಾನನನ್ನು ಸೋಲಿಸಿ ಬಿಜಾಪುರಕ್ಕೆ ಹಿಂದಕ್ಕೆ ಕಳುಹಿಸಿ ೯ ಲಕ್ಷ ವರಹಗಳ ಉತ್ಪನ್ನದ ನಾಡನ್ನು ಪುನಃ ವಶಪಡಿಸಿಕೊಂಡನೆಂದು ಹೇಳಲಾಗಿದೆ. ವೆಂಕಟಾದ್ರಿಯು ತನ್ನ ಪತ್ನಿಯೊಬ್ಬಳ (Concubine) ಮಗನಾದ ಚೌಡಗೌಡನನ್ನೂ ಕೆಳದಿಯ ಆಡಳಿತ ನಡೆಸಲು ನೇಮಿಸಿದನು. ಇವನ ಮಗನಾದ ಸದಾಶಿವನನ್ನು ಸರ್ವಾಧಿಕಾರಿಯನ್ನಾಗಿ ಮಾಡಿ 'ರಾಮಬಾಣ' ಎಂಬ ಪಟ್ಟದಾನೆಯನ್ನು ನೀಡಿದನು. ಇದು ಸೊಂಡಿಲಿನಿಂದ ತನ್ನ ತಲೆಯ ಮೇಲೆ ಮಣ್ಣನ್ನು ಹಾಕಿಕೊಳ್ಳುತ್ತಿತ್ತು. ಇದು ಬೆಳಗುತ್ತಿ ಸಂಸ್ಥಾನದ ಅವನತಿಯ ಸಂಕೇತವೆಂದು ಸಚಿವರು ದೂರಿದರು. ಇದರಂತೆ ಬಿಜಾಪುರದ ಸೇನಾಪತಿ ಪುನಃ ಬೆಳಗುತ್ತಿಯನ್ನು ವಶಪಡಿಸಿ ಕೊಂಡು ಹಿಂದಿನಂತೆ ಮತ್ತೆ ೮೬ ಗ್ರಾಮಗಳನ್ನು ನೀಡಿದನು, ಎಂದೆಲ್ಲ ಕತೆಗಳಿವೆ.

*ಚಾರಿತ್ರಿಕವಾಗಿ ಹೇಳಿದರೆ ಎರಡನೆಯ ವೆಂಕಟಾದ್ರಿಯು ಕ್ರಿ. ಶ. ೧೫೭೧ರಿಂದ ಬೆಳಗುತ್ತಿ ಆಡಳಿತ ನಡೆಸಲು ಆರಂಭಿಸಿದ್ದಾನೆ. ಕೆಳದಿ ರಾಜ್ಯವನ್ನು ಕ್ರಿ. ಶ. ೧೫೦೦ರಲ್ಲಿ ಚೌಡಪ್ಪ ಮತ್ತು ಭದ್ರಪ್ಪ ಎಂಬುವರು ಸ್ಥಾಪಿಸಿದರು. ಇವರ ರಾಜ್ಯಸ್ಥಾಪನೆಗೂ ವೆಂಕಟಾದ್ರಿಯು ಹೇಳಿದ ಚೌಡ ಗೌಡನಿಗೂ ೭೧ ವರ್ಷಗಳ ಅಂತರವಿದೆ. ಅಲ್ಲದೆ ಚೌಡಪ್ಪನ ಮಗನಾದ ಸದಾಶಿವನು ವೆಂಕಟಾದ್ರಿಯ ಸೇವಕ ಎಂದು ಹೇಳಿರುವುದೂ ಸಹ ದಂತಕಥೆಯಂತಿದೆ. ಇದಕ್ಕೆ ಐತಿಹಾಸಿಕ ಆಧಾರವಿಲ್ಲ. *ವೆಂಕಟಾದ್ರಿಯು ೮೬ ಗ್ರಾಮಗಳ ಆಡಳಿತವನ್ನು ನೋಡಿಕೊಳ್ಳಲು ನೇಮಿಸಿದ ಸದಾಶಿವನು ಬೇರೊಬ್ಬನಾಗಿದ್ದು ಕೆಳದಿಯ ಸದಾಶಿವನಲ್ಲ. ಇವನು ಬಿದರೂರನ್ನು ವಶಪಡಿಸಿಕೊಂಡು ಪ್ರಮುಖ ಪಟ್ಟಣವನ್ನಾಗಿ ಮಾಡಿದನೆಂದೂ ಹೇಳಲಾಗಿದೆ. ಆಡಳಿತದಲ್ಲಿ ತನ್ನದೇ ಆದ 'ಸದಾಶಿವಪ್ಪನ ಶಿಸ್ತನ್ನು' ಜಾರಿಗೆ ತಂದನು.*

ಬೆಳಗುತ್ತಿಯಲ್ಲಿ ೧೬೧೧ರಿಂದ ೧೬೨೨ರ ವರೆಗೆ ಎರಡನೆಯ ವೆಂಕಟರಾಯನ ಮಗನಾದ ತಿಮ್ಮಪ್ಪ ೧೬೨೩ ರಿಂದ ೧೬೪೨ರ ವರೆಗೆ ದೊಡ್ಡಪ್ಪ ನಾಯಕ, ೧೬೪೨ರಿಂದ ೧೬೪೩ರ ವರೆಗೆ ನರಸಪ್ಪ ಮತ್ತು ೧೬೪೪ರಿಂದ ೧೬೬೭ರ ವರೆಗೆ ರಾಘವಪ್ಪನು ಆಳಿದರು. ಈ ನಡುವೆ ಕೆಳದಿಯ ಶಿವಪ್ಪ ನಾಯಕನು (೧೬೪೫-೬೧)ನು ೧೬೪೫ರಲ್ಲಿ ಬೆಳಗುತ್ತಿಯನ್ನು ವಶಪಡಿಸಿಕೊಂಡು ಕೆಳದಿ ರಾಜ್ಯಕ್ಕೆ ಸೇರಿಸಿಕೊಂಡನು. ಮುಂದೆ ೧೬೬೮ರಿಂದ ೧೭೦೭ರ ವರೆಗೆ ವೆಂಕಟಪ್ಪ, ೧೭೦೮ರಿಂದ ೧೭೬೨ರ ವರೆಗೆ ರಾಜರ್ಷಿ ೨ನೆಯ ತಿಮ್ಮಪ್ಪನು ಕೆಳದಿಯ ಅಧೀನದಲ್ಲಿ ಆಳಿದರು. ೩ನೆಯ ತಿಮ್ಮಪ್ಪನು ಇವರ ಅಧೀನದಲ್ಲಿ ೧೭೬೩ರ ವರೆಗೆ ಸಣ್ಣ ಸೈನ್ಯವನ್ನು ಇಟ್ಟು ಕೊಂಡಿದ್ದನು.

**ಸೇನಾಪತಿಗಳು :** ಶಕ.ವರ್ಷ. ೧೬೮೪ (ಕ್ರಿ. ಶ. ೧೭೬೨) ಚಿತ್ರಭಾನು ಸಂ.ರದ ಮಾಘಶುದ್ಧ ೧೫ರಂದು ಹೈದರನು ಬಿದನೂರನ್ನ ಗೆದ್ದು ಕೆಳದಿ ರಾಜ್ಯವನ್ನು ಕೈವಶಮಾಡಿಕೊಂಡನು. ಆದರೆ ೧೭೬೩ರಲ್ಲಿ ಇದನ್ನು ಗೆದ್ದನೆಂದು ಶಾಸನಾಧಾರವಿದೆ. ಈ ಕಾರ್ಯದಲ್ಲಿ ಬೆಳಗುತ್ತಿಯ ರಾಜಶ್ರೀ ತಿಮ್ಮಪ್ಪ, ಇವನ ಮಗ ವೆಂಕಟಪ್ಪ ಪ್ರಧಾನಿ ಸುಬ್ಬಯ್ಯ ಮತ್ತು ೧೦೦ ಮಂದಿ ಸೈನಿಕರು(?) ಹೈದರನಿಗೆ ಸಹಾಯ ಮಾಡಿದರೆಂದು ಹೇಳಲಾಗಿದೆ. ಇದರಿಂದ ಹೈದರನು ತಿಮ್ಮಪ್ಪನಿಗೆ ೧೦೦೦ ವರಹ ಉತ್ಪನ್ನದ ಬೆಳಗುತ್ತಿ ಹಾಗೂ ವೆಂಕಟಪ್ಪ ಸಹೋದರರಿಗೆ ಸಾಕಷ್ಟು ಹಣವನ್ನು ನೀಡಿದನು.

ಮರಾಠರ ಪೇಶ್ವೆ ಮಾಧವರಾಯನು ಬೆಳಗುತ್ತಿಗೆ ಮುತ್ತಿಗೆ ಹಾಕಿ ನಂತರ ೭೫೦ ವರಹಗಳನ್ನು ಕೊಟ್ಟು ಕೊಂಡುಕೊಂಡನೆಂದು ಹೇಳಲಾಗಿದೆ. ಇದನ್ನು ಯಾರಿಂದ ಕೊಂಡುಕೊಂಡರು ಮತ್ತು ಹೈದರನ ಅನುಮತಿಯಿಲ್ಲದೆ ಈ ವ್ಯವಹಾರವು ಹೇಗೆ ನಡೆಯಿತು ಎಂಬುದಕ್ಕೆ ಆಧಾರಗಳಿಲ್ಲ. ಇದು ಸಂಶಯಾಸ್ಪದವಾಗಿದೆ. ಹೈದರನು ನಗರಕ್ಕೆ ಬಂದಾಗ ಅರಸು ಮನೆತನದ ವೆಂಕಟಪ್ಪನಿಗೆ ವಾರ್ಷಿಕ ೫೦೦ ವರಹಗಳ ವರ್ಷಾಸನ ನೀಡಿ ಮೈಸೂರು ಗಡಿ ಕಾವಲು ಪಡೆಯ ಸೇನಾಧಿಪತ್ಯವನ್ನು ನೀಡಿದನು. ಇವನ ಮಗನಿಗೆ ೩೮೧ ¹/₃ ವರಹಗಳನ್ನು ಕೊಟ್ಟನು. ಹೈದರನು ೧೭೬೮ರಲ್ಲಿ ಇಂಗ್ಲಿಷರಿಂದ ಕೊಡಿಯಾಲ ಬೈಲು ಮತ್ತು ಬಸವರಾಜ ದುರ್ಗವನ್ನು ವಶಪಡಿಸಿಕೊಳ್ಳಲು ಬೆಳಗುತ್ತಿಯ ಸೈನ್ಯವನ್ನು ಸೇರಿಸಿಕೊಂಡಿದ್ದನು. ಜವಾರ್ ಹುಸೇನ ಖಾನ್ ಮತ್ತು ಕುಂಸಿನಾರಣಪ್ಪನ ನಡುವೆ ಘರ್ಷಣೆ ನಡೆಯಿತು. ಹೈದರನು ೧೭೭೧ರಲ್ಲಿ ಬೆಳಗುತ್ತಿ ಮತ್ತು ಬಿದರೂರನ್ನು ಸದಾಶಿವಗಡದಲ್ಲಿದ್ದ ವೆಂಕಟಪ್ಪನಿಗೆ ನೀಡಿದನು.

---

* [(ARMAD (1928. No. 65) ನಲ್ಲಿ ಪ್ರಕಟವಾಗಿರುವ ಕ್ರಿ.ಶ. ೧೫೫೪ರ ಶಾಸನವು "ಸದಾಶಿವ ಮುದ್ರಾಂಕಿತ ಶಿವಗೋತ್ರೋತ್ಪನ್ನ ದೇವಗೌಡರ ಪ್ರಪೌತ್ರ, ಗೋಪ ಗೌಡರ ಪೌತ್ರ, ಬಸವ ಗೌಡರ ಪುತ್ರ ಚೌಡಗೌಡ, ಭದ್ರಗೌಡ ಎಂದು ಸ್ಪಷ್ಟವಾಗಿ ಹೇಳಿ ವೀರಶೈವ ಮೂಲದ ಸೂಚನೆಯು ದಾಖಲಾಗಿರುವಾಗ ದಂತಕತೆಯು ಆಧಾರರಹಿತ ಕತೆಯಾಗಿಯೆ ಉಳಿಯುತ್ತದಲ್ಲವೆ? - (ಸಂ)]

**ಕುದುರೆರಾಯರು :** ಕ್ರಿ. ಶ. ಸು. ೧೭೭೭ರಲ್ಲಿ ಹೈದರನು ಬೆಳಗುತ್ತಿ ವೆಂಕಟಪ್ಪನನ್ನು ೪೦೦ ಕುದುರೆಗಳ ಸೈನ್ಯಾಧಿಪತಿಯನ್ನಾಗಿ ಮಾಡಿದನು. ೧೭೭೮ರ ವಿಳಂಬಿಸಂವತ್ಸರದಲ್ಲಿ ಬೆಳಗುತ್ತಿ ವೆಂಕಟಪ್ಪನು ನಗರದ ಕಂದಾಚಾರದ ಮನ್ನಾರಪ್ಪನೊಂದಿಗೆ ಚಿತ್ರದುರ್ಗವನ್ನು ಮುತ್ತಿಗೆ ಹಾಕಲು ಹೈದರನು ಆದೇಶ ನೀಡಿದನು.*[2] ಈ ಯುದ್ಧದಲ್ಲಿ ಮೆದಕೆರೆ ನಾಯಕನು ಹಿಂದೆ ಸರಿಯಬೇಕಾಯಿತು. ಹೈದರನು ವೆಂಕಟಪ್ಪನ ಕಿರಿಯ ಸಹೋದರನಿಗೆ ಮಾಸಿಕ ೨೦ ವರಹಗಳನ್ನು ಗೊತ್ತುಪಡಿಸಿ ಹೋಬಳಿ ನಾಯಕನನ್ನಾಗಿ ಮಾಡಿ ಬಿದನೂರು ನಗರಕ್ಕೆ ಕಳುಹಿಸಿದನು. ಇವನ ಹೆಸರು ರಾಜಾರಾಮನೆಂದು ತಿಳಿಯುತ್ತದೆ. ಆಗ ಬಿದನೂರು ನಗರದಲ್ಲಿ ಶೇಖ್ ಆಯಾಜನು ರಾಜ್ಯಪಾಲನಾಗಿದ್ದನು. ಚಿತ್ರದುರ್ಗದ ಕದನದ ನಂತರ ಹೈದರನು ವೆಂಕಟಪ್ಪನಿಗೆ ೪ ಹೋಬಳಿಗಳನ್ನು ಬಹುಶಃ ಜಹಗೀರು ರೂಪದಲ್ಲಿ ನೀಡಿರುವುದು ತಿಳಿಯುತ್ತದೆ. ಮುಂದೆ ವೆಂಕಟಪ್ಪನು ಟೀಪುವಿನ ಆಶ್ರಯದಲ್ಲಿ ೧೭೯೨ರ ವರೆಗೆ ಸು. ೧೦ ವರ್ಷಗಳ ಕಾಲ ಬಿದನೂರು ನಗರದಲ್ಲಿ ಸೇನಾಧಿಪತಿ ಯಾಗಿದ್ದು ತನ್ನ ತಂದೆ ತಿಮ್ಮಪ್ಪನ ಮರಣಾನಂತರ ಹುದ್ದೆಯನ್ನು ತ್ಯಜಿಸಿ ಹೊನ್ನಾಳಿಗೆ ಹಿಂತಿರುಗಿದನು.

ನಗರದಲ್ಲಿ ರಾಜಾರಾಮನು ಮರಣ ಹೊಂದಿದ ನಂತರ ಶೇಖ್ ಆಯಾಜನು ಬಲರಾಮನನ್ನು ೨೦೦ ಕುದುರೆಗಳ ನಾಯಕನನ್ನಾಗಿ ಮಾಡಿ ಒಂದು ವರ್ಷದ ಅವಧಿಗೆ ಕೊಡಗಿನ ಮಡಿಕೇರಿ ಕೋಟೆಯ ರಕ್ಷಣೆಗೆ ನೇಮಿಸಿದನು. *( ಕುದುರೆ ರಾಯರ ವೃತ್ತಾಂತದಲ್ಲಿ ನುಡಿಕೇರಿ ಎಂಬುದು ಮಡಿಕೇರಿಯಾಗಿರಬೇಕು )* ೧೭೯೦ರಲ್ಲಿ ಟೀಪುವು ತಿರುವಾಂಕೂರಿಗೆ ಮುತ್ತಿಗೆ ಹಾಕಿದಾಗ ಬಲರಾಮನು ಕೊಡಗಿನ ಪರವಾಗಿ ಯುದ್ಧಮಾಡಿದನು. ಹೀಗೆ ತನ್ನ ವಿರುದ್ಧವಾಗಿ ಯುದ್ಧ ಮಾಡಿದ ಬಲರಾಮನನ್ನು ಬಿದನೂರು ನಗರದಲ್ಲಿ ಸೆರೆ ಹಿಡಿದು ಕೊಡಿಯಾಲ ಬೈಲದಲ್ಲಿ ಗಲ್ಲಿಗೇರಿಸ ಲಾಯಿತೆಂದು ತಿಳಿದುಬಂದಿದೆ.*[5]

ಕುದುರೆ ರಾಯರ ವೃತ್ತಾಂತದಲ್ಲಿ ನಾಲ್ಕನೆಯ ವೆಂಕಟಪ್ಪನು ೧೭೬೬ರಿಂದ ೧೭೭೫ರ ವರೆಗೆ ೧೦ ವರ್ಷಗಳ ಕಾಲ ಸೇನಾಧಿ ಪತಿಯಾಗಿದ್ದನೆಂದು ಹೇಳಿದೆ. ದಿನಾಂಕ ೨೦-೧-೧೭೭೨ (ಖರಸಂ-ರದಪುಷ್ಯ ಶು. ೧೫ರಂದು) ಸೋಮವಾರದಂದು ಹೈದರನು ಸದಾಶಿವಗಡದಿಂದ ಹೊನ್ನಾಳಿಗೆ ಒಂದು ನಿರೂಪವನ್ನು ಕಳುಹಿಸಿ ಬಿದರೆ ದುರ್ಗವನ್ನು ಬೆಳಗುತ್ತಿ ವೆಂಕಟಪ್ಪನಿಗೆ ನೀಡಿರುವುದಾಗಿ ಆದೇಶಿಸಿದ್ದಾನೆ. ಈ ದುರ್ಗದಲ್ಲಿದ್ದ ನಗರದ ಉಜ್ಜಿನಯ್ಯನು ತನ್ನ ಸ್ಥಾನವನ್ನು ತೆರವು ಮಾಡಿ ವೆಂಕಟಪ್ಪನಿಗೆ ಅಧಿಕಾರ ವಹಿಸಲು ಈ ಆದೇಶದಲ್ಲಿ ತಿಳಿಸಿದೆ. ಹೀಗೆ ೧೭೭೨ರಿಂದ ೧೮೦೬ರ ವರೆಗೆ ವೆಂಕಟಪ್ಪನು ೩೪ ವರ್ಷಗಳ ಕಾಲ ಬಿದರೆ ದುರ್ಗದಲ್ಲಿದ್ದಂತೆ ತಿಳಿಯುತ್ತದೆ. ಇದಲ್ಲದೆ ಈ ಹಿಂದೆ ೧೭೭೦ರಲ್ಲಿ ಹೈದರನು ಬಸವರಾಜದುರ್ಗವನ್ನು ವಶಪಡಿಸಿಕೊಂಡು ಬಂಕಾಪುರದ ರಾಜನಾದ ಸದಾಶಿವ ರಂಗಪ್ಪನಿಗೆ ಹೊನ್ನಾಳಿ ಯನ್ನು ನೀಡಿ ಅಲ್ಲಿದ್ದ ದಾಸಪ್ಪನಾಯಕನನ್ನು ಬೆಳಗುತ್ತಿಗೆ. ಕಳುಹಿಸಿದನೆಂದು ಹೇಳಿದೆ. ಮೇಲಿನ ಯಾವ ವಿಷಯಗಳೂ ಕೈಫಿಯತ್ತಿನಲ್ಲಿಲ್ಲ. ಬಿದರೆ ದುರ್ಗವು ಯಾವುದೆಂದು ತಿಳಿಯುವುದಿಲ್ಲ. ಇದು ಬಿದನೂರು ದುರ್ಗವೆ? ಅಥವಾ ಬಿದನೂರು (ಸಾಗರ.ತಾ) ಆಗಿರಬಹುದೆ? ಹಾಗೆಯೇ ಹೊನ್ನಾಳಿಯಲ್ಲಿದ್ದ ದಾಸಪ್ಪನಾಯಕನು ಯಾರೆಂದೂ ತಿಳಿದಿಲ್ಲ.

ಹೊನ್ನಾಳಿಯಲ್ಲಿದ್ದ ಜಹೀರ್ ಹುಸೇನ್ ಖಾನ್ ಮತ್ತು ಕುಂಸಿಯ ನಾರಣಪ್ಪನ ಮಗ ವೆಂಕಟೇಶಯ್ಯನ ನಡುವೆ ಘರ್ಷಣೆ ನಡೆಯಿತು. ಆಗ ಹೊನ್ನಾಳಿಯನ್ನು ಬೆಳಗುತ್ತಿಯ ೪ನೆಯ ವೆಂಕಟಪ್ಪನಿಗೆ ನೀಡಲಾಯಿತೆಂದು ಕುದುರೆರಾಯರ ವೃತ್ತಾಂತ ದಲ್ಲಿದೆ. ಆದರೆ ಹೊನ್ನಾಳಿಯನ್ನು ೩೪೧ ವರಹ ಮತ್ತು ೫ ಹಣದ ಜೋಡಿ ಗ್ರಾಮವನ್ನಾಗಿ. ವೆಂಕಟಪ್ಪನಿಗೆ ಟೀಪುವು ಕೊಟ್ಟನೆಂದು ಕೈಫಿಯತ್ತಿನಲ್ಲಿದೆ.

ಶ್ರೀರಂಗಪಟ್ಟಣದ ಕದನದ ನಂತರ ಇಂಗ್ಲಿಷರು ತಮ್ಮ ಅಧೀನದಲ್ಲಿ ಮೈಸೂರು ಅರಸು ಮನೆತನಕ್ಕೆ ಪುನಃ ರಾಜ್ಯದ ಆಡಳಿತವನ್ನು ನೀಡಿದರು. ೧೮೦೩ರಲ್ಲಿ ಪೂರ್ಣಯ್ಯನು ಹರಿಹರಕ್ಕೆ ಬಂದಾಗ ತಿಮ್ಮಪ್ಪನ ಮಗ ಹಸುಳೆ ತಿಮ್ಮಪ್ಪನಿಗೆ ಹಾಲುಬೆಣ್ಣೆ ಗೆಂದು ಮೈಸೂರು ಸರಕಾರದಿಂದ ೨೨೧ ವರಹಗಳನ್ನು ಕೊಟ್ಟರು. ಮುಮ್ಮಡಿ ಕೃಷ್ಣರಾಜ ಒಡೆಯರು ಇದನ್ನು ಬಹುಶಃ ಮಾಸಿಕ ೨೮ ವರಹಗಳಿಗೆ ನಿಗದಿಗೊಳಿಸಿದರು. ನಗರ ಪ್ರಾಂತ್ಯದ ರೈತರ ಬಂಡಾಯದ ಕಾರಣ ಮೈಸೂರು ಸಂಸ್ಥಾನದ ಆಡಳಿತವನ್ನು ಮಹಾರಾಜರಿಂದ ಬ್ರಿಟಿಷರೇ ನೇರವಾಗಿ ವಹಿಸಿ ಕೊಂಡರು. ಬೆಳಗುತ್ತಿಯ ಅರಸುಮನೆತನದ ಬಲರಾಮರಾಯ ಮತ್ತು ಮರಿಯಪ್ಪರಾಕಯ್ಯನು ವೆಂಕಟಪ್ಪನ ಮೂಲಕ ೨೯.೧೦.೧೮೩೧ ರಂದು ಗೌರ್‍ನರ್ ಜನರಲ್ ಲೂಶಿಂಗ್ ಟನ್ನನಿಗೆ ಮನವಿ ಪತ್ರ ಸಲ್ಲಿಸಿ ತಮಗೆ ವಾರ್ಷಿಕ ಗೌರವ ಧನ ನೀಡುವಂತೆ ಕೋರಿದ್ದರು. ಆದರೆ ವರ್ಶಾಸನ ದೊರೆಯಲಿಲ್ಲ. ಕೈಫಿಯತ್ತಿನ ಬರಹವೂ ಇಲ್ಲಿಗೆ ನಿಂತಿದೆ.

**ಚರ್ಚಾಂಶಗಳು :** ಬೆಳಗುತ್ತಿ ಇತಿಹಾಸವನ್ನು ತಿಳಿಸುವ ಬೆಳಗುತ್ತಿ ಕೈಫಿಯತ್ತಿಗೂ ಮತ್ತು ಕುದುರೆರಾಯರ ವೃತ್ತಾಂತ (ಬೆಳಗುತ್ತಿ ಅರಸರ ವೃತ್ತಾಂತ)ಕ್ಕೂ ವ್ಯತ್ಯಾಸವಿದೆ. ಅರಸರ ಹೆಸರು ಮತ್ತು ಆಡಳಿತದ ಅವಧಿಯ ಬಗ್ಗೆ ಒಮ್ಮತವಿಲ್ಲ. ಡಾ || ಶಾಮಾಶಾಸ್ತ್ರಿ ಯವರು ಬರೆದ ಲೇಖನವೂ ಚರ್ಚಾಸ್ಪದ ವಾಗಿದೆ. ಉದಾಹರಣೆಗೆ ಅಭ್ರಮಾದವನ ಮಗನಾದ ಚೆವುಲೆ ವೆಂಕಟಾದ್ರಿಯು ಕನ್ನೆನಾಯಕನನ್ನು ಕೊಂದನೆಂದು ಹೇಳಿದ್ದಾರೆ. ಆದರೆ ಚೆಲುವರಂಗಪ್ಪನು ೧೩೬೧ರಲ್ಲಿ ಕನ್ನೆನಾಯಕನನ್ನು

ಸೆರೆಯಲ್ಲಿಟ್ಟನು. ಬೆವುಲೆ ವೆಂಕಟಾದ್ರಿಯು ೧೪೬೦ರಿಂದ ಆಳಿದ್ದಾನೆ. ಹೀಗೆ ೧೦೦ ವರ್ಷಗಳ ಅಂತರವಿದ್ದು ಇವನು ಕನ್ನೆ ನಾಯಕನನ್ನು ಕೊಲ್ಲಿಸಿದ ನೆಂಬುದು ಸಂದೇಹಾಸ್ಪದವಾಗಿದೆ.

ಕೆಲವು ಪ್ರಮುಖ ವಿಷಯಗಳನ್ನು ಈ ಕೆಳಗೆ ನೀಡಿದೆ.

೧. ಇಕ್ಕೇರಿಯ ದೇವಾಲಯ ನಿರ್ಮಾಣ. ೨. ದಾಸಪ್ಪನ ಮಗ ವೀರವೆಂಕಟರಾಯನಿಗೆ ಆನೆಗೊಂದಿಯಲ್ಲಿ ಪಟ್ಟವಾಗಿ ವಿಜಯನಗರ ರಾಜವಂಶವನ್ನೂ ಮುಂದುವರೆಸಿದ್ದು ೩. ಬಿದರೆ, ಬಿದಿರೂರು, ಸುಡುಗಣೆ, ಸೂಲಿಗೇರಿ ಸ್ಥಳಗಳ ಐತಿಹಾಸಿಕ ಘಟನೆ ೪. ಬೆಳಗುತ್ತಿಯನ್ನು ಆಗಾಗ ರಾಜ ಕುಟುಂಬದವರಿಗೆ ಹಸ್ತಾಂತರಿಸುತ್ತಿದ್ದುದು. ೫. ಮರಾಠರು ೭೫೦ ವರಹಗಳನ್ನು ಕೊಟ್ಟು ಬೆಳಗುತ್ತಿಯನ್ನು ಕೊಂಡಿದ್ದು ೬. ಬೆಳಗುತ್ತಿಯ ವೆಂಕಟಾದ್ರಿ ಮತ್ತು ನಗರದ ಕಂದಾಚಾರದ ಮನ್ನಾರಪ್ಪನೂ ಸೇರಿ ಇಬ್ಬರೇ ಹೈದರನ ಆದೇಶದಂತೆ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕುವುದು ಮಹಾವೀರನಾದ ಮದಕರಿ ನಾಯಕನ ಹಿನ್ನಡೆ

ಮೇಲಿನ ಅಂಶಗಳನ್ನು ಕುರಿತು ಸರಿಯಾದ ದಿಕ್ಕಿನಲ್ಲಿ ಹೊಸ ಸಂಶೋಧನೆಯ ಅಗತ್ಯವಿದೆ. ಇದರಿಂದ ಬೆಳಗುತ್ತಿಯ ಅರಸುಮನೆತನದ ನೈಜ ಇತಿಹಾಸಕ್ಕೆ ಸಹಾಯಕವಾಗಬಲ್ಲದು ಹೊಸ ವಿಷಯಗಳೂ ಬೆಳಕಿಗೆ ಬರಬಹುದು.

### ಬೋಳೆ ನರಸಪ್ಪನಾಯಕನ ಶಾಸನಪಾಠ **

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೬೧೨ನೆಯ ಪ್ರಮೋದೂತ ಸಂ. ರದ ವೈಶಾಖ ಶು ೧೫ ಲು ಬೆಳಗುತ್ತಿ ಬೋಳೆನರಸಪ್ಪನಾಯಕರು ವಿರಕ್ತತೋಂಟದ ಸ್ವಾಮಿಯವರಿಗೆ ಮಠಕೆ ಭೂಮಿ ಹೊಲ ಸಹ ಶಿವಾರ್ಪಿತವಾಗಿ ಬಿಟ್ಟಿದೇವೆ. ಸ್ವದತ್ತ ದ್ವಿಗುಣಂ ಪುಣ್ಯಂ.... ಅಸ್ತಿರಾಮರಂಗದಾಮ.

### ಬೆಳಗುತ್ತಿ ಅರಸು ಮನೆತನ



## ಆಧಾರ ಸೂಚಿ


*೧. ಇ.ಸಿ. ೮ ಹೊನ್ನಾಳಿ ೨೬, ಚಿಕ್ಕಎರೆಹಳ್ಳಿ, ಕ್ರಿ. ಶ. ೧೧೭೧

*೨. ಇದೇ ೩೮, ೪೧, ೪೨, ೪೩ ಮತ್ತು ೩೯, ಬೆಳಗುತ್ತಿ, ಕ್ರಿ.ಶ. ೧೨೩೪

*೩. ಇದೇ ೪೪, ಬೆಳಗುತ್ತಿ, ಕ್ರಿ. ಶ. ೧೨೧೬ ಮತ್ತು ಮಾದನ ಬಾವಿ, ಕ್ರಿ. ಶ. ೧೨೨೨

*೪. ಇದೇ ೭, ಕುರವಗದ್ದೆ, ೨೬ ಚಿಕ್ಕ ಎರೆಹಳ್ಳಿ, ಕ್ರಿ. ಶ. ೧೧೭೧ ಮತ್ತು ಕ್ರಿ. ಶ. ೧೧೯೬

*೫. **ಸಾರಂಗಶ್ರೀ** : (ಸಂ) ಡಾ. ಎಂ. ಎಂ. ಕಲಬುರ್ಗಿ, ಪು. ೫೫

*೬. **ಕೆಳದಿ ನೃಪವಿಜಯ** : (ಸಂ.) ಕೆ. ಗುಂಡಾ ಜೋಯ್ಸ್, ಪು೮೬

*೭. **ಚಿತ್ರದುರ್ಗ ಬಖೈರ್** : ಭೀಮಾಜಿ ಪಂತ್ ಮತ್ತು ಎಸ್. ಶ್ರೀಕಂಠಶಾಸ್ತ್ರಿ

*೮. Bhagwan S. Gidwani : **Sword of Tipu Sultan,**

*೯. **ಅಪ್ರಕಟಿತ ಶಾಸನ** : ಗಂಜೇನ ಹಳ್ಳಿ ಬಸಪ್ಪನ ಮನೆ ಹಿತ್ತಿಲು, ಬೆಳಗುತ್ತಿ

ಡಾ॥ ಸುಷಮಾ ಎ. ಅರೂರ್ *

# ಕರ್ನಾಟಕದಲ್ಲಿ ಶಿವಾಜಿಯ ಮನೆತನ (ಕ್ರಿ.ಶ. ೧೬೩೬- ೧೭೦೭)

ಶಿವಾಜಿಯ ಮನೆತನವು (House of Shivaji) ಶಹಜಿ ಭೋನ್ಸ್ಲೆ ಅವನ ಮಗ ಶಿವಾಜಿ ಹಾಗೂ ಅವನ ಮೊಮ್ಮಕ್ಕಳಾದ ಸಂಭಾಜಿ ಮತ್ತು ರಾಜಾರಾಮರನ್ನು ಮಾತ್ರ ಒಳಗೊಂಡಿದೆ. ಕರ್ನಾಟಕದಲ್ಲಿ ಈ ಮರಾಠ ಅರಸರು (ಛತ್ರಪತಿಗಳು) ಕೈಗೊಂಡ ದಂಡಯಾತ್ರೆಗಳು, ರಾಜ್ಯಕಾರಭಾರ, ವ್ಯವಸ್ಥೆ ಇತ್ಯಾದಿ ಚಟುವಟಿಕೆಗಳನ್ನು ನಿರೂಪಿಸಲಾಗಿದೆ. ಮರಾಠರು ದಕ್ಷಿಣ ಭಾರತದಲ್ಲಿ ಬೇಕಾದಷ್ಟು ಹರಡಿಕೊಂಡಿದ್ದರೂ, ಅವುಗಳನ್ನು ಈಗಿನ ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸಿದ್ದೇನೆ. ಕ್ರಿ. ಶ. ೧೬೩೬ರಲ್ಲಿ ಶಹಜಿ ಭೋನ್ಸ್ಲೆ ಬಿಜಾಪುರ ಆದಿಲಶಹನ ಸೇವೆಯಲ್ಲಿ ಕರ್ನಾಟಕಕ್ಕೆ ಬಂದು ಇಲ್ಲಿಯೇ ಸ್ಥಾಯಿಯಾದನು ಹಾಗೂ ಬೆಂಗಳೂರು, ಕೋಲಾರ, ಹೊಸಕೋಟೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರಗಳನ್ನು ಜಾಗೀರಾಗಿ ಸಂಪಾದಿಸಿ ಕೊನೆಕೊನೆಗೆ ಸ್ವತಂತ್ರವಾಗಿಯೇ ಆಳಹತ್ತಿದನು. ಈ ಮನೆತನದವರು ಔರಂಗಜೇಬನ ಮರಣದ ತನಕ ಅಂದರೆ ಕ್ರಿ.ಶ. ೧೭೦೭ರ ವರೆಗೆ ತಮ್ಮ ಅಸ್ತಿತ್ವಕ್ಕಾಗಿ ಮಹಾರಾಷ್ಟ್ರ ಮತ್ತು ಕರ್ನಾಟಕ ಪ್ರಾಂತಗಳಿಂದ ಮುಘಲರ ದಾಳಿ ಎದಿರಿಸುತ್ತ ಘನವಾಗಿ ಹೋರಾಡಿದರು.

ಕರ್ನಾಟಕದಲ್ಲಿ ಶಿವಾಜಿಯ ಮನೆತನದವರ ಚಟುವಟಿಕೆಗಳ ಬಗ್ಗೆ ಕನ್ನಡ ಮರಾಠಿ ಹಾಗೂ ಸಂಸ್ಕೃತ ಆಕರಗಳು ಬಹಳಷ್ಟು ವಿವರಗಳನ್ನು ಕೊಡುತ್ತವೆ. ಹಾಗು ಪರಸ್ಪರ ಪೂರಕವೂ ಆಗಿವೆ. ರಾಜಾಶ್ರಯದಲ್ಲಿ ಬರೆದ ಕೃತಿಗಳಾದ್ದರಿಂದ ಉತ್ಪ್ರೇಕ್ಷೆಗೆ ಅವಕಾಶವಿದೆ.[*೧] ಬೇರೆ ಆಕರಗಳೊಡನೆ ತುಲನೆ ಮಾಡಿ ಸತ್ಯಾಂಶವನ್ನು ಕಂಡು ಹಿಡಿಯಲು ಪ್ರಯತ್ನಿಸಿದೆ. ಇನ್ನೂ ಈ ಸಾಹಿತ್ಯ ಕೃತಿಗಳಿಗೆ ಪೂರಕವಾಗಿವೆ ಶಿಲಾ ಶಾಸನಗಳೂ ಮತ್ತು ಕೆಲ ಮರಾಠ ಕನ್ನಡಿಗರಿಗೆ ಸಂಬಂಧಪಟ್ಟ ಸ್ಮಾರಕಗಳು ಇವೆ. ಈ ವಿವಿಧ ಆಕರಗಳು ಮರಾಠ ಕನ್ನಡಿಗರ ಐತಿಹಾಸಿಕ ಸಂಬಂಧವನ್ನು ಎತ್ತಿಹಿಡಿಯಲು ಸಹಾಯಕವಾಗಿವೆ.

ಶಿವಾಜಿ ಮನೆತನಕ್ಕೆ ಹಿರಿಯನಾದ ಶಹಜಿ ಭೋನ್ಸ್ಲೆ ಕ್ರಿ.ಶ. ೧೬೩೬ರಲ್ಲಿ ಕರ್ನಾಟಕದಲ್ಲಿ ಬಿಜಾಪುರ ಸುಲ್ತಾನನ ರಾಜ್ಯವನ್ನು ದಕ್ಷಿಣ ಭಾರತದಲ್ಲಿ ವ್ಯಾಪಿಸಿ ಇವುಗಳನ್ನೇ ಜಾಗೀರಾಗಿ ಸಂಪಾದಿಸಿ ಮರಾಠರ ರಾಜ್ಯದ ಸ್ಥಾಪನೆಗೆ ನಾಂದಿ ಹಾಕಿದನು. ಶಹಜಿಯು ಬೆಂಗಳೂರಿನಲ್ಲಿ ಕಳೆದ ಜೀವನದ ಬಗ್ಗೆ ಅವನ ಆಶ್ರಯದಲ್ಲಿದ್ದ ಜಯರಾಮ್ ಪಿಂಡ್ಯೆ ಸವಿಸ್ತಾರವಾಗಿ ತನ್ನ ಕೃತಿ ರಾಧಾಮಾಧವ ವಿಲಾಸ ಚಂಪು ವಿನಲ್ಲಿ ಹೇಳಿಕೊಂಡಿದ್ದಾನೆ. ಇವನು ಮಹಾರಾಷ್ಟ್ರದ ನಾಸಿಕ್ ಪ್ರಾಂತ್ಯದಿಂದ ಶಹಜಿಯ ಆದರಾತಿಥ್ಯದ ವರ್ಣನೆ ಕೇಳಿ ಬೆಂಗಳೂರಿಗೆ ಬಂದನು. ಈ ಸಂಸ್ಕೃತ ಆಕರವು ಶಹಜಿಯ ಆದಿಲಶಹನ ಪರವಾಗಿ ಮಾಡಿದ ದಂಡಯಾತ್ರೆಗಳು, ಅವನ ಹಾಗೂ ಸುಲ್ತಾನರ ನಡುವೆ ಇದ್ದ ಬಾಂಧವ್ಯ ಇಷ್ಟೇ ಅಲ್ಲ ಶಹಜಿ ಹಾಗೂ ಅವನ ಸಹದ್ಯೋಗಿಗಳ ಜೊತೆಗಿದ್ದ ಸಂಬಂಧವನ್ನು ಸುಂದರವಾಗಿ ನಿರೂಪಿಸುತ್ತದೆ.[*೨] ೨. ಶಹಜಿಯ ಜೀವನವು ಮೊದಲ ಹಲವರುಷಗಳು ಮುಘಲರ ವಿರುದ್ಧ ಸಂಘರ್ಷದಲ್ಲಿ ಕಳೆದರೂ ಕೊನೆಯ ಕೆಲ ವರುಷಗಳು ಅತ್ಯಂತ ಸಮಾಧಾನಕರವಾಗಿತ್ತು ಎಂದು ಜಯರಾಮ ಪಿಂಡ್ಯ ಹೇಳುತ್ತಾನೆ. ಶಹಜಿಯು ವಿದ್ಯೆ ಕಲೆಗಳಿಗೆ ಆಶ್ರಯದಾತನಿದ್ದು ಸುಮಾರು ಮುವತ್ತೈದು ಪಂಡಿತರಿಗೆ ಅವನು ತನ್ನ ಬೆಂಗಳೂರಿನ ಗೌರಿ ಮಹಲದಲ್ಲಿ ಆಶ್ರಯ ಕೊಟ್ಟಿದ್ದನು. ತನ್ನ ಬಿಡುವಿನ ಸಮಯವನ್ನು ಸಂಗೀತ ಆಲಿಸುವದು, ಬೇಟೆಯಾಡುವದು ಹಾಗೂ ಸಮಸ್ಯೆಗಳನ್ನು ಬಿಡಿಸುವದರಲ್ಲಿ ಕಳೆಯುತ್ತಿದ್ದನು.[*೩] ಶಹಜಿಯನ್ನು ಗೋಬ್ರಾಹ್ಮಣ ಪ್ರತಿಪಾಲನೆಂದು, ಸಂಸ್ಕೃತ ಮರಾಠ ಹಿಂದಿ ಭಾಷಾ ಸಂವರ್ಧಕನೆಂದು ಲೇಖಕನು ಕರೆಯುತ್ತಾನೆ.[*೪] ಈ ಸಂಸ್ಕೃತ ಆಕರಕ್ಕೆ ಪೂರಕವಾಗಿ ಹಾಗೂ ಶಹಜಿಯ ವಿಷಯದಲ್ಲಿ ಅವನ ಮಕ್ಕಳು ಹಾಗೂ ಸೊಸೆ ಜಯತಿಬಾಯಮ್ಮನ ಕನ್ನಡ ಶಿಲಾ ಶಾಸನಗಳಿಂದ ಮರಾಠರ ರಾಜ್ಯಕಾರಭಾರ ವ್ಯವಸ್ಥೆಯ ಬಗ್ಗೆ ಹೆಚ್ಚಿನ ಮಾಹಿತಿ ಸಿಗುತ್ತದೆ.[*೫]

* ಸಂಖ್ಯೆ ೧೫, ಸಿದ್ಧಾರ್ಥ ಅಪಾರ್ಟ್‌ಮೆಂಟ್ಸ್, ಗಾಯಕ್‌ವಾಡ್‌ನಗರ, ಬನೆರ್ ರಸ್ತೆ, ಪುಣೆ - ೪೧೧ ೦೦೭

ಶಿವಾಜಿಯ ಮಟ್ಟಿಕ್ಕೆ ಹೇಳುವುದಾದರೆ ಕರ್ನಾಟಕವು ಮೊದಲು ತರಬೇತು ಕೇಂದ್ರವಾಗಿಯು, ನಂತರ ಲೂಟಿಗೆ ಒಳ್ಳೇ ಕ್ಷೇತ್ರವಾಗಿಯು, ಕೊನೆಗೆ ಇದೇ ಅವನ ಹಿಂದು ರಾಜ್ಯ ಸ್ಥಾಪನೆಯ ಕಾರ್ಯಕ್ಷೇತ್ರವಾಗಿಯು ಪರಿಣಮಿಸಿತು. ಶಿವಭಾರತವು ಪರಮಾನಂದ ಕವಿಯ ಸಂಸ್ಕೃತ ಕೃತಿ. ಇವನು ಶಿವಾಜಿಯ ಸಮಕಾಲೀನ ಕವಿಯ ಪ್ರಕಾರ ಶಿವಾಜಿಯ ಬಾಲ್ಯದ ಕೆಲ ವರುಷಗಳು, ಬೆಂಗಳೂರಿನಲ್ಲಿ ತಂದೆಯೊಡನೆ ಕಳೆದವು.*೬ ಕೃಷ್ಣಾಜಿ ಅನಂತ ಸಭಾಸದ ಇವರ ಸಭಾಸದ ಬಖರವು ಈ ಮಾತನ್ನು ದೃಢೀಕರಿಸುತ್ತದೆ. ಶಿವಾಜಿಯು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಬೆಂಗಳೂರಿನಿಂದ ಪುಣೆಗೆ ರವಾನೆ ಮಾಡಿದನು, ಎಂದು ಹೇಳುತ್ತದೆ.*೭ ಬೆಂಗಳೂರು ಆದಿಲ ಶಹರ ಸಾಮ್ರಾಜ್ಯದ ಭಾಗವಾಗಿದ್ದರೂ ಕೂಡ ಹಿಂದು ರಾಜರ ಕೈಕೆಳಗೆ ಹಿಂದು ಪರಂಪರೆಯನ್ನು ಉಳಿಸಿಕೊಂಡಿತ್ತು. ಅವನ ಮೇಲೆ ಸ್ವಾಭಾವಿಕವಾಗಿ ವಿಜಯನಗರದ ಪ್ರಭಾವ ಬಿದ್ದಿರಬೇಕು. ವಿಜಯನಗರ ರಾಜ್ಯವು ಅಳಿದು ಹೋಗಿದ್ದರೂ ಅದರ ಸಾಂಸ್ಕೃತಿಕ ಪ್ರಭಾವ ಎಲ್ಲೆಡೆಗೂ ಹರಡಿದ್ದು ಶತಮಾನಗಳ ತನಕ ಅದನ್ನು ಕಾಣಬಹುದಿತ್ತು. ತನ್ನ ತಾಯಿ ಜೀಜಾಬಾಯಿಯಿಂದ ಯಾದವರ ಬಗ್ಗೆ ತಿಳಿದುಕೊಂಡ ಶಿವಾಜಿಗೆ ವಿಜಯನಗರದ ಸಂಸ್ಕೃತಿಯು ಅಷ್ಟೇ ಮೆಚ್ಚುಗೆ ಆದದ್ದು ಆಶ್ಚರ್ಯವೇನಿಲ್ಲ. ಇದಕ್ಕೆ ಅವನು ಬಳಸಿದ ಕಂಠೀರಾಯ ಹೊನ್ನು ಸಾಕ್ಷಿ. ಇನ್ನು ಧರ್ಮನಿರಪೇಕ್ಷತೆ, ಎಲ್ಲ ಧರ್ಮಗಳ ಬಗ್ಗೆ ಇದ್ದ ಸದ್ಭಾವನೆ, ಗೌರವ ಇವೆಲ್ಲ ವಿಜಯನಗರದ ಪ್ರೇರಣೆ ಯಿಂದಲೇ ಎಂದು ಖಂಡಿತವಾಗಿ ಹೇಳಬಹುದು.

ಶಿವಾಜಿಯ ಮರಣದ ನಂತರ ಸಂಭಾಜಿಯು ನಾಲ್ಕೂ ದಿಕ್ಕಿನಿಂದ ಶತ್ರುಗಳಿಂದ ಸುತ್ತುವರೆಯಲ್ಪಟ್ಟಿದ್ದರೂ ಕೂಡ ಮರಾಠ ರಾಜ್ಯವನ್ನು ಉಳಿಸಿಕೊಂಡನು. ಮನೆಯಲ್ಲಿಯೇ ವೈರಿಗಳೂ, ಉತ್ತರದಲ್ಲಿ ಮುಘಲರು, ಪಶ್ಚಿಮದಲ್ಲಿ ಪೋರ್ಚುಗೀಸ ಹಾಗೂ ಸಿದ್ದಿಯು ಇವರೆಲ್ಲ ಬೆನ್ನಟ್ಟಿದ್ದಾಗ ಅವರನ್ನು ಸದೆ ಬಡಿದನು. ಇಷ್ಟೆಲ್ಲ ಕಷ್ಟಗಳಿದ್ದರೂ ತನ್ನ ತಂದೆಯು ಕರ್ನಾಟಕದ ದಂಡಯಾತ್ರೆಯಲ್ಲಿ ಕೈಗೂಡಿಸಿದ ಜಾಗೀರುಗಳ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಲು ಎರಡು ಸಲ ದಂಡಯಾತ್ರೆಗಳನ್ನು ಕೈಗೊಂಡನು. ಇದರ ಫಲ ಮುಂದೆ ರಾಜಾರಾಮನಿಗೆ ಆಯಿತು.

ರಾಜಾರಾಮನಿಗೆ ಕರ್ನಾಟಕದ ಜನರು, ರಾಜರು ಆಶ್ರಯ ಕೊಟ್ಟಿದ್ದಕ್ಕೇನೆ ಅವನು ಮರಾಠ ರಾಜ್ಯವನ್ನು ಮುಘಲರ ಸತತ ದಾಳಿಯಿಂದ ರಕ್ಷಿಸಿಕೊಳ್ಳಲು ಸಾಧ್ಯವಾಯಿತು. ಇದಕ್ಕೆ ಸಾಕ್ಷಿಯಾಗಿ ಸಂಸ್ಕೃತದ ರಾಜಾರಾಮ ಚರಿತ್ರೆ,*೮ ಕೆಳದಿ ನೃಪವಿಜಯ ಹಾಗೂ ಶಿವತತ್ವರತ್ನಾಕರ ಈ ಸಮಕಾಲೀನ ಕೃತಿಗಳು ಇವೆ. ಇವುಗಳಿಗೆ ಪೂರಕವಾಗಿ ಕೆಳದಿಯ ರಾಜ್ಯದಲ್ಲಿ ರಾಜಾರಾಮನ ಪಾರ್ವತಿ ದೇಗುಲ, ಬಿದನೂರಿನಲ್ಲಿರುವ ಅರಮನೆ, ಕೊಪ್ಪ, ನಂದಿಮಠ ದಲ್ಲಿರುವ ಮರಾಠ ಸೈನಿಕರ ಶಿಲ್ಪಗಳು, ಇವೆಲ್ಲ ಕೆಳದಿ ಮರಾಠ ಸಂಬಂಧದ ಮೇಲೆ ಹೊಸ ಬೆಳಕು ಚೆಲ್ಲುತ್ತವೆ. ದೊಡ್ಡೇರಿ ಲಾವಣಿ, ನೀರ್ತಡಿಯ ಶಾಸನ ಕೂಡ ಕರ್ನಾಟಕದ ಜನರ ಔದಾರ್ಯ ಎತ್ತಿ ತೋರಿಸುತ್ತದೆ. ಇವುಗಳ ಆಧಾರದ ಮೇಲೆ ರಾಜಾರಾಮನು ಪನ್ಹಾಳದಿಂದ ಜಿಂಜಿಗೆ ಯಾವ ಮಾರ್ಗವಾಗಿ ಹೋದನೆಂದು ಸ್ಪಷ್ಟವಾಗಿ ಹೇಳಬಹುದು.

ಹೀಗೆ ಕನ್ನಡ, ಮರಾಠಿ, ಸಂಸ್ಕೃತ ಆಕರಗಳ ಆಧಾರದ ಮೇಲೆ ಕ್ರಿ.ಶ. ೧೬೩೬ರಿಂದ ೧೭೦೭ರ ವರೆಗೆ ಕರ್ನಾಟಕದಲ್ಲಿ ಮರಾಠ ಛತ್ರಪತಿಗಳು ಕೈಗೊಂಡ ರಾಜಕೀಯ ಚಟುವಟಿಕೆಗಳನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

## ಆಧಾರ ಸೂಚಿ

*೧. ಉದಾಹರಣೆಗೆ *ಗೋವಿಂದ ವೈದ್ಯನ ಕಂಠೀರವ ನರಸರಾಜ* ವಿಜಯ, ತಿರುಮಲಾರ್ಯ ಬರೆದ *ಅಪ್ರತಿಮ ವೀರ ಚರಿತ್ರೆ, ಚಿಕ್ಕದೇವರಾಜ ಬಿನ್ನಪಮು* ಕುಯರಾಮ ಪಿಂಡ್ಯೆ ಬರೆದ ಸಂಸ್ಕೃತ ಕೃತಿ *ರಾಧಾ ಮಾಧವ ವಿಲಾಸಚಂಪು*, ಪರಮಾನಂದನ ಕಾವ್ಯ *ಶಿವಭಾರತ* ಹಾಗೂ ಕೃಷ್ಣಾಜಿ ಅನಂತ ಸಭಾಸದನ *ಸಭಾಸದ ಬಖರ* ಇವೆಲ್ಲ ರಾಜಾಶ್ರಯದಲ್ಲಿ ಬರೆದ ಕೃತಿಗಳು

*೨. *ರಾಧಾಮಾಧವ ವಿಲಾಸ ಚಂಪುವನ್ನು* ರಾಜವಾಡೆಯವರು ಸಂಪಾದನೆ ಮಾಡಿ ಮುನ್ನುಡಿ ಬರೆದಿದ್ದಾರೆ, ಪುಟಗಳು- ೯೫, ೯೬, ೧೦೯

*೩. ಅದೇ

*೪. ಅದೇ

*೫. ಶಹಜಿಯ ಹಿರಿಮಗ ಸಂಭಾಜಿ, ಜೀಜಾಬಾಯಿಂದ ಹುಟ್ಟಿದವ. ಅವನ ಎರಡನೇ ಹೆಂಡತಿ ತುಕಾಬಾಯಿಮೋಹಿತೆಯಿಂದ ಹುಟ್ಟಿದ ವೆಂಕೋಜಿ ಅವನ ಹೆಂಡತಿ ಜಯತಿಬಾಯಮ್ಮ, ಇವರ ಮಕ್ಕಳು ಮಣಕೋಜಿ ಇತ್ಯಾದಿ ಇವರ ಕನ್ನಡ ಶಿಲಾಶಾಸನಗಳು.

*೬. ಶಿವಭಾರತ, ಪು – ೪೪

*೭. ಸಭಾಸದ ಬಖರ, ಪು. ೪-೬

*೮. *ರಾಜಾರಾಮ ಚರಿತ್ರೆ* (ಸಂಸ್ಕೃತ)

ಡಾ॥ ಎಂ. ವೈ. ಸಾವಂತ *

# ಮರಾಠರ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದ್ದ ತೆರಿಗೆಗಳು – ಒಂದು ಅಧ್ಯಯನ

ಆಳುವ ಅರಸರು ಅನೇಕ ಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ಖರ್ಚುಮಾಡುವುದು ಅನಿವಾರ್ಯ. ಇದಕ್ಕಾಗಿ ಹಣಕೂಡಿಸಲು ಅವರು ವಿವಿಧ ಆದಾಯ ಮೂಲಗಳನ್ನು ಅವಲಂಬಿಸಿರಬೇಕಾಗುತ್ತದೆ. ಅಂಥ ಮೂಲಗಳಲ್ಲಿ ತೆರಿಗೆ ಬಹು ಮುಖ್ಯವಾದದ್ದು.

ಭಾರತದಲ್ಲಿ ವೇದಗಳ ಕಾಲದಷ್ಟು ಹಿಂದೆಯೇ ತೆರಿಗೆ ವಿಧಿಸುವ ಪದ್ಧತಿ ಜಾರಿಯಲ್ಲಿತ್ತು. ರಾಜ ಒದಗಿಸುವ ರಕ್ಷಣೆಗೆ ಪ್ರತಿಯಾಗಿ ಪ್ರಜೆಗಳು ತೆರಿಗೆ ಸಲ್ಲಿಸಬೇಕೆಂಬ ಭಾವನೆ ಆ ಕಾಲದಲ್ಲಿತ್ತು. ಭಾರತದ ತೆರಿಗೆ ಪದ್ಧತಿಯ ವಿಕಾಸ ಕೌಟಿಲ್ಯನ ಅರ್ಥಶಾಸ್ತ್ರದಿಂದಲೂ ತಿಳಿಯುತ್ತದೆ.

ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ಪ್ರವೇಶಮಾಡಿದ ಮರಾಠರು ಉತ್ತರ ಕರ್ನಾಟಕದಲ್ಲಿ ಅನೇಕ ಚಿಕ್ಕಪುಟ್ಟ ಸಂಸ್ಥಾನಗಳನ್ನು ಗೆದ್ದು ಕೆಲಕಾಲ ಆಳ್ವಿಕೆ ನಡೆಸಿದರು. ಆ ಅವಧಿಯಲ್ಲಿ ಅವರು ಅನೇಕ ಪ್ರಕಾರದ ತೆರಿಗೆಗಳನ್ನು ವಿಧಿಸಿ ತಮ್ಮ ಆದಾಯದ ಮೂಲಗಳನ್ನು ಹೆಚ್ಚಿಸಿಕೊಂಡಿದ್ದರು.

ಪ್ರಸ್ತುತ ಲೇಖನದ ಉದ್ದೇಶ ಮರಾಠರ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಆಗಿನ ಅರ್ಥವ್ಯವಸ್ಥೆಯಲ್ಲಿ ಕಂಡುಬರುವ ತೆರಿಗೆಗೆ ಸಂಬಂಧಿಸಿದ ಕೆಲವು ಪದಗಳ ಅರ್ಥ ವಿಶ್ಲೇಷಣೆ ಹಾಗೂ 'ಮೊಹತರ್ಫಾ' ಎಂಬ ತೆರಿಗೆಯ ಸ್ವರೂಪ ಹಾಗೂ ಸಂಗ್ರಹಣೆ ಕುರಿತು ಇರುತ್ತದೆ.

ಈ ತೆರಿಗೆಗಳನ್ನು ಒಕ್ಕಲುತನದ ತೆರಿಗೆಗಳು, ವ್ಯಾಪಾರ ಹಾಗೂ ಕೈಗಾರಿಕೆಗಳ ಮೇಲಿನ ಕರ, ಸಾರಿಗೆ ಸಾಗಾಣಿಕೆ ಮೇಲಿನ ಸುಂಕ, ವೃತ್ತಿ ತೆರಿಗೆ, ಧಾರ್ಮಿಕ ಶುಲ್ಕಗಳು ಇತ್ಯಾದಿಯಾಗಿ ವಿಂಗಡಿಸಬಹುದು. ಪುಣೆಯ ಪತ್ರಾಗಾರದಲ್ಲಿ *೧ ಸಂಗ್ರಹಿಸಿಡಲಾದ ಪ್ರಮುಖ ದಾಖಲೆಗಳಾದ 'ತಾಳೇಬಂದ'*೨ (ವಾರ್ಷಿಕ ಆಯ ವ್ಯಯಗಳ ಯಾದಿ), 'ರೋಜಕಿರದ್'*೩ (ದಿನನಿತ್ಯದ ದಾಖಲೆ ಪಟ್ಟಿ). 'ತರಜುಮಾ'*೪ (ವಾರ್ಷಿಕ ಉತ್ಪನ್ನ ಹಾಗೂ ಖರ್ಚಿನ ಸೂಚಿ). 'ಖತೌನಿಸ್'*೫ (ವರ್ಣಾನುಕ್ರಮವಾಗಿ ತಯಾರಿಸಿದ ಖರ್ಚಿನ ಸಾರಾಂಶ) ಇವು ತೆರಿಗೆಗಳ ವಿವರಗಳನ್ನು ನೀಡುತ್ತವೆ.

ಒಕ್ಕಲುತನದ ತೆರಿಗೆಗಳಲ್ಲಿ ಮುಖ್ಯವಾಗಿ ಮಳೆವಣ ಬೆಳೆಗಳ ಮೇಲೆ ವಿಧಿಸಿದ ಕರ, 'ವನಚರಾಯಿ' ಹುಲ್ಲುಗಾವಲಿನಲ್ಲಿ ದನ ಮೇಯಿಸುವ ಕರ, 'ಕಡಬಾ ಪಟ್ಟಿ' ಮೇವಿನ ಮೇಲಿನ ತೆರಿಗೆ.

ವ್ಯಾಪಾರ ಅಥವಾ ವಾಣಿಜ್ಯ ತೆರಿಗೆಗಳಲ್ಲಿ ಮುಖ್ಯವಾದವು– 'ಮೊಹತರ್ಫಾ' ಅಥವಾ 'ಉದೀಮ ಪಟ್ಟಿ' (ವಾಣಿಜ್ಯ ತೆರಿಗೆ.) 'ಘಸಕಿ ಬಾಜಾರ'. 'ಘಸಕಿ' ಅಂದರೆ ಒಂದು ಮುಷ್ಠಿ. ಮಾರುಕಟ್ಟೆಗೆ ಬರುವ ಎಲ್ಲ ಕಾಳು ಕಡ್ಡಿಯಲ್ಲಿ ಒಂದು ಮುಷ್ಠಿ ಬರುವಷ್ಟು, 'ಬಸಕ್' (ವರ್ತಕರ ಖಾಯಂ ಅಂಗಡಿಗಳ ಮೇಲೆ ವಿಧಿಸಲಾದ ತೆರಿಗೆ), 'ಬಾಜಾರ ಬೈಠಕ್' 'ಜಾತ್ರೆಗಳಲ್ಲಿ ಅಥವಾ ಉತ್ಸವಗಳಲ್ಲಿ ಹಾಕಿದ ಅಂಗಡಿಗಳ ಮೇಲಿನ ತೆರಿಗೆ, 'ಕಾರಕಿ' (ಸಣ್ಣ ವ್ಯಾಪಾರಸ್ಥರ ಮೇಲೆ ಹೇರಲಾದ ತೆರಿಗೆ. 'ಬಚ್‌ಪಾನಿ' (ತೂಕ ಮತ್ತು ಅಳತೆಗಳ ಮೇಲಿನ ವಾರ್ಷಿಕ ಫೀ) ಹಾಗೂ 'ತಾಗ್' ಭಾರವಾದ ವಸ್ತುಗಳನ್ನು ಅಳೆಯಲು ತೆರಬೇಕಾದ ಫೀ.

ಇದರ ಹೊರತಾಗಿ 'ಉಭಾಮಾರ್ಗ' ಅಥವಾ ಮಾರ್ಗ ಸುಂಕ – (ವಸ್ತುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವಾಗ ಹಾದಿಯಲ್ಲಿ ಕೊಡಬೇಕಾದ ಸುಂಕ. 'ಸ್ಥಳಭರೀತ' (ಸ್ಥಳಭರ್ತಿ) ಕೃಷಿ ಮತ್ತು ಕೈಗಾರಿಕಾ ವಸ್ತುಗಳು ತಯಾರಿಸಿದ ಮೇಲೆ ಕೊಡಬೇಕಾದ ಸುಂಕ. ''ಕೋರ ಪಟ್ಟಿ'' (ಸಗಟು ಅಥವಾ

* ಲಕ್ಷ್ಮೀನಗರ, ವಿದ್ಯಾಗಿರಿ, ಧಾರವಾಡ – ೫೮೦ ೦೦೪

ಚಿಲ್ಲರೆ ವ್ಯಾಪಾರದ ಮೇಲೆ ಯಾವುದೇ ವಸ್ತು ಮಾರಾಟವಾದಾಗ ಕೊಡುವ ತೆರಿಗೆ.

ಧಾರ್ಮಿಕ ಶುಲ್ಕಗಳಲ್ಲಿ ಮುಖ್ಯವಾಗಿ 'ದೇವಾದಾಯ' (ದೇವಸ್ಥಾನ) 'ಧರ್ಮಾದಾಯ' (ದಾನಧರ್ಮ) 'ವರ್ಷಾಸನ' (ಬ್ರಾಹ್ಮಣರಿಗೆ ಅಥವಾ ಪಂಡಿತರಿಗೆ ವಾರ್ಷಿಕ ವೇತನ, ಸಂಭಾವನೆ ಇತ್ಯಾದಿ). 'ಲಗ್ನಕಾರಕ' ಅಥವಾ 'ಲಗ್ನಟಿಕ್ಕಾ' ಮದುವೆ ಮೇಲೆ ಹೇರಿದ ಕರ.

**'ಮೊಹತರ್ಫಾ'**-ವಾಣಿಜ್ಯ ತೆರಿಗೆಗಳಲ್ಲಿ 'ಮೊಹತರ್ಫಾ' ಎಂಬ ತೆರಿಗೆ ಪ್ರಮುಖವಾದದ್ದು. 'ಮೊಹತರ್ಫಾ' ಇದು ಅರೇಬಿಕ್ ಪದ. ಇದನ್ನು ಪರ್ಶಿಯನ್, ತೆಲುಗು, ತಮಿಳ್, ಮರಾಠಿ ಹಾಗೂ ಕನ್ನಡ ಭಾಷೆಯಲ್ಲಿ ವಾಣಿಜ್ಯ ತೆರಿಗೆ ಎಂದು ಬಳಸಲಾಗಿದೆ. ಇದಕ್ಕೆ 'ಉದೀಮ ಪಟ್ಟಿ' ಎಂದು ಕೂಡ ಕರೆಯಲಾಗಿದೆ.

ಈ ತೆರಿಗೆಯು ಸಾಮಾನ್ಯವಾಗಿ ವ್ಯಾಪಾರ ಹಾಗೂ ವೃತ್ತಿ ಮೇಲೆ, ಗ್ರಾಮಗಳ ಕುಶಲಕರ್ಮಿಗಳ ಮೇಲೆ ಹಾಗೂ ಅವರ ಸಲಕರಣೆಗಳ ಮೇಲೆ ಕೆಲವೊಮ್ಮೆ ಅವರ ಕಟ್ಟಡಗಳ ಮೇಲೆ (ಮನೆ ಇತ್ಯಾದಿ) ವಿಧಿಸಲಾದ ತೆರಿಗೆ.

ಇದರ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯ ಇದೆ. ಡಾ॥ ಮಾರ್ಷೆಲ್ಲರ ಪ್ರಕಾರ ಇದು ಕೇವಲ ಭೂಬಾಡಿಗೆ ರೂಪದಲ್ಲಿ ಜನರಿಂದ ವಸೂಲು ಮಾಡಿದ ಹಣ. ಆದರೆ ಒಡೆತನದ ಹಕ್ಕುಯಿಲ್ಲದೆ ಉಪಯೋಗಿಸಿದ್ದು. ಈ ಅಭಿಪ್ರಾಯವನ್ನು ಕೆಲವು ವಿದ್ವಾಂಸರು ಒಪ್ಪುವುದಿಲ್ಲ. ಯಾಕೆಂದರೆ ಕೆಲವೊಮ್ಮೆ ಕೇವಲ ತಮ್ಮ ಕಸಬನ್ನು ಪ್ರಾರಂಭಿಸಲು ಅಥವಾ ಮಳಿಗೆ ಕಟ್ಟಲು ಅನುಮತಿ ಪಡೆದ ಉದಾಹರಣೆಗಳಿವೆ. ಕ್ರಮೇಣ ಇತರೆ ಉದಾ : ಕೈಮಗ್ಗ, ಮನೆಕರ, ಅಂಗಡಿಕರ, ಎಣ್ಣೆಕರ ಇತ್ಯಾದಿ ಇದರಲ್ಲಿ ಸೇರ್ಪಡೆಯಾಯಿತು.

ಸಾಮಾನ್ಯವಾಗಿ ಈ 'ಮೊಹತರ್ಫಾ'ವನ್ನು ಕಂತುಗಳಲ್ಲಿ ಸ್ಥಳೀಯ ಅಧಿಕಾರಿಗಳಾದ ಗೌಡಾಪಾಟೀಲ ಹಾಗೂ ಶಾನುಭೋಗ ಕುಲಕರ್ಣಿ ಇವರಿಂದ ವಸೂಲು ಮಾಡುತ್ತಿದ್ದರು. ಇವರಿಗೆ ಅದರ ಸಲುವಾಗಿ ತೆರಿಗೆ ವಿನಾಯತಿ ದೊರಕುತ್ತಿತ್ತು. ಮುಂದೆ ಇವರ ಸಂಬಂಧಿಕರಿಗೆ, ಇವರ ಬಾಡಿಗೆದಾರರಿಗೆ ಕೂಡ 'ಮೊಹತರ್ಫಾ' ದಿಂದ ವಿನಾಯತಿ ನೀಡಲಾಯಿತು. ಉದಾ : ರಾಣೆಬೆನ್ನೂರಿನಲ್ಲಿ[*೬] ೪ ಪಟೇಲರು, ೨ ಕುಲಕರ್ಣಿ ಹಾಗೂ ಒಬ್ಬ ಸೇಠಿ ಇವರು ಅನೇಕ ಮನೆಗಳನ್ನು ಕಟ್ಟಿ ಶ್ರೀಮಂತ ವ್ಯಾಪಾರಸ್ಥರಿಗೆ ಬಾಡಿಗೆಗೆ ನೀಡಿದ್ದರು. ಪಟೇಲರದು ೫೯ ಮನೆಗಳು, ಕುಲಕರ್ಣಿಯವರದು ೭೭ ಹಾಗೂ ಸೇಠಿಯವರದು ೧೪. ಈ ಎಲ್ಲ ೧೫೦ ಮನೆಗಳು ಮೇಲಿನ ಅಧಿಕಾರಿ ವರ್ಗದವರಿಗೆ ಸಂಬಂಧಿಸಿದ್ದರಿಂದ ಈ ಮನೆಗಳ ಮೇಲೆ ಮೊಹತರ್ಫಾ ವಿಧಿಸಲಾಗಿಲ್ಲ. ಮೇಲಿಂದ ಅವರಿಗೆ ಇತರ ಹಕ್ಕುಗಳು ಮತ್ತು ಸೌಲಭ್ಯಗಳನ್ನು ನೀಡಲಾಗಿತ್ತು. ಉದಾ : ಇವರು ಪ್ರತಿ ಎಣ್ಣೆ ಗಾಣದಿಂದ ವರ್ಷಕ್ಕೆ ೧೮ ಸೇರು ಎಣ್ಣೆ ಪಡೆಯುತ್ತಿದ್ದರು.

ಅತೀ ಹೆಚ್ಚಿನ 'ಮೊಹತರ್ಫಾ' ನೀಡುವವರು ಸಾಮಾನ್ಯವಾಗಿ ಬ್ಯಾಂಕಿನ ವ್ಯವಹಾರ ನಡೆಸುವವರೂ, ವ್ಯಾಪಾರಸ್ಥರೂ ಆಗಿದ್ದರು. ಉದಾ : ಹುಬ್ಬಳ್ಳಿಯ[*೭] ಶ್ರೀಮಂತ ವ್ಯಾಪಾರಿ ನಂದ ನಾಯ್ಕ ೧೧೫ ರೂ. ವಾರ್ಷಿಕ ಮೊಹತರ್ಫಾ ನೀಡುತ್ತಿದ್ದನು. ನವಲಗುಂದದ[*೮] ಒಬ್ಬ ಬನಿಯಾ ೨೫೨ ರೂ. ಮೊಹತರ್ಫಾ ನೀಡುತ್ತಿದ್ದು ಅವನು ೧೧ ಅಂಗಡಿ ಮತ್ತು ೩ ಮನೆಗಳನ್ನು ಹೊಂದಿದ್ದ. ಗೋಕಾಕದ ರೇಷ್ಮೆ ವ್ಯಾಪಾರಿ ೬೯ ರೂ. ನೀಡುತ್ತಿದ್ದ.

ಪಟ್ಟಣ ಹಾಗೂ ಗ್ರಾಮಗಳಿಂದ ಕೂಡ 'ಮೊಹತರ್ಫಾ' ವಸೂಲು ಮಾಡಲಾಗುತ್ತಿತ್ತು. ೧೮೧೧[*೧೦] ರಲ್ಲಿ ಚಿಕ್ಕೋಡಿ ಪಟ್ಟಣದಿಂದ ರೂ. ೧೯೭೭-೧೫-೦ 'ಮೊಹತರ್ಫಾ' ಸಂಗ್ರಹಿಸಲಾಯಿತು. ಇದನ್ನು ೩೫೦ ವ್ಯಕ್ತಿಗಳಿಂದ ಬೇರೆ ಬೇರೆ ವೃತ್ತಿ ಅಥವಾ ವರ್ಗದವರಿಂದ ವಸೂಲ ಆದದ್ದು ಇರುತ್ತದೆ.

೧. ಕಿರಾಣಿ ವ್ಯಾಪಾರಸ್ಥರು ಮುಖ್ಯವಾಗಿ ಗುಜರರು ಜೈನರು ಮತ್ತು ಲಿಂಗಾಯತರು.
೨. ಜವಳಿ ವ್ಯಾಪಾರಸ್ಥರು.
೩. ಕಾಯಿಪಲ್ಲೆ ಹಾಗೂ ವೀಳ್ಯದೆಲೆ ಮಾರುವವರು.
೪. ಕಸಬುದಾರರು - ಕಮ್ಮಾರರು, ಗಾಣಿಗರು, ನೀಲಗಾರರು ಹಾಗೂ ಇತರರು.

### ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಪುಣೆ ಪತ್ರಾಗಾರ, ಕರ್ನಾಟಕ ಜಮಾವ, ರೂ. ನಂ. ೪೯-೫೧
*೨. ವಿಲ್ಸನ್ ಎಚ್. ಎಚ್. : *'ಗ್ಲಾಸರಿ ಆಫ್ ಜುಡಿಸಿಯಲ್ ಎಂಡ್ ರೆವೆನ್ಯೂ ಟರಮ್ಸ್'*, ಪು. ೫೦೪
*೩. ವಿಲ್ಸನ್ ಎಚ್. ಎಚ್. ಅದೇ, ಪು. ೪೪೫
*೪. ಅದೇ ಪುಟ. ೫೧೨
*೫. ಅದೇ ಪುಟ. ೨೮೩
*೬. ಕ. ಜ. ರೂ. ನಂ. ೪೯, ೧೭೯೪
*೭. ಕ. ಜ. ರೂ. ನಂ. ೬೫
*೮. ಕ. ಜ. ರೂ. ನಂ. ೬೭
*೯. ಅದೇ
*೧೦. ಅದೇ

ಡಾ॥ ಎಂ. ಜಿ. ಚಂದ್ರಕಾಂತ್ *
ಎಂ. ಜಿ. ನಾಗರಾಜ್ **

# ಕೊಡಗು ಮತ್ತು ಕೆಳದಿ ಅರಸರ ವಂಶಿಕ ಸಂಬಂಧಗಳು

ಹಾಲೇರಿ ಅರಸರು ಕೊಡಗಿಗೆ ಹೊರಗಿನಿಂದ ಬಂದು ಕೊಡಗನ್ನು ಸಮಗ್ರವಾಗಿ ಕಟ್ಟಿದವರು; ಇಕ್ಕೇರಿ ಅರಸರು ಕೆಳದಿಯನ್ನು ಮೊತ್ತವಾಗಿ ರೂಪಿಸಿದವರು, ಹೊರಗಿನಿಂದ ಬಂದು ಕಟ್ಟಿದರು. ಈ ಎರಡೂ ರಾಜವಂಶಗಳು ಕೊಡಗಿಗೆ ಕೆಳದಿಗೆ ಹೊರಗಿನವರೆಂಬದು ಸಾಮಾನ್ಯ ತಿಳುವಳಿಕೆ. ಒಳಗಿನವರೆಂದರೆ ಒಳಗಿನವರು; ಹೊರಗಿನವರೆಂದರೆ, ಹೊರಗಿನವರು. ಈ ದೃಷ್ಟಿಯಿಂದ ಕೊಡಗಿನ ಹಾಲೇರಿ ಅರಸು ಪೂರ್ವ ರಾಜವಂಶ, ಹಾಗು ಕೆಳದಿಯ ಅರಸರ ಮೂಲದ ಬಗ್ಗೆ ಗಮನಬೇಕಾಗುತ್ತದೆ.

ಹಾಲೇರಿಯ ಮೊದಲರಸ ವೀರಒಡೆಯ ಚಂಗಾಳ್ವ ಸಂತತಿಗೆ ಸೇರಿರಬಹುದೆಂದು ರೈಸರು ಊಹಿಸಿದ್ದಾರೆ; ಅವರ ಮಾತುಗಳಿಂತಿವೆ:[*೧]

***A Prince of bidanoor family who may have been related to changalvas in Some way having settled at Haleri...........***

ಕೊಡವ ಭಾಷಾ ಕೃತಿಗಳಲ್ಲಿ 'ಚಂಗಾಳ್ವ ಸಂತತಿಕ್ ಸೇರ್‌ನ ಬಿದನೂರ್ ಮನೆತನ ಒಂದು ಆಯಿಂಜತ್' ಎಂಬ ಮಾತಿದೆ.[*೨] ಅಂದರೆ ಚಂಗಾಳ್ವ ಸಂತತಿಗೆ ಸೇರಿದ ಮನೆತನಗಳಲ್ಲಿ ಬಿದನೂರು ಮನೆತನವೂ ಒಂದಾಗಿತ್ತು ಎಂದಾಗುತ್ತದೆ. ಪಟ್ಟೋಲೆ ಪಳಮೆಯು 'ಈ ವೀರ ಒಡೆಯ (ವೀರರಾಜ) ಪ್ರಾಯಶಃ ಚಂಗಲ್ವರಾಜರ ಸಂತಾನದವನಾಗಿರಬಹುದು' ಎಂದಿದೆ.[*೩]

ಕೊಡಗನ್ನು ಆಳಿದ ಚಂಗಾಳ್ವರನ್ನು ಸದ್ಯಕ್ಕೆ ಗಮನದಲ್ಲಿರುವಂತೆ, ೧೦ನೇ ಶತಮಾನದಿಂದ ಕ್ರಿ. ಶ. ೧೩೦೦ರ ವರೆಗೆ, 'ಮೊದಲ ಚಂಗಾಳ್ವರು' ನಂತರ ಸು. ಕ್ರಿ. ಶ. ೧೫೦೦-೧೬೪೪ರ ವರೆಗೆ 'ನಂತರದ ಚಂಗಾಳ್ವರು' ಎಂದು ಹೆಸರಿಸಲಾಗಿದೆ. ಆದರೆ ಕ್ರಿ. ಶ. ೧೩೦೦ ರಿಂದ ಕ್ರಿ. ಶ. ೧೪೫೦ರ ವರೆಗಿನ ಅವಧಿಯಲ್ಲಿ ಕೊಡಗಿನ ದಕ್ಷಿಣಭಾಗದ ನಾಗರಹೊಳೆಯ ಸುತ್ತಮುತ್ತ ಹಾಗೂ ನಂಜರಾಯಪಟ್ಟಣ ಪ್ರದೇಶದ ಹೊಳೆಸಾಲು ಹಳ್ಳಿಗಳಲ್ಲಿ ಚಂಗಾಳ್ವ ಶಾಖೆಯವರು ಇದ್ದುದು ಕಾಣಬರುತ್ತದೆ. ಇದಕ್ಕೆ ಸಾಹಿತ್ಯ ಮೂಲಗಳೂ ಸೂಚನೆ ನೀಡುತ್ತವೆ. ಈ ಅವಧಿಯ ಚಂಗಾಳ್ವರನ್ನು ಪೂರ್ವಚಂಗಾಳ್ವ ವಂಶಿಕ 'ಮಧ್ಯ ಚಂಗಾಳ್ವ'ರೆಂದು ಕರೆಯಬಹುದು. ಇವರ ಕಾರಣವೇ ಕೊಡಗು-ಕೆಳದಿಯ ರಾಜವಂಶಿಕ ಸಂಬಂಧಗಳು ಪೂರ್ವಾನ್ವಯವಾಗಿ ಕಾಣಬರುತ್ತದೆ ಎನ್ನ ಬಹುದು.

ಕ್ರಿ. ಶ. ೧೦೦೧-೦೪ರಲ್ಲಿ ಚೋಳರು ಗಂಗರನ್ನು ಕಾವೇರಿ ದಡದ ಪನಸೋಗೆಯಲ್ಲಿ ಸೋಲಿಸಿದ ಸಂದರ್ಭವಾಗಿ ಕೊಡಗೂ ಚೋಳರ ಅಂಕೆಗೆ ಬಂದಿತೇನೋ ಸರಿ. ಆ ಸಮಯದಲ್ಲಿ ಕೊಡಗನ್ನು ಆಳುತ್ತಿದ್ದವ ನಾಲ್ವಡಿರಾಚಮಲ್ಲನ ತಮ್ಮ ಪೆಗ್ಗೂರು ಶಾಸನೋಕ್ತ ರಕ್ಕಸ ಗಂಗ[*೪] ಬಹುಶಃ ಈ ಯುದ್ಧದಲ್ಲಿ ಸೋತವರ ಪೈಕಿ ಅವನಿರಬೇಕು. ಚಂಗಾಳ್ವರು ಗಂಗರ ಮಾಂಡಲಿಕರಾಗಿ ಕೊಡಗಿನ ಭಾಗಗಳನ್ನು ಆಳುತ್ತಿದ್ದರು. ಗಂಗರು ಸೋತಾಗ, ಚೋಳರನ್ನು ಎದುರಿಸಿದ ಚಂಗಾಳ್ವರೂ ಪನಸೋಗೆ ಯುದ್ಧದಲ್ಲಿ ಸೋತು ಚೋಳರ ಮಾಂಡಲಿಕರಾದರು. ಆಗಲೇ ಚೋಳರಿಗೆ ನೆರವಾಗಿದ್ದ ಕಾರಣ ಮಾಂಡಲಿಕರಾಗಿ ಮಾಲವ್ವಿಯಲ್ಲಿ ಕೊಂಗಾಳ್ವರು ಅಲ್ಲಿ ಪ್ರತಿಷ್ಠಾಪನೆಗೊಂಡರು.[*೫] ಆದರೆ ಅಲ್ಲಿಂದ ಮುಂದೆ ಚೋಳರ ನೇರ ಆಳ್ವಿಕೆಯ ಯಾವ ಶಾಸನಗಳು ಕೊಡಗಿನಲ್ಲಿ ಕಾಣಬರುವುದಿಲ್ಲ. ಚಂಗಾಳ್ವ ಹಾಗೂ ಕೊಂಗಾಳ್ವ ಅರಸರಲ್ಲಿ ಕ್ರಿ. ಶ. ೧೧೭೫ರ ವರೆಗೆ ಹೆಸರಿನಲ್ಲಿ 'ಚೋಳ' ವಿಶೇಷಣ ಮಾತ್ರ ಉಳಿದುಕೊಂಡು ಬಂದಿತಷ್ಟೆ.

ಚಂಗಾಳ್ವರು ಚಂದ್ರವಂಶದವರು, ಯಾದವರು, ಎಂದು ಹೇಳಿಕೊಳ್ಳುತ್ತಿದ್ದರು; ಮೂಲಪುರುಷನ ಹೆಸರು 'ಚಂಗಾಳ್ವ'ನೆಂದಿದ್ದುದರಿಂದ ಚೆಂಗಾಳ್ವರೆಂಬ ಹೆಸರು ಬಂದಿತು. ಮೂಲಪುರುಷ ಚೆಂಗಾಳ್ವನ ರಾಜಧಾನಿ ದ್ವಾರಾವತಿ. ಈ ಊರು ಯಾವ ನೆಲೆಯದು

* ೨೨೧, ೭೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦
** ೨೨೧, ೭೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು ೫೬೦ ೦೧೦

ಎಂದು ನಿರ್ದಿಷ್ಟವಾಗಿ ತಿಳಿಯದೆಂದೂ ಹೇಳಲಾಗಿದೆ. ಹತ್ತನೆ ಶತಮಾನದಿಂದ ಆಳಿದ ಇವರ ಮುಖ್ಯರಾಜ್ಯ ಹುಣಸೂರು, ಪಿರಿಯಾಪಟ್ಟಣ ತಾಲೂಕು ಪ್ರದೇಶವಾಗಿದ್ದು, ಅದು ಚಂಗನಾಡೆ ನಿಸಿತ್ತು. ಹತ್ತನೆ ಶತಮಾನದ ಕೊನೆಯಲ್ಲಿ ಚರಿತ್ರೆಯಿಂದ ತಿಳಿದುಬರುವಂತೆ 'ನನ್ನಿ ಚಂಗಾಳ್ವ' ಇದ್ದು ಅದು ಮೊದಲಿಗೆ ತಿಳಿದು ಬರುವ ಚಂಗಾಳ್ವರ ಪೈಕಿಯ ನಿಶ್ಚಿತ ಹೆಸರಾಗಿದೆ. ಚೋಳರಿಗೆ ಮಾಂಡಲಿಕನಾಗಿ ಕಂಡುಬರುವ ಮೊದಲ ಹೆಸರು ಕ್ರಿ. ಶ. ೧೦೩೪ರ ನನ್ನಿ ಚಂಗಾಳ್ವ ರಾಜೇಂದ್ರಚೋಳ ಎಂದೆಲ್ಲ ಹೇಳಿದೆ.*[೬] ಕ್ರಿ. ಶ. ೧೦೩೪ರ ವೇಳೆಗೆ ನಂದಿದೇವ ಚಂಗಾಳ್ವನು ಬೆಟ್ಟದಪುರದಿಂದ ಪಾಲ್ಪರೆಗೆ ಬಂದು ಪೆದ್ದೂರೆಗರೆ ರಾಜ್ಯವನ್ನು ಅಂದರೆ ಲಕ್ಷ್ಮಣ ತೀರ್ಥ ಸುತ್ತಮುತ್ತಲ ಪ್ರದೇಶ(ಕೊಡಗಿನಲ್ಲಿ)ದಲ್ಲಿ ಸ್ಥಾಪಿಸಿದ. ಈ ಚಂಗಾಳ್ವರ ಮೂಲಪುರುಷ ದ್ವಾರಾವತಿಯಲ್ಲಿದ್ದು ಬಿಜ್ಜಳನನ್ನು ಸೋಲಿಸಿ ಆತನ ಬಿರುದುಗಳನ್ನು ಕಿತ್ತುಕೊಂಡನೆಂದೂ ಹೇಳಲಾಗಿದೆ.*[೭] ೧೧ನೆಯ ಶತಮಾನಗಳಲ್ಲಿ ವಿಕ್ರಮರಾಯ ಚಂಗಾಳ್ವನು ದ್ವಾರಕೆಯಿಂದ ಬಂದು ಬೆಟ್ಟದತುಂಗದಲ್ಲಿ ನೆಲೆಸಿ ನಂತರ ಬೆಟ್ಟದಪುರವನ್ನು ಕೇಂದ್ರಮಾಡಿಕೊಂಡು ಕೋಟೆಕಟ್ಟಿ ಆಳುತ್ತಿದ್ದ; ಇವನ ಮಗ **ಚಂಗಲರಾಯ** ಈ ಬೆಟ್ಟವನ್ನು ಸಾಂಸ್ಕೃತಿಕ ಮಹತ್ವದ ಕ್ಷೇತ್ರಮಾಡಿ ಆಳಿದ. ಚಂಗಾಳ್ವರು ೭ನೇ ಶತಮಾನದಲ್ಲಿ ಚಾಲುಕ್ಯರ ಅಧೀನರಾಗಿದ್ದು ಆಳುಪುರ ಶಾಖೆಯವ ರಿರಬಹುದು ಎಂಬ ಊಹೆಯೂ ಇದೆ; ಇವರು ಮೂಲತಃ ಒಕ್ಕಲಿಗರು ಎಂಬ ಊಹೆಯೂ ಜೊತೆ ಸೇರಿದೆ.*[೮] 'ಚಂಗನಡಗೋವ' ಶಬ್ದವನ್ನು ಹೊಯ್ಸಳ ವಿನಯಾದಿತ್ಯನ ಸಂಬಂಧವಾಗಿ ಸೂಚಿಸಿ, ಅದು ಹೊಯ್ಸಳ ಹಾಗು ಚಂಗಾಳ್ವ ರಕ್ತಸಂಬಂಧದ್ದೆಂದು ಅಭಿಪ್ರಾಯ ಪಟ್ಟಿರುವುದೂ ಇದೆ.

ಚೋಳರು ಬರುವ ಮುನ್ನ 'ಮೊದಲ ಚಂಗಾಳ್ವರು' ಗಂಗರ ಮಾಂಡಲೀಕರಾಗಿದ್ದರೆಂದಿರುವುದರಿಂದ 'ವಿಕ್ರಮರಾಯ ಚಂಗಾಳ್ವ'ನ ಮುನ್ನವೂ ಚಂಗಾಳ್ವವಂಶ ಶಾಖೆಯೊಂದಿಲ್ಲಿ ದ್ದಿರಬೇಕು. ದ್ವಾರಾವತಿ-ದ್ವಾರಕೆ ಕತೆ, ವಂಶಿಕ ಹೆಚ್ಚಳ ಹೇಳಿಕೊಳ್ಳಲು ರೂಪು ಗೊಂಡ ಕತೆ ಇರಬೇಕು, 'ಚಂಗಲರಾಯ' ಸಹಜವಾಗಿ ವಂಶಕ್ಕೆ ಒಪ್ಪುವ ಹೆಸರೆ. ಹೊಯ್ಸಳ ವಿನಯಾದಿತ್ಯನ ಬಹುಮುಂಚಿನ ಕಾಲಕ್ಕೆ ಚೋಳರ ಅಧೀನದಲ್ಲಿ ಚಂಗಾಳ್ವರಿದ್ದುದಿದೆ; ಕ್ರಿ.ಶ.೯೭೨ರ ಸಮಯದಲ್ಲಿ ಗಂಗರ ಮಾಂಡಲಿಕರಾಗಿದ್ದ ಸಂದರ್ಭವಿದೆ. ಹೀಗಾಗಿ ಚಂಗಾಳ್ವರನ್ನು ಹೊಯ್ಸಳ ವಂಶದೊಡನೆ ತಾರ್ಕಣೆಗೊಳಿಸುವುದು ಕಷ್ಟ.*[೧೦] ಹೊಯ್ಸಳರ ವಿರುದ್ಧ ಇವರ ಕಾದಾಟಗಳಿಗೆ ಶಾಸನಗಳ ಸಾಕ್ಷಿಯೂ ಇದೆ. ಇನ್ನು ಚಂಗಾಳ್ವರು ಚಾಲುಕ್ಯರ ಮಾಂಡಲೀಕರು, ಒಕ್ಕಲಿಗರು ಎಂಬುದಕ್ಕೆ ತಾರ್ಕಣೆಗಳು ಮತ್ತೂ ಅಗತ್ಯವಿದೆ. ಕೊಡಗಿನ ಸಂದರ್ಭಕ್ಕೆ ಅನ್ಯ ನಿಕಷಗಳೂ ಅಗತ್ಯವೆ. ಕ್ರಿ.ಶ.೧೦೩೪ರಲ್ಲಿ ನನ್ನಿ ಚಂಗಾಳ್ವನ ಪ್ರಸ್ತಾಪ ಶಾಸನೋಕ್ತವಿರಲು, ಕ್ರಿ. ಶ. ೧೦೯೧ರರ ಕಿರಂಗೂರು ಶಾಸನದಲ್ಲಿ 'ಚಂಗಾಳ್ವದೇವ' ಎಂಬ ಹೆಸರಿರುವುದು. ಕ್ರಿ. ಶ. ೧೦೯೭ರ ಪಿರಿಯಾಪಟ್ಟಣದ ಶಾಸನದಲ್ಲಿ ಕುಲೋತ್ತುಂಗ ಚೋಳ ಒಡೆಯಾದಿತ್ಯ (ಉದಯಾದಿತ್ಯ!), ಕ್ರಿ.ಶ. ೧೦೯೦ರಲ್ಲಿ ಮಾದೇವ ಚಂಗಾಳ್ವ ಎಂಬ ಅರಸರಿದ್ದುದು, ಇವೆಲ್ಲ ಇವರು ಯಾದವ ವಂಶದ ಮೂಲವನ್ನು ಆರೋಪಿಸಿಕೊಂಡವರೆನಿಸಿದರೂ ಸೂರ್ಯವಂಶದ ಉಪಾಧಿಗಳನ್ನು ಬಳಸಿಕೊಂಡು ಜೈನರಾಗಿ ಶೈವರಾಗಿ ನಂತರ ವೀರಶೈವವನ್ನನುಸರಿಸಿದರೆಂಬುದು ಸೂಕ್ತವಾಗುತ್ತದೆ. ಇದು 'ಮೊದಲ ಚಂಗಾಳ್ವರ' ಕುರಿತ ಮಾತುಗಳಾಯಿತು. ಕ್ರಿ. ಶ. ೧೦೩೪ರಲ್ಲಿ ಕೊಡಗಿನ (ನಂದಿ ದೇವಚಂಗಾಳ್ವ) ಚಂಗಾಳ್ವರು ಪಾಲ್ಪರೆಯ ಬಳಿ ಪೆದ್ದೂರೆಗರೆ ರಾಜ್ಯದಲ್ಲಿ ಆಳಿಕೆ ಮುಂದರಿಸಿ ದರೂ*[೧೧] ಕ್ರಿ. ಶ. ೧೧೭೧ರ ಮುನ್ನ ಯಾವುದೋ ಅವಧಿಯಲ್ಲಿ ಹುಣಸೂರಿಗೆ ಮರಳಿ ಬಂದು ೧೧೭೧-೭೫ರ ಅವಧಿಯಲ್ಲಿ ಮತ್ತೆ ಪಾಲ್ಪರೆಯನ್ನು ರಾಜಧಾನಿ ಮಾಡಿ ಕೊಂಡಿರುವಂತಿದೆ. ಕ್ರಿ. ಶ. ೧೧೪೫ರ ಹೊಯ್ಸಳ ನರಸಿಂಹನಿಂದ ಶಿವಮೊಗ್ಗ ಜಿಲ್ಲೆಯ ಯುದ್ಧದಲ್ಲಿ ಸೋತನಂತರ ಕೊಡಗಿನ ತೀರ ದಕ್ಷಿಣಕ್ಕೆ ಆಶ್ರಯಕ್ಕೆ ಸಾಗಿದ ಚಂಗಾಳ್ವರ ವಂಶಿಕರಾಗಿ, ಬಾಡಗದ ನಂದಿದೇವ, ಕುರ್ಚಿಯ ಉದಯಾದಿತ್ಯದೇವರು- ಕ್ರಿ. ಶ. ೧೧೭೪ರಲ್ಲಿ ಹೊಯ್ಸಳರ ವಿರುದ್ಧ ಪಾಲ್ಪರೆಯ ಯುದ್ಧದಲ್ಲಿ ಚಂಗಾಳ್ವ ಪೆಮ್ಮವೀರಪ್ಪನ ನೆರವಿಗೆ ಬಂದವರಾಗಿರಬೇಕು. ತೀರ ದಕ್ಷಿಣಕ್ಕೆ ಸಾಗಿದ ಈ ಚಂಗಾಳ್ವರು ೧೧ನೇ ಶತಮಾನದಲ್ಲಿ ಪಾಲ್ಪರೆ ಸುತ್ತಮುತ್ತ ಬಂದು ಹರಡಿ ಕೊಂಡಿದ್ದ ಚಂಗಾಳ್ವ ವಂಶಿಕರಾಗಿದ್ದು ಆಗಲೂ ಹೊಯ್ಸಳ ಪರಾಜಿತರಾಗಿದ್ದವರೆ. ಕ್ರಿ. ಶ. ೧೨೪೫ರ ಸುಮಾರಿಗೆ ಪಾಲ್ಪರೆ ಯಲ್ಲಿದ್ದು ಒಟ್ಟಿಗೆ ರಾಜ್ಯವಾಳುತ್ತಿದ್ದ ಚಂಗಾಳ್ವರ ಬೊಪ್ಪದೇವ, ಸೋಮದೇವರುಗಳು ಕ್ರಿ. ಶ.೧೨೫೨ರಲ್ಲಿ ರಾಮನಾಥಪುರದ ಬಳಿ ಮೈಲಾತಪುರದಲ್ಲಿ ಹೊಯ್ಸಳ ಸೋಮೇಶ್ವರನನ್ನು ಸಂದರ್ಶಿಸಿ ಆದೇಶಿತರಾಗಿ ನಂಜರಾಯ ಪಟ್ಟಣದ ನೆರೆ ಪ್ರದೇಶಗಳೆಲ್ಲ ಸೇರಿದ ಕೊಡಗು ಶ್ರೀರಂಗಪಟ್ಟಣವನ್ನು ರಾಜಧಾನಿ ಮಾಡಿ ಕೊಂಡರು. ಆದರೂ ಸೋಮದೇವ ಪಾಲ್ಪರೆಗೆ ಹೆಚ್ಚು ಹೊಂದಿ ಕೊಂಡಂತೆ ಕಾಣುತ್ತದೆ.

೧೩ನೇ ಶತಮಾನಾಂತ್ಯದಲ್ಲಿ ಮಲ್ಲಿದೇವ, ಹರಿಹರ ದೇವರು ಕೊಡಗನ್ನು ಆಳುತ್ತಿದ್ದ ಬಗ್ಗೆ ಪ್ರಕಟಿತ ಹಾಗು ಅಪ್ರಕಟಿತ ನಂಜರಾಯ ಪಟ್ಟಣ ಶಾಸನಗಳಿಂದ ವಿದಿತ. ಚಂಗಾಳ್ವರು ಯಾದವ ಮೂಲದೇವರಾದ ಲಕ್ಷ್ಮಿಮೂರ್ತಿಯನ್ನು ಪೆನ್ನೆಕಡಂಗ ಎಂಬಲ್ಲಿ ಸ್ಥಾಪಿಸಿದರೆಂಬ ಮಾತಿದೆ. ಆದರೆ ಆ ಪ್ರಭಾವ ಆ ಭಾಗದಲ್ಲಿ ಇಂದಿನವರೆಗೂ ಹರಿದು ಬಂದಂತೆ ಕಾಣುವುದಿಲ್ಲ. ಚಂಗಾಳ್ವರು ೧೪ನೆಯ ಶತಮಾನದ ಆದಿಯಲ್ಲಿ ಮಹಮದೀಯ ದಾಳಿಯಲ್ಲಿ ಕೆಲಸಮಯ ಅಜ್ಞಾತವಾದರೆಂದೆನ್ನಲಾಗಿದೆ. ಬಹುಶಃ ಆ ಸಮಯದಲ್ಲಿಯೆ ನಾಗರಹೊಳೆ, ಕೊಡಗು ಶ್ರೀರಂಗಪಟ್ಟಣದ

ಹೊಳೆಸಾಲು ಅರಣ್ಯದ ಹಳ್ಳಿಗಳಲ್ಲಿ ಅಜ್ಞಾತವಾಗಿದ್ದಿರಬೇಕು. ಸುಮಾರು ಕ್ರಿ. ಶ. ೧೩೫೦ರ ವೇಳೆಗೆ ಮತ್ತೆ ತಲೆ ಎತ್ತಲಾರಂಭಿಸಿರಬೇಕು. ಕಾರಣ ಅವರ ಸಚಿವ ವಂಶದ ಅಸ್ತಿತ್ವವೂ ಆ ಬಗೆಗೆ ಪರೋಕ್ಷ ಪುರಾವೆ ಎನಿಸುತ್ತದೆ. ಹಿರೇಮಳಲಿ ಶಾಸನದ ರೀತ್ಯಾ (ಕ್ರಿ. ಶ. ೧೫೦೩-೦೪) 'ನಂತರದ ಚಂಗಾಳ್ವರ' ವಂಶವು, ಚಂಗಾಳ್ವ ಹೆಸರಿನ ಅರಸನಿಂದ ಮತ್ತೆ ಆರಂಭವಾಗಿರುವುದು ಕಂಡುಬರುತ್ತದೆ.*೧೨ ಅವನ ನಂತರದ 'ನಾಗರಾಜ' ಕೊಡಗು ಶ್ರೀರಂಗಪಟ್ಟಣವನ್ನು ಆಳಿದವ; ನವದಂಣಾಯಕರೊಡನೆ ಕಾಳಗ ಕೊಟ್ಟವ.*೧೩ ನಾಗರಹೊಳೆಯನ್ನು ಆಳುತ್ತಿದ್ದವ. 'ನಂತರದ ಚಂಗಾಳ್ವವಂಶದ' ನಂಜರಾಜನು ನಂಜರಾಯ ಪಟ್ಟಣವನ್ನು ಕ್ರಿ. ಶ. ೧೫೦೦ರ ಸುಮಾರಿನಲ್ಲಿ ಸ್ಥಾಪನೆಮಾಡಿ ರಾಜ್ಯವಾಳುವ ಕಾಲ ಹಾಗೂ ಇಕ್ಕೇರಿಯಲ್ಲಿ ಚಾಡೇಗೌಡ (ಚೌಡಪ್ಪನಾಯಕ) ರಾಜ್ಯಸ್ಥಾಪನೆ ಮಾಡುವ ಕಾಲವೂ ಹೆಚ್ಚುಕಡಿಮೆ ಸಮಾಂತರ ಸಮಯವೆ ಆಗಿರುವುದು ಕಾಣಬರುತ್ತದೆ.

'ನಂತರದ ಚಂಗಾಳ್ವರ' ಮುನ್ನ ಕ್ರಿ.ಶ.೧೩೦೦-೧೩೭೫ರ ಅವಧಿಯವರನ್ನು ಪೂರ್ವಚಂಗಾಳ್ವ ವಂಶಿಕ 'ಮಧ್ಯಂತರ(ಮಧ್ಯ) ಚಂಗಾಳ್ವ'ರೆಂದೂ, ಈ ಹಿನ್ನೆಲೆಗಳಲ್ಲಿ ಕರೆಯಬೇಕಾಗುತ್ತದೆ. ನಂತರದ ಚಂಗಾಳ್ವರ 'ಚಂಗಾಳ್ವ' ಅರಸನಿಂದ ಕ್ರಿ. ಶ. ೧೫೦೦ರ ನಂಜರಾಜನವರೆಗೆ ನಡುವೆ ಮೂರು ತಲೆಮಾರುಗಳಿವೆ. (ನಾಗರಾಜ-ರಂಗರಾಜ-ಪಿರ್ಯಣ್ಣ) ಹಾಗೆಯೆ (ಸದಾಶಿವ ಮುದ್ರಾಂಕಿತ ಶಿವಗೋತ್ರೋತ್ಪನ್ನರ್, ಆದ ದೇವಗೌಣ್ಡರ ಪ್ರಪೌತ್ರರಾದ ಗೋಪಗೌಣ್ಡರ ಪೌತ್ರರ್ ಆದ ಬಸಗೌಣ್ಡರ ಪುತ್ರರ್ ಆದ ಚವುಡ ಗೌಣ್ಡ ಭದ್ರಗೌಣ್ಡರ ಸುಪುತ್ರ ಸದಾಶಿವ ನಾಯಕರು) ಇಕ್ಕೇರಿ ವಂಶದಲ್ಲಿ 'ಸದಾಶಿವ ಮುದ್ರಾಂಕಿತ ಶಿವಗೋತ್ರೋತ್ಪನ್ನ ದೇವೇಗೌಡ-ಗೋಪಗೌಡ-ಬಸವಗೌಡ'ರು ಅನುಕ್ರಮ ಪುತ್ರ ಸಂತತಿಯವರಾಗಿ ಕಾಣಬರುತ್ತಾರೆ. ಹೀಗೆ ಬಸವಗೌಡನ ಮಗ ಚೌಡಗೌಡ ಎಂಬುದು ಕ್ರಿ. ಶ. ೧೫೦೯ರ ಶಾಸನೋಕ್ತ*೧೪ ಸಂಗತಿ. ರಾಜ್ಯಸ್ಥಾಪಕ ಈ ಕೆಳದಿ ಚೌಡೇಗೌಡನು, ವೀರಶೈವನೆಂದೂ ಶಾಸನದಲ್ಲಿಯ ಗೋತ್ರಸೂಚನೆಯಿಂದಲೂ ತಿಳಿದು ಬರುತ್ತದೆ. (ಶಾಸನವಂತು ಕೃತಕವೆನಿಸದು.) ಇಕ್ಕೇರಿ ಅರಸರ ಕುರಿತು ಹೇಳುವಾಗ ಸದಾಶಿವನಾಯಕನು (ಚೌಡಪ್ಪ ನಾಯಕನ ಮಗ) ಮಲವರಕುಲದಲಿಂಗವಂತನು, ಎಂದಿದೆ. ಮೇಲಿನ ಹಿನ್ನೆಲೆ ತಿಳಿಯದೆ ಮಲವರ ಕುಲದ ಬಗ್ಗೆ ಸರಿಯಾಗಿ ತಿಳಿಯದೆ, ಬುಕಾನನ್ನನು ಕೀಳುಕುಲದವ ರೆಂದು ಬಿಟ್ಟಿರುವುದು ಇಲ್ಲಿನ ಸಾಂಸ್ಕೃತಿಕ ಜಾಯಮಾನದ ಅಪೂರ್ಣಗ್ರಹಿಕೆ ಅವನಿಗಿದ್ದುದಾಗಿದೆ ಎನ್ನಬೇಕು. ಅವನ ಬರೆಹವನ್ನು ಅನುವಾದಿಸುವಲ್ಲಿ ವೆಂಕಟ ರಂಗೋಕಟ್ಟೆಯವರು ಈ ತಪ್ಪನ್ನು ಸರಿಪಡಿಸಿ ಮಲ್ಲವರು (ಮಲವರು) ಒಕ್ಕಲತನ ಮಾಡುತ್ತಿದ್ದರೂ, ಉತ್ತಮ ಕುಲದ ಲಿಂಗವಂತರೆಂದು, ತಿಳಿಸಿದ್ದಾರೆ.*೧೫ ಅದು ಅವರು ಸ್ಥಳೀಯ ಜಾಯಾಮಾನವನ್ನು ಕಂಡವರಾಗಿ ಹೇಳಿರುವುದು ಸಹಜವಾಗಿದೆ.

ಮಲೆಪರು, ಮಲವರು, ಮಲ್ಲವರು ಶಬ್ದಗಳು ಮಲೆಪ, ಮಲವ, ಮಲಹ ಎಂಬ ಪದಗಳ ಸಂವಾದಿ ಶಬ್ದಗಳೆ. ಅದಾಗಿ ಬೆಟ್ಟಸೀಮೆಯ ಅರಸರು ಎಂಬ ಅರ್ಥ ಒದಗುತ್ತದೆ.*೧೬ ವಾಸ್ತವ್ಯದ, ಅಧಿಕಾರಸೂಚಿ ನೆಲೆಯಿಂದ ಅದು ವಂಶನಾಮವಾಗಿ ರೂಪುಗೊಂಡದ್ದೂ ಆಗಿದೆ. ಕೊಡಗಿನ ಪೆಗ್ಗೂರು ಶಾಸನದಲ್ಲಿ (ಕ್ರಿ. ಶ. ೯೭೮) ಕಾವ್‌ನ್ನಾರ್ಲ್ವಮ್ಮಾರ್ಲೆಪರು ಎಂದಿರುವುದು*೧೭ ರಕ್ಕಸಗಂಗನ ಕಾಲದಲ್ಲಿ ಚಂಗಾಳ್ವರ ಸಾಮಂತಿಕೆ ಹಾಗೂ ಅವರಿಗಿದ್ದ ಆ ಕಾಲದ ಸಂಬೋಧನೆಯ ಲಕ್ಷಣವನ್ನೂ ಸೂಚಿಸುವಂತಿದೆ.ಅವರ ದಕ್ಷಿಣ ಕೊಡಗಿನ ಅಸ್ತಿತ್ವದ ಸೂಚನೆಯೂ ಆಗಿರುವಂತಿದೆ. ಆದರೆ ಆ ಹೊತ್ತಿಗೆ 'ಚಂಗನಾಡು' ಎಂಬ ಹೆಸರು ಅಸ್ತಿತ್ವದಲ್ಲಿದ್ದುದು (ಕ್ರಿ. ಶ. ೯೭೨ರ ಹಾಸನಜಿಲ್ಲೆ ತೊಳಲು ಶಾಸನ, ಬೇಲೂರು ೫೪೦) ಬಹುಶಃ ೧೦ನೇ ಶತಮಾನದ ವಿಕ್ರಮರಾಯನ ಮಗ ಚಂಗಲರಾಯನಿಂದ ಚಾಲ್ತಿಗೊಂಡಿದ್ದಿರಬೇಕು. ಕೊಡಗಿನ ಭಾಗದಲ್ಲಿದ್ದ ಚಂಗಾಳ್ವರನ್ನು ಮಲೆಪರು ಎಂದು ಸ್ಥಾನ ನಿರ್ದೇಶನಕ್ಕಾಗಿ ಪರ್ಯಾಯವಾಗಿ ಕರೆದಿರಬೇಕು. ಚಂಗಾಳ್ವರಲ್ಲಿ ಜೈನ ವೈದಿಕ, ವೀರಶೈವ ಧರ್ಮವನ್ನು ಪ್ರಾದೇಶಿಕವಾಗಿ ಅನುಸರಿಸಿ ಇದ್ದ ಬಗ್ಗೆ ಸೂಚನೆಗಳು ದೊರೆಯುತ್ತವೆ. ಕೊಡಗಿನ ಭಾಗದವರು ಮೊದಲಿಗೆ ಜೈನರಿದ್ದು ೧೧ನೇ ಶತಮಾನದಲ್ಲಿ ವೀರಶೈವರಾದವರು. ಚಂಗಾಳ್ವ ಅರಸನೊಬ್ಬನೊಡನೆ ನೀರಗುಂದದ ಮಲ್ಲನು ಕಾದು ಚಂಗಾಳ್ವನ ಆನೆಯನ್ನಿರಿದು, ಕೊಡೆಯನ್ನು ಹಿಡಿದ ಸಂಗತಿಯನ್ನು ಕಡೂರಿನ ಕ್ರಿ. ಶ. ೧೨೦೩ರ ಶಾಸನವು ತಿಳಿಸುತ್ತದೆ.*೧೮ ಅಲ್ಲದೆ ಅರಕಲಗೂಡು ಚಿಕ್ಕಮಗಳೂರು, ಸೊರಬದವರೆಗೂ ಅವರು ಹರಡಿಕೊಂಡಿದ್ದ ಸಂಗತಿ ಇದೆ.

ಕ್ರಿ. ಶ. ೧೧೪೫ರ ಸುಮಾರಿನಲ್ಲಿ ಒಂದನೇ ನರಸಿಂಹನು ಶಿವಮೊಗ್ಗ ಜಿಲ್ಲೆಯಲ್ಲಿನ ಯುದ್ಧವೊಂದರಲ್ಲಿ ಚಂಗಾಳ್ವನನ್ನು ಕೊಂದು ಅವನ ರಾಜ್ಯವನ್ನು ವಶಮಾಡಿಕೊಂಡನೆನ್ನಲಾಗಿದೆ. ಆಗ ಚಂಗಾಳ್ವ ವಂಶಿಕರು ಕೊಡಗಿನ ತೀರ ದಕ್ಷಿಣ ಭಾಗಗಳಿಗೆ ಆಶ್ರಯಕ್ಕಾಗಿ ಸಾಗಿದರು. [E.C. IX Rice Edn), Bangalore Dt. 1905, P. 19 and E. C. IV,Ng. 76] ಅಂದರೆ ಶಿವಮೊಗ್ಗ ಜಿಲ್ಲೆಯಲ್ಲಿಯೂ ಬಹುಶಃ ಕೊಡಗಿನ ಚಂಗಾಳ್ವರ ವಂಶಿಕರು ತುಂಡುನಾಯಕರಾಗಿದ್ದಿರಬಹುದು. ಪರಸ್ಪರ ವಲಸೆ ರಾಜಕೀಯ ಕಾರಣಗಳಿಂದ ನಡೆಯುತ್ತಿದ್ದಿರಬೇಕು. ಈ ಹಿನ್ನೆಲೆಗಳಲ್ಲಿ ಕೆಳದಿ ಪ್ರದೇಶಕ್ಕೆ ಕೊಡಗಿನಂತಹ ಮಲೆಸೀಮೆಯಿಂದ ಅಂದರೆ ಬೆಟ್ಟ ಸೀಮೆಯಿಂದ ಯುದ್ಧ, ವಲಸೆ ಇತ್ಯಾದಿ ಕಾರಣಗಳಿಂದ ಹೋದವರಿಗೆ ಮಲಪರು=ಮಲವರು= ಮಲ್ಲವರು ಎಂದು ಕರೆದಿರಬೇಕು. ಹಾಗೆ ಕ್ರಿ. ಶ. ಸು. ೧೪೫೦ರ ಸುಮಾರಿಗೆ ಇಕ್ಕೇರಿ ಸುತ್ತಮುತ್ತ ಇದ್ದ ವಂಶಿಕ ಬಂಧುಗಳೊಡನೆ ಸೇರಲೇನೋ ಕೊಡಗಿನ ಚಂಗಾಳ್ವ ಶಾಖೆ ಸಾಗಿ ಹೋಗಿ ಆ ಹೆಸರು ಪಡೆದಂತಿದೆ.

ಚಂಗಾಳ್ವರಲ್ಲಿ ಪಾಲ್ಪರೆಯಲ್ಲಿ ಸೋಮದೇವನ ವಂಶೀಕರೂ, ಕೊಡಗು ಶ್ರೀರಂಗಪಟ್ಟಣದಲ್ಲಿ ಬೊಪ್ಪದೇವನ ವಂಶೀಕರೂ ಆಳುತ್ತಿದ್ದು, ಬಹುಶಃ ಬೊಪ್ಪದೇವನ ವಂಶಿಕರು ಪಾಲ್ಪರೆಯನ್ನು ತಮ್ಮ ಅಧೀನಕ್ಕೆಳಸಿಕೊಳ್ಳಲಾಶಿಸಿದಾಗ ಸಂಘರ್ಷದ ಬೀಜ ಬಿದ್ದು ಮೊಳಕೆಯೊಡೆದಿರಬೇಕು. ಕ್ರಿ. ಶ. ೧೪೫೦ರ ವೇಳೆಗೆ ನಾಗರಾಜನ ಮಗ ರಂಗರಾಜನು ಹೊಸ ರಂಗಪಟ್ಟಣ (ರಂಗ ಸಮುದ್ರ)ವನ್ನು ಕಟ್ಟಿದಾಗ ಸಂಘರ್ಷ ಮತ್ತಷ್ಟು ಬೆಳೆದು ಪೂರ್ವ ಚಂಗಾಳ್ವರ ಶಾಖೆಯಾಗಿಯೂ ಅಸ್ತಿತ್ವದಲ್ಲಿದ್ದ 'ಮಧ್ಯಂತರ (ಮಧ್ಯ) ಚಂಗಾಳ್ವರ' ಸೋಮದೇವನ ವಂಶಿಕರ, ಒಂದು ಶಾಖೆ, 'ನಂತರದ ಚಂಗಾಳ್ವರ' ಸಹವಾಸದಿಂದ ದೂರವಾಗಿ ತಮ್ಮ ಭವಿಷ್ಯವನ್ನರಸಿ ಕೆಳದಿ ಹಳ್ಳಿಬಯಲಿನತ್ತ ಸಾಗಿದರೆನಿಸುತ್ತದೆ. ಅವರು ಸಾಗಿದ ದಾರಿ ಅರಕಲಗೂಡು, ಹಾಸನ, ಕಡೂರು, ಚಿಕ್ಕಮಗಳೂರು, ಶೃಂಗೇರಿ, ಸೊರಬ ಆಗಿರಬೇಕು. ಇವರ ಪೂರ್ವಜರಲ್ಲಿ ಕೆಲವರು ಸೊರಬದಲ್ಲಿ ಹೋಗಿದ್ದರೆಂಬ ಅಂಶವೂ ಅವರಿಗೆ ತಿಳಿದಿದ್ದಿರುವಂತಿದೆ. ಅಲ್ಲಿ ಹೋಗಿ ರಾಜ್ಯ ಸ್ಥಾಪನೆಯ ಸಮಯದವರೆಗೂ ಒಕ್ಕಲುತನವನ್ನು ಆಶ್ರಯಿಸಿ, ನಂಜರಾಜ ಹೊಸ ರಾಜಧಾನಿ ನಂಜರಾಯಪಟ್ಟಣವನ್ನು ಕಟ್ಟುವ ಸಮಯದ ಸುಮಾರಿಗೆ ಕೆಳದಿಯ ಪಾಳೆಪಟ್ಟನ ಚೌಡಪ್ಪನಾಯಕ ಅಭಿಷಿಕ್ತ ನಾದ. ಇದು ಒಂದು ದಾಯಾದಿ ರಾಜ್ಯಸ್ಥಾಪನಾ ಸ್ಪರ್ಧೆ ಆಗಿತ್ತೆನಿಸುತ್ತದೆ. ಬಹುಶಃ ಈ ಸಂಘರ್ಷಗಳ ಹಿನ್ನಲೆಯಲ್ಲಿ ಕೆಳದಿ ಅರಸರು ತಮ್ಮ ಚಂಗಾಳ್ವರ ಮೂಲವನ್ನು ಬೇಕೆಂದೇ ಮರೆಮಾಚಿರ ಬಹುದು. ಕೆಳದಿ-ಹಾಲೇರಿಯವರ ಕಾಲದ ಹೊತ್ತಿಗೆ ವಿರಸ ಮರೆತು ಸಂಬಂಧ ಹೇಳಿಕೊಂಡರೆನ್ನಬೇಕು. ಹಿರಿಯ ವೆಂಕಟಪ್ಪ ನಾಯಕನು ಕೊಡಗಿನ ತನ್ನ ಪೂರ್ವಜರ ವಿಷಯ ತಿಳಿದಿದ್ದ ಕಾರಣವೋ ಏನೋ ತನ್ನ ದಂಡಯಾತ್ರೆಯ ಕಾಲದಲ್ಲಿ ಪೂರ್ವಚರ ಚಂಗಾಳ್ವರ ರಾಜಧಾನಿ ಪಾಲ್ಪರೆಯನ್ನು ಸಾಧಿಸಲು *[೧೯] ಬಂದನೆನ್ನಬೇಕು (ಆ ಕಾಲಕ್ಕೆ ಪ್ರಸಿದ್ಧಿಯಾಗಿದ್ದ ಕೊಡಗು ಶ್ರೀರಂಗ ಪಟ್ಟಣ-ನಂಜರಾಯಪಟ್ಟಣದ ಬದಲು ಪಾಲ್ಪರೆಯನ್ನು ಆಯ್ದು ಕೊಂಡುದುದಕ್ಕೆ ವಂಶಿಕ ಇತಿಹಾಸ ಅವನಿಗೆ ತಿಳಿದಿದ್ದ ಸಾಧ್ಯತೆಯೇ ಹೆಚ್ಚು).

ಹೀಗೆ ಕೊಡಗಿನ ಚಂಗಾಳ್ವರ (ಮಲವರ) ಸಂಬಂಧ ಕೆಳದಿಗಾದರೆ, ಕೆಳದಿಯ ರಾಜವಂಶಿಕ ಸಂಬಂಧ ಕೊಡಗಿಗೆ ೧೬ನೇ ಶತಮಾನದಲ್ಲಿ ಪುನರ್ ನಿರ್ಮಾಣವಾಯಿತು. ಕ್ರಿ. ಶ. ೧೫೪೬ರಲ್ಲಿ ಕೊಡಗಿನ ಜಂಬೂರಿನಲ್ಲಿ ಕೆಳದಿ ಅರಸರ ಪೈಕಿ ರಾಜಕುಮಾರ ವಿರುಪಣ ಒಡೆಯನೆಂಬುವನು ಬಂದು ನೆಲೆಸಿದ. ಆಗ ಇಕ್ಕೇರಿ ಸಿಂಹಾಸನದ ಮೇಲೆ ದೊಡ್ಡಸಂಕಣ್ಣ ನಾಯಕನಿದ್ದ. ಅವನಿಗೂ ವಿರೂಪಣ ಒಡೆಯನಿಗೂ ಕಾಳಗವಾಗಿ, ಒಡೆಯ ಸೋತ. ಒಡೆಯ ವಿಜಯನಗರದರಸರಿಗೆ ದೂರು ಕೊಟ್ಟ. ಆಗ ರಾಯರು ಒಡೆಯನಿಗೆ ಕೋಟೆಯನ್ನು ಕೊಡಿಸಿ ದೊಡ್ಡ ಸಂಕಣ್ಣನಾಯಕನನ್ನು ವಿದ್ಯಾ ನಗರಿಯಲ್ಲಿರಿಸಿದರು. ಕೆಲಕಾಲಾನಂತರ ಮತ್ತೆ ಒಡೆಯ ಹಾಗೂ ನಾಯಕನ ನಡುವೆ ಮನಸ್ತಾಪ ಬಂದು ಉಡುಗಣೆ, ಮಂದಾಪುರ, ಜಂಬೂರು ಕೋಟೆಗಳು ಇಕ್ಕೇರಿ ಅರಸರ ವಶವಾಯಿತು. *[೨೦] ಎಂಬ ಅಭಿಪ್ರಾಯಗಳೂ ಪ್ರಕಟವಾಗಿವೆ. ಸದ್ಯ ತಿಳಿದು ಬಂದಿರುವ ಕೆಳದಿ ಇತಿಹಾಸದ ರೀತ್ಯಾ, ಕೆಳದಿ ವಂಶಾವಳಿಯಲ್ಲಿ ರಾಜಕುಮಾರ ನೆಂದು ನಮೂದಿತವಾಗಿಲ್ಲದಿದ್ದರೂ, 'ಜಂಬೂರ ವಿರುಪಣ್ಣ ಒಡೆಯ' ಮೊಗದಿಕೊಡದೆ ವಿಜಯನಗರದ ರಾಮರಾಯನ ವಿರೋಧಿಯಾಗಿ, ದೊಡ್ಡ ಸಂಕಣ್ಣನಲ್ಲಿಯೂ ಹಗೆತನದಿಂದಿದ್ದ. ಆಗ ನಾಯಕನು ವಿರುಪಣ್ಣನನ್ನು ಅಡಗಿಸಿದ. ಆದರೆ ದೂರುಕೊಟ್ಟ ವಿರುಪಣ್ಣವೊಡೆಯನಿಗೆ ಜಂಬೂರು, ಉಡುಗಣೆ ಗಳನ್ನು ಹಿಂದಿರುಗಿಸಲು ರಾಮರಾಯನು ನಾಯಕನಿಗೆ ಹೇಳಿದ ಮತ್ತು ನಾಯಕನನ್ನು ಆದರಿಸಿದ. ಆದರೆ ಬಂಡುಗಾರ ವಿರುಪಣ್ಣನಿಗೆ ಗೆದ್ದ ಕೋಟೆಯನ್ನು ಹಿಂದಿರುಗಿಸಲು ನಾಯಕನಿಗೆ ಹೇಳಿದುದೇಕೆ? ಎಂಬುದು ಅಸ್ಪಷ್ಟ ಎಂದು ಬಾ. ರಾ. ಗೋಪಾಲ್ ಹೇಳಿದ್ದಾರೆ. *[೨೧] ಆದರೆ ಈ ವಿರೂಪಣ್ಣ ಕೊಡಗಿನ ಜಂಬೂರಿನಲ್ಲಿದ್ದವ, ಕೆಳದಿ ಅರಸರ ಪೈಕಿಯವ ಎಂಬುದು ನಿಜವಾಗಿದ್ದರೆ, ಹಾಲೇರಿ ಅರಸರ ಮುನ್ನವೆ ರಾಜಸ್ಥಾಪನೆಯ ಪ್ರಯತ್ನ ಕೊಡಗಿನಲ್ಲಿ ಚಂಗಾಳ್ವ ಮೂಲದ ಕೆಳದಿ ವಂಶಿಕನೊಬ್ಬನಿಂದ ನಡೆದಿತ್ತು ಎಂದಾಗುತ್ತದೆ. ಕೆಳದಿ ವಂಶಾವಳಿಯ ರಾಜಕುಮಾರರ ಪಟ್ಟಿಯು ಸೂಕ್ತವಾಗಿ ತಿಳಿಯುವ ತನಕ ಈ ಅಂಶದಲ್ಲಿ ನಿಖರತೆ ಕಷ್ಟ. ಅಲ್ಲದೆ ಶಿವಮೊಗ್ಗಾ ಜಿಲ್ಲೆ ಶಿಕಾರಿಪುರ ತಾಲೂಕು ಉಡುಗಣಿ ಹೋಬಳಿಯ ಗ್ರಾಮವಾಗಿ 'ಚಿಕ್ಕ ಜಂಬೂರು' ಎಂಬ ಸ್ಥಳವಿದೆ. ಉಡುಗಣೆ, ಚಿಕ್ಕ ಜಂಬೂರು ನೆರೆ ಗ್ರಾಮಗಳಂತಿದ್ದರೆ, ಅಲ್ಲೆಲ್ಲ ಕೋಟೆಗಳ ಅವಶ್ಯಕತೆ ಇತ್ತೇ? 'ಚಿಕ್ಕಜಂಬೂರು' ಎಂಬ ಗ್ರಾಮವಲ್ಲದೆ ಜಂಬೂರು ಎಂಬ ಬೇರೊಂದು ಗ್ರಾಮ ಶಿಕಾರಿಪುರ ದಲ್ಲಿತ್ತೇ? ಅಥವಾ ಕೊಡಗಿನಲ್ಲಿರುವ ಜಂಬೂರು ಗ್ರಾಮಕ್ಕೂ ಸಂಬಂಧ ಕೊಡಿಸುವುದು ಎಷ್ಟು ಸಾಧು? ಎಂಬ ಪ್ರಶ್ನೆಗೂ ಉತ್ತರ ಬೇಕಾಗುತ್ತದೆ. ಕೊಡಗಿನ ಸಂಬಂಧದವನೊಬ್ಬ ಶಿಕಾರಿಪುರ ತಾ. ಉಡುಗಣೆ, ಚಿಕ್ಕಜಂಬೂರಿಗೂ ಆಡಳಿತ ಸಂಬಂಧ ಹೊಂದಿದವನಾಗಿದ್ದ ಎನ್ನಬಹುದೆ! ಸದ್ಯ ಉಕ್ತವಿರುವ ಮಂದಾ ಪುರ, ಕೊಡಗಿನ ಜಂಬೂರು ಸನಿಹದ ಮಾದಾಪುರ ಹೆಸರಿನ ಇನ್ನೊಂದು ರೂಪವೆ! ಉಡುಗಣೆ, ಕೊಡಗಿನ ಉಲುಗುಲಿ ಗ್ರಾಮದ ಸಮಾನಾರ್ಥಕ ರೂಪವೆ? ಎಂದೆಲ್ಲ ಅನುಮಾನಗಳು ಒದಗುತ್ತವೆ. ಕಾರಣ ಕೊಡಗಿನಲ್ಲಿ ಈ ಗ್ರಾಮಗಳು, ಶಿಕಾರಿಪುರ ತಾಲೂಕಿನಲ್ಲಿಯಂತೆ ಸನಿಹದ ಗ್ರಾಮಗಳಾಗಿವೆ. ಇದೆಲ್ಲ ಕ್ರಿ. ಶ. ೧೫೪೬ರ ವಿಷಯವಾದರೆ, ಹಿರಿಯ ವೆಂಕಟಪ್ಪನಾಯಕನ ಕಾಲ ದಲ್ಲಿ, ಅವನ ಮಗಳು ಹಿರಿಯಮ್ಮನನ್ನು (ಬಹುಶಃ ಕ್ರಿ. ಶ. ೧೬೦೭) ಜಂಬೂರು ವಿರುಪಣ್ಣ ಒಡೆಯ ಎಂಬುವನಿಗೆ ಮದುವೆ ಮಾಡಿ ಕೊಡಲಾಯಿತೆಂದು *[೨೨] ಗುಂಡಾಜೋಯಿಸರ ಕೃತಿಯಲ್ಲಿದೆ. ಆದರೆ

೧೫೪೬ರ ಜಂಬೂರು ವಿರೂಪಣ್ಣ ಒಡೆಯನ ವಂಶಿಕ ಕ್ರಿ. ಶ.-೧೬೦೭ರ ವಿರೂಪಣ್ಣ ಒಡೆಯನೆ ಅಥವಾ ಬೇರೆಯವನೆ? ಎಂಬುದು ಗುಂಡಾಜೋಯಿಸರ ಗ್ರಂಥದಿಂದಲೂ ಸ್ಪಷ್ಟವಾಗುವುದಿಲ್ಲ. 'ಕೆಳದಿ ಸಂಸ್ಥಾನ-ಸಮಗ್ರ ಅಧ್ಯಯನ' ಗ್ರಂಥವೂ ಈ ಬಗ್ಗೆ ಏನೂ ಹೇಳಿಲ್ಲ.

'ನಂತರದ ಚಂಗಾಳ್ವರ' ಪೈಕಿ, ನಾಗರಾಜ, ರಂಗರಾಜ, ಪೆರಿಯಣ್ಣರಾಜರು ಕೊಡಗು ಶ್ರೀರಂಗಪಟ್ಟಣದಲ್ಲಿ ಆಳಿದರೂ ಆನಂತರ ನಂಜರಾಜ ಕ್ರಿ. ಶ. ೧೫೦೨ರಲ್ಲಿ ನಂಜರಾಯಪಟ್ಟಣ ರಾಜಧಾನಿಯನ್ನು ಕಟ್ಟಿ ಆಳತೊಡಗಿದಾಗ ಕೊಡಗು ಶ್ರೀರಂಗ ಪಟ್ಟಣದ ಪ್ರಾಮುಖ್ಯತೆ ತಗ್ಗಿತು. ಕ್ರಿ. ಶ. ೧೫೯೦ರಲ್ಲಿ ಪಿರಿಯಾಪಟ್ಟಣವನ್ನು ಕೊಡಗಿನ ಚಂಗಾಳ್ವರು ರಾಜಧಾನಿ ಮಾಡಿಕೊಂಡರು. ಕ್ರಿ.ಶ. ೧೬೪೪ರಲ್ಲಿ ಆ ವಂಶ ಮುಕ್ತಾಯ ವಾಯಿತು. ಅಂದರೆ ಕೊಡಗನ್ನು ಪೂರ್ಣವಾಗಿ ಅವರು ೧೫೦೨-೧೫೯೬ರ ಅವಧಿಯಲ್ಲಿ ಆಳುತ್ತಿರಲಿಲ್ಲ ಎಂಬುದಕ್ಕೆ ಕೊಡಗನ್ನು ೧೬ನೇ ಶತಮಾನಾಂತ್ಯದಲ್ಲಿ ನಾಯಕರು ಆಳುತ್ತಿದ್ದರೆಂದು ಹೇಳಿರುವ ಫೆರಿಸ್ಟನ ಮಾತೂ [*೨೩] ಸಾಕ್ಷಿ ಆಗುತ್ತದೆ. ಈ ನಾಯಕರು ಗಳಲ್ಲಿ ಬಾಳುಕಾರರು, ಬಾಚೆಕಾರರು, ಹಾಗು ಚಂಗಾಳ್ವರ ವಂಶಿಕರೂ ಸೇರಿದ್ದರು. ಬಾಳುಕಾರರು ಹಾಗೂ ಬಾಚೆಕಾರರಲ್ಲಿ ಆಗಾಗ್ಗೆ ಪರಸ್ಪರ ಜಗಳಗಳಾಗುತ್ತಿದ್ದು, ಕೊಡಗಿನ ಎಲ್ಲೋ ಕೆಲವು ಭಾಗಗಳಲ್ಲಿ ತುಂಡುನಾಯಕರೆನಿಸಿದರೇ ವಿನಾ, ಹಾಲೇರಿ ಅರಸರಂತೆ ಪೂರ್ಣ ಕೊಡಗಿನ ದೊರೆಗಳವರಾಗಲಿಲ್ಲ. ಆದಾಗಿ ಹಾಲೇರಿ ವಂಶಸ್ಥಾಪಕ ಇಕ್ಕೇರಿ ರಾಜವಂಶದಿಂದ ಬಂದ ವೀರರಾಜನ ಮೂಲದ ಬಗ್ಗೆ ಮಹತ್ವ.

ಇನ್ನು ಐತಿಹಾಸಿಕ ತಾರ್ಕಣೆಗಳಿಗನುಸಾರವಾಗಿ ಗಮನಿಸಿದರೆ ಕೆಳದಿಯ ರಾಮರಾಜನಾಯಕನ ಮಗನಾದ ವೀರರಾಜನು ಹಾಲೇರಿಗೆ ಬಂದು ರಾಜ್ಯಸ್ಥಾಪನೆಗೆ ಮಾಡಿದವನೆಂದಾಗುತ್ತದೆ. ಇದಕ್ಕಾಗಿ ಸಂದರ್ಭಗಳನ್ನು ಸ್ಪಷ್ಟಗೊಳಿಸಬೇಕು.

ಕೆಳದಿ ವಂಶದ ನಾಲ್ಕನೆಯ ದೊರೆ ದೊಡ್ಡ ಸಂಕಣ್ಣ ನಾಯಕನು (ಕ್ರಿ. ಶ. ೧೫೪೫-೫೯) ಕ್ರಿ. ಶ. ೧೫೪೬ರ ಸುಮಾರಿನಲ್ಲಿ ಸಂಸಾರ ಸಮೇತ ರಾಜಕಾರಣ ಸಂಬಂಧದಲ್ಲಿ ವಿಜಯನಗರದಲ್ಲಿ ರಾಮರಾಯನ ಆದೇಶದಂತೆ ಹೋಗಿ ಉಳಿದಿದ್ದ. ಮಲತಮ್ಮ ಚಿಕ್ಕಸಂಕಣ್ಣನಾಯಕನನ್ನು ತಾನು ಹಿಂದಿರುವವರಿವಿಗೆ ಆಡಳಿತ ನಿರ್ವಹಣೆಗಿರಿಸಿದ್ದ. ವಿಯನಗರದಲ್ಲಿದ್ದ ಸಮಯದಲ್ಲಿ ದೊಡ್ಡ ಸಂಕಣ್ಣನಾಯಕನಿಗೆ ರಾಮರಾಜನಾಯಕ ಹಾಗು ವೆಂಕಟಪ್ಪ ನಾಯಕ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ನಂತರ ಕೆಳದಿಗೆ ಹಿಂದಿರುಗಿ ಬಂದಮೇಲೆ ವಿರಕ್ತಿ ಹುಟ್ಟಿ ರಾಜ್ಯದ ಹೊಣೆಯನ್ನು ತಮ್ಮನಿಗೇ ವಹಿಸಿದ. ಕುಮಾರರಾದ ರಾಮರಾಜನಾಯಕ, ವೆಂಕಟಪ್ಪನಾಯಕರಿಗೆ ಮದುವೆಮಾಡಿದ. ತೀರ್ಥಯಾತ್ರೆಗೆ ಹೋಗಿ ಬಂದ ನಂತರ ಕ್ರಿ. ಶ. ೧೫೯೮ರ ಸುಮಾರಿನಲ್ಲಿ ತೀರಿದ.

ಆ ಹೊತ್ತಿಗೆ ರಾಮರಾಜನಾಯಕನಿಗೆ ಸುಮಾರು ೧೧-೧೨ರ ಪ್ರಾಯ. ಬಹುಶಃ ಅವನಿಗೆ ಅವನ ತಂದೆ ಮದುವೆ ಮಾಡಿದ ಹೆಣ್ಣು ಕೊಡಗಿನ ಚಂಗಾಳ್ವ ರಾಜಕುಮಾರಿ (ನಂಜರಾಯಪಟ್ಟಣದ ಚಂಗಾಳ್ವ ವೀರರಾಜ ಒಡೆಯನ ಸೋದರಿ!)ಯೆ ಆಗಿದ್ದಿರಬಹುದೆ? ಹಾಗಿದ್ದರೆ ಮುಂದಿನ ಕೆಳದಿಯ ರಾಜಕೀಯ ಘಟನೆಗಳಿಗೆ ಈ ಅಂಶವೂ ಕಾರಣವಾದಂತಿದೆ. ಮುಂದೆ ಚಿಕ್ಕಸಂಕಣ್ಣ ನಾಯಕನು ತೀರಿದ ನಂತರ ರಾಮರಾಜನಾಯಕನು ಪಟ್ಟಕ್ಕೆ ಕ್ರಿ. ಶ. ೧೫೭೨ರಲ್ಲಿ ಬಂದಾಗ ಸುಮಾರು ೨೨-೨೩ ವರ್ಷ ಪ್ರಾಯ. ಕನಿಷ್ಠ ರಾಮರಾಜನಾಯಕನ ೨೦-೨೧ನೇ ವಯಸ್ಸಿನಲ್ಲಿ ಅವನ ಹಿರಿಯಮಗ ವೀರಒಡೆಯ (ವೀರರಾಜ) ಹುಟ್ಟಿರಬೇಕು. ಇವನಲ್ಲದೆ ಬಸವಲಿಂಗ ನಾಯಕ ಎಂಬ ಇನ್ನೊಬ್ಬ ಮಗನೂ ಹುಟ್ಟಿದ. ರಾಮರಾಜನಾಯಕನು ಕ್ರಿ. ಶ. ೧೫೮೨ರ ವರೆಗೆ ಆಳಿ ತೀರಿಕೊಂಡಾಗ ವೀರಒಡೆಯನ ವಯಸ್ಸು ಸುಮಾರು ೧೩-೧೪ ವರ್ಷದ್ದಾಗಿತ್ತೆನ್ನಬೇಕು. ರಾಜ್ಯದ ಆಳ್ವಿಕೆಯ ದೃಷ್ಟಿಯಿಂದ ಚಿಕ್ಕವನೆ. ಈ ವೀರರಾಜನಿಗೆ ವೀರಪ್ಪನಾಯಕ ಎಂಬ ಹೆಸರೂ ಇತ್ತು. [*೨೪] ಪೋರ್ಚುಗೀಸ್ ದಾಖಲೆಗಳಲ್ಲಿ 'ವೀರಪ್ಪನಾಯಕ' ಎಂಬ ಪ್ರತ್ಯೇಕ ಹೆಸರು ರಾಮರಾಜನಾಯಕನ ಇಬ್ಬರು ಮಕ್ಕಳಲ್ಲದೆ ಬೇರೆ ಸಿಗುತ್ತದೆ. ಆದರೆ ರಾಮರಾಜನಾಯಕನಿಗೆ ಮೂವರು ಮಕ್ಕಳಿದ್ದಿರಬಹುದೆ? ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ಸಿಗದು. ಅಂತಾಗಿ ದಾಖಲೆಯೂ ಅಸ್ಪಷ್ಟವೆನಿಸುತ್ತದೆ. ಬಸವಲಿಂಗ ನಾಯಕನ ಹೆಸರು ಕೊಡಗಿನ ಸಂಬಂಧಕ್ಕೆ ಪ್ರಸ್ತುತವಾಗದ ಕಾರಣ ಉಳಿಯುವ ಹೆಸರುಗಳು ವೀರಒಡೆಯ (ವೀರರಾಜ) ಹಾಗು ವೀರಪ್ಪನಾಯಕ ಆಗಿವೆ. ರಾಮರಾಜನಾಯಕನು ಚಿಕ್ಕಸಂಕಣ್ಣನಾಯಕನನ್ನು ಕೊಂದ ಎಂಬ ಆರೋಪವಿಟ್ಟು, ಅವನ ಸಂತತಿಗೆ ಹಕ್ಕಿಲ್ಲ ಎಂಬ ಕುಟಿಲ ವಾದವಿಟ್ಟು ರಾಮರಾಜ ನಾಯಕನ ನಂತರ, ಹಿರಿಯ ವೆಂಕಟಪ್ಪನಾಯಕನಿಗೆ ಪಟ್ಟವಾಯಿತು. ಈ ಸಂಬಂಧದಲ್ಲಿ ಕತೆಗಳೂ ಇವೆ: ವೆಂಕಟಪ್ಪ ನಾಯಕನಿಗೆ ಪಟ್ಟವಾದಾಗ ರಾಮರಾಜನಾಯಕನ ಮಗ ವೀರಒಡೆಯ ದಂಗೆ ಎದ್ದನಂತೆ. ಆಗ ಅವನನ್ನು ಸೆರೆಯಲ್ಲಿಡಲಾಯಿತಂತೆ. ವೆಂಕಟಪ್ಪ ನಾಯಕನನ ನಂತರ ಕ್ರಿ. ಶ. ೧೬೨೯-೩೦ರ ಸಮಯದಲ್ಲಿ, 'ಸಂತತಿಗೆ ಹಕ್ಕಿಲ್ಲ' ಎಂಬ ಎಂದಿನ ವಾದವಿಟ್ಟು, ವೀರಒಡೆಯನ ಬದಲು ವೆಂಕಟಪ್ಪ ನಾಯಕನ ಮೊಮ್ಮಗ ವೀರಭದ್ರನಾಯಕನಿಗೆ ಪಟ್ಟವಾದಾಗ ಅದೇ ವೀರ ಒಡೆಯ ದಂಗೆ ಎದ್ದ ಎನ್ನಲಾಗಿದೆ. ಆದರೆ ವೀರಭದ್ರನಾಯಕ ನೊಡನೆ ವೀರಒಡೆಯ ಸಂಯುಕ್ತವಾಗಿ ರಾಜ್ಯಭಾರ ಮಾಡಿದ ಎನ್ನುವುದುಂಟು. [*೨೫] ಕ್ರಿ.ಶ. ೧೬೩೩ರ ವರೆಗೆ ಇದ್ದ ಎನ್ನುವುದುಂಟು. ವೀರ ಒಡೆಯ ಪಟ್ಟಕ್ಕೆ ಬಂದು ಮೂರುತಿಂಗಳ ನಂತರ ಕಾಲವಾದ ಎಂಬ ಅಭಿಪ್ರಾಯವೂ ಉಂಟು. ವೈಸರಾಯನು ಪೋರ್ಚುಗೀಸ್ ದೊರೆಗೆ, ವೀರಪ್ಪ ನಾಯಕನು ೧೧-೮-೧೬೩೧ ರಂದು ನಿಧನನಾದ

ಎಂದು ಬರೆದ ಬಗ್ಗೆಯೂ ಹೇಳಿದೆ.[*೨೬] ಅವರ ದಾಖಲೆಗಳಲ್ಲಿ ಕ್ರಿ. ಶ. ೧೬೩೩ರ ವರೆಗೆ ಅವನ ಹೆಸರೂ ಉಕ್ತವಿದೆ.[*೨೭] ಈ ವಿಷಯಗಳ ತುಸು ವಿಶ್ಲೇಷಣೆ ಹಾಲೇರಿ ವಂಶದ ಸಂಬಂಧವನ್ನು ಹೆಚ್ಚು ಸನಿಹಗೊಳಿಸುತ್ತದೆ ಎನ್ನಬೇಕು.

ವೆಂಕಟಪ್ಪನಾಯಕನೂ ರಾಮರಾಜನಾಯಕನೊಡನೆ ರಾಜ್ಯವಾಳುತ್ತಿದ್ದು, ವೀರಒಡೆಯ ಚಿಕ್ಕಪ್ರಾಯದವನಾಗಿದ್ದು (ಪ್ರಾಯಸಮರ್ಥನಾಗುವವರೆಗೆ) ಆಳ್ವಿಕೆಗೆ ವೆಂಕಟಪ್ಪನಾಯಕ ನಿಂತಿದ್ದ. ಇಂತಿರಲು ಸುಮಾರು ೧೩-೧೪ ವರ್ಷದ ಹುಡುಗ ವೀರಒಡೆಯ ಶಕ್ತ ವೆಂಕಟಪ್ಪನಾಯಕನ ಪಟ್ಟದ ಸಮಯದಲ್ಲಿ ಕ್ರಿ. ಶ. ೧೫೮೩ರಲ್ಲಿ ದಂಗೆ ಎದ್ದ ಎಂದರೆ ಹೇಗೆ ? ೬೦ ವರ್ಷ ಮೀರಿದ ಪ್ರಾಯದ ಅವನು ಮತ್ತೆ ಕ್ರಿ. ಶ. ೧೬೨೯-೩೦ರ ಸಮಯದಲ್ಲಿ ವೆಂಕಟಪ್ಪನಾಯಕನ ಮೊಮ್ಮಗ 'ವೀರಭದ್ರ ನಾಯಕನ ಎದುರು' *ಸಂತತಿಗೆ ಹಕ್ಕಿಲ್ಲ* ಎಂಬ ಕಾರಣದ ಎದುರು ಸೆರೆಯಲ್ಲಿದ್ದ ವೀರಒಡೆಯ ದಂಗೆ ಎದ್ದ, ಎಂದರೆ ಹೇಗೆ? ದೀರ್ಘಕಾಲದ ಸೆರೆ ಅವನನ್ನು ಹಣ್ಣಾಗಿಸಿರುವುದಲ್ಲವೆ! ಇನ್ನು ವೀರಒಡೆಯನ ನಿಧನದ ಕತೆ ನಂಬಿದರೆ ರಾಮರಾಜ ನಾಯಕನಿಗೆ ಮೂವರು ಮಕ್ಕಳೆಂದಾಗುತ್ತದೆ. ವೀರ ಒಡೆಯ, ವೀರಪ್ಪನಾಯಕರು ಕೆಲಕಾಲ ಆಳಿದರೆಂದಾಗುತ್ತದೆ. ಇದಕ್ಕೆ ತಾರ್ಕಣೆ ಸಾಲದು. ಇದಲ್ಲದೆ ರಾಮರಾಜ ನಾಯಕನ ಮಗ ವೀರಪ್ಪನಾಯಕನ ಹೆಸರಿನಲ್ಲಿ ೬-೨-೧೬೩೧ನೇ ತೇದಿಯ ಅಪ್ರಕಟಿತ ಶಾಸನದಲ್ಲಿ ವೀರಭದ್ರ ನಾಯಕನು ಪರ್ವತ ದೇವರ ಮಠಕ್ಕೆ 'ವೀರಭದ್ರ' ಎಂಬ ಸ್ವಹಸ್ತ ಹಾಕಿ ದಾನಕೊಟ್ಟ ಸಂಗತಿ ಇದೆ.[*೨೮] ಇದು ಅವರಿಬ್ಬರ ನಡುವಣ ಅನ್ಯೋನ್ಯತೆಯೋ, ಅಥವಾ ಆರೋಗ್ಯ ವರ್ಧನೆಯ ಆಶಯಕ್ಕಾಗಿ ನೀಡಿದ ಸಂದರ್ಭವೋ? ಸ್ಪಷ್ಟವಿಲ್ಲ. ಸಾಗರದ ಕೈಫಿಯತ್ತು 'ರಾಮರಾಜ ನಾಯಕರ ಮಗ ವೀರವಡೇರ್ರು ಆಳಿದ್ದು ಶಕ ೧೫೦೪ನೇ ಚಿತ್ರಭಾನು ಸಂವತ್ಸರ ವೈಶಾಖ ಬಾಗಾಯಿತು ಕಾರ್ತೀಕ ಮಾಸದವರೆಗೆ' ಎಂದಿದೆ. ಅಂದರೆ ಕ್ರಿ. ಶ. ೧೫೮೨ರಲ್ಲಿ ಏಳು ತಿಂಗಳ ಕಾಲ ಆಳಿದ ಎಂದಿದೆ. ಆ ನಂತರ ಹಿರೇವೆಂಕಟಪ್ಪ ಆಳತೊಡಗಿದ ಎಂದಿದೆ. (ಪು. ೧೪೮). ಅಂದರೆ ಆಗ ವೀರಒಡೆಯನು ನಿಧನನಾದನೋ, ಸೆರೆಯಾದನೋ, ಸೆರೆಯಿಂದ ತಪ್ಪಿಸಿಕೊಂಡನೋ ಅಥವಾ ವೀರಭದ್ರ ನಾಯಕ ನೊಡನಾದ ಆಡಳಿತವನ್ನೆ ಕಾಲಮಾನ ತಪ್ಪಾಗಿ ಗ್ರಹಿಸಿ ಕೈಫಿಯತ್ತು ಬರೆದಿದೆಯೋ ಎಂಬುದು ಸ್ಪಷ್ಟವಾಗುವುದಿಲ್ಲ.

ಇಲ್ಲಿ ಗಮನಾರ್ಹ ಅಂಶವೆಂದರೆ, ವೆಂಕಟಪ್ಪನಾಯಕನಿಗೆ ಪಟ್ಟವಾದಾಗ ಸಹಜವಾಗಿ ವೀರಒಡೆಯನಿಗೆ ಯುವರಾಜ ಪದವಿ ಒದಗಬೇಕಿತ್ತಲ್ಲವೆ? ವೆಂಕಟಪ್ಪ ನಾಯಕನ ನಂತರವಾದರೂ ಅವನ ಮೊಮ್ಮಗ ವೀರಭದ್ರನಾಯಕನ ಬದಲು ವೀರಒಡೆಯನಿಗೆ ಪಟ್ಟವಾಗಬೇಕಿತ್ತು. 'ಸಂತತಿಗೆ ಹಕ್ಕಿಲ್ಲ' ಎಂದಿದ್ದರೆ ರಾಮರಾಜ ನಾಯಕನಿಗೂ ಆಳ್ವಿಕೆಯ ಹಕ್ಕಿರುತ್ತಿರುಲಿಲ್ಲ. ಬಹುಶಃ ಈ ನೆಪದ ಕುಟಿಲ ರಾಜಕೀಯ ಮಸಲತ್ತಿಗೆ ಕೊಡಗಿನ ಚಂಗಾಳ್ವ ಶಾಖೆಯ ರಾಜ ಕುಮಾರಿ ರಾಮರಾಜನಾಯಕನ ರಾಣಿಯಾಗಿದ್ದು, ಆಕೆಯ ಮಗ ವೀರಒಡೆಯ ಆಗಿದ್ದಿರಬಹುದೆ? ಎನಿಸುತ್ತದೆ. ಶಕ್ತ ದಾಯಾದಿ ರಾಜಕೀಯ ಬಳಸಿ ರಾಮರಾಜ ನಾಯಕನ ಮಗ ಪಟ್ಟವೇರ ದಂತಹ ಶರತ್ತನ್ನು, ಸನ್ನಿವೇಶವನ್ನು ನಿರ್ಮಿಸಿದಂತೆ ಕಾಣುತ್ತದೆ. ಇದನ್ನು ಸರಿಯಾಗಿಯೆ ವಿವೇಚಿಸಿದ ವೀರಒಡೆಯ, ವೆಂಕಟಪ್ರ ನಾಯಕ ಕ್ರಿ. ಶ. ೧೫೮೩ರ ನಂತರ ದಂಡಯಾತ್ರೆಯ ಸಂದರ್ಭದಲ್ಲಿ ರಾಜ್ಯ ಸಾಧಿಸುವ ಸಮಯದಲ್ಲಿ, ಸೇನಾ ಸಹವರ್ತಿಯಾಗಿ ಅನುಭವಗಳಿಸುತ್ತ ದೇವದರ್ಶನ ತೀರ್ಥಯಾತ್ರೆಗಳ ನೆಪದಲ್ಲಿ ಕೊಡಗಿನ ಭಾಗಗಳ ಪರಿಚಯ ಮಾಡಿಕೊಳ್ಳುತ್ತ ಬಂದಿರಬೇಕು. ತನ್ನ ರಾಜಕೀಯ ಭವಿಷ್ಯದ ನೆಲೆಯನ್ನಾಗಿ ತಾಯಿಯ ತವರುನಾಡನ್ನು(!) ಆರಿಸಿಕೊಂಡನೆನಿಸುತ್ತದೆ. ಅವನು ಸೆರೆಯಲ್ಲಿಯೆ ಇದ್ದಿದ್ದರೆ ಕ್ರಿ.ಶ. ೧೬೨೯ರ ವರೆಗೂ ಕೊಡಗಿನ ವಿಷಯ, ಪರಿಸರ ಅವನಿಗೆ ಹೇಗೆ ತಿಳಿಯುತ್ತಿತ್ತು? ಹೀಗಾಗಿ ಅವನು ಸೈನ್ಯದಲ್ಲಿದ್ದುದು ಕ್ರಿ. ಶ. ೧೫೮೩-೧೬೦೦ ಅವಧಿಯಲ್ಲಿ ಪ್ರಾಪ್ತವಸ್ಕನಾದಾಗ ಒಂದು ಕಡೆ ಪಟ್ಟದ ಹಕ್ಕಿಗೆ ಹೋರಾಡುತ್ತ, ಕ್ರಿ. ಶ. ೧೫೮೩-೧೫೯೩ರ ಸುಮಾರಿನಲ್ಲಿ ಹಾಲೇರಿಯಲ್ಲಿ ಜಂಗಮ ವೇಷಧಾರಿಯಾಗಿ ನೆಲೆಸಿ ಜನರೊಡನೆ ಬೆರೆತು ಕೊಡಗಿನ ಜನ ಹಾಗೂ ಹಾಲೇರಿ ನಾಯಕನನ್ನು ಆಕರ್ಷಿಸುತ್ತ ಇದ್ದನೆನ್ನಬೇಕು. ವೀರಒಡೆಯ ಕೆಳದಿಯಿಂದ ದೂರವಾಗುತ್ತ ಬಂದಂತೆ ಅವನು ನಿಧನನಾದ ಎಂಬ ಕತೆ ಹೇಗೋ ಹುಟ್ಟಿರಬೇಕು. ಸೇನೆಯಲ್ಲಿದ್ದು ದರಿಂದ, ಕೊಡಗಿನವರಿಗೆ ಸಿಡಿದು ಬಂದ ಇಕ್ಕೇರಿ ರಾಜಕುಮಾರನಾಗಿ ಕಂಡಿರಬೇಕು. 'ವೀರಪ್ಪ ನಾಯಕ' ರಾಮರಾಜನಾಯಕನ ಇನ್ನೊಬ್ಬ ಮಗನೆಂದರೆ ಅವನೇ ವೀರಭದ್ರನಾಯಕನೊಡನೆ ರಾಜ್ಯವಾಳಿ ಆಗಸ್ಟ್ ೧೬೩೧ ತೀರಿದವನಾಗಿ, ಪೋರ್ಚುಗೀಸ್ ದಾಖಲೆಗಳಲ್ಲಿ ೧೬೩೩ರ ವರೆಗೆ ಸ್ಮರಣೆಗೊಂಡಿರಬೇಕು. ಇಲ್ಲವೆಂದರೆ ದಾಖಲೆಯ ನೈಜತೆಯು ಅಷ್ಟು ನಂಬಲರ್ಹವಾದುದಲ್ಲವಾಗಿರಬೇಕು. ವೀರಒಡೆಯನೇ 'ವೀರಪ್ಪ ನಾಯಕ'ನೆಂದರೆ ಕೆಳದಿ ಹಾಗು ಕೊಡಗು ಸಂಪರ್ಕವನ್ನು ಇಟ್ಟುಕೊಂಡು, ವೆಂಕಟಪ್ಪನಾಯಕನ ನಂತರ ವೀರಭದ್ರನಾಯಕನೊಡನೆ ಕೆಲಕಾಲ ಅನ್ಯೋನ್ಯ ರಾಜಕಾರಣ ದಿಂದಿದ್ದು, ಕೊನೆಗೆ ತನ್ನ ಸಂತತಿಗೆ ಅದೂ ಅವಕಾಶವಿಲ್ಲವಾಗುವ ಸಂದರ್ಭ ತಿಳಿದು ಹಾವೇರಿಯಲ್ಲಿ ಪೂರ್ಣವಾಗಿ ತನ್ನ ಸಂತತಿ ಯನ್ನು ಸ್ಥಾಯಿಗೊಳಿಸಿದಂತಿದೆ. ಬಹುಶಃ ಮತ್ತೆ ಕೆಳದಿಗೆ ಹೋದ ಸಂದರ್ಭದಲ್ಲಿ ಅಲ್ಲಿಯೇ ತೀರಿ ಸಮಾಧಿಗೊಂಡಂತಿದೆ.

ಇನ್ನು ವೀರಒಡೆಯ ಕೆಳದಿಯ ನೆರೆನಾಡುಗಳನ್ನು ಬಿಟ್ಟು ಕೊಡಗನ್ನೆ, ಆರಿಸಿಕೊಂಡದ್ದೇಕೆ? ಒಂದು-ಬಹುಶಃ ಅವನ ತಾಯಿಯ ತವರುನಾಡು ಕೊಡಗು ಆಗಿದ್ದುದು, ಎರಡು-ಹಾಲೇರಿಗೆ ಅವನು ಬಂದಾಗ, ಚಂಗಾಳ್ವ ವಂಶಿಕ ಸೋಮಶೇಖರ ನಾಯಕ ಆಳುತ್ತಿದ್ದು,

ಅವನು ನಂಜರಾಯಪಟ್ಟಣದ ಪೆರಿಯರಾಜದೇವನೊಡನೆ, ವೀರಒಡೆಯನನ್ನು ಹೆಚ್ಚು ಸಂಪರ್ಕಗೊಳಿಸಿದಂತಿದೆ. ಆಗ ವಂಶದ ಪೂರ್ವ ಇತಿಹಾಸದ ಮರೆಯ ಸಂಗತಿಗಳು ಹಾಗು ಕೊಡಗಿನ ಸಂದರ್ಭದ ವಿಷಯಗಳು ವೀರಒಡೆಯನಿಗೆ ತಿಳಿದಿರಬೇಕು. ಸೋಮಶೇಖರನಾಯಕ ತೀರ ವೃದ್ಧನಾಗಿದ್ದ. ಆ ಹೊತ್ತಿಗೆ ವೀರಒಡೆಯನು ನಿಂತು ಜನಪ್ರಿಯತೆ ಗಳಿಸಿದ್ದುದರಿಂದ 'ಗುರುನಾಯಕ'ನಾಗಿ ಹೆಸರುಗೊಂಡಿದ್ದುದರಿಂದ, ಸೋಮಶೇಖರ ನಾಯಕನು ಹಾಲೇರಿಯ ಆಡಳಿತವನ್ನು ಅವನಿಗೆ ವಹಿಸಿರುವಂತೆ ಕಾಣುತ್ತದೆ. ಬಹುಶಃ ತಾಯಿಯ ಕಡೆಯ ಸಂಬಂಧವೆಂದು ತಿಳಿದು ಪೆರಿಯರಾಜದೇವನ ಮಗಳನ್ನು ವೀರರಾಜ ಒಡೆಯ ಮದುವೆ ಯಾದಂತಿದೆ. ಅಂತೇ ಈ ದಿಸೆಯಲ್ಲಿ 'ಇಕ್ಕೇರಿ ಅರಸರ ಮನೆತನಕ್ಕೆ ಸೇರಿದ ರಾಜಕುಮಾರ ವೀರರಾಜನೆಂಬುವನು ಹಾಲೇರಿಗೆ ಬಂದನು. ಈತನು ಪೂರ್ವದ ಚಂಗಾಳ್ವ ಅರಸರ ಬಂಧುವೂ ಆಗಿರಬಹುದು. ಹಾಲೇರಿಯಲ್ಲಿ ನೆಲೆಸಿ ಸ್ವಲ್ಪಕಾಲದಲ್ಲೇ ಸುತ್ತಮುತ್ತಲಿನ ಜನ ರನ್ನು ಆಕರ್ಷಿಸಿದನು.'*೨೮ ಎಂಬ ಕೊಡಗಿನ ಲೇಖಕರ ಮಾತುಗಳೂ ಗಮನಾರ್ಹವಾಗುತ್ತವೆ. 'ಇಕ್ಕೇರಿ ಲಕ್ಕಮ್ಮ ಇಳಿದು ಬಾರೆ' ಎಂಬ ಆಚರಣೆ ಸಹಿತವಾದ ಜನಪದ ಹಾಡು ಚಿಕ್ಕಮಗಳೂರು, ಹಾಸನ, ಪಿರಿಯಾಪಟ್ಟಣ, ಕೊಡಗಿನ ಜನಪದರಲ್ಲಿದೆ. ಇದು ಬಹುಶಃ ವೀರರಾಜ ಒಡೆಯನು ಕೊಡಗಿಗೆ ಸಾಗಿ ಬಂದ ಹಾಗು ಸಂಪರ್ಕ ಗೊಂಡ ಹಾದಿಯ ಕಾರಣವಿರುವಂತಿದೆ.

ಹಿರಿಯ ವೆಂಕಟಪ್ಪನಾಯಕನು ಕ್ರಿ. ಶ. ೧೬೦೭ರ ಸುಮಾರಿನ ದಕ್ಷಿಣ ಕನ್ನಡ ಜಿಲ್ಲೆಯ ತನ್ನ ದಂಡಯಾತ್ರೆಯ ಸಮಯದಲ್ಲಿ ಸುಬ್ರಮಣ್ಯದಲ್ಲಿ ಅವನು ಉಳಿದಿದ್ದ ಆ ಸಮಯದಲ್ಲಿ ಕೊಡಗಿನ ರಾಜನಾದ ಅಪ್ಪಾಜಿರಾಜನ ಮೇಲೆ ಸೈನ್ಯ ಕಳುಹಿಸಿದ. ಆಗ ಆ ರಾಜನು ಕಪ್ಪಕಾಣಿಕೆಕೊಟ್ಟು ಅಧಿರಾಜತ್ವವನ್ನು ಒಪ್ಪಿಕೊಂಡ*೨೦ ಎನ್ನಲಾಗಿದೆ. ಆದರೆ ಈ ಅಪ್ಪಾಜಿರಾಜ (ಹಾಲೇರಿ ಮೊದಲರಸ ವೀರಒಡೆಯನ ಮಗ) ಹಾಲೇರಿಯಲ್ಲಿದ್ದ. ಇವನು ಕೊಡಗಿನ ಪೂರ್ಣ ಭಾಗವನ್ನು ಆಳಿದವನಲ್ಲ ಆಗ ನಂಜರಾಯ ಪಟ್ಟಣದಲ್ಲಿ ಕೊಡಗಿನ ಪೆರಿಯರಾಜದೇವನ ಸೋದರನಾದ ರುದ್ರಗಣ ಆಳುತ್ತಿದ್ದ. ಅಂದರೆ ಅವನನ್ನು ಮಣಿಸಿ ಕಪ್ಪಕಾಣಿಕೆಗಳನ್ನು ವೆಂಕಟಪ್ಪ ನಾಯಕ ಪಡೆದಿರಬೇಕು. ಶಾಸನೋಕ್ತವಾಗಿ ನಂಜರಾಯ ಪಟ್ಟಣ ದಲ್ಲಿದ್ದವ (ಕ್ರಿ. ಶ. ೧೫೫೭ರ ಗಣಗೂರು ಶಾಸನ) ರುದ್ರಗಣನೆ. ಈ ರುದ್ರಗಣನ ಬದಲು ಅಪ್ಪಾಜಿರಾಜೇಂದ್ರ ಒಡೆಯನನ್ನು ತಪ್ಪಾಗಿ ಈ ವಿಷಯದಲ್ಲಿ ಉಕ್ತಮಾಡಿರುವಂತಿದೆ.

ಹಾಲೇರಿಯಲ್ಲಿ ನಿಂತ ವೀರಒಡೆಯನಿಗೆ ಮೊದಲನೆಯ ಮಗ ಅಪ್ಪಾಜಿರಾಜೇಂದ್ರ ಒಡೆಯನಾದರೆ, ಎರಡನೆಯವನು ನಂಜುಂಡರಸು. ಅಪ್ಪಾಜಿರಾಜೇಂದ್ರನ ಮಗ ಮುದ್ದರಾಜ. ಚಂಗಾಳ್ವ ಪಿರಿಯರಾಜದೇವ ಪಿರಿಯಾಪಟ್ಟಣವನ್ನು ರಾಜಧಾನಿ ಯನ್ನಾಗಿಸಿಕೊಂಡು ಆಳುತ್ತಿದ್ದು, ಬಹುಶಃ ಗಂಡು ಸಂತಾನವಿಲ್ಲದೆ, ನಂಜುಂಡ ಅರಸುವನ್ನು ದತ್ತುವಾಗಿ ಪಡೆದ. ರಾಜೇಂದ್ರನಾಮ ಯಿಂದ ಈ ಸೂಚನೆ ಒದಗುತ್ತದೆ. ಅಂದರೆ ಪೂರ್ವಸಂಬಂಧ ವಿಲ್ಲದಿದ್ದರೆ ಇದು ಹೇಗೆ ಸಾಧ್ಯವಾಗುತ್ತಿತ್ತು ! ಜೊತೆಗೆ ಮಾತ್ರ ಪ್ರಧಾನ ಅಳಿಯ ಸಂತಾನದ ರಾಜ್ಯದಾಳಿಕೆಯ ಪ್ರಭಾವವೂ ಇಲ್ಲಿ ಆಗಿರುವಂತಿದೆ. ಕೊಡಗಿನ ದೊಡ್ಡವೀರರಾಜೇಂದ್ರ ಒಡೆಯನ ಖಾಸಾ ರಹಸ್ಯದ ಶಂಭಯ್ಯ ಬರೆದ ರಾಜೇಂದ್ರನಾಮೆಯ ರೀತ್ಯ, 'ವಂಶಭೂತರಲ್ಲಿ ಒಬ್ಬರು ಮೊದಲಾರಭ್ಯ, ಪೆರಿಯಾಪಟ್ಟಣದಲ್ಲಿ ಇದ್ದು ಅಲ್ಲಿ ರಾಜ್ಯಭಾರಮಾಡಿಕೊಂಡು ಏಕಗೃಹಕೃತ್ಯವಾಗಿ ನಡೆಯುತ್ತಾ ಇದ್ದರು' (ಪು. ೨); ಮೈಸೂರರರಸರು ಪಿರಿಯಾ ಪಟ್ಟಣವನ್ನು ಕಸಿದ ಮೇಲೆ ಅಲ್ಲಿದ್ದ ಚಂಗಾಳ್ವ ದೊರೆ ನಂಜುಂಡರಸು, ವೀರಒಡೆಯನ ಮೊಮ್ಮಗ ಮುದ್ದರಾಜನಲ್ಲಿಗೆ ಬಂದಾಗ, ಮುದ್ದರಾಜ ನುಡಿದ ಮಾತು : 'ನಿಮ್ಮ ಕುಮಾರರು ತೀರಿಹೋದಾಗ್ಯೂ ...... ನಿಮ್ಮ ಅಣ್ಣನ ಮಗನಾಗಿ ನಾವು ಹಾಜರು ಇದ್ದೇವೆ' (ರಾಜೇಂದ್ರನಾಮೆ ಪು. ೫- ಆದರೆ ಕ್ರಿ.ಶ.೧೬ಳಳರಲ್ಲಿ ಕೊಡಗನ್ನು ಆಳುತ್ತಿದ್ದುದು ಮುದ್ದರಾಜ. ಅಂತಾಗಿ ಈ ಸಂದರ್ಭ ಮುದ್ದರಾಜನಿಗೆ ಅನ್ವಯವೇ ವಿನಾ ರಾಜೇಂದ್ರನಾಮೆಯಲ್ಲಿ ತಪ್ಪಾಗಿ ಉಕ್ತಮಾಡಿರುವ ಸಿರಿಬಾಯಿ



ರಾಜೇಂದ್ರನಾಮ ಬರಸಿದ ದೊಡ್ಡವೀರರಾಜೇಂದ್ರ ಒಡೆಯ

ದೊಡ್ಡವೀರಪ್ಪನ ಸಂದರ್ಭಕ್ಕಲ್ಲ) ಎಂದಿರುವುದು; ಇಕ್ಕೇರಿ ಸಂಸ್ಥಾನದ ಸೋಮಶೇಖರ ನಾಯಕನು ಮಲೆಯಾಳದ ಚರಕಲ್ಲ ವೀರವರ್ಮರಾಜನ ಸೀಮೆಯನ್ನು ಹಿಡಿದಾಗ, ಕೊಡಗಿನ ಸಿರಿಬಾಯಿ ದೊಡ್ಡವೀರಪ್ಪನಿಗೆ ಬರೆದ ಮಾತು: 'ತಾವೂ ಅವರೂ (ಇಕ್ಕೇರಿ ಸೋಮಶೇಖರ ನಾಯಕ) ಸ್ವಕೀಯಸ್ಥರಾದ್ದರಿಂದ.... ಉಪಕಾರ ಮಾಡಿಕೊಡ ಬೇಕು' (ರಾ. ನಾಮೆ ಪು. ೧೦); ಆದರೆ ಮಾತಿನಂತೆ ಚರಕಲ್ಲ ರಾಜ, ನಾಯಕನಿಗೆ ಹಣ ತಲುಪಿಸದಿದ್ದಾಗ ಹೊಣೆಗೆ ನಿಂತಿದ್ದ ತಾನೇ ಹಣನೀಡಿ ದೊಡ್ಡವೀರಪ್ಪ ಒಡೆಯನು ಸೋಮಶೇಖರ ನಾಯಕನಲ್ಲಿ ಈ ಬಗ್ಗೆ ಪ್ರಸ್ತಾಪಮಾಡಿದಾಗ, ಸೋಮಶೇಖರ ನಾಯಕನು ಹೇಳಿದ ಮಾತು: 'ಮಲೆಯಾಳದ ಅರಸರು ಮೋಸಗಾರರು...... ನೀವು ನಮಗೆ ಸ್ವಕೀಯಸ್ಥರೇ ಹೊರತು ಬೇರೊಂದಲ್ಲ (ರಾ. ನಾ. ಪು. ೧೨)-ಹೀಗೆಲ್ಲ ಇರುವಲ್ಲಿ ಇಕ್ಕೇರಿ-ಹಾಲೇರಿ, ಹಾಲೇರಿ-ಚಂಗಾಳ್ವ ಹಾಗು ಚಂಗಾಳ್ವ-ಕೆಳದಿ (ಇಕ್ಕೇರಿ) ಅರಸರ ವಂಶಿಕ ಸಂಬಂಧದ ಎಳೆಗಳು ನೇಯ್ದುಕೊಂಡು ಬರುತ್ತವೆ. ಪ್ರೊ॥ ಎಂ. ಎನ್. ಶ್ರೀನಿವಾಸ್ ಅವರೂ ಕೂಡ ಬಿದನೂರಿನ ನಾಯಕರು (ಇಕ್ಕೇರಿ ವಂಶ), ಪಿರಿಯಾಪಟ್ಟಣದ ದೊರೆಗಳು (ಚಂಗಾಳ್ವರು) ಹಾಗು ಕೊಡಗಿನರಸರು ಪರಸ್ಪರ ಸಂಬಂಧಿಗಳು ಎಂದಿದ್ದಾರೆ. *೨೦

ದೊಡ್ಡ ವೀರರಾಜೇಂದ್ರ ಒಡೆಯನು ಕ್ರಿ. ಶ. ೧೮೪೯ರ ನಂತರ ಬಂಗಾಳದ ಗೌರ್ನರ್ ಜನರಲ್ ಮಾರ್ನಿಂಗ್‌ಟನ್‌ನಿಗೆ ಪಿರಿಯಾಪಟ್ಟಣ ಸೀಮೆ ಮತ್ತು ಕೊಡಗಿನ ಗಡಿಸೀಮೆ ಸರಹದ್ದಿನ ಕುರಿತ ದಾಖಲೆ ಸಂಬಂಧ ಬರೆದ ಪತ್ರದಲ್ಲಿ ನುಡಿದಿರುವುದು ಹೀಗೆ : '....ನಮ್ಮ ಸಗ್ಗಾವತ್ತಿನ ಅರಸುಗಳು ಪೆರಿಯಾಪಟ್ಟಣದ ಒಳಗೆ ಇರುತ್ತಾ ಇದ್ದರು. ಅವರಿಗೆ ಮೈಸೂರ ಅರಸುಗಳು ದಗಾಮಾಡಿ ಹೊಡದು ಆ ಸೀಮೆ ಆಕ್ರಮಿಸಿಕೊಂಡರು.' (ರಾ. ನಾ. ಮೆ. ಪು. ೧೯೬) ಕೃತಿಯ ಈ ವಾಕ್ಯದಲ್ಲಿನ 'ಸಗ್ಗಾವತ್ತು' ಶಬ್ದಪ್ರಯೋಗ 'ಆವೊತ್ತಿನ ವಂಶಿಕ ಹಿರಿಯರು' ಎಂಬ ಅರ್ಥವನ್ನು ತರುತ್ತದೆ. 'ರಾಜೇಂದ್ರನಾಮೆಯಲ್ಲಿ (ಪು. ೨೧೧) ಆಂಗ್ಲರು ಸೋದೆ ಅರಸರಿಗೆ, ಕೊಡಗಿನರಸರ ಸಂಬಂಧ ಬರೆಯುವಲ್ಲಿ 'ಅವರಿಗೂ ತಮಗೂ ಪ್ರಾಕಾರಭ್ಯ ದೋಸ್ತಿ ಸಗ್ಗಾವತು ಉಂಟು' ಎಂದಿದೆ. ಅಂತಾಗಿ 'ಸಗ್ಗಾವತು' ಶಬ್ದಕ್ಕೆ ನಿಘಂಟುವಿನ 'ಸ್ನೇಹ ಸೌಖ್ಯ' ಎಂಬ ಅರ್ಥವನ್ನು ಮೀರಿ ಹೇಳಬೇಕಾಗುತ್ತದೆ. ಅದು 'ದೋಸ್ತಿ'ಗಿಂತ ಮೀರಿದ್ದು. ವಂಶಿಕ ಹಿರಿಯರಿಗೆ ಅನ್ವಯವಾದದ್ದು. 'ಸಗ್ಗ' ಎಂದರೆ 'ಸೃಷ್ಟಿ', 'ವಂಶ' ಎಂಬ ಅರ್ಥಗಳೂ ಇರುವ ಬಗ್ಗೆ ಪ್ರೊ॥ ಅ. ರಾ. ಮಿತ್ರ ಅವರು ನನ್ನ ಗಮನ ಸೆಳೆದರು. ಹೀಗಾಗಿ 'ಸಗ್ಗಾವತ್ತು' ವಂಶಭೂತರಿಗೆ ಅನ್ವಯವೆ. ಆವೊತ್ತು ಸಗ್ಗ ವಾದವರು=ಅಂದಿಗೆ ಸ್ವರ್ಗಸ್ಥರಾದವವರು=ಸಗ್ಗಾವತ್ತಿನವರು, ಎಂದೂ ಗಮನಿಸಿದರೆ, 'ನಮ್ಮ ಸಗ್ಗಾವತ್ತಿನ ಅರಸುಗಳು', ಎಂಬುದು ತಮ್ಮ ವಂಶದ ಹಿರಿಯನ್ನೆ ಕುರಿತು ಹೇಳಿದ ಮಾತಾಗುತ್ತದೆ. ಹೀಗಾಗಿ ದೊಡ್ಡವೀರರಾಜೇಂದ್ರ ಒಡೆಯನು ಪಿರಿಯಾಪಟ್ಟಣದ ಚಂಗಾಳ್ವ ಅರಸರಿಗೂ (ಹಿರಿಯರಾಜದೇವ, ನಂಜುಂಡರಸುವು ಸೇರಿದಂತೆ) ತಮಗೂ ಇದ್ದ ಕೌಟುಂಬಿಕ ವಂಶಿಕ ಬಾಂಧವ್ಯವನ್ನು ದೃಢೀಕರಿಸಿದ್ದಾನೆ. ಇದಲ್ಲದೆ ಹುಲಸೇಗ್ರಾಮದ ಜಂಗಮ ಈಶ್ವರಯ್ಯನು ಬರೆದ 'ನಂಜರಾಯಪಟ್ಟಣದ ದೊರೆಗಳ ವೃತ್ತಾಂತ'ದಲ್ಲಿ (ನಂಜರಾಯಪಟ್ಟಣ ಹೊಸ ಪಟ್ಟಣದ ಶ್ರೀ ಬಿ. ಈ. ವೀರರಾಜು ಅವರು ಈ ಕ್ರಿ. ಶ. ೧೮೭೦ರ ಸುಮಾರಿನ ಈ ಹಸ್ತ ಪ್ರತಿಯನ್ನು ನಮಗೆ ತೋರಿಸಿದ್ದಾರೆ.) 'ಹಾಲೇರಿ ಅರಸರು ಹಾಗು ಅವರ ಖಾಸಾ ಸಹೋದರ ನಂಜರಾಜ ಅರಸರು ಮತ್ತು ಅವರ ರಾಣಿ ನಂಜಮ್ಮಾಜಿ' ಎಂದು ಉಕ್ತವಾಗಿರುವುದು ವೀರರಾಜ ಒಡೆಯ ಮಗ, ಅಪ್ಪಾಜಿರಾಜೇಂದ್ರ ಒಡೆಯನ ಸ್ವಂತ ಸೋದರ, ಮುದ್ದರಾಜನ ಸ್ವಂತ ಚಿಕ್ಕಪ್ಪ ನಂಜುಂಡರಸುವಿನ ಕುರಿತುದುದೇ ಆಗಿದೆ.

ಈ ಮುನ್ನ ಅಪ್ಪಾಜಿರಾಜೇಂದ್ರ ಒಡೆಯನ ಕಾಲದಲ್ಲಿ ಕ್ರಿ.ಶ. ೧೬೨೯-೩೦ರ ಸಮಯದಲ್ಲಿ ಮಲೆಯಾಳದ ಕೋಲರಿತ್ತಿ ಯವರು (ಕೋಲತ್ತರಸು) ಕೆಳದಿಯವರ ಮೇಲೆ ಯುದ್ಧ ಸಾರಿದಾಗ ಕೆಳದಿ ಸೇನಾಧಿಪತಿ (ಶಿವಪ್ಪನಾಯಕ) ಕೇರಳದ ಮೇಲೆ ಏರಿ ಹೋಗಿ ನೀಲೇಶ್ವರ ಮತ್ತು ಕಣ್ಣಾನೂರನ್ನು ವಶಪಡಿಸಿಕೊಂಡ. ಕೊಡಗಿನ ಅಪ್ಪಾಜಿರಾಜನನ್ನು ಬಂಧಿಸಿ, ಸೆರೆಯಲ್ಲಿಟ್ಟು ಕೊಡಗನ್ನು ಸುಲಿಗೆ ಮಾಡಿದ. *೨೧ ಇದಕ್ಕೆ ಕಾರಣ ಮಲೆಯಾಳದ ಕೋಲರಿತ್ತಿ ಅರಸರು ಅಪ್ಪಾಜಿರಾಜೇಂದ್ರನ ನೆರವನ್ನು ಬಯಸಿದ ಕಾರಣ, ಅವನು ಸೈನ್ಯ ಸಮೇತ ಹೋಗಿ ಕೆಳದಿ ಸೈನ್ಯವನ್ನು ಎದುರಿಸಿ ಸೋತು ಹಿಂದಿರುಗಿದ್ದ. ಆಗ ಕೊಡಗಿನ ರಾಜಪತ್ನಿ ಬೇಲೂರು ಕೃಷ್ಣಪ್ಪನಾಯಕನ ಶಿವಪ್ಪನಾಯಕನಲ್ಲಿಗೆ ಬಂದು ಪತಿಯನ್ನು ಬಿಡುಗಡೆ ಮಾಡಲು ಬೇಡಿದಳು. ಬೇಡಿಕೆಗೆ ಮಣಿದ ಶಿವಪ್ಪನಾಯಕ ಶರತ್ತಿಟ್ಟು ಅಪ್ಪಾಜಿ ರಾಜೇಂದ್ರನಿಗೆ ಕೊಡಗು ರಾಜ್ಯವನ್ನೂ ಹಿಂದಿರುಗಿಸಿದನೆನ್ನಲಾಗಿದೆ. ಬಹುಶಃ ಅಪ್ಪಾಜಿರಾಜೇಂದ್ರನಿಗೆ, ಕೆಳದಿಯ ತಮ್ಮ ದಾಯಾದಿಗಳಿಂದ, ತನ್ನ ತಂದೆಗೆ ಆದ ಅನ್ಯಾಯದ ಕಾರಣ ಈ ಯುದ್ಧಕ್ಕೆ ನೆರವಾಗಲು ಅವನಿಗೆ ಪ್ರೇರಣೆ ಆಗಿರಬೇಕು. ಆದರೆ ಶಿವಪ್ಪನಾಯಕ ಕೊಡಗು ರಾಜ್ಯವನ್ನು ಹಿಂದಿರುಗಿಸಲು ವಂಶಿಕ ಭಾವನಾತ್ಮಕ ನಂಟೂ ಕೆಲಸ ಮಾಡಿರಬೇಕು.

ಅಪ್ಪಾಜಿರಾಜೇಂದ್ರನ ಮಗ ಮುದ್ದರಾಜನಿಗೆ ಕ್ರಿ. ಶ. ೧೬೩೩ ರಲ್ಲಿ ಕೊಡಗಿನ ಸಿಂಹಾಸನವೇರಿದ ಮೇಲೆ, ಶಿವಪ್ಪ ನಾಯಕ ನೊಡನೆ ಮಧುರ ಸಂಬಂಧವೇ ಇತ್ತು. ಮುದ್ದರಾಜನ ಆಸರೆಗೆ ಕ್ರಿ.ಶ. ೧೬೪೪ರಲ್ಲಿ ಅವನ ಚಿಕ್ಕಪ್ಪ ಚಂಗಾಳ್ವ ದೊರೆ ನಂಜುಂಡ ರಸುವೂ ರಾಜ್ಯಭ್ರಷ್ಟನಾಗಿ, ಬಂದು ನಿಂತಿದ್ದ. ಶಿವಪ್ಪನಾಯಕನು ಮುದ್ದರಾಜನನ್ನ ಬರಮಾಡಿಕೊಂಡು ಸತ್ಕರಿಸಿದ್ದ. ಆಗ ಕೆಳದಿ ರಾಮೇಶ್ವರರಿಗೆ ಹರಕೆ ಹೊತ್ತ ಮುದ್ದರಾಜನಿಗೆ ಗಂಡು

ಮಗುವಾಯಿತು. ವೀರಭದ್ರ-ಪುತ್ರೋತ್ಸವ ಸಮಯದಲ್ಲಿ ಶಿವಪ್ಪನಾಯಕ ಹಾಲು ಬೆಣ್ಣೆಗೆಂದು 'ಅಮೃತ ಮಾಗಣಿ' ಎಂಬ ಹೆಸರಿಟ್ಟು ಗ್ರಾಮಗಳನ್ನು ಮುದ್ದರಾಜನಿಗೆ ನೀಡಿದ.

ಮುದ್ದರಾಜನಿಗೆ ಕೆಳದಿ ರಾಣಿ ಚೆನ್ನಮ್ಮಾಜಿಯೊಡನೆ ಸುಮಧುರ ಭಾಂಧವ್ಯವಿತ್ತು.' ಕೆಳದಿ ಚೆನ್ನಮ್ಮಾಜಿ ತನ್ನ ದತ್ತುಪುತ್ರ ಹಿರಿಯ ಬಸಪ್ಪನಾಯಕನನ್ನು ಕರೆದುಕೊಂಡು ಕನ್ನಡದ ಸುಬ್ರಮಣ್ಯ ಕ್ಷೇತ್ರಕ್ಕೆ ಬಂದಿದ್ದಾಗ ಮುದ್ದರಾಜ, ಚೆನ್ನಮ್ಮಾಜಿ ಪರಸ್ಪರ ಭೇಟಿಯಾಗಿ ಉಡುಗೊರೆಗಳ ವಿನಿಮಯ ಮಾಡಿಕೊಂಡ ರೆಂದಿದೆ (ಕೊಡಗಿನ ಇತಿಹಾಸ, ಪು. ೮೩). ಆದರೆ ಕೆಳದಿ ನೃಪ ವಿಜಯದ ರೀತ್ಯಾ ಚನ್ನಮ್ಮಾಜಿ ಸುಬ್ರಮಣ್ಯಕ್ಕೆ ಬಂದದ್ದು ಔರಂಗಸೇಬನ ಸೈನ್ಯದ ಮೇಲೆ (ಕ್ರಿ. ಶ. ೧೬೯೦ರಲ್ಲಿ) ವಿಜಯ ಸಾಧಿಸಿದ ಮೇಲೆ (ಪು. ೨೪೦); ಗೋಕರ್ಣ ಯಾತ್ರೆಗೆ (ಕಡೂರು, ಬಾಣಾವರ, ಹಾಸನ, ಬೇಲೂರು ಕೋಟೆಗಳನ್ನು ಸಾಧಿಸಿದ ಮೇಲೆ ವಿಜಯದ ಹರಕೆ ಯಾತ್ರೆ ಎನ್ನಬಹುದು) ಬಂದದ್ದು ಕ್ರಿ. ಶ. ೧೬೯೭ರ ಸಮಯದಲ್ಲಿ (ಪು. ೧೯೫). ಅಂದರೆ ಮುದ್ದರಾಜ ಭೇಟಿ ಮಾಡಿದ ಎಂದರೆ ಅವನು ಕ್ರಿ. ಶ. ೧೬೯೭ರಲ್ಲಿ ತೀರುವ ಮುನ್ನ ಗೋಕರ್ಣದಲ್ಲಿಯೇ ವಿನಾ ಸುಬ್ರಮಣ್ಯದಲ್ಲಲ್ಲ; ಸುಬ್ರಮಣ್ಯದಲ್ಲಿ ಕೊಡಗಿನ ರಾಜನ ಭೇಟಿ ಎಂದರೆ ಅದು ಸಿರಿಬಾಯಿ ದೊಡ್ಡವೀರಪ್ಪ-ಕೆಳದಿ ಚನ್ನಮ್ಮಾಜಿ ನಡುವಣ ಭೇಟಿಯೆ ಆಗಿರಬೇಕಾಗುತ್ತದೆ.

ಇವೆರಡರಲ್ಲಿ ಯಾವುದೇ ಸಂದರ್ಭವಾದರೂ, ಕೆಳದಿ ಹಾಗು ಕೊಡಗು ಅರಸು ವಂಶದ ಅಂದಿಗಿದ್ದ ಸುಮಧುರ ಬಾಂಧವ್ಯದ ಕುರುಹೇ ಆಗಿತ್ತು. ಮತ್ತೆ ಕೆಳದಿ ಚೆನ್ನಮ್ಮಾಜಿಯ ದತ್ತು ಪುತ್ರ ಹಿರಿಯ ಬಸಪ್ಪನಾಯಕನೂ ಜೊತೆಗಿದ್ದುದರಿಂದ, ಕೆಳದಿ ಚನ್ನಮ್ಮಾಜಿಯ ನಂತರವೂ ಈ ಸಂಬಂಧ ಸಾಮರಸ್ಯ ಮುಂದುವರಿದಿದೆ. ಈಗಾಗಲೇ ಹೇಳಿರುವಂತೆ. ಈ ಹಿರಿಯ ಬಸಪ್ಪನಾಯಕನ ಪುತ್ರನಾದ ಇಮ್ಮಡಿ ಸೋಮಶೇಖರ ನಾಯಕ ನೊಡನೆ ದೊಡ್ಡ ವೀರಪ್ಪನ ಸಂಬಂಧ ಸುಗಮವಿದ್ದು 'ಸ್ವಕೀಯಸ್ಥ' ನಾಗಿ, ಅಮರ ಮಾಗಣೆ (ಅಮರಸುಳ್ಯ)ಯನ್ನು ಪಡೆದುಕೊಂಡ, ಎಂಬುದು ರಾಜೇಂದ್ರನಾಮೆಯಲ್ಲಿ ದಾಖಲಾಗಿರುವ ಸಂಗತಿ. (ಪು. ೧೩). ಸಾಗರ ಕೈಫಿಯತ್ತು ಕೂಡ ಬೂದಿ ಬಸಪ್ಪನಾಯಕನ ಮಗ ಸೋಮೇಶೇಖರನಾಯಕನು (ಚಿಕ್ಕಬೂದಿ ಬಸಪ್ಪನಾಯಕ ನೆಂದು, ಇಮ್ಮಡಿ ಬೂದಿಬಸಪ್ಪ ನಾಯಕನಿಗೆ ಕೈಫಿಯತ್ತು ಸಂಬೋಧಿಸಿಕೊಂಡಿರುವುದರಿಂದ ಹಿರಿಯ ಬಸಪ್ಪನಾಯಕನಿಗೂ, ಜನವಾಡಿಕೆಯಲ್ಲಿ ಬೂದಿ ಬಸಪ್ಪನಾಯಕ ಎಂದಿರುವುದನ್ನು ದಾಖಲಿಸಿರುವಂತಿದೆ.) ಸುಬ್ರಮಣ್ಯ ಪರಿಯಂತ್ರಕ್ಕೂ ಹೋಗಿ ಕೊಡಗಿನ ವೀರರಾಜನವರ ಭೇಟಿ ತೆಗೆದುಕೊಂಡ ಬಗ್ಗೆ ತಿಳಿಸಿದೆ.*೩ ಇದು ಕೊಡಗು ಕೆಳದಿ ಅರಸರ ಸಂಬಂಧಗಳನ್ನು ಜನವರ್ಗ ಗುರುತಿಸಿದ್ದ ಬಗೆಯನ್ನು ಹೇಳಿದಂತಿದೆ. ಇದಲ್ಲದೆ ರಾಜೇಂದ್ರ ನಾಮೆಯಲ್ಲಿ ಕೆಳದಿ ವಂಶದ ರಾಜರ, ರಾಣಿಯರ ಉಲ್ಲೇಖಗಳು ಅವರು ಏಳು ಬೀಳುಗಳ ಸಹಿತ ನಮೂದು ಆಗಿದೆ. ಇಮ್ಮಡಿ ಬೂದಿ ಬಸಪ್ಪನಾಯಕ, ಅವನ ಕುಟುಂಬ ಈರಮ್ಮಾಜಿ, ಆಕೆಯ ಚರ್ಯೆಗಳ ಬಗ್ಗೆ ಹೇಳಿದೆ (ಪು. ೧೪-೧೭). ವಿಶೇಷವಾಗಿ ಕೆಳದಿ ಚೆನ್ನಮ್ಮಾಜಿ ಕುರಿತು ಹೇಳಿರುವ 'ಇಕ್ಕೇರಿ ಸಂಸ್ಥಾನದಲ್ಲಿ ದೊಡ್ಡ ಚೆನ್ನಮ್ಮಾಜಿಯವರು ಸೋಮಶೇಖರ ನಾಯಕರ ಸಾಕಿಕೊಂಡು ದೊರೆತನ ಮಾಡುತ್ತಿದ್ದರು.' (ಪು. ೩) - ಅಂದರೆ ಕ್ರಿ.ಶ. ೧೬೭೭ರಲ್ಲಿ ಹಿರಿಯ ಬಸಪ್ಪನಾಯಕನಿಗೆ ಮದುವೆ ಆದ ಮೇಲೆ ಹುಟ್ಟಿದ ಸೋಮಶೇಖರನಾಯಕ ಆಕೆಗೆ ಮೊಮ್ಮಗನಲ್ಲವೆ! ರಾಜೇಂದ್ರ ನಾಮೆ ಈ ಕುರಿತು ಹೇಳಿದಂತಿದೆ. ಬಸಪ್ಪನಾಯಕ ಯುವರಾಜ ನೆನಿಸಿ ಕೆಳದಿ ಚೆನ್ನಮ್ಮಾಜಿಯ ಆಡಳಿತ ನಡೆಸುತ್ತಿದ್ದನಲ್ಲ.! 'ದೊಡ್ಡ ಚೆನ್ನಮ್ಮಾಜಿ' ಎಂದು ರಾಜೇಂದ್ರನಾಮೆ ಹೇಳಿರುವು ದರಿಂದ, ಅವಳ ಸಾಕುಪುತ್ರಿಯಾದ ಮರಿಚೆನ್ನಮ್ಮಾಜಿಯ ಬಗ್ಗೆಯೂ ತಿಳಿದಿದ್ದಿರಬೇಕು. ಈ ಮರಿಚೆನ್ನಮ್ಮಾಜಿಗೆ ಕ್ರಿ.ಶ. ೧೬೮೭ರಲ್ಲಿ (ದೊಡ್ಡ) ಚೆನ್ನಮ್ಮಾಜಿಯು ಮಲ್ಲಿಕಾರ್ಜುನ ನಾಯಕ ಎಂಬುವನೊಡನೆ ಮದುವೆಮಾಡಿದಳು. ಈ ಸಂದರ್ಭದಲ್ಲಿ ಕೆಳದಿಯ ಚೆನ್ನಮ್ಮಾಜಿಯ ಕುಟುಂಬದ ಕೆಲವರ ಶಿಲ್ಪವು ಕುಲದೇವತೆ ಕೆಳದಿ ವೀರಭದ್ರನ ಗುಡಿ ಎದುರಿನ ಧ್ವಜಸ್ತಂಭ ದಲ್ಲಿರುವುದು ಗಮನಾರ್ಹವೆನಿಸುತ್ತದೆ. ಆ ವಿವರವನ್ನಿಲ್ಲಿ ಪರಿಶೀಲಿಸಬಹುದು.

ಈ ಧ್ವಜಸ್ತಂಭದಲ್ಲಿ ಕೆಳಗೆ ಚೆನ್ನಮ್ಮಾಜಿ, ಶಿವಾಜಿಯ ಮಗ ರಾಜಾಜರಾಮನ ಶಿಲ್ಪ*೪ಗಳಿವೆ. ಎಂಬ ಅಭಿಪ್ರಾಯವಿದೆ. ಆದರೆ ಈ ಧ್ವಜಸ್ತಂಭದ ಇತಿಹಾಸ ಹಾಗು ಸಂದರ್ಭಗಳು ಬೇರೆಯೆ ವಿಷಯವನ್ನು ತಿಳಿಸುತ್ತವೆ. ಧ್ವಜಸ್ತಂಭವು ಕೆಳದಿ ಅರಸರ ಕುಲದೇವತೆ ವೀರಭದ್ರ ಗುಡಿ ಎದುರಿಗೆ ಇದೆ. ಕುಲದೇವರ ಎದುರು ಮನೆತನದವರು ಹಾಗು ಸಂಬಂಧಗೊಂಡವರು ನಮಿದು ಭಕ್ತಿಯಿಂದ ನಿಲ್ಲುವುದು ಸಹಜ-ಸಾಮಾನ್ಯ. ಅಲ್ಲದೆ ಈ ಧ್ವಜ ಸ್ತಂಭವನ್ನು ಕ್ರಿ. ಶ. ೧೬೮೧ರಲ್ಲಿ (ಬೊಕ್ಕಸದ!) ಸಿದ್ದ ಬಸವಯ್ಯನು ಪ್ರತಿಷ್ಠಾಪಿಸಿದನು.*೫ ಹಾಗಾಗಿ ಧ್ವಜಸ್ತಂಭ ದಲ್ಲಿನ ಕೋಷ್ಠದಲ್ಲಿರುವುದು ಸ್ಥಾನಕಪ್ರಣಾಮ ಭಂಗಿಯಲ್ಲಿ ಕೆಳದಿ ಚೆನ್ನಮ್ಮಾಜಿ ಕೇಂದ್ರವಾಗಿ, ಆಕೆ ಬಲಬದಿಗೆ ಸಾಕುಮಗಳು ಮರಿಚೆನ್ನಮ್ಮಾಜಿ ಹಾಗು ಕುಟುಂಬದ ಇನ್ನೊಬ್ಬ ಸಾಕು ಮಗಳು(!); ಎಡಬದಿಗೆ ಹಿರಿಯ ಬಸಪ್ಪನಾಯಕ, ಅವನ ಎಡ ಬದಿಗೆ ಬಹುಶಃ ಮನೆವಾರ್ತೆ ಹುದಾರ ವೀರಪ್ಪ*೬ (ಮಂತ್ರಿ ಸಹಾಯಕ, ಇಲ್ಲಿ ಯುವರಾಜ ಹಿರಿಯ ಬಸಪ್ಪನಾಯಕನ ನೆರವಿಗೆ ಹಾಗು ಕುಟುಂಬಕ್ಕೆ ಸಂಬಂಧಿಸಿದವನಿರಬೇಕು.) ಈ ಮನೆವಾರ್ತೆ ವೀರಪ್ಪ ಹಿರಿಯ ಬಸಪ್ಪನಾಯಕ ಹಾಗು ಇಮ್ಮಡಿ ಸೋಮಶೇಖರ ನಾಯಕನ ಕಾಲದಲ್ಲಿಯೂ ಮಂತ್ರಿ(ಗುರಿಕಾರ)ಯಾಗಿರುವ ನಮೂದು ಆರ್. ಶಾಮಾಶಾಸ್ತ್ರಿ ಸಂಪಾದಿತ ಕೆಳದಿ ನೃಪವಿಜಯ



ಧ್ವಜಸ್ತಂಭಕೋಷ್ಠದಲ್ಲಿ ಮರಿಚೆನ್ನಮ್ಮಾಜಿ, ಕೆಳದಿ ಚನ್ನಮ್ಮಾಜಿ ಹಿರಿಯಬಸಪ್ಪನಾಯಕ, ಮದುನಿವೀರಪ್ಪ(!)

ಇನ್ನು ಶಿವಾಜಿಯ ಮಗ ರಾಜಾರಾಮ ಔರಂಗಸೇಬನ ಸೇನೆಯ ಬೆನ್ನಟ್ಟುವಿನ ಕಾರಣ ಓಡಿಬಂದು ಆಶ್ರಯ ಕೋರಿದ್ದು ಕ್ರಿ. ಶ. ೧೬೮೯ರಲ್ಲಿ ಬಿದನೂರಿನಲ್ಲಿದ್ದ ಕೆಳದಿ ಚೆನ್ನಮ್ಮಾಜಿಯಲ್ಲಿ. ಅವನು ಅವಳ ಆಸರೆಯಲ್ಲಿ ನಗರಕ್ಕೆ ೧೦ ಕಿ. ಮಿ. ದೂರದ ಶರಾವತಿ ತೀರದ 'ಅರಮನೆ ಕೊಪ್ಪ'ದಲ್ಲಿ ಇದ್ದುದು ೧೬೮೯ರ ಅಕ್ಟೋಬರಿನಲ್ಲಿ. ಮತ್ತು ಅವನನ್ನ ಜಿಂಜಿಗೆ ಸಾಗಿಕಳುಹಿಸಿದ್ದೂ ಕೆಳದಿ ಮೂಲಕವಲ್ಲ.*೩೯ ವೀರಭದ್ರ ಅವನಿಗೇನೂ ಕುಲದೇವರೂ ಅಲ್ಲ. ಅಂದಮೇಲೆ ಕ್ರಿ. ಶ. ೧೬೮೯ರಲ್ಲಿ ರಾಜಾರಾಮನ ಘಟನೆ ನಡೆದಿರುವಲ್ಲಿ ಶಿಲ್ಪವು ಕ್ರಿ.ಶ. ೧೬೮೧ರ ಧ್ವಜಸ್ತಂಭದಲ್ಲಿ, ಅದೂ ಅವನ ಕೆಳದಿ ಕುಟುಂಬದ ಒಬ್ಬ ಸದಸ್ಯ ಶಿಲ್ಪವಾಗಿರಲು ಹೇಗೆ ಸಾಧ್ಯ? ಶಿಲ್ಪದ ವೇಷದ ಬಗ್ಗೆ ಕೆಳದಿಯ ವೀರಪ್ಪನ ಅಂದಿನ ವೇಷಭೂಷಣದ ಸಾಕ್ಷಿಯೇ ಇದೆ. ಶಿಲ್ಪದ ಕುರಿತ ಈ ಪ್ರಸ್ತಾಪ 'ಕೆಳದಿ ಸಮಗ್ರ ಅಧ್ಯಯನ' ಕೃತಿಯಲ್ಲಿ ಕೆಳದಿಯ ವಾಸ್ತು- ಶಿಲ್ಪ ವಿಭಾಗದ ಲೇಖನದಲ್ಲಿಯೂ ಉಕ್ತವಾಗಿಲ್ಲ.*೪೦

ರಾಜೇಂದ್ರನಾಮೆಯಲ್ಲಿ ಸೂಚಿತ ಮರಿಚೆನ್ನಮ್ಮಾಜಿ, ದೊಡ್ಡಚನ್ನಮ್ಮಾಜಿ : ಇಷ್ಟೆಲ್ಲ ಸಾಲುಗಳಿಗೆ ಅವಕಾಶ ನೀಡಿದ್ದು

(ಪು. ೧೭೭)ದಲ್ಲಿದೆ.*೪೨ ಬಹುಶಃ ವೀರಭದ್ರ ಗುಡಿಯ ಭೋಗ ಮಂಟಪ, ರಂಗಮಂಟಪಗಳ ನಡುವಣ ಶಿಲಾನೆಲಹಾಸಿನಲ್ಲಿರುವ ೧೭ನೇ ಶತಮಾನದ ಲಿಪಿಯಲ್ಲಿ 'ಮದುನಿ ವೀರಪ್ಪ' (=ಮನಿದು ವೀರಪ್ಪ ಅಂದರೆ ಮನೆಸಂಬಂಧಿ ವೀರಪ್ಪ, ಆಗಬಹುದು) ಎಂದು ಕಂಡರಿಸಿ ಅದರ ಕೆಳಗೆ ಅವನ ಪ್ರಣಾಮ ಭಂಗಿಯ ರೇಖಾ ಶಿಲ್ಪವನ್ನೂ ಬಿಡಿಸಿದೆ. ಅವನ ವೇಷಭೂಷಣವೂ ಧ್ವಜಸ್ತಂಭ ದಲ್ಲಿರುವ ಪುರುಷಶಿಲ್ಪಗಳ ವೇಷಭೂಷಣವೂ ಸರಿಸುಮಾರು ಒಂದೇ ಕಾಣುತ್ತದೆ. ಅಂತಾಗಿ ಕೆಳದಿ ರಾಜವಂಶಿಕರ ವೇಷಭೂಷಣ ಧ್ವಜಸ್ತಂಭದಲ್ಲಿರುವಂತೆ ಇತ್ತು ಎಂದು ತಿಳಿಯಲವಕಾಶ ವಾಗುತ್ತದೆ. ಬಹುಶಃ ಈ ವೀರಪ್ಪನೇ ಧ್ವಜಕೋಷ್ಠದಲ್ಲಿ ಯುವ ರಾಜ ಬಸಪ್ಪ ನಾಯಕನಿಗೆ ಮಂತ್ರಿ ಸಹಾಯಕನಂತೆ ಇದ್ದು, ಆ ಸಂಕೇತವಾಗಿ ರಾಜದಂಡ ಪರಿಕರಗಳನ್ನು ಎರಡೂ ಕೈಗಳಲ್ಲಿ ಹಿಡಿದು ನಿಂತಂತಿದೆ.



ಶಿಲಾನೆಲಹಾಸಿನಲ್ಲಿ ಮದುನಿ (ಮನಿದು!) ವೀರಪ್ಪನ ರೇಖಾ ಶಿಲ್ಪ

ಗಮನಾರ್ಹ. ಇನ್ನು ಕ್ರಿ.ಶ. ೧೭೫೬ರಲ್ಲಿ ಶೃಂಗೇರಿ ಮಠಕ್ಕೆ ಕೊಡಗಿನ ಅರಸ ಚಿಕ್ಕವೀರಪ್ಪನು ಭೂದಾನ ಕೊಟ್ಟ ಶಾಸನವಿರುವುದರಿಂದ ಕೆಳದಿಯವರೊಡನೆ ವಂಶಿಕ ಸಂಬಂಧವು ಆಗಲೂ ಚೆನ್ನಾಗಿ ನಡೆದು ಬಂದಿದ್ದಿರಬೇಕು. ಆದರೆ ಕ್ರಿ.ಶ. ೧೭೬೩ರಲ್ಲಿ ಹೈದರನ ವಶಕ್ಕೆ ಕೆಳದಿ ಹೋದ ಮೇಲೆ ವಂಶಿಕ ಸಂಬಂಧಗಳ ಪ್ರಶ್ನೆ ಏಳುವುದಿಲ್ಲ.

ಹೀಗೆ ಚಂಗಾಳ್ವ, ಹಾಲೇರಿ, ಇಕ್ಕೇರಿಯ (ಕೆಳದಿ) ತ್ರೈಕೂಟ ವಂಶಿಕ ಸಂಬಂಧಗಳು ಅಂತರೆಳೆಗಳಾಗಿ ನೇಯ್ದುಕೊಂಡಿದ್ದರೂ ಹಾಲೇರಿಯವರಲ್ಲಿ ಸಂಬಂಧಗಳು ಸೂಚನೆಗೊಂಡಂತೆ ಚಂಗಾಳ್ವರಲ್ಲಿ ಏಕಿಲ್ಲ? ಎಂಬ ಮಾತಿದೆ. ಇಲ್ಲಿ ಚಂಗಾಳ್ವರು ದಾಖಲು ಮಾಡುವ ಸಂದರ್ಭವೇ ಇಲ್ಲ. ಆದರೆ ಅವರ ಮುಂದಿನವರಾದ ಕೆಳದಿಯವರು ದಾಖಲಿಸದಿರಲು ಕಾರಣವಿದೆ. ಸಂಘರ್ಷ ಮೂಲವಾಗಿ ಕೊಡಗಿನಿಂದ ಹೊರಟ ಪೂರ್ವಚಂಗಾಳ್ವರ ಶಾಖೆ ತನ್ನ ರಹಸ್ಯವನ್ನು ಕಾಪಾಡಿಕೊಂಡೇ ಬರಬೇಕಿತ್ತು; ಬಂದಿತು. ಕೆಳದಿ ಗುಂಡಾ ಜೋಯಿಸರೂ ಹೇಳಿರುವಂತೆ ಕೆಳದಿಯ ಇತಿಹಾಸ ಕಥನದಲ್ಲಿ ತೆರೆಯ ಮರೆಯಲ್ಲಿ ಹಲವಾರು ಅಸ್ಪಷ್ಟ ಸಂಗತಿಗಳು ಜರುಗಿರಬಹುದು. ಲಿಂಗಣ್ಣನು ಅವುಗಳನ್ನು ಉಲ್ಲೇಖಿಸದಿರಬಹುದು. ಅರಮನೆಯಲ್ಲಿ ನಡೆದ ಅನೇಕ ಸಂಗತಿಗಳು ಗೊತ್ತಿದ್ದರೂ ವಿವಿಧ ಕಾರಣಗಳಿಂದ ಬಿಟ್ಟಿರಬಹುದು (ಕೆ. ನೃ. ವಿ: ಉಪೋದ್ಘಾತ ಪು.೩) ಆದರೆ ಕೆಳದಿ ಅರಸರ ಕೊಡಗಿನ ಕುರಿತ ವರ್ತನೆಗಳು, ಕೆಳದಿ ಸ್ಥಾಪನಾ ಪೂರ್ವಘಟನೆಗಳು ಅಂತರಿಕ ಎಳೆಗಳ ಸಂಬಂಧವನ್ನು ಪೋಷಿಸುತ್ತವೆ. ಹಾಲೇರಿ ಅರಸರ ಜಾಯಮಾನಗಳೂ ಹಾಗೆಯೆ ಇವೆ. ಇನ್ನು ಹಾಲೇರಿಯವರಲ್ಲಿ ಭಾರದ್ವಾಜ ಹಾಗು ಕಾಶ್ಯಪಗೋತ್ರಗಳು ಚಾಲ್ತಿಗಿದ್ದಂತೆ ಚಂಗಾಳ್ವ ಅರಸರಲ್ಲೂ ಆ ಎರಡೂ ಗೋತ್ರಗಳಿದ್ದುದು ಶಾಸನೋಕ್ತವಿದೆ. ಕೆಳದಿಯವರೂ ರಂಭಾಪುರಿ ಪೀಠದ ಸಂಪ್ರದಾಯದವರಾಗಿ ಭಾರದ್ವಾಜಗೋತ್ರ ಸಂಬಂಧವನ್ನು ಹಾಲೇರಿ ಅರಸಂತೆ ಪಡೆದಿದ್ದರು. ಹಾಲೇರಿಯವರಿಗಿದ್ದಂತೆ ಅಶ್ವಲಾಯನ ಸೂತ್ರದ ರುಕ್ ಶಾಖೆ ಕ್ರಿ. ಶ.೧೫೯೧ರ ಶಾಸನೋಕ್ತವಾಗಿ ಚಂಗಾಳ್ವ ಪಿರಿಯ ರಾಜದೇವನಿಗೆ ಅನ್ವಯವಿತ್ತು. ಕೆಳದಿ, ಹಾಲೇರಿ ಅರಸರು, 'ಶ್ರೀವೀರಭದ್ರ' ಎಂದು ಸ್ವಹಸ್ತವನ್ನು ಕುಲದೇವರ ಹೆಸರಿನಲ್ಲಿ ಹಾಕುತ್ತಿದ್ದರು.ಚಂಗಾಳ್ವರಿಗೆ ವೀರಭದ್ರನಿಗೆ ಪರ್ಯಾಯನಾಮವೆನಿಸುವ 'ಚನ್ನಮಲ್ಲಿಕಾರ್ಜುನ' ಕುಲದೇವತೆ. ಚಂಗಾಳ್ವ ನಂಜುಂಡರಸು 'ಕುಲದೇವರು ವೀರಭದ್ರ' ಎಂದೇ ಹೇಳಿಕೊಂಡಿದ್ದಾನೆ. ಹೀಗಾಗಿ ಚಂಗಾಳ್ವ ಕೆಳದಿ ಹಾಗು ಹಾಲೇರಿ ಅರಸರ ತ್ರಿಕೂಟ ಸಂಬಂಧಗಳನ್ನು ಅಂತರ್‌ನೇಯ್ಗೆಯಿಂದ ಕೂಡಿಸಿಕೊಂಡಾಗ ಈ ರಾಜವಂಶಗಳ ತ್ರಿವೇಣಿ ಸಂಗಮದ ಮೂಲ ಬಿಂದುಗಳು ಕಾಣಸಿಗುತ್ತವೆ. ಒಟ್ಟಿನಲ್ಲಿ ಕೊಡಗಿನಿಂದ ಹೋದ ವೀರಶೈವ ಚಂಗಾಳ್ವ ಶಾಖೆಯೊಂದು ಕೆಳದಿಯಲ್ಲಿ ವಿಕಸಿಸಿ ಕೆಳದಿ ಶಾಖೆಯೆಂದಾಗಿ ಕೊಡಗಿಗೇ ಹಿಂದಿರುಗಿದ್ದು ಗಮನಾರ್ಹವೆನಿಸುತ್ತದೆ.

## ಆಧಾರ ಸೂಚಿ ಮತ್ತು ಅಡಿಟಿಪ್ಪಣಿಗಳು


*೧. ***Mysore - Coorg Inscriptions*** : Rice Edn, 1889
*೨. ಕುಪ್ಪಚ್ಚಿರ ಮೊಣ್ಣಪ್ಪ: ***ಪೊಮ್ಮಾಲೆ ಕೊಡಗ್***
*೩. ***ಪಟ್ಟೋಲೆ ಪಳಮೆ*** : (ಸಂ) ನಡಿಕೇರಿಯಂಡ ಚಿಣ್ಣಪ್ಪ, ಮೈಸೂರು ವಿಶ್ವವಿದ್ಯಾಲಯ, ೧೯೩೫, ಪು. ೨೪
*೪. ಎ. ಕೆ. ೧(**ಹೊಸತು**), ಕೊಡಗು ಜಿಲ್ಲೆ, ಪೆಗ್ಗೂರು ೯೮ (ಕ್ರಿ. ಶ ೯೭೮)
*೫. ಅದೇ, ಮಾಲಂಬಿ ೬೫
*೬. ಡಿ. ಎನ್. ಕೃಷ್ಣಯ್ಯ : ***ಕೊಡಗಿನ ಇತಿಹಾಸ*** (೧೯೭೪), ಮೈಸೂರು ವಿಶ್ವವಿದ್ಯಾಲಯ, ಪು. ೩೯-೪೦
*೭. ಎಂ. ಎಸ್.ಅನಂತಪದ್ಮನಾಭರಾವ್ : 'ಕೊಡಗಿನ ವೀರಶೈವ ಅರಸರು', **ಕನ್ನಡನುಡಿ**, ಜೂನ್, ೩, ೧೯೪೩, ಪು. ೧೬೭
*೮. ಡಾ॥ ಪಿ. ಕೆ. ರಾಜಶೇಖರ : ***ಪಿರಿಯಾಪಟ್ಟಣದ ಕಾಳಗ***,ಪ್ರಸ್ತಾವನೆ, ಪು. iii
*೯. S. S. Jagirdar : 'New Light on the Hoysala' G. J. M. S. Vol. LXXXV No-1 Jan-Mar. 1994
*೧೦. ಎಂ.ಜಿ. ಚಂದ್ರಕಾಂತ್ ಮತ್ತು ಎಂ. ಜಿ. ನಾಗರಾಜ್ : 'ಕೊಡಗಿನ ನಾಗರ ಹೊಳೆಯ ಸಾಂಸ್ಕೃತಿಕ ಇತಿಹಾಸ ಮತ್ತು ಚಂಗಾಳ್ವರು', **ಇತಿಹಾಸದರ್ಶನ**, ಸಂ. ೧೨/೧೯೯೭ ಪು. ೧೪೪
*೧೧. ಅನಂತಪದ್ಮನಾಭರಾವ್, ಅದೇ, ಪು. ೧೬೭
*೧೨. ಎ ಕ. ಸಂ. ೪, ಮೈಸೂರು ವಿಶ್ವವಿದ್ಯಾಲಯ, ೧೯೭೫, ಪೀಠಿಕೆ ಪು. Lxxii
*೧೩. ಡಾ॥ ಎಂ. ಜಿ. ಚಂದ್ರಕಾಂತ್ ಮತ್ತು ಎಂ. ಜಿ. ನಾಗರಾಜ್ : ಅದೇ.,
*೧೪. ARMAD (1928, No. 65) II. G.Ṡ. Gai : some Problems in the History of the Nayakas of Keladi',' ***studies in Keladi History'***, (Ed) G. S. Dikshit, Bangalore, 1981, pp 18, 22
*೧೫. ಗ್ಯಾಝೆಟೀಯರು (ಕರ್ನಾಟಕ ಭಾಗ) : ಕನ್ನಡ ಭಾಷಾಂತರಕಾರರು - ವೆಂಕಟರಂಗೋಕಟ್ಟಿ, ಮುಂಬಯಿ, ೧೮೯೩, (ಪುನರಾವೃತ್ತಿ : ೧೯೮೪), ಪು. ೧೦೯, ೩೫೨

*೧೬. ಕನ್ನಡ-ಕನ್ನಡ ನಿಘಂಟು (೭ನೇ ಸಂಪುಟ), ಕನ್ನಡ ಸಾಹಿತ್ಯ ಪರಿಷತ್ತು, ೧೯೯೩, ಪು. ೬೯೭೩
*೧೭. ಎ. ಕ. ೧ (ಹೊಸತು), ಕೊಡಗುಜಿಲ್ಲೆ, ಅದೇ
*೧೮. ಎ. ಕ. (ರೈಸ್ ಆವೃತ್ತಿ ೧೯೦೧), ಕಡೂರು ಜಿಲ್ಲೆ, ಕಡೂರು ೩೬, ಪು. ೩೨
*೧೯. ಕೆಳದಿ ಗುಂಡಾ ಜೋಯಿಸ್: *ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ*, ಕೆಳದಿ, ೧೯೭೫, ಪು. ೫೨
*೨೦. ಎಂ. ಎಸ್. ಅನಂತ ಪದ್ಮನಾಭರಾವ್, ಅದೇ, ಪು. ೧೬೭
*೨೧. ಬಾ. ರಾ. ಗೋಪಾಲ: 'ಕೆಳದಿಯ ಮೊದಲಿನ ನಾಯಕರ ವಂಶಾವಳಿ ಕುರಿತು ಒಂದು ಟಿಪ್ಪಣಿ', *ಕೆಳದಿ ಐತಿಹಾಸಿಕ ನಿಬಂಧಗಳು*, (ಸಂ) ಡಾ॥ ಜಿ. ಎಸ್. ದೀಕ್ಷಿತ್, ಕೆಳದಿ ೧೯೮೯, ಪು.೩೦
*೨೨. ಕೆಳದಿ ಗುಂಡಾಜೋಯಿಸ್ : *ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ*, ಅದೇ., ಪು. ೨೯
*೨೩. ಡಿ. ಎನ್. ಕೃಷ್ಣಯ್ಯ : *ಕೊಡಗಿನ ಇತಿಹಾಸ*, ಪು. ೬೭
*೨೪. ಕೆಳದಿ ಗುಂಡಾಜೋಯಿಸ್ : ಅದೇ, ಪು. ೨೬, ೫೫
*೨೫. ಕೆಳದಿ ಗುಂಡಾಜೋಯಿಸ್ : *ಇಕ್ಕೇರಿ ಅರಸರು*, ಕರ್ನಾಟಕ ವಿಶ್ವವಿದ್ಯಾಲಯ, ೧೯೭೨, ಪು. ೬೯
*೨೬. ಡಾ॥ಕೆ. ಜಿ. ವಂಸತಮಾಧವ ಅವರು ಬಿ. ಎಸ್. ಶಾಸ್ತ್ರಿ : *ಕೆಳದಿ ಅರಸರೂ ಹಾಗು ಪೋರ್ಚುಗೀಸರೂ*, ಧಾರವಾಡ, ೧೯೭೨, ಪು.೭೯ ಟಿಪ್ಪಣಿ ೧೯ ರಿಂದ ಉದ್ಧೃತ ಮಾಡಿರುವ ಅಂಶ
*೨೭. *ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ*, ಅದೇ, ಪು. ೫೭. ಅಡಿ ಟಿಪ್ಪಣಿ ೫೫
*೨೮. Keladi Gunda Jois : 'Un-noticed Inscription of Keladi Veerappa Nayaka or vira Vadyar'-Paper Presented at IX Annual Congress of E.S.I, Dharwad, Jan 7-9, 1985
*೨೯. ಎಂ. ಎಸ್. ಅನಂತಪದ್ಮನಾಭರಾವ್, ಅದೇ, ಪು. ೧೬೭
*೩೦. ಡಿ. ಎನ್. ಕೃಷ್ಣಯ್ಯ : ಅದೇ, ಪು. ೮೧
*೩೧. M.N. Srinivas : ***Religion and Society among the coorgs, of South India,*** Bombay (3rd Reprint of 1952 Edn), 1989, p. 12
*೩೨. ಕೆಳದಿ ಗುಂಡಾ ಜೋಯಿಸ್ : 'ಕೆಳದಿ ರಾಜ್ಯದಲ್ಲಿ ಕೇರಳ ಪ್ರಾಂತ್ಯಗಳು', *ಸತ್ಯ ಶುದ್ಧ ಕಾಯಕ* (ಸಂ) ಬಿ. ರಾಜಶೇಖರಪ್ಪ, ಚಿತ್ರದುರ್ಗ, ೧೯೯೪ ಸಂ. ೪ ಸಂ. ೧ ಪು. ೪೬ - ಆದರೆ ಯುದ್ಧದ ಸಮಯವನ್ನು ಕ್ರಿ..ಶ. ೧೬೨೯-೪೬ರ ಅವಧಿ ಎಂದು ಜೋಯಿಸರು ಹೇಳಿರುವುದರಲ್ಲಿ ಯುದ್ಧ ನಡೆದ ಕಾಲದ ಬಗ್ಗೆ ನಿಖರತೆ ಇಲ್ಲವಾದ ಕಾರಣ ಇತಿಹಾಸದ ಇತರ ಸಂಗತಿಗಳನ್ನನುಸರಿಸಿ, ಕ್ರಿ.ಶ. ೧೬೨೯-೩೦ ಎಂದು ನಿರ್ಧರಿಸಲಾಗಿದೆ.
*೩೩ *ಕರ್ನಾಟಕದ ಕೈಫಿಯತ್ತುಗಳು* : (ಸಂ) ಎಂ. ಎಂ. ಕಲಬುರ್ಗಿ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೪ ಪು. ೧೫೧
*೩೪. ಡಾ॥ಕೆಳದಿ ವೆಂಕಟೇಶ್ : *ಕೆಳದಿ ಸಂಸ್ಥಾನ ಸುತ್ತ ಮುತ್ತ*, ಕೆಳದಿ, ೧೯೯೩, ಪು. ೧೨
*೩೫. ಡಾ॥ಕೆ.ಜಿ. ವೆಂಕಟೇಶ್ ಜೋಯಿಸ್ : *ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಕನ್ನಡ ಸಾಹಿತ್ಯ ಪರಿಷತ್ತು, ೧೯೯೬, ಪು. ೧೩೪
*೩೬. ಎಂ. ಜಿ. ನಾಗರಾಜ್ : *ಸಾಂಸ್ಕೃತಿಕ ಶ್ರೀ ವೀರಭದ್ರಸ್ವಾಮಿ*, ರಂಭಾಪುರಿ ಮಹಾಪೀಠ, ೧೯೯೯, ಪು. ೮೪
*೩೭. *ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ* : (ಸಂ) ಡಾ॥ ಎಂ. ಎಂ. ಕಲಬುರ್ಗಿ, ಬಿ. ಎಸ್. ರಾಮಭಟ್ಟ ಆನಂದಪುರ, ೧೯೯೪, ಪು. ೫೦೫
*೩೮. ಅದೇ, ಪು. ೭೬
*೩೯. ಕೆ. ನ್. ಚಿಟ್ನಿಸ್: 'ಕೆಳದಿ ಚೆನ್ನಮ್ಮಾಜಿಯು' *ಕೆಳದಿ ಶ್ರೀ*, ಶಿವಮೊಗ್ಗ, ಕ್ರಿ. ಶ. ೧೯೯೭ ಪು. ೭೨, ೭೪
*೪೦. ಬೆಂಗಳೂರಿನಲ್ಲಿ ನವೆಂಬರ್ ೯೮ರ ಅಕಾದೆಮಿಯ ಸಮ್ಮೇಳನದಲ್ಲಿ ಹೀಗೆ ನಮ್ಮ ಪ್ರಬಂಧ ಮಂಡಿತವಾದ ಮೇಲೆ, ೧೯೯೯ರ ಫೆಬ್ರುವರಿಯಲ್ಲಿ ತಲುಪಿದ ಡಾ॥ ಬಿ.ಎಸ್. ಸುಭದ್ರಾ ಅವರ ಪತ್ರದಲ್ಲಿ, ಕೆಳದಿಯ ಧ್ವಜಸ್ತಂಭದಲ್ಲಿನ ಶಿಲ್ಪವು ಚೆನ್ನಮ್ಮಾಜಿ ಹಾಗು ಒಂದನೇ ಬಸಪ್ಪನಾಯಕನಿರಬಹುದೆಂಬ ಅಭಿಪ್ರಾಯವನ್ನು ತಮ್ಮ ಕೆಳದಿಯ ವಾಸ್ತು-ಶಿಲ್ಪ ಕುರಿತ ಅಪ್ರಕಟಿತ ಪಿ. ಎಚ್. ಡಿ. ಪ್ರಬಂಧದಲ್ಲಿ ವ್ಯಕ್ತಮಾಡಲಾಗಿದೆ ಎಂದು ತಿಳಿಸಿದ್ದಾರೆ. ಹಾಗು ತಮ್ಮ ಅಭಿಪ್ರಾಯಕ್ಕೆ ಪ್ರಸ್ತುತ ಶೋಧವು ಈಗ ನಿರ್ದಿಷ್ಟತೆಯನ್ನು ಒದಗಿಸಿದೆ ಎಂದಿದ್ದಾರೆ. ಈ ಹೊಸ ನೋಟವಂತು ೧೯೯೯ರ *ಸಾಂಸ್ಕೃತಿಕ ವೀರಭದ್ರಸ್ವಾಮಿ* ಕೃತಿಯಲ್ಲಿ ಹಾಗು ಸದ್ಯದ ಇ.ತಿ.ದ ೧೪ನೇ ಸಂಪುಟದಲ್ಲಿ ಮೊದಲಬಾರಿಗೆ ಪೂರ್ಣ ವಿವರಗಳೊಡನೆ ಪ್ರಕಟವಾಗಿದೆ.

ಡಾ॥ ಪಿಯುಸ್ ಫಿದೆಲಿಸ್ ಪಿಂಟೊ *

# ಕೆಳದಿ ರಾಣಿ ಚೆನ್ನಮ್ಮಾಜಿ ಮತ್ತು ಕೊಂಕಣಿ ಕ್ರೈಸ್ತರು

ಕರ್ನಾಟಕದ ಇತಿಹಾಸದಲ್ಲಿ ಕೆಳದಿ ನಾಯಕರ ಆಳ್ವಿಕೆಯ ಕಾಲ ಧಾರ್ಮಿಕ ದೃಷ್ಟಿಯಿಂದ ತನ್ನದೇ ಆದ ರೀತಿಯಲ್ಲಿ ವಿಶಿಷ್ಟವಾಗಿ ಕಂಗೊಳಿಸುತ್ತದೆ. ಈ ನಾಯಕರು ವಿಜಯನಗರ ಪರಂಪರೆಯ ಉತ್ತರಾಧಿಕಾರಿಗಳಾಗಿ, ಪ್ರಧಾನವಾಗಿ ಮಲೆನಾಡು ಮತ್ತು ಕರಾವಳಿ ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿ 'ಪೂರ್ವಮರ್ಯಾದೆ'ಯನ್ನು ಕಾಪಾಡಿಕೊಂಡು ಬಂದರು. ರಾಣಿ ಚೆನ್ನಮ್ಮಾಜಿ ವೀರಶೈವಳಾಗಿ ಈ ಪರಂಪರೆಯ ಉತ್ತರಾಧಿ ಕಾರಿಯಾಗಿದ್ದಳು. ಈಕೆ ಕೊಂಕಣಿ ಕ್ರೈಸ್ತರಿಗೆ ನೀಡಿದ ಪೋಷಣೆಯನ್ನು, ಸಹಾಯವನ್ನು, ರಕ್ಷಣೆಯನ್ನು ಕುರಿತಂತೆ ನಿರೂಪಿಸುವುದಕ್ಕೆ ಮುಂಚೆ ಆಕೆ ಪಡೆದುಕೊಂಡಿದ್ದ ಧಾರ್ಮಿಕ ಪರಂಪರೆ ಯಾವುದು ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಧಾರ್ಮಿಕ ಹಿನ್ನೆಲೆಯ ಪ್ರಧಾನ ಲಕ್ಷಣಗಳು ವಿಜಯನಗರ ಪರಂಪರೆಯಿಂದ ಬಂದಿದ್ದವು. ಅವುಗಳು ಯಾವುದೆಂದರೆ ೧. **ಧರ್ಮ ರಕ್ಷಣೆ ೨. ಪರಮತ ಸಹಿಷ್ಣುತೆ ೩. ಕಷ್ಟದಲ್ಲಿರುವವರಿಗೆ ಆಶ್ರಯ ೪. ಪರಕೀಯರಿಂದ ದೇಶೀಯ ಸಂಸ್ಕೃತಿಯ ರಕ್ಷಣೆ.** ಇವು ರಾಣಿ ಚೆನ್ನಮ್ಮಾಜಿಯನ್ನು ನಮ್ಮ ನಾಡಿನ ಧಾರ್ಮಿಕ ಇತಿಹಾಸದಲ್ಲಿ ಸ್ಪಷ್ಟವಾಗಿ ಗುರುತಿಸಲು ಸಹಾಯ ಮಾಡುತ್ತವೆ.

ಕ್ರಿ. ಶ. ೧೫೦೦ರ ಮೊದಲು ಕರ್ನಾಟಕ ಕರಾವಳಿ ಪ್ರದೇಶದಲ್ಲಿ ದೇಶೀಯ ಕ್ರೈಸ್ತರು ಇರಲಿಲ್ಲ. ಈ ಪ್ರದೇಶಕ್ಕೆ ಯಾವುದೇ ಮತ ಪ್ರಚಾರಕರು ಬಂದು ಸ್ಥಳೀಯರನ್ನು ಕೆಳದಿ ನಾಯಕರ ಕಾಲದಲ್ಲಿ ಮತಾಂತರಗೊಳಿಸಿದ ಉದಾಹರಣೆಗಳು ಹೆಚ್ಚಾಗಿ ದೊರೆಯುವುದಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಈ ಪ್ರದೇಶದ ಹೆಚ್ಚಿನ ಕ್ರೈಸ್ತರ ಮಾತೃ ಭಾಷೆ ಕೊಂಕಣಿ. ಅಂದರೆ ಅವರು ಮೂಲತಃ ಹೊರಗಡೆಯಿಂದ ಬಂದು ಈ ಭಾಗದಲ್ಲಿ ನೆಲೆಸಿದರು ಎಂಬುವುದು ಸ್ಪಷ್ಟವಾಗುತ್ತದೆ. ಹಾಗಾದರೆ ಕೊಂಕಣಿ ಕ್ರೈಸ್ತರು ತಮ್ಮ ಮೂಲ ಸ್ಥಾನವಾದ ಗೋವೆಯನ್ನು ಬಿಟ್ಟು ಬಂದದ್ದಾದರೂ ಏಕೆ? ಅದಕ್ಕೆ ಕಾರಣಗಳು ಏನೇ ಇದ್ದರೂ ಒಂದು ಅಂಶ ಸ್ಪಷ್ಟ. ಅದೇನೆಂದರೆ ಕ್ರೈಸ್ತರ ಪ್ರಭುತ್ವದ ಅಡಿಯಲ್ಲಿಯೇ ಬದುಕುತ್ತಿದ್ದ ಕೊಂಕಣಿ ಕ್ರೈಸ್ತರು ಆ ಪ್ರಭುತ್ವದ ಧಾರ್ಮಿಕ ಕಿರುಕುಳದಿಂದಾಗಿ (ಇಂಕ್ವಿಜಿಶನ್) ಗೋವೆಯನ್ನು ಬಿಟ್ಟು ಕೆಳದಿ ನಾಯಕರ ರಾಜ್ಯಕ್ಕೆ ಬರಬೇಕಾಯಿತು ಎಂಬುವುದು ಐತಿಹಾಸಿಕ ಸತ್ಯ.*೧ ಅಂದರೆ ಕೊಂಕಣಿ ಕ್ರೈಸ್ತರ ವಲಸೆಗೆ ಒಂದು ರೀತಿಯಲ್ಲಿ ಪೋರ್ಚುಗೀಸ್ ಕ್ರೈಸ್ತರೇ ಕಾರಣರಾಗಿದ್ದರು. ಆದರೆ ಅವರನ್ನು ಸ್ವಾಗತಿಸಿದವರು ಕ್ರೈಸ್ತೇತರರಾದ ಕೆಳದಿ ನಾಯಕರು. ಹೀಗೆ ಆಶ್ರಯ ಪಡೆದುಕೊಂಡ ಕೊಂಕಣಿ ಕ್ರೈಸ್ತರು ಕೆಳದಿ ಚೆನ್ನಮ್ಮಾಜಿಯ ಆಳ್ವಿಕೆಯ ಕಾಲದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕರಾವಳಿ ಪ್ರದೇಶ ಮತ್ತು ಮಲೆನಾಡು ಪ್ರದೇಶದಲ್ಲಿ ನೆಲೆಸಿದ್ದರು.

ಈಗ ನಾವು ಕೆಳದಿ ಚೆನ್ನಮ್ಮಾಜಿಯು ಕೊಂಕಣಿ ಕ್ರೈಸ್ತರ ಬಗ್ಗೆ ಹೊಂದಿದ್ದ ಧೋರಣೆಯ ಕುರಿತು ಪರಿಶೀಲಿಸೋಣ. ರಾಣಿ ಚೆನ್ನಮ್ಮಾಜಿಯ ಆಳ್ವಿಕೆಯ ಕಾಲದಲ್ಲಿ ಡಾಕ್ಟರು ಜೋನ್ ಪ್ರಾಯರ್ ಎಂಬ ಕ್ರೈಸ್ತ ಪ್ರವಾಸಿ ಕೆಳದಿ ರಾಜ್ಯದ ಕರಾವಳಿ ಪ್ರದೇಶದಲ್ಲಿ ಪ್ರವಾಸವನ್ನು ಕೈಗೊಂಡನು. ಅವನ ಪ್ರಕಾರ ಕೆಳದಿ ರಾಜ್ಯದಲ್ಲಿ ಅನೇಕ ಕ್ರೈಸ್ತರು ವಾಸಿಸುತ್ತಿದ್ದರು. ಇದಲ್ಲದೆ ಆತನ ಪ್ರಕಾರ ಇನ್ನೂ ಅನೇಕರು ಕ್ರೈಸ್ತ ಮತವನ್ನು ಸ್ವೀಕರಿಸಿದ್ದರು. ಕೆಳದಿ ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿ ಕ್ರೈಸ್ತ ಧರ್ಮವು ಈ ಭಾಗದಲ್ಲಿ ಪ್ರಗತಿ ಹೊಂದಿದ್ದನ್ನು ಹಾಗೂ ಅದಕ್ಕೆ ಯಾವ ಅಡ್ಡಿ ಆತಂಕಗಳು ರಾಜ್ಯಶಕ್ತಿಯಿಂದ ಉಂಟಾಗಲಿಲ್ಲ ಎಂಬುವುದನ್ನು ನಾವು ಪ್ರಾಯರ್ ಜೋನ್‌ನ ಬರವಣಿಗೆಯ ಮೂಲಕ ತಿಳಿದುಕೊಳ್ಳಬಹುದು. *೨

* ಅಂಚೆ ಪೆಟ್ಟಿಗೆ ೫೦೨, ಕಂಕನಾಡಿ ಅಂಚೆ, ಮಂಗಳೂರು - ೫೭೫ ೦೦೨

ಚೆನ್ನಮ್ಮಾಜಿ ಪೋರ್ಚುಗೀಸರನ್ನು ನೋಡುವ ದೃಷ್ಟಿಯಲ್ಲಿ ಒಂದು ಪ್ರಮುಖ ವಿಶೇಷತೆ ಇದ್ದಿತ್ತು. ಪೋರ್ಚುಗೀಸ್ ಕ್ರೈಸ್ತರನ್ನು ಆಕೆ ಪರಕೀಯರೆಂದು ಭಾವಿಸಿದ್ದಳು ಎಂದು ಕಾಣುತ್ತದೆ. ರಾಜಕೀಯ, ಆರ್ಥಿಕ ಮತ್ತು ಇತರ ಕಾರಣಗಳ ಜೊತೆಗೆ ಪೋರ್ಚುಗೀಸರು ಭಾರತೀಯರಿಗಿಂತ ಭಿನ್ನ ಎಂಬುವುದರಿಂದಲೋ ಏನೋ ಆಕೆ ಅವರ ಬಗ್ಗೆ ಹೆಚ್ಚು ಒಲವು ತೋರಲಿಲ್ಲ. ಇದು ಅವಳ ಕಾಲದ ಐತಿಹಾಸಿಕ ದಾಖಲೆಗಳ ಒಟ್ಟು ನೋಟದಿಂದ ಸ್ಪಷ್ಟವಾಗುತ್ತದೆ.[*] ಆದರೆ ದೇಶೀಯ ಕ್ರೈಸ್ತರ ಬಗ್ಗೆ ಅವಳು ಸ್ನೇಹ ಮತ್ತು ಸಹಕಾರ ಮನೋಭಾವದಿಂದ ನಡೆದುಕೊಂಡಳು. ಅವರ ಬೇಡಿಕೆಗಳನ್ನು ಬೆಂಬಲಿಸಿದಳು. ದೇಶೀಯ ಕ್ರೈಸ್ತರೇ ತಮ್ಮ ಧಾರ್ಮಿಕ ವ್ಯವಹಾರಗಳನ್ನು ನೋಡಿಕೊಳ್ಳಬೇಕು ಎಂಬುವುದು ಆಕೆಯ ಅಭಿಪ್ರಾಯವಾಗಿತ್ತು ಎಂದು ಕಾಣುತ್ತದೆ. ಮಂಗಳೂರಿನಲ್ಲಿ ಅಂದಿನ ಮಿಲಾಗ್ರಿಸ್ ಇಗರ್ಜಿಯನ್ನು ಕಟ್ಟಲು ಕ್ರೈಸ್ತ ಅಧಿಕಾರಿಗಳಾಗಿದ್ದ ಬಿಷಪ್ ತೋಮಸ್ ಡಿ'ಕ್ರಾಸ್ಟೊ ಅವರಿಗೆ ಸೂಕ್ತವಾದ ಸ್ಥಳವನ್ನು, ನೆರವನ್ನು ನೀಡಿದಳು[*] ಇದಲ್ಲದೆ ಉಡುಪಿಯ ಬಳಿ ಕಲ್ಯಾಣಪುರದಲ್ಲಿರುವ ದೇಶೀಯ ಕ್ರೈಸ್ತರು ಇಗರ್ಜಿಯನ್ನು ಕಟ್ಟಿಕೊಳ್ಳಬೇಕಾದಾಗ ಅವರಿಗೆ ನಿವೇಶನವನ್ನು ದಾನ ಮಾಡಿ ಬೇಕಾದ ಸಹಾಯವನ್ನು ನೀಡಿದಳು ಎಂದು ಕಲ್ಯಾಣಪುರದಲ್ಲಿರುವ ಇಗರ್ಜಿಯ ದಾಖಲೆಗಳಿಂದ ತಿಳಿದು ಬರುತ್ತದೆ.[*]

ಕ್ರಿ. ಶ. ೧೮೦೦ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ಕೊಟ್ಟ ಫ್ರಾನ್ಸಿಸ್ ಬುಖಾನನ್ ಕೆಳದಿ ಮನೆತನದ ನಾಯಕರಿಗೆ ಅವರು ಕ್ರೈಸ್ತಧರ್ಮಕ್ಕೆ ನೀಡಿದ ಪ್ರೋತ್ಸಾಹಕ್ಕಾಗಿ ಹಲವು ಪ್ರಶಂಸೆಯ ಮಾತುಗಳನ್ನು ತನ್ನ ಅತ್ಯಂತ ಅಮೂಲ್ಯವಾದ ಗ್ರಂಥದಲ್ಲಿ ದಾಖಲಿಸಿದ್ದಾನೆ.[*] ರಾಣಿ ಚೆನ್ನಮ್ಮಾಜಿಯು ಸೇರಿದಂತೆ ಕೆಳದಿನಾಯಕರ ಕಾಲದಲ್ಲಿ, ಬುಖಾನನ್‌ನ ಪ್ರಕಾರ ಸುಮಾರು ಎಂಭತ್ತು ಸಾವಿರ ಕ್ರೈಸ್ತರು ಗೋವಾದಿಂದ ಬಂದು ತಮ್ಮ ರಾಜ್ಯದ ಕರಾವಳಿ ಪ್ರದೇಶದಲ್ಲಿ ನೆಲವೂರುವಂತೆ ಮಾಡಿದರು. ಅವರೆಲ್ಲರೂ ಕೊಂಕಣಿ ಕ್ರೈಸ್ತರಾಗಿದ್ದರು. ತಮ್ಮ ಭಾಷೆ, ಉಡುಪು, ನಡವಳಿಕೆಗಳನ್ನು ಇಟ್ಟುಕೊಳ್ಳುವುದಕ್ಕೆ ಕೆಳದಿ ನಾಯಕರು ಯಾವ ಅಡ್ಡಿ ಆತಂಕಗಳನ್ನು ಒಡ್ಡಿರಲಿಲ್ಲ. ಈ ಪ್ರದೇಶದ ಕೊಂಕಣ ಕ್ರೈಸ್ತರು ಉಡುಪು, ಭಾಷೆ ಮತ್ತು ನಡವಳಿಕೆಗಳಲ್ಲಿ ಅಚ್ಚ ದೇಶೀಯರೇ ಆಗಿದ್ದರೆಂದು ಬುಖಾನನ್ ಬರೆದಿದ್ದಾನೆ. ಕೇವಲ ಇಗರ್ಜಿಯ ಅಧಿಕಾರಿಗಳು ಮಾತ್ರ ತಮ್ಮ ಅಧಿಕಾರಕ್ಕೆ ತಕ್ಕಂತೆ ಉಡುಪನ್ನು ಧರಿಸುತ್ತಿದ್ದರು. ಅವರು ಸಹ ಕೊಂಕಣಿ ಕುಟುಂಬಗಳಿಂದ ಬಂದವರಾಗಿದ್ದರು. ಉದ್ದೇಶ ಪೂರ್ವಕವಾಗಿಯೇ ಚರ್ಚಿನ ದೇಶೀಯ ಅಧಿಕಾರಿಗಳಿಗೆ ಗೋವಾದ ಸೆಮಿನರಿ (ಗುರುಕುಲ)ಯಲ್ಲಿ ಪೋರ್ಚುಗೀಸ್ ಮತ್ತು ಲ್ಯಾಟಿನ್ ಭಾಷೆಗಳ ಮೂಲಕ ಧಾರ್ಮಿಕ ವಿದ್ಯಾಭ್ಯಾಸವನ್ನು ನೀಡಲಾಗುತ್ತಿತ್ತು. ಕೆಳದಿ ರಾಜ್ಯದಲ್ಲಿ ಚೆನ್ನಮ್ಮಾಜಿಯ ಕಾಲಕ್ಕೆ ಇಪ್ಪತ್ತೇಳು ಇಗರ್ಜಿಗಳಿದ್ದವು. ಪ್ರತಿಯೊಂದು ಇಗರ್ಜಿಗೂ ಒಬ್ಬ ವಿಕಾರ್ ಇದ್ದನು. ಒಟ್ಟು ಇಪ್ಪತ್ತೈದು ಜನ ವಿಕಾರೆಗಳ ಮೇಲ್ವಿಚಾರಣೆಗೆ ವಿಕಾರೆ ಜನರಲ್ ಎಂಬ ಅಧಿಕಾರಿಯಿದ್ದರು. ಇವರೆಲ್ಲರೂ ಗೋವಾದಲ್ಲಿದ್ದ ಆರ್ಚ್ ಬಿಷಪ್‌ರವರ ಅಧಿಕಾರಕ್ಷೇತ್ರಕ್ಕೆ ಒಳಪಟ್ಟಿದ್ದರೆಂದು ಬುಖಾನನ್ ತಿಳಿಸುತ್ತಾನೆ. ಎಲ್ಲಕ್ಕಿಂತ ಮಿಗಿಲಾಗಿ ಆತ ಕೆಳದಿ ರಾಜ್ಯದ ಕ್ರೈಸ್ತರ ಬಗ್ಗೆ ಹೇಳುವ ಒಂದು ಮಾತು ತುಂಬಾ ಸ್ವಾರಸ್ಯವಾಗಿದೆ. ಅವರಲ್ಲಿ ಅನೇಕರು ಬಡವರಾಗಿದ್ದರೂ ಅವರಿಗೆ ಪೋರ್ಚುಗೀಸರಿಗೆ ಇದ್ದಂತೆ ಯಾವುದೇ ದುರಭ್ಯಾಸಗಳು ಇರಲಿಲ್ಲ. ಅವರಲ್ಲಿ ಅತ್ಯಂತ ಶ್ರೇಷ್ಠ ಮಟ್ಟದ ಕ್ರಿಯಾಶೀಲವಾದ ಕೈಗಾರಿಕಾ ಕೌಶಲ್ಯವಿದ್ದಿತು. ಈ ಗುಣಗಳನ್ನು ಕೊಂಕಣಿ ಕ್ರೈಸ್ತರ ನೆರೆಹೊರೆಯವರಾಗಿದ್ದ ಹಿಂದುಗಳು ಯಾವಾಗಬೇಕಾದರೂ ಪ್ರಮಾಣ ಪೂರ್ವಕವಾಗಿ ದೃಢೀಕರಿಸಲು ತಯಾರಿದ್ದರು ಎಂದು ಬುಖಾನನ್ ಬರೆದಿದ್ದಾನೆ.[*]

ಬುಖಾನನ್ ಮುಂದುವರೆದು ಕೊಂಕಣಿ ಕ್ರೈಸ್ತರ ಬಗ್ಗೆ ಕೆಲವು ಅಂಕಿ ಅಂಶಗಳನ್ನು ನೀಡಿದ್ದಾನೆ. ಅವನ ಪ್ರಕಾರ ಇಂದಿನ ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ಮತ್ತು ಸುತ್ತಮುತ್ತಲ ಭಾಗದಲ್ಲಿ ಒಟ್ಟು ೨,೫೪೫ ಕ್ರೈಸ್ತರ ಮನೆಗಳಿದ್ದವು. ಅವರ ಪೈಕಿ ೩,೭೦೧ ಪುರುಷರು, ೩,೬೦೩ ಸ್ತ್ರೀಯರು, ೧,೯೬೮ ಬಾಲಕರು, ೧,೬೦೫ ಬಾಲಕಿಯರು ಒಟ್ಟು ೧೦,೮೭೭ ಕ್ರೈಸ್ತರಿದ್ದರು. ಇವರು ಪ್ರಧಾನವಾಗಿ ಕೃಷಿಕರು ಮತ್ತು ವ್ಯಾಪಾರಿಗಳು ಆಗಿದ್ದರು ಎಂದು ಬುಖಾನನ್ ತಿಳಿಸಿದ್ದಾನೆ. ಕೆಳದಿಯ ಕರಾವಳಿಯ ಬಂದರುಗಳಾದ ಮಂಗಳೂರು, ಬಾರಕೂರು, ಬಸ್ರೂರು ಮತ್ತು ಹೊನ್ನಾವರದ ಮೂಲಕ ನಡೆಸುತ್ತಿದ್ದ ಹೊರ ದೇಶದ ವ್ಯಾಪಾರದಲ್ಲಿ ಕ್ರೈಸ್ತರ ಪಾತ್ರ ಪ್ರಧಾನವಾಗಿತ್ತೆಂದು ಹೇಳಬಹುದು. ಇದರ ಜೊತೆಗೆ ಗೋವೆಯೊಡನೆ ನಡೆಯುತ್ತಿದ್ದ ವ್ಯಾಪಾರದಲ್ಲಿ ಇವರದ್ದೇ ಪ್ರಾಯಶಃ ಹೆಚ್ಚು ಪಾಲು ಇದ್ದಿತು. ಕೃಷಿಕರಾಗಿ ಅವರು ಭತ್ತ, ತೆಂಗು, ಅಡಿಕೆ ಮೊದಲಾದವುಗಳನ್ನು ಬೆಳೆಯುತ್ತಿದ್ದರು. ಕೆಳದಿ ಸರಕಾರಕ್ಕೆ ಶಿಸ್ತನ್ನು ಕೊಡುತ್ತಿದ್ದರು. ಒಟ್ಟಿನಲ್ಲಿ ಆರ್ಥಿಕ ಕ್ಷೇತ್ರದಲ್ಲೂ ಅವರ ಪಾತ್ರ ಸಾಕಷ್ಟು ಪ್ರಧಾನವಾಗಿತ್ತೆಂದು ಹೇಳಬಹುದು.[*]

ಕೆಳದಿ ರಾಣಿ ಚೆನ್ನಮ್ಮಾಜಿಯ ಆಳ್ವಿಕೆಯ ಕಾಲ ಧಾರ್ಮಿಕ ಇತಿಹಾಸ ದೃಷ್ಟಿಯಿಂದಲೂ ಪ್ರಖ್ಯಾತವಾಗಿದೆ. ಈ ವಂಶದ ಹಿಂದಿನ ನಾಯಕರಂತೆ ಈಕೆಯು ಎಲ್ಲಾ ಮತ ಧರ್ಮಗಳಿಗೂ ಆಶ್ರಯ ನೀಡಿದ್ದಳು. ಹಿಂದುವಾಗಿ ವಿವಿಧ ಪಂಥಗಳಿಗೆ ಪ್ರೋತ್ಸಾಹ ನೀಡಿದ್ದು ಅಷ್ಟೊಂದು ಆಶ್ಚರ್ಯದ ವಿಷಯವಾಗಿ ತೋರದೆ ಹೋಗಬಹುದು. ಆದರೆ ಈಕೆ ಕೊಂಕಣಿ ಕ್ರೈಸ್ತರನ್ನು ನೋಡಿಕೊಂಡ

ರೀತಿ ನಿಜವಾಗಿಯೂ ಅಸಾಧಾರಣವಾದ ಉದಾಹರಣೆಯಾಗಿದೆ. ಇತಿಹಾಸಕಾರರು ಚೆನ್ನಮ್ಮಾಜಿಯು ಶಿವಾಜಿಯ ಮಗ ರಾಜ ರಾಮನಿಗೆ ಆಶ್ರಯ ಕೊಟ್ಟಿದ್ದನ್ನು ಬಹಳ ದೊಡ್ಡ ಘಟನೆಯೆಂದು ವರ್ಣಿಸಿರುತ್ತಾರೆ.*[೯] ಒಂದು ದೃಷ್ಟಿಯಿಂದ ಇರಬಹುದೇನೋ? ಆದರೆ ಆಶ್ರಯ ಪಡೆದ ರಾಜರಾಮ ಹಿಂದುವಾಗಿದ್ದ ಎಂಬುದನ್ನು ನಾವು ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ರಾಣಿ ಚೆನ್ನಮ್ಮಾಜಿ ಕೊಂಕಣಿ ಕ್ರೈಸ್ತರಿಗೆ ಕರಾವಳಿ ಪ್ರದೇಶದಲ್ಲಿ ಆಶ್ರಯ ನೀಡಿ ಅವರಿಗೆ ಪ್ರೋತ್ಸಾಹ ನೀಡಿದ್ದು ಹೆಚ್ಚು ಗಮನಾರ್ಹ ಎಂದು ಹೇಳಬಹುದು. ಒಟ್ಟಿನಲ್ಲಿ ಸಮಕಾಲೀನ ಪೋರ್ಚುಗೀಸರ ಇತಿಹಾಸದಲ್ಲಿ ರಾಣಿಯೊಬ್ಬಳು ಕೆಳದಿ ಚೆನ್ನಮ್ಮಾಜಿಯಂತೆ ಉದಾರವಾದ ಧಾರ್ಮಿಕ ನೀತಿಯನ್ನು ಅನುಸರಿಸಿದ್ದು ಕಂಡುಬರುವುದಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. Cunha Rivera : ***Archivo Protuguese Oriental*** vol. IV PP. 124-`25, Vol. V. Part (451, 454, Part ii) PP.488, 544, 902, Vol. VI. PP. 965, 1201, 1255, 1263, 1286-93 as quoted by A. K. Priolkar. The Goa Inquisition, Bombay, 1961, P.114

*೨. K. D. Swaminathan: ***The Nayaks of Ikkeri*** ; Joseph Thekkedath: ***History of Christianity in India,*** Bangalore 1982 Vol. 11. P. 289

*೩. Severine Silva : ***History of Chirstianity in Canara***, Karwar, 1958, Vol. I. P. 63

*೪. Ibid P. 68

*೫. Moore S. J : ***History of the Diocese of Mangalore***, 1905, P. 33

*೬. Francis Buchanan : ***A Journey From Madras through the countries of Mysore, Canara and Malabar,*** London, 1807, Vol. 111 P.23

*೭. Ibid P. 24

*೮. Ibid P. 6

*೯. B. A. Saletore: ***Kannada Nadina Charitre,*** Bangalore, 1953, 1, P. 72

ಡಾ|| ಎ. ಸೋಮಶೇಖರ್ *

# ಕೆಳದಿನಾಯಕರ ಕಾಲದಲ್ಲಿ ಇಕ್ಕೇರಿ ಪೇಟೆಯ ಉಗಮ – ಒಂದು ಅಧ್ಯಯನ

ಕರ್ನಾಟಕ ಇತಿಹಾಸದಲ್ಲಿ ಕೆಳದಿನಾಯಕರ ಆಳ್ವಿಕೆಕಾಲ ಅನೇಕ ವಿಷಯಗಳಿಗೆ ಮಹತ್ವಪೂರ್ಣವೆನಿಸಿದೆ. ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದ ಕೆಳದಿಯ ರಾಜ್ಯ ಹದಿನಾರನೇ ಶತಮಾನದಲ್ಲಿ ಸ್ವತಂತ್ರವಾದ ಅಸ್ತಿತ್ವವನ್ನು ಪಡೆದುಕೊಂಡಿತು. ಮೈಸೂರಿನ ಹೈದರಾಲಿಯ ಆಕ್ರಮಣವಾಗುವವರೆಗೂ ಅಂದರೆ ಕ್ರಿ. ಶ. ೧೭೬೩ರ ವರೆಗೂ ಅದು ಶ್ರೀಮಂತವಾಗಿ ಬದುಕಿ ಉಳಿದಿತ್ತು. ಅಲ್ಲದೇ ಮಲೆನಾಡಿನ ಹೃದಯದ ಭಾಗವನ್ನು ಆಕ್ರಮಿಸಿ ಕೊಂಡಿತ್ತು. ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಕೆಳದಿ ಮತ್ತು ಇಕ್ಕೇರಿ ಈ ರಾಜ್ಯದ ಉಗಮ ಪ್ರದೇಶಗಳಾಗಿದ್ದವು. ಯಾವುದೇ ಒಂದು ರಾಜ್ಯದ ಉಗಮ, ಅದರ ಉತ್ಕರ್ಷ ಕಾಲದಷ್ಟೇ ಕುತೂಹಲಕಾರಿಯಾಗಿರುತ್ತದೆ. ಒಂದು ರಾಜ್ಯದ ಉದಯಕ್ಕೆ ಅನೇಕ ಘಟಕಗಳು ಕಾರಣವಾಗಿರುತ್ತವೆ. ಅವುಗಳನ್ನೆಲ್ಲಾ ಕ್ರೋಢೀಕರಿಸಿ ರಾಜ್ಯಶಕ್ತಿಯ ಕೇಂದ್ರವನ್ನು ಸ್ಥಾಪಿಸುವುದು ಆರಂಭದ ಅರಸರ ಬಹುಕಷ್ಟದ ಹಾಗೂ ಜಾಣ್ಮೆಯ ಕಾರ್ಯವಾಗಿರುತ್ತಿತ್ತು. ಈ ದೃಷ್ಟಿಯಿಂದ ಕೆಳದಿ ನಾಯಕರ ರಾಜ್ಯದ ಉಗಮದ ಅಧ್ಯಯನ ನಮ್ಮ ನಾಡಿನ ಚರಿತ್ರೆಯಲ್ಲಿ ವಿಶಿಷ್ಟವಾಗಿದೆಯೆಂದು ಹೇಳಬಹುದು.

'ಕೆಳದಿ ನೃಪವಿಜಯ' ಮತ್ತು ಈ ಅರಸರ ಶಾಸನಗಳು ಮತ್ತು ಇತರ ಕೃತಿಗಳು ಈ ರಾಜ್ಯದ ಉಗಮದ ಬಗೆಗೆ ಕೆಲವಾರು ಮಾಹಿತಿಗಳನ್ನು ನೀಡುತ್ತವೆ. ಆದರೆ ಮೆಕೆಂಝೀ ಸಂಗ್ರಹದಲ್ಲಿ ಸೇರಿರುವ ಕನ್ನಡ ಭಾಷೆಯಲ್ಲಿ ಇರುವ 'ಸಾಗರದ ಕೈಫಿಯತ್ತು' ಪ್ರಾಯಶಃ ಎಲ್ಲಾ ಆಕರಗಳಿಗಿಂತ ಹೆಚ್ಚು ವಿವರಗಳನ್ನು ನೀಡುತ್ತದೆ. ಈ ಲೇಖನದಲ್ಲಿ ಇಕ್ಕೇರಿಯಲ್ಲಿ ಪೇಟೆಯನ್ನು ಕಟ್ಟಿಸಿದ ವಿಷಯವನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಒಂದು ರಾಜಧಾನಿಗೆ ಅಂದಿನವರ ದೃಷ್ಟಿಯಲ್ಲಿ ನಾಲ್ಕು ಪ್ರಮುಖ ಘಟಕಗಳು ಇದ್ದಿರಬೇಕೆಂದು ಕಾಣುತ್ತದೆ. ೧. ಕೋಟೆ ೨. ಪೇಟೆ ೩. ಅಗ್ರ ಹಾರ ಮತ್ತು ೪. ದೇವಾಲಯ. ಇವೆಲ್ಲದರ ಪೋಷಣೆಗೆ ಸುತ್ತ ಕೆರೆ ಮತ್ತು ಕೃಷಿ ಭೂಮಿ ಅನಿವಾರ್ಯವಾಗಿ ಇರುತ್ತಿದ್ದವು. 'ಪೇಟೆ' ಯಾವುದೇ ನಗರ ಪ್ರದೇಶದ ಬಹುಮುಖ್ಯ ಅಂಗ. ಹಿಂದಿನ ರಾಜರುಗಳ ರಾಜಧಾನಿಗಳು ಆಡಳಿತ ಕೇಂದ್ರವಾಗಿದ್ದುದರ ಜೊತೆಗೆ ವ್ಯಾಪಾರ ಕೇಂದ್ರವೂ ಆಗಿರುತ್ತಿದ್ದವು. ಇದಕ್ಕೆ ಇಕ್ಕೇರಿಯು ಹೊರತಾಗಿರಲಿಲ್ಲ.

'ಸಾಗರದ ಕೈಫಿಯತ್ತು' ಇಕ್ಕೇರಿಯಲ್ಲಿ ಕಟ್ಟಿದ ಪೇಟೆಯ ಬಗೆಗೆ ಕೆಳಕಂಡ ವಿವರವನ್ನು ನೀಡುತ್ತದೆ. ''ಯೀ ಮೇರೆಗೆ ಯಿರುತ್ತಾ ಯಿರಲಿಕ್ಕೆ, ಕೆಲವು ದಿವ್ಸದ ಮೇಲೆ ಯಿರಲಿಕ್ಕೆ, 'ಪೇಟೆ ಕಟ್ಟಿಸಬೇಕು' ಯೆಂದು ಸಂಸ್ಥಾನಿಕರ ಸಂಗಡಾ ಯೋಚನೆಮಾಡಿ, ಯಿಕ್ಕೇರಿ, ಶಿರಿವಂತಿ, ಯಲಗಲ್ಲ,ಕೆಳದಿ ಯೀ ನಾಲ್ಕು ಗ್ರಾಮದ ಹೊಲವರಿ ಕೂಡಿದ ಗಡಿಯ ಮಧ್ಯದಲ್ಲಿ ಪೇಟೆ ಕಟ್ಟಿಸುವುದಕ್ಕೆ ಮಾಡಿದ ಆರಂಭವನ್ನು ಮೂರು ತಿಂಗಳಲ್ಲಿ ಪೇಟೆ ಕಟ್ಟಲಾಯಿತು. 'ಯೀ ಪೇಟೆಗೆ ವಕ್ಕಲು ಆಗಬೇಕು' ಯೆಂದು ಕೆಳದಿ ಪಟ್ಟಣದ ನೀಲಕಂಠ ರಾಯರುಯೆಂಬ ಕ್ಷತ್ರೀಯ ಅರಸುಗಳನ ಮುರದು, ಆ ಪಟ್ಟಣ ಸ್ವಾಧೀನ ಮಾಡಿಕೊಂಡು, ಅಲ್ಲಿಯಿದ್ದ ವಸಾರಿ ವರ್ತಕರು ಸಹಾ ತೆಗೆದುಕೊಂಡು ಬಂದು, ಹಸಬೆ ಶಾಂತಯ್ಯ, ಧೂಳಪ್ಪ, ನಾಗಪ್ಪ, ಬಡದಾಳದ ನಿಂಬೆಣ್ಣ, ತುಪ್ಪದ ರೇವಪ್ಪ, ಯೀ ಮೊದಲಾದ ಮುಖ್ಯಸ್ಥರಿಗೆ ನೇಮಕ ಮಾಡಿಯಿಟ್ಟು, ಮೂವತ್ತು ವರುಷ ಪರಿಯಂತ್ರ ತಾಯಿ ಕೊಂದು ತಂದೆ ಯಿರ್‍ರದರು, ತಂದೆ ಕೊಂದು ತಾಯಿ ಯಿರ್‍ರದರ್‍ರು. ನೆಟ್ಟಕಲ್ಲು ಕಿತ್ತರು. ಬಿಟ್ಟ ಬಿರಾಡ, ವಟ್ಟ ವರಾಡ, ಅಪರಾಧ ಮುಂತಾದ್ದು ಯಿ ಪೇಟೆ ಬವರನ ಕೇಳಲಿಕ್ಕೆ ಅರಮನೆಯವರಿಗೆ ಕೆಲಸವಿಲ್ಲಾ ಯೆಂದು ನಿರುಪದ್ರವದಿಂದ ಯಿರ್‍ರಬೇಕುಯೆಂದು ಕವಲು ಕೊಟ್ಟು, ಕಡಮೊದಲು ಮುಂತಾದ್ದು ಕೊಟ್ಟ( ಟ್ಟು ) ಪೇಟೆ ತುಂಬಿಸಿದರು. ಯಿದಕ್ಕೆ ಸದಾಶಿವಸಾಗರಯೆಂಬೊ ಹೆಸರು ಯಿಟ್ಟರು. ಯೀ ಪೇಟೆಗೆ ಬಲಗಡಿ ಮೂಡಲು ದಿಕ್ಕಿಗೆ ವರದಾನದಿ ತೀರದಲ್ಲು

* ಅಧ್ಯಕ್ಷರು, ಇತಿಹಾಸ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು – ೫೭೦ ೦೦೬

ವಿಶ್ವನಾಥಪುರ ಯೆಂಬದಾಗಿ ಗ್ರಾಮವನ್ನು ಕಟ್ಟಿಸಿ ಯರಡು ಮಲ್ಲಿಕಾರ್ಜುನದೇವರ, ಯೀ ಮೂರ್ರು ದೇವಸ್ಥಾನವನ್ನು ಕಟ್ಟಿಸಿ, ೬೦ ಮೆಳಿಕಟ್ಟಿಸಿ, ೬೦ ವೃತ್ತಿಯನ್ನು ಮಾಡಿ, ಬ್ರಾಹ್ಮರಿಗೆ ಆಗ್ರಹಾರ ಮಾಡಿದರು.''

''ಅನಂತರ ಪೇಟೆ ಕಟ್ಟಿದ ವಿವರ: ಬೀದಿಗಳು ಮಾಡಿ, ಪೂರ್ವದಿಕ್ಕಿನಲ್ಲು ಅರಮನೆ ಕಟ್ಟಿಸಿ, ಶಕ್ತಿಗಣಪತಿಯನ್ನು ಪ್ರತಿಷ್ಠೆಮಾಡಿ, ಕೆರ್ರೆಯನ್ನು ಕಟ್ಟಿಸಿ, ಮೇಲು ಉಪ್ಪರಿಗೆಯನ್ನು ಕಟ್ಟಿಸಿದರು. ಯೀ ವಿನಾಯಕಗೆ ಟೆಂಗಿನಾಕಾಯಿ ೩೬೦ಕೆ, ೧ಕೆ ಮರಾ ೬೨ಕೆ, ಸಿಸ್ತು ವರ ೯೪೨೪ ಉತ್ತರವನ್ನು ಬಿಟ್ಟರು. ಯಿದರಲ್ಲಿ ಬೀದಿಗಳು : ಬಸವಣ್ಣ ದೇವರ ಪ್ರತಿಷ್ಠೆಮಾಡಿ, ಬಸವಣ್ಣದೇವರ ಬೀದಿ ಪೂರ್ವ ಪಶ್ಚಿಮ ದಿಕ್ಕಿನಲ್ಲು ೧, ಉತ್ತರ ದಕ್ಷಿಣ ಬೀದಿ ೧, ಬಣಜಿಗರ ಕೆರೆ ೧ ಯಿದರ ಮಧ್ಯದಲ್ಲಿ ತಳವಾರ ಕಟ್ಟೆ-೧, ಯೀ ತಳವಾರ ಕಟ್ಟೆ ಚಾವಡಿಗೆ ಕಲಿಸಿ, ನೀಲಕಂಠರಾಯರ್ರು,(ರ) ಅರಮನೆ ಮುಂಡಿಗೆ ಮುಂತಾದ್ದು ತಂದು ಕಟ್ಟಿದರ್ರು. ಯಿದರ ವಳಿಗೆ ಬೀದಿಗಳು ಯಿರ್ರುವದು: ಬ್ರಾಹ್ಮಣ ಕೇರಿ ೧. ಕುಂಬಾರ ಕೇರಿ ೨. ಕಂಚಗಾರ ಕೇರಿ ೩. ಕೇಣಿ ಮಾಡುವ ಕೇರಿ ೪. ಉಪ್ಪಾರ ಕೇರಿ ೫. ಕಬಾಡಿ ಕೇರಿ ೬. ತುರುಕರ ಕೇರಿ ೭.. ಪಟಣಾನಾಲು ಕೇರಿ ೮. ಕುರುಬರ ಕೇರಿ ೯. ಅಗಸರ ಕೇರಿ ೧೦. ಜಾಡದ(ರ) ಕೇರಿ ೧೧. ಸಮಗಾರ ಕೇರಿ ೧೨, ಕಾಯಿಪಲ್ಲೆ ಮಾರುವ ಕೇರಿ ೧೩. ಯಿದರ ಬಾಗಲ ಹೊರಗಡೆ ಕೊಂಕಣಕೇರಿ ೧೪. ಗವುಜು ಕೇರಿ ೧೫. ಸೂಳೇರ ಕೇರಿ ೧೬. ಯೀ ಮೇರಿಗೆ ಬೀದಿಗಳು ಕಟ್ಟಿಸಿಯಿದರ ವಳಗೆ ಯಿರುವ ಮಠಗಳಲ್ಲು ಹೊಳೀನ ಹಂಪಯ್ಯನವರು ಕಟ್ಟಿಸಿಸಿದ ಮಠ. ಯೀ ಹಂಪಯ್ಯನು ಜಂಗಮರ ಗುರಉ ಸರಿ, ಮುಖ್ಯ ವರ್ತಕನು ಸರ್ರಿ, ಯಿವರು ಕಾಲ ಕಾಲಕೆ ಬಣ್ಣ ಸಾವಿರ ಯೆತ್ತು ಹರಾಜು ಮಾಡುವವರು, ಈ ಪೇಟೆ ಆಚಾರ ವಿಚಾರವನ್ನು ಜಂಗಮ ಜಾತಿಗೆ, ಯೀ ಮಠಕ್ಕೆ ಕೂಡಿದ್ದು ಯಿದೆ ಮಹಂತಿನಮಠ ಯಿದಕ್ಕೆ ಅರಸಗಳು ಬಿಟ್ಟ ಸ್ವಾಸ್ತಿ; ನಂದಿಹಳ್ಳಿ ಗ್ರಾಮ ೧, ಕಂಬಳಿ ಕೊಪ್ಪದ ಗ್ರಾಮ - ೧, ಹಲಸಿನ ಕೊಪ್ಪದ ಗ್ರಾಮ ೧, ಕಲ್ಲು ಕೊಪ್ಪದ ಗ್ರಾಮ ೧, ಹೊಟ್ಟೆಲಸರ್ರುವ್ವ ಗ್ರಾಮ - ೧, ಸೂಗೆಮನೆ ಗ್ರಾಮ - ೧, ಅಂತುಗ್ರಾಮ ೬ಕೆ ವರಹಾ ೧೦೦೦೦ ಯೀ ನಾಮ ಬಿಟ್ಟರು. ಯೀ ಮಠದಲ್ಲಿ ನಡೆಯುವ ಧರ್ಮತನಕೆ ಬರಮಾಡಿದ ಯಿದ್ದು ಚಿತ್ರಭಾನು ಸಂವತ್ಸರ ಪರಿಯಂತ್ರವೂ ನಡೆಯುತ್ತಾಯಿತ್ತು ಯೀಚೆಗೆ ನವಾಬನು ಮೂವತ್ತು ವರಹಾ ಸ್ವಾಸ್ತಿ ನಡೆಸಿದನು. ಮರಿಯಪ್ಪಶೆಟ್ಟರು, ಕಟ್ಟಿಸಿದ್ದು ವಿರಕ್ತ ಮಠ - ೧, ಯಿನಾಮು ಅರಸುಗಳು ಕೊಟ್ಟರು ಚೆನ್ನಮ್ಮಾಜಿ ಕಾಲಕ್ಕೆ ಕಟ್ಟಿದ್ದು ಯಿನಾಮು'' ೩೨೬ ವರಹಾ ಕೊಟ್ಟರು.

ಮೇಲಿನ ಉಲ್ಲೇಖವನ್ನು ವಿಶ್ಲೇಷಣೆ ಮಾಡಿದರೆ ನಮಗೆ ಆ ಕಾಲದ ಪೇಟೆಯ ನಿರ್ಮಾಣದ ಬಗೆಗಿನ ಕಲ್ಪನೆ ಸ್ಪಷ್ಟವಾಗುತ್ತದೆ. ಇಕ್ಕೇರಿಯಲ್ಲಿ ಪೇಟೆಯನ್ನು ಕಟ್ಟಿಸಬೇಕು ಎಂಬ ವಿಷಯವನ್ನು ತೀರ್ಮಾನ ಮಾಡಿದ ಮೇಲೆ ಸದಾಶಿವರಾಯರು ಸಂಸ್ಥಾಪಕರ ಜೊತೆ ಸಮಾಲೋಚನೆ ಮಾಡಿದನೆಂದು ಸಾಗರ ಕೈಫಿಯತ್ತು ತಿಳಿಸುತ್ತದೆ. ಇಲ್ಲಿ ಸಂಸ್ಥಾನಿಕರು ಎಂದರೆ, ಕೇವಲ ಮಂತ್ರಿಗಳಲ್ಲ, ಶ್ರೀಮಂತ ವರ್ಗದವರೂ ಇದ್ದರೆಂದು ಭಾವಿಸ ಬಹುದು, ಪೇಟೆ ಕಟ್ಟಿಸುವುದಕ್ಕೆ ಸ್ಥಳಗಳನ್ನು ಆಯ್ಕೆ ಮಾಡುವಾಗ ನಾಲ್ಕು ಗ್ರಾಮಗಳ ಗಡಿಗಳು ಕೂಡುವ ಮಧ್ಯದ ಭಾಗವನ್ನು ಆರಿಸಲಾಯ್ತು. ಆ ಗ್ರಾಮಗಳು ಯಾವುವೆಂದರೆ (೧) ಇಕ್ಕೇರಿ (೨) ಶಿರಿವಂತಿ (೩) ಯಾಲಗಲ್ಲ (೪) ಕೆಳದಿ. ಈ ನಾಲ್ಕು ಗ್ರಾಮಗಳು ಕೂಡುವ ಸ್ಥಾನವನ್ನೇ ಏಕೆ ಆರಿಸಲಾಯ್ತು? ಎನ್ನುವ ಪ್ರಶ್ನೆ ಏಳುತ್ತದೆ. ಪ್ರಾಯಶಃ ಈ ಗ್ರಾಮಗಳು ಅಂದು ಸಾಕಷ್ಟು ಶ್ರೀಮಂತವಾದ ಗ್ರಾಮಗಳಾಗಿದ್ದು, ಪೇಟೆಗೆ ಬೇಕಾಗುವ ಎಲ್ಲಾ ವಸ್ತುಗಳನ್ನೂ ಪೂರೈಸುವ ಸ್ಥಳಗಳಾಗಿದ್ದವೆಂದು ಕಾಣುತ್ತದೆ. ಇಕ್ಕೇರಿ ಮತ್ತು ಕೆಳದಿ - ಈ ಎರಡೂ ಗ್ರಾಮಗಳು ಮುಂದೆ ಬೆಳೆದು ಕೆಳದಿ ರಾಜ್ಯದ ರಾಜ್ಯಧಾನಿಗಳಾಗಿದ್ದವು. ಸಾಗರದ ಕೈಫಿಯತ್ತಿನ ಪ್ರಕಾರ ಪೇಟೆ ಕಟ್ಟಿಸುವ ಕೆಲಸ ಮೂರು ತಿಂಗಳಲ್ಲಿ ಮುಗಿಯಿತು. ಪೇಟೆಗೆ ವಕ್ಕಲು ಬರುವುದಕ್ಕಿಂತ ಮುಂಚೆ ಅದನ್ನು ಕಟ್ಟಲಾಯಿ ತೆಂದು ಕೈಫಿಯತ್ತು ತಿಳಿಸುತ್ತದೆ. ಹಾಗೆಂದರೆ ಏನು? ಎಂಬ ಸಂದೇಹ ಮೂಡುವುದು ಸಹಜ. ಪ್ರಾಯಶಃ ಪೇಟೆಗೆ ಅವಶ್ಯಕವಿದ್ದ ಮೂಲಭೂತ ಪರಿಕರಗಳನ್ನು ನಿರ್ಮಾಣ ಮಾಡಲಾಯಿತೆಂದು ಊಹಿಸಬೇಕಾಗುತ್ತದೆ. ಉದಾ: ರಸ್ತೆಗಳ ನಿರ್ಮಾಣ, ಅಂಗಡಿ ಬೀದಿಯ ನಿರ್ಮಾಣ, ಸಂತೆಮಾಳ, ಎತ್ತುಗಾಡಿಗಳಿಗೆ ವ್ಯವಸ್ಥೆ, ಕುಡಿಯುವ ನೀರಿನ ಸೌಲಭ್ಯ, ಮತ್ತು ವಸತಿ ಸೌಲಭ್ಯ - ಇವೆಲ್ಲಾ ಪೇಟೆಯ ಇನ್‌ಫ್ರಾಸ್ಟ್ರಕ್ಚರ್ (Infrastructure)ಎಂದು ಕರೆಯುವ ಕಲ್ಪನೆಯೊಳಗೆ ಬರುವ ಅಂಶಗಳಾಗಿವೆ.

'ಪೇಟೆ' ಎಂದರೆ ವರ್ತಕರು ಇರಲೇಬೇಕು. ಅವರಿಲ್ಲದೇ ಪೇಟೆಯನ್ನು ಊಹಿಸುವುದು ಅಸಾಧ್ಯ. ಪೇಟೆಗೆ ವಕ್ಕಲು ಆಗುವುದು ಎಂದರೆ ವರ್ತಕರನ್ನು ತಂದು ನಿಲ್ಲಿಸುವುದು ಎಂದರ್ಥ. ಈ ದೃಷ್ಟಿಯಿಂದ ಸಾಗರದ ಕೈಫಿಯತ್ತು ನೀಡುವ ವಿವರ ಕುತೂಹಲ ಕಾರಿಯಾಗಿದೆ. ಅದರ ಪ್ರಕಾರ ಕೆಳದಿ ಪಟ್ಟಣದಲ್ಲಿ ನೀಲಕಂಠರಾಯ ಎಂಬ ಕ್ಷತ್ರೀಯ ಅರಸು ಇದ್ದನು ಮತ್ತು ಆ ಪಟ್ಟಣದ ಒಡೆಯನಾಗಿದ್ದನು. ಅವನ ಅಧೀನದಲ್ಲಿ ವರ್ತಕರು ಇದ್ದರು. ಹೊಸದಾಗಿ ನಿರ್ಮಾಣ ಮಾಡಿದ ಇಕ್ಕೇರಿ ಪೇಟೆಗೆ ವರ್ತಕರನ್ನು ವಕ್ಕಲು ಮಾಡುವ ಸಂದರ್ಭದಲ್ಲಿ ಸದಾಶಿವನಾಯಕನ ಕಣ್ಣು ನೀಲಕಂಠರಾಯನ ಮೇಲೆ ಬಿತ್ತು. ಕೈಫಿಯತ್ತಿನ ಪ್ರಕಾರ ಸದಾಶಿವರಾಯರು ನೀಲಕಂಠರಾಯರನ್ನು ''ಮುರದು'', ಆ ಪಟ್ಟಣವನ್ನು ಸ್ವಾಧೀನ ಮಾಡಿಕೊಂಡನು ಮತ್ತು ಅಲ್ಲಿ ಇದ್ದ

ವರ್ತಕರನ್ನು ಕರೆದುಕೊಂಡು ಬಂದು ಇಕ್ಕೇರಿ ಪೇಟೆಯಲ್ಲಿ ವಕ್ಕಲು ಮಾಡಿಸಿದನು. ವರ್ತಕರ ಮುಖಂಡರ ಹೆಸರು ಇಂತಿವೆ: ಹಸಬೆ ಶಾಂತಯ್ಯ, ಧೂಳಪ್ಪ, ನಾಗಪ್ಪ, ಬಡದಾಳದ ನಿಂಬೆಣ್ಣ, ತುಪ್ಪದ ರೇವಪ್ಪ, ಈ ಮುಖಂಡರಿಗೆ ಕ್ರಮಬದ್ಧವಾಗಿ ಆಜ್ಞೆಯ ಮೂಲಕ ನೇಮಕದ ಆದೇಶವನ್ನು ನೀಡಲಾಯ್ತು. ಪೇಟೆ ತುಂಬಿಸಲು ಅನುಕೂಲವಾಗುವಂತೆ ಕೆಲವು ಕಾನೂನು ಮತ್ತು ಕಟ್ಟಲೆಗಳನ್ನು ಮಾಡಲಾಯ್ತು. ಹಣವನ್ನು ಸಾಲದ ರೂಪದಲ್ಲಿ ಕೊಡಲಾಯ್ತು. ಈ ಪೇಟೆಗೆ 'ಸದಾಶಿವನಗರ' ಎಂದು ಹೆಸರನ್ನು ಇಡಲಾಯಿತು.

ಸದಾಶಿವನಗರ ಪೇಟೆಗೆ ಹೊಂದಿಕೊಂಡಂತೆ ವರದಾ ನದಿಯ ತೀರದಲ್ಲಿ ವಿಶ್ವನಾಥಪುರ ಎಂಬ ಗ್ರಾಮವನ್ನು ಕಟ್ಟಿಸಲಾಯ್ತು. ಆ ಗ್ರಾಮದಲ್ಲಿ ಎರಡು ಬೀದಿಗಳನ್ನು ನಿರ್ಮಾಣ ಮಾಡಿ ನದೀತೀರದಲ್ಲಿ ರಾಮೇಶ್ವರ, ಅಮೃತಲಿಂಗೇಶ್ವರ ಮತ್ತು ಮಲ್ಲಿಕಾರ್ಜುನ ದೇವರ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಆ ಗ್ರಾಮದಲ್ಲಿ ಅರವತ್ತು ವೃತ್ತಿಗಳನ್ನು ಮಾಡಿ ಬ್ರಾಹ್ಮಣರಿಗೆ ಅಗ್ರಹಾರವಾಗಿ ನೀಡಲಾಯ್ತು. ಅಂದರೆ ಪೇಟೆಗೆ ಹೊಂದಿಕೊಂಡಂತೆ ಅಗ್ರಹಾರವೊಂದು ಅಸ್ತಿತ್ವಕ್ಕೆ ಬಂದಿತು. ಕೋಟೆಯ ಜೊತೆಗೆ ಪೇಟೆ ಮತ್ತು ಅಗ್ರಹಾರಗಳೂ ಸೇರಿಕೊಂಡವು.

ಕೈಫಿಯತ್ತಿನ ಪ್ರಕಾರ ಪೇಟೆಗಳಲ್ಲಿ ಬೀದಿಗಳನ್ನು ನಿರ್ಮಾಣ ಮಾಡಲಾಯ್ತು. ಪೇಟೆಯ ಪೂರ್ವ ದಿಕ್ಕಿನಲ್ಲಿ ಸದಾಶಿವರಾಯನು ಅರಮನೆಯನ್ನು ಕಟ್ಟಿಸಿದನು. ಅರಮನೆಗೆ ಹೊಂದಿಕೊಂಡಂತೆ ಶಕ್ತಿಗಣಪತಿಯನ್ನು ಪ್ರತಿಷ್ಠೆ ಮಾಡಿಸಿದನು. ವಿನಾಯಕ ದೇವರಿಗೆ ಸತತವಾಗಿ ಪೂಜೆ ನಡೆಸುವ ಸಲುವಾಗಿ ಉತ್ತಾರ(Grant)ವನ್ನು ಬಿಡಲಾಯಿತು. ಒಂದು ಕೆರೆಯನ್ನು ಸಹ ನಿರ್ಮಾಣ ಮಾಡಲಾಯ್ತು. ಕೈಫಿಯತ್ತು ಕೆಲವು ಮುಖ್ಯ ಬೀದಿಗಳ ಹೆಸರನ್ನು ನೀಡುತ್ತದೆ. ಪೇಟೆಯ ಪೂರ್ವಪಶ್ಚಿಮ ದಿಕ್ಕಿನಲ್ಲಿ ಬಸವಣ್ಣದೇವರ ಬೀದಿ ಹಾಗೂ ಉತ್ತರದಕ್ಷಿಣವಾಗಿ ಒಂದು ಬೀದಿಯನ್ನು ನಿರ್ಮಾಣ ಮಾಡಲಾಯ್ತು. ಪೇಟೆಯ ಜನರಿಗೆ ನೀರು ಪೂರೈಕೆಯಾಗುವುದಕ್ಕೆ ಬಣಜಿಗರ ಕೆರೆಯನ್ನು ನಿರ್ಮಿಸಿದರು. ಬೀದಿಯ ಮಧ್ಯದಲ್ಲಿ ತಳವಾರನ ಕಟ್ಟೆ ಹಾಗೂ ಚಾವಡಿಯನ್ನು ಕಟ್ಟಲಾಯ್ತು. ಈ ಕಾರ್ಯದಲ್ಲಿ ನೀಲಕಂಠರಾಯ ಎಂಬುವವನು ನಾಯಕತ್ವವನ್ನು ವಹಿಸಿದನು. ಅರಮನೆಯಿಂದ ಮರಮುಟ್ಟುಗಳು ಕೊಡಲ್ಪಟ್ಟವು.

ಪ್ರಾಚೀನ ಕಾಲದ ಸಂಪ್ರದಾಯದಂತೆ ಇಕ್ಕೇರಿ ಪೇಟೆಯಲ್ಲಿ ಬೇರೆ ಬೇರೆ ಜಾತಿಯವರಿಗೆ ಬೀದಿಗಳನ್ನು ನಿರ್ಮಿಸಲಾಯ್ತು ಎಂಬುದೂ ಸಹ ಕೈಫಿಯತ್ತಿನಿಂದ ತಿಳಿದುಬರುತ್ತದೆ. ಇಂತಹ ಬೀದಿಗಳನ್ನು ಕೇರಿಗಳೆಂದು ಕೈಫಿಯತ್ತು ಗುರುತಿಸುತ್ತದೆ. ಕೈಫಿಯತ್ತಿನ ಪ್ರಕಾರ ಇಂತಹ ಹದಿಮೂರು ಕೇರಿಗಳನ್ನು ಇಕ್ಕೇರಿ ಪೇಟೆಯಲ್ಲಿ ನಿರ್ಮಿಸಲಾಯ್ತು. ಅವುಗಳು ಇಂತಿವೆ:

೧. ಬ್ರಾಹ್ಮಣರ ಕೇರಿ
೨. ಕುಂಬಾರ ಕೇರಿ
೩. ಕಂಚುಗಾರ ಕೇರಿ
೪. ಕೇಣಿಮಾಡುವ ಕೇರಿ
೫. ಉಪ್ಪಾರ ಕೇರಿ
೬. ಕಬಾಡಿ ಕೇರಿ
೭. ತುರುಕರ ಕೇರಿ
೮. ಪಟ್ಟಣನಾವು ಕೇರಿ
೯. ಕುರುಬರ ಕೇರಿ
೧೦. ಅಗಸರ ಕೇರಿ
೧೧. ಚಾಡರ ಕೇರಿ
೧೨. ಸಮಗಾರ ಕೇರಿ
೧೩. ಕಾಯಿ ಪಲ್ಲೆ ಮಾರುವವರ ಕೇರಿ·ಮತ್ತು ಇದರ ಬಾಗಲ ಹೊರಗಣ ೧. ಕೊಂಕಣ ಕೇರಿ ೨. ಗೌಜು ಕೇರಿ ೩. ಸೂಳೇರ ಕೇರಿ.

ಇಕ್ಕೇರಿ ಪೇಟೆಯಲ್ಲಿ ಮಠಗಳನ್ನು ಕಟ್ಟಿಸಲಾಯ್ತು. ಹೆಚ್ಚಿನ ಮಠಗಳು ವೀರಶೈವ ಮಠಗಳಾಗಿದ್ದವು ಎಂದು ಅವುಗಳ ಹೆಸರಿನಿಂದ ತಿಳಿದುಕೊಳ್ಳಬಹುದು. ಅವುಗಳ ಪೈಕಿ ಹಂಪಯ್ಯ ಎಂಬುವವನು ಕಟ್ಟಿಸಿದ ಮಠದ ಪ್ರಸ್ತಾಪ ಇಲ್ಲಿ ಬರುತ್ತದೆ. ಈ ಹಂಪಯ್ಯನು ಮುಖ್ಯ ವರ್ತಕನಾಗಿದ್ದನು. ಎತ್ತುಗಳನ್ನು ಹರಾಜು ಮಾಡುತ್ತಿದ್ದನು. ಜಂಗಮ ಗುರುಗಳಿಗೆ ಕಾಣಿಕೆ ಸಲ್ಲಿಸಿ ಮಠದ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದನು. ಈ ಪೇಟೆಯಲ್ಲಿ ವಾಸಿಸುತ್ತಿದ್ದ ಜಂಗಮ ಜಾತಿಯವರ ಆಚಾರ ವಿಚಾರದ ಮೇಲ್ವಿಚಾರಣೆಯನ್ನು ಈ ಮಠದವರು ನೋಡಿಕೊಳ್ಳುತ್ತಿದ್ದರು. ಈ ಮಠಕ್ಕೆ ಮಹಂತಿನ ಮಠವೆಂದು ಕರೆಯುತ್ತಿದ್ದರು. ಹಂಪಯ್ಯನು ಕಟ್ಟಿಸಿದ ಈ ವೀರಶೈವ ಮಠ ಇಕ್ಕೇರಿ ಪೇಟೆಯಲ್ಲಿ ಎಷ್ಟು ಪ್ರಖ್ಯಾತಿಯಾಗಿತ್ತು ಎಂದರೆ ಕೆಳದಿ ನಾಯಕರು ಆರು ಗ್ರಾಮಗಳ ಉತ್ಪತ್ತಿಯಾಗಿದ್ದ ಒಂದು ಸಾವಿರ ವರಹಗಳನ್ನು ಇನಾಮ್ ಆಗಿ ಈ ಮಠಕ್ಕೆ ಬಿಟ್ಟಿದ್ದರು. ಇಕ್ಕೇರಿಪೇಟೆ ಹೈದರಾಲಿಯ ವಶವಾದ ಮೇಲೆ ಈ ಮಠದ ಇನಾಮು ಮೂವತ್ತು ವರಹಾಕ್ಕೆ ಇಳಿಯಿತೆಂದು ಕೈಫಿಯತ್ತು ತಿಳಿಸುತ್ತದೆ. ಈ ಮಠವಲ್ಲದೇ ಮರಿಯಪ್ಪ ಶೆಟ್ಟಿ ಎಂಬ ವರ್ತಕನು ಕಟ್ಟಿಸಿದ ಒಂದು ವಿರಕ್ತಮಠವೂ ಈ ಪೇಟೆಯಲ್ಲಿತ್ತು. ಕೆಳದಿಯ ಅರಸರು ಈ ಮಠಕ್ಕೂ ಇನಾಂ ಕೊಟ್ಟಿದ್ದರು. ಚೆನ್ನಮ್ಮಾಜಿಯ ಕಾಲಕ್ಕೆ ಈ ಮಠಕ್ಕೆ ೩೬,೦೦೦ (ಮೂವತ್ತಾರು ಸಾವಿರ) ವರಹಗಳ ಇನಾಂ ಇದ್ದಿತು ಎಂಬುದಾಗಿ ಕೈಫಿಯತ್ತಿನಿಂದ ತಿಳಿದು ಬರುತ್ತದೆ. ಈ ರೀತಿಯಾಗಿ ಇಕ್ಕೇರಿ ಪೇಟೆಯನ್ನು ಸದಾಶಿವರಾಯನು ಕಟ್ಟಿಸಿದನು. ಈ ಪೇಟೆಗೆ ವಿವಿಧ ಕಸುಬುಗಳು ಮತ್ತು ಜಾತಿಯ ಜನರು ಬಂದು ನೆಲೆಸಲು

ಅನುಕೂಲವಾಗುವಂತೆ ಸೂಕ್ತವಾದ ಕವಲು ಮತ್ತು ಕರಾರುಗಳನ್ನು ಕೊಡಲಾಯ್ತು. ಕೈಫಿಯತ್ತಿನ ಪ್ರಕಾರ ಈ ಪೇಟೆಯ ಆರಂಭಕಾಲದಲ್ಲಿ ಅರಮನೆಯವರು ಬಿಟ್ಟಿ, ಬಿರಾಡ, ವಟ್ಟಿ, ವರಾಡ ಮತ್ತು ಅಪರಾಧಗಳೆಂಬ ತೆರಿಗೆಗಳನ್ನು ವಸೂಲಿ ಮಾಡಲಿಲ್ಲವೆಂದು ಕೈಫಿಯತ್ತು ತಿಳಿಸುತ್ತದೆ.

ಒಟ್ಟಿನಲ್ಲಿ ಮೇಲಿನ ವಿವರಗಳಿಂದ ಕೆಲವು ಸಾಮಾನ್ಯ ತೀರ್ಮಾನಗಳನ್ನು ಮಾಡಬಹುದು. ಒಂದನೆಯದಾಗಿ, ಇಕ್ಕೇರಿ ಪೇಟೆಯನ್ನು ನಿರ್ಮಾಣ ಮಾಡಿದ ವಿಷಯದಿಂದ ನಾವು ಆ ಕಾಲದ ಕೆಳದಿ ನಾಯಕರ ಆರ್ಥಿಕ ಧೋರಣೆಯನ್ನು ತಿಳಿದುಕೊಳ್ಳಬಹುದಾಗಿದೆ. ಕೇವಲ ಕೃಷಿ ಉತ್ಪಾದನೆಯಿಂದ ಮಾತ್ರ ರಾಜ್ಯದ ಸುಭಿಕ್ಷತೆ ಸಾಧ್ಯವಾಗಲಾರದು ಎಂಬುದು ಈ ಪೇಟೆಯ ನಿರ್ಮಾಣದಿಂದ ಸಾಬೀತಾಗುತ್ತದೆ.

ಎರಡನೆಯದಾಗಿ ಇಕ್ಕೇರಿ ಪೇಟೆ ಹದಿನಾರನೇ ಶತಮಾನದ ಒಂದು ನಗರ ಪ್ರದೇಶದ ಪ್ರಮುಖ ಲಕ್ಷಣವನ್ನು ಗುರುತಿಸಲು ಸಹಾಯ ಮಾಡುತ್ತದೆ. ಕೋಟೆ, ಪೇಟೆ, ಅಗ್ರಹಾರ, ದೇವಾಲಯ, ಮಠ ಇವುಗಳು ಒಂದು ನಗರ ಪ್ರದೇಶದ ಪ್ರಮುಖ ಘಟಕಗಳಾಗಿದ್ದವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕೋಟೆ ಪೇಟೆಯನ್ನು ರಕ್ಷಣೆ ಮಾಡಿದರೆ, ಪೇಟೆ ಪರೋಕ್ಷವಾಗಿ ತೆರಿಗೆಗಳನ್ನು ಸಂಗ್ರಹಿಸಿ ಕೊಡುವುದರ ಮೂಲಕ ಕೋಟೆಗೆ ಸಹಾಯ ಮಾಡುತ್ತಿತ್ತು. ಅಗ್ರಹಾರ ಮಠ, ದೇವಾಲಯಗಳು, ಪೇಟೆ ಜನರಿಗೆ ಆಧ್ಯಾತ್ಮಿಕ ಜೀವನದ ಕೇಂದ್ರಗಳಾಗಿದ್ದವು. ಹೀಗೆ ಇಕ್ಕೇರಿ ಪೇಟೆಯ ನಿರ್ಮಾಣದಲ್ಲಿ ಭೌತಿಕ ಮತ್ತು ಅಭೌತಿಕ ಅಂಶಗಳು ಮೇಳವಾಗಿರುವುದನ್ನು ಕಾಣುತ್ತೇವೆ. ಮೂರನೆಯದಾಗಿ, ಇಕ್ಕೇರಿ ಪೇಟೆಯ ಬೀದಿಗಳ ನಿರ್ಮಾಣವನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಅಂದಿನ ಜಾತಿ ವ್ಯವಸ್ಥೆಗೆ ಪೇಟೆ ಪ್ರದೇಶದಲ್ಲೂ ಸಮಾಜ ನೀಡಿದ್ದ ಪ್ರಾಧಾನ್ಯತೆಯು ಗೊತ್ತಾಗುತ್ತದೆ. ಬೇರೆ ಬೇರೆ ಕಸುಬಿಗೆ ಮತ್ತು ಜಾತಿಗೆ ಸೇರಿದ ಜನ ಅವರವರ ಕೇರಿಗಳಲ್ಲೇ ವಸತಿಗಳನ್ನು ನಿರ್ಮಿಸಿಕೊಂಡು ವಾಸಮಾಡಬೇಕೆಂದು ಅಂದಿನ ಪೇಟೆ ನಿರ್ಮಾಣದ ಯೋಜನೆಯ ಮುಖ್ಯ ಅಂಶವಾಗಿತ್ತು. ಎಲ್ಲಕ್ಕಿಂತ ಕುತೂಹಲಕರ ಅಂಶವೇನೆಂದರೆ ಸೂಳೆಯರ ಬೀದಿ. ಇದರಿಂದ ಅಂದಿನ ಸರ್ಕಾರ ಮತ್ತು ಸಮಾಜ ಪೇಟೆಗಳಂತಹ ಪ್ರದೇಶದಲ್ಲಿ ವೇಶ್ಯಾವಾಟಿಕೆಗೆ ಕಾನೂನು ಬದ್ಧವಾಗಿ ಮನ್ನಣೆ ನೀಡಿದ್ದಿತೆಂದು ಗೊತ್ತಾಗುತ್ತದೆ. ಈ ಸಂದರ್ಭದಲ್ಲಿ ವಿಜಯನಗರಕ್ಕೆ ಬೇಟಿ ನೀಡಿದ ಪ್ರವಾಸಿಗರ ಗ್ರಂಥಗಳು ಮತ್ತು ಶಾಸನಗಳಿಂದ ತಿಳಿದುಬರುವ ಒಂದು ಪ್ರಮುಖ ಅಂಶವು ಗೊತ್ತಾಗುತ್ತದೆ. ಅದೇನೆಂದರೆ ನಗರ ಮತ್ತು ಪೇಟೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ವೇಶ್ಯೆಯರ ಮೇಲೆ ಹಾಕುತ್ತಿದ್ದ ತೆರಿಗೆಗಳು. ಪ್ರಾಯಶಃ ಇಕ್ಕೇರಿ ಪೇಟೆಯ ವೇಶ್ಯೆಯರು ಸಹ ಸರ್ಕಾರಕ್ಕೆ ತೆರಿಗೆಯನ್ನು ವಿಜಯನಗರ ಸಂಪ್ರದಾಯದಂತೆ ನೀಡುತ್ತಿದ್ದರೆಂದು ಭಾವಿಸಬಹುದು. ಕೊನೆಯದಾಗಿ : ಸಾಗರದ ಕೈಫಿಯತ್ತು ನೀಡುವ ಇಕ್ಕೇರಿ ಪೇಟೆಯ ನಿರ್ಮಾಣದ ಬಗೆಗಿನ ಮಾಹಿತಿ ಬೇರೆಯ ಆಕರಗಳಲ್ಲಿ ಇಷ್ಟೊಂದು ವಿವರವಾಗಿ ದೊರೆಯದೇ ಇರುವುದರಿಂದ ಈ ಆಕರವು ಕ್ಷೇತ್ರಕಾರ್ಯವನ್ನು ಬಳಸಿಕೊಂಡು ಮತ್ತಷ್ಟು ಆಳವಾಗಿ ಸಂಶೋಧನೆ ಮಾಡಲು ಉತ್ತಮವಾದ ಕೈಪಿಡಿಯಾಗಿದೆಯೆಂದು ಹೇಳಬಹುದು.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

*೧. **ಕರ್ನಾಟಕದ ಕೈಫಿಯತ್ತುಗಳು** (ಸಾಗರ ಕೈಫಿಯತ್ತು): (ಸಂ.) ಎಂ. ಎಂ. ಕಲಬುರ್ಗಿ ಪು. ೧೪೪ ರಿಂದ ೧೫೫

*೨. ಅದೇ ಪು. ೧೪೬-೧೪೭

*೩. ಅದೇ ಪು. ೧೪೬-೧೪೭

ಕುಂ. ಬಾ. ಸದಾಶಿವಪ್ಪ*

# ಖಡ್ಗಯುದ್ಧ ಪ್ರವೀಣ ಮೊದಲ ಸೋಮಶೇಖರ ನಾಯಕ

## – ಒಂದು ಟಿಪ್ಪಣಿ

ವಿಜಯನಗರ ಸಾಮ್ರಾಜ್ಯದ ಆಳ್ವಿಕೆ ಕೊನೆಗೊಳ್ಳುವಾಗ ಅದರ ಸಾಮಂತ ಅರಸರು ಸ್ವತಂತ್ರರಾದರು. ಪ್ರಮುಖರು, ಸೇನಾಧಿಕಾರಿಗಳು ಚಿಕ್ಕ ಚಿಕ್ಕ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿದರು. ಅವುಗಳಲ್ಲಿ ಪ್ರಮುಖವಾದವುಗಳು ಮೈಸೂರು, ತುಮಕೂರು, ತರೀಕೆರೆ, ಕೆಳದಿ, ಸ್ವಾದಿ, ಸವಣೂರು, ರಾಯದುರ್ಗ, ಸುರಪುರ, ಚಿತ್ರದುರ್ಗ ಹರಪನಹಳ್ಳಿ.

ಆಂಗ್ಲ ಅಧಿಕಾರಿ ಮನ್ರೋ ಹೇಳಿಕೆ ಪ್ರಕಾರ ಬಳ್ಳಾರಿ ಜಿಲ್ಲೆಯ ಅತ್ಯಂತ ಪ್ರಬಲ ಪಾಳೆಯಗಾರರು ಹರಪನಹಳ್ಳಿಯವರು. ಇವರು ಕ್ರಿ. ಶ. ೧೫೫೮ ರಿಂದ ೧೯೭೧ರ ವರೆಗೂ ಬಳ್ಳಾರಿ ಜಿಲ್ಲೆಯ ಈಗಿನ ಹರಪನಹಳ್ಳಿ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನ ಹಡಗಲಿ, ಹೊಸಪೇಟೆ ತಾಲ್ಲೂಕಿನ ಅರ್ಧಭಾಗ ತುಂಗಭದ್ರಾ ಆಣೆಕಟ್ಟಿನವರೆಗೆ, ನಾಲ್ಲೂಕವರೆ ತಾಲ್ಲೂಕು ಭೂಭಾಗ, ಧಾರವಾಡ ಜಿಲ್ಲೆಯ ಸೋಮಲಾಪುರ, ಪ್ರಾಚೀನ ಲಕ್ಷ್ಮೇಶ್ವರ ನಾಡು, ಹಿಂದಿನ ಹೈದರಾಬಾದ್ ಪ್ರಾಂತದ ಹುಲಿಗಿ ಪ್ರದೇಶಗಳನ್ನು ಗೆದ್ದು ಅವರಿಂದ ಕಪ್ಪ ಕಾಣಿಕೆಗಳನ್ನು ಪಡೆಯುತ್ತಿದ್ದರು.

ಹರಪನಹಳ್ಳಿ ರಾಜ್ಯವು ದಾದಾನಾಯಕರಿಂದ ಸ್ಥಾಪನೆಗೊಂಡು ಎರಡನೇ ಸೋಮಶೇಖರ ನಾಯಕರವರೆಗೂ ಹದಿನೈದು ಪುರುಷ ಓರ್ವ ಸ್ತ್ರೀ, ಒಟ್ಟು ನಾಯಕ – ನಾಗತಿಯರ ಆಳ್ವಿಕೆಗೆ ಒಳಗಾಗಿ ಸುಮಾರು ೨೩೩ ವರ್ಷಗಳ ದೀರ್ಘಕಾಲ ವಿಜೃಂಭಿಸಿತು.

ಮೊದಲ ವೀರಬಸಪ್ಪನ ದತ್ತು ಪುತ್ರ ಮೊದಲ ಸೋಮಶೇಖರ ನಾಯಕ ಮತ್ತು ಅವರ ಧರ್ಮಪತ್ನಿ ಸೋಮಮ್ಮಾಜಿ ಕ್ರಿ. ಶ. ೧೭೩೪-೧೭೫೮ರ ವರೆಗೂ ಆಳಿದ್ದು ಶಾಸನಗಳಿಂದ ತಿಳಿದು ಬರುವುದು. ಈ ಅರಸ ಪರಾಕ್ರಮಿ, ದೈವಭಕ್ತ, ಸ್ನೇಹಪರ ಹಾಗೂ ದಕ್ಷ ಆಡಳಿತಗಾರ. ಇವನ ಕಾಲದಲ್ಲಿ ಪ್ರಜೆಗಳು ಸುಖ ಶಾಂತಿ ಪಡೆದಿದ್ದರು.

ಚಿತ್ರದುರ್ಗದ ಮತ್ತಿತಿಮ್ಮಣ್ಣ ನಾಯಕ ತನ್ನ ಪುತ್ರಿ ಹೊನ್ನಾನಾಗತಿಯನ್ನು ಹರಪನಹಳ್ಳಿ ದಾದಾ ನಾಯಕನಿಗೆ ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದ್ದ. ವರದಕ್ಷಿಣೆ ಎಂದು ಉಚ್ಚಂಗಿ ದುರ್ಗ ಕೊಟ್ಟಿದ್ದ. ಈ ಕೋಟೆಯನ್ನು ಹಿಂದಕ್ಕೆ ಪಡೆಯಲು ಮತ್ತಿ ತಿಮ್ಮಣ್ಣ ನಾಯಕನ ಪುತ್ರ ಓಬಣ್ಣನಾಯಕ ಬಹುಕಾಲ ಯತ್ನಿಸುತ್ತಿದ್ದ. ವಿಜಯದಶಮಿ ದಿನ ಉಚ್ಚಂಗಿ ದುರ್ಗದಲ್ಲಿ ಉತ್ಸವಗೊಳ್ಳುವ ಪಂಚಲೋಹದ ಉಚ್ಚಂಗೆಮ್ಮ ದೇವಿಯ ಮೂರ್ತಿಯನ್ನು ಚಿತ್ರದುರ್ಗದ ಸೈನಿಕರು ಅಡವಿಯಲ್ಲಿ ಅಡಗಿ, ಬನ್ನಿಮಂಟಪದ ಹತ್ತಿರ ಅಪಹರಿಸಿದರು. ಈ ವಾರ್ತೆ ಹರಪನಹಳ್ಳಿ ಅರಸರಿಗೆ ಮುಟ್ಟಿತು. ಪ್ರತಿಯಾಗಿ ಚಿತ್ರದುರ್ಗದ ಅರಸರ ವಿರುದ್ಧ ಸೆಣಸಾಡುವ ಸಂದರ್ಭ ಒದಗಿತು. ನೆಂಟರು ಶತ್ರುಗಳಾದರು. ಯುದ್ಧ ಆರಂಭವಾಯಿತು. ದಾವಣಗೆರೆ ಮಾಯಕೊಂಡದಲ್ಲಿ ಎರಡೂ ಸೈನ್ಯಗಳು ಜಮಾಯಿಸಿದವು. ಬಿದನೂರು, ರಾಯದುರ್ಗಗಳ ಸೇನೆಯು ಅಲ್ಲಿಗೆ ಬಂದು ಹರಪನಹಳ್ಳಿಯವರಿಗೆ ನೆರವನ್ನು ಕೊಟ್ಟರು. ಯುದ್ಧದಲ್ಲಿ ಮೊದಲ ಸೋಮಶೇಖರ ನಾಯಕನಿಗೂ ಚಿತ್ರದುರ್ಗದ ಮದಕರಿ ನಾಯಕರಿಗೂ ಪಟ್ಟದಾನೆಗಳ ಮೇಲೆ ಖಡ್ಗ ಯುದ್ಧ ನಡೆದು ೨೪-೩-೧೭೪೮ರಂದು ಹಿರಿಮದಕರಿ ನಾಯಕರು ಕೊಲ್ಲಲ್ಪಟ್ಟರು. ಇವರ ಸಮಾಧಿಯನ್ನು ಈಗಲೂ ಮಾಯಕೊಂಡದಲ್ಲಿ ಕಾಣಬಹುದು. ಈ ಅರಸನಿಗೆ ಸ್ವಾದಿ ಅರಸ ಖಡ್ಗಯುದ್ಧ ಪ್ರವೀಣ ಎಂದು ಕರೆದು ಪತ್ರ ಬರೆದಿರುವ ದಾಖಲೆ ಇದೆ. ಆಗಿನ ಕಾಲದಲ್ಲಿ ಹರಪನಹಳ್ಳಿ ಖಡ್ಗಗಳೂ ಹೆಸರನ್ನು ಪಡೆದಿದ್ದವು. ಈ ಅರಸ ಅನೇಕ ಯುದ್ಧಗಳನ್ನು ಮಾಡಿ ರಾಜ್ಯದ ವಿಸ್ತರಣೆಗೆ ಕಾರಣನಾಗಿದ್ದ.

ಇಷ್ಟೊಂದು ಪ್ರಸಿದ್ಧ ಮೊದಲ ಸೋಮಶೇಖರ ನಾಯಕನಿಗೆ ಓರ್ವ ಸುಂದರ ಪುತ್ರ ಜನಿಸಿದ್ದ. ಅವರ ಹೆಸರು ಜಂಬಣ್ಣ. ಪ್ರೀತಿಯಿಂದ ಎಲ್ಲರೂ ಅವನನ್ನು ಪುಟ್ಟರಸ ಎಂದೇ ಕರೆದರು. ತಂದೆಯಂತೆ ಅವನು ಯುದ್ಧ ವೀರನಾಗಿದ್ದ. ಕೆಲವು ಕದನಗಳಲ್ಲಿ ಜಯ ಸಂಪಾದಿಸಿ ನಾಡಿಗೆ ಕೀರ್ತಿ ತಂದಿದ್ದ. ತಂದೆ ತಾಯಿಗಳು,

* ನಾರಾಯಣ ಭಟ್ಟರ ವಠಾರ, ಶಂಕರಮಠದ ಹತ್ತಿರ, ಹೊಸಪೇಟೆ ರಸ್ತೆ, ಹರಪನಹಳ್ಳಿ – ೫೮೩ ೧೧೩

ರೇವಕ್ಕ ಎಂಬುವ ಸುಂದರ ಕನ್ಯಾ ಮಣಿಯನ್ನು ತಂದು ಅವನಿಗೆ ವಿವಾಹ ನೆರವೇರಿಸಿದ್ದರು. ಅವನು ಹದಿಹರೆಯದ ಮಡದಿಯೊಂದಿಗೆ ಅಲ್ಪಕಾಲ ದಾಂಪತ್ಯ ಜೀವನ ಪಡೆದ; ಹದಿನೆಂಟನೇ ವಯಸ್ಸಿಗೆ ಕರಿಮೈಲಿ ಬೇನೆಯಿಂದ ನರಳಿದ. ಬೇನೆಯಿಂದ ಚೇತರಿಸಿಕೊಳ್ಳದೆ ಮೃತ್ಯುವಿಗೂ ತುತ್ತಾದ.

ಅರಸ - ಅರಸಿ ಅರಮನೆ ಅಧಿಕಾರಿಗಳು ಪ್ರಮುಖರು ಕಣ್ಣೀರು ಸುರಿಸಿದರು. ದುಃಖದ ವಾರ್ತೆ ಹರಪನಹಳ್ಳಿ ರಾಜ್ಯದ ಉದ್ದಗಲ ಗಾಳಿಯಾಗಿ ಹರಡಿತು. ನೀರಾಗಿ ಉಕ್ಕಿ ಉಕ್ಕಿ ಹರಿಯಿತು. ಪುತ್ರ ಶೋಕದಲ್ಲಿ ಅನ್ನ - ನೀರು ತೆಗೆದುಕೊಳ್ಳದೆ ಅರಸ ಕ್ರಿ. ಶ. ೧೭೫೮ರಲ್ಲಿ ಕೊನೆ ಉಸಿರು ಎಳೆದ. ರಾಜ್ಯದ ಕೃಷಿ ಕಾರ್ಮಿಕರು, ಶ್ರೀಸಾಮಾನ್ಯರು ಪುಟ್ಟರಸನ ಮೇಲೆ ಪದ್ಯಗಳನ್ನು ರಚಿಸಿ ಹಾಡಿದರು. ಹರಪನಹಳ್ಳಿ ಪಟ್ಟಣ ಮತ್ತು ತಾಲ್ಲೂಕಿನ ಇತರೆ ಹಳ್ಳಿಗರು ತಮ್ಮ ಹೊಲ - ಗದ್ದೆಗಳಲ್ಲಿ ಹುಲ್ಲು (ಕಳೆ-ಕಸ) ತೆಗೆಯುವಾಗ, ಇತರೆ ಕೆಲಸ ಮಾಡುವಾಗ, ಈಗಲೂ ಈ ಹಾಡುಗಳನ್ನು ಹಾಡಿ ಕಣ್ಣೀರು ಸುರಿಸುವರು. ಆ ಹಾಡು ಹೀಗಿದೆ:

**ಜನಪದ ಹಾಡುಗಳು**

೧. ಕಾಲೇರಿ

ಕಾಲೇರಿ ಕರೆಸೀರಿ। ಕಾಗದ ಬರಸೀರಿ
ಸುರಪುರಕ ಕಾಗದ। ಸುರುಪುರಕ ಕಾಗದ ಕಳಿಸೀರಿ ರನ್ನದ
॥ ಕೋಲು ॥

*(ಸಂಗ್ರಹ : ಯಲ್ಲಪ್ಪಗೌಳೇರ, ಹರಪನಹಳ್ಳಿ)*

೨. ಜಂಬಣ್ಣ

ದಾಗಡಿ ಬಳ್ಳೀಗೆ ಹೂಡ್ಯಾರ ಎಂಟೆತ್ತು
ಬೋರ್‍ಯಾಡುತಾವ ಹೊಲದಾಗ
ಬೋರ್‍ಯಾಡುತಾವ ಹೊಲದಾಗ
ಜಂಬಣ್ಣ ಜೋಳದ ಮ್ಯಲೆದ್ದು ಮಲಗ್ಯಾನ

ಉಗ್ಗಣೀ ಬಳ್ಳೀಗೆ ಹೂಡ್ಯಾರ ಎಂಟೆತ್ತು
ಬೋರ್‍ಯಾಡುತಾವ ಹೊಲದಾಗ
ಬೋರ್‍ಯಾಡುತಾವ ಹೊಲದಾಗ
ರಾಗಿ ಮ್ಯಲೆದ್ದು ಮಲಗ್ಯಾನ

*(ಸಂಗ್ರಹ : ಬಡಿಗಣ್ಣೆರ ಕೊಟ್ರಮ್ಮ, ಗಂಡ ಹಾಲಪ್ಪ, ಹಿರೇ ಕುರುಬರ ಕೇರಿ, ಹರಪನಹಳ್ಳಿ)*

೩. ಪುಟ್ಟರಸ ( ಜಂಬಣ್ಣ )

ಚಿಕ್ಕೇನ ಪುಟ್ಟರಸ ಹುಟ್ಯಾನೆಂಬುದ
ಚಿಕ್ಕ ನಗರದ ದೊರೆ ಕೇಳಿ
ಮುತ್ತಿನ ತೊಪ್ಪಿಗಿ ಕಳಿವ್ಯಾನ

ಆ ಊರಿಗೆ ಹೋಗುತ ಆಗೀಗ ನೋಡುತ
ಜೋಳದ ಕಾಳೋಟು ಜರ ಬಂದ ಪುಟ್ಟರಸಗೆ
ಮಾಯಾದ ಮಲಿಯವ್ವಾ ಬಂದ ಸ್ವಾಮಕ್ಕ
ದೇವರಿಗೆ ಹರಕಿ ಹೊರುತಾಳೆ

ಕೂಲಹಳ್ಯಾಗಿರುವ ಕೂಲಹಳ್ಳಿ ಗೋಣೆಣ್ಣನಿಗೆ
ನೂಲ ಎಳೆ ಮೇಲೆ ಬರುತೇನೊ
ನೂಲ ಎಳೆಮೇಲೆ ಏನೆಂದು ಬರಲಿ ಶಿವನೆ
ಬಾಲ ಪುಟ್ಟರಸ ಉಳುದಾರೆ

ಬಾಗಳಿ ಬಳಿಗೆ ಬಾಗಳಿ ಕಲ್ಲಣ್ಣ ನಿನಗೆ
ಬಾಗಲಿಕೆ ಬಂಗಾರ ಬಿಗಿಸೇನು
ಬಾಗಿಲಕ ಬಂಗಾರ ಏನೆಂದು ಬಿಗಿಸಾಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಉಜ್ಜಿಣಿ ಒಳಗಿರು ಉಜ್ಜಿಣಿ ಸಿದ್ದಣ್ಣ ನಿನಗೆ
ಗೆಜ್ಜೀದ ತೇರ ಎಳಸೇನ
ಗೆಜ್ಜೆಯ ತೇರ ಏನೆಂದು ಎಳಸಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಕೊಟ್ರೂರಾಗಿರುವ ಕೊಟ್ರಬಸಪ್ಪ ನಿನಗೆ
ಕಟ್ಟೀದ ತೇರ ಎಳಸೇನು
ಕಟ್ಟೀದ ತೇರ ಏನೆಂದು ಎಳಸಾಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ದಾವಣಗೇರ್‍ಯಾಗಿರುವ ದಾವಣಗೇರಿ ದುರುಗಮ್ಮ
ನಿನಗೆ ಜೋಡು ಎರಡು ಬ್ಯಾಟಿ ತರುವೆ
ಜೋಡು ಎರಡು ಬ್ಯಾಟಿನ ಏನೆಂದು ತರಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಅರಸಿ ಕೇರ್‍ಯಾಗಿರುವ ದಂಡಿಯ ದುರುಗಮ್ಮ ನಿನಗೆ
ಮುತ್ತೀನ ದಂಡೀನ ಉಡಿಯಕ್ಕಿ
ಮುತ್ತೀನ ದಂಡಿ ಏನೆಂದು ತರಿಸಾಲ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಮೈಲಾರದಾಗಿರುವ ಮೈಲಾರ ನಿಂಗಣ್ಣ ನಿನಗೆ
ಕೋರಿ ಅಂಗಿ ಕಳಿವ್ಯೇನ
ಕೋರಿ ಅಂಗಿ ಏನೆಂದು ತರಲೊ ಶಿವನೆ
ಬಾಲು ಪುಟ್ಟರಸ ಉಳಿದಾರೆ

ಚಾರಿ ಬೈಲಾಗಿರುವ ಈರಭದ್ರರ ನಿನಗೆ
ಜೋಡು ಗುಗ್ಗಳ ಹೊರುವೇನು
ಜೋಡು ಗುಗ್ಗಳ ಏನೆಂದು ಹೊರುವೇನು ಶಿವನೆ
ಬಾಲ ಪುಟ್ಟರಸ ಉಳಿದಾರೆ

ಕಟ್ಟೆ ಮ್ಯಾಲೆ ಇರುವ ಹೊಟ್ಟೆ ಬಸವಣ್ಣ ನಿನಗೆ
ಮಟ್ಟೆ ಮಟ್ಟೆ ಕಾಯಿ ಒಡಸೇನ
ಮಟ್ಟೆ ಮಟ್ಟೇಲಿ ಕಾಯಿ ಏನೆಂದು ಒಡಸಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಅಂಗಳದಾಗ ಇರುವ ಗುಂಡು ಧರ್ಮಣ್ಣಾ
ನಿನಗೆ ಖಂಡಗದ ಕಡಲಿ ಪನಿವಾರ
ಖಂಡಗದ ಕಡಲಿ ಪನಿವಾರ ಏನೆಂದು ಮಾಡಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಹತ್ತೀಯ ಎಲಿ ಹಾಂಗ ಹತ್ತು ರೊಟ್ಟಿಯ ಸುಟ್ಟು
ಹೊತ್ತೀಲೆ ಒಯ್ದು ಒಳಗಿಟ್ಟೆ ಸೋಮಕ್ಕ

ಪುತ್ರನ ಕರಕೊಂಡು ಉಣಲಿಲ್ಲ

ಆಲದ ಎಲಿ ಹಾಂಗ ಆರು ರೊಟ್ಟಿಯ ಸುಟ್ಟಿ
ವಾರೀಲೆ ಒಯ್ದು ಒಳಗಿಟ್ಟಿ
ವಾರೀಲೆ ಒಯ್ದು ಒಳಗಿಟ್ಟಿ ಸೋಮಕ್ಕ
ಬಾಲನ ಕರಕೊಂಡು ಉಣಲಿಲ್ಲ

ಕರಿದ ಕರ್ಚೀಕಾಯಿ ಕರದಂಗ ಆದಾವ
ಗಡಿಗಾಳ ತುಪ್ಪ ಸವದಾವ
ಗಡಿಗಾಳ ತುಪ್ಪ ಸವದಿಲ್ಲ ಸೋಮಕ್ಕ
ಪುತ್ರನ ಕರಕೊಂಡು ಉಣಲಿಲ್ಲ

ಮಾಡಿದಂತಾ ಅಡಿಗಿ ಮಾಡಿದಂಗ ಐದಾವ
ಸ್ವಾರೇಳ ತುಪ್ಪ ಸವಿದಿಲ್ಲ ಸೋಮಕ್ಕ
ಪುತ್ರನ ಕರಕೊಂಡು ಉಣಲಿಲ್ಲ

ಗಂಜೀಯ ಹಚ್ಚಡ ಹಿಂಬಡಕ ತೆರವುತ್ತ
ತಂದರು ಪುಟ್ಟರಸನ ಹೊರಾಕ್ಕ
ಅಂದಕ ಹರಪನಹಳ್ಳಿ ಚಂದಕ ಚಾರಿಬೈಲಿ
ಚಂದ್ರವತಿ ಅಂಬ ಹಿರೇಕೆರೆ
ಚಂದ್ರವತಿ ಅಂಬ ಹಿರೇಕೆರೆ ಏರೀಮ್ಯಾಲೆ
ತಿದ್ದಿಟ್ಟಿರವ್ವಾ ಚೆಲುವಾನ
ತಂದಿಟ್ಟಿರವ್ವ ಚೆಲುವಾನ ಹಣೆ ಮೇಲೆ
ತಿದ್ದಿಟ್ಟಿರವ್ವಾ ತಿಳಿನಾಮ

ಏರಿಯ ಹತ್ತೀರಿ ಸಾರಿರಿ ಡಂಗುರ
ಜೋಗರಣ್ಣನ ಕರಿಸ್ಯಾರ
ಜೋಗರಣ್ಣನ ಕರಿಸ್ಯಾರ ರೇವಕ್ಕನು
ಕಟ್ಟಿದ ಕರಿಮಣಿ ತೆಗಿಸ್ಯಾರ

ಏರಿಯ ಹತ್ತೀರಿ ಸಾರಿರಿ ಡಂಗುರ
ಮುತ್ತಾರಣ್ಣನ ಕರಿಸ್ಯಾರ
ಮುತ್ತಾರಣ್ಣನ ಕರಿಸ್ಯಾರ ರೇವಕ್ಕನ
ಮುತ್ತೀನ ಮೂಗುತಿ ತಗಿಸ್ಯಾರ

ಏರಿಯ ಹತ್ತೀರಿ ಸಾರಿರಿ ಡಂಗುರ
ಬಳಿಗಾರಣ್ಣನ ಕರಿಸ್ಯಾರ
ಬಳಿಗಾರಣ್ಣನ ಕರಿಸ್ಯಾರ ರೇವಕ್ಕನ
ಕಾಜಿನ ಬಳೆಯ ತಗಿಸ್ಯಾರ

ಏರಿಯ ಹತ್ತೇರಿ ಸಾರಿರಿ ಡಂಗುರ
ಕಂಚುಗಾರಣ್ಣನ ಕರಿಸ್ಯಾರ
ಕಂಚುಗಾರಣ್ಣನ ಕರಿಸ್ಯಾರ ರೇವಕ್ಕನ
ಕಂಚಿನ ಕಾಲುಂಗರ ತಗಿಸ್ಯಾರ

ಅಕ್ಕಿಯ ಬಾನ ಉಕ್ಕಿ ಉಕ್ಕಿ ಕುದಿವಾಗ
ತಾಯಿ ಸೋಮಕ್ಕ ಅಳದೀರೆ
ತಾಯಿ ಸೋಮಕ್ಕ ಅಳದೀರೆ ನಿನ ಮಗ
ದೇವರಾಗಿ ಹೋದ ಕೈಲಾಸದಾಗ

*(ಸಂಗ್ರಹ : ಬಡಿಗಣ್ಣರ ಕೊಟ್ರಮ್ಮ, ಗಂಡ ಹಾಲಪ್ಪ ಹಿರೇಕುರುಬರ ಕೇರಿ ಹರಪನಹಳ್ಳಿ)*

ವಿಮರ್ಶೆ

೧. ಈ ಪದ್ಯದಲ್ಲಿ – 'ಚಾರಿ ಬೈಲು' ಎಂಬುವ ಪದ ಬರುವುದು. ಐವತ್ತು ವರ್ಷಗಳ ಹಿಂದೆ ಇದು ಹಳೇ ಬಸ್ ನಿಲ್ದಾಣ. ಇಲ್ಲಿ ಸಂತೆಯೂ ನಡೆಯುತ್ತಿತ್ತು. ಮೂಲದಲ್ಲಿ ಇದು ಜೈನ ಬಸದಿ. ಬಳಿಕ ವೀರಭದ್ರ ದೇವರ ದೇಗುಲ. ಈ ಬಯಲಿಗೆ ಸಾರಿ ವೀರಭದ್ರನ ಬಯಲು ಎಂದಿದ್ದು ಕಾಲಗತಿಸಿದಂತೆ 'ಸಾರಿ' ಹೋಗಿ 'ಚಾರಿ' ಆಯಿತು. ಇದು ಹರಪನಹಳ್ಳಿ ಪಟ್ಟಣದ ಮಧ್ಯೆ ಇದ್ದು ಅನೇಕ ಸಭೆ ಮತ್ತು ವೀರಣ್ಣನ ಜಾತ್ರೆ ನಡೆಯುವ ಸ್ಥಳ. ೨. 'ಸೋಮಕ್ಕ' ಜಂಬಣ್ಣನ ತಾಯಿ ಮೊದಲ ಸೋಮಶೇಖರ ನಾಯಕರ ಮಡದಿ ದಕ್ಷ ನಾಗತಿ. ೩. ಕೂಲಹಳ್ಳಿ ಗೋಣಿಸ್ವಾಮಿ, ಬಾಗಳಿ ಕಲ್ಲೇಶ, ಉಜ್ಜನಿ ಸಿದ್ದೇಶ, ಕೊಟ್ರೇಶ, ದಾವಣಗೆರೆ ದುರ್ಗಮ್ಮ, ಅರಸೀಕೆರೆ ದಂಡಿನ ದುರ್ಗಮ್ಮ, ಮೈಲಾರ ಲಿಂಗ ದೇವರು, ಕಟ್ಟಿಬಸಪ್ಪ, ಗುಂಡುಭರ್ಮಪ್ಪ, ಹರಪನಹಳ್ಳಿ ಮತ್ತು ಸುತ್ತಲಿನ ದೇವರುಗಳ ಹೆಸರುಗಳು ಕಂಡು ಬರುವುದು. ೪. ಹರಪನ ಹಳ್ಳಿಯಲ್ಲಿ ಎಂಟು ಕೆರೆಗಳು ಇದ್ದರೂ ಹಿರೆಕೆರೆ ಪ್ರಮುಖ. ಅದಕ್ಕೆ ಪ್ರಾಚೀನರು, 'ಚಂದ್ರವತಿ' ಎಂದು ಕರೆದುದು ಗೊತ್ತಾಗುತ್ತದೆ. ೫. ಪದ್ಯಗಳು ಕಾವ್ಯಮಯ ಆಗಿವೆ.

ಆಧಾರ ಸೂಚಿ


*೧. ಸ್ವಾದಿ ಅರಸರ ಪತ್ರ
*೨. ಉಚ್ಚಂಗಿ ದುರ್ಗದ ಬನ್ನಿಕಟ್ಟೆ
*೩. ಪುರಾತನರ ಹೇಳಿಕೆಗಳು
*೪. ಜನಪದ ಗೀತೆಗಳು
*೫. ಹರಪನಹಳ್ಳಿ ಪಾಳೆಯಗಾರರು ಪುಸ್ತಕ
** ಕೆಳಗೆ ನೋಡಿ


ಶ್ರೀ

** ರಾಜ ಮಾನ್ಯ ರಾಜೇಶ್ರೀ ಹರಪುರದ ಸಂಸ್ಥಾನದ ಸೋಮಶೇಖರ ರಾಜಾ ಬಹದರವರಿಗೆ

ಶ್ರೀಮತ್ಸಸಕಲಗುಣಸಂಪನ್ನರಾದ ಮಿತ್ರಜನ ಮನ: ಕುಮುದ ಪೂರ್ಣ ಚಂದ್ರೋದಯರಾದ ಕಾರ್ಯ್ಯ ಖಡ್ಗ ಪ್ರವೀಣರಾದ ನಯ ವಿನಯ ದಯ ದಾಕ್ಷಿಂಣ್ಯ ಪರೋಪಕಾರ ಶೀಲರಾದ ಮಹಂಮ್ಮೇರುವಿಗೆ ಸರ್‍ರಿಸಮಾನ ಧೀರರಾದಂಥಾ। ಸೋದೆ ಸಂಸ್ಥಾನದ ಸವಾಯಿ ಬಸವಲ್ಲಿಂಗ ರಾಜೇಂದ್ರರವರು ಮಾಡುವ ಶರಣಾರ್ಥಿ.

ರೆ॥ ಡಾ॥ ರೊನಾಲ್ಡ್ ಕುಟಿನ್ಹೊ*

# ಕನ್ನಡ ಕೈಫಿಯತ್ತುಗಳಲ್ಲಿ ರಾಣಿ ಚೆನ್ನಮ್ಮಾಜಿ

ಕೆಳದಿ ನಾಯಕರ ಇತಿಹಾಸವನ್ನು ಅಧ್ಯಯನ ಮಾಡಲು ಅನೇಕ ವರ್ಗದ ಆಧಾರಗಳು ದೊರಕುತ್ತವೆ. ಅವುಗಳ ಪೈಕಿ ಕನ್ನಡ ಕೈಫಿಯತ್ತುಗಳು ಸಹಾ ಒಂದು ವರ್ಗದ ಆಧಾರವೆಂದು ಹೇಳಬಹುದು. ಕೆಳದಿ ಚೆನ್ನಮ್ಮಾಜಿ ನಮ್ಮ ನಾಡಿನ ಇತಿಹಾಸದಲ್ಲಿ ತುಂಬಾ ಪ್ರಖ್ಯಾತರಾಗಿದ್ದಾರೆ. ಆಕೆಯ ಆಡಳಿತ ಅನೇಕ ವಿಷಯಗಳಲ್ಲಿ ವಿಶಿಷ್ಟವಾಗಿತ್ತು. ಕನ್ನಡ ಕೈಫಿಯತ್ತುಗಳು ನೀಡುವ ಕೆಲವು ವಿವರಗಳನ್ನು ಇಲ್ಲಿ ಕ್ರೋಢೀಕರಿಸಿ ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ಪ್ರಬಂಧ ರಾಣಿ ಚೆನ್ನಮ್ಮಾಜಿಯನ್ನು ಕುರಿತಂತೆ ಸಮಗ್ರ ಅಧ್ಯಯನವಲ್ಲ. ಒಂದು ವಿಶಿಷ್ಟವಾದ ಐತಿಹಾಸಿಕ ಆಕರ ದಿಂದ ಈ ರಾಣಿಯ ಬಗೆಗೆ ದೊರೆಯಬಹುದಾದ ಕೆಲವು ಮಾಹಿತಿ ಯನ್ನು ಪರಿಚಯಿಸುವುದೇ ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ಎಮ್. ಎಮ್. ಕಲಬುರ್ಗಿಯವರು*೧ ಸಂಪಾದಿಸಿ ಪ್ರಕಟಿಸಿರುವ ಕರ್ನಾಟಕದ ಕೈಫಿಯತ್ತುಗಳನ್ನು ಪರಿಶೀಲಿಸಿದಾಗ ಸುಮಾರು ೭ ಕೈಫಿಯತ್ತುಗಳು ರಾಣಿ ಚೆನ್ನಮ್ಮಾಜಿಯ ವಿಷಯವನ್ನು ಕೆಲವಾರು ಸಂದರ್ಭಗಳಲ್ಲಿ ಪ್ರಸ್ತಾಪಿಸಿರುವುದು ಕಂಡು ಬರುತ್ತದೆ. ಆ ಕೈಫಿಯತ್ತುಗಳು ಇಂತಿವೆ :

೧. ಮಲ್ಲೂರು ಸಾಸಿವೆಹಳ್ಳಿ ಶೀಮೆ ಕೈಫಿಯತ್ತು*೨
೨. ವಸುಧಾರೆ ಗ್ರಾಮದ ಕೈಫಿಯತ್ತು*೩
೩. ಸಾಗರದ ಕೈಫಿಯತ್ತು*೪
೪. ಹಾರನಹಳ್ಳಿ ಕೈಫಿಯತ್ತು*೫
೫. ಭೈರೂರು ಮಾಗಣಿ ಕೈಫಿಯತ್ತು*೬
೬. ಮರದಾಳ ಕೈಫಿಯತ್ತು*೭
೭. ಶೃಂಗೇರಿಯ ಕೈಫಿಯತ್ತು*೮

ಮೇಲಿನ ಏಳು ಕೈಫಿಯತ್ತುಗಳು ಎರಡು ಪ್ರಮುಖ ಪ್ರದೇಶಗಳಿಗೆ ಸೇರಿವೆ. ೧. ಮೈಸೂರು ಪ್ರದೇಶ, ೨. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆ.

ಮೈಸೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಐದು ಕೈಫಿಯತ್ತುಗಳು ಹಾಗೂ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಎರಡು ಕೈಫಿಯತ್ತುಗಳು ಇವೆ. ಇದರಿಂದ ಒಂದು ಅಂಶ ಸ್ಪಷ್ಟವಾಗುತ್ತದೆ: ರಾಣಿ ಚೆನ್ನಮ್ಮಾಜಿಯ ಕಾಲದಲ್ಲಿ ಕೆಳದಿ ರಾಜ್ಯ ಮೈಸೂರು ಪ್ರದೇಶದಲ್ಲಿ ಹೆಚ್ಚು ಪ್ರಬಲವಾಗಿತ್ತು ಮತ್ತು ದಕ್ಷಿಣ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ರಾಣಿ ಚೆನ್ನಮ್ಮಾಜಿಯ ಸಾರ್ವಭೌಮತ್ವ ಸ್ಥಾಪಿತವಾಗಿತ್ತು ಎಂಬುದು ಗೊತ್ತಾಗುತ್ತದೆ. ಇಂದಿನ ಶಿವಮೊಗ್ಗ ಜಿಲ್ಲೆ ರಾಣಿ ಚೆನ್ನಮ್ಮಾಜಿಯ ರಾಜ್ಯದ ಬೆನ್ನೆಲುಬಾಗಿತ್ತು. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳು ವ್ಯಾಪಾರ, ವ್ಯವಹಾರಗಳಿಗೆ ಹಾಗೂ ಕಂದಾಯದ ವಸೂಲಿಗೆ ಪ್ರಮುಖ ಪ್ರದೇಶಗಳಾಗಿದ್ದವು.

**ಮಲ್ಲೂರು ಸಾಸಿವೆ ಹಳ್ಳಿ ಶೀಮೆ ಕೈಫಿಯತ್ತು** : ರಾಣಿ ಚೆನ್ನಮ್ಮಾಜಿಯು ಕೋಟೆಮಲ್ಲೂರು ಪೇಟೆಯನ್ನು ಆಕ್ರಮಿಸಿಕೊಂಡ ವಿಚಾರವನ್ನು ತಿಳಿಸುತ್ತದೆ. ಕೋಟೆ ಮಲ್ಲೂರು ಆ ಕಾಲಕ್ಕೆ ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು ಎಂಬುದು ಅದರ ಹೆಸರಿನಿಂದ ತಿಳಿದುಬರುತ್ತದೆ. ಇದಕ್ಕೆ ಮುನ್ನ, ಕೈಫಿಯತ್ತಿನ ಪ್ರಕಾರ ಈ ಪ್ರದೇಶವನ್ನು ಮೊಗಲರು ಆಳುತ್ತಿದ್ದರು ಅಂದರೆ ಚೆನ್ನಮ್ಮಾಜಿ ಮೊಗಲರಿಂದ ಈ ಪ್ರದೇಶವನ್ನು ಗೆದ್ದುಕೊಂಡಿರಬೇಕೆಂದು ಊಹಿಸಬೇಕಾಗುತ್ತದೆ. ಈ ಕೈಫಿಯತ್ತು ಕೆಳದಿ ರಾಜ್ಯವನ್ನು, 'ಬಿದನೂರು ಸಂಸ್ಥಾನ', ಎಂದು ಕರೆದಿದೆ. ಅಂದರೆ ಇಂದಿನ ಶಿವಮೊಗ್ಗ ಜಿಲ್ಲೆಯ ನಗರವನ್ನು ಬಿದನೂರು ಎಂಬುದಾಗಿ ಕರೆಯುತ್ತಿದ್ದರು. ಈ ಕೈಫಿಯತ್ತು, ರಾಣಿ ಚೆನ್ನಮ್ಮಾಜಿ ಆಳ್ವಿಕೆಯ ಕಾಲವನ್ನು ಈ ರೀತಿ ಸೂಚಿಸಿದೆ :

''ಶಕ ೧೬೦೩ನೆಯ ದುರ್ಮತಿ ಸಂವತ್ಸರದ ಲಾಗಾಯಿತು

* ನಿರ್ದೇಶಕರು, ಇನ್ಸಿಟಿಟ್ಯೂಟ್ ಫಾರ್ ಸೋಸಿಯಲ್ ಡೆವಲಪ್‌ಮೆಂಟ್ (ಐ. ಎಸ್. ಡಿ), ಕದ್ರಿ ಹಿಲ್ಸ್ ಮಂಗಳೂರು - ೫೭೫ ೦೦೪

ಶಕ ೧೬೮೪ನೆಯ ಚಿತ್ರಭಾನು ಸಂವತ್ಸರದವರಿಗೆ ವರುಷ ೮೧ ಆಳಿದರು. ಚೆನ್ನಮ್ಮಾಜಿಯವರು ವರುಷ ೧೫, ತಿಂಗಳು ೪, ದಿನ ೨೦...'[೯]

ವೋಲಿನ ಕಾಲಮಾನವನ್ನು ಗಮನಿಸಿದರೆ ದೋಷ ಸ್ಪಷ್ಟವಾಗುತ್ತದೆ. ಇತಿಹಾಸಕಾರರ ಅಭಿಪ್ರಾಯದಲ್ಲಿ ರಾಣಿ ಚೆನ್ನಮ್ಮಾಜಿ ೮೧ ವರುಷ ಕಾಲ ಆಳಿರುವುದು ಅಸಾಧ್ಯವಾಗುತ್ತದೆ. ಈ ಕೈಫಿಯತ್ತು ೮೧ ವರುಷ ಆಳಿದರು ಎಂದು ತಿಳಿಸುತ್ತಾ, ಅದೇ ವೇಳೆಯಲ್ಲಿ ಅವರು ೧೫ ವರುಷ, ನಾಲ್ಕು ತಿಂಗಳು ಇಪ್ಪತ್ತು ದಿನ ಆಡಳಿತ ನಡೆಸಿದರು ಎಂಬುದಾಗಿಯೂ ಮಾಹಿತಿ ನೀಡುತ್ತದೆ. ಆದುದರಿಂದ ಕಾಲಗಣನೆಯ ವಿಷಯದಲ್ಲಿ ಕೈಫಿಯತ್ತುಗಳನ್ನು ಬಳಸಿಕೊಳ್ಳಬೇಕಾದಾಗ ಸಂಶೋಧಕರು ಇತರ ಆಕರಗಳನ್ನು ನೋಡಬೇಕಾಗುತ್ತದೆ ಎಂಬುದು ಇದರಿಂದ ಸ್ಪಷ್ಟ.

ರಾಣಿ ಚೆನ್ನಮ್ಮಾಜಿಯವರು ವೀರಶೈವರಾಗಿದ್ದರೂ, ಧಾರ್ಮಿಕ ವಿಷಯಗಳಲ್ಲಿ ಪರಮತ ಸಹಿಷ್ಣುತೆಯ ನೀತಿಯನ್ನು ಆಡಳಿತದಲ್ಲಿ ನಡೆಸಿಕೊಂಡು ಬಂದರು. ಉದಾಹರಣೆಗೆ ಈ ಕೈಫಿಯತ್ತು ತಿಳಿಸುವ ಪ್ರಕಾರ ಬ್ರಾಹ್ಮಣರಿಗೆ ಅವರು ಕುಣೆಗಟ್ಟಿ ಅಗ್ರಹಾರವನ್ನು ಹಾಗೂ ಕಾಮಲಾಪುರ ಎಂಬ ಗ್ರಾಮವನ್ನು ದಾನವಾಗಿ ನೀಡಿದರು. ಇದಕ್ಕೆ ಸಂಬಂಧಿಸಿದಂತೆ ಕೈಫಿಯತ್ತು ನೀಡುವ ವಿವರ ಇಂತಿದೆ :

‘‘ವಾಸಿ ೧೬೦೪ನೆಯ ದುಂದುಭಿ ಸಂವತ್ಸರದ ಆಷಾಢ ಶುದ್ಧ ೧೧ಯಲ್ಲು ಯೀ ಅಗ್ರಹಾರದ ಬ್ರಾಂಹರು ಹುಜೂರು ಬಂದು ಹೇಳಿಕೊಂಡ ಸಂಬಂಧ. ಪ್ರಾಕು ಹಿರೆ ತರ್ಕರು (> ಕರ್ತರು) ಬರಶಿಕೊಟ್ಟ ನಿರೂಪ ಪ್ರಮಾಣ ಅಂದಲು ಪೂರ್ವ ಮೇರಿಗೆ ನಡಶಿಕೊಡುವಂತೆ ಸ್ಥಳದ ಶ್ಯಾನುಭೋಗ ಮೊದಲಾದ ಮಹಜನಂಗಳಿಗೆ ನಡೆಸುವಂತೆ ಬರದು ಕೊಟ್ಟದು-೧.ಕಾಮಲಾಪುರದ ಗ್ರಾಮದಲ್ಲು ಯೇಕಭೋಗ್ಯವಾಗಿ ನಡೆಸುವಂತೆ ಶಕ ೧೬೪೮ನೆ ಪಾರಭವ ಸಂವತ್ಸರದಲ್ಲು ಪ್ರಾಕು ಹಿರೆ ಕರ್ತರ ಕಾಲದ ಆರಭ್ಯ ನಡದು ಬಂದ ಮೇರಿಗೆ, ಸರ್ವಾಧಿಕಾರಿ ನಿರ್ಶಾ (> ರ್ವಾ)ಣೈಯ್ಯನವರ ಹೆಸರಿನಲ್ಲಿ ಬರಸಿಕೊಟ್ಟ ವಾಲೆ-೧.....'[೧೦]

**ವಸುಧಾರೆ ಗ್ರಾಮದ ಕೈಫಿಯತ್ತು** : ರಾಣಿ ಚೆನ್ನಮ್ಮಾಜಿಯವರ ಆಡಳಿತ ಕಾಲದ ಎರಡು ಪ್ರಮುಖ ರಾಜಕೀಯ ವಿಚಾರಗಳನ್ನು ತಿಳಿಸುತ್ತದೆ. ೧. ಅವರು ಹೇಗೆ ತಮ್ಮ ಅಧಿಕಾರವನ್ನು ರೂಢಿಸಿಕೊಂಡರು. ೨. ವಸ್ತಾರೆ ಎಂಬ ಊರಿನ ಬಗೆಗೆ ಮೈಸೂರು ಮತ್ತು ಕೆಳದಿ ನಡುವೆ ನಡೆದ ಯುದ್ಧವನ್ನು ಈ ಕೈಫಿಯತ್ತು ತಿಳಿಸುತ್ತದೆ. ಚೆನ್ನಮ್ಮಾಜಿಯವರು ಸೋಮಶೇಖರನಾಯಕನ ಪತ್ನಿ. ಅವರು ಪ್ರಭುತ್ವಕ್ಕೆ ಬಂದ ನಂತರ ಪುತ್ರ ಸಂತಾನವಿಲ್ಲದ್ದರಿಂದ ಮರಿಯಪ್ಪಶೆಟ್ಟಿಯೆಂಬವರ ಮಗನನ್ನು ದತ್ತು ತೆಗೆದುಕೊಂಡರು. ಪ್ರಾಯಶಃ ತಮ್ಮ ಅಧಿಕಾರಕ್ಕೆ ನಿಷ್ಠೆಯನ್ನು ಗಟ್ಟಿ ಮಾಡಲು ಹಳಬರಾಗಿದ್ದ ಅಧಿಕಾರಿಗಳನ್ನು ತೆಗೆದು ಹಾಕಿ ಹೊಸಬರನ್ನು ನೇಮಕ ಮಾಡಿದರು. ಎರಡನೆಯದಾಗಿ ವಸ್ತಾರೆಯನ್ನು ಆಕ್ರಮಣ ಮಾಡಲು ತಿಮ್ಮಣ್ಣನಾಯಕ ಮತ್ತು ತೊಳಪಾಡು ಬೊಮ್ಮರಸಯ್ಯನನ್ನು ಸೈನ್ಯದೊಡನೆ ವಸ್ತಾರೆ ಕೋಟೆಯನ್ನು ಆಕ್ರಮಿಸಲು ಕಳುಹಿಸಿ ಕೊಟ್ಟರು. ಅವರು ಮೈಸೂರು ರಾಜ್ಯದ ಸೈನ್ಯದ ಮುಖಂಡನಾಗಿದ್ದ ತಿಮ್ಮಣ್ಣ ದಳವಾಯಿಯನ್ನು ಮೂರು ದಿವಸಗಳು ನಡೆದ ಯುದ್ಧದಲ್ಲಿ ಸೋಲಿಸಿ ಕೊಂದು ಹಾಕಿದರು. ಕೆಳದಿಗಿಂತ ಮೈಸೂರಿನವರ ಸೈನ್ಯ, ಸಂಖ್ಯೆಯಲ್ಲಿ ಕಡಿಮೆ ಇದ್ದುದ್ದೇ ಅವರ ಸೋಲಿಗೆ ಕಾರಣವೆಂದು ಕೈಫಿಯತ್ತು ತಿಳಿಸುತ್ತದೆ. ಹೀಗೆ ಚೆನ್ನಮ್ಮಾಜಿ ಕಡೆಯವರು ವಸ್ತಾರೆ ಕೋಟೆಯನ್ನು ಆಕ್ರಮಿಸಿಕೊಂಡ ಮೇಲೆ ತಮ್ಮ ಕಡೆಯವರನ್ನು ಅಲ್ಲಿಟ್ಟು ಬಂದೊಭಸ್ತ್ ಮಾಡಿದರು. ಆದರೆ ಕೆಲವು ದಿವಸಗಳ ತರುವಾಯ ಮೈಸೂರಿನ ಕೃಷ್ಣರಾಜ ಒಡೆಯರ ಸೈನ್ಯವು ಪುನಃ ಕೋಟೆಗೆ ಮುತ್ತಿಗೆ ಹಾಕಿತು. ಅಂತಹ ಸಮಯದಲ್ಲಿ ಅವರ ಸಹಾಯಕ್ಕೆ ಬಿದನೂರಿನಿಂದ ಸಮಯಕ್ಕೆ ಸರಿಯಾಗಿ ಒದಗದೆ ಇದ್ದುದರಿಂದ ಚೆನ್ನಮ್ಮಾಜಿಯ ಸೈನಿಕರು ಕೋಟೆಯನ್ನು ಮೈಸೂರಿನ ಒಡೆಯರಿಗೆ ಬಿಟ್ಟು ಕೊಡಬೇಕಾಯಿತು. ಹೀಗೆ ವಸ್ತಾರೆಯು ಮೈಸೂರು ಸಂಸ್ಥಾನಕ್ಕೆ ಸೇರಿತು. ಇದಾದ ಕೆಲವು ಸಮಯದಲ್ಲಿ ರಾಣಿ ಚೆನ್ನಮ್ಮಾಜಿ ಯವರು ಮರಣ ಹೊಂದಿದರು ಎಂದು ಈ ಕೈಫಿಯತ್ತು ತಿಳಿಸುತ್ತದೆ.*[೧೧] ಈ ವಿಷಯವನ್ನು ಕೈಫಿಯತ್ತಿನಿಂದಲೇ ಉದ್ಧರಿಸಬಹುದು.

*‘‘ತಿಮ್ಮಣ್ಣನಾಯಕ, ತೊಳಪಾಡು ಬೊಮ್ಮರಸಯ್ಯನ ಸಹಾ ಕಳುಹಿಶಿ, ಯೀವೃತಕ ನೀರು ವಸ್ತಾರೆ ಪರಿಯಂತ್ರಕ್ಕೂ ಬರುವ ಬಾರು ವಸ್ತಾರಿಗೆ ದಕ್ಷಿಣ ದಿಕ್ಕಿನಲ್ಲಿ ಬೈಲು ಹೊಲದಲ್ಲಿ ಆಡಿತಿನ ತೆವರೆಂಬ ಸ್ಥಳದಲ್ಲಿ ವಂದು ಹರದಾರೀ ಮೇಲೆ ಯಿಳುಕೊಂಡರು. ಮೈಸೂರವರ ಕಡೆಯಿಂದಾ ವಸ್ತಾರೆ ಕೋಟೆಯಲ್ಲಿ ಯಿದ ತಿಮ್ಮಣ್ಣ ದಳವಾಯಿಯು ಮೂರು ದಿವಸ ಪರಿಯಂತ್ರಾ ಬಹಳ ಯುದ್ಧವನ್ನು ಮೆಯಿಸೂರವರ ಮಂದೀ ಸಂಗಡ ಮಾಡಿ ಯೆಡೆಹಳ್ಳ ಬದಿಯಲ್ಲಿ ಆರ್ಧ ಹರದಾರಿ ಮೆಲೆ ದೆಹ ಬಿಟ್ಟನು. ಮೈಸೂರವರ ಮಂದಿಕಿಂತಾ ಯೀ ಬಿದನೂರವರ ಮಂದಿ ಹೆರಾಳವಾದ ಕಾರಣ ಯೀ ಮೈಸೂರವರ ಸಯಿನ್ಯವು ಪೆಟ್ಟು, ಬಿದ್ದು ಪರಾಜಿತವಾಗಿ ವೊಡಿಹೊದರು. ಆಮೆಲೆ ಯೀ ಬಿದರೂರವರು ಯೀ ವಸ್ತಾರ ತೆಗೆದುಕೊಂಡು, ಯೀ ಕೋಟೆಯಲ್ಲಿ ತಮ್ಮ ಕಡೆ ಮಂದೀ ಕೆಲವು ಯಿಟ್ಟು, ಬಂದೊಬಸ್ತು ಮಾಡಿ ಹೋದರು.*

*ಆಮೇಲೆ ಕೆಲವು ದಿವಸವಾಗುವದು ದೊಡದೆವರಾಜ ವಡೆಯರ ಮಗ ಕೃಷ್ಣರಾಜವಡೆಯ ಮಂದಿ ತೆಗೆದುಕೊಂಡು, ಯೀ ಕೋಟೆಗೆ ಮುತ್ತಿಗೆ ಹಾಕಿ ಯುದ್ಧ ಮಾಡಿದರು. ಯೀ ವಸ್ತಾರೆ*

ಕಿಲ್ಲೆದಲ್ಲಿ ಯಿದವರಿಗೆ ಬಿದರೂರೂರವರ ಕಡೆಯವರು ಕುಮಕು ಬಾರದೆ ಹೋದ ಕಾರಣ, ಆ ಕಿಲ್ಲೆದಲ್ಲಿ ಯಿದವರು ಮೈಸೂರವರ ಕಡಿಯಿಂದ್ವಾ ಬಹಳ ಘೂ (> ಘಾ) ಶಿ ಆಗಿ, ಹತಸೇಷವಾದರು. ಕಿಲ್ಲೆ ಬಿಟ್ಟು, ವೊಡಿಹೋದರು. ಆಗ ಕೃಷ್ಣರಾಜವಡೆರು ಯೀ ವಸ್ತಾರೆ ಕಿಲ್ಲೆ ಸ್ವಾಧೀನ ಮಾಡಿಕೊಂಡು, ತಮ್ಮ ಕಡೆ ಕೆಲವು ಮಂದಿ ಯೀ ವಸ್ತಾರೆಯನ್ನೂ ಗಡಿಯಲ್ಲಿ ಯಿಟ್ಟು, ಬಂದೊಬಸ್ತು ಮಾಡಿ, ಕೃಷ್ಣರಾಜವಡೆರು ಯೀ ವಸ್ತಾರೆಯನ್ನೂ ಮೈಸೂರು ಸಂಸ್ಥಾನಕೆ ಶೆರಿಶಿ ಕೆಲವು ದಿವಸ ಆಳಿದ್ದು, ಆ ಸಮಯದಲ್ಲಿ ಚೆನ್ನಮ್ಮಾಜಿ ದೆಹ ಬಿಟ್ಟಳು.... [೧೨]

ಸಾಗರದ ಕೈಫಿಯತ್ತು : ಚೆನ್ನಮ್ಮಾಜಿಯವರ ಆಳ್ವಿಕೆಯ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತದೆ. ಇಕ್ಕೇರಿಯ ಬಳಿ ಹೊಸದಾಗಿ ಕಟ್ಟಿಸಿದ ಸದಾಶಿವನಗರದಲ್ಲಿ ಮರಿಯಪ್ಪಶೆಟ್ಟಿ ಯೆಂಬವನು ಒಂದು ವಿರಕ್ತಮಠವನ್ನು ಕಟ್ಟಿಸಿದನು. ಇದೊಂದು ವೀರಶೈವ ಮಠವಾಗಿತ್ತು. ಚೆನ್ನಮ್ಮಾಜಿಯವರು ಈ ಮಠಕ್ಕೆ ೩೬ ವರಹ ಇನಾಮು ಕೊಟ್ಟರೆಂದು ಈ ಕೈಫಿಯತ್ತು ತಿಳಿಸುತ್ತದೆ. [೧೩]

ಈ ಕೈಫಿಯತ್ತು ಇವರ ಆಳ್ವಿಕೆಯ ಕಾಲದ ಅನೇಕ ರಾಜಕೀಯ ಘಟನೆಗಳನ್ನು ದಾಖಲಿಸುತ್ತದೆ. ಒಂದನೆಯದಾಗಿ ರಣದುಲ್ಲಾಖಾನ್ ಎಂಬವನು ಇಕ್ಕೇರಿ ಆಕ್ರಮಿಸಿ ಚೆನ್ನಮ್ಮಾಜಿ ಯವರನ್ನು ಜಯಿಸಿ ಅನೇಕ ಪ್ರದೇಶಗಳನ್ನು ವಶಪಡಿಸಿ ಕೊಂಡ ನೆಂದು ತಿಳಿಸುತ್ತದೆ. ಇವನ ಆಕ್ರಮಣಗಳನ್ನು ಕೈಫಿಯತ್ತು ಈ ರೀತಿ ವರ್ಣಿಸುತ್ತದೆ :

‘‘ಮೊಗಲ ರಣದುಲ್ಲಾಖಾನರನ ಹೊಡದು ಯಿಕ್ಕೇರಿ ತೆಗೆದುಕೊಂಡು, ಬಿಳಿಗೆ ವಳಗೆ ಗಂಟೆವಡಿರ್‍ರಾಯಂಬ ಅರಸುಗಳ ಹೊಡದು ತೆಗೆದುಕೊಂಡನು. ಸೋದೆಯಿಂದ ಚೆನ್ನಮ್ಮಾಜಿಯವರನ ಜಯಿಸಿ ಅರಸಿನ ಹೊಡದು ಚಂದ್ರಗುತ್ತಿ ತೆಗೆದುಕೊಂಡು, ಸವಣೂರು ಶೀಮೆಯಲ್ಲಿ ಕ್ಯಾಟೆ ತೆಗೆದುಕೊಂಡನು. ಯೀ ಗ್ರಾಮ ವನ್ನು ಹಾವನೂರುಯವರಿಗೆ ಹಾಲು ಬೆಣ್ಣೆಗೆ ಕೊಟ್ಟನು. ತುರುಕರ ಹೊನ್ನಾಳಿಯನ್ನು ಮೊಗಲರನ ಹೊಡದು ಸ್ವಾಧೀನ ಮಾಡಿ ಕೊಂಡನು. ಬೆಳಗುತ್ತಿ ರಾಮರಾಯ ಅರಸುಗಳನು ಮುರದು ತೆಗೆದುಕೊಂಡನು.... [೧೪]

ರಾಣಿ ಚೆನ್ನಮ್ಮಾಜಿಯವರು ಕಪ್ಪಲೆದುರ್ಗಾ ಅಥವಾ ಕವಲೆದುರ್ಗಾದಲ್ಲಿ ವಾಸ ಮಾಡುತ್ತಿದ್ದರು ಎಂದು ಸಾಗರದ ಕೈಫಿಯತ್ತು ತಿಳಿಸುತ್ತದೆ. ಆ ವೇಳೆಯಲ್ಲಿ ಬಿದನೂರು ಕೋಟೆಯ ಒಳಗೆ ಮೊಗಲ್ ಸರದಾರನೊಬ್ಬ ಸೇರಿಕೊಂಡು ಚೆನ್ನಮ್ಮಾಜಿ ಯವರ ವಿರುದ್ಧ ಲಡಾಯಿ ಮಾಡುತ್ತಿದ್ದನು. ಇದಲ್ಲದೆ ಮೊಗಲ್ ಸೈನ್ಯ ರಾಜಧಾನಿಯನ್ನು ಮುತ್ತುವ ಪ್ರಯತ್ನ ಮಾಡಿದ್ದನ್ನೂ ಮತ್ತು ಚೆನ್ನಮ್ಮಾಜಿಯವರು ಅದನ್ನು ಹೇಗೆ ಆರ್ಥಿಕ ದಿಗ್ಬಂಧನದ ಮೂಲಕ ಮೊಗಲ್ ಸೈನ್ಯವನ್ನು ಹಿಮ್ಮೆಟ್ಟುವಂತೆ ಮಾಡಿದಳು ಎಂಬುದನ್ನು ಕೈಫಿಯತ್ತು ವಿವರಿಸುತ್ತದೆ. ಇದಲ್ಲದೆ ಬಿದನೂರು ಕೋಟೆಯ ಒಳಗೆ ಅಡಗಿಕೊಂಡಿದ್ದ ಮೊಗಲ್ ಸರದಾರನಿಗೆ ಸಕ್ಕರೆಯೆಂದು ಬಿಳಿ ಉಪ್ಪನ್ನು ತಿನ್ನಿಸಿ, ಉಪ್ಪಿನ ಋಣಕ್ಕೆ ಸರದಾರನು ಚೆನ್ನಮ್ಮಾಜಿಗೆ ಸಿಕ್ಕಿಸಿಕೊಂಡ ವಿಚಾರವನ್ನು ಇದು ತಿಳಿಸುತ್ತದೆ. ಚೆನ್ನಮ್ಮಾಜಿಯ ದಂಡನಾಯಕ ದೊಡ್ಡಗುರಪ್ಪಾ ಎಂಬವನು ಸಂತೆಬೆನ್ನೂರಿನ ಬರಮಣ್ಣನಾಯಕನನ್ನು ಸೋಲಿಸಿ ವಶಪಡಿಸಿ ಕೊಂಡ ವಿಚಾರವು ಈ ಕೈಫಿಯತ್ತಿನಲ್ಲಿ ದಾಖಲಾಗಿದೆ. ಆ ವಿವರವನ್ನು ಇಲ್ಲಿ ನೀಡಬಹುದು.

‘‘ಚೆನ್ನಮ್ಮಾಜಿ ರಾಜ್ಯವನ್ನಾಳುವ ಕಾಲದಲ್ಲಿ ಮೊಗಲರ ತಾಲ್ಲೂಕು ಅಸಮಂತಾರನೆಂಬ ಸರದಾರರು ಬಂದು ಬಿದಲೂರ್‍ರು ಪೇಟೆ ಠಾಣ್ಯ ಹಾಕಿದನು. ಕೋಟೆ ವಳಗೆ ಚನ್ನಮ್ಮಾಜಿಯವರ ತಾಲ್ಲೂಕು ಮಂದಿ ಯಿದ್ದು ಕೊಂಡು ಲಡಾಯಿ ಮಾಡುತ್ತಾ ಯಿದ್ದರು. ಚನ್ನಮ್ಮಾಜಿಯವರು ಕಪ್ಪಲೆದುರ್ಗದಲ್ಲಿ ನಿಂತು ‘ತಮ್ಮ ಕಡಿ ಫೌಜು ಯಾವತ್ತುಗೆ ಮೊಗಲರ ಫೌಜುಯಲ್ಲಿ ಬಂದರ್‍ರೆ ಅಲ್ಲಿ ಬಂಟ್ಟು ಕೊಲ್ಲೆಯಾಗಿ ಸುಲುಕೊಂಬುದು’ ಯಂಬುದಾಗಿ ತಾಕೀದಿ ಮಾಡಿ, ಆನೆ, ವಂಟೆ, ನಗಾರಿ, ನಿಶಾನಿ ಮಾತ್ರ ಅರಮನಿಗೆ ಕೊಟ್ಟು ಕಳಿಸಿ, ಯಾವತ್ತು ಯಿಟ್ಟ ಮಾಪು ಮಾಡಿದರು. ಸುತ್ತ ಮುತ್ತ ಗಟ್ಟದ ಮಾರ್ಗದಲ್ಲಿ ದಿನ್ಸು ಅಕ್ಕಿ ಹುರಳಿ ಮುಂತಾದು ಬಾರದ ಹಾಗೆ ತಾಕೀದು ಮಾಡಿಬಿಟ್ಟರು. ಯೀ ಮೇರ್‍ರೆಗೆ ಯಿರುತ್ತಾ ಒಂದು ವರ್ಷ ಮೊಗಲರ ಫೌಜು ಮಾರ್ಗ ಕಾಣದೇ, ಅನ್ನವಿಲ್ಲದೆ, ಕುದುರೆ ಆನೆ ಪದಾತಿ ವಗೈರೆ ಮರಣವಾದರಿಂದಾ ಅಸಮಂತಾರು ಯಂಬ ಸರದಾರಿಗೆ ಅಕ್ಕಿ ಉಪ್ಪುಯಿಲ್ಲದರಿಂದ ಚನ್ನಮ್ಮಾಜಿಯವರ ಕೇಳಿ, ಉಪ್ಪು ಅಕ್ಕಿ, ಬೇಳೆ, ಮೂಗತ್ತಿ ಸಹಾ ಕಳುಹಿಸಿಕೊಟ್ಟದ್ದರಿಂದ, ವುಪ್ಪು ಬೆಳ್ಳಗೆ ಆದ್ದರಿಂದ ಸಕ್ಕರಿಯಂದು ಬಾಯವಳಗೆ ಹಾಕಿ ಕೊಂಡ ಕಾರಣ ಅದು ಉಪ್ಪು ಆಗಿತ್ತು. ಅನಂತರ ಅಸಮಂತಾರನೆಂಬ ಸರದಾರನು ‘‘ಯೀ ಚನ್ನಮ್ಮಾಜಿಯವರ ಉಪ್ಪು ತಿಂದು ಯಿವರ ಮೇಲೆ ಲಢಾಯಿ ಮಾಡಬಾರದು’’ಯಂದು ಸಲ್ಲೀ ಮಾಡಿಕೊಂಡು ಮೂರು ಲಕ್ಷ ವರಹಾ ಯಿಕ್ಕೇರಿ ತೆಗೆದುಕೊಂಡು ಅಸಮಂತಾರ ನೆಂಬ ಸರದಾರನು ತನ್ನ ಕಡೆಯಿದ್ದ ಸ್ವಲ್ಪ ಮಂದಿಯನ್ನು ತೆಗೆದುಕೊಂಡು ಹಿಂದಕ್ಕೆ ಹೋದನು. ಅನಂತರದಲ್ಲಿ ಯೂ ರಾಜ್ಯಕ್ಕೆ ರಯಿತರಿಗೆ ಹೇಳಿಕೊಂಡು ವರಹಾ ವಂದಕ್ಕೆ ವಂದು ಚವುಲದ ಮೇಲಿಗೆ ತೆಗೆದುಕೊಂಡು ಶಿಸ್ತಿಗೆ ಕೂಡಿದರು. ಅನಂತರದಲ್ಲಿ ಯೀ ಚನ್ನಮ್ಮಾಜಿಯುವರು ತನ್ನ ಕಡೆ ಫವುಜು ದೊಡ್ಡಗುರಪ್ಪ ಯಂಬವನ ಕಳುಹಿಸಿ, ಭರಮಣ್ಣ ನಾಯಕರ ಹೊಡದು ಬೇಡಿನಿಂದ ಸಂತೆಬೆನ್ನೂರು ತೆಗೆದುಕೊಂಡರು.... [೧೫]

ಈ ಕೈಫಿಯತ್ತು ಚೆನ್ನಮ್ಮಾಜಿಯವರು ರಾಜ್ಯವಾಳಿದ ಕಾಲವನ್ನು ಈ ರೀತಿ ದಾಖಲಿಸಿದೆ. ಅವರು ‘‘೧೬೭೨ನೇ ಪರಿಧಾವಿ

ಸಂ.ಲಾಗಾಯಿತು ಶಕ ೧೬೧೯ನೇ ಯೀಶ್ವರ ಸಂ. ವರಿಗೆ ವರುಷ ೨೫ ಆಳಿದರು.''[*೧೬] ಈ ಕಾಲಮಾನ ಇತಿಹಾಸಕಾರರು ನಿರ್ಧರಿಸಿದ ಕಾಲಮಾನಕ್ಕೆ ಹೆಚ್ಚು ಸರಿಹೋಗುತ್ತದೆ ಎಂದು ಹೇಳಬಹುದು. **ಹಾರನಹಳ್ಳಿ ಕೈಫಿಯತ್ತು** ಯಾವ ವಿವರವನ್ನೂ ನೀಡದೆ ಚೆನ್ನಮ್ಮಾಜಿಯವರು ಇಕ್ಕೇರಿ ನಗರದ ಸಂಸ್ಥಾನವನ್ನು ಆಳಿದರೆಂದು ತಿಳಿಸುತ್ತದೆ.[*೧೭] **ಭೈರೂರು ಮಾಗಣೆ ಕೈಫಿಯತ್ತು** ಚೆನ್ನಮ್ಮಾಜಿಯ ಹೆಸರನ್ನು ಸೂಚಿಸುತ್ತದೆ.ಇದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಭೈರೂರು ಮಾಗಣೆ ಅವರ ರಾಜ್ಯದ ಭಾಗವಾಗಿತ್ತೆಂದು ಮತ್ತು ಶಾನುಭೋಗರು ಗ್ರಾಮದ ಲೆಕ್ಕಗಳನ್ನು ಇಡುತ್ತಿದ್ದರೆಂದು ಈ ಕೈಫಿಯತ್ತಿನಿಂದ ತಿಳಿದು ಬರುತ್ತದೆ.[*೧೮] ಈ ತರಹದ ಮಾಹಿತಿ ದಕ್ಷಿಣ ಕನ್ನಡ ಜಿಲ್ಲೆಯ ಮರದಾಳ ಕೈಫಿಯತ್ತಿನಲ್ಲೂ ದೊರೆಯುತ್ತದೆ. ಚೆನ್ನಮ್ಮಾಜಿ ಆಳುತ್ತಿದ್ದಾಗ ಮರದಾಳ ಪ್ರದೇಶದಲ್ಲಿ ಲಕ್ಕುಮಯ್ಯ ಎಂಬವನು ಬಲ್ಲಾಳನಾಗಿದ್ದು ರಾಣಿಗೆ ಶಿಸ್ತಿನ ರೂಪದ ಕಪ್ಪ ಕಾಣಿಕೆಯನ್ನು ಸಲ್ಲಿಸುತ್ತಿದ್ದನು.[*೧೯]

**ಶೃಂಗೇರಿ ಕೈಫಿಯತ್ತು**: ರಾಣಿ ಚೆನ್ನಮ್ಮಾಜಿಯವರನ್ನು ಕುರಿತಂತೆ ಎರಡು ವಿಷಯಗಳನ್ನು ತಿಳಿಸುತ್ತದೆ. ಒಂದನೆಯದಾಗಿ ಅವರ ಗಂಡ ಸೋಮಶೇಖರನಾಯಕನು ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಸಂಸ್ಥಾನದಲ್ಲಿ ಕೆಲವು ತುಂಟ ಜನಗಳು ಬಸಪ್ಪ ನಾಯಕ ಎಂಬವನ ನೇತೃತ್ವದಲ್ಲಿ ಕಿರುಕುಳ ಕೊಡುತ್ತಿದ್ದರು. ರಾಣಿಯು ಅದನ್ನು ಅಡಗಿಸಿದರು. ಎರಡನೆಯದಾಗಿ ಶೃಂಗೇರಿ ಮಠಕ್ಕೆ ಶಿವಮೊಗ್ಗೆಯಲ್ಲಿ ದಾನವತ್ತಿಯನ್ನು ಬಿಟ್ಟುಕೊಟ್ಟಿದ್ದರು. ಇವರು ೩೩ ವರುಷ ೫ ತಿಂಗಳು ೩ ದಿವಸ ಆಳ್ವಿಕೆ ನಡೆಸಿದರೆಂದೂ ಸಹಾ ಈ ಕೈಫಿಯತ್ತು ತಿಳಿಸುತ್ತದೆ. ಚೆನ್ನಮ್ಮಾಜಿಯು ಬಸಪ್ಪ ನಾಯಕನೆಂಬವನನ್ನು ದತ್ತು ಪುತ್ರನನ್ನಾಗಿ ಸ್ವೀಕರಿಸಿದ ವಿಷಯವನ್ನು ಈ ಕೈಫಿಯತ್ತು ತಿಳಿಸುತ್ತದೆ.[*೨೦]

ಮೇಲಿನ ಅಧ್ಯಯನದಿಂದ ಕೆಲವು ಸಾಮಾನ್ಯ ತೀರ್ಮಾನಗಳನ್ನು ಮಂಡಿಸಬಹುದು; ಒಂದನೆಯದಾಗಿ, ಈ ಕೈಫಿಯತ್ತುಗಳು, ಶಾಸನಗಳು ಅಥವಾ ಸಾಹಿತ್ಯ ಕೃತಿಗಳು ನೀಡಲಾಗದ ಕೆಲವು ವಿವರಗಳನ್ನು ನೀಡುತ್ತವೆ. ಎರಡನೆಯದಾಗಿ, ಈ ಕೈಫಿಯತ್ತುಗಳ ಅಧ್ಯಯನದಿಂದ ರಾಣಿ ಚೆನ್ನಮ್ಮಾಜಿಯವರ ರಾಜಕೀಯ ಜಾಣ್ಮೆಗೆ ಅನೇಕ ಉದಾಹರಣೆಗಳು ದೊರೆಯುತ್ತವೆ. ಮೂರನೆಯದಾಗಿ, ವೈಯಕ್ತಿಕವಾಗಿ ಅವರು ವೀರಶೈವ ಧರ್ಮದ ಅನುಯಾಯಿಯಾಗಿದ್ದರೂ, ಪರಮತ ಸಹಿಷ್ಣುತೆಯ ನೀತಿಯನ್ನು ಅನುಸರಿಸಿದರು ಎಂಬ ವಿಷಯ ಈ ಕೈಫಿಯತ್ತುಗಳಿಂದ ಗೊತ್ತಾಗುತ್ತದೆ. ಕೊನೆಯದಾಗಿ, ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಮೇಲೆ ರಾಣಿ ಚೆನ್ನಮ್ಮಾಜಿ ಇರಿಸಿದ್ದ ನಿಯಂತ್ರಣವನ್ನು ಸಹಾ ಆ ಪ್ರದೇಶದ ಕೈಫಿಯತ್ತುಗಳಿಂದ ತಿಳಿಯುತ್ತದೆ. ಕಾಲಮಾನದ ದೃಷ್ಟಿಯಿಂದ ಕೆಲವು ದೋಷಗಳು ಇದ್ದರೂ ಸಹಾ ಆ ಪ್ರದೇಶದ ಕೈಫಿಯತ್ತುಗಳು ನೀಡುವ ವಿವರಗಳು ತುಂಬಾ ಅಮೂಲ್ಯವಾದುದು. ಇನ್ನೂ ಹೆಚ್ಚು ಹೆಚ್ಚು ಕೈಫಿಯತ್ತುಗಳು ಬೆಳಕಿಗೆ ಬಂದಾಗ ರಾಣಿ ಚೆನ್ನಮ್ಮಾಜಿಯ ಆಳ್ವಿಕೆಯನ್ನೂ ಒಳಗೊಂಡಂತೆ ಕೆಳದಿ ನಾಯಕರ ಇತಿಹಾಸದ ಅಧ್ಯಯನ ಮತ್ತಷ್ಟು ಶ್ರೀಮಂತವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

## ಆಧಾರ ಸೂಚಿ ಮತ್ತು ಟಿಪ್ಪಣಿ


*೧. ಕಲಬುರ್ಗಿ ಎಮ್. ಎಮ್. (ಸಂ.) : *ಕರ್ನಾಟಕದ ಕೈಫಿಯತ್ತುಗಳು* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೧೯೯೪
*೨. ಅದೇ., ಪು. ೯೮-೧೦೮
*೩. ಅದೇ., ಪು. ೧೧೬-೧೨೪
*೪. ಅದೇ., ಪು. ೧೪೪-೧೫೫
*೫. ಅದೇ., ಪು. ೧೮೫-೧೮೮
*೬. ಅದೇ., ಪು. ೩೫೨-೩೫೪
*೭. ಅದೇ., ಪು. ೩೫೫-೩೫೬
*೮. ಅದೇ., ಪು. ೧೨೫-೧೪೪
*೯. ಅದೇ., ಮಲ್ಲೂರು *ಸಾಸಿವೆಹಳ್ಳಿ ಶೀಮೆ ಕೈಫಿಯತ್ತು*, ಪು. ೧೦೫
*೧೦. ಅದೇ.,
*೧೧. ಅದೇ., *ವಸುಧಾರೆ ಗ್ರಾಮದ ಕೈಫಿಯತ್ತು*, ಪು. ೧೨೦-೧೨೧
*೧೨. ಅದೇ., ಪು. ೧೨೧
*೧೩. ಅದೇ., *ಸಾಗರದ ಕೈಫಿಯತ್ತು* ಪು. ೧೪೬
*೧೪. ಅದೇ., ಪು. ೧೪೯
*೧೫. ಅದೇ., ಪು. ೧೫೦
*೧೬. ಅದೇ.,
*೧೭. ಅದೇ., *ಹಾರನಹಳ್ಳಿ ಕೈಫಿಯತ್ತು*, ಪು. ೧೮೮
*೧೮. ಅದೇ., *ಭೈರೂರು ಮಾಗಣೆ ಕೈಫಿಯತ್ತು*, ಪು. ೩೫೪
*೧೯. ಅದೇ., *ಮರದಾಳ ಕೈಫಿಯತ್ತು*, ಪು. ೩೫೫
*೨೦. ಅದೇ., *ಶೃಂಗೇರಿ ಕೈಫಿಯತ್ತು*, ಪು. ೧೪೦, ೧೪೩

ಅನ್ನಪೂರ್ಣ ಫ. ಹತ್ತಿಮತ್ತೂರ *

# ಕಿತ್ತೂರು ರಾಜ್ಯದ ಸ್ಥಳನಾಮಗಳ ಅಧ್ಯಯನ

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರದರಸರ ಆಡಳಿತದ ಅವಧಿಯು ವೈಭವಕ್ಕೆ ಹೆಸರಾದರೆ ನಂತರದ ಅವಧಿಯು ಸಂಸ್ಥಾನಿಕರ ಹೋರಾಟದ ಆಳ್ವಿಕೆಗೆ ಹೆಸರಾಗಿದೆ. ಆಗ ಜನತೆಯ ರಕ್ಷಣೆಯ ಜವಾಬ್ದಾರಿಯು ಸಂಸ್ಥಾನಗಳ ಮೇಲೆ ಬಂದಿತು. ಚಿಕ್ಕರಾಜ್ಯಗಳೆನಿಸಿದ್ದ ಈ ಸಂಸ್ಥಾನಗಳು ಮಹತ್ತರವಾದ ಪಾತ್ರ ನಿರ್ವಹಿಸಬೇಕಾಯಿತು. ಇಂತಹ ಸಂಸ್ಥಾನಗಳಲ್ಲಿ ಮೈಸೂರು, ಕೆಳದಿ, ಕಿತ್ತೂರು, ಸವಣೂರು, ಸ್ವಾದಿ ಸಂಸ್ಥಾನಗಳನ್ನು ನೋಡ ಬಹುದು.

ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಕೈಕೊಂಡ ಹೋರಾಟದಲ್ಲಿ ಅತ್ಯಂತ ಜಾಗ್ರತ ಕೆಲಸ ಮಾಡಿದ ಕಿತ್ತೂರ ಸಂಸ್ಥಾನ ೧೫೮೫ರಲ್ಲಿ ಹಿರೇಮಲ್ಲಶೆಟ್ಟಿ, ಚಿಕ್ಕಮಲ್ಲಶೆಟ್ಟಿಯರಿಂದ ಅಸ್ತಿತ್ವಕ್ಕೆ ಬಂದು ೧೮೨೪ರ ವರೆಗೆ ಅಂದರೆ, ೨೩೯ ವರ್ಷಗಳ ಅವಧಿಯಲ್ಲಿ ೧೨ ಜನ ದೇಸಾಯಿಯರ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ. ಶ. ೧೬೬೦ ರಿಂದ ೧೬೯೧ರ ವರೆಗೆ ಕಿತ್ತೂರ ಗಾದಿಯ ಮೇಲಿದ್ದ ಅಲ್ಲಪ್ಪಗೌಡ ದೇಸಾಯಿ. ಕಿತ್ತೂರಲ್ಲಿ ಕೋಟೆ ನಿರ್ಮಾಣ ಮಾಡುವದರ ಜೊತೆಗೆ ೧೬೮೨ರಲ್ಲಿ ಸಂಪಗಾವಿಯಿಂದ ಕಿತ್ತೂರಿಗೆ ಆಡಳಿತ ಕೇಂದ್ರವನ್ನು ವರ್ಗಾವಣೆ ಮಾಡಿದರೆ - ಒಂಬತ್ತನೇ ದೇಸಾಯಿಯಾದ ಫಕೀರರುದ್ರಸರ್ಜನು ನಿರಂಜನಿಯನ್ನು ವಿವಾಹವಾಗಿ ಕವಿಗಳ ಕಾವ್ಯಕ್ಕೆ ಪ್ರೇರಕನೆನಿಸಿದ್ದಾನೆ. ಅಂತೆಯೇ ಮೂಡಿಬಂದುದು ರುದ್ರಕವಿಯ ಕಾವ್ಯ "ಸೂಳೆ ಸರ್ಜರ ಪ್ರಣಯ".

ಹನ್ನೊಂದನೆಯ ದೇಸಾಯಿ ಮಲ್ಲಸರ್ಜನದು ಇತಿಹಾಸ ದಲ್ಲಿ ಅಚ್ಚಳಿಯದೇ ನಿಂತ ಹೆಸರು. ಈತ ರಾಜಕೀಯ ವಿಜಯಿ, ಧರ್ಮವಿಜಯಿ ಜೊತೆಗೆ ಜನತೆಯ ಮನದ ವಿಜಯಿಯಾಗಿದ್ದ ಎಂಬುದನ್ನು ಸಂಸ್ಥಾನ ಕವಿ ಅಮೃತೇಶ ಹಾಡಿಹೊಗಳಿದ್ದಾನೆ.

ಕಿತ್ತೂರ ದೇಸಾಯಿ ಮಲ್ಲಸರ್ಜನ ಆಡಳಿತಾವಧಿಯಲ್ಲಿ ಅವರ ರಾಜ್ಯ ಹದಿನಾಲ್ಕು ಶರಿಯಾತುಗಳನ್ನು ಒಳಗೊಂಡಿತ್ತು ಎಂಬುದಕ್ಕೆ ಕಾಶಿರಾಜ ಕವಿಯ ಮಾನಸೋಲ್ಲಾಸದಲ್ಲಿ ಉಲ್ಲೇಖ ದೊರೆಯುತ್ತದೆ.

"ಪದಿನಾಲ್ಕು ನಗರದ ಶರಿಯಾತಿಯು ಪದಿನಾಲ್ಕು ಲೋಕ ದಂತೆವೊಲು ಸದಮಳ ನೃಪಸಂಪದತಿಶಯಕೆ ನಿಧಿಯಾಗಿಪ್ಪುದು ಸಿರಿಮಿಗಿಲು".

ಈಗಿನ ಧಾರವಾಡ ಜಿಲ್ಲೆಯ ಕೆಲವು ಭಾಗ, ಬೆಳಗಾವಿ ಜಿಲ್ಲೆಯ ಕೆಲ ಭಾಗ ಮತ್ತು ಉತ್ತರಕನ್ನಡ ಜಿಲ್ಲೆಯ ಕೆಲವು ಭಾಗ ಕಿತ್ತೂರ ಸಂಸ್ಥಾನದಲ್ಲಿದ್ದವು. ಈ ಪ್ರದೇಶದಲ್ಲಿ ಬರುವ ಸ್ಥಳನಾಮಗಳು ವಿಶೇಷವಾಗಿವೆ. ಸ್ಥಳನಾಮಗಳು ಒಂದು ಜನಾಂಗದ ಸಂಸ್ಕೃತಿಯ ಮೂಲಬೇರುಗಳಿದ್ದಂತೆ. ಒಂದು ಸಂದರ್ಭದಲ್ಲಿ ಜನಾಂಗ ಸ್ಥಳಾಂತರಗೊಂಡರೂ ಕೂಡ ಆ ಮೂಲ ಅಂಶಗಳ ಬೇರುಗಳಿಂದ ಅದರ ಮೂಲ ಅಸ್ತಿತ್ವವನ್ನು ಗುರುತಿಸಬಹುದಾಗಿದೆ.

ಕಿತ್ತೂರು - ಗೋವೆಯ ಕದಂಬರಸನು ಕ್ರಿ. ಶ. ೧೧೮೮ರಲ್ಲಿ ಬರೆಯಿಸಿದ ಶಾಸನದಲ್ಲಿ 'ಕಿತ್ತೂರು' ಎಂದು ಉಲ್ಲೇಖ ಬರುವದರಿಂದ ೧೨ನೇ ಶತಮಾನದಲ್ಲಿಯೇ ಕಿತ್ತೂರು ಎಂಬುದು ಆ ಪ್ರದೇಶದ ಹೆಸರಾಗಿತ್ತು ಎಂಬುದು ವೇದ್ಯವಾಗುತ್ತದೆ. ಗೀಜಗನ ಹಳ್ಳಿ ಎಂದು ಕರೆಯುತ್ತಿದ್ದರು ಎಂದು ಗೆಜಟೀಯರುಗಳಲ್ಲಿಯೂ ಮತ್ತು ಅಲ್ಲಪ್ಪಗೌಡ ದೇಸಾಯಿಯ ಅವಧಿಯಲ್ಲಿ ಸಂಪಗಾವಿ ಯಿಂದ ರಾಜಕೀಯ ಕೇಂದ್ರವನ್ನು ಕಿತ್ತೂರಿಗೆ ವರ್ಗಾಯಿಸಿದನು. ಕಿತ್ತು ಬಂದು ನೆಲೆನಿಂತ ಈ ಊರು ಕಿತ್ತೂರಾಯಿತು ಎಂಬುದು ಮತ್ತೊಂದು ಪ್ರತೀತಿ. ಅದೇನೇ ಯಿದ್ದರೂ ಕೂಡ ಡಾ॥ ಎಂ. ಎಂ. ಕಲಬುರ್ಗಿಯವರು 'ಕನ್ನಡ ನಾಮವಿಜ್ಞಾನ'ದಲ್ಲಿ ಹೇಳುವಂತೆ ಕಿತ್ ಎಂದರೆ ಕಿರಿದು. ಅದಕ್ಕೆ ದ್ರಾವಿಡ ವಾರ್ಗಿಕ ಊರು ಸೇರಿ ಕಿತ್ತೂರು ಎಂದಾಯಿತು. ಕಿತ್ತೂರು ಎಂದರೆ ಸಣ್ಣ ಊರು ಎಂದರ್ಥ ಎಂದಿರುವ ಅವರ ಅಭಿಪ್ರಾಯ ಹೆಚ್ಚು ಪ್ರಸ್ತುತವೆನಿಸುತ್ತದೆ.

---

* ಸಂಶೋಧನಾ ವಿದ್ಯಾರ್ಥಿನಿ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ-೫೮೦ ೦೦೩

ಆನಂದ ಕವಿ 'ಕಿತ್ತೂರು ಕೋಟೆಯ ನೋ....' ಎಂಬ ಕಾವ್ಯದಲ್ಲಿ ಕಿತ್ತೂರು ಸಂಸ್ಥಾನದ ಊರುಗಳ ಉಲ್ಲೇಖ ಮಾಡತ್ತಾನೆ.

'ತ್ಯಾಗದೊಳ್ ಭೋಗದೊಳ್, ಮಿಗಿಲಾದ ಕಿತ್ತೂರು
ದೇಗಾವಿ ಬೈಲೂರು ಹೆಸರಾದ ತೋಲಗಿಯು
ತೇಗೂರು ತಿಗಡೊಳ್ಳಿ ಬಸವಪುರ ಮಲ್ಲಪುರ ಹಿರಿನಂದಿಹಳ್ಳಿಗಳಿಗೆ
ಕುರವಿಂದದಂತಿರುವ ಕುರಗುಂದ ತುರಮರಿಯು
ಪರತರ ಸುಗಂಧಮಂ ಬೀರುತಿಹೆ ಪ್ರೀಹಿಗಳು
ಸರಸಾಗಿ ಬೆಳೆಯುತಿಹ ಕಲಭಾವಿ ಕಡತಾಳ ಮೊದಲಾದ-
ಗ್ರಾಮಗಳಿಗೆ
ಮಾಂಗಲ್ಯ ಕರಮಾದ ಸತ್ಕೇಂದ್ರ ತಾನಾಗಿ
ಸಂಗೀತ ಸಾಹಿತ್ಯ ಶಾಸ್ತ್ರದೊಳ್ ಪಿರಿದೆನಿಸಿ
ಬಂಗಾರದಂತಿರುವ ಮಲಸರ್ಜ ಭೂಪನಿಂ ಸಿಂಗಾರ-
ಮಾಗಿರುವುದು ॥

ಕಿತ್ತೂರಿನ ಸಂಸ್ಥಾನದಲ್ಲಿ ಬರುವ ಮರಕಟ್ಟಿ, ಹುಣಸಿಕಟ್ಟಿ, ಅಂಬಡಗಟ್ಟಿ, ಕರಿಕಟ್ಟಿ, ತವರಗಟ್ಟಿ, ಮುಮ್ಮಿಗಟ್ಟಿ, ಯರಗಟ್ಟಿ ಎಂದು ಬರುವ ಊರುಗಳು ದ್ರಾವಿಡ ವಾರ್ಗಿಕ 'ಕಟ್ಟಿ'ಯಿಂದ ಕೂಡಿದ್ದು ಇವು ಜಲವಾಚಿ ಸ್ಥಳನಾಮಗಳಾಗಿವೆ. ಅದೇ ರೀತಿಯಾಗಿ 'ಕೇರಿ' ಎಂಬ ವಾರ್ಗಿಕದಿಂದ ಕೂಡಿದ 'ಹುಲಿಕೇರಿ' ಮತ್ತು ಸಣ್ಣ ಹೊಂಡ ಎಂಬ ಅರ್ಥದಲ್ಲಿ ಬರುವ 'ಚಿಂಬೆ' ಎಂಬ ಸ್ಥಳ ಜಲವಾಚಿ ಸ್ಥಳನಾಮಗಳು.

ಎತ್ತರದ ಪ್ರದೇಶವನ್ನು ಸೂಚಿಸುವ ವಾರ್ಗಿಕಗಳಾದ ಕುಂದ, ಕೋಡಗಳಿಂದ ಕೂಡಿದ ಬಸರಕೋಡ, ತಡಕೋಡ ಎಂಬ ಸ್ಥಳನಾಮಗಳು ನಿಸರ್ಗವಾಚಿಯಾಗಿವೆ.

ಇನ್ನು ಬಂಡರು, ನೇಸರು, ತೋಲರು ಎಂದು ಜನಾಂಗವಾಚಿ ನಿರ್ದಿಷ್ಟವುಳ್ಳ ಬಂಡರಕಟ್ಟಿ, ನೇಸರ್ಗಿ, ತೋಲಗಿ, ಜನಾಂಗವಾಚಿ ಸ್ಥಳನಾಮಗಳು.

'ಹಳ್ಳಿ' ವಾರ್ಗಿಕದಿಂದ ಕೂಡಿದ ಕಾದರುಪಳ್ಳಿ > ಕಾದರೊಳ್ಳಿ ಎಂಬುದು ಜನಾಂಗವಾಚಿ ಸ್ಥಳನಾಮವೋ? ಅಥವಾ ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಸಿದ್ದ ಶರಣರ ಹೋರಾಟವನ್ನು ಸೂಚಿಸುವ ಸ್ಥಳನಾಮವಾಗಿದೆಯೋ? ಎಂಬುದು ನಿಷ್ಕರ್ಷೆಯಾಗಬೇಕಾದ ವಿಷಯ.

ದೇವಾಲಯದ ಸುತ್ತಮುತ್ತಲೂ ಬೆಳೆದು ಬಂದ ಊರು ಶಿವಪುರ. ಪುರ ಎಂಬುದು ಆಧುನಿಕ ವಾರ್ಗಿಕವಾದರೆ ಊರು ಎಂಬ ದ್ರಾವಿಡವಾರ್ಗಿಕ ಪ್ರಾಚೀನ, ಖಾನಾಪುರ, ಖೇದ್ರಾಗಪುರಾ, ಬಸವಪುರ, ಮಲ್ಲಪುರ, ಇತ್ಯಾದಿ ಮತ್ತು ಹೊಸೂರು, ದೇವನೂರು ತೇಗೂರು, ಬೋರುರು, ಬೇಲೂರು ಇವೆಲ್ಲ ನಿರ್ಮಾಣವಾಚಿ ಸ್ಥಳನಾಮಗಳು.

ಕೆಲವು ಸಲ ಸರಳ ರೂಪಾಂತರ ಕ್ರಿಯೆಯಿಂದ ಭಾಷೆ ಬದಲಾಗಿ ಸ್ಥಳನಾಮಗಳಲ್ಲಿ ವ್ಯತ್ಯಾಸಗಳಾಗಿವೆ. ಅಂತಹ ಒಂದು ಗ್ರಾಮ ಈ ಪ್ರದೇಶದಲ್ಲಿ ಬರುವ ಅಸುಂಡಿ. ಪಸುಂಡಿ >ಹಸುಂದಿ>ಅಸುಂಡಿ ಎಂದು ರೂಢಿಯಲ್ಲಿದೆ. ಅದೇ ರೀತಿಯಲ್ಲಿ ಪೂರ್ವದ ಹಳ್ಳಿ ಹುಬ್ಬಳ್ಳಿಯಾದುದೂ ಒಂದು.

ಸ್ತ್ರೀಯೊಬ್ಬಳು ಸಹಗಮನ ಹೊಂದಿದ ಘಟನೆಯನ್ನು ಸೂಚಿಸುವ ಮಾಸ್ತಮರಡಿ ಗ್ರಾಮ, ಮರಡಿ ಎಂದು ನಿಸರ್ಗವಾಚಿವಾರ್ಗಿಕವಿದ್ದರೂ ಅದು ವ್ಯಕ್ತಿವಾಚಿ ಸ್ಥಳನಾಮ ವಿರಬಹುದೆಂದು ಊಹೆ.

ಕೋಟೆಯ ರಚನೆಯನ್ನು ಸೂಚಿಸುವ 'ಗಡ' ಎಂಬ ವಾರ್ಗಿಕವುಳ್ಳ 'ನಂದಗಡ' ನಿರ್ಮಾಣವಾಚಿ ಸ್ಥಳನಾಮ, ವಾಸಸ್ಥಳದ ವಾರ್ಗಿಕವುಳ್ಳ ವಾಡ, ಗ್ರಾಮ, ಳ-ದಿಂದ ಕೂಡಿದ ದೊಡವಾಡ ದೇವಗಾವ್ (ಗ್ರಾಮ>ಗಾವ್) ಸಂಪಂಗಾವ್ ಕಡತಾಳ ಎಂಬಲ್ಲಿ ಮರಾಠಿ ಪ್ರಭಾವವಿದೆ.

ಆದರೆ ಇದೇ ಭಾಗದಲ್ಲಿ ಬರುವ ಚಚಡಿ, ಬೀಡಿ, ಬೆಳವಡಿ, ಬಾಗೇವಾಡಿ, ಯಕ್ಕುಂಡಿ. ಈ ಸ್ಥಳನಾಮಗಳ ಅಂತ್ಯಕ್ಕೆ ಬರುವ 'ಡಿ'ಕಾರದ ವಿಶೇಷತೆಯ ಬಗೆಗೆ ನಮಗೆ ವಿವರಗಳ ಅಗತ್ಯತೆಯಿದೆ.

ಉತ್ತರ ಕನ್ನಡ ಜಿಲ್ಲೆಯ ಭಾಗದ ಉಳವಿ ಎಂಬುದು ಅಲ್ಲಿ ಶಿವಶರಣರು ಕಾಳಿನದಿಯನ್ನು ದಾಟಿ ಹೋಗುವುದಕ್ಕೆ 'ಉಳವಿ' ಎನಿಸಿದರೆ, ಉಳವಿ ಎಂಬುದು ಅಲ್ಲಿ ವೃಕ್ಷವನ್ನು ಸೂಚಿಸುವದೆಂಬುದನ್ನು ಡಾ ॥ ಸೂರ್ಯನಾಥ ಕಾಮತರು ತಿಳಿಸಿರುವರು.

ಹೀಗೆ ಕಿತ್ತೂರು ರಾಜ್ಯದಲ್ಲಿ ನಿರ್ಗವಾಚಿ, ಜಲವಾಚಿ, ವ್ಯಕ್ತಿವಾಚಿ, ವಸತಿವಾಚಿ, ನಿರ್ಮಾಣವಾಚಿ ಸ್ಥಳನಾಮಗಳನ್ನು ಅಧ್ಯಯನ ಮಾಡಬಹುದು. ಅಧ್ಯಯನದ ಅವಶ್ಯಕತೆ ಇನ್ನೂ ಇದೆ ಕೂಡ. ಬೆಳಗಾವಿ ಜಿಲ್ಲೆಯ ಶಾಸನಗಳ ಸರ್ವೆ, ಶಾಸನಗಳ ಪ್ರಕಟನೆ, ಶಾಸನಗಳ ಸೂಚಿ ಪ್ರಕಟವಾದರೆ, ಇನ್ನೂ ಹೆಚ್ಚು ನಿಖರವಾಗಿ ಸ್ಥಳನಾಮಗಳನ್ನು ಗುರುತಿಸಬಹುದಾಗಿದೆ.

### ಆಧಾರ ಸೂಚಿ


*೧. ಡಾ ॥ ಎಂ. ಎಂ. ಕಲಬುರ್ಗಿ : *ಕನ್ನಡ ನಾಮವಿಜ್ಞಾನ*

*೨. ಡಾ ॥ ಎಂ. ಚಿದಾನಂದ ಮೂರ್ತಿ: *ವಾಗರ್ಥ*

*೩. *ಕಿತ್ತೂರ ಬಂಡಾಯ* : (ಸಂ.) ತಲ್ಲೂರು ರಾಯನಗೌಡರು

*೪. *ಕಿತ್ತೂರ ನಾಡಿನ ಇತಿಹಾಸ ಹಾಗು ಸಂಸ್ಕೃತಿ* - ಕ. ವಿ. ವಿ. ದ ಪ್ರಕಟಣೆ

ಡಾ॥ ಬಿ. ನಂಜುಂಡ ಸ್ವಾಮಿ *

# 'ಹೈದರ್ ನಾಮಾ' ಕೃತಿ ಕರ್ತೃ ಯಾರು? ಸೀಬಿ ನರಸಿಂಹಸ್ವಾಮಿ ದೇವಸ್ಥಾನದ ಮಹಾದ್ವಾರದ ದಕ್ಷಿಣದ ಮಾಳಿಗೆಯಲ್ಲಿ ಕಪ್ಪು ಶಾಯಿಯಿಂದ ಬರೆದಿರುವ ಶಾಸನದ ಪೂರ್ಣ ಪಾಠ

ಬೆಂಗಳೂರು ಪೂನಾ ರಸ್ತೆಯಲ್ಲಿ ಇರುವ ತುಮಕೂರಿನಿಂದ ಸುಮಾರು ಇಪ್ಪತ್ತೈದು ಕಿ.ಮೀ. ದೂರದ ಸೀಬಿ ದೇವಾಲಯ ಐತಿಹಾಸಿಕ ಮಹತ್ವ ಉಳ್ಳದ್ದು, ಈ ದೇವಾಲಯದ ಮಹಾದ್ವಾರದ ಒಳಭಾಗದಲ್ಲಿ ಅನೇಕ ಸುಂದರ ಚಿತ್ರಗಳು ಇದ್ದು, ಹೈದರ್ ಅಲಿ ಎಂದು ಗುರುತಿಸುವ ಚಿತ್ರದ ಕೆಳಗೆ ಹೊಸ ಗನ್ನಡದ ಶಾಸನ ವೊಂದನ್ನು ಬರೆಯಲಾಗಿದೆ. ಪ್ರಕಟಿತ ಶಾಸನ ಪಾಠ ಹೀಗಿದೆ (E.C. XII ಶಿವಾ 98)

ಶೀಬಿ ನರಸಿಂಹಸ್ವಾಮಿ ದೇವಾಲಯ ಮಹಾದ್ವಾರದ ದಕ್ಷಿಣ ಕಡೆ ದೂಲದ ಮೇಲೆ:

೧. *.....ನಾಮಧೇಯ ಅಮರವಯಲಹರಿಯಪ್ಪ ಅಕ್ಕಾಂಜಮ ನವರ ಪೌತ್ರ ತಮ್ಮಂಣ ಲಕ್ಷ್ಮಯನವರ ಪುತ್ರರಾದ*

೨. *.....ಪರಿಪರಿಯಂತಾ ಮೂರುಕೋಟಿ ರಾಜ್ಯವಾಳಿದ ನವಾಬಹೈದರಲೀಖಾನ್ ಬಹದರರಬಳಿ ಮಹಲಾತಿ ಕಚೇರಿಕರ*

೩. *..... ಲ್ಲಿಯೂಕಚೇರಿ ಕೃಷ್ಣಪ್ಪನವರಿಗೆ ಧರ್ಮಪತ್ನೀ ಅಲಮಲಮ್ಮನವರಗರ್ಭ ಸಂಜಾತರಾದ ಲಕ್ಷ್ಮೀ ನರಸೈಯ ಪುಟ್ಟಂಣ್ಣಯ ನಲ್ಲಪ್ಪನ*

೪. *........೧೮ ಲಕ್ಷಗುತ್ತಿ ೧೨ ಲಕ್ಷ ಬೆಂಗಳೂರ ಕಚೇರಿ ಮುಂತಾದ ರಾಜ್ಯಾಧಿಕಾರಗಳ ಮಾಡುತ್ತಾ ಪ್ರಬಲಿಸಿ*

**ಪಶ್ಚಿಮ ಮುಖದ ದೂಲ**

೫. *ಮಹಮದಲೀ ಮಹಕರಿಸಾಹೇಬರು ತಮ್ಮ ಮಕ್ಕಳೆಂದು ಪೋಷಿಸಿದರಿಂದಲೂ ಟೀಪುಸ್ತುಲತೌನರಮೀರ ಅಸಫಮಿ*

೬ *ಬೆಂಕಿನವಾಬರು ಖಾನೆ ಜಹಾಂಖಾನರ ಕೃಪೆಯಿಂದಲೂ ಬಹುಶಾಮತ್ತು ಖ್ಯಾತಿವಂತರೆನಿಸಿ ಸಲಹಿದವರಿಗೆ ಪು*

೭ *ಕುಮಾತಾಮಹರಾದ ಭಾರಧ್ವಾಜಗೋತ್ರ ಕಡೆವೆಳ್ಳ ಮನವರಸೆಯವರಲ್ಲಿ ಇಕ್ಕೇರಿ ಬಿದಲೂರು ಕೊಡಿಯಾಲ ಬಂದರ ಹೈ.*

೮. *ಮೈಯ್ಯನವರಿಗೂ ಮಾತಾಮಹಿ ರವಣಮ್ಮನವರಿಗೂ ಮಾತುಳ ಗುರಿಕಾರ ರಮಣಪ್ಪನವರು ವೆಂಕಟಪ್ಪನವರು..........*

ಪ್ರಕಟಿತ ಶಾಸನದ ಪಾಠ ಅಪೂರ್ಣವಾಗಿರುವುದರಿಂದ, ವಿಷಯ ಸ್ಪಷ್ಟವಾಗಿ ತಿಳಿಯದೆ ಸಾಕಷ್ಟು ಗೋಜಲು ಉಂಟಾಗಿದೆ. ಏಳನೇ ಸಾಲಿನಲ್ಲಿ ಇಕ್ಕೇರಿ ಬಿದನೂರು ಉಲ್ಲೇಖ ಬಂದಿರುವುದರಿಂದ ಈ ಶಾಸನ ಕೆಳದಿ ಅರಸರಿಗೂ ಸಂಬಂಧ ಇರಬಹುದು ಎಂದು, ಕೆಳದಿ ಅರಸರ ಶಾಸನ ಸಂಪುಟದಲ್ಲಿ ತೋಂಟದಾರ್ಯ ಮಠ ಗದಗ ಅವರಿನಿಂದ ಪ್ರಕಟವಾಗಿರುವ ಪುಸ್ತಕದ ಪುಟ ೪೬೬ರಲ್ಲಿ ಕೆಳದಿ ವೆಂಕಟೇಶ್ ರವರು ೨೯೦ನೇ ಶಾಸನವಾಗಿ ಪಶ್ಚಿಮದೊಲದ ಪ್ರಕಟಿತ ಶಾಸನದ ೫ನೇ ಸಾಲಿನಿಂದ ೮ನೇ ಸಾಲಿನವರೆಗೆ ಶಾಸನದ ಪಾಠವನ್ನು ಕೊಟ್ಟಿದ್ದಾರೆ. ಅದು ಅಪೂರ್ಣ ಪಾಠವಾಗಿ ಗೊಂದಲಗಳಿಗೆಡೆಕೊಟ್ಟಿದೆ.

ಸೀಬಿ ದೇವಾಲಯ ಕಛೇರಿ ಕೃಷ್ಣಪ್ಪನವರ ವಂಶಸ್ಥರ ಕೈಯಲ್ಲೇ ಉಳಿದುಕೊಂಡು ಬಂದಿದೆ. ಅಕ್ಷರಸ್ಥರಾಗಿ, ಸಾಹಿತ್ಯ ಇತಿಹಾಸ, ಸಂಸ್ಕೃತಿ ತಿಳಿದ ಈ ಮನೆತನದವರು ಏಳು ಬೀಳುಗಳನ್ನು ಕಂಡಿದ್ದಾರೆ. ಸುಮಾರು ೧೮೯೦ರಲ್ಲಿ ರಾಜಗೋಪುರವನ್ನು ಕಟ್ಟಿಸುವ ಉದ್ದೇಶದಿಂದ ಮಹಾದ್ವಾರದ ತಳಪಾಯವನ್ನು ಇನ್ನಷ್ಟು ಭದ್ರಪಡಿಸುವದಗೋಸ್ಕರ ಕಲ್ಲುಕಂಬಗಳನ್ನು ನಿಲ್ಲಿಸಿದರು. ಚಿತ್ರಗಾರರು ಕಪ್ಪುಮಸಿಯಲ್ಲಿ ಗೋಡೆ ಮೇಲೆ ಬರೆದಿದ್ದ ಶಾಸನದ ಪಾಠ ಸುಮಾರು ಶೇಕಡ ಎಂಬತ್ತರಷ್ಟು ನಷ್ಟವಾಯಿತು. ಅಳಿದು ಉಳಿದುದ್ದು ೧೯೦೬ರಲ್ಲಿ ರೈಸ್‌ರವರಿಂದ ಹನ್ನೆರಡನೇ ಸಂಪುಟದ ಶಿರಾ ೯೮ರ ಶಾಸನವಾಗಿ ಪ್ರಕಟವಾಯಿತು. ರೈಸ್‌ರವರು ದೇವಸ್ಥಾನದ ಧರ್ಮಾಧಿಕಾರಿಗಳನ್ನು ಮಾತನಾಡಿಸಿದ್ದರೆ ಆ ಕಾಲಕ್ಕೆ ಶಾಸನದ ಸಂಪೂರ್ಣ ಪಾಠ ಲಭ್ಯವಾಗುತ್ತಾ ಇತ್ತು. ಕಲ್ಲು ಕಂಬಗಳನ್ನೇ ನಿಲ್ಲಿಸುವಾಗ ಶಾಸನದ ಪಾಠವನ್ನು ಬರೆದು

* ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು - ೫

ಇಟ್ಟುಕೊಂಡರೂ ಅಥವಾ ಮೊದಲೇ ಸುರಳಿರೂಪದಲ್ಲಿ ಅವರ ಹತ್ತಿರ ಇತ್ತೋ ವಿಷಯ ತಿಳಿದಿಲ್ಲ. ''ಶ್ರೀ ಶೀಬಿ ನರಸಿಂಹಸ್ವಾಮಿ ದೇವಾಲಯದ ದಾಖಲೆಗಳು (೧೭೪೯-೧೮೨೦)'' - ಪುಸ್ತಕ ೧೯೧೯ರಲ್ಲಿ ತುಮಕೂರಿನ THE GENERAL AGENCIES PRINTERS TUMKUR ಇಲ್ಲಿ ಕರಣಿಕ ನಲ್ಲಪ್ಪ ಧರ್ಮಾಧಿಕಾರಿ, ಶ್ರೀ ಶೀಬಿ ನರಸಿಂಹಸ್ವಾಮಿ ದೇವಸ್ಥಾನ ಶ್ರೀ ಶೀಬಿ, ನೆಲ್ಲ್ಯಾಹಾಳ ಅಂಚೆ, ತುಮಕೂರು ಇವರಿಂದ ೨೪ ಪುಟಗಳ ಪುಸ್ತಕ ಅಚ್ಚಾಗಿದೆ ಈ ಐವತ್ತೊಂದು ಸಾಲಿನ ಮಹಾದ್ವಾರದಲ್ಲಿ ಕಪ್ಪು ಮನೆಯಲ್ಲಿ ಬರೆದಿರುವ ಶಾಸನದ ಸಂಪೂರ್ಣ ಪಾಠ ಅಚ್ಚಾಗಿದ್ದು ಅದು ಹೀಗಿದೆ :

*ಶ್ರೀರಸ್ತು ॥ಕುಂತಲ ನಗರ ಸಮೀಪ ಈ ದೇವರಿರುವ ದೇವಸ್ಥಾನದ ವನದಲ್ಲಿ ಕೌಂಡಿಣ್ಯ ಮುನಿವಂಶದ ಶೀಬೀ ಮುನಿತಪಸ್ಸಿಗೆ ಪ್ರಸನ್ನನಾಗಿ ದ್ವಾಪರದಲ್ಲಿ ಈ ನರಸಿಂಹದೇವರು ಲಿಂಗಾಕಾರದಿಂದ ಉದ್ಭವಿಸಿ ಚಂದ್ರಹಾಸಾದಿಗಳಿಂದ ಪೂಜೆಯಂಗೊಳುತ್ತಿದ್ದು ಕಲಿಯುಗದಲ್ಲಿ ಮಧ್ಯೆ ಕೆಲವುದಿನ ಆಲಯಶಿಥಿಲವಾಗಿ ಗಿಡ ಬೆಳೆದು ಇರುವಾಗ್ಯೆ ಅಮರ್‍ಯ್ಯನೆಂಬ ಹೇರುಕಾರನು ಲಿಂಗದ ಜೊತೆಗೆ ಕಲ್ಲುಗಳು ಇಟ್ಟು ಅವನ ಎತ್ತುಗಳೆಲ್ಲಾ ಲಯವಾಗಿ ವೊಬ್ಬನಿಗೆ ಆವೇಶಾ ಬಂದು ಅವನ ಎತ್ತುಗಳೆಲ್ಲಾ ಬದುಕಿಕೊಂಡದ್ದರಿಂದ ಅವನು ವಂದು ಅಂಖಣ ಗರ್ಭಗೃಹ ಕಟ್ಟಿಸಿದಬಳಿಕ ಭಕ್ತಾದಿಗಳು ಸ್ವಲ್ಪ ಕಲ್ಲು ಅಂಖಣ ಮಣ್ಣು ಗೋಡೆ ಪುರಾಣ ಸಿದ್ಧವಾದ ಗಜಸರೋವರವನ್ನೂ ಕಿರುದಾಗಿ ಕಾಡುಕಲ್ಲಿನಿಂದ ಕಟ್ಟಿಸಿ ಬಹುಕಾಲದಿಂದ ಪೂಜೆ ನಡೆಯುತ್ತಾ ಈಚೆಗೆ ಕಲ್ಯಾಣಿ, ಗುಡಿಸಹ ಜೀರ್ಣವಾಗಲಾಗಿ ಕೌಂದಿಣ್ಯಗೋತ್ರವಂಗ ಪುರಗಾಮ ನಾಮಧೇಯ, ಹರಿಯಪ್ಪ, ಅಕ್ಕಾಜಮ್ಮನವರ ಪೌತ್ರ, ತಮ್ಮಣ್ಣ. ಲಕ್ಷ್ಮಮ್ಮನವರ ಪುತ್ರರಾದ ಕೃಷ್ಣಪ್ಪನವರು ಶ್ರೀರಂಗಪಟ್ಟಣ ಆರ್ಕಾಡು ರಾಮೇಶ್ವರದಿಂದ ಕೃಷ್ಣಾ ಪರ್ಯಂತ ಮೂರುಕೋಟಿ ರಾಜ್ಯವಾಳಿದ ನವಾಬ ಹೈದರಲ್ಲೀಖಾ ಬಹದರ್‌ರವರ ಬಳಿಮಹಲಾತ್ ಕಛೇರಿ ಕರಣೀಕತನಮಾಡುತ್ತಾ ಈ ನರಸಿಂಹನ ಸೇವೆ ಬಹಳವಾಗಿ ನಡೆದುಕೊಂಬುವಲ್ಲಿ ಈ ಕಛೇರಿ ಕೃಷ್ಣಪ್ಪನವರ ಧರ್ಮಪತ್ನಿ ಅಲವೇಲಮ್ಮ ಗರ್ಭಸಂಜಾತರಾದ ಲಕ್ಷ್ಮೀನರಸೈಯ್ಯ, ಪುಟ್ಟಣ್ಣೈಯ್ಯ, ನಲ್ಲಪ್ಪ ಸಹ ಧಾರವಾಡ ಕೃಷ್ಣಾ ತುಂಗಭದ್ರಾ ಮಧ್ಯೆ ಸವಣೂರು ಹದಿನೆಂಟು ಲಕ್ಷಗುತ್ತಿ ಹನ್ನೆರಡು ಲಕ್ಷ ಬೆಂಗಳೂರು ಕಛೇರಿ ಮುಂತಾದ ರಾಜ್ಯಾಧಿಕಾರಗಳ ಮಾಡುತ್ತಾ ಪ್ರಬಲಿಸಿ ಆಸಫ್ ಮಹಮ್ಮದಲ್ಲೀ ಮೆಹಕರಿಸಾಹೇಬರು ತಮ್ಮ ಮಕ್ಕಳಿಂದು ಪೋಷಿಸಿದ್ದರಿಂದಲೂ ಟೀಪುಸುಲ್ತಾನರ ಮೀರ್ ಆಸಫ್ ಮೀರ್ ಮಹಮ್ಮದ್ ಸಾದಕರೂ ಮೀರ್ ಮೀರಾ ಮಹಮ್ಮದ್ ರಜಾಬೆಂಕೀ ನವಾಬರು ಖಾನೇಜಹಾಖಾನರ ಕೃಪೆಇಂದಲೂ ಬಹುಶ್ಯಾ ಉತ್ತಮಖ್ಯಾತಿವಂತರೆನಿಸಿ ಸಲಹಿದವರಿಗೆ ಪುಣ್ಯಕೀರ್ತಿಯು ಉಂಟಾಗುವ ಬಗ್ಯೆ ತಮ್ಮ ಪಿತೃವಂಶಕ್ಕೂ ಮಾತಾಮಹರಾದ ಭಾರದ್ವಾಜನ ಗೋತ್ರ ಕಡಿವೇಳ್ಳ ಮನೆವರಶೆಯುವರಲ್ಲಿ ಇಕ್ಕೇರಿ ಬಿದಲೂರು, ಕೂಡಿಯಾಲ ಬಂದರ್ ಹೈದರ್‌ನಗರ್ ಸಂಸ್ಥಾನದ ಸರ್ವಾಧಿಕಾರಿ ಗುರಿಕಾರ್ ವೆಂಕಟ ಪತ್ಯೆಯ್ಯನವರಿಗೂ ಮಾತಾಮಹಿ ರಮಣಮ್ಮನವರಿಗೂ ಮಾತುಳ ಗುರಿಕಾರ್ ರಮಣಪ್ಪ ವೆಂಕಟಪ್ಪ ಸೋದರತ್ತೆ ಲಕ್ಷ್ಮೀದೇವಮ್ಮ ಲಕ್ಷ್ಮಮ್ಮ ಮೊದಲಾದ ತಮ್ಮ ಕುಲಮೇಕೋತ್ತರಶತಕ್ಕೂ ಸುಗತಿಯಾಗಿರತಕ್ಕ ಬಗ್ಯೆ ತಮಗೂ ತಮ್ಮ ಸಂತತಿ ಸ್ವಜನಕ್ಕೂ ಇಹಸುಖಾಭಿವೃದ್ಧಿ ಶಾಶ್ವತವೂ ನಂತರ ಕೈಲಾಸ ವೈಕುಂಟವಾಸವಾಗುವ ಬಗ್ಯೆ ಸಹ ಶಾಲೀವಾಹನ ಶಕಾಬ್ದಾ: ೧೭೧೭ನೇ ರಾಕ್ಷಸ ಸಂವತ್ಸರದ ಭಾದ್ರಪದ ಮಾಸದಾರಭ್ಯ ಈದೇವ ಸ್ಥಾನ ಸರೋವರ ನವೀನ ಪಾಣವಟ್ಟಪೀಠ ಅಷ್ಟಬಂಧನ ಲೋಕಾಂಬ ಅಂಬೆಗಾಲು ಕೃಷ್ಣ ರಾಮ ಗೋಪಾಲವರಾಹ ಕಾಳಿಂಗಭುಜನ ಲಕ್ಷ್ಮೀನರಸಿಂಹ ಭೂದೇವಿ ವಟಪತ್ರಶಾಯಿ ಶ್ರೀನಿವಾಸಯೋಗಾನಂದ ರಂಗೇಶಗಣಾಧಿಪ ವಿಗ್ರಹ ನೂತನಪ್ರತಿಷ್ಠೆ ಮಂಟಪ ಆಭರಣ ವಸ್ತ್ರವಾಹನಾದಿ ಸಕಲಶೇವೆಯೂ ಮಾಡಿ ಬೆಳ್ಳಾವೆ ಸೋಮೇಶ್ವರ ನಿಲಯ ಜಗದಾಂಖಾದಿ ದೇವರು ಸರೋವರ ರಾಮ ಆಂಜನೇಯ ನಿಲಯ ಅಲ್ಲಿಂದಿಲ್ಲಿಗೆ ಸಾಲ್ತೋಪು ಮಾರ್ಗದಲ್ಲಿ ಕಟ್ಟೆಗಳು ತುಮುಕೂರುಬಳಿ ಛತ್ರ ನರಸಿಂಹನಿಲಯ ಭಾವಿ ಹೊಸಕೋಟೆ ಹಲಸೂರು, ಮುದಿಗೆರೆ, ಕೊಟ್ಟಹಳ್ಳಿಬಳಿ ಸೋಮೇಶ್ವರ ಆಂಜನೇಯ ನಿಲಯು ಸಹ ನಿರ್ಮಿಸಿ ಆಳಿದ ಮಹಾಸ್ವಾಮಿ ಕೃಷ್ಣರಾಜವಡೆಯರವರ ಕರುಣದಿಂ ಸೋರೇಕುಂಟೆ, ಹೊಸಹಳ್ಳಿ, ಚಿಕ್ಕಸೀಬಿ ಪರಷೆ ಸುಂಕ ಜೋಡೀದೇವರಹಳ್ಳಿ ಮಾನ್ಯ ವರ್ತನೆ ಮುಂತಾದ್ದಕ್ಕೆಲ್ಲಾ ಸನ್ನದುಮಾಡಿಸಿ ಕೆರೆಗಳು ಸಹ ಕಟ್ಟಿಸಿದರು. ಗುತ್ತಿಯಲ್ಲೂ ನರಸಿಂಹಸ್ವಾಮಿ ದೇವಸ್ಥಾನ ಕಟ್ಟಿಸಿದರು.*

ಸಂಪೂರ್ಣ ಶಾಸನ ಪಾಠದಿಂದ ಅಪೂರ್ಣ ಶಾಸನವನ್ನು ಓದಿದಾಗ ಉಂಟಾಗಿದ್ದ ಗೊಂದಲಗಳೆಲ್ಲ ನಿವಾರಣೆಯಾಗುತ್ತವೆ. ದೇವಾಲಯದ ಇತಿಹಾಸ, ಪರಂಪರೆ ಗೋತ್ರ, ಸೂತ್ರ, ವೃತ್ತಿ ಆಶ್ರಯದಾತರ ಉಲ್ಲೇಖ ಅವರೆಲ್ಲರಿಗೂ ಪುಣ್ಯಕೀರ್ತಿ ಉಂಟಾಗ ಬೇಕು ಎಂದು ತಮ್ಮ ತಂದೆ ಮತ್ತು ತಾಯಿಯ ಬಂಧು ಬಾಂಧವರ ಉಲ್ಲೇಖಮಾಡಿ ಅವರೆಲ್ಲರಿಗೂ ಕೈಲಾಸ ವೈಕುಂಠ ಪ್ರಾಪ್ತಿಯಾಗಲಿ ಎಂದು ಶಾಲೀವಾಹನ ಶಕಬ್ದಾ: ೧೭೧೭ನೇ ರಾಕ್ಷಸ ಸಂವತ್ಸರದ ಭಾದ್ರಪದ ಮಾಸದಲ್ಲಿ ಅರ್ಥಾತ್ ಕ್ರಿ..ಶ. ೧೭೯೫ರಲ್ಲಿ, ಟಿಪ್ಪುಸುಲ್ತಾನರು ರಾಜ್ಯಭಾರ ಮಾಡುವಾಗ ಈ ದೇವಾಲಯದಲ್ಲಿ ಅನೇಕ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿಸಿ ಪೂಜಾಕೈಂಕರ್ಯವನ್ನು ಪ್ರಾರಂಭಿಸಿದರು.

ಅದು ಅಲ್ಲದೆ ಬೆಳ್ಳಾವೆ ಸೋಮೇಶ್ವರ ದೇವಾಲಯದಲ್ಲಿ 'ಜಗದಾಂಬಾದಿ' ದೇವರು ಸರೋವರ ರಾಮ ಆಂಜನೇಯ ನಿಲಯ ಬೆಳ್ಳಾವೆ ಇಂದ ಶೀಬಿಗೆ ಸಾಲುತೋಪು ಮಾರ್ಗದಲ್ಲಿ ಕಟ್ಟೆಗಳು ತುಮಕೂರು ಬಳಿ ಛತ್ರ ನರಸಿಂಹ ದೇವಸ್ಥಾನ, ಬಾವಿ, ಹೊಸಕೋಟೆ, ಹಲಸೂರು, ಮುದಿಗೆರೆ, ಕೊಟ್ನಹಳ್ಳಿ ಬಳಿ ಸೋಮೇಶ್ವರ, ಆಂಜನೇಯನ ದೇವಸ್ಥಾನವನ್ನು ಕಟ್ಟಿಸಿ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕರುಣದಿಂದ ಸೋರೆಕುಂಟೆ, ಹೊಸಹಳ್ಳಿ, ಚಿಕ್ಕಶೀಬಿ, ಜಾತ್ರೆ ಸುಂಕ, ಜೋಡೀದೇವರಹಳ್ಳಿ ಮಾನ್ಯ ಇದಕ್ಕೆಲ್ಲೂ ಸನ್ನದ್ದು ಮಾಡಿಸಿ ಕೆರೆಗಳನ್ನು ಸಹ ಕಟ್ಟಿಸಿದರು. ಗುತ್ತಿಯಲ್ಲೂ ನರಸಿಂಹಸ್ವಾಮಿ ದೇವಸ್ಥಾನ ಕಟ್ಟಿಸಿದರು: ಇಷ್ಟು ವಿಷಯ ತಿಳಿದು ಬರುತ್ತದೆ.

ದೇವಸ್ಥಾನದ ಧರ್ಮಕರ್ತರಿಗೆ ಆ ಕಲ್ಲಿನ ಕಂಬ ನಿಲ್ಲಿಸಿದ

ಮೇಲೆ ಮತ್ತೆ ಚಿತ್ರಗಳನ್ನು ಬರೆಸಿ ಶಾಸನದ ಪೂರ್ಣ ಪಾಠವನ್ನು ಬರೆಸುವ ಉದ್ದೇಶ ಇತ್ತು, ನಾನಾ ತೊಂದರೆಗಳಿಂದ ಅದು ಸಾಧ್ಯವಾಗದೆ ಹೋಯಿತು. ಹರತಿ ಸಿರಿಯಲ್ಲಿ (ಸಂಪಾದಕ: ಲಕ್ಷ್ಮಣ ತೆಲಗಾವಿ, ೧೯೮೭) ಶೀಬಿಯ ಭಿತ್ತಿಚಿತ್ರಗಳನ್ನು ಕುರಿತು ಲೇಖನ ಬರೆದ ಶ್ರೀಕೃಷ್ಣಾನಂದ ಕಾಮತ್‌ರು ಪುಟ ೫೬ರಲ್ಲಿ.... "ಬಳಸಿರುವ ಲಿಪಿಯು ಮೈಸೂರು ಕೋಟೆಯಲ್ಲಿ ಪ್ರಸನ್ನಕೃಷ್ಣಸ್ವಾಮಿ ದೇವಾಲಯದಲ್ಲಿರುವ ಮುಮ್ಮಡಿ ಕೃಷ್ಣರಾಜರ ಕ್ರಿ.ಶ. ೧೮೨೯ರ ಶಾಸನದ ಲಿಪಿಯನ್ನು ಬಹಳವಾಗಿ ಹೋಲುತ್ತದೆ." ಎಂದಿದ್ದಾರೆ. ಕರುಣಿಕ್ ಕೃಷ್ಣಪ್ಪನವರ ಮಗ ಪೌಜುದಾರ್ ನಲ್ಲಪ್ಪನವರು ಮುಮ್ಮಡಿಯವರ ಜೊತೆ ಬಹಳ ವಿಶ್ವಾಸವಿದ್ದುದರಿಂದ ಚಿತ್ರಗಾರರನ್ನು ಮೈಸೂರಿನಿಂದ ಕರೆದು ತಂದು ಚಿತ್ರಗಳನ್ನು ಶಾಸನದ ಪಾಠವನ್ನು ಬರೆಸಿರುವ ಸಾಧ್ಯತೆ ಇದೆ. ಈ ಬಗ್ಗೆ ಸಂಶೋಧನೆಯಾಗಬೇಕಾಗಿದೆ.

*Mysore Gazetteer : Revised Edition Volume II*
*(B. Lewis' Riece 1897 Page 196)*

*THE SMALL TEMPLE THEN ERECTED WAS REPLACED BY THE PRESENT LARGE BUILDING DURING THIS CENTURY UNDER THE FOLLOWING CIRCUMSTANCES; THREE BROTHERS LIVING AT TUMKUR. WHO HAD ENRICHED THEM SELVES FARMING THE REVENUE OF THE DISTRICT IN THE DAYS OF TIPPU SUBSEQUENTLY SOUGHT TO ATONE FOR THE OPPRESSIONS BY WORKS OF CHARITY. TO NALAPPA THE ELDEST NARASIMAHA IN A VISION OFFERED GENERAL HAPPINESS ON CONDITION OF OF HIS BUILDING AND ENDOWINGS THE TEMPLE AT SIBI. THIS WAS ACCORDINGLY ACCOMPLISHED IN TEN YEARS BY THREE BROTHERS......*

ಇಷ್ಟು ವಿಷಯವನ್ನು ಸಿ. ಹಯವದನರಾಯರು ೧೯೩೦ರಲ್ಲಿ Mysore Gazetteer ನಲ್ಲಿ ಹೇಳುತ್ತಾರೆ. ಎಂ. ಎಚ್. ಕೃಷ್ಣ ಅವರು ಹೈದರ್‌ನಾಮಾ ಪರಿಚಯನ್ನು MAR ೧೯೩೦ ಪುಟ (೭೯-೧೦೨) ರಲ್ಲಿ ಮಾಡಿಕೊಟ್ಟಿದ್ದಾರೆ. MAR ೧೯೪೫ ಪುಟ (೫೯-೬೪) ರಲ್ಲಿ ಸೀಬಿ ದೇವಸ್ಥಾನದ ವಿಸ್ತಾರವಾದ ಪರಿಚಯ ವಿದೆ. MAR ೧೯೪೭-೫೬, ಪುಟ (೪೪-೪೫) ರಲ್ಲಿ ಸೀಬಿ ಚಿತ್ರಗಳ ಬಗ್ಗೆ ಮಾಹಿತಿ ಇದೆ. ಪ್ರೊ॥ ಎಂ. ಎಚ್. ಕೃಷ್ಣ ಅವರು ಹೈದರ್‌ನಾಮಾ ಹಸ್ತಪ್ರತಿಯ ವಿವರವನ್ನು MAR ೧೯೩೦ ಪು. ೭೩-೮೦ರಲ್ಲ ನೀಡಿದ್ದಾರೆ. ಪ್ರೊ॥ ಎಂ. ಎಚ್. ಕೃಷ್ಣರವರಿಗೆ ದೊರೆತ ಮಾಹಿತಿಯಿಂದ ............Mr Karnek Lakshminarasimiah, Inmadar, Tumkur, Who is Descended From Nallappa, A well known officer of the Mysore Court in the Days of Krishnaraja Wodeyer III. His Ancestors are Said to Have Been in the service of Hyder Ali And Tippu Sultan And it is stated That his Grand Father Also Nallappa By name, was Hyder's Contemporary. Hence Present Manuscript May Be Called The 'Nallappa Manusurpet For Identification Purposes.......

*ಮೇಲಿನ ಮಾತನ್ನು ಎಲ್ಲರೂ ಅನುಮೋದಿಸುತ್ತಾ ಬಂದರು. ಸತ್ಯ ಸಂಗತಿ ಎಂದರೆ, ಕಛೇರಿ ಕೃಷ್ಣಪ್ಪನವರೆ "ಹೈದರ್‌ನಾಮಾದ ಕರ್ತೃ". ಅವರೆ ಹೈದರ್ ಆಲಿಖಾನ್ ಹತ್ತಿರ ಕೆಲಸದಲ್ಲಿ ಇದ್ದವರು. ಚಾರಿತ್ರಿಕ ದಾಖಲೆಗಳು ತಿ.ತಾ. ಶರ್ಮರಿಂದ ಸಂಪಾದಿತವಾಗಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೭೧ರಲ್ಲಿ ಪ್ರಕಟವಾಗಿದೆ. ಇದರಲ್ಲಿ ರಾಮರಾಯನ ಬಖೈರು, ಹೈದರ್‌ನಾಮಾ, ಮತ್ತು ಕೊಡಗು ವೀರರಾಜೇಂದ್ರನ ಪತ್ರ ಪ್ರಕಟವಾಗಿದೆ. ಹೈದರ್‌ನಾಮ (೨೧-೧೫೩)ನೇ ಪುಟದವರೆಗೆ ಇದೆ. ಮುನ್ನುಡಿಯಲ್ಲಿ "ಕೃತಿಕರ್ತೃ ನಲ್ಲಪ್ಪನನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯಕ. ನಲ್ಲಪ್ಪ ತುಮಕೂರಿನವ. ಆ ಮನೆತನದವರಿನ್ನೂ ಆ ಊರಿನಲ್ಲಿದ್ದಾರೆ. ಇನಾಂದಾರ್ ಶ್ರೀ ಕರಣಿಕ ಲಕ್ಷ್ಮೀನರಸಯ್ಯ ಎಂಬವರಿಂದ ಡಾ॥ ಕೃಷ್ಣರವರು ಈ ಕೃತಿಯ ಹಸ್ತಪ್ರತಿಯನ್ನು ಪಡೆದದ್ದು. ಅವರ ರೀತ್ಯಾ ಹೀಗಿದೆ : ಕಾಲ ಉರುಳಿದಂತೆಲ್ಲ ಜೀವನ ರಚನಾ ವೈಖರಿಯೇ ಬದಲಾಗುತ್ತ ಹೋಗುತ್ತದೆ. ಜನ ಅವಲಂಬಿಸುವ ವೃತ್ತಿಗಳಲ್ಲೇ ಪರಿವರ್ತನಗಳಾಗುತ್ತವೆ. ವೈದಿಕ ವಂಶದ ನಲ್ಲಪ್ಪ ಹೈದರಾಲಿಯ ಅನುಗ್ರಹಕ್ಕೆ ಪಾತ್ರನಾದ. ಅವನ ಸೈನ್ಯಕ್ಕೆ ದವಸಧಾನ್ಯ, ಸಾಮಾನು ಸರಂಜಾಮು ಒದಗಿಸುವ ವ್ಯಾಪಾರಿಯಾದ. ಪೂರ್ಣಯ್ಯನ ಸಹಾಯದಿಂದ ಹೈದರನ ಆಸ್ಥಾನದ ಸಭಾಸದನು ಆದ.*

*'ಹೈದರ್ ನಾಮೆ' ಮೂಲ ಪೂರ್ಣವಾಗಿ ಇದುವರೆಗೆ ಎಲ್ಲೂ ಪ್ರಕಟವಾಗಿಲ್ಲ. ಮೊದಲನೆ ಸಾರೆ ಇದು ಬೆಂಗಳೂರಿನ ಮಿಥಿಕ್ ಸೊಸೈಟಿ (The quarterly Journal of the Mythic Society Vols LVI, LVII and LVII 1965-67) ಪತ್ರಿಕೆಯಲ್ಲಿ ನನ್ನ ಸ್ವಂತ ಹಸ್ತಪ್ರತಿಯಿಂದ ಕಂತುಕಂತಾಗಿ ಪ್ರಕಟವಾಯಿತು. ಈಗ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಯ ರೂಪದಲ್ಲಿ ಪ್ರಕಟವಾಗುತ್ತಿದೆ. ಹಿರಿಯ ವಿದ್ವಾಂಸರಾದ ತಿ.ತಾ. ಶರ್ಮರು ಹೈದರ್‌ನಾಮೆಯ ಕರ್ತೃ ನಲ್ಲಪ್ಪನೆಂದ ನಿರ್ಧರಿಸಿದರು.*

*ವಿಷಯ ಸ್ಪಷ್ಟತೆಗಾಗಿ ನಾವು "ಹೈದರ್‌ನಾಮಾ" ಕೃತಿಯನ್ನು ಮತ್ತು ಶೀಬಿ ದೇವಸ್ಥಾನದ ಶಾಸನಗಳ ಸಹಾಯದಿಂದ ಈ ಗೋಜಲನ್ನು ಬಿಡಿಸಬಹುದಾಗಿದೆ. ಹೈದರ್‌ನಾಮಾ ಪುಟ ೫೯ರಲ್ಲಿ (ಶಕೆ ೧೬೮೫ ಕ್ರಿ.ಶ. ೧೭೬೩).... ಆವಾಗಾ ಗುರಕಾರ ವೆಂಕಟಪತ್ಯೆಯ್ಯನವರಿಂದ್ದಾ ತಂಮ್ಮ ಕೂಡಿ ಬಂತು ಯಿವರ ಖೈರಕಾಯಿಂದಾ ಪಾಲಖೀ ಮಾಡಿ ತಿಂಗಳು ೧ಕ್ಕೆ ಬಹದರಿ ೧೦೦ ವರಹಾ ದರ್ಮಹಾ ಮಾಡಿ ನಗರ ಶೀಮೆಗೆ ಫವುಜು ಸಕಲವೂ ಹುಕುಮತ್ತಿಗೂ ನಾಯಕ ಖಿಜ ಮತ್ತು ಮಕರೂರು ಮಾಡಿ ನಗರದ ಕಚೇರಿ ಶಿರಸ್ತೆಯಿಂದ್ದ ವೆಂಕಟಪತ್ಯೆಯ್ಯನವರ ಅಳಿಯ ಕಚೇರಿ ಕ್ರಿಷ್ಣಯ್ಯನಿಗೆ ಹುಜೂರು ಮಹಲಾತಿ ಕಚೇರಿ ಕರಣೀಕತನ ಸಂಬಳ ತಿಂಗಳ ೧ ಕ್ಕೆ ೨೦೦ ರೂಪಾಯಿ ಮೇರೆಗೆ ಸಹಾ ಮಾಡ್ಸಿಕೊಟ್ಟರು.* "

ಈ ಮೇಲಿನ ವಾಕ್ಯಗಳಿಂದ ತಿಳಿದು ಬರುವುದು ಏನೆಂದರೆ ಕ್ರಿ.ಶ. ೧೭೬೩ರಲ್ಲೆ ಹೈದರಾಲಿ ಖಾನ್‌ಗೆ ಕಚೇರಿ ಕೃಷ್ಣಪ್ಪನವರು

ಪರಿಚಯವಾದದ್ದು, ಮಾವ ವೆಂಕಟಪತ್ಯೆಯ್ಯ, ಅಳಿಯ ಕೃಷ್ಣಪ್ಪ ಮಗ ರಮಣಯ್ಯ ಹೈದರಾಲಿ ಸೇವೆ ಮಾಡಿದ್ದು ಸ್ಪಷ್ಟ. ಈ ವಿಷಯ ವನ್ನು ಶೀಬಿ ದೇವಸ್ಥಾನದ ಶಾಸನವು ಸ್ಪಷ್ಟಪಡಿಸುತ್ತದೆ. ಶೀಬಿ ದೇವಸ್ಥಾನದ ಶಾಸನ ಕಛೇರಿ ಕೃಷ್ಣಪ್ಪನವರ ತಾತ ಮತ್ತು ತಂದೆಯ ಹೆಸರನ್ನು ತಿಳಿಸುತ್ತದೆ. ಕಛೇರಿ ಕೃಷ್ಣಪ್ಪನವರ ಮಕ್ಕಳು ೧. ಲಕ್ಷ್ಮೀನರಸೈಯ್ಯ ೨. ಪುಟ್ಟಣ್ಣಯ್ಯ ೩. ನಲ್ಲಪ್ಪ

ಕಛೇರಿ ಕೃಷ್ಣಪ್ಪನವರು ಹೈದರಾಲಿ ಮತ್ತು ಟಿಪ್ಪುವಿನ ಜೊತೆ ದುಡಿದಿದ್ದಾರೆ. ಅವರ ಮಕ್ಕಳು ಟಿಪ್ಪುವಿನ ಜೊತೆ ಸ್ವಲ್ಪಕಾಲ ದುಡಿದಿದ್ದಾರೆ. ಕೃಷ್ಣರಾಜ ಒಡೆಯರ್ ಕಾಲದಲ್ಲಿ ಕಛೇರಿ ಕೃಷ್ಣಪ್ಪನವರ ಕಿರಿಯ ಮಗ ನಲ್ಲಪ್ಪನವರು ಫೌಜುದಾರ್ ಆಗಿ ಸೇವೆ ಸಲ್ಲಿಸಿದ್ದಾರೆ. ಕಛೇರಿ ಕೃಷ್ಣಪ್ಪನವರ ಮಕ್ಕಳು ಪ್ರಬುದ್ಧ ಮಾನಕ್ಕೆ ಬಂದು ಸೀಬಿಯ ದೇವಸ್ಥಾನವನ್ನು ಪರಿಪೂರ್ಣವಾಗಿ ಜೀರ್ಣೋದ್ಧಾರ ಮಾಡಿ ದೇವತಾ ಪ್ರತಿಷ್ಠೆಗಳನ್ನು ಮಾಡಿದ್ದು ಕ್ರಿ.ಶ. ೧೭೯೫ರಲ್ಲಿ. ಹೈದರ್ ವೈಂಗಬರವಾಸಿಯಾದದ್ದು ಡಿಸೆಂಬರ್ ೭ನೇ ತಾರೀಖು ೧೭೮೨ರಲ್ಲಿ. ಕಛೇರಿ ಕೃಷ್ಣಪ್ಪನವರು ಹೈದರಾಲಿ ಆಡಳಿತದಲ್ಲಿ ಕರಣಿಕನಾಗಿದ್ದು ೧೭೬೩ರಲ್ಲಿ. ಹತ್ತೊಂಬತ್ತು ವರ್ಷ, ಬಹಳ ಹತ್ತಿರದಿಂದ ಹೈದರಾಲಿಯನ್ನು ನೋಡಿದ್ದು ಕಛೇರಿ ಕೃಷ್ಣಪ್ಪನವರೆ, ಅವರೆ ಈ ಹೈದರ್‌ನಾಮಾದ ಗ್ರಂಥ ಕರ್ತೃ. ಕಛೇರಿ ಕೃಷ್ಣಪ್ಪನವರ ಮಗ ನಲ್ಲಪ್ಪ ಫೌಜುದಾರ್ ಆಗಿ ಕೀರ್ತಿ ಪಡೆದವರು, ಬಹಳ ಪರಾಕ್ರಮಿ, ಶೂರ, ದಿಟ್ಟ ಫೌಜುದಾರ ಎಂದು ಹೆಸರು ಪಡೆದವರು. ತುಮಕೂರು ಪ್ರದೇಶದಲ್ಲಿ ಒಂದು ಗಾದೆ ಮಾತು ಇದೆ: "ನಲ್ಲಪ್ಪ ಅಂದರೆ ಆಕಾಶದಲ್ಲಿ ಹಾರಾಡುವ ಹದ್ದು ಸಹ ಸದ್ದಿಲ್ಲದೆ ನಿಲ್ಲುತ್ತೆ". ಹೈದರ್‌ನಾಮಾ ಹಸ್ತಪ್ರತಿ ಈಗ ನೋಡಲು ಲಭ್ಯ ಇಲ್ಲ. ಅರಮನೆ ಹಸ್ತಪ್ರತಿ ಆದಿ ಅಂತ್ಯದಲ್ಲಿ ಇರುವ ಪುಷ್ಪಿಕೆ ನಮಗೆ ಗೊತ್ತಿಲ್ಲ. ಹೈದರ್‌ನಾಮೆ ಬರೆದು ಮುಗಿಸಿದ್ದು ಕ್ರೋಧಿ ಸಂವತ್ಸರದ ಆಷಾಡ ಶುದ್ಧ ೧೧ ಮಂಗಳವಾರ ಕ್ರಿ.ಶ. ೧೭೮೪ ಜೂನ್ ೨೯. ಮಂಗಳವಾರ ಇಂಗ್ಲೀಷ್ ಕಾಲ ಮಾನಕ್ಕೆ ಹೊಂದುತ್ತದೆ. ಹೈದರ್ ನಿಧನ ಹೊಂದಿದ ಹದಿನೆಂಟು ತಿಂಗಳಿಗೆ ಪುಸ್ತಕ ಮುಕ್ತಾಯವಾಗಿದೆ.

*ಸೀಬಿ ನರಸಿಂಹಸ್ವಾಮಿ ದೇವಾಲಯದ ಮುಖ ಮಂಟಪದಲ್ಲಿ ಇರುವ ದೊಡ್ಡ ಗಂಟೆ ಮೇಲಿನ ಶಾಸನ:*

೧ *ಸ್ವಸ್ತಿ ಶ್ರೀ ವಿಜಯಾಬ್ಯುದಯ ಶಾಲಿವಾಹನಶಕ ವ*
೨ *ರುಶಾ ೧೬೮೩ನೆಯ ವಿಕ್ರಮನಾಮ ಸಂವತ್ಸರದ ಕಾರ್ತಿಕ ಶು*
೩ *೧೦ ಲೂ ಬಿಳಿಚೆಡಗಿಯರಸರು ಆಣಾಜಿನಾಗಯತಿ*
೪ *ಭೋಗವ ಯಿವರ ಕೊಮಾರ ಎಲ್ಲಪ ಲೊಕ್ಕಪ ಯಿವರ ಕೊಮೊ*
೫ *ರ ಭೋಸವ ನಾಗಪ ನಾರಣಪ್ಪನೂ ಶ್ರೀ ಬಸವೇಶ್ವರ*
೬ *ಗೆ ಮಾಡಿದ ಭಕ್ತಿ ೧ ಸ ೩೦*

**ಅದೇ ಗಂಟೆಯ ಮೇಲಿನ ಎರಡನೇ ಶಾಸನ**

೧. *ಶುಭಮಸ್ತು ಸ್ವಸ್ತಿ ಶ್ರೀ ವಿಜಯಾ ಶಾಲಿವಾಹನ ಶಕ ವರುಷ ೧೭೦೮ನೇ*
೨ *ಪರಾಭವ ನಾಮ ಸಂವತ್ಸರದ ಶ್ರಾವಣ ಶು ೫ ಗುರುವಾರ ಶ್ರೀ ಶೀಬಿನರಸಿಂಹ್ಮ*
೩. *ಸ್ವಾಮಿ ದೇವಸ್ಥಾನಕ್ಕೆ ವಂಗಿಪುರದ ಹರಿಯಪ್ಪನವರ ಪಉತ್ರರಾದ ತಂಮಂಣನ*
೪ *ವರ ಪುತ್ರ ಲಕುಮಂಮನವರ ಕುಮಾರ ಕೃಷ್ಣಪ್ಪನವರ ಭಕ್ತಿ ಸೆರ್ರು ೩೦ ವಂಚಾಳರ ಬೆಂ*
೫ *ಗಳೂರ ನಂಜೈಯ ಕೆತ್ತಿದ ಬರಹ ॥*

*(MAR ೧೯೪೭-೫೭)*

**ಅದೇ ದೊಡ್ಡ ಗಂಟೆ ಮೇಲಿರುವ ಮೂರನೆಯ ಶಾಸನ**

೧. **ಶ್ರೀ ನರಸಿಂಹ ಕಚೆರ್ರಿ ಕೃಷ್ಣಪ್ಪನವರ ಶೇವೆ**

ಈ ಮೇಲಿನ ಗಂಟೆ ಶಾಸನಗಳಲ್ಲಿ ಕಛೇರಿ ಕೃಷ್ಣಪ್ಪನವರ ಉಲ್ಲೇಖವಿದೆ. ಮೊದಲ ಶಾಸನದಲ್ಲಿ ತಾತ ವಂಗಿಪುರದ ಹರಿಯಪ್ಪ ತಂದೆ ತಮ್ಮಣ ತಾಯಿ ಲಕ್ಷ್ಮಮ್ಮನ ಉಲ್ಲೇಖವಿದ್ದು ದ್ವಾರ ಬಾಗಿಲಲ್ಲಿ ಕಪ್ಪು ಮಸಿಯಲ್ಲಿ ಬರೆದಿರುವ ಶಾಸನಕ್ಕೆ ಹೊಂದಿ ಕೊಳ್ಳುತ್ತದೆ. ಕಛೇರಿ ಕೃಷ್ಣಪ್ಪನವರು ಕ್ರಿ.ಶ. ೧೭೮೬ರಲ್ಲಿ ಬದುಕಿದ್ದು ತಿಳಿದು ಬರುತ್ತದೆ. ತದನಂತರ ೧೭೯೦ರಲ್ಲಿ ಸುಮಾರಿನಲ್ಲಿ ವೈಕುಂಠವಾಸಿಗಳಾದಾಗ, ತುಮಕೂರಿನಲ್ಲಿ ಇವರ ಪತ್ನಿ ಅಲ ಮೇಲಮ್ಮನವರು ಸಹಗಮನ ಮಾಡಿದ್ದು, ಸಹಗಮನ ಮಾಡಿದ ಜಾಗದಲ್ಲಿ ನರಸಿಂಹ ವಿಗ್ರಹ ಪ್ರತಿಷ್ಠೆ ಮಾಡಿ ನರಸಿಂಹ ವಿಗ್ರಹ ಪಾದದಲ್ಲಿ ಕಚೇರಿ ಕೃಷ್ಣಪ್ಪನವರ ಮತ್ತು ಅವರ ಧರ್ಮಪತ್ನಿ ಅಲಮೇಲಮ್ಮನವರ ವಿಗ್ರಹವನ್ನು ಬಿಡಿಸಿದ್ದಾರೆ.

ಶೀಬಿ ನರಸಿಂಹ ದೇವಾಲಯದ ಪ್ರಾಕಾರದ ವೃಂದಾವನ ದಲ್ಲಿ ನರಸಿಂಹನ ವಿಗ್ರಹ ಕೆತ್ತಿದ್ದು ನರಸಿಂಹನ ಪಾದತಲದಲ್ಲಿ ಕಛೇರಿ ಕೃಷ್ಣಪ್ಪ ಮತ್ತು ಅಲಮೇಲಮ್ಮನವನರ ವಿಗ್ರಹ ಬಿಡಿಸಿದ್ದಾರೆ. ಹೀಗೆ ಬಹು ಮುಖ್ಯವಾದ ಶಾಸನ ಪಾಠ ಲಭ್ಯವಾದ್ದರಿಂದ ಅನೇಕ ಗೊಂದಲಗಳು ಪರಿಹಾರವಾಗಿ, ಹೈದರ್ ನಾಮಾ ಪುಸ್ತಕದ ನಿಜವಾದ ಲೇಖಕ ಬೆಳಕಿಗೆ ಬರಲು ಸಾಧ್ಯವಾಯಿತು.

ಡಾ॥ ಶ್ರೀನಿವಾಸ ಹಾವನೂರ ಅವರ ಹೊಸಗನ್ನಡದ ಅರಣೋದಯ ಪುಸ್ತಕದ (೧೯೭೪) ಅನುಬಂಧದಲ್ಲಿ ೧೮೪೮ ನೆಯ ವರ್ಷದ ಕನ್ನಡ ಸಾಹಿತ್ಯ ಸಮೀಕ್ಷೆ ಪುಟ ೫೭೫ರಲ್ಲಿ ಹೈದರ್ ನಾಮೆ Life of Hyder Ali by Mr. Appanna Shetty ಎಂದಿದೆ. ಒಂದೇ ಹೆಸರಿನ ಎರಡು ಪುಸ್ತಕ ಬಂದಿದೆ. ಹೈದರ್ ಅಲಿಯನ್ನು ಕುರಿತು ವಿಲ್ಸ್ ಮೊದಲಾದ ಚರಿತ್ರಕಾರರಿಂದ ಹಾಗೂ ಪರ್ಶಿಯನ್ ದಾಖಲೆಗಳಿಂದ ಸಂಗ್ರಹಿಸಿ ಆಧುನಿಕ ರೀತಿಯಲ್ಲಿ ಅವನ ಚರಿತ್ರೆಯನ್ನು ಅಪ್ಪಣ್ಣ ಶೆಟ್ಟಿ ಬರೆದಿದ್ದಾನೆ ಎಂದು ಡಾ॥ ಶ್ರೀನಿವಾಸ್ ಹಾವನೂರ್ ಅವರು ಸ್ಪಷ್ಟವಾಗಿ ತಿಳಿಸಿದ್ದಾರೆ.

ಸ್ಮಿತಾ ಸುರೇಬಾನಕರ್ *

# ಕರ್ನಾಟಕದಲ್ಲಿ ೧೮೫೭ಕ್ಕೆ ಮೊದಲು ಬ್ರಿಟೀಷರ ವಿರುದ್ಧ ನಡೆದ ಸ್ಥಳೀಯ ನಾಯಕರ ದಂಗೆಗಳು – ಒಂದು ಹೊಸ ವಿವೇಚನೆ

ಜೀರಿಕೆ ಆಧುನಿಕ ಯುಗದ ಪ್ರಮುಖ ಲಕ್ಷಣಗಳಾದ ಪ್ರಜಾಪ್ರಭುತ್ವ, ರಾಷ್ಟ್ರೀಯತೆ, ಸಮಾನತೆ, ಸ್ವಾತಂತ್ರ್ಯತೆ ಮತ್ತು ವಿಶ್ವಬಂಧುತ್ವ ಇವುಗಳೆಲ್ಲ ವಿಚಾರಗಳು ಮೂಲತಃ ಪಾಶ್ಚಿಮಾತ್ಯ ದೇಶಗಳ ದೇಣಿಗೆಗಳೆಂದು ಪರಿಗಣಿಸಲಾಗಿದೆ. ಹದಿನೇಳು, ಹದಿನೆಂಟನೇಯ ಶತಮಾನಗಳಲ್ಲಿ ಯುರೋಪ್ ಖಂಡದ ವಿವಿಧ ದೇಶಗಳಲ್ಲಿ ನಡೆದ ಕ್ರಾಂತಿಗಳ ಪರಿಣಾಮವಾಗಿ ಈ ವಿಚಾರಗಳು ಪುನರ್ಚಾಲನೆಗೊಂಡು ಇಡೀ ಜಗತ್ತಿನ ವೈಚಾರಿಕತೆಯ ನೆಲೆಗಟ್ಟನ್ನು ನಡುಗಿಸುವಂತಾಯಿತು. ಈ ವೈಚಾರಿಕತೆಯ ಸೋಂಕು ಬ್ರಿಟೀಷ್ ಸಾಮ್ರಾಜ್ಯಶಾಹಿ ಆಳ್ವಿಕೆಗೆ ಸಿಕ್ಕು ನಲುಗುತ್ತಿದ್ದಂಥಹ ಭಾರತ ದೇಶಕ್ಕೆ, ಅದರಲ್ಲೂ ಪ್ರಮುಖವಾಗಿ ಬಂಗಾಳ, ಮಹಾರಾಷ್ಟ್ರಗಳ ಜೊತೆಗೆ ಭಾರತದ ಮುಕುಟಮಣಿ ಎನಿಸಿದ ಕರ್ನಾಟಕಕ್ಕೂ ತಗುಲಿತು.

ಪಾಶ್ಚಿಮಾತ್ಯ ಜ್ಞಾನಕ್ಕೆ ಭಾರತೀಯರು ಪರಿಚಿತರಾಗಿ, ಅವರಲ್ಲಿ ಹೊಸ ತಾರ್ಕಿಕ ಮತ್ತು ರಾಷ್ಟ್ರೀಯವಾದಿ ಪ್ರಜ್ಞೆ ಬೆಳೆಯಲು ಇಂಗ್ಲಿಷ್ ಶಿಕ್ಷಣ ಅನುವು ಮಾಡಿಕೊಟ್ಟಿತು. ಈ ಪ್ರಭಾವಗಳಿಗೆ ಕರ್ನಾಟಕದ ಜನತೆ ಹೊರತಾಗಿರಲಿಲ್ಲ. ಇವುಗಳೆಲ್ಲದರ ಜೊತೆಗೆ Concepts of rights and duties (ಹಕ್ಕು ಬಾಧ್ಯತೆಗಳ ವಿಚಾರವೂ) ಪರಿಚಯವಾಗಿ ಅವುಗಳು ಅದರಲ್ಲೂ ಮೂಲಭೂತ ಮತ್ತು ಮಾನವ ಹಕ್ಕುಗಳು ಅ ಮಹತ್ವದ ಪಾತ್ರವಹಿಸಿದವು – ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ.

ಟೀಪು ಪತನಾನಂತರ ಮತ್ತು ಅದಕ್ಕೂ ಮೊದಲು ಕರ್ನಾಟಕದಲ್ಲಿ ಬ್ರಿಟೀಷರ ವಿರುದ್ಧ ನಡೆದ ದಂಗೆಗಳಲ್ಲಿ ಮೂಲಭೂತ ಹಕ್ಕುಗಳು ಮತ್ತು ಬಾಧ್ಯತೆಗಳು, ಪರೋಕ್ಷವಾಗಿ ವಹಿಸಿದಂತಹ ಪಾತ್ರ ಬಹಳ ಮಹತ್ವದ್ದಾಗಿದೆ.

ಮಾನವ ಮೂಲತಃ ಸ್ವತಂತ್ರ ಜೀವಿ. ಯಾವುದೇ ಕಾಲ, ದೇಶ, ಪರಿಸರದಲ್ಲಿ ಅವನ ವ್ಯಕ್ತಿಸ್ವಾತಂತ್ರ್ಯಕ್ಕೆ ಧಕ್ಕೆ ಬಂದಾಗ, ಅದನ್ನು ಅವನು ಒಂದಿಲ್ಲೊಂದು ಬಗೆಯಲ್ಲಿ ಪ್ರತಿಭಟಿಸುತ್ತ, ಪುನಃ ತನ್ನ ಸ್ವಾತಂತ್ರ್ಯ ನಿರ್ಮಿತಿಯತ್ತ ಗಮನಹರಿಸುತ್ತಾನೆ. ಇದು ಇತಿಹಾಸದುದ್ದಕ್ಕೂ ನಡೆದು ಬಂದ ಪ್ರಕ್ರಿಯೆ. ಇದಕ್ಕೆ ಕರ್ನಾಟಕದ ಜನತೆ ಹೊರತಾಗಿರಲಿಲ್ಲ.

ರಾಷ್ಟ್ರೀಯತೆ, ರಾಷ್ಟ್ರೀಯವಾದ, ದೇಶಭಕ್ತಿ, ದೇಶಪ್ರೇಮ ಇವೆಲ್ಲ ವಿಚಾರಗಳು ೧೮ನೆಯ ಶತಮಾನದ ಕೊನೆಯಲ್ಲಿ ಮತ್ತು ೧೯ನೆಯ ಶತಮಾನದ ಪ್ರಾರಂಭದಲ್ಲಿ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಅಷ್ಟಾಗಿ ಮೊಳಕೆ ಒಡೆದಿರಲಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ೧೮೫೭ಕ್ಕೂ ಮೊದಲು ಸ್ಥಳೀಯ ನಾಯಕರು ತಮ್ಮ ಮೂಲಭೂತ ಹಕ್ಕುಗಳ ರಕ್ಷಣೆಗಾಗಿ ಹೋರಾಡಿ, ಅವುಗಳನ್ನು ತಡೆಹಿಡಿಯಲು ಯತ್ನಿಸಿದ ಬ್ರಿಟೀಷ್ ಸರಕಾರದ ವಿರುದ್ಧ ಪ್ರತಿಭಟನೆ ದಂಗೆಯೆದ್ದರು.

ಹೈದರ್ ಮತ್ತು ಟೀಪು, ಬ್ರಿಟೀಷರ ವಿರುದ್ಧ ದಂಗೆ ಎದ್ದು, ನಾಲ್ಕು ಮೈಸೂರು ಯುದ್ಧಗಳನ್ನು ನಡೆಸಿದ ಹಿನ್ನೆಲೆಯಲ್ಲಿಯೂ ಕೂಡ, ಜಾಗೃತಿವಾದದ ಕಹಳೆ ಎನಿಸಿದ ಮಾನವೀಯ ಹಕ್ಕುಗಳು ವಹಿಸಿದ ಪಾತ್ರ ಎದ್ದು ಕಾಣುತ್ತದೆ. ಬ್ರಿಟೀಷರು ಭಾರತಕ್ಕೆ ಬಂದು, ಇಲ್ಲಿ ತಮ್ಮ ವಸಾಹತು ನಿರ್ಮಾಣಗೊಳಿಸಿ, ಸಾಮ್ರಾಜ್ಯಶಾಹೀ ಆಳ್ವಿಕೆಯನ್ನು ದ. ಭಾರತದಲ್ಲೂ ಪ್ರಚಲಿತಕ್ಕೆ ತರಲು ಪ್ರಯತ್ನಿಸಿದ ಹಿನ್ನೆಲೆಯಲ್ಲಿ, ಬ್ರಿಟೀಷರ ಹಕ್ಕನ್ನು ಹೈದರ್ ಮತ್ತು ಟೀಪು ಇಬ್ಬರೂ ಪ್ರಶ್ನಿಸಿ ಅವರ ವಿರುದ್ಧ ಅವಿರತವಾಗಿ ಹೋರಾಡಿದರು.

ಹೈದರನ ಸಾಮ್ರಾಜ್ಯ ವಿಸ್ತರಣಾ ನೀತಿಯನ್ನು ಬ್ರಿಟೀಷರು ಪ್ರಶ್ನಿಸಲೆತ್ನಿಸಿದಾಗ, ಇದು ರಾಜನಾದ ತನ್ನು ಮೂಲಭೂತ ಸ್ವಾಭಾವಿಕ ಹಕ್ಕೆಂದು ಹೈದರ್ ಮತ್ತು ಟೀಪು ವಾದಿಸಿ, ಬ್ರಿಟೀಷರನ್ನು ಭಾರತದಿಂದ ಹೊಡೆದೋಡಿಸಿ, ಬ್ರಿಟೀಷ್ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹೀ ಕಪಿಮುಷ್ಠಿಗೆ ಸಿಕ್ಕು ನಲುಗುತ್ತಿದ್ದಂತಹ ಭಾರತವನ್ನು, ಅದರಲ್ಲೂ ಕರ್ನಾಟಕವನ್ನು ಮುಕ್ತಗೊಳಿಸ

* ಉಪನ್ಯಾಸಕಿ, ಇತಿಹಾಸ ವಿಭಾಗ, ರಾಣಿ ಪಾರ್ವತಿದೇವಿ ಕಾಲೇಜ್, ಬೆಳಗಾವಿ

ಲೆತ್ನಿಸಿದರು. ಈ ಪ್ರಯತ್ನದಲ್ಲಿ ಅವರು ಪೂರ್ಣ ಯಶಸ್ವಿಯಾಗದೇ ಹೋದರೂ, ಮೊದಲಬಾರಿಗೆ ತಮ್ಮ ಹಕ್ಕುಗಳೆನ್ನು ರಕ್ಷಿಸಿಕೊಳ್ಳಲು ಪ್ರಯುತ್ನಿಸಿದರು. ಅವರು ಹೊತ್ತಿಸಿದೆ ಕಿಡಿ ಮುಂದೆ ಸ್ವಾತಂತ್ರ್ಯಕ್ಕೆ ನಾಂದಿಯಾಯಿತು

ಬ್ರಿಟೀಷರು ಜಾರಿಗೆ ತಂದ ಕಾನೂನುಗಳಾದ ದತ್ತಕ ರದ್ದು ಪದ್ಧತಿ, ಇನಾಮ್ ಕಮಿಷನ್, ಆರ್ಮ್ಸ್ ಆ್ಯಕ್ಟ್ ಮುಂತಾದವುಗಳನ್ನು ಭಾರತೀಯರು ಅದರಲ್ಲೂ ಕರ್ನಾಟಕದ ಜನತೆ ಮಾನವನ ಮೂಲಭೂತ ಹಕ್ಕುಗಳ ಉಲ್ಲಂಘನೆಯ ಹೊಸಪರಿ ಎಂದು ಪರಿಗಣಿಸಿದರು. ತಮ್ಮ ಸ್ವಾಭಾವಿಕ ಹಕ್ಕುಗಳ (ದತ್ತಕ ಪದ್ಧತಿ, ಧಾರ್ಮಿಕ ಸ್ವಾತಂತ್ರ್ಯ, ಮತಾಂತರದ ವಿರುದ್ಧ ಪ್ರತಿಭಟನೆ ಇತ್ಯಾದಿ)ರಕ್ಷಣೆಯ ಯತ್ನದಲ್ಲಿ, ಕರ್ನಾಟಕದ ವಿವಿಧ ಭಾಗಗಳಲ್ಲಿ ಅಲ್ಲಲ್ಲಿ ಬ್ರಿಟೀಷರ ವಿರುದ್ಧ ದಂಗೆಗಳು ಕಾಣಿಸಿಕೊಂಡವು.

ಈ ದಿಸೆಯಲ್ಲಿ ಧೋಂಡಿಯಾ ವಾಘ್, ನಿಂಬಾಳ್ಕರನ ನೇತೃತ್ವದಲ್ಲಿ ನಡೆದ ಹಲಗಲಿಯ ಬೇಡರ ದಂಗೆ, ಸ್ತ್ರೀಶಕ್ತಿ ಸಂಕೇತವೆನಿಸಿ, ದೇಶ ಭಕ್ತಿಯೇ ಹೆಪ್ಪುಗಟ್ಟಿ ನಿಂತಂಥಹ ಕಿತ್ತೂರಿನ ರಾಣಿ ಚೆನ್ನಮ್ಮ, ಕ್ಷಾತ್ರವೀರ್ಯ, ಸ್ವಾಮಿಭಕ್ತಿಯ ಪ್ರತೀಕವಾದ ಸಂಗೊಳ್ಳಿರಾಯಣ್ಣ, ಕೊಪ್ಪಳದ ಜಮೀನುದಾರ ವೀರಪ್ಪನ್, ನರಗುಂದದ ಬಾಬಾಸಾಹೇಬ ಭಾವೆ, ಸುರಪುರದ ವೆಂಕಟಪ್ಪ ನಾಯಕ್ ಮುಂತಾದವರ ನೇತೃತ್ವದಲ್ಲಿ ನಡೆದ ದಂಗೆಗಳು ಉಲ್ಲೇಖಾರ್ಹನೀಯ.

ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ ತಾಲೂಕಿನ ಒಬ್ಬ ಕೂಲಿ ಸೈನಿಕನಾಗಿ ವೃತ್ತಿ ಪ್ರಾರಂಭಿಸಿದ ಧೋಂಡಿಯಾ ವಾಘ, ಟಿಪ್ಪು ಪತನಾನಂತರ ಬ್ರಿಟೀಷರ ವಿರುದ್ಧ ದಂಗೆ ಎದ್ದನು. ಬ್ರಿಟಿಷರ ಪ್ರಭುತ್ವದ ವಿರುದ್ಧ ೧೭೯೯ ಜೂನ್‌ನಲ್ಲಿ ಪ್ರಾರಂಭಗೊಂಡ ಧೊಂಡಿಯಾ ವಾಘನ ದಂಗೆ ೧೮೦೦ ಸೆಪ್ಟೆಂಬರ್‌ನಲ್ಲಿ ಕೊನೆಗೊಂಡಿತು. ಟಿಪ್ಪುವಿನ ಅಸಮಾನ ಪರಾಕ್ರಮದ ಪ್ರತಿಭಟನೆಯ ನಂತರ ಬ್ರಿಟೀಷರಿಗೆ ದೊರೆತ ಅಂಥದೇ ಇನ್ನೊಂದು ವಿಜಯ ಇದು. ಈ ದಂಗೆಯಲ್ಲೂ ಕೂಡ ಬ್ರಿಟಿಷ್ ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ನೀತಿಯ ವಿರುದ್ಧ ನಡೆದು ಬ್ರಿಟೀಷರ ಸಾಮ್ರಾಜ್ಯ ವಿಸ್ತರಣೆಯ ಹಕ್ಕನ್ನು ಪ್ರಶ್ನಿಸಲಾಯಿತು.

ಐಗೂರು ವೆಂಕಟಾದ್ರಿನಾಯಕ ತನ್ನ ರಾಜ್ಯವನ್ನು ವಿಸ್ತರಿಸುವ ಪ್ರಯತ್ನವನ್ನು ಬ್ರಿಟೀಷರು ಪ್ರಶ್ನಿಸಿದಾಗ, ತನ್ನ ಹಕ್ಕುಬಾಧ್ಯತೆಗೆ ಒದಗಿದ ಧಕ್ಕೆಯನ್ನು ಪ್ರತಿಭಟಿಸಿ ಬ್ರಿಟಿಷರ ವಿರುದ್ಧ ಹೋರಾಡಿದನು. ಆದರೆ ಮೈಸೂರಿನ ರಾಜ ಮತ್ತು ದಿವಾನ ನೆರವಿನಿಂದ ಬ್ರಿಟೀಷರು ವೆಂಕಟಾದ್ರಿಯನ್ನು ಸದೆಬಡೆದರು.

ಬೆಳಗಾವಿ ಜಿಲ್ಲೆಯ ಕಿತ್ತೂರ ದೇಸಗತಿಯ ರಾಣಿ ಚೆನ್ನಮ್ಮ ತನ್ನ ಹಕ್ಕಿಗಾಗಿ ಬ್ರಿಟೀಷರ ವಿರುದ್ಧ ಹೊರಾಡಿದ ಪ್ರಥಮ ಭಾರತೀಯ ಮಹಿಳೆ. ತನ್ನ ಪತಿ ಶಿವಲಿಂಗ ರುದ್ರಸರ್ಜ ೧೮೨೪ರಲ್ಲಿ ಸಂತಾನವಿಲ್ಲದೇ ಮೃತನಾದಾಗ, ವಿಧವೆ ಚೆನ್ನಮ್ಮ ಒಬ್ಬ ಬಾಲಕನನ್ನು ದತ್ತು ಸ್ವೀಕರಿಸಬಯಸಿದಳು. ಸಿಂಹಾಸನಕ್ಕೆ ದತ್ತಕಪುತ್ರನನ್ನು ವಾರುಸದಾರನೆಂದು ಒಪ್ಪಲು ಬ್ರಿಟೀಷರು ನಿರಾಕರಿಸಿದ್ದು ವೈಮನಸ್ಯಕ್ಕೆ ಕಾರಣವಾಯಿತು. ಆಕೆ ದತ್ತಕ ತೆಗೆದುಕೊಳ್ಳುವುದು ತನ್ನ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿ ಎಂದೂ, ಅದನ್ನು ನಿರಾಕರಿಸುವುದು ತನ್ನ ಮೂಲಭೂತ ಹಕ್ಕಿನ ಪ್ರತ್ಯಕ್ಷ ಉಲ್ಲಂಘನೆ ಎಂದು ಚಿಂತಿಸಿ, ತನ್ನ ಹಕ್ಕಿನ ರಕ್ಷಣೆಗಾಗಿ ಬ್ರಿಟೀಷರ ವಿರುದ್ಧ ಯುದ್ಧ ಮಾಡಲು ನಿರ್ಧರಿಸಿ, ತನ್ನ ಸರ್ವಸ್ವವನ್ನು ಪಣಕ್ಕಿಟ್ಟು ಬ್ರಿಟೀಷ ಸೈನ್ಯವನ್ನೆದುರಿಸಿದಳು. ೧೮೨೪ರ ಡಿಸೆಂಬರ್‌ನಲ್ಲಿ ಕೆಲವು ದೇಶದ್ರೋಹಿಗಳ ನೆರವಿನಿಂದ ಬ್ರಿಟೀಷರು ಚೆನ್ನಮ್ಮನನ್ನು ಸೆರೆಹಿಡಿದು. ಬೈಲ್ ಹೊಂಗಲ ಕೋಟೆಯಲ್ಲಿಟ್ಟರು. ಬ್ರಿಟೀಷರ ಕಪಿಮುಷ್ಠಿಯಿಂದ ಹೊರಬರಲು ಯತ್ನಿಸಿ, ದತ್ತಕ ತೆಗೆದುಕೊಳ್ಳುವುದು ತನ್ನ ಸ್ವಾಭಾವಿಕ ಮತ್ತು ಮೂಲಭೂತ ಹಕ್ಕೆಂದು ವಾದಿಸಿ, ಬ್ರಿಟೀಷರ ವಿರುದ್ಧ ಹೋರಾಡಿ, ದೂರ ಸ್ಪರ್ಷಿಯಾದ ಪರಿಣಾಮಗಳನ್ನು ಸೃಷ್ಟಿಸಿದ ಪ್ರಥಮ ಭಾರತೀಯ ಮಹಿಳೆ ಚೆನ್ನಮ್ಮ.

ಸಂಗೊಳ್ಳಿಗ್ರಾಮದ ತಳವಾರನಾದ ರಾಯಣ್ಣ ಹಿಂದೆ ಕಿತ್ತೂರಿನ ಸೇವೆಯಲ್ಲಿದ್ದನು. ಕಿತ್ತೂರಿನ ಸಿಂಹಾಸಹನಕ್ಕೆ ದತ್ತು ಪುತ್ರನನ್ನು ವಾರಸುದಾರನನ್ನಾಗಿ ತರುವ ಆ ಸಂಸ್ಥಾನದ ಮೂಲಭೂತ ಹಕ್ಕನ್ನು ಎತ್ತಿ ಹಿಡಿದು ಬ್ರಿಟೀಷರ ವಿರುದ್ಧ ದಂಗೆಯೆದ್ದನು. ಅವನ ಬ್ರಿಟೀಷ್ ವಿರೋಧಿ ಭಾವನೆಗಳು ರೈತವರ್ಗದ ಪ್ರೋತ್ಸಾಹವನ್ನು ಪಡೆಯಿತು. ಮತ್ತೆ ದೇಶದ್ರೋಹಿಗಳ ನೆರವಿನಿಂದ (ಸಂಗೊಳ್ಳಿ ಜಮಿನ್ದಾರ ಲಿಂಗನಗೌಡ ಲಕ್ಕಪ್ಪ) ರಾಯನನ್ನು ಸೆರೆಹಿಡಿದು ನೇಣಿಗೆ ಹಾಕಲಾಯಿತು.

೧೮೫೭ರಲ್ಲಿ ಸಂಭವಿಸಿದ ಕ್ರಾಂತಿಯ ಪರಿಣಾಮ ಕರ್ನಾಟಕ ದಲ್ಲಿಯೂ ಪ್ರತಿಧ್ವನಿಸಿತು. ಇದು ಕಾಣಿಸಿಕೊಂಡಿದ್ದು ಸಮಾಜದ ಮೇಲುಸ್ತರದಲ್ಲಿ - ಅಂದರೆ ಜಮೀನ್ದಾರರೂ, ಸ್ಥಳೀಯ ದೊರೆಗಳು ಮತ್ತು ಬ್ರಿಟೀಷ ಸರಕಾರದ ಸೇವೆಯಲ್ಲಿದ್ದ ಅಧಿಕಾರಿಗಳು ಮುಂತಾದವರಲ್ಲಿ. ೧೮೫೭-೫೮ರಲ್ಲಿ ಸುರಪುರ ಮತ್ತು ನರಗುಂದಗಳ ರಾಜರು ಶಸ್ತ್ರಾಸ್ತ್ರಗಳನ್ನು ಹೊಂದಿರುವುದಕ್ಕೆ ಅಡ್ಡಿಯಾದಾಗ ಜಾತಿ ಮತ್ತು ವೃತ್ತಿಯಿಂದ ಬೇಡರಾದ ತಮ್ಮ ಮೂಲಭೂತ ಹಕ್ಕೆಂದು ವಾದಿಸಿ ಶಸ್ತ್ರಾಸ್ತ್ರ ನಿಷೇಧ ಕಾಯ್ದೆಯ ವಿರುದ್ಧ ಪ್ರತಿಭಟನೆಯಾಗಿ ನಿಂಬಾಳ್ಕರನ ನೇತೃತ್ವದಲ್ಲಿ ಹಲಗಲಿಯ ಬೇಡರು ದಂಗೆ ಎದ್ದರು. ತಮ್ಮ ಮೂಲಭೂತ ಹಕ್ಕುಗಳ ರಕ್ಷಣೆಗಾಗಿ ಅವರು ಶಸ್ತ್ರಾಸ್ತ್ರ ನಿಷೇಧ ಕಾನೂನನ್ನು ಉಲ್ಲಂಘಿಸಿದರು. ಈ ದಂಗೆಯೂ ಬ್ರಿಟೀಷರಿಂದ ಸದೆ ಬಡಿಯಲ್ಪಟ್ಟಿತು.

ನರಗುಂದದ ದೊರೆ ಬಾಬಾಸಾಹೇಬ ಭಾವೆ ಕರ್ನಾಟಕ ಭಾಗದಲ್ಲಿ ತನ್ನ ಹಕ್ಕುಗಳ ರಕ್ಷಣೆಗಾಗಿ ಹೋರಾಡಿದ ಮತ್ತೊಬ್ಬ ದೊರೆ. ದತ್ತಕ ರದ್ದು ಪದ್ಧತಿ ವಿರೋಧಿಸಿ, ಬಾಬಾಸಾಹೇಬ್ ಭಾವೆ ಬ್ರಿಟಿಷರನ್ನು ಎದುರಿಸಿದನು. ಆದರೆ ಬಲವಾದ ಬ್ರಿಟೀಷ ಸೇನೆ ನರಗುಂದದ ಬಂಡಾಯವನ್ನು ಅಡಗಿಸುವಲ್ಲಿ ಯಶಸ್ವಿ ಯಾಯಿತು.

ಈ ರೀತಿಯಾಗಿ ೧೮೬೯ರಿಂದ ೧೮೫೭ರ ವರೆಗೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಹಲವಾರು ನಾಯಕರ, ಪಾಳೆಯಗಾರರ, ಸೈನಿಕರ, ಜಮಿನ್ದಾರರ ನೇತೃತ್ವದಲ್ಲಿ ಬ್ರಿಟೀಷರ ವಿರುದ್ಧ ನಡೆಸಿದ ಅನೇಕ ಹೋರಾಟಗಳು, ಬ್ರಿಟೀಷರು ಭಾರತೀಯರ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಲೆತ್ನಿಸಿ ಜಾರಿಗೆ ತಂದ ಒಂದಿಲ್ಲೊಂದು ಕಾನೂನನ್ನು ಉಲ್ಲಂಘಿಸಿ, ಆ ಮೂಲಕ ಸ್ವಾಭಾವಿಕ, ಮೂಲಭೂತ ಮತ್ತು ಮಾನವ ಹಕ್ಕುಗಳ ರಕ್ಷಣೆಗಾಗಿ ನಡೆಸಿದ ಹೋರಾಟ ಗಳಾಗಿವೆ. ಈ ಹೋರಾಟಗಳು ಪರದೇಶಿಯರ ವಿರುದ್ಧ ನಡೆದವುಗಳಾದ್ದರಿಂದ ಎಷ್ಟೋ ಸಲ ಈ ದಂಗೆಗಳು, ಹೋರಾಟಗಳು, ಬಂಡಾಯಗಳು ಸ್ವಾತಂತ್ರ್ಯ, ದೇಶಭಕ್ತಿ, ರಾಷ್ಟ್ರ ಪ್ರೇಮ ಮುಂತಾದವುಗಳ ಬಣ್ಣ ಪಡೆದರೂ, ಇವು ಮೂಲತಃ ಮಾನವನ ಮೂಲಭೂತ ಹಕ್ಕುಗಳ ರಕ್ಷಣೆಯ ಉದ್ದೇಶಕ್ಕಾಗಿಯೇ ನಡೆಸಿದ ಹೋರಾಟಗಳಾಗಿವೆ.

ಕರ್ನಾಟಕದಲ್ಲಿ ವಿವಿಧ ವರ್ಗಗಳ ಜನ, ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಿ, ಅವುಗಳನ್ನು ಸಂರಕ್ಷಿಸುವ ದಿಸೆಯಲ್ಲಿ ಮಾಡಿದ ತಮ್ಮದೇ ಆದ ಪ್ರಯತ್ನದ ಮೂಲವನ್ನು ಈ ದಂಗೆಗಳಲ್ಲಿ ಕಾಣಬಹುದು.

ರಾಷ್ಟ್ರೀಯವಾದ, ರಾಷ್ಟ್ರೀಯತೆ, ದೇಶಪ್ರೇಮ, ಬ್ರಿಟೀಷರ ವಸಾಹತುಶಾಹೀ ನೀತಿಯ ವಿರುದ್ಧ ಎತ್ತಿದ ಕೂಗು – ಇವುಗಳೆಲ್ಲ ಕ್ಕಿಂತ ಮಿಗಿಲಾಗಿ ತಮ್ಮ ಸ್ವಾಭಾವಿಕ, ಮೂಲಭೂತ ಮತ್ತು ಮಾನವ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳುವುದಕ್ಕೋಸ್ಕರ ಈ ದಂಗೆಗಳು ನಡೆದವು. ಆದರೆ ಮುಂದೆ ಇವೇ ದಂಗೆಗಳು, ಭಾರತದ ಸ್ವತಂತ್ರ್ಯ ಸಂಗ್ರಾಮಕ್ಕೆ ಭದ್ರ ಬುನಾದಿಯನ್ನು ಒದಗಿಸುವುದರ ಜೊತೆಗೆ ಭಾರತದ ಸಂವಿಧಾನದಲ್ಲಿ ಮೂಲ ಭೂತ ಹಕ್ಕುಗಳಿಗೆ ಮುಖ್ಯ ಸ್ಥಾನ ಒದಗಿಗೆ ಕೊಡುವುದರಲ್ಲಿ ಮಹತ್ವದ ಪಾತ್ರವಹಿಸಿದವು.

## ಆಧಾರ ಸೂಚಿ


*೧. ಹಾಲಪ್ಪ ಜಿ. ಎಸ್ : *ಫ್ರಿಡಮ್ ಮೂವ್‌ಮೆಂಟ್ ಇನ್ ಕರ್ನಾಟಕ*

*೨. ದೇಸಾಯಿ ಪಿ. ಬಿ. : *ಹಿಸ್ಟರಿ ಆಫ್ ಕರ್ನಾಟಕ*

*೩. ಶರ್ಮಾ ತಿ. ತಾ : *ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ*

*೪. *ಮೈಸೂರ್‌ಗೆಜೆಟಿಯರ್* (ಪೊಲಿಟಿಕಲ್) : (ಸಂ.) ಹಯವದನರಾವ್ ಸಿ

*೫. *ಕರ್ನಾಟಕ ಚರಿತ್ರೆ* (ಸಂಪುಟ ೬) : (ಸಂ.) ಪ್ರೊ. ಷೇಕ್ ಅಲಿ. ಬಿ.

*೬. ''ರೈಟ್ಸ ಆಫ್ ಮ್ಯಾನ್''

**ಹೆಚ್. ಈ. ಬಸವರಾಜಪ್ಪ** *

# ಆಧುನಿಕ ಕರ್ನಾಟಕದ ಭೂ ಸುಧಾರಣೆಯ ಅಧ್ಯಯನ

ಈ ಪ್ರಬಂಧದಲ್ಲಿ ಕರ್ನಾಟಕದ ಭೂ ಮಸೂದೆಗಳ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸುವ ಉದ್ದೇಶವಿದೆ. ಹಿಂದುಳಿದ ವರ್ಗಗಳ ಏಳಿಗೆಯಲ್ಲಿ ಭೂ ಮಸೂದೆಯ ಪಾತ್ರವನ್ನು ಇಲ್ಲಿ ಚರ್ಚಿಸಲಾಗುವುದು. ಭೂ ಮಸೂದೆಗಳು ಕರ್ನಾಟಕ ಭೂ ಹಿಡುವಳಿದಾರರು, ಗೇಣಿದಾರರ ಮೇಲೆ ಬೀರಿದ ಪರಿಣಾಮಗಳನ್ನು ಪ್ರಬಂಧದ ಕೊನೆಯ ಭಾಗದಲ್ಲಿ ವಿವರಿಸಲಾಗಿದೆ.

ಹಿಂದಿನ ಮೈಸೂರು ರಾಜ್ಯ, ಕೊಡಗು, ಮುಂಬಯಿ, ಚೆನ್ನೈ, ಹೈದರಾಬಾದ್ ಪ್ರಾಂತ್ಯಗಳು ಇವುಗಳನ್ನೆಲ್ಲ ಸೇರಿಸಿ ಹೊಸ ಮೈಸೂರು ರಾಜ್ಯವನ್ನು ೧೯೫೬ ನವಂಬರ್ ೧ ರಲ್ಲಿ ಭಾಷೆಯ ಆಧಾರದ ಮೇಲೆ ಪುನರ್ ರಚನೆ ಮಾಡಲಾಯಿತು. ನವಂಬರ್ ೧, ೧೯೭೩ರಲ್ಲಿ ಕರ್ನಾಟಕವೆಂದು ಪುನರ್ ನಾಮಕರಣ ಮಾಡಲಾಯಿತು. ಹೀಗೆ ೧೯೫೬ರಲ್ಲಿ ರಾಜ್ಯವನ್ನು ಪುನರ್ ರೂಪಿಸಿದ ನಂತರ ರಾಜ್ಯದ ನಾನಾ ಭಾಗಗಳಲ್ಲಿ ಜಾರಿಯಲ್ಲಿದ್ದ, ಕಾಯಿದೆ ನಿಬಂಧನೆಗಳನ್ನೆಲ್ಲ ಕ್ರೋಢೀಕರಿಸಿ ಒಂದೇ ರೀತಿಯಾದ ಭೂ ಮಸೂದೆಯನ್ನು ರೂಪಿಸಿದರು.

**ಭೂ ಸುಧಾರಣೆಯ ಚಾರಿತ್ರಿಕ ಹಿನ್ನೆಲೆ:**

ಕರ್ನಾಟಕ ಬಹುಭಾಗವನ್ನು ತನ್ನ ಆಳ್ವಿಕೆಯ ಅಧೀನಕ್ಕೆ ಸೇರಿಸಿಕೊಂಡಿದ್ದ ಹೆಮ್ಮೆ ವಿಜಯನಗರ ಸಾಮ್ರಾಜ್ಯಕ್ಕೆ ಸೇರುತ್ತದೆ. ಕನ್ನಡ ನಾಡಿನ ಅರಸರೆಂಬ ಹೆಗ್ಗಳಿಕೆಗೂ ಈ ಸಾಮ್ರಾಟರು ಪಾತ್ರರಾಗಿದ್ದಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ಸಾಮ್ರಾಟನು ಭೂಮಿಗೆಲ್ಲ ಒಡೆಯ, ಅವನು ತನ್ನ ಅಶ್ರಿತರಿಗೆ ಭೂಮಿಯನ್ನು ಹಂಚುತ್ತಿದ್ದನು. *೧ ಹೀಗೆ ರಾಜನಿಂದ ಭೂಮಿಯನ್ನು ಪಡೆದವರನ್ನು ನಾಯಕರೆನ್ನಲಾಗುತ್ತಿತ್ತು. ಅವರ ಪ್ರದೇಶವನ್ನು ಅಮರಂ ಅಥವ ನಾಯಕಟ್ಟನಂ ಎಂದು ಕರೆಯಲಾಗುತ್ತಿತ್ತು. ವೆಂಕಟರಮಣಯ್ಯ ನವರ ಪ್ರಕಾರ ಒಂದು ನಿಗಧಿಯಾದ ಆದಾಯವನ್ನು ತರುತ್ತಿದ್ದ ಪ್ರದೇಶವನ್ನು ಒಬ್ಬ ಸೈನಿಕ ನಾಯಕನಿಗೆ ವಿಜಯನಗರ ರಾಜರು ಕೊಡುತ್ತಿದ್ದುದು ಅಮರ ನಾಯಂಕರ ಪದ್ಧತಿಯಾಗಿತ್ತು. ಅವರು ಕೇಂದ್ರ ಸರ್ಕಾರಕ್ಕೆ ಒಂದು ನಿಗದಿಯಾದ ವಾರ್ಷಿಕ ಹಣವನ್ನು ಸಂದಾಯ ಮಾಡಬೇಕಾಗಿತ್ತು. ಈ ರೀತಿಯಾದ ವ್ಯವಸ್ಥೆ ವಿಜಯನಗರ ಸಾಮ್ರಾಟರ ಆಳ್ವಿಕೆಗೊಳಪಟ್ಟ ಎಲ್ಲಾ ಪ್ರದೇಶಗಳಲ್ಲೂ ಕಂಡು ಬರುತ್ತಿದೆ. ಇದನ್ನು ನಂತರದ ಅನೇಕ ರಾಜರು ಅನುಸರಿಸಿರುವುದು ಕಂಡು ಬರುತ್ತದೆ. ಈ ವೇಳೆಯಲ್ಲಿ ರೈತರು ತಮ್ಮ ಸ್ವಂತ ಭೂಮಿಯನ್ನು ಹೊಂದಿದ್ದರು. ರೈತರಿಗೆ ಅವರದೇ ಆದ ಸ್ವತಂತ್ರವೂ ಆ ಭೂಮಿಯ ಮೇಲಿದ್ದಿತ್ತು. ರಾಜನು ಎಂದೂ ಅಧಿಕಾರ ದರ್ಪದಿಂದ ರೈತರ ಭೂಮಿ ಕಿತ್ತುಕೊಂಡಿರುವುದು ಕಂಡು ಬರುವುದಿಲ್ಲ. ರೈತರಿಗೆ ತಮ್ಮ ಸ್ವಂತ ಭೂಮಿಯನ್ನು ಮಾರುವ ದಾನದತ್ತಿ ಮಾಡುವ ಅಧಿಕಾರವಿತ್ತು. ಯಾವ ರೀತಿಯಾದ ಭೂಮಿ ಇದೆ ಎಂಬುದಕ್ಕೆ ಭೂಮಿಗೆ ಸಂಬಂಧಿಸಿದ ದಾಖಲೆಗಳನ್ನು ಇಡಲಾಗುತ್ತಿತ್ತು. *೨ ಭೂಮಿಯನ್ನು ಸಾಮಾನ್ಯವಾಗಿ ಗದ್ಯಾಣಗಳ ಮೂಲಕ ಕೊಳ್ಳುತ್ತಿದ್ದರು. ಈ ವ್ಯವಸ್ಥೆ ಕೆಳದಿಯನ್ನಾಳಿದ ನಾಯಕರ ಕಾಲದಲ್ಲೂ ಕಂಡು ಬರುತ್ತದೆ.

ಶಿವಪ್ಪ ನಾಯಕನು ಕೆಲವೊಂದು ಸುಧಾರಣೆಗಳನ್ನು ಜಾರಿಗೆ ತಂದನು. ಅದಕ್ಕೆ **ಶಿವಪ್ಪನಾಯಕನ ಶಿಸ್ತು** ಎಂದು ಕರೆಯಲಾಗುತ್ತಿತ್ತು.

**ಮೈಸೂರು ಸಂಸ್ಥಾನದಲ್ಲಿ ಭೂ ವ್ಯವಸ್ಥೆ**

ಮೈಸೂರು ಸಂಸ್ಥಾನದಲ್ಲಿ ಭೂ ಸುಧಾರಣೆಗೆ ಸಂಬಂಧಿಸಿದ ವಿಚಾರಗಳು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ (೧೬೭೨-೧೭೦೪) ಕಂಡು ಬರುತ್ತದೆ. ಅವರು ಪಾಳೇಗಾರರು ನಡೆಸುತ್ತಿದ್ದ ದರ್ಪವನ್ನು ಹತ್ತಿಕ್ಕಿ ಅವರು ನೆಲೆಯೂರಿದ್ದ ಹಳ್ಳಿಗಳನ್ನು ಪಾಳೆಪಟ್ಟುಗಳನ್ನು ಬಿಟ್ಟು ರಾಜಧಾನಿಗಳಲ್ಲಿ ನೆಲೆಸುವಂತೆ ಮಾಡಿ ಅವರನ್ನು ಗದ್ದುಗೆಯಿಂದ ಕೆಳಗಿಳಿಸಿದರು. ಆತನ ಗದಾ ಪ್ರಹಾರ ಪಾಳೇಗಾರರಿಗೆ ಮಾತ್ರ ಮಿತಿಗೊಳ್ಳದೆ ದೊಡ್ಡ ಭೂ ಹಿಡುವಳಿ

* ಸಂಶೋಧಕರು, ಚರಿತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಾರರ ಮೇಲೂ ಎರಗಿತು. ಬೆಳೆದ ಬೆಳೆಯಲ್ಲಿ ಸುಮಾರು ಶೇಖಡ ೪೦ ಭಾಗದ ಬೆಳೆಯನ್ನು ರಾಜ್ಯದ ಒಡೆತನದ ಬೊಕ್ಕಸಕ್ಕೆ ಒಪ್ಪಿಸಬೇಕಾಗಿತ್ತು. ೧೭೮೩ರಲ್ಲಿ ಟಿಪ್ಪುಸುಲ್ತಾನ ಪಾಳೇಗಾರರ, ದೊಡ್ಡ ಜಮಿನ್ದಾರರ ಅಧಿಕಾರವನ್ನು ಸಂಪೂರ್ಣವಾಗಿ ನಾಶ ಗೊಳಿಸಿದ. ಅವರ ಜಮೀನನ್ನು ರೈತರಿಗೆ ಗೇಣಿಗೆ ಕೊಡಲಾಗುತ್ತಿತ್ತು. ಅಥವ ಕಂದಾಯ ಇಲಾಖೆಯ ಆಡಳಿತಕ್ಕೆ ಒಳಪಡಿಸಲಾಯಿತು. ಮೈಸೂರು ಸಂಸ್ಥಾನದಲ್ಲಿ ಸಾಮಾನ್ಯವಾಗಿ ಭೂ ಹಿಡುವಳಿಯನ್ನು ಯಾವಾಗಲೂ ಬಹಿರಂಗವಾದ ಹರಾಜಿನ ಮೂಲಕ ಮಾರಾಟ ಮಾಡಲಾಗುತ್ತಿತ್ತು.* ಈ ಅಧಿಕಾರ ಡೆಪ್ಯೂಟಿ ಕಮಿಷನರಿಗೆ ಅದರ ಸಂಬಂಧಿಸಿದ ಅಧಿಕಾರಿಗಳಿಗೆ ಇತ್ತು. ಅವರು ಒಂದು ನಿಗದಿಯಾದ ಸರ್ಕಾರಿ ಕಿಮ್ಮತ್ತನ್ನು ಗೊತ್ತು ಮಾಡಬಹುದಾಗಿತ್ತು. ಹುಟ್ಟುವಳಿಯ ಬಾಬಿನಲ್ಲಿ ನಷ್ಟವಾಗದಂತೆ ನೋಡಿಕೊಳ್ಳುವ ಉದ್ದೇಶದಿಂದಲೂ, ಹರಾಜು ನಡೆಯುವ ವಿಷಯ ಎಲ್ಲರಿಗೂ ಗೊತ್ತಾಗುವಂತೆ ಪ್ರಕಟಿಸುತ್ತಿದ್ದರು. ಹರಾಜನ್ನು ಸಾಕಷ್ಟು ಬಹಿರಂಗವಾಗಿ ನಡೆಸುತ್ತಿದ್ದರು. ಹರಾಜು ಕ್ರಮವಾಗಿ ನಡೆದು ಖಾಯಂ ಮಾಡಲ್ಪಟ್ಟ ನಂತರ ಅದನ್ನು ರದ್ದುಗೊಳಿಸಲು ಸಾಧ್ಯವಿರಲಿಲ್ಲ. ಹರಾಜು ನಡೆದ ನಂತರ ಆ ಜಮೀನಿಗೆ ಹೆಚ್ಚಿಗೆ ಬೆಲೆಯನ್ನು ಕೊಡುವುದಾಗಿ ಯಾರಾದರೂ ಬಂದರೂ ಹರಾಜು ರದ್ದಾಗುತ್ತಿರಲಿಲ್ಲ. ಈಗಾಗಿ ಮೈಸೂರು ಸಂಸ್ಥಾನದಲ್ಲಿ ಮಲೇನಾಡಿನ ಪ್ರದೇಶಗಳಾದ ಶಿವಮೊಗ್ಗ ಚಿಕ್ಕಮಂಗಳೂರು ಮುಂತಾದ ಜಿಲ್ಲೆಗಳಲ್ಲಿ ಪ್ರಬಲ ಜಮೀನ್ದಾರರು ಜನ್ಮ ತಾಳಲು ಈ ವ್ಯವಸ್ಥೆಯೇ ಕಾರಣವಾಗಿತ್ತು.

### ಬ್ರಿಟಿಷ್ ಆಡಳಿತ ( ೧೮೩೧-೧೮೮೧ )

ಬ್ರಿಟಿಷ್ ಆಡಳಿತಾವಧಿಯಲ್ಲಿ ಜಮಿನ್ದಾರಿ ಪದ್ಧತಿಯ ಸ್ಥಾನದಲ್ಲಿ ಅಸ್ತಿತ್ವಕ್ಕೆ ಬಂದ ರೈತ್ವಾರಿ ವ್ಯವಸ್ಥೆ ಅಸಂಖ್ಯ ಭೂ ಒಡೆಯರನ್ನು ಸೃಷ್ಟಿಸಿತು. ಮತ್ತು ಸರ್ಕಾರ ಜಮೀನ್ದಾರನ ಸ್ಥಾನದಲ್ಲಿ ಬಂದಿತು. ಪರಿಣಾಮವಾಗಿ ಸರ್ಕಾರಿ ಅಧಿಕಾರಿಗಳು ಪ್ರತಿ ರೈತನಿಂದ ನೇರ ತೆರಿಗೆ ವಸೂಲಿ ಮಾಡುವಂತಾಯಿತು.* ಹಿಡುವಳಿದಾರನು ಸರ್ಕಾರದೊಂದಿಗೆ ನೇರ ವ್ಯವಹಾರ ನಡೆಸುತ್ತಿದ್ದು. ತನ್ನ ಸ್ವಂತ ಹಿಡುವಳಿಗೆ ಮಾತ್ರ ಆತ ಹೊಣೆಗಾರನಾಗಿದ್ದನು, ಆತನ ಸ್ವಾಧೀನದಲ್ಲಿದ್ದ ಸರ್ವೆ ನಂಬರಿನ ಹೊಲದ ಅಥವ ಅದರ ಭಾಗದ ಕಂದಾಯ ಹಾಗೂ ವಿಸ್ತೀರ್ಣಗಳನ್ನು ಬರೆದಿಡುವ ಒಂದು 'ಪಟ್ಟ' ಎಂಬ ದಾಖಲೆಯನ್ನು ಕೊಡಲಾಯಿತು. ಅಲ್ಲದೆ ಇದು ಹಲವು ಬಗೆಯ ಸುಧಾರಣೆಗಳಿಗೂ ದಾರಿ ಮಾಡಿತು. ಏಕೆಂದರೆ ಈಗ ಪ್ರತಿ ಭೂಭಾಗವನ್ನು ಅಳತೆ ಮತ್ತು ಸರ್ವೆ ಮಾಪನವನ್ನು ಮಾಡುವುದು ಅವುಗಳ ಗಡಿಯನ್ನು ನಿರ್ಧರಿಸುವುದು ಅವಶ್ಯವಾಯಿತು.

ಇದು ಭೂ ನಕ್ಷೆ, ಗ್ರಾಮ ನಕ್ಷೆ ಮತ್ತು ತಾಲ್ಲೂಕು ನಕ್ಷೆಗಳ ತಯಾರಿಗೂ ದಾರಿ ಮಾಡಿತು. ವೈವಿಧ್ಯಮಯವಾದ ಈ ಕಾರ್ಯ ನಿರ್ವಹಣೆಯನ್ನು ಡಿಪಾರ್ಟ್‌ಮೆಂಟ್ ಆಫ್ ಸರ್ವೇಯರ್ ಜನರಲ್‌ಗೆ ವಹಿಸಲಾಗಿತ್ತು. ಆದರೂ, ಬಳ್ಳಾರಿ ಸೇರಿದಂತೆ ಹಳೆಯ ಮೈಸೂರು ಗೇಣಿದಾರರ ಸಂರಕ್ಷಣೆಯು ಅಗತ್ಯವಾದಾಗ, ಹಳೆಯ ಮೈಸೂರು ಪ್ರದೇಶದಲ್ಲಿ ಗೇಣಿದಾರಿಯನ್ನು ಕುರಿತು ಪ್ರತ್ಯೇಕ ಶಾಸನವೇ ಇರಲಿಲ್ಲ. ನ್ಯಾಯ ಸಮಸ್ಯೆ ಮತ್ತು ಒಳ್ಳೆಯ ಆತ್ಮ ಸಾಕ್ಷಿಯ ದೃಷ್ಟಿಯಿಂದ ನ್ಯಾಯಾಲಯಗಳು ಆಸ್ತಿ ಪರಭಾರೆ ಶಾಸನದ (೧೯೧೮ ೦೪ನೇ ಶಾಸನ) ಕಾಲಂಗಳನ್ನು ಕೃಷಿ ಸಾಗುವಳಿಗಳಿಗೆ ಅನ್ವಯಿಸುತ್ತಿದ್ದವು. ಭೂ ಮಾಲೀಕರ ಮತ್ತು ಗೇಣಿದಾರರ ನಡುವಿನ ಬಾಂಧವ್ಯಕ್ಕೆ ಅನ್ವಯವಾಗುವ ಇತರ ಕಾಲಂಗಳು ಮೈಸೂರು ಭೂ ಕಂದಾಯ ಸಮಿತಿಯ ಏಳನೇ ಅಧ್ಯಯನದಲ್ಲಿ ಮಾತ್ರ ಇದ್ದುವು.

### ಮದ್ರಾಸ್ ಪ್ರದೇಶ

ಮದ್ರಾಸ್ ಜಮೀನ್ದಾರಿ ಪದ್ಧತಿಯ ಸ್ಥಿರ ಆಸ್ತಿ ಭೂಶಾಸನ ೧೯೦೮ರ ಪ್ರಕಾರ ಈ ಬಗೆಯ ಭೂ ಸಾಗುವಳಿ ಪದ್ಧತಿ ಸ್ಥಿರ ಆಸ್ತಿಗೆ ಸಂಬಂಧಿಸಿದಂತೆ ಈ ಪ್ರಾಂತ್ಯದಲ್ಲಿ ಚಲಾವಣೆಯಲ್ಲಿತ್ತು. ಈ ಪದ್ಧತಿಯಲ್ಲಿ ಕಂದಾಯ ವ್ಯವಸ್ಥೆ ಮತ್ತು ಸ್ಥಿರ ಆಸ್ತಿ ಒಡೆಯರಿಗೆ ಸಂಬಂಧಿಸಿರುತ್ತಿತ್ತು. ೧೮೦೨ರ ಖಾಯಂ ಭೂ ಕಂದಾಯ ವ್ಯವಸ್ಥೆಯ ವಿನಿಮಯ ಕಾರಾರಿನ ಪ್ರಕಾರವೇ ಈ ಪ್ರಾಂತ್ಯದಲ್ಲಿ ಮೂಲ ಸ್ಥಿರ ಆಸ್ತಿಗಳನ್ನು ಸೃಜಿಸಲಾಯಿತ್ತು.*

### ಹೈದರಾಬಾದ್ ಕರ್ನಾಟಕ

೧೯೪೮ಕ್ಕಿಂತ ಮೊದಲು ಹೈದರಾಬಾದ್ ಸಂಸ್ಥಾನವು ತನ್ನದೇ ಆದ ಪ್ರತ್ಯೇಕವಾದ ಭೂ ಶಾಸನವನ್ನು ಹೊಂದಿತ್ತು. ಈ ಪ್ರದೇಶ ಭಾರತದ ಒಕ್ಕೂಟಕ್ಕೆ ಸೇರಿದ ನಂತರ ರಾಜ್ಯ ಸರ್ಕಾರ ೧೯೪೮ರಲ್ಲಿ ಕೃಷಿ ಸುಧಾರಣಾ ಸಮಿತಿಯನ್ನು ನೇಮಿಸಿತು. ಈ ಸಮಿತಿಯ ಶಿಫಾರಸ್ಸುಗಳನ್ನು ಆಧರಿಸಿ ೧೯೫೦ರ ಹೈದರಾಬಾದ್ ಗೇಣಿದಾರಿ ಮತ್ತು ಕೃಷಿ ಭೂಮಿಗಳ ಶಾಸನವನ್ನು ಜಾರಿ ಮಾಡಲಾಯಿತು. ಅದು ಗೊತ್ತುಪಡಿಸಿದ ಅ ಅವಧಿಯೊಳಗೆ *ನಿರಂತರ* ಆರು ವರ್ಷ ಜಮೀನಿನಲ್ಲಿ ಕೃಷಿ ಮಾಡಿದ *ಗೇಣಿದಾರರಲ್ಲೆ ರಕ್ಷಿತ ಗೇಣಿದಾರರೆಂದು* ಈ ಶಾಸನ ಘೋಷಿಸಿತು.

### ಮುಂಬೈ ಪ್ರದೇಶ

ಮುಂಬೈಯ ಭೂ ಕಂದಾಯ ಸಮಿತಿಯ ೮೩ನೇ ಕಾಲಂ ವರತಾಗಿ ಮುಂಬಯಿ ರಾಜ್ಯದಲ್ಲಿ ಭೂ ಮಾಲೀಕ ಹಾಗೂ ಗೇಣಿದಾರರ ನಡುವಿನ ಸಂಬಂಧಗಳನ್ನು ಕ್ರಮಬದ್ಧಗೊಳಿಸುವ ಯಾವ ಶಾಸನವೂ ೧೯೩೯ ಕ್ಕಿಂತ ಮುಂಚೆ ಇರಲಿಲ್ಲ. ಗೇಣಿದಾರರಿಗೆ ಹಿಡುವಳಿಯ ಅಥವ ಗೇಣಿದಾರಿಕೆಯ ಅವಧಿಯ ಭದ್ರತೆಯನ್ನು

ಒದಗಿಸುವುದಕ್ಕಾಗಿ ೧೯೬೬ರ ಮುಂಬಯಿ ಗೇಣಿಶಾಸನವನ್ನು ಕಾನೂನು ಪುಸ್ತಕಕ್ಕೆ ಸೇರಿಸಲಾಯಿತು.

### ಕಾಗೋಡು ಸತ್ಯಾಗ್ರಹ

ಕಾಗೋಡು ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಒಂದು ಸಣ್ಣ ಹಳ್ಳಿ. ಕಾಗೋಡಿನ ಗೇಣಿದಾರ ರೈತರು ಆ ಹಳ್ಳಿಯ ಭೂ ಮಾಲೀಕರ ಮತ್ತು ಮೈಸೂರು ಸರ್ಕಾರದ ವಿರುದ್ಧ ೧೯೫೦-೫೧ರಲ್ಲಿ ಸುಮಾರು ಒಂದು ವರ್ಷ ಕಾಲ ಸು. ಸಂಘಟಿತವಾಗಿ ಹೋರಾಟ ನಡೆಸಿದರು. ಗೇಣಿಯ ಪ್ರಮಾಣ ಸಾಮಾನ್ಯವಾಗಿ ಫಸಲಿನ ½ ರಿಂದ ಅರ್ಧದಷ್ಟಿರುತ್ತಿತ್ತು.ಭೂ ಮಾಲೀಕರಿಗೆ ಕೊಡುವ ಗೇಣಿ ಕೊಟ್ಟು ಉಳಿದದ್ದರಲ್ಲಿಯೇ ರೈತರು ಜೀವನ ಸಾಗಿಸಬೇಕಾಗಿತ್ತು.[*] ಕಾಗೋಡು ಸತ್ಯಾಗ್ರಹ ನೇರವಾಗಿ ಭೂ ಸುಧಾರಣೆಯ ಬೇಡಿಕೆಗಳನ್ನು ಮುಂದಿಟ್ಟುಕೊಂಡು ನಡೆಸಿದ ಹೋರಾಟವಾಗಿರಲಿಲ್ಲ. ಗೇಣಿಯ ಪ್ರಮಾಣ ಕಡಿಮೆಯಾಗಬೇಕೆಂಬ ಒಕ್ಕಲುಗಳ ಬೇಡಿಕೆ ವಾಸ್ತವವಾಗಿ ಗೇಣಿ ಕಡಿಮೆ ಆಗಬೇಕೆಂಬುದೇ ಆಗಿದ್ದರೂ, ಅವರು ಬಯಸಿದ್ದು ಗೇಣಿ ಇಳಿತ ಗಣನೀಯವಾದ್ದೇನೂ ಆಗಿರಲಿಲ್ಲ. ಕಾಗೋಡು ಭೂ ಮಾಲೀಕರು ಒಕ್ಕಲುಗಳಿಂದ ಕಸಿದ ಭೂಮಿಯನ್ನು ಹಿಂದಿರುಗಿಸಬೇಕೆಂಬ ಬೇಡಿಕೆಯನ್ನು ಕೂಡ ಭೂ ಮಾಲೀಕರ ಮೇಲೆ ಒತ್ತಾಯ ಹೇರುವಂತಹ ಸ್ಥಿತಿಯಲ್ಲಿ ಸತ್ಯಾಗ್ರಾಹಿಗಳು ಇರಲಿಲ್ಲ.

### ಕರ್ನಾಟಕದ ಭೂ ಸುಧಾರಣೆಯ ಸ್ವರೂಪ ಮತ್ತು ಲಕ್ಷಣಗಳು

ಕರ್ನಾಟಕದ ಭೂ ಸುಧಾರಣಾ ಶಾಸನಗಳಲ್ಲಿ ಮೊದಲ ಶಾಸನ ೧೯೫೨ರಲ್ಲಿ ವಿಧಾನಸಭೆಯಲ್ಲಿ ಮಂಡಿಸಲ್ಪಟ್ಟು ೧೯೫೪ರಲ್ಲಿ ಕೆಲವು ಪ್ರಾಂತ್ಯಗಳಲ್ಲಿ ಮಾತ್ರ ಜಾರಿಗೆ ಬಂದಿತು. ಇದನ್ನು ಮೈಸೂರು ಟೆನೆನ್ಸಿ ಕಾಯಿದೆ ಎಂದು ಕರೆಯುತ್ತಾರೆ. ಈ ಕಾಯಿದೆಯ ಪ್ರಕಾರ ಭೂ ಮಾಲೀಕ ತನ್ನ ಸ್ವಂತ ಸಾಗುವಳಿಯ ಒಕ್ಕಲುಗಳಿಂದ ಭೂಮಿ ಬಿಡಿಸಿಕೊಳ್ಳಬಹುದಾಗಿತ್ತು. ಜೊತೆಗೆ ಗೇಣಿ ಬಾಕಿ ಇದ್ದರೆ ಗೇಣಿ ಜಮೀನಿನಲ್ಲಿ ಒಕ್ಕಲು ಕೃಷಿ ಮಾಡದೇ ಇದ್ದರೆ, ಜಮೀನು ಹಾಳುಗೆಡವಿದ್ದರೆ ಒಕ್ಕಲೆಬ್ಬಿಸಲು ಸರ್ಕಾರವೇ ತೋರಿಸಿಕೊಟ್ಟ ಉಪಾಯಗಳಾಗಿದ್ದವು. ನಂತರ ಎಸ್. ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ೧೯೫೭ರಲ್ಲಿ ಬಿ. ಡಿ. ಜತ್ತಿಯವರ ಮುಖಂಡತ್ವದಲ್ಲಿ ಭೂ ಸುಧಾರಣಾ ಸಮಿತಿಯನ್ನು ರಚಿಸಲಾಯಿತು. ೧೯೫೭ರಲ್ಲಿ ಈ ಸಮಿತಿಯು ತಾನು ಅಧ್ಯಯನ ನಡೆಸಿ ತಯಾರಿಸಿದ ಸಲಹೆಗಳನ್ನು ಸರ್ಕಾರದ ಮುಂದಿಟ್ಟಿತ್ತು. ಇದರ ಸಲಹೆಗಳ ಆಧಾರದ ಮೇಲೆ ಬಿ. ಡಿ. ಜತ್ತಿಯವರೇ ಮುಖ್ಯಮಂತ್ರಿಗಳಾದಾಗ ಕಂದಾಯ ಮಂತ್ರಿಗಳಾದ ಕಡಿದಾಳು ಮಂಜಪ್ಪನವರು ಈ ಮಸೂದೆಯನ್ನು ೧೯೫೮ರಲ್ಲಿ ಶಾಸನ ಸಭೆಯ ಮುಂದಿಟ್ಟರು. ೪೬ ಮಂದಿ ಸದಸ್ಯರನ್ನೊಳಗೊಂಡ ಎರಡು ಶಾಸನ ಸಭೆಗಳು ೭೪ ದಿನಗಳ ಕಾಲ ಪರಿಶೀಲಿಸಿ ತನ್ನ ವರದಿಯನ್ನು ೧೯೬೦ರಂದು ವಿಧಾನ ಸಭೆಯ ಮುಂದಿಟ್ಟಿತು. ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ೧೯೬೧ ರ ನವಂಬರ್‌ನಲ್ಲಿ ಈ ಬಿಲ್ಲನ್ನು ರಾಷ್ಟ್ರಪತಿಗಳ ಒಪ್ಪಿಗೆ ಪಡೆಯಲು ಕಳುಹಿಸಲಾಯಿತು. ಕೊನೆಗೆ ೧೯೬೨ರಲ್ಲಿ ರಾಷ್ಟ್ರಪತಿಯವರ ಒಪ್ಪಿಗೆ ಪಡೆದು ಕರ್ನಾಟಕದ ಭೂ ಸುಧಾರಣಾ ಶಾಸನವಾಯಿತು.[*] ೧೯೬೧ರಂದು ಜಂಟಿ ಸೆಲೆಕ್ಟ್ ಸಮಿತಿ ಕರ್ನಾಟಕ ಭೂ ಸುಧಾರಣೆಯ ಬಗ್ಗೆ ಮುಂದಿಟ್ಟ ಕೆಲವು ಮುಖ್ಯ ಸಲಹೆಗಳು ಹೀಗಿವೆ:

೧. ಭೂ ಸುಧಾರಣೆಯ ಪರಿಣಾಮವಾಗಿ ಭೂಮಿ ಕಳೆದುಕೊಂಡವರಿಗೆ ಹತ್ತು ಸಾವಿರ ರೂ.ಗಳವರೆಗೆ ಒಂದೇ ಕಂತಿನಲ್ಲಿ ಪರಿಹಾರ ಕೊಡಲು ಜಂಟಿ ಸೆಲೆಕ್ಟ್ ಸಮಿತಿಯಲ್ಲಿ ಅವಕಾಶ ಕಲ್ಪಿಸಿದೆ.

೨. ಜಮೀನು ಪರಿಮಿತಿಯನ್ನು ಗೊತ್ತುಪಡಿಸಲು ಮಸೂದೆಯಲ್ಲಿದ್ದ ವರಮಾನದ ಆಧಾರಕ್ಕೆ ಬದಲಾಗಿ ಹೊಸ ಪ್ರಾಮಾಣಿಕ ಎಕರೆಯನ್ನು ನಿರ್ಧರಿಸಿ ಭೂ ಪರಿಮಿತಿಯನ್ನು ೨೭ ಪ್ರಾಮಾಣಿಕ ಎಕರೆಗಳೆಂದು ಶಿಪಾರಸ್ಸು ಮಾಡಿತು.

೩. ಬಾವಿ, ಪ್ಲಾಂಟೇಷನ್ನುಗಳ ಪರಮಾವಧಿಯನ್ನು ನೂರು ಎಕರೆಗಳಿಗೆ ಮಿತಿಗೊಳಿಸಿತು. ವಿಧವೆಯರು ಅಪ್ರಾಪ್ತ ವಯಸ್ಕರು, ಮದುವೆಯಾಗದ ಹೆಣ್ಣು ಮಕ್ಕಳು ಮಾನಸಿಕ ಅಥವ ದೈಹಿಕ ಅಶಕ್ತತೆವುಳ್ಳವರು ಮತ್ತು ರಕ್ಷಣಾ ಪಡೆಯಲ್ಲಿ ಸೇವೆ ಸಲ್ಲಿಸುತ್ತಿದ್ದವರು ಮಾತ್ರ ಗೇಣಿ ವ್ಯವಸಾಯಕ್ಕೆ ಭೂಮಿ ಯನ್ನು ಕೊಡಬಹುದು.

೪. ಸ್ವಂತ ವ್ಯವಸಾಯಕ್ಕೆ ಮಾತ್ರ ಭೂಮಿಯನ್ನು ಪುನರ್ ಸ್ವಾಧೀನ ಪಡೆಯಬಹುದು. ಆದರೆ ಸಂಸ್ಥೆಗಳು ಭೂಮಿಯನ್ನು ವಾಪಾಸು ಪಡೆಯಲು ಅವಕಾಶವಿರಲಿಲ್ಲ.

೫. ಜಮೀನುಗಳಿಂದ ಗೇಣಿದಾರರನ್ನು ಒಕ್ಕಲೆಬ್ಬಿಸಬೇಕಾದರೆ ಒಂದು ವರ್ಷದೊಳಗೆ ಅರ್ಜಿಯನ್ನು ಸಲ್ಲಿಸಬೇಕು, ಜಂಟಿ ಸೆಲೆಕ್ಟ್ ಸಮಿತಿಯವರು ಭೂ ಸುಧಾರಣೆಯ ಬಗ್ಗೆ ಮಂಡಿಸಿದ ವಿಷಯಗಳ ಬಗ್ಗೆ ವಿಧಾನಸಭೆಯಲ್ಲಿ ಬಂದ ಭಿನ್ನಮತ ಅಂತಹ ತೀವ್ರವಾದ ಬದಲಾವಣೆಗೆ ಸೂಚಿತವಾಗಿರಲಿಲ್ಲ. ಜೊತೆಗೆ ಅಂತಹ ಸೂಚನೆಗಳು ಬಂದರೂ, ತಿದ್ದುಪಡಿಯಾಗದೇ ಈ ಸಲಹೆಗಳು ಕಸದ ಬುಟ್ಟಿಗೆ ಬಿದ್ದವು. ಹೀಗಾಗಿ ೧೯೬೨ರಲ್ಲಿ ಮೂಲ ಜಂಟಿ ಸೆಲೆಕ್ಟ್ ಸಮಿತಿಯ ಸಲಹೆಗಳೇ ರಾಷ್ಟ್ರಪತಿಯವರ ಒಪ್ಪಿಗೆ ಪಡೆದು ಶಾಸನವಾಯಿತು. ಹಲವಾರು ಮಂದಿ ಪ್ರಸ್ತುತ ಭೂ ಸುಧಾರಣೆಯ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದರೂ, ಬಹಳಷ್ಟು ಮಂದಿ

ವ್ಯವಸಾಯ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆಯಾಗ ಬಹುದೆಂದು ನಂಬಿದ್ದರು. ಈ ನಂಬಿಕೆ ನಂಬಿಕೊಂಡವರ ಕಣ್ಣೆದುರೇ ಸುಳ್ಳಾಯಿತು. ಈ ಶಾಸನ ಉದ್ದೇಶಿತ ಫಲ ಸಾಧಿಸದಿರುವುದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವು ನಿಧಾನ ನೀತಿ, **ಕಾನೂನನ್ನು ಜಾರಿಗೆ *ಗೊಳಿಸುವ ಅಧಿಕಾರಿಗಳ ಅಸಡ್ಡೆ ಹಾಗೂ ಕಾನೂನಿನಲ್ಲಿದ್ದ* ನ್ಯೂನತೆಗಳು.**

## ಡಿ. ದೇವರಾಜ ಅರಸು

೧೯೭೨ರಲ್ಲಿ ಡಿ. ದೇವರಾಜ ಅರಸು ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರವಹಿಸಿಕೊಂಡರು. ೧೯೭೭ರ ಮಧ್ಯದಲ್ಲಿ ರಾಷ್ಟ್ರಪತಿ ಆಡಳಿತ ಹೊರತುಪಡಿಸಿದರೆ ೧೯೮೦ರ ಜನವರಿಯವರೆಗೆ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದರು. ಅವರ ಕಾಲಕ್ಕೆ ಜಾರಿಗೆ ಬಂದ ಭೂ ಶಾಸನಗಳು, ಯೋಜನೆಗಳು ರಾಜ್ಯ ಮತ್ತು ದೇಶದ ಅಭಿವೃದ್ಧಿಯ ಮೇಲೆ ಸಾಕಷ್ಟು ಪರಿಣಾಮ ಬೀರಿದವು. ಅರಸು ಪ್ರವೇಶದಿಂದ ಕರ್ನಾಟಕ ರಾಜ್ಯದಲ್ಲಿ ಹೊಸದೊಂದು ಯುಗ ಪ್ರಾರಂಭವಾಯಿತು. ಇಲ್ಲಿಯವರೆಗೆ ಧ್ವನಿಯೇ ಇಲ್ಲದಿದ್ದ ಸಣ್ಣ ಜಾತಿಯ ಜನರು ಮಾತನಾಡ ಲಾರಂಭಿಸಿದರು. ಇಡೀ ಭಾರತದಲ್ಲಿಯೇ ಚರ್ಚಿತವಾದ ಮತ್ತು ಚರ್ಚಿತವಾಗುತ್ತಿರುವ ಕ್ರಾಂತಿಕಾರಿ ಶಾಸನವಾದ ಭೂ ಸುಧಾರಣೆ ಕಾಯಿದೆಯನ್ನು ಜಾರಿಗೆ ತಂದಿದ್ದು, ಅರಸು ಅವರ ಸಾಧನೆಗಳಲ್ಲಿ ಮಹತ್ವದ್ದು. ಈ ಕಾಯಿದಯ ಮೂಲಕ ಗೇಣಿದಾರನಿಗೆ ಭೂ ಒಡೆತನ ಸಿಗುವಂತಾಯಿತು. ಗೇಣಿದಾರನ ರಕ್ಷಣೆಗಾಗಿ ಇಡೀ ಪ್ರಕ್ರಿಯೆಯನ್ನು ನ್ಯಾಯಾಂಗದ ಪರಿಮಿತಿಯಿಂದ ಹೊರಗಿಟ್ಟ ಭೂ ನ್ಯಾಯ ಮಂಡಳಿಗಳ ಮೂಲಕ ತೀರ್ಮಾನುಗಳು ಬಡ ಗೇಣಿದಾರನ ಪರವಾಗಿ ಬರುವಂತೆ ಮಾಡಿದರು. *೮ ದುರ್ಬಲವರ್ಗದ ಜನರಿಗೆ ಈ ಕಾಯಿದೆ ನಿಜವಾದ ಅರ್ಥದಲ್ಲಿ ನ್ಯಾಯ ಒದಗಿಸುವುದರಲ್ಲಿ ಮಹತ್ತರ ಪ್ರಭಾವವನ್ನು ಬೀರಿತು. ಈ ಶಾಸನದ ಮುಖ್ಯ ಗುರಿ *ಉಳುವವನೇ ಹೊಲದೊಡೆಯನೆಂದು* ಘೋಷಿಸಿತು.

## ೧೯೭೪ರ ಭೂ ಸುಧಾರಣಾ ಕಾಯಿದೆ

ಕೇಂದ್ರ ಸರ್ಕಾರವು ನಡೆಸಿದ್ದ ಅಧ್ಯಯನಗಳ ಫಲಿತಾಂಶ ಗಳನ್ನು ಪರಿಶೀಲಿಸುವ ಸಲುವಾಗಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ೧೯೭೨ರಲ್ಲಿ ಒಂದು ಉನ್ನತ ಮಟ್ಟದ ಸಮಿತಿಯನ್ನು ರಚಿಸಿತು. ಈ ತಂಡದಲ್ಲಿ ಕೆಲವು ಕೇಂದ್ರಮಂತ್ರಿಗಳು ಕೆಲವು ರಾಜ್ಯಗಳ ಮುಖ್ಯಮಂತ್ರಿಗಳು ಮತ್ತು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಕೆಲ ಸದಸ್ಯರಿದ್ದರು. ಈ ಸಮಿತಿಯ ವರದಿಯನ್ನು ೧೯೭೨ರಲ್ಲಿ ಸಮಾವೇಶಗೊಂಡ ಮುಖ್ಯ ಮಂತ್ರಿಗಳ ಸಮ್ಮೇಳನವು ಚರ್ಚಿಸಿತು. ರಾಜ್ಯ ಸರ್ಕಾರಗಳು ತಮ್ಮ ಭೂ ಸುಧಾರಣಾ ಶಾಸನಗಳನ್ನು ತಿದ್ದುಪಡಿ ಮಾಡುವ ಸಲುವಾಗಿ ಕೇಂದ್ರ ಸರ್ಕಾರ ನೀಡುವ ಮಾರ್ಗಸೂಚಿಗಳಿಗೆ ಆಧಾರವಾಗುವಂತಹ ನಿರ್ಧಾರ ಗಳನ್ನು ಕೈಗೊಂಡಿತ್ತು. ಇದರ ಪ್ರಕಾರ ೧೯೬೧ರ ಭೂ ಸುಧಾರಣಾ ಕಾಯಿದೆಯ ಪುನರ್ ವಿಮರ್ಶೆಗೊಳಪಟ್ಟಿತು. ಸಮಗ್ರವಾದ ತಿದ್ದುಪಡಿ ಮಸೂದೆಯ ಶಾಸನ ಸಭೆಯ ಮುಂದೆ ಬಂದು ೧೯೭೩ರಲ್ಲಿ ಶಾಸನ ಸಭೆಯಿಂದ ಅನುಮತಿ ಪಡೆಯಿತು. ೧೯೭೪ರ ಮಾರ್ಚ್‌ನಲ್ಲಿ ಅದು ರಾಷ್ಟ್ರಪತಿಯವರ ಸಮ್ಮತಿ ಪಡೆದು ಕಾಯಿದೆ ಆಯಿತು. ೧೯೭೪ರ ಕಾಯಿದೆ ನಿಜವಾದ ಹೊಸ ಶಾಸನ ಎಂದು ಪರಿಗಣಿತವಾಗಿದೆ.

## ೧೯೭೪ರ ಕಾಯಿದೆಯ ಮುಖ್ಯಾಂಶಗಳು

೧. ೧೯೭೪ರ ಕಾಯಿದೆಯು ಜಾರಿಗೆ ತಂದ ಮೂಲಭೂತ ಬದಲಾವಣೆ ಎಂದರೆ ಸೈನಿಕರು ಮತ್ತು ನಾವಿಕರ ಹೊರತು ಬೇರಾರಿಗೂ ಜಮೀನನ್ನು ಗೇಣಿಗೇ ನೀಡಲು ಅವಕಾಶ ವಿರಲಿಲ್ಲ.

೨. ಭೂ ಸುಧಾರಣಾ ಕಾಯಿದೆಯು ಕೃಷಿ ಭೂಮಿಗೆ ಮಾತ್ರ ಅನ್ವಯವಾಗುವಂತಾಯಿತು. ಆ ಶಬ್ದವನ್ನು ನಿಖರವಾಗಿ ವ್ಯಾಖ್ಯಾನಿಸಲಾಯಿತು. *೯ ವ್ಯವಸಾಯಕ್ಕೆ ಅಥವ ವ್ಯವಸಾಯಕ್ಕೆ ಬೆಂಬಲವಾಗುವಂತಹ ಉದ್ಯೋಗಗಳಿಗೆ ಬಳಸಬಹುದಾದ ಭೂಮಿ ಕೃಷಿಭೂಮಿ. ಇದರಲ್ಲಿ ಹಣ್ಣಿನ ತೋಟ, ಕಾಡು, ಹುಲ್ಲುಗಾವಲು, ಪ್ಲಾಂಟೇಷನ್, ಮರದ ಕೃಷಿ ಹೀಗೆ ಸರ್ವ ಭೂಮಿಗಳು ಸೇರಿದವು.

೩. ಗೇಣಿದಾರನು ಒಬ್ಬರಿಗಿಂತ ಹೆಚ್ಚು ಒಡೆಯರ ಭೂಮಿಯನ್ನು ಗೇಣಿ ವ್ಯವಸಾಯ ಮಾಡುತ್ತಿದ್ದರೆ ಯಾವ ಗೇಣಿ ಭೂಮಿ ತನಗೆ ಬೇಕು ಎನ್ನುವ ಆಯ್ಕೆ ಗೇಣಿದಾರನದಾಗಿರುತ್ತದೆ.

೪. ಭೂಮಿಯ ವರ್ಗೀಕರಣವನ್ನು ಅನುಸರಿಸಿ ಭೂ ಮಿತಿಯನ್ನು ಹೇರಲಾಗಿದೆ. ಒಂದು ಕುಟುಂಬದ 'ಎ' ವರ್ಗದ ಭೂಮಿ ಯಾಗಿದ್ದರೆ ಹತ್ತು ಎಕರೆಯನ್ನು 'ಬಿ' ವರ್ಗದ ಭೂಮಿಯಾದರೆ ೨೦ ಎಕರೆಯನ್ನು 'ಸಿ' ಮತ್ತು 'ಡಿ' ವರ್ಗದ ಭೂಮಿಯಾದರೆ ೪೦ ಎಕರೆಗಳಷ್ಟು ಭೂಮಿಯ ಒಡೆತನವನ್ನು ಹೊಂದಿರಬಹುದು.

೫. ಪ್ಲಾಂಟೇಷನ್ ಭೂಮಿಗೆ ಭೂ ಪರಿಮಿತಿಯನ್ನು ವಿಧಿಸಿಲ್ಲ.

೬. ಪ್ರತಿಯೊಂದು ತಾಲ್ಲೂಕಿನಲ್ಲೂ ಕೊನೆಯ ಪಕ್ಷ ಒಂದೊಂದು ಭೂ ನ್ಯಾಯ ಮಂಡಲಿಯನ್ನು ರಚಿಸಲಾಯಿತು. ೧೯೬೧ರ ನಂತರ ಭೂಮಿಯನ್ನು ವರ್ಗಾವಣೆ ಮಾಡಿದ್ದರೆ ಈ ವರ್ಗಾವಣೆಯಾಗಿರುವ ಭೂಮಿಯನ್ನು ಭೂ ಪರಿಮಿತಿ ಯೊಳಗೆ ಲೆಕ್ಕಕ್ಕೆ ತೆಗೆದುಕೊಂಡು ಹೆಚ್ಚುವರಿ ಭೂಮಿಯನ್ನು ರಾಜ್ಯ ಸರ್ಕಾರ ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತದೆ. ಗೇಣಿ

ಎಂಬುದರಲ್ಲಿ ಒಂದೊಂದು ಪ್ರದೇಶದಲ್ಲೂ ಹಲವಾರು ಬಗೆಯ ಗುತ್ತಿಗೆ ಸಂಬಂಧಗಳು ಸೇರಿ ಹೋಗಿರುವುದರಿಂದ ಆ ಶಬ್ದವನ್ನು ನಿಖರವಾಗಿ ವ್ಯಾಖ್ಯಾನಿಸುವುದು ಕಷ್ಟ, ಆದರೂ ೧೯೭೪ರ ಕಾಯಿದೆ ಆ ಶಬ್ದಕ್ಕೆ ನಿಖರವಾದ ವ್ಯಾಪ್ತಿ ನೀಡಲು ಪ್ರಯತ್ನಿಸಿತು. ಗೇಣಿದಾರ ಎಂದರೆ ತಾವೇ ಸ್ವಂತ ಕೃಷಿ ಮಾಡುವ ಸ್ಥಿರವೂ ಭದ್ರವೂ ಆದ ಗೇಣಿದಾರ ಅಥವ ಸಾಧಾರಣ ಗೇಣಿದಾರ ಈ ಎರಡು ವರ್ಗಗಳಿಗೆ ಸೇರಿದವರೆಂದು ಸ್ಪಷ್ಟಪಡಿಸಿತು. ೧೯೭೪ರಲ್ಲಿ ಹೆಚ್ಚಿನ ಭೂ ಪರಿಮಿತಿಯನ್ನು ಹೇರಿದ್ದರೂ, ನುಸುಳಿ ಬರುತ್ತಿದ್ದ ದೊಡ್ಡ ಭೂ ಮಾಲೀಕರನ್ನು ತಡೆಯುವ ಕಟ್ಟಲೆಗಳನ್ನೇನೂ ನಿರ್ಮಿಸಲಿಲ್ಲ. ಕರ್ನಾಟಕ ಭೂ ಸುಧಾರಣೆಯಲ್ಲಿ ಭೂ ಪರಿಮಿತಿಯನ್ನು ತರುವ ಮುಖ್ಯ ಉದ್ದೇಶವೆಂದರೆ ಹಳ್ಳಿಗಾಡುಗಳಲ್ಲಿ ಇರುವ ಅತೀ ದೊಡ್ಡ ಶ್ರೀಮಂತ ರೈತ ಮತ್ತು ಬಡ ರೈತರ ನಡುವಿನ ದೊಡ್ಡ ಕಂದಕವನ್ನು ಸರಿಪಡಿಸುವುದು ಅನ್ನುವ ವಿಚಾರದ ಮೇಲೆ ಪ್ರಭಾವ ಬೀರಿತು.

### ಭೂ ಸುಧಾರಣಾ ಕಾಯಿದೆಯ ಪರಿಣಾಮಗಳು

ಭೂ ಸುಧಾರಣಾ ಕಾಯಿದೆಯ ಪರಿಣಾಮಗಳು ಹಲವಾರು ಅವು ಬೇರೆ ಬೇರೆ ಕಾಲದಲ್ಲಿ ಜರುಗುವಂತಹುದು. ಕಾಯಿದೆ ಜಾರಿಯಾಗುವುದಕ್ಕಿಂತ ಮುಂಚೆಯೇ ಕೆಲವು ಪರಿಣಾಮಗಳು ಉಂಟಾಗುತ್ತದೆ. ಇದಕ್ಕೆ ೧೯೬೧ರಲ್ಲಿ ಅಂಗೈಯಗಲ ಭೂಮಿ ಇದ್ದವನೂ ಹಿಡುವಳಿದಾರನಾಗಿ ಪರಿಗಣಿತನಾಗಿದ್ದನಾದರೆ, ೧೯೭೧ರಲ್ಲಿ ಸ್ವಂತ ಕೃಷಿಯನ್ನೇ ಮುಖ್ಯ ಉಪ ಜೀವನ ವಾಗಿರುವವನು ಮಾತ್ರ ಹಿಡುವಳಿದಾರನೆಂದು ಪರಿಗಣಿಸಲಾಯಿತು. ಇದಕ್ಕೆ ೧೯೬೫ರಲ್ಲಿ ಜಾರಿಗೆ ಬಂದ ೧೯೬೧ರ ಕಾಯಿದೆ ಉದಾಹರಣೆ ಕಾಯಿದೆ ಹೊರಟದ್ದರಿಂದಲೇ ಕೆಲವು ಪರಿಣಾಮಗಳು ಹುಟ್ಟುತ್ತವೆ. ಉದಾಹರಣೆಗೆ ಭೂ ಸುಧಾರಣಾ ಕಾಯಿದೆ ಪ್ರಕಟವಾದೊಡನೆಯೇ ಜಮೀನುಗಳ ಮಾಲೀಕರು ಇಲ್ಲವೆ ಫಲಾನುಭವಿಗಳು ಬದಲಾದ ಕಾಯಿದೆಯನ್ನು ಸರಿಗಟ್ಟಲು ವೈಯಕ್ತಿಕವಾಗಿ ಕ್ರಮ ತೆಗೆದುಕೊಳ್ಳುತ್ತಾರೆ. ಇವು ಭೂ ಸಂಬಂಧ ಗಳ ಮೇಲೆ ಪರಿಣಾಮ ಬೀರುತ್ತವೆ. ಕಾಯಿದೆ ಜಾರಿಗೆ ಬಂದ ನಂತರ ಅದಕನ್ವಯವಾಗಿ ಸರ್ಕಾರದ ಕಾರ್ಯಾಂಗ ಮತ್ತು ನ್ಯಾಯಾಂಗಗಳ ನಡವಳಿಕೆಗಳು ಪ್ರಾರಂಭವಾಗುತ್ತವೆ. ಕಾರ್ಯಾಂಗದ ನಡವಳಿಕೆ ಪೂರ್ಣಗೊಂಡಾಗ ಇನ್ನೂ ಕೆಲವು ಪರಿಣಾಮಗಳು ಹುಟ್ಟುತ್ತವೆ. ಭೂ ಸುಧಾರಣೆಯ ಪರಿಣಾಮವನ್ನು ಅಂದರೆ ಮುಖ್ಯವಾಗಿ ಅದರಿಂದಾಗುವ ಸಾಮಾಜಿಕ, ಆರ್ಥಿಕ ಬದಲಾವಣೆಗಳನ್ನು ಕಾರ್ಯ ಪೂರ್ಣವಾದ ನಂತರದ ಹಂತದಲ್ಲಿ ನಿರೀಕ್ಷಿಸಬಹುದು. ಭೂ ಸುಧಾರಣಾ ಶಾಸನದ ಜಟಿಲತೆಯು ಅದರ ಕಾರ್ಯಾಚರಣೆಯ ಮೇಲೆ ಹೇಗೆ ಪ್ರಭಾವ ಬೀರುತ್ತದೆ. ಎಂಬುದು ಇನ್ನೊಂದು ಮುಖ್ಯವಾದ ವಿಚಾರ. ಅತ್ಯಂತ ಸರಳವಾದ ಭೂ ಸುಧಾರಣಾ ಕಾಯ್ದೆಯು ಅತ್ಯಂತ ಪರಿಣಾಮಕಾರಿ ಎಂದು ಹೇಳಲಾಗುತ್ತದೆ. ಈ ದೃಷ್ಟಿಯಲ್ಲಿ ಕಾಯಿದೆಯ ಅಲಗಿನ ಹರಿತ ಅದರ ಜಟಿಲತೆಯ ಮೇಲೆ ನೇರವಾಗಿ ಅವಲಂಬಿಸಿದೆ. ಆದ್ದರಿಂದ ಕಾಯಿದೆಯಿಂದ ಕಂಡು ಬರುವ ವಿಶದೀಕರಣ ಹಾಗೂ ಜಟಿಲತೆ ಗಳಿಂದ ನ್ಯಾಯವು ದೊರತೇತೀರುವುದೆಂಬ ಭರವಸೆ ತಪ್ಪು. ಸಮಾಜಶಾಸ್ತ್ರಜ್ಞರು ಮತ್ತು ಕೃಷಿ ಅರ್ಥಶಾಸ್ತ್ರಜ್ಞರಲ್ಲಿ ಸಾಮಾನ್ಯವಾಗಿ ಕಂಡು ಬರುವ ಒಂದು ಊಹೆ : ಭೂ ಸುಧಾರಣೆಗಳ ಕಾಯಿದೆಯ ಉಪಬಂಧಗಳೇನೇ ಇದ್ದರೂ, ಕಾರ್ಯತಃ ದೊಡ್ಡ ಹಿಡುವಳಿಗಳನ್ನಾಗಲಿ ಗೇಣಿದಾರರನ್ನಾಗಲಿ ರದ್ದು ಮಾಡಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಇದು ಕೆಲಮಟ್ಟಿಗೆ ನಿಜವಿರಬಹುದು. ದಾಖಲಾತಿ ಪ್ರಕಾರ ಹಲವಾರು ಮಂದಿ ಹಲವಾರು ಜಮೀನುಗಳ ಹಿಡುವಳಿದಾರರೆಂದು ನಮೂದಿತವಾಗಿದ್ದರೂ, ವಾಸ್ತವವಾಗಿ ಅವುಗಳನ್ನೆಲ್ಲಾ ಒಬ್ಬನೇ ವ್ಯಕ್ತಿ ಹತೋಟಿಯಲ್ಲಿಟ್ಟುಕೊಂಡು ಕೃಷಿ ಮಾಡಿಸುತ್ತಾರೆ ಎಂಬುದು ಅವರ ವಾದ. ಜಮೀನು ದಾಖಲಾತಿ ಗಳಲ್ಲಿ ಪ್ರಸ್ತಾಪಗೊಂಡಿರುವವರು ಬರಿ ನಾಮಕಾವಸ್ತೆಗಳು ಬಹುಮಟ್ಟಿಗೆ ಹತ್ತಿರದ ನೆಂಟರು. ದಾಖಲಾತಿಯ ಈ ದೋಷವು ಅಂಕಿ ಅಂಶಗಳನ್ನು ಸುಳ್ಳು ಮಾಡುತ್ತದೆ. ಭೂಮಿಯ ಪುನರ್ ಹಂಚಿಕೆಯ ಉದ್ದೇಶದಿಂದ ಜಾರಿಗೆ ಬಂದ ಭೂ ಸುಧಾರಣೆಯ ಪದಗಳನ್ನು ಕಾರ್ಯತಃ ಅಲ್ಲಗಳೆಯುತ್ತದೆ. ಕಾಯಿದೆಯ ಕಡ್ಡಾಯವು ಏನೇ ಇರಲಿ ಪ್ರಚಲಿತವಾಗಿರುವ ಸಾಮಾಜಿಕ ಶಕ್ತಿಗಳಿಗೆ ಅನುಗುಣವಾಗಿ ಅವನ್ನು ವರ್ಗಗಳು ಅನ್ನಿ, ಜಾತಿಗಳು ಅನ್ನಿ, ಬೇರೇನಾದರೂ ಆಗಲೀ ಜಮೀನುಗಳು ಪುನಃ ಕ್ರೋಡಿಕರಣ ಗೊಳ್ಳುತ್ತದೆ.

ಸಮಾಜದಲ್ಲಿ ಭೂಮಿಯು ಒಂದು ಪ್ರತಿಷ್ಠೆಯ ಸಂಕೇತ. ಭೂ ಮಾಲೀಕರ ಶೋಷಣೆಯಿಂದ ಗೇಣಿದಾರರನ್ನು ಮುಕ್ತ ಗೊಳಿಸಬೇಕಾಗಿತ್ತು. ಆದ್ದರಿಂದ **ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು** ಎಂಬ ಸಮಾಜವಾದಿ ಸಿದ್ಧಾಂತದಲ್ಲಿ ಅಪಾರ ನಂಬಿಕೆ ಶ್ರದ್ಧೆ ಇಟ್ಟು ಅರಸು ಅವರು ಉಳುವವನೇ ಹೊಲದೊಡೆಯನೆಂದು ಸಾರಿದರು. ಬಡ ಜನರಿಗೆ ಭೂಮಿ ಹಂಚುವ ಕಾರ್ಯ ಕೈಗೊಂಡರು. ಭೂ ಸುಧಾರಣೆ ಕಾನೂನಿನಡಿ ಭೂ ನ್ಯಾಯಮಂಡಲಿಗಳನ್ನು ಸ್ಥಾಪಿಸಿ ಗೇಣಿದಾರಿಕೆ ಹಕ್ಕನ್ನು ನಿಜವಾಗಿ ಉಳುಮೆಮಾಡುವ ರೈತರಿಗೆ ವಹಿಸಿಕೊಟ್ಟರು.

## ಆಧಾರ ಸೂಚಿ ಮತ್ತು ಅಡಿ ಟಿಪ್ಪಣಿಗಳು

*೧. ಮೈಸೂರು ಲ್ಯಾಂಡ್ ರೆವಿನ್ಯೂ ಕೋಡಿಗೆ ಅನುಸಾರವಾಗಿ ರಚಿಸಿದ ನಿಬಂಧನೆಗಳು, ಮೈಸೂರು ಸರ್ಕಾರ, ೨೩-೪-೧೯೩೭

*೨. ಎ. ಆರ್. ದೇಸಾಯಿ : ***ಸೋಶಿಯಲ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ನ್ಯಾಷನಾಲಿಸಂ***, ಬಾಂಬೆ, ೧೯೪೮

*೩. ಎಂ. ಎ. ವೆಂಕಟರತ್ನಂ : ***ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ***, ಮೈಸೂರು ವಿಶ್ವವಿದ್ಯಾಲಯ, ೧೯೭೪

*೪. ಪಿ. ಸಿ. ಜೋಷಿ : ***ಲ್ಯಾಂಡ್ ರಿಫಾರಮ್ಸ್ ಇನ್ ಇಂಡಿಯ ಟ್ರೆಂಡ್ಸ್ ಅಂಡ್ ಪ್ರಾಸ್‌ಪೆಕ್ಟಿವ್***, ಭಾಗ-೧, ನವದೆಹಲಿ, ೧೯೭೫

*೫. ಎನ್. ಎಸ್. ರಾಮ್‌ಪ್ರಸಾದ್: ***ಡಿ. ದೇವರಾಜ ಅರಸ್***, ಬೆಂಗಳೂರು, ೧೯೮೩

*೬. ಕ್ಷೀರ ಸಾಗರ: ***ದಿಕ್ಕುತಪ್ಪಿದ ಕರ್ನಾಟಕ ಭೂ ಸುಧಾರಣೆ*** (ಸಂಶೋಧನಾ ಕೃತಿ), ಬೆಂಗಳೂರು, ೧೯೮೫

*೭. ***ಕರ್ನಾಟಕ ರಾಜ್ಯ ಗ್ಯಾಸೆಟಿಯರ್***, ಭಾಗ-೨ : (ಮುಖ್ಯ ಸಂಪಾದಕ) ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೮೫

*೮. ಎಂ. ಎ. ಎಸ್. ರಾಜನ್: ***ಕರ್ನಾಟಕದಲ್ಲಿ ಭೂ ಸುಧಾರಣೆ***, ಬೆಂಗಳೂರು, ೧೯೮೭

*೯. ಸಿ. ಬಿ. ದಾಂಮ್ನೆ : ***ಲ್ಯಾಂಡ್ ರಿಫಾರಮ್ಸ್ ಅಂಡ್ ಚೇಂಜಿಂಗ್ ಆಗ್ರೇರಿಯನ್ ರಿಲೇಷನ್ಸ್***, ನವದೆಹಲಿ, ೧೯೯೩

*೧೦. ಡಾ॥ ಕೆ. ಜಿ. ವೆಂಕಟೇಶ್ ಜೋಯಿಸ್ : ***ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ***, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

(ಈ ಲೇಖನವನ್ನು ತಯಾರಿಸಲು ಸಹಕಾರ ನೀಡಿದ ಪ್ರೊ॥ ಲಕ್ಷ್ಮಣ್ ತೆಲಗಾವಿ, ಮುಖ್ಯಸ್ಥರು ಮತ್ತು ನನ್ನ ಮಾರ್ಗದರ್ಶಕರಾದ ಡಾ॥ ಟಿ.ಪಿ. ವಿಜಯ್, ಪ್ರವಾಚಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅವರುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.)

ಪ್ರೊ॥ ವಸಂತ ಕುಷ್ಟಗಿ *

# ಹೈದರಾಬಾದ ನಿಜಾಂ ಸಂಸ್ಥಾನದ ವಿಮೋಚನಾ ಚಳುವಳಿಯು ನಡೆದು ಬಂದ ದಾರಿ

ಭಾರತದ ದಕ್ಷಿಣದಲ್ಲಿಯ ಪ್ರಸ್ಥಭೂಮಿಯ ಮೇಲೆ ಅಸಫಿಯಾ ಮನೆತನವು ೧೮ನೆಯ ಶತಮಾನದಲ್ಲಿ ನೆಲೆಗೊಂಡ ಮೇಲೆ, ಇತಿಹಾಸದಲ್ಲಿ ಹೈದರಾಬಾದ ಸಂಸ್ಥಾನ ಅರ್ಥಾತ್ ನಿಜಾಂ ಸಂಸ್ಥಾನವೆಂಬ ಮಾತುಗಳು ಕೇಳಿ ಬರತೊಡಗಿದವು. ಆ ಕಾಲದಲ್ಲಿ ದೇಶದಲ್ಲಿ ಶಾಂತಿಯು ದಿಕ್ಕಾಪಾಲಾಗಿ ಓಡ ತೊಡಗಿತ್ತು. ಇಂಗ್ಲಿಷರಿಗೂ, ಬೇರೆ ಬೇರೆ ರಾಜರು ಮಹಾರಾಜ ರಿಗೂ ಯುದ್ಧಗಳು ಮೇಲಿಂದ ಮೇಲೆ ನಡೆಯುತ್ತಿದ್ದು ಸಾಮಾನ್ಯ ಜೀವನವು ನೆಮ್ಮದಿಯಿಂದ ದೂರ ಸರಿದಿತ್ತು. ಮರಾಠರೂ, ಮೈಸೂರು ಅರಸರೂ, ಹೈದರಾಬಾದ್ ನಿಜಾಂ ನವಾಬರೂ - ಎಲ್ಲರೂ ತಮ್ಮ ತಮ್ಮಲ್ಲಿ ಯುದ್ಧವನ್ನು ಘೋಷಿಸುತ್ತಿದ್ದರು. ಹೀಗಾಗಿ ಪ್ರಾಂತ ಪ್ರಾಂತಗಳ ಸಂಸ್ಥಾನಗಳ ಗಡಿಗಳು ನಿಶ್ಚಿತ ಸ್ವರೂಪವನ್ನೇ ಪಡೆದಿರಲಿಲ್ಲ. ಘೋರ ಕ್ರಾಂತಿಯ ಅನಂತರವೇ ನೆಮ್ಮದಿಯ ಸೊಗಡು ಈ ಪ್ರದೇಶಗಳಲ್ಲಿ ಮೂಡಿ ಬರತೊಡಗಿತು.

ಹೈದರಾಬಾದ ಸಂಸ್ಥಾನವೆಂಬುದು ಪ್ರಚಲಿತವಾಗುವ ಮುನ್ನ ಈ ರಾಜ್ಯವನ್ನು ಆಸಫ್ ಜಾಹೀ ಅರ್ಥಾತ್ ನಿಜಾಂ ಸಂಸ್ಥಾನವೆಂದು ಗುರುತಿಸಲಾಗುತ್ತಿತ್ತು. ಏಕೆಂದರೆ ಆಸಫ್ ಜಾಹೀ ಮನೆತನದ ಮೊದಲ ನವಾಬನು ನಿಜಾಂ ಮುಲ್ಮುಲ್ಕ್ ಎಂಬವನಾಗಿದ್ದನು. ಈತನನ್ನು ೧೭೧೩ನೆಯ ಇಸ್ವಿಯಲ್ಲಿ ದೆಹಲಿಯ ದೊರೆ ಮಹಮ್ಮದ ಷಾಹಾನು ದಕ್ಷಿಣದ ಅಧಿಕಾರಿಯನ್ನಾಗಿ ನೇಮಿಸಿ ಔರಂಗಾಬಾದಿಗೆ ಕಳಿಸಿದ್ದನು. ಈ ನಿಜಾಂ ಮುಲ್ಮುಲ್ಕ್‌ನ ಮನೆತನದ ಹಿರಿಯರು ಮೊಗಲ್ ಸಾಮ್ರಾಟ್ ಔರಂಗಜೇಬನ ಕೃಪಾಕಟಾಕ್ಷಕ್ಕೆ ಒಳಗಾದವ ರಾಗಿದ್ದರು. ಔರಂಗಜೇಬನು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದಾಗ ತನ್ನ ಸಾಮ್ರಾಜ್ಯದಲ್ಲಿ ಮುಂಬಯಿ, ಮದ್ರಾಸು, ಕರ್ನಾಟಕಗಳ ಭಾಗಗಳನ್ನೂ ಮೈಸೂರಿನ ಕೆಲವು ಭಾಗಗಳನ್ನೂ ಗೆದ್ದು ಸೇರಿಸಿಕೊಂಡಿದ್ದನು. ಹೀಗಾಗಿ ಔರಂಗಜೇಬನಿಂದ ಗೆಲ್ಲಲಾದ ದಕ್ಷಿಣ ಭಾರತದ ಪ್ರದೇಶದಲ್ಲಿ ತೆಲುಗು, ಮರಾಠಿ ಹಾಗೂ ಕನ್ನಡ ಭಾಷಿಕ ಪ್ರಜೆಗಳು ಸಮಾವೇಶಗೊಂಡಿದ್ದರು. ಈ ಭಾಗವನ್ನೇ ಆಸಫ್ ಜಾಹಿ ಮನೆತನದ ನಿಜಾಮುಲ್ಮುಲ್ಕ್‌ನು ಮೊದಲು ಮೊಗಲರ ಪ್ರತಿನಿಧಿಯಾಗಿ ಅನಂತರ ತಾನೇ ಸುಲ್ತಾನನಾಗಿ, ಆಸಫ್ ಜಾಹಿ ರಾಜಮನೆತನದ ಮೊದಲ ನವಾಬನಾದನು. ೧೭೧೭ನೆಯ ಇಸ್ವಿಯಲ್ಲಿ ಈತನು ತನ್ನ ರಾಜಧಾನಿಯನ್ನು ಔರಂಗಾಬಾದನ್ನು ಮಾಡಿಕೊಂಡಿದ್ದನು.

ಈ ಆಸಫ್ ಜಾಹೀ ಮನೆತನದ ಮೊದಲ ಸುಲ್ತಾನನಾದ ನಿಜಾಮುಲ್ಮುಲ್ಕನು ೧೭೪೩ನೆಯ ಇಸ್ವಿಯಲ್ಲಿ ಬುರಾನಪುರದಲ್ಲಿ ಮರಣ ಹೊಂದಿದ ಮೇಲೆ ಸುಮಾರು ಹದಿಮೂರು ವರ್ಷಗಳ ಅವಧಿಯಲ್ಲಿ ನಾಸಿರ್ ಜಂಗ್, ಮುಘರ ಜಂಗ್ ಹಾಗೂ ಆಸಫ್‌ದ್ದೌಲ - ಈ ಮೂವರು ಆಡಳಿತ ನಡೆಸಿದರು. ಆದರೆ ಇವರನ್ನು ದೆಹಲಿಯ ಬಾದಷಾಹನು ಸ್ಥಾನಮಾನಗಳನ್ನು ನೀಡಿ ಅಷ್ಟು ಗೌರವಿಸಲಿಲ್ಲ. ಮುಂದೆ ೧೭೬೫ನೆಯ ಇಸ್ವಿಯ ಹಿಂಚು ಮುಂಚಿನಲ್ಲಿ ನಿಜಾಮುಲ್ಮುಲ್ಕನ ಮಗನಾದ ನವಾಬ ನಿಜಾಂ ಅಲಿಖಾನ ಎರಡನೆಯ ಆಸಫ್ ಜಾಹಗೆ ಔರಂಗಾಬಾದಿನ ಅಧಿಕಾರ ನೀಡಿ ಗೌರವಿಸಿದನು. ೧೮೦೩ನೆಯ ಇಸ್ವಿಯಲ್ಲಿ ಈತನ ಮರಣದ ಅನಂತರ ಮೀರ್ ಅಕ್ಬರ್ ಅಲಿಖಾನ್ ಸಿಕಂದರ್ ಜಾಹ ಮೂರನೆಯ ಆಸಫ್ ಜಾಹನು ಪಟ್ಟಕ್ಕೆ ಬಂದನು. ಈತನು ದೇಶದಲ್ಲಿಯ ಅಶಾಂತಿಯನ್ನು ಒಂದು ಹದ್ದುಬಂದಿಗೆ ತಂದು ನೆಮ್ಮದಿಯನ್ನು ಕಾಪಾಡಲು ಪ್ರಯತ್ನಿಸಿದನು. ಬಹುಶಃ ಆಡಳಿತದ ಹಿತದ ದೃಷ್ಟಿಯಿಂದ ತನ್ನ ರಾಜಾಧಾನಿಯನ್ನು ಈತನು ಔರಂಗಾಬಾದದಿಂದ ಹೈದರಾಬಾದಿಗೆ ತಂದನು. ೧೮೧೯ನೆಯ ಇಸ್ವಿಯಲ್ಲಿ ಈತನ ಮರಣದ ಅನಂತರ, ಆತನ ಹಿರಿಯ ಮಗ ನವಾಬ್ ಮೀರ್ ಫರಖುಂದೇ ಅಲಿ ಖಾನ್ ನಾಸಿರುದ್ದೌಲ ನಾಲ್ಕನೆಯ ಆಸಫ್ ಜಹಾ ಸಂಸ್ಥಾನದ ರಾಜ್ಯಸೂತ್ರಗಳನ್ನು ಹೊಂದಿದನು. ೧೮೫೭ನೆಯ ಇಸ್ವಿಯಲ್ಲಿ ಈತನ ಮರಣದ

* ಎಂ. ಆಯ್. ಜಿ - ೨೬, ಆದರ್ಶನಗರ, ಮೊದಲ ಹಂತ, ಕಲಬುರಗಿ - ೫೮೫ ೧೦೫

ಅನಂತರ ಮೀರ್ ತಹನಿಯತ್ ಅಲಿಖಾನ್ ಅಫ್ಜಲುದ್ದೌಲ ಐದನೆಯ ಆಸಫ್‌ಜಾಹ ಪಟ್ಟಕ್ಕೆ ಬಂದನು.

ಐದನೆಯ ಆಸಫ್ ಜಹಾನು ತನ್ನ ಕಾಲದಲ್ಲಿ ಇಂಗ್ಲಿಷ್ ಮಾದರಿಯ ಶಿಕ್ಷಣ ಪದ್ಧತಿಯನ್ನು ರೂಢಿಗೆ ತಂದನು. ಆಡಳಿತದ ಅನುಕೂಲತೆಗಾಗಿ ಜಿಲ್ಲಾ, ಸುಬಾಗಳನ್ನು ಜಾರಿಗೆ ತಂದನು. ಮೊಗಲರ ಕಾಲದ ವತನಗಳನ್ನು ಬದಲಾಯಿಸಿದನು. ಹೊಸ ಶಿಕ್ಷಣವನ್ನು ಪಡೆದವರಿಗೆ ಮಾತ್ರ ಆ ವತನದಾರಿಯ ಹಕ್ಕುಗಳನ್ನು ಉಳಿಸಿದನು. ಈತನ ಕಾಲದಲ್ಲಿಯ, ಪ್ರಜಾಹಿತಕ್ಕೆ ಹೆಸರಾದ ಸಾಲಾರಜಂಗ್ ಬಾಹಾದ್ದೂರನು ಕೊಪ್ಪಳ ದಿವಾನನಾಗಿದ್ದು ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ತಂದನು. ನ್ಯಾಯಾಯಲಯ, ಸರ್ವೇ ಇಲಾಖೆ ಮುಂತಾದವುಗಳು ಜಾರಿಯಲ್ಲಿ ಬಂದುವು. ೧೮೬೯ನೆಯ ಇಸ್ವಿಯಲ್ಲಿ ಐದನೆಯ ಆಸಫ್ ಜಹಾನನ ಮಗ, ಮೀರ್ ಮಹಬೂಬ್ ಅಲಿಖಾನ್ ಆರನೆಯ ಆಸಫ್ ಜಹಾನನು ಈ ರಾಜ್ಯದ ನವಾಬನಾಗಿ ರಾಜ್ಯ ಸೂತ್ರಗಳನ್ನು ಪಡೆದನು.

ಈ ಆರನೆಯ ಆಸಫ್ ಜಹಾನನ ಕಾಲದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ಬಂದುವು. ಸತಿ ಪದ್ಧತಿಯು ನಿಂತಿತು. ಸಚಿವ ಸಂಪುಟ ಸ್ಥಾಪಿತವಾಯಿತು. ಮಹಾರಾಜಾ ಕಿಶನ್ ಪ್ರಸಾದ ಮುಖ್ಯಮಂತ್ರಿಯ ಪದವಿಯಲ್ಲಿದ್ದು, ಸಮನ್ವಯ ಸರಣಿಯ ವಾತಾವರಣದ ನಿರ್ಮಾಣಕ್ಕೆ ಸಾಧ್ಯವಾಯಿತು. ೧೯೧೦ನೆಯ ಇಸ್ವಿಯಲ್ಲಿ ಹೈದರಾಬಾದ ಪಟ್ಟಣದಲ್ಲಿರುವ ಮೂಸಿ ನದಿಗೆ ಪ್ರವಾಹ ಬಂದಾಗ, ಈ ಪಟ್ಟಣವು ಪ್ರಕೃತಿಯ ವಿಕೋಪಕ್ಕೆ ತುತ್ತಾಯಿತು. ಅದೇ ಸಂದರ್ಭದಲ್ಲಿ ಆರನೆಯ ಆಸಫ್ ಜಹಾನನು ಈಶ್ವರನ ಸನ್ನಿಧಿಯನ್ನು ಪಡೆದನು. ಅನಂತರ ಈ ಮನೆತನದ ಕೊನೆಯ ನವಾಬನು ೧೯೧೧ನೆಯ ಇಸ್ವಿಯಲ್ಲಿ ನವಾಬ್ ಮೀರ್ ಉಸ್ಮಾನ ಅಲಿಖಾನ ಬಹಾದ್ದೂರ ಏಳನೆಯ ಆಸಫ್ ಜಹಾನು ಪಟ್ಟಕ್ಕೆ ಬಂದನು. ಈತನ ಕಾಲದಲ್ಲಿಯೂ ಮೊದಮೊದಲು ಈ ರಾಜ್ಯದಲ್ಲಿ ಅನೇಕ ಚಿಕ್ಕಪುಟ್ಟ ಸುಧಾರಣೆಗಳಾದುವು. ಹೈಕೋರ್ಟು ಜನ್ಮ ತಾಳಿತು. ಕಾಲೇಜುಗಳು ಬಂದುವು. ಗ್ರಂಥಾಲಯಗಳು ಆಸ್ಪತ್ರೆಗಳು ಒಡಮೂಡಿದವು. ಅಣೆಕಟ್ಟುಗಳು ರೂಪತಾಳಿದುವು. ಸಕ್ಕರೆ ಕಾರ್ಖಾನೆಗಳು, ಬಟ್ಟೆಯ ಗಿರಣಿಗಳು ಉದ್ಭವಿಸಿದುವು. ಸಹಕಾರಿ ಸಂಘಗಳು, ವಿದ್ಯುಚ್ಛಕ್ತಿ, ನಲ್ಲಿನೀರು ಸರಬರಾಜು, ನಗರ ಸುಧಾರಣೆ, ಆಕಾಶವಾಣಿ, ಸ್ತ್ರೀ ಶಿಕ್ಷಣದ ವ್ಯವಸ್ಥೆ – ಇವೆಲ್ಲ ಜಾರಿಗೆ ಬಂದುವು. ಪ್ರಜೆಗಳು ಆಡಳಿತದೊಡನೆ ಸಹಕರಿಸಬೇಕೆಂಬ ಮನೋಭಾವವು ಜಾಗ್ರತವಾಯಿತು. ಅಧಿಕಾರಿಗಳ ನೇಮಕಾತಿಯಲ್ಲಿ ವತನದಾರರೇ ಇರಬೇಕೆಂದು ಅಪೇಕ್ಷೆ ಪಡದೆ, ಯೋಗ್ಯತೆಯುಳ್ಳ ಸುಶಿಕ್ಷಿತ ಸಾಮಾನ್ಯ ಪ್ರಜೆಯೂ ಉನ್ನತ ಅಧಿಕಾರದ ಪದವಿಗಳನ್ನು ಪಡೆಯತೊಡಗಿದನು. ಜನಸಾಮಾನ್ಯರ ಭಾಷೆಗೆ ಕ್ರಮೇಣ ಮನ್ನಣೆಯು ದೊರೆಯತೊಡಗಿತು. ಆಡಳಿತದಲ್ಲಿ ಜನಭಾಷೆಗಳಾದ ಕನ್ನಡ ಮರಾಠಿ ತೆಲುಗುಗಳಿಗೂ ಅವಕಾಶ ಕಲ್ಪಿತವಾಗಿತ್ತು. ರಾಜ್ಯದ ಪ್ರಮುಖ ಕೋಮುಗಳಾದ ಹಿಂದು – ಮುಸ್ಲಿಮ್ ಆತನ ಎರಡು ಕಣ್ಣುಗಳಾಗಿ ಬೆಳಕು ಕಂಡವು.

ಇಂತಹ ಆಸಫಿಯಾ ಸಂಸ್ಥಾನದ ಕೊನೆಯ ನವಾಬನ ಕಾಲದಲ್ಲಿ ತೆಲುಗು ಭಾಷಿಕರ ಎಂಟು ಜಿಲ್ಲೆಗಳು (ಮಹಬೂಬನಗರ, ವರಂಗಲ್, ಕರೀಂನಗರ, ಮೇದಕ್, ನಿಜಾಮಾಬಾದ್, ನಲಗುಂಡ, ಆದಿಲಾಬಾದ, ಆತ್‌ರಾಫ ಬಲ್ದಾ, ಮರಾಠಿ ಭಾಷಿಕರ ಐದು ಜಿಲ್ಲೆಗಳು (ಬೀದರ, ಕಲಬುರಗಿ, ಕೊಪ್ಪಳವನ್ನೊಳಗೊಂಡ ರಾಯಚೂರು) – ಹೀಗೆ ಹದಿನಾರು ಜಿಲ್ಲೆಗಳಿಂದ ಕೂಡಿದ ಈ ರಾಜ್ಯವು ಹೈದರಾಬಾದ ಸಂಸ್ಥಾನವೆಂದು ಎನ್ನಿಸಿಕೊಂಡಿದ್ದು, ಬ್ರಿಟಿಷ್ ಸಾರ್ವಭೌಮತ್ವವನ್ನು ಸ್ವೀಕರಿಸಿ, ಸ್ವತಂತ್ರವಾದ ನಾಣ್ಯ, ಅಂಚೆ, ರೈಲು ಮೊದಲಾದ ಸೌಲಭ್ಯಗಳನ್ನು ಹೊಂದಿದ ದೊಡ್ಡ ಸಂಸ್ಥಾನವೆಂದು ಎನ್ನಿಸಿಕೊಂಡಿತ್ತು. ಈ ಕೊನೆಯ ನವಾಬನು ತಾನು ಪಟ್ಟಕ್ಕೆ ಬಂದಾಗಿನಿಂದ ಎಂದರೆ, ೧೯೧೧ನೆಯ ಇಸ್ವಿಯಿಂದ ೧೯೨೫ನೆಯ ಇಸ್ವಿಯವರೆಗೆ ಸಾಮಾನ್ಯವಾಗಿ ಸರ್ವಜನರ ಹಿತವನ್ನು ಬಯಸಿ ಸುಧಾರಣೆಗಳನ್ನು ತಂದರೂ, ಎಲ್ಲಿಯೋ ಒಂದು ವಿಷ ನಿಮಿಷವು ಅವನ ಮನಸ್ಸಿನಲ್ಲಿ ೧೯೨೫ರ ಸಂದರ್ಭದಲ್ಲಿ ಮತಾಂಧತೆಗೆ ಆಸ್ಪದ ನೀಡಿತು. ಅದರಿಂದಾಗಿ ನಿರ್ಮಲತೆಯಿಂದ ಕೂಡಿದ ಅವನ ಮನಸ್ಸು ಕದಡಿದ ನೀರಾಯಿತು. ಮುಂದೆ ಅದು ೧೯೪೭ನೆಯ ಇಸ್ವಿಯ ಸಮಯಕ್ಕೆ ರಜಾಕಾರರ ನಾಯಕ ಕಾಶೀಂ ರಜವಿಯಿಂದಾಗಿ ದಳ್ಳುರಿಯಾಗಿ ಪರಿಣಮಿಸಿ ಆಸಫಿಯೂ ಮನೆತನದ ಕೊನೆಯ ನವಾಬನನ್ನು ಸಾಮಾನ್ಯಗೊಳಿಸುವವರೆಗೆ ಆ ಪರಿಣಾಮವು ಪಸರಿಸಿತು.

೧೯೪೭ನೆಯ ಇಸ್ವಿಯ ಮುನ್ನವೇ ತೀಕ್ಷ್ಣವಾದ ಮತಾಂಧರ ತಪ್ಪು ಮಾರ್ಗದರ್ಶನದಲ್ಲಿ ಕೇವಲ ಇಸ್ಲಾಮ್ ಧರ್ಮದ ಮಸೀದಿಗಳನ್ನು ಕಟ್ಟಿಸುವುದಕ್ಕೂ, ಆರ್ಥಿಕ ದುಸ್ಥಿತಿಯಲ್ಲಿದ್ದ ಬೇರೆ ಧರ್ಮೀಯರನ್ನು ಮತಾಂತರಗೊಳಿಸಲು ಪ್ರೋತ್ಸಾಹವನ್ನು ಈ ಕೊನೆಯ ನವಾಬ ಉಸ್ಮಾನ ಅಲಿ ಪರೋಕ್ಷವೋ, ಅಪರೋಕ್ಷವೋ, ನೇರವೋ ನೆರವನ್ನು ನೀಡತೊಡಗಿದನು. ಮತ್ತು ಆ ಕಾಲದ ಮತಾಂತರದ ಭ್ರಮೆಯು ಎಷ್ಟು ಹಾಸ್ಯಾಸ್ಪದವಾಗಿರುತ್ತಿತ್ತೆಂದರೆ – ಗಂಡನು ಮತಾಂತರ ಹೊಂದಿ ತನ್ನ ಮೊದಲಿನ ಹಿಂದೂ ಕುಟುಂಬದಲ್ಲಿಯೇ ಬದುಕುತ್ತ, ಮನೆಯಲ್ಲಿದ್ದ ಉಳಿದವರೆಲ್ಲರಿಂದ ದೂರ ಕುಳಿತು ಊಟ ಮಾಡುತ್ತ ತಾನೊಬ್ಬನೇ ದೇವರ ಮಗನಂತೆ ಇರುತ್ತಿದ್ದ. ಆತನ ಜೊತೆ ಆತನ ಹೆಂಡತಿಯು ಅಲ್ಲಿ ಹಿಂದುವಾಗಿಯೇ ಇರುತ್ತಿದ್ದಳು. ಈ ರೀತಿ ಆತನು ಮಾತ್ರ ಹೊರಗಿನ ಅವಕಾಶಗಳಿಗಾಗಿ ಮತಾಂತರದಿಂದ ಮುಸ್ಲಿಮನಾಗಿ ತೋರುತ್ತಿದ್ದನು.

ಇಂತಹ ಹದಗೆಟ್ಟ ಪರಿಸ್ಥಿತಿಯನ್ನು ನಿರ್ಮಾಣ ಮಾಡಲು ಆ ಕಾಲದಲ್ಲಿ 'ದೀನದಾರ' ಎಂಬ ಪಂಗಡವು ವಿಶೇಷವಾಗಿ ಕುಮ್ಮಕ್ಕು ನೀಡಿದುದು ಈ ವಿಪರ್ಯಾಸಕ್ಕೆ ಸಂಚು ಮಾಡಿಕೊಟ್ಟಿತು. ಈ ದೀನಾರ ಪಂಗಡದ ಆಗಿನ ಮುಖ್ಯಸ್ಥ ಹಜರತ್ ಮೌಲಾನಾ ಸಿದ್ದಿಕಿ ದೀನದಾರನು, ಶಿವಶರಣ ಚೆನ್ನಬಸವೇಶ್ವರರ ಅವತಾರ ವೆಂದು ಪ್ರಚಾರ ಮಾಡಿ ಲಿಂಗಾಯತ ಪಂಗಡದ ಹಿಂದುಗಳನ್ನು ತಪ್ಪುಕಲ್ಪನೆಗೆ ಗುರಿ ಮಾಡುತ್ತಿದ್ದನೆಂಬ ವರದಿಗಳಿವೆ. ಶಿವಶರಣ ಚೆನ್ನಬಸವೇಶ್ವರರ ಹೆಸರನ್ನು ಬಳಸಿ ತನ್ನ ಹೆಸರನ್ನು ''ಹಜರತ್ ಮೌಲಾನಾ ಸಿದ್ಧಕಿ ದೀನದಾರ ಚೆನ್ನಬಸವೇಶ್ವರ ಖಿಬ್ಲಾ'' ಎಂದು ಪ್ರಚಾರಗೊಳಿಸುತ್ತಿದ್ದನಂತೆ. ಅಲ್ಲದೆ ಈತನ ನಾಲ್ಕು ಜನ ಅನುಯಾಯಿ ಸಿದ್ದಿಕಿಗಳು ವ್ಯಾಸ, ಕೃಷ್ಣ, ನರಸಿಂಹ ಮತ್ತು ವೀರಭದ್ರರ ಅವತಾರಗಳೆಂದು ಜನರನ್ನು ಭ್ರಮೆಗೊಳಿಸಲು ಹಿಂದು ಮುಂದು ನೋಡಲಿಲ್ಲ. ಮತ್ತೆ ಈ ಪಂಗಡದವರು ನವಾಬ್ ಉಸ್ಮಾನ್ ಅಲಿಯನ್ನು ಧರ್ಮರಾಜನ ಅವತಾರವೆಂದೂ ನಂಬಿಕೆ ಮೂಡಿಸತೊಡಗಿದರು. ಈ ಪಂಗಡದವರ ಈ ಉಪಟಳದಿಂದಾಗಿ ಸ್ವಭಾವತಹ ಒಳ್ಳೆಯವನಾಗಿದ್ದ ಈ ನವಾಬನ ಕಣ್ಣುಗಳಿಗೆ ಕಾಮಣಿಯಾಗತೊಡಗಿ, ಪಕ್ಷಪಾತವು ಆತನಲ್ಲಿ, ಆತನಿಗೇ ಗೊತ್ತಾಗದ ತೆರ ಅದು ಬೆಳೆದು ಹೆಮ್ಮರವಾಗಿ – ಎಲ್ಲ ಹಳದಿಯಾಗಿ ಕಾಣತೊಡಗಿತು. ಈ ಪಂಗಡದವರು ಹೈದರಾಬಾದ ಪಟ್ಟಣವನ್ನೇ ತಮ್ಮ ಚಟುವಟಿಕೆಗಳ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು, ತಮ್ಮ ವೇಷ ಭೂಷಣಗಳಲ್ಲಿ ವಿಚಿತ್ರ ಸಮನ್ವಯದ ಬೂಟಾಟಿಕೆ ಗಳನ್ನು ಅಳವಡಿಸಿಕೊಂಡು, ಸುಮಾರು ಐದು ನೂರು ಜನ ಇಂತಹ ಪ್ರಭಾವೀ ಪ್ರಚಾರಕರು ಸನ್ನದ್ಧರಾದರು. ಇಂತಹ ಪ್ರಚಾರವನ್ನೇ ಅವರು ತಮ್ಮ ಉಪಜೀವನದ ಕಾಯಕವನ್ನಾಗಿಸಿಕೊಂಡರು.

ಹೀಗಾಗಿ ಈ ದೀನದಾರ ಪಂಗಡ ಈ ಪ್ರಚಾರಕರು ಮುಸ್ಲಿಂ ಧರ್ಮವನ್ನು ಪ್ರತಿನಿಧಿಸುವ ಹಸರು ರುಮಾಲನ್ನು ಸುತ್ತಿಕೊಂಡು, ಹಿಂದೂ ಧರ್ಮದ ಸಾಧುಗಳು ಕಾವಿ ಉಡುಗೆಯನ್ನು ಧರಿಸಿಕೊಂಡು ಸಿಖ್ ಧರ್ಮದವರಂತೆ ಗಡ್ಡಗಳನ್ನು ಬೆಳೆಸಿಕೊಂಡು – ಹಿಂದುಗಳನ್ನು ಹತ್ತಿಕ್ಕಲು ಕಂಕಣಬದ್ಧರಾದರು. ಮುಂದೆ ಈ ಇವರೇ ಹಿಂದು ಗಳನ್ನು ನೆಲಕಚ್ಚಿಸಲು ಪಣತೊಟ್ಟು, ಇಸ್ಲಾಂಧರ್ಮದ ನಿಜ ಔದಾರ್ಯದ ತತ್ತ್ವಗಳನ್ನು ಬದಿಗೆ ಸರಿಸಿ, ಕೇವಲ ಮತಾಂಧತೆಯಿಂದ ರಾಕ್ಷಸೀ ಪ್ರವೃತ್ತಿಗಳಿಂದ ರಜಾಕಾರರಲ್ಲಿ ಅವರೆಲ್ಲ ಸೇರಿ ಹೋದರೆನ್ನುತ್ತಾರೆ ಆ ಕಾಲದ ಜನ.

ಈ ದೀನದಾರ ಪಂಗಡದ ದೃಷ್ಟಿಯು ಅದೆಷ್ಟು ವಿಪರ್ಯಾಸದಿಂದ ಕೂಡಿದ್ದಿತೆಂದರೆ – ಹಾಳಾದ ವಿಜಯನಗರದ ವೈಭವದ ಪಳೆಯುಳಿಕೆಗಳ ಹಾಳು ಹಂಪೆಯನ್ನು ಗೆಲ್ಲಲು ಸೈನ್ಯದೊಡನೆ ದಾಳಿ ಮಾಡಲು ನವಾಬ ಉಸ್ಮಾನ್ ಅಲಿಯನ್ನು ಹುರಿದುಂಬಿಸಿತ್ತಂತೆ. ಈ ದಾಳಿಯಿಂದ ಅಲ್ಲಿ ಹೂತು ಹೋದ ನಿಧಿಯು ಸುಲಭವಾಗಿ ನಿಜಾಂನ ಆಸ್ತಿಯಾಗುವುದೆಂಬ ಆತ್ಯಾಸೆಗೆ ಆ ನವಾಬನನ್ನು ಆಕರ್ಷಿಸುವಂತೆ ಮಾಡಿ, ತಾವು ಅದರ ದುರ್ಲಾಭವನ್ನು ಪಡೆಯುವುದೇ ಆ ದೃಷ್ಟಿಯ ಇಂಗಿತಾರ್ಥ ವಾಗಿಟ್ಟುಕೊಂಡು ಆ ನವಾಬನನ್ನು ವಿನಾಶದತ್ತ ಸೆಳೆದರು.

ಈ ಪಂಗಡದ ಅವನುಲ್ – ನಾಸ (Awanul-Nas) ಎಂಬ ಪುಸ್ತಕದಲ್ಲಿ ಮುಸ್ಲಿಮ್ ಬಂಧುಗಳನ್ನು ಕುರಿತು, ''ಖುರಾನ್ ಷರೀಫಿನ ಆದೇಶದ ಪ್ರಕಾರ ಒಬ್ಬ ಮುಸ್ಲಿಮನು ಇರುವ ದೇಶವೂ ಕೂಡ ಪಾಕಿಸ್ತಾನವಾಗಿ ಪರಿವರ್ತಿತವಾಗಲೇ ಬೇಕು. ಅದನ್ನು ಈ ರೀತಿ ಪರಿವರ್ತಿಸುವುದು ಪ್ರತಿಯೊಬ್ಬರಿಗೂ ಕೂರಾನೇ ಮಜಿದ್ (quran-e-Majid) ದ ನೀರನ್ನು ಕುಡಿಸಲೇಬೇಕು. ಏಕೆಂದರೆ ಒಂದು ಪಾಲು ಹಾಲು ಇದ್ದು, ಮೂರು ಪಾಲು (dung - ಕಲಗಚ್ಚು) ಕಲಕು ನೀರು ಇದ್ದರೆ ಅದೆಂತ ನಿರ್ಮಲವಾದ ಹಾಲು ಆಗುತ್ತದೆ. ಆದ್ದರಿಂದ ಆ ಪಾತ್ರೆಯು ನಿರ್ಮಲವಾದ ಗಟ್ಟಿ ಹಾಲಿನಿಂದ ಕೂಡಿರಬೇಕಾದ ಸ್ಥಾನವೇ ಇರಲಿ; ಅಲ್ಲಿ ಕಾಫಿರ ಸ್ಥಾನದ ಒಂದು ಕಣ ಇರುವವರೆಗೆ ಅದು ಪಾಕಿಸ್ಥಾನವಾಗಲಾರದು. ಅಂತೆಯೇ ಜಗತ್ತನ್ನು ಸಂಪೂರ್ಣ ಪಾಕಿಸ್ಥಾನಗೊಳಿಸುವುದು ಪ್ರತಿಯೊಬ್ಬ ಮುಸ್ಲಿಮನ ಆದ್ಯ ಕರ್ತವ್ಯ'' ಎಂಬ ಆದೇಶ ವಿರುವುದನ್ನು ಕೆ. ಎಂ. ಮುನಷಿ ಅವರ 'The end of an eara' ಉಲ್ಲೇಖಿಸಿದೆ. ಇಂತಹ ದುರಂತ ಆದೇಶವನ್ನು ಖುರಾನ ಷರೀಫ್ ನೀಡಲು ಸಾಧ್ಯವೇ ಇಲ್ಲ. ಆದರೆ ಮತಾಂಧತೆ ಯಿಂದಾಗಿ ಈ ಪಂಗಡದ ಜನ ನಿಜಾಂನ ಹೈದರಾಬಾದ ಸಂಸ್ಥಾನ ದಲ್ಲಿ 'ಅಮನ್' ಅನ್ನು ಅರ್ಥಾಥ್ ಶಾಂತಿಯನ್ನು ಕೆಡಿಸಲು, ಈ ತೆರನಾಗಿ ಅಪಾರ್ಥಗೊಳಿಸಿ ಸಾಮಾನ್ಯ ಜನತೆಯಲ್ಲಿ ನೆಮ್ಮದಿಯ ಸ್ಥಿತಿಯನ್ನು ಕಂಗಾಲಗೊಳಿಸಿ ಕ್ಷಮಾತೀತರಾದರು. ಶಾಸನ ಸಭೆಯ ಮಾತು ಮೂಡಿ ಬಂತು. ಆದರೆ ಅದು ೧೯೨೧ರ ಸೆಪ್ಟೆಂಬರದಲ್ಲಿ ಕಮರಿ ಹೋಯಿತು.

ಹೀಗೆ ಹೆಜ್ಜೆ ಹೆಜ್ಜೆಯಲ್ಲಿ ಇಂತಹ ಪ್ರಕ್ಷುಬ್ಧ ವಾತಾವರಣದ ನಿರ್ಮಾಣದ ಹಿನ್ನೆಲೆಯನ್ನಿಟ್ಟುಕೊಂಡು ನಿಜಾಂ ಸರಕಾರವು ೧೯೨೯ನೆಯ ಇಸ್ವಿಯಲ್ಲಿ ಸುತ್ತೋಲೆ (ಗಸ್ತಿ) ೫೩ ಎಂಬುದನ್ನು ಹೊರಡಿಸಿ ಸಂಸ್ಥಾನದ ಪರಿಸ್ಥಿತಿಯನ್ನು ಇನ್ನಷ್ಟು ಉಲ್ಬಣ ಗೊಳಿಸಿತ್ತು. ರಾಜಕೀಯ ಹಕ್ಕು, ಬಾಧ್ಯತೆಗಳಿಗೆ ತಿಲಾಂಜಲಿ ಯಂತಿರಲಿ, ಸಾಮಾಜಿಕ ಶೈಕ್ಷಣಿಕ ಧಾರ್ಮಿಕ ಹಾಗು ಸಾಂಸ್ಕೃತಿಕ ರೀತಿ ರಿವಾಜುಗಳಿಗೂ ಅರ್ಧಚಂದ್ರ ಬಂದಿತು. ವ್ಯಕ್ತಿ ಸ್ವಾತಂತ್ರ್ಯ ಮತ್ತು ಮಾನವನ ಮೂಲಭೂತ ಅಭಿಮಾನದ ಅಂಶಗಳಿಗೆ ಅಪಮಾನವಾಗತೊಡಗಿತು. ವ್ಯಕ್ತಿ ಗೌರವ, ಸ್ವಾಭಿಮಾನಗಳು ನೆಲಸಮವಾಗತೊಡಗಿದುವು. ಈ ಸುತ್ತೋಲೆಯ ದರೋಡೇ ಖೋರತನದ ಪರಮಾವಧಿಯು ಎಲ್ಲಿಯವರೆಗೆ ಮುಟ್ಟಿತ್ತೆಂದರೆ ಸತ್ಯನಾರಾಯಣನ ಪೂಜೆ ಮಾಡುವುದಕ್ಕೂ, ಮದುವೆಯ

ದಿಬ್ಬಣದಲ್ಲಿಯ ಗೊಂದಲ ಹಾಕಿಸುವಂತಹ ಸಂಪ್ರದಾಯದ ಪವಿತ್ರ ಪೂಜೆಗೂ, ಪಾಠಪ್ರವಚನ ಮಾಡುವುದಕ್ಕೂ ಸರಕಾರದ ಲಿಖಿತ ಅನುಮತಿಯು ಬೇಕಾಗುತ್ತಿತ್ತು. ಗಂಡ ಹೆಂಡತಿಯರು ಪ್ರೇಮದ ಮಾತುಗಳನ್ನಾಡಲೂ ಸರಕಾರದ ಕಣ್ಣನ್ನೆಯ ನೆರವು ಬೇಕಾಗಿತ್ತೆಂಬುದು ಹಗುರವಾದ ಮಾತಾದರೂ, ಇದರಲ್ಲಿಯ ಸತ್ಯಾಂಶದ ಕಿಚ್ಚು, ದಳ್ಳುರಿಯ ದಾರುಣತೆಯಿಂದ ಕೂಡಿದ್ದು. ಈ ರೀತಿ ವ್ಯಕ್ತಿ ಸ್ವಾತಂತ್ರ್ಯವನ್ನು ಹರಣ ಮಾಡಿದ ಹಗರಣದ ಉಲ್ಲೇಖಿತ ಸುತ್ತೋಲೆಯನ್ನು ಆಗಿನ ಜನತೆ, ಕಾಲಾಗಸ್ತಿ ಎಂದು ಭೀಭತ್ಸ ದಿಂದಲೇ ಕರೆಯತೊಡಗಿತು. (ಗಸ್ತಿಯಾ ಗಶ್ತಿ ಎಂಬುದು ಸುತ್ತೋಲೆಗೆ ಆಗಿನ ಆಡಳಿತ ಭಾಷೆಯಾಗಿದ್ದ ಉರ್ದುವಿನಲ್ಲಿಯ ಪಾರಿಭಾಷಿಕ ಶಬ್ದ) ಇಂಥ 'ಕಾಲಾಗಸ್ತಿ'ಯಿಂದ ಬೇಸತ್ತ ಜನತೆ, 'ಕಾಲಗಸ್ತಿ ವಿರೋಧಕ ಸಮಿತಿ' ಎಂಬುದನ್ನು ಹುಟ್ಟು ಹಾಕಿ, ನಾಗರಿಕ ಹಕ್ಕುಗಳ ಬಗ್ಗೆ ಸರಕಾರದ ಮನವೊಲಿಸುವ ಪ್ರಯತ್ನವನ್ನು ನಡೆಸಿತು. ಆದರೆ ಅಂದಿನ ಹೊಣೆಗೇಡಿ ಸರಕಾರವು ಅದರ ಮೇಲೆ ನೀರೆರೆಚಿತು. ಇದರಿಂದಾಗಿ ಜನತೆಯು, ದಿನೇ ದಿನೇ ರೊಚ್ಚಿಗೇಳುವ ಪ್ರಸಂಗವು ಬರತೊಡಗಿತು. ತತ್ ಪರಿಣಾಮವಾಗಿ ೧೯೩೭ನೆಯ ಇಸ್ವಿಯಲ್ಲಿ ಹೈದರಾಬಾದ ರಾಜಕೀಯ ಪರಿಷತ್ತು ಹೊಣೆಗಾರ ಸರಕಾರದ ಸ್ಥಾಪನೆಯ ಮೂಲ ಧ್ಯೇಯವುಳ್ಳ ಘಟನಾ ಸುಧಾರಣೆ ಗಳನ್ನು ತರುವ ನಿರ್ಣಯವನ್ನು ತೆಗೆದುಕೊಳ್ಳುವ ನಿರ್ಣಯವನ್ನು ತೆಗೆದುಕೊಳ್ಳುವಂತಾಯಿತು. ಈ ನಿರ್ಣಯವನ್ನು ಸರಕಾರವು ಗಮನಿಸಲೇ ಇಲ್ಲವೆಂಬುದು ಅತ್ಯಂತ ಖೇದದ ಸಂಗತಿ.

ಈ ಸಂದರ್ಭದಲ್ಲಿ ಭಾರತದ ಉಳಿದ ಭಾಗಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಪ್ರಜಾ ಆಂದೋಲನಗಳು ತೀವ್ರಗತಿಯಲ್ಲಿ ಸಂಘಟಿತವಾಗಿದ್ದುವು. ತತ್‌ಪರಿಣಾಮದಿಂದ ಹೈದರಾಬಾದ ಸಂಸ್ಥಾನದ ಪ್ರಜೆಗಳು ಕ್ರಮ ಕ್ರಮೇಣ ತಮ್ಮ ಹಕ್ಕುಗಳನ್ನು ಪಡೆಯುತ್ತ ಸಂಘಟಿತರಾಗತೊಡಗಿದರು. ಇದರಿಂದಾಗಿ ಸ್ವದೇಶಾಭಿಮಾನವೂ ಮತ್ತು ಸ್ವಾಭಿಮಾನವೂ, ಇವು ತೀವ್ರ ಜಾಗೃತಿಯನ್ನುಂಟು ಮಾಡಿದುದರ ಹಿನ್ನೆಲೆಯಲ್ಲಿ 'ಹೈದರಾಬಾದ್ ಸ್ವದೇಶಿ ಲೀಗ್' ಎಂಬುದು ಅಸ್ತಿತ್ವಕ್ಕೆ ಬಂದು ಚಳುವಳಿಯು ಒಂದು ಕನಿಷ್ಠ ರೂಪ ಪಡೆಯತೊಡಗಿತು. ಪರದೇಶೀ ವಸ್ತ್ರಗಳ ಬಹಿಷ್ಕಾರ, ಸಾಪ್ತಾಹಿಕ, ಧ್ವಜ ವಂದನೆಯ ಕಾರ್ಯಕ್ರಮಗಳು ಆರಂಭವಾದುವು. ರಾಜಕೀಯ ಹಕ್ಕುಗಳನ್ನು ಸಂಪಾದಿಸುವತ್ತ ಜನತೆಯ ಆಶೆಯವು ಗಾಢವಾಗತೊಡಗಿತು. ಹೀಗಾಗಿ ೧೯೩೮ನೆಯ ಇಸ್ವಿಯಲ್ಲಿ 'ನಿಜಾಂ ಪ್ರಜೆಗಳ ಸಂಸ್ಥೆ' ಎಂಬುದು ರೂಪುಗೊಂಡು, 'ಹೈದರಾಬಾದ ಸಂಸ್ಥಾನದ ಪ್ರಜೆಗಳೆಲ್ಲರೂ ಒಂದು; ಎಂದು ಸಾರಿ ನಾಗರಿಕರೇ ನಾಗರಿಕ ಹಕ್ಕುಗಳನ್ನು ಬಳಸುವ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ ಮೊದಲಾದ ಉದ್ದೇಶಗಳನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿತು. ಇದೆಲ್ಲವನ್ನು 'ರಾಜದ್ರೋಹ' ಎಂದು ಗ್ರಹಿಸಿದ ಅಂದಿನ ಸರಕಾರವು ಈ ಸಂಸ್ಥೆಯನ್ನೂ ಮುಟ್ಟುಗೋಲು ಹಾಕಿತು.

ಇದರಂತೆ ಇನ್ನೂ ಇಂತಹ ಉತ್ತಮ ಜನ ಹಿತಸಾಧನೆಯ ಸಂಘ ಸಂಸ್ಥೆಗಳನ್ನು ಸ್ವಜಾತಿ ಪಕ್ಷಪಾತದಿಂದ ಕೂಡಿದ ಸಂಸ್ಥೆಗಳೆಂಬ ಅಪವಾದಕ್ಕೆ ಗುರಿಮಾಡಿ ಆ ಸಂಸ್ಥೆಗಳನ್ನು ನಿರ್ನಾಮಗೊಳಿಸಲು ಪ್ರಯತ್ನಿಸಿತು. ಇದರಿಂದಾಗಿ ನಿಜಾಂ ಸರಕಾರವು ತಾನು ಸ್ವಜಾತಿ ಕೋಮಿನ ಪಕ್ಷಪಾತಿ ಎಂಬುದನ್ನು ತಾನೇ ಬಹಿರಂಗಪಡಿಸಿ ಉಳಿದ ಸಾಮಾನ್ಯ ಜನತೆಯ ಮನಸ್ಸನ್ನು ಕದಡುವಂತೆ ಮಾಡಿತು. ಮಾನವ ದ್ರೋಹಿಗಳು ಮತಾಂತರದ ಪಿಡುಗನ್ನು ಹಬ್ಬಿಸಿದಾಗಲೂ ನಿಜಾಂ ಸರಕಾರವು ಅದನ್ನು ತಡೆಗಟ್ಟದೆ ಪರೋಕ್ಷವಾಗಿ ಆ ದುಷ್ಕರ್ಮವನ್ನು ಪ್ರೋತ್ಸಾಹಿಸಿತು ಅನೇಕರು ಆರ್ಥಿಕ ದೌರ್ಬಲ್ಯಗಳನ್ನು ಬಳಸಿಕೊಂಡು, ಸಹಾಯ ಮಾಡುವ ನೆಪದಲ್ಲಿ ಭಾರತೀಯ ಸಂಸ್ಕೃತಿಯನ್ನು ನುಚ್ಚುನುರಿ ಮಾಡುವತ್ತ ಸರಕಾರದ ಧೋರಣೆಯು ಸ್ಪಷ್ಟವಾಗತೊಡಗಿತು. ಹಾಲು ಸಕ್ಕರೆಯಂತಹ ಸಾಮರಸ್ಯದ ಈ ಸಂಸ್ಥಾನದ ಬದುಕಿಗೆ ಒಳಕಿಚ್ಚು ಹತ್ತಿ ಹಾಹಾಕಾರವು ಏಳುವುದಕ್ಕೆ ಆಸ್ಪದವಾಯಿತು. ಆಳುವವನ ಮತಾಂಧತೆಯ ಧೃತರಾಷ್ಟ್ರತನದಿಂದಾಗಿ ನವಾಬ ಉಸ್ಮಾನ ಅಲಿಯ ಸ್ವಜಾತಿಯರು, ಬೇರೆ ಜಾತಿಯವರ ಭೂಮಿ ಸೀಮೆಗಳನ್ನು ಯಾವ ಆತಂಕವಿಲ್ಲದೆ ಕೊಂಡುಕೊಳ್ಳಬಹು ದಾಗಿತ್ತು. ಪರ್ಯಾಯವಾಗಿ ಬೇರೆ ಜಾತಿಯವರು ಮುಸ್ಲಿಮರಿಂದ ಯಾವ ಆಸ್ತಿಪಾಸ್ತಿಗಳನ್ನೂ ಕೊಳ್ಳುವಂತಿರಲಿಲ್ಲ. ಇಂಥ ಪಕ್ಷಪಾತ ಪೂರಿತ ಸರಕಾರಿ ಆಜ್ಞೆಯಿಂದಾಗಿ ರೊಚ್ಚಿಗೆದ್ದ ಬಹುಸಂಖ್ಯಾತ ಪ್ರಜೆಗಳು ಆರ್ಯಸಮಾಜದ ಮುಖಂಡತ್ವದಲ್ಲಿ ಆ ಸಂಬಂಧ ಆಜ್ಞೆಯನ್ನು ವಾಪಸ್ಸು ಪಡೆಯುವಂತೆ ಮಾಡಲು, 'ಮೋರಚಾ' ತೆಗೆದರು. ಜನತೆಯ ಸಂಘಟನೆಯು ಕಟ್ಟುನಿಟ್ಟಾಯಿತು. ಶಿಸ್ತಿನಿಂದ ನಿಷ್ಠೆಯಿಂದ ಸತ್ಯಾಗ್ರಹಗಳು ಆರಂಭವಾದುವು. ದೇಶದ ಬೇರೆ ಬೇರೆ ಪ್ರಾಂತಗಳಿಂದ ಸ್ವಯಂಸೇವಕರು ಅಸಂಖ್ಯಾತ ಸಂಖ್ಯೆಯಲ್ಲಿ ಬಂದು 'ಜೇಲಭರೋ' ಕಾರ್ಯಕ್ರಮವನ್ನು ಭಯಂಕರ ಸ್ವರೂಪಕ್ಕೆ ಮುಟ್ಟಿಸಿ ಅಖಿಲ ಭಾರತ ಚಳುವಳಿಯ ನಿಲುವಿಗೆ ಹುಮ್ಮಸ್ಸು ತಂದಿತು. ಈ ಸಂಸ್ಥಾನದಲ್ಲಿ ನಡೆದ ಈ ಚಳುವಳಿಯ ಮುಖಂಡತ್ವ ವನ್ನು ಪಂಡಿತ ನರೇಂದ್ರಜೀ, ಬನ್ಸಿಲಾಲ್ ವ್ಯಾಸ್, ಪನ್ನಾಲಾಲ್, ವಿನಾಯಕರಾವ್ ವಿದ್ಯಾಲಂಕಾರ, ದತ್ತಾತ್ರೇಯ ಪ್ರಸಾದ, ರಾಮಚಂದ್ರ ವೀರಪ್ಪ ಮೊದಲಾದವರು ವಹಿಸಿದ್ದರು. ಇವರ ಮುಖಂಡತ್ವದ ಈ ಚಳುವಳಿಯಿಂದಾಗಿ ಮತಾಂತರದ ಪಿಡುಗನ್ನು ಎಬ್ಬಿಸಿದ ಕೇಡಿಗೇಡಿಗಳ ಜಂಘಾಬಲವು ಉಡಗತೊಡಗಿತು.

ನಿಜಾಂ ಸರಕಾರವು ಇದರಿಂದಾಗಿ ರಾಷ್ಟ್ರಾಭಿಮಾನಿ ಯಾಗಿದ್ದ ಆರ್ಯಸಮಾಜವನ್ನು ಸಂಪೂರ್ಣ ರಾಜದ್ರೋಹಿ ಪಕ್ಷವೆಂದು ಭಾವಿಸಿ, ಆ ಸಂಘಟನೆಯೆಂದರೆ ಸರಕಾರಕ್ಕೆ ವಿಶೇಷ

ತಲೆಬೇನೆ ಎನ್ನುವಷ್ಟು ಸರಕಾರವು ಸಿಡಿದೇಳತೊಡಗಿತು. ಅದೇ ರೀತಿ, 'ಹಿಂದು ಸಿವಿಲ್ ಲಿಬರ್ಟೀಜ್ ಯುನಿಯನ್' ಮತ್ತು 'ಹಿಂದೂ ಮಹಾಸಭೆಗಳೂ ಕೂಡ ನಿಜಾಂ ಸರಕಾರಕ್ಕೆ ಸಿಂಹ ಸ್ವಪ್ನಗಳಾದುವು. ''ಇತ್ತಿಹಾದುಲ್ ಮುಸಲೀಮೀನ್'' ಎಂಬ ಸಂಸ್ಥೆಯು ನಿಜಾಂನ ಕೃಪಾಕ್ಷೇತ್ರದಿಂದ ಅಸ್ತಿತ್ವಕ್ಕೆ ಬಂದು ಆರ್ಯ ಸಮಾಜ ಮುಂತಾದ ಸಂಘಟನೆಗಳಿಗೆ ಪಾಟೀ ಸವಾಲನ್ನು ಎಸೆಯ ತೊಡಗಿತು. ಸರಕಾರದ ಪೋಷಣೆಯು ಅದಕ್ಕಿದ್ದುದ್ದರಿಂದ ಅದು ಬಲಿಷ್ಠವಾಗತೊಡಗಿ ಮುಗ್ಧರಾದ ಬಹುಸಂಖ್ಯಾತ ಜನರನ್ನು ಬಲಿ ತೆಗೆದುಕೊಳ್ಳತೊಡಗಿತು. ಇದರಿಂದಾಗಿ ಶ್ರೀ ಸಾಮಾನ್ಯನ ಬದುಕಿನಲ್ಲಿ ತಳಮಳ, ಅಸ್ಥಿರತೆ, ಭಯಗಳು ಆವರಿಸಿದುವು.

ಈ ದೌರ್ಜನ್ಯಗಳಿಂದ ಮುಗ್ಧ ಜನತೆಯನ್ನು ಸುರಕ್ಷಿತಗೊಳಿಸಲು, ನಾಗರಿಕ ಹಕ್ಕುಗಳನ್ನು ಪಡೆಯಲು ಅನೇಕ ಸಂಘ ಸಂಸ್ಥೆಗಳು ಹುಟ್ಟುತ್ತಲೇ ಇದ್ದುವು. ಸರಕಾರದ ಕಪಿಮುಷ್ಠಿಯಲ್ಲಿ ಅವು ಅಲ್ಪಾಯುಷಿಗಳಾಗುತ್ತಿದ್ದವು. ಆದರೆ ಸತ್ಯವನ್ನು ನ್ಯಾಯವನ್ನು ಎಷ್ಟು ದಿವಸಗಳವರೆಗೆ ಮುಚ್ಚಿಡಲು ಸಾಧ್ಯವಾಗುತ್ತದೆ! ಜನಜಾಗೃತಿಯು ಇನ್ನಷ್ಟು ತೀವ್ರ ದಳ್ಳುರಿಯಾಗುವ ಲಕ್ಷಣ ಕಂಡಾಗ ತನಗೆ ಉಳುಗಾಲವಿಲ್ಲವೆಂದು ಯೋಚಿಸಿದ ಸರಕಾರವು ಸುಧಾರಣಾ ಸಮಿತಿಗಳನ್ನು ರಚಿಸುವ ನಾಟಕ ವಾಡತೊಡಗಿತು. ಅದರ ನಿಯತ್ತು ಸಾಫ್ ಇರಲಿಲ್ಲವಾದ ಕಾರಣ ಸರಕಾರದ ಅಂತಹ ಸಮಿತಿಗಳ ಆಮಿಷಕ್ಕೆ ಜನತೆಯು ಬಲಿ ಬೀಳಲಿಲ್ಲ. ೧೯೩೭ನೆಯ ಇಸ್ವಿಯಲ್ಲಿ ದಿವಾಣ ಬಹಾದ್ದೂರ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯು ಏರ್ಪಟ್ಟಿತು. ಜನತೆಯು ಆಶಾವಾದಿಯಾಗಿ 'ಹೈದರಾಬಾದ್ ಪೀಪಲ್ಸ್ ಕನ್‌ವೆನ್‌ಷನ್' ಎಂಬ ಸಂಸ್ಥೆಯನ್ನು ಕಟ್ಟಿ ನಿಜಾಂ ಸರಕಾರವು ಹೊಣೆಗಾರ ಸರಕಾರವಾಗಿ ಸಮದರ್ಶಿಯಾಗಿ ಜನಹಿತ ರಕ್ಷಣೆಯನ್ನು ಮಾಡಬೇಕೆಂದು ತನ್ನ ಮನವಿಯನ್ನು ಸಮಿತಿಗೆ ಸಲ್ಲಿಸಿತು. ಆದರೆ ಸುಧಾರಣೆಗಳ ಬದಲಾಗಿ ವ್ಯಕ್ತಿಸ್ವಾತಂತ್ರ್ಯವನ್ನೇ ಹತ್ತಿಕ್ಕುವ ಹೊಣೆಗೇಡಿತನವನ್ನೇ ಮುಂದುವರೆಸಲು ಆ ಸರಕಾರವು ಮತ್ತೆ ತನ್ನ ಹಟಮಾರಿತನವನ್ನೇ ಮುಂದುವರೆಸಿತು. ಸರಕಾರದ ಈ ಹೊಣೆಗೆಟ್ಟ ನೀತಿಯಿಂದ ಜನಾಂದೋಲನವು ಇನ್ನಾವ ಕ್ರಮತೆಗೆದುಕೊಳ್ಳಬೇಕೆಂಬುದರ ಬಗ್ಗೆ ಹವ್ಹಾರದೇ (ಹೌಹಾರದೇ) ಯೋಚಿಸತೊಡಗಿತು.

ಇದೇ ಸಂದರ್ಭದಲ್ಲಿ ಹರಿಪುರ ಕಾಂಗ್ರೆಸ್ ಅಧಿವೇಶನವು ಶುಕ್ರತಾರೆಯಂತೆ ಹೈದರಾಬಾದ್ ಸಂಸ್ಥಾನಕ್ಕೆ ವರವಾಗಿ ಬಂದಿತು. ಆ ಅಧಿವೇಶನದಲ್ಲಿ ಬ್ರಿಟಿಷ್ ಆಡಳಿತದಲ್ಲಿಯಂತೆ ಕಾಂಗ್ರೆಸ್ಸಿನಂತಹ ಸಂಸ್ಥೆಯೊಂದು ಪ್ರತಿಯೊಂದು ದೇಶೀ ಸಂಸ್ಥಾನಗಳಲ್ಲಿ ಜನಜಾಗೃತಿಯನ್ನುಂಟು ಮಾಡಲು ಹುಟ್ಟು ಹಾಕಬೇಕೆಂದು ಅಭಿಪ್ರಾಯ ಪಡಲಾಯಿತು. ಪ್ರಜೆಗಳು ತಮ್ಮ ಕಾಲುಗಳ ಮೇಲೆ ತಾವೇ ನಿಲ್ಲುವುದನ್ನು ಕಲಿತರೆ ಸ್ವಾತಂತ್ರ್ಯ ಪ್ರಾಪ್ತಿಯು ಆದಷ್ಟು ಜಾಗ್ರತೆಯಿಂದ ಲಭ್ಯವಾಗುತ್ತದೆಂದು ನಿರ್ಧಾರವು ಮೂಡಿಬಂದಿತು. ಆಗ ಹೈದರಾಬಾದ ಸಂಸ್ಥಾನದ ಕೆಲವು ಸುವಿಚಾರಿಗಳು ಹರಿಪುರ ಕಾಂಗ್ರೆಸ್ಸಿನಿಂದ ಸ್ಫೂರ್ತಿಪಡೆದು, 'ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್' ಸಂಸ್ಥೆಯ ತಾತ್ಪೂರ್ತಿಕ ಸಮಿತಿಯನ್ನು ಅಸ್ತಿತ್ವಕ್ಕೆ ತಂದರು. ಒಂದೇ ಒಂದು ತಿಂಗಳಲ್ಲಿ ಸುಮಾರು ಹನ್ನೆರಡು ಸಾವಿರಕ್ಕೂ ಮೇಲ್ಪಟ್ಟು ಜನರು ಈ ಸಂಸ್ಥೆಯ ಸಾಮಾನ್ಯ ಸದಸ್ಯರಾದರು. ಇವರಲ್ಲಿ ಹಿಂದೂ, ಮುಸ್ಲಿಮ್, ಕ್ರಿಶ್ಚನ್ ಮೊದಲಾದ ಎಲ್ಲ ಕೋಮಿನ ಜನರೂ ತಮ್ಮ ಸ್ವಇಚ್ಛೆಯಿಂದ ಸದಸ್ಯರಾಗಲು ಉತ್ಸಾಹದಿಂದ ಬಂದು ಈ ಸಂಘಟನೆಯನ್ನು ಸೇರಿದರು.

ಬ್ರಿಟಿಷರಿಗೇ ಸಿಂಹ ಸ್ವಪ್ನವಾಗಿದ್ದ, 'ಕಾಂಗ್ರೆಸ್' ಎಂಬ ಪದವನ್ನು ಕೇಳಿದಾಕ್ಷಣ ನಿಜಾಂ ಸರಕಾರವು, ಆ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಅನುಲಕ್ಷಿಸದೇ ಏಕಮುಖಿಯಾಗಿ ಅದಕ್ಕೆ ಜಾತಿವಾದದ ಕಪ್ಪನ್ನು ಬಳೆದು ಆ ಸಂಸ್ಥೆಯು ಇನ್ನೂ ಅಸ್ತಿತ್ವಕ್ಕೆ ಬಾರದ ಮುನ್ನವೇ ಅದನ್ನು ಜಾತಿವಾದದ ಸಂಸ್ಥೆಯೆಂದು ಅದರ ಮೇಲೆ ನಿಷೇಧ ಹೇರಿತು. ಇದರಿಂದ ಜನತೆಯು ಭಯ ಪಡಲಿಲ್ಲ. ಹತಾಶವಾಗಲಿಲ್ಲ. ಪರ್ಯಾಯವಾಗಿ ನೂರ್ಮಡಿ ಧೈರ್ಯ ತಾಳಿ ಇಪ್ಪತ್ನಾಲಕನೆಯ ಅಕ್ಟೋಬರ್ ೧೯೩೮ರಂದು ''ಹೈದರಾಬಾದ ಸಂಸ್ಥಾನ ಕಾಂಗ್ರೆಸ್'' ಅಧಿಕೃತವಾಗಿ ಘೋಷಿಸಲ್ಪಟ್ಟು ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಗೆ ಗೋವಿಂದರಾವ್ ನಾನಲ್ ಅವರು ಅಧ್ಯಕ್ಷರಾಗಿಯೂ, ಎಚ್. ರಾಮಕೃಷ್ಣ ದೂತರು ಕಾರ್ಯದರ್ಶಿಗಳಾಗಿಯೂ, ಜನಾರ್ಧನರಾವ್ ದೇಸಾಯಿ, ಆರ್. ನಾರಾಯಣ ರೆಡ್ಡಿ ಹಾಗೂ ಶ್ರೀನಿವಾಸರಾವ್ ಬೋರ್‍ಗಿಕರ್ ಅವರು ಕಾರ್ಯಸಮಿತಿಯ ಸದಸ್ಯರಾಗಿಯೂ ಜವಾಬ್ದಾರಿಯನ್ನು ವಹಿಸಿಕೊಂಡರು. ಮತ್ತು ಅದೇ ಇಪ್ಪತ್ನಾಲಕನೆಯ ಅಕ್ಟೋಬರ್ ದಂದೇ ಈ ಐದು ಜನ ನಾಯಕರು ಸತ್ಯಾಗ್ರಹ ಮಾಡಿ ಬಂಧನಕ್ಕೊಳಗಾದರು. ಆ ದಿನ ಬಲಿಪಾಡ್ಯಮಿಯಾಗಿದ್ದುದು ಕೂಡ ಒಂದು ಯೋಗಾಯೋಗ.

ಹೈದರಾಬಾದ ಸಂಸ್ಥಾನ ಕಾಂಗ್ರೆಸ್ ಅಸ್ತಿತ್ವಕ್ಕೆ ಬರುವ ಮುನ್ನ ಮೀರ ಉಸ್ಮಾನ ಅಲಿ ನವಾಬನು ತಾನು ಸಿಂಹಾಸನಕ್ಕೆ ಬಂದ ರಜತ ಮಹೋತ್ಸವನ್ನು ಆಚರಿಸಿದಾಗ, 'ವಂದೇ ಮಾತರಂ' ಹಾಡುವ ಚಳುವಳಿಯು ಸಂಸ್ಥಾನಿ ಸರಕಾರವನ್ನು ನಡುಗಿಸುವ ಸಾಮರ್ಥ್ಯವನ್ನು ಪಡೆಯಿತು. ಮುಂದೆ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದ ಮೇಲೆ ಸತ್ಯಾಗ್ರಹದ ಸುರಿಮಳೆಯಾಗತೊಡಗಿತು. ನಿಜಾಂ ಸರಕಾರದ ಎದೆಯು ಅಳ್ಳೆದೆಯಾಯಿತು. ಆದರೂ ಭಂಡತನದಿಂದ ಮಾತ್ರ ವರ್ತಿಸುವುದನ್ನು ಬಿಡಲಿಲ್ಲ. ದೇಶದ ಪರಿಸ್ಥಿತಿಗನುಸರಿಸಿ ಬಂಧಿತರಾದ ನಾಯಕರನ್ನೂ, ಉಳಿದ ಸತ್ಯಾಗ್ರಹಿಗಳನ್ನು ಮುಂದೆ

೧೯೩೮ನೆಯ ಇಸ್ವಿಯ ಏಪ್ರಿಲ್ ೧೧ರಂದು ಬಿಡುಗಡೆ ಮಾಡಿದರೂ, ಕಾಂಗ್ರೆಸ್ಸಿನ ಮೇಲಿನ ನಿಷೇಧವನ್ನು ರದ್ದು ಪಡೆಸಲಿಲ್ಲ. ಈ ಕಾಂಗ್ರೆಸ್ ಸಂಸ್ಥೆಯು ಕೇವಲ ರಾಷ್ಟ್ರೀಯ ಮನೋಭಾವನೆಯಿಂದ ಕೂಡಿದ್ದು ಸಂಸ್ಥಾನದ ಹಿತವನ್ನೇ ಬಯಸುವಂತಹದಾಗಿತ್ತು. ಯಾವ ತರಹದ ಭೇದ ಭಾವನೆ ಗಳಿಲ್ಲದೆ ಸಂಸ್ಥಾನದ ಎಲ್ಲ ಪ್ರಜೆಗಳ ಲೇಸನ್ನೇ ಅದು ಬಯಸುತ್ತಿತ್ತು. ಇಂಥ ಈ ಸಂಸ್ಥೆಯ ಮೇಲಿನ ನಿಷೇಧವನ್ನು ರದ್ದುಗೊಳಿಸುವಂತೆ ಸರಕಾರದ ಮೇಲೆ ಪ್ರಭಾವ ಬೀರಲು ಕಾಶೀನಾಥರಾವ್ ವೈದ್ಯ ಮೊದಲಾದವರು ಪ್ರಯತ್ನ ಮಾಡಿದರು. ಆದರೆ ಅದು ನೀರಿನ ಮೇಲಿನ ಬರಹವಾಯಿತು. ಆದರೂ ಜನಾಂದೋಲನವು ನಿಲ್ಲಲಿಲ್ಲ. ಈ ಆಂದೋಲನವನ್ನು ಭಾಷಾವಾರು ಆಧಾರದ ಮೇಲೆ ತೆಲಂಗಾಣಾ, ಮರಾಠವಾಡ, ನಿಜಾಂ ಕರ್ನಾಟಕ ಎಂದು ಮೂರು ಪರಿಷತ್ತುಗಳು ಅಸ್ತಿತ್ವಕ್ಕೆ ಬಂದು ಜನತೆಯಲ್ಲಿ ರಾಷ್ಟ್ರೀಯ ಭಾವನೆಯನ್ನು ಜಾಗ್ರತ ಗೊಳಿಸಲು ಪ್ರಯತ್ನಿಸಿದುವು. ಪ್ರಜಾಪ್ರಭುತ್ವದ ಅನುಕಲ್ಪನೆಯನ್ನು ನೀಡಿದುವು. ನಾಗರಿಕರ ಹಕ್ಕು ಭಾಧ್ಯತೆಗಳನ್ನು ತಿಳಿ ಹೇಳಿದವು. ಹೀಗಾದಾಗ ಈ ಪರಿಷತ್ತುಗಳಿಗೆ ಜನಬೆಂಬಲವು ಸಂಪೂರ್ಣವಾಗಿ ದೊರೆಯಲು ಸಾಧ್ಯವಾಯಿತು. ಆಗ ಬಹಿರಂಗವಾಗಿ ಸಭೆ ಸಮ್ಮೇಳನಗಳು ನಡೆಯತೊಡಗಿದವು. ಸಕಾಲಕ್ಕೆ ಮಹಾತ್ಮಾ ಗಾಂಧೀಜಿ ಅವರ ಮಾರ್ಗದರ್ಶನವೂ ದೊರೆಯತೊಡಗಿತು. ಹೀಗಾಗಿ ಸ್ವಾಮೀ ರಾಮಾನಂದ ತೀರ್ಥರು ಮಹಾತ್ಮಾ ಗಾಂಧೀಜಿ ಅವರ ನೇರ ಸಂಪರ್ಕವನ್ನು ಇಟ್ಟುಕೊಂಡು ಸಕಾಲಕ್ಕೆ ನಿರ್ದೇಶನ ಗಳನ್ನು ಪಡೆಯುತ್ತ ಹೈದರಾಬಾದ ಸಂಸ್ಥಾನದ ಜನಾಂದೋಲನದ ಪ್ರಮುಖ ನೇತಾರರಾಗಿ ಯೋಗ್ಯಮಾರ್ಗ ದರ್ಶನವನ್ನು ನೀಡಲು ಅನುಕೂಲವಾಯಿತು. ಒಂದೇ ಮಾತಿನಲ್ಲಿ ಹೇಳುವುದಾದರೆ, ಅವರು ಈ ಚಳುವಳಿಗೆ ತಮ್ಮನ್ನು ತಾವು ಸಂಪೂರ್ಣವಾಗಿ ಅರ್ಪಿಸಿಕೊಂಡವರಾಗಿದ್ದರು.

'ಚಲೇ ಜಾವ್' ಚಳುವಳಿಯು ಅಸೇತು ಹಿಮಾಚಲ ಬ್ರಿಟಿಷ್ ಆಡಳಿತಕ್ಕೆ ನುಂಗಲಾರದ ತುತ್ತಾದಾಗ ದೇಶದ ರಾಜಕೀಯ ಸ್ಥಿತಿಯ ಸ್ವರೂಪವು ಬದಲಾಗತೊಡಗಿತು. ತತ್ ಪರಿಣಾಮವಾಗಿ ಹೈದರಾಬಾದ ಸಂಸ್ಥಾನವು ಆ ಬದಲಾದ ಪರಿಸ್ಥಿತಿಗೆ ಕಿಂಚಿತ್ತಾದರೂ ಹೊಂದಿಕೊಳ್ಳಬೇಕಾಯಿತು. ಆಗ ನಿಜಾಂ ಸರಕಾರವು ೧೯೪೬ನೆಯ ಇಸ್ವಿಯಲ್ಲಿ ಹೈದರಾಬಾದ ಸಂಸ್ಥಾನದ ಕಾಂಗ್ರೆಸ್ಸಿನ ಮೇಲೆ ಹೇರಿದ್ದ ನಿಷೇಧಾಜ್ಞೆಯನ್ನು ರದ್ದು ಪಡಿಸಿತು. ತತ್‌ಕ್ಷಣ ಪ್ರಾಂತೀಯ ಪರಿಷತ್ತುಗಳು ಕಾಂಗ್ರೆಸ್ಸಿನೊಡನೆ ವಿಲೀನವಾಗಿ, ಕಾಂಗ್ರೆಸ್ ಸಂಘಟನೆಯು ಹೆದ್ದೊರೆಯಾಯಿತು. ಇಂತಹ ಶಕ್ತಿಯುತ ಸಂಘಟನೆಯು ಸ್ವಾಮೀ ರಾಮಾನಂದ ತೀರ್ಥರ ಸಂಸ್ಥಾನದ ಹಳ್ಳಿ ಹಳ್ಳಿಗಳಲ್ಲಿ ತಿರುಗಾಡಿ ನಿಜಾಮನ ದುರಾಡಳಿತದ ಬಗ್ಗೆ ಹೊಣೆಗೇಡಿತನದ ಬಗ್ಗೆ ತಿಳಿವಳಿಕೆ ನೀಡಿದರು.

ಬ್ರಿಟಿಷರು ಭಾರತದಿಂದ ತೊಲಗಲು ತಮ್ಮ ಗುಡಿಜಾಪಿ ಗಳನ್ನು ಕಟ್ಟುತ್ತಿರುವಾಗ, ಹೈದರಾಬಾದ ನವಾಬನಿಗೂ ಘಟನಾತ್ಮಕ ಸುಧಾರಣೆಗಳನ್ನು ತರುವ ಹವ್ಯಾಸ ಮೂಡಿತು. ಆದರೆ ಅದು ಅವೈಜ್ಞಾನಿಕವಾಗಿದ್ದುದರಿಂದ ಅರೋಮುದ್ಯೆಂಗಾರ್ ಅವರ ಸಮಿತಿಯ ಶಿಫಾರಸ್ಸುಗಳನ್ನು ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್ ಒಪ್ಪಲಿಲ್ಲ. ಮುಂದೆ ಬ್ರಿಟಿಷರ ನಿರ್ಗಮನವು ಖಚಿತ ವಾದಾಗ, 'ಯಥಾಸ್ಥಿತಿ' ಒಪ್ಪಂದವನ್ನು ಜಾರಿಯಲ್ಲಿಟ್ಟು ಹೋಗಲು ನಿಶ್ಚಯಿಸಿದರು. ಇದರಿಂದಾಗಿ ನಿಜಾಂನು ತಾನು ಸಾರ್ವಭೌಮ ನಾಗಬೇಕೆಂದೂ, ಹೈದರಾಬಾದ ಸಂಸ್ಥಾನವು ತನ್ನ ಸ್ವತಂತ್ರ ರಾಷ್ಟ್ರವೆಂದೂ ಕನಸು ಕಾಣತೊಡಗಿದನು. ಆದರೆ ಸ್ವಾಮೀ ರಾಮಾನಂದ ತೀರ್ಥರ ನೇತೃತ್ವದ ಜನತಾಂದೋಲನವು ಈ 'ಯಥಾಸ್ಥಿತಿ'ಯ ಸೂತ್ರಕ್ಕೆ ಒಪ್ಪದೆ, ಹೈದರಾಬಾದ ಸಂಸ್ಥಾನವು ಭಾರತ ಒಕ್ಕೂಟದಲ್ಲಿ ಸೇರ್ಪಡೆಯಾಗಬೇಕು ಮತ್ತು ಪ್ರಜಾಸತ್ತೆ ಯನ್ನು ಆಧರಿಸಿ ಪೂರ್ಣ ಜವಾಬ್ದಾರಿ ಸರಕಾರವು ಅಸ್ತಿತ್ವಕ್ಕೆ ಬರಬೇಕು ಎಂಬ ಈ ಎರಡು ಅಂಶಗಳನ್ನು ಪಟ್ಟು ಹಿಡಿದು ಚಳುವಳಿಯನ್ನು ಇನ್ನಷ್ಟು ಸುಸಂಘಟಿತಗೊಳಿಸಿತು.

ಆ ಸಂದರ್ಭದಲ್ಲಿ ನಿಜಾಂನ ಪ್ರಧಾನಮಂತ್ರಿಯಾಗಿದ್ದ ಲಾಯಕ್ ಅಲಿಯು ಹೊಣೆಗಾರ ಸರಕಾರದ ರಚನೆಗಾಗಿ ಮತ್ತೆ ಒಂದು ಅವೈಜ್ಞಾನಿಕವಾದ ಸೂತ್ರವನ್ನು ಮುಂದಿಟ್ಟನು. ಆ ಸೂತ್ರದ ಪ್ರಮುಖವಾದ ಅಂಶಗಳು ಇವೆ :

೧. ಶಾಸನ ಸಭೆಯಲ್ಲಿ, ಮೊದಲ ಮೂರು ವರ್ಷಗಳವರೆಗೆ ಪ್ರತಿಶತ ಹನ್ನೆರಡು ಜನ ಸಂಖ್ಯೆಯಿರುವ ಮುಸ್ಲಿಮರಿಗೆ ಪ್ರತಿಶತ ಎಪ್ಪತ್ತೈದು ಸ್ಥಾನಗಳು ಮೀಸಲಿರಬೇಕು. ಇನ್ನುಳಿದ ಪ್ರತಿಶತ ಎಪ್ಪತ್ತೈದು ಉಳಿದೆಲ್ಲ ಜನರಿಗಾಗಿ ಮೀಸಲಿರ ಬೇಕು.

೨. ಮುಂದಿನ ಮೂರು ವರ್ಷಗಳಲ್ಲಿ ಪ್ರತಿಶತ ಐವತ್ತರಂತೆ ಮೀಸಲಿರಬೇಕು.

೩. ಮತ್ತೆ ಮುಂದಿನ ಮೂರು ವರ್ಷ ಪ್ರತಿಶತ ಇಪ್ಪತ್ತೈದು ಸ್ಥಾನಗಳು ಮುಸ್ಲಿಮರಿಗಾಗಿ ಮತ್ತು ಪ್ರತಿಶತ ಎಪ್ಪತ್ತೈದು ಸ್ಥಾನಗಳು ಮುಸ್ಲಿಮೇತರರಿಗಾಗಿ ಮೀಸಲಿರಬೇಕು.

ಈ ಅವೈಜ್ಞಾನಿಕ ಸೂತ್ರವನ್ನು ಸ್ವಾಮೀ ರಾಮಾನಂದ ತೀರ್ಥರು ಸಾರಾಸಗಟು ನಿರಾಕರಿಸಿದರು. ಅನಂತರ ನಿಜಾಂ ಸರಕಾರವು ಮೇಲಿನ ಸೂತ್ರಕ್ಕೆ ಮತ್ತೊಂದು ಭಾರಿ ಗಂಡಾಂತರದ ಅಂಶವನ್ನು ಸೇರಿಸಿತು. ಅದೇನೆಂದರೆ, "ಒಂದು ವೇಳೆ ಭಾರತಕ್ಕೂ ಪಾಕಿಸ್ತಾನಕ್ಕೂ ಯುದ್ಧವಾದರೆ ಹೈದರಾಬಾದ ಸಂಸ್ಥಾನವು ಅಲಿಪ್ತವಾಗಿರುತ್ತದೆ" ಎಂಬುವದೇ ಆ ಅಂಶ. ಈ ಅಂಶದಿಂದ ನಿಜಾಂ ಸರಕಾರದ ಬಣ್ಣವು ಬಯಲಾಯಿತು. ಮತ್ತೆ ಯಾವುದಕ್ಕೂ

ಕಾಯದೆ, ಮತ್ತೇನನ್ನೂ ನೋಡದೆ, ಮತ್ತಷ್ಟು ರಭಸದಿಂದ ಜನಬೆಂಬಲವನ್ನು ಪಡೆದು ಬೃಹತ್ ಚಳುವಳಿಗೆ ಜನತೆ ಧಾವಿಸಿತು.

ಅಷ್ಟರಲ್ಲಿ ಭಾರತಕ್ಕೆ ಹದಿನೈದನೆಯ ಆಗಸ್ಟ್ ಹತ್ತೊಂಬತ್ತೂರು ನಲವತ್ತೇಳನೆಯ ಇಸ್ವಿಯಂದು ಬಹು ದಿವಸಗಳ ಕನಸಾಗಿದ್ದ ಸ್ವಾತಂತ್ರ್ಯವು ಸಿಕ್ಕಿತು. ದಿಲ್ಲಿಯ ಕೆಂಪುಕೋಟೆಯ ಮೇಲೆ ತ್ರಿವರ್ಣ ಧ್ವಜವು ಹಾರಿತು. 'ವಂದೇ ಮಾತರಂ' 'ಜನಗಣಮನ'ಗಳು ಮೊಳಗಿದವು. ಆದರೆ ಹೈದರಾಬಾದ ಸಂಸ್ಥಾನದಲ್ಲಿ ತ್ರಿವರ್ಣ ಧ್ವಜವು, ವಂದೇ ಮಾತರಂ ಗೀತೆ, ರಾಷ್ಟ್ರನಾಯಕರ ಭಾವಚಿತ್ರಗಳು - ಇವೆಲ್ಲ ರಾಜದ್ರೋಹದ ಸಂಕೇತವೆಂದು ಬಹಿಷ್ಕೃತವಾದುವು. ಹೈದರಾಬಾದಿನ ಜನತೆ ನಿಜಾಮನ ಕಪಿಮುಷ್ಟಿಯಲ್ಲಿದ್ದರೂ ಸ್ವಾತಂತ್ರ್ಯವು ದೊರೆತ ಹಬ್ಬಕ್ಕಾಗಿ ಅಂತರಂಗದಲ್ಲಿ ಹರ್ಷವನ್ನು ತುಂಬಿಕೊಂಡರು. ಆದರೆ ಇತ್ತಿಹಾದುಲ್ ಮುಸ್ಲಿಂ ಸಂಘಟನೆಯ ನಾಯಕನಾದ ಕಾಶೀಂ ರಝ್ವಿಯ ಮಾತುಗಳಿಗೆ ಬಲಿ ಬಿದ್ದ ನಿಜಾಂನು ಮುಗ್ಧ ಜನರ ಪಾಲಿಗೆ ರಾಕ್ಷಸನಾದನು.

ಕಾಶೀಂ ರಝ್ವಿಯು ದಕ್ಷಿಣ ಭಾರತದಲ್ಲಿ ಮುಸ್ಲಿಂ ರಾಷ್ಟ್ರದ ಕನಸು ಕಂಡು, ನಿಜಾಂನನ್ನು ತನ್ನ ಕೈಗೊಂಬೆಯಾಗಿಸಿಕೊಂಡು, ಆತನ ವಿವೇಕವನ್ನು ನಿರ್ನಾಮ ಮಾಡಿದನು. ರಜಾಕಾರರ ಪಡೆಯನ್ನು ನಿರ್ಮಾಣಮಾಡಿ ಲಕ್ಷ್ಯಾಂತರ ಅಮಾಯಕ ಪ್ರಜೆಗಳನ್ನು ಕೊಂದನು. ಅನೇಕ ಸ್ತ್ರೀಯರು ಮಕ್ಕಳು ಅತ್ಯಾಚಾರಕ್ಕೊಳಗಾದರು. ಮತಾಂತರಕ್ಕೂ ಒಳಗಾದರು. ಜನಹಿತವನ್ನು ಬಯಸಿದ, ರಾಷ್ಟ್ರೀಯ ಮನೋವೃತ್ತಿಯ ಎಲ್ಲ ಜಾತಿ ಪಂಗಡದ ಜನರನ್ನು ಕೂಡ ನಿಶ್ಶಸ್ತ್ರಗೊಳಿಸಿದರು. ಅವರೊಡನೆ ದೌರ್ಜನ್ಯದಿಂದ ನಡೆದು ಕೊಂಡರು. ಗ್ರಾಮಾಂತರದಲ್ಲಿಯೂ ಈ ಉಪಟಳವು ಮುಟ್ಟಿದಾಗ, ಊರಿಗೇ ಊರೇ ಖಾಲಿಯಾಗಿ, ಗಡಿಗಳಲ್ಲಿ ಜನತೆ ನೆಲೆಸತೊಡಗಿತು. ನಿರಾಶ್ರಿತರ ಶಿಬಿರಗಳೇರ್ಪಟ್ಟವು. ರಾಷ್ಟ್ರಭಕ್ತಿಯ ಧೀಶಕ್ತಿಯಿಂದ ಸ್ವಾತಂತ್ರ್ಯ ಸೇನಾನಿಗಳು ಸಿದ್ಧರಾದರು. ಸಣ್ಣಾಗಿ ಸಣ್ಣ ದೊಡ್ಡ ಉಪಟಳಗಳು ಸರಣಿಯಾಗಿ ನಡೆದೇ ಇದ್ದುವು. ಅಪಮಾನವುಂಟಾಗುವ ಸಂದರ್ಭ ಬಂದಾಗ ಆತ್ಮರಕ್ಷಣೆಯ ಸವಾಲುಧುತ್ತೆಂದಾಗ ಸ್ವಾತಂತ್ರ್ಯ ಸೇನಾನಿಗಳು ವೀರಾವೇಶ ತಾಳಿ ಆ ಉಪಟಳಗಳನ್ನು ಎದುರಿಸಿದರು. ನಿಜಾಂನ ಪೋಲಿಸರಿಗೆ, ರಜಾಕಾರರಿಗೆ ಪಾಠ ಕಲಿಸಿದರು.

ಗಡಿ ಪ್ರದೇಶಗಳಲ್ಲಿಯ ಶಿಬಿರಗಳಿಂದಾಗಿ ಹೊರಗಿನಿಂದ ಒತ್ತು ಒತ್ತಡವಾಗಿ ಬಿದ್ದು ನಿಜಾಮನು ಹೆದರಬೇಕಾಯಿತು. ಆದರೂ ಕಾಶಿಂ ರಝ್ವಿಯ ಚುಚ್ಚುವಿಕೆಯಿಂದಾಗಿ ಬಾಗಿ ಸಂಯುಕ್ತ ರಾಷ್ಟ್ರಸಂಸ್ಥೆಯಲ್ಲಿ, ನಿಜಾಂನು ತಾನು ಹೈದರಾಬಾದ ಸಂಸ್ಥಾನದ ಸಾರ್ವಭೌಮನೆಂದು ಪ್ರಸ್ಥಾಪಿಸಲು ಪ್ರಕರಣವನ್ನು ದಾಖಲು ಮಾಡಿದ್ದನು. ಇದನ್ನು ಸಹಿಸದೆ ಬಹುಸಂಖ್ಯಾತ ಜನತೆ ಮತ್ತು ಜನಾಂದೋಲನದ ನಾಯಕರು ಕೇಂದ್ರ ಸರಕಾರಕ್ಕೆ ತಮ್ಮ ಗಂಡಾಂತರದ ಸ್ಥಿತಿಯನ್ನು ಬಿನ್ನವಿಸಿತು. ನಿಜಾಂನು ಕಾಫಿರರಿಗಾಗಿ ಖತಲೇ ಆಮ್ (ಸಾಮೂಹಿಕ ಕೊಲೆ)ಗಾಗಿ ಆದೇಶ ಕೊಟ್ಟಿರುವನೆಂದು ತಿಳಿಯಿತು. ಆಗ ಕೇಂದ್ರ ಸರಕಾರದಲ್ಲಿ ಗೃಹಮಂತ್ರಿಯೂ ಉಪ ಪ್ರಧಾನಿಯೂ ಆಗಿದ್ದ ಉಕ್ಕಿನ ಮನುಷ್ಯ ಸರ್ದಾರ್ ವಲ್ಲಭಭಾಯಿ ಪಟೇಲರು ಪರಿಸ್ಥಿತಿಯ ಸೂಕ್ಷ್ಮತೆಯನ್ನು ಅನುಲಕ್ಷಿಸಿ ತತ್‌ಕ್ಷಣವೇ ಪೋಲೀಸ ಕಾರ್ಯಾಚರಣೆಯನ್ನು ನಡೆಸಿದರು. ಈ ಪೋಲೀಸ್ ಕಾರ್ಯಾಚರಣೆಯು ಆರಂಭವಾದ ಐದೇ ದಿವಸಗಳಲ್ಲಿ ಎಂದರೆ ಹದಿನೇಳನೆಯ ಸೆಪ್ಟೆಂಬರ್ ೧೯೪೮ರಂದು ಹೈದರಾಬಾದ ಸಂಸ್ಥಾನವನ್ನು ಗುಲಾಮಗಿರಿಯಿಂದ ಮುಕ್ತಗೊಳಿಸಿ ಆ ಸಂಸ್ಥಾನವನ್ನು ಭಾರತ ಒಕ್ಕೂಟದಲ್ಲಿ ವಿಲೀನಗೊಳಿಸಲು ಆ ಮುತ್ಸದ್ದಿಗೆ ಮಾತ್ರ ಸಾಧ್ಯವಾಯಿತು.

ಆಗ ಬೇಚಿರಾಗ್ (ನಿರ್ವಸತಿ) ಆಗಿದ್ದ ಹಳ್ಳಿಗಳು ದೀಪೋತ್ಸವವನ್ನು ಮಾಡಿದುವು. ಸುಟ್ಟು ಬೂದಿಯಾಗಿದ್ದ ಹಳ್ಳಿಗಳು ಚಿಗುರಿದುವು. ಬತ್ತಿದ ಹೃದಯದ ಕೊಳ್ಳಗಳೆಲ್ಲ ತುಂಬಿದುವು. ಹಾಲು ಹಳ್ಳ ಹರಿಯಿತು ಬೆಳ್ಳಿ ಬಟ್ಟಲು ತುಂಬಿತು.

ಈ ಸಂದರ್ಭದಲ್ಲಿ ಪೋಲೀಸ ಕಾರ್ಯಾಚರಣೆಯನ್ನು ಮಾಡುತ್ತ ಬಂದ ಭಾರತದ ಪಡೆ, ಇನ್ನೇನು ಹೈದರಾಬಾದು ತಲುಪಲು ಕೂಗಳತೆಯಲ್ಲಿದ್ದಾಗಲೂ, ಉಸ್ಮಾನ್ ಅಲಿ ನವಾಬನಿಗೆ ಕಾಶೀಂ ರಝ್ವಿಯು, 'ನಮಗೆ ಜಯ ಖಂಡಿತ' ಎಂದು ಹೇಳುತ್ತಿದ್ದನಂತೆ. ಕೊನೆಯ ಗಳಿಗೆಯಲ್ಲಿ ಜನಪರ ಧೋಣೆಯ, ಜನಹಿತರಕ್ಷಣೆಯ ಅಧಿಕಾರಿಗಳ : ನಾಯಕರ ತಿಳಿ ಹೇಳಿಕೆಯಿಂದಾಗಿ ನಿಜಾಂನು ಭಾರತ ಸರಕಾರಕ್ಕೆ ಶರಣಾಗತನಾದನು. ತತ್‌ಕ್ಷಣ ಹೈದರಾಬಾದ ಸಂಸ್ಥಾನದ ಜನತೆಯ ನಾಯಕ, ಹೈದರಾಬಾದ ಸಂಸ್ಥಾನದ ಮಹಾತ್ಮ, ಸ್ವಾಮೀ ರಾಮಾನಂದ ತೀರ್ಥರನ್ನು ಜೇಲಿನಿಂದ ಆ ಸರಕಾರವು ಬಿಡುಗಡೆ ಮಾಡಿ ಆಕಾಶವಾಣಿಯ ಮೂಲಕ ನಾಡವರಿಗೆ ಸ್ವಾತಂತ್ರ್ಯದ ಸಂದೇಶವನ್ನು ನೀಡುವಂತೆ ಮಾಡಿತು.

ಹೀಗೆ ಲಕ್ಷ್ಯಾಂತರ ಮುಗ್ಧ ಜನರ ಪ್ರಾಣ ತ್ಯಾಗದಿಂದಲೂ, ಲಕ್ಷಾಂತರ ಸ್ವಾತಂತ್ರ್ಯ ಹೋರಾಟಗಾರರ ಹೋರಾಟದಿಂದಲೂ, ರಾಷ್ಟ್ರನಾಯುಕರ ವಿವೇಕಪರ ಮಾರ್ಗದರ್ಶನದಿಂದಲೂ, 'ಖತಲೀ ಆಮ್'ದಲ್ಲಿ ನರಪಿಳ್ಳೆಯೂ ಉಳಿಯದೇ ಹೋಗಬೇಕಾದ ಪ್ರಸಂಗವು ಜಾರಿಬಿದ್ದು - ಹೈದರಾಬಾದಿನ ಸಕಲ ಪ್ರಜೆಗಳು ಸ್ವಾತಂತ್ರ್ಯವನ್ನು ಪಡೆದು ಪ್ರಜಾರಾಜ್ಯದ ಭಾಗ್ಯವನ್ನು ಪಡೆಯುವಂತಾದುದು ಭಾರತ ಭಾಗ್ಯ ವಿಧಾತನ ಉಜ್ವಲ ಭವಿಷ್ಯವನ್ನು ಸೂಚಿಸುತ್ತದೆ.

ಈ ರೀತಿ ಹೈದರಾಬಾದ ಸಂಸ್ಥಾನದ ವಿಮುಕ್ತಿ

ಚಳುವಳಿಯು ಮೊದಮೊದಲು ಸುಪ್ತವಾಗಿದ್ದು, ಒಳಗೊಳಗೇ ಕಿಡಿಹಾಯ್ದು, ಬಂದದ್ದನ್ನೆಲ್ಲ ನುಂಗುತ್ತ - ಕೊನೆಯಲ್ಲಿ ಎಂದರೆ ಭಾರತಕ್ಕೆ ಸ್ವಾತಂತ್ರ್ಯವು ಸಿಕ್ಕ ಕ್ಷಣದಿಂದ ಆಸ್ಫೋಟವಾಗಿ ತಡೆದ ಮೋಡ ಒಮ್ಮೆಲೆ ಧಾರಾಕಾರವಾಗಿ ಮಳೆಯಾಗಿ ಬಿದ್ದು, ಇಡೀ ಕೊಳಕನ್ನೆಲ್ಲ ತುಳಿದು ತೊಳೆದು, ಸ್ವಾತಂತ್ರ್ಯ ಸುಪ್ರಭಾತವು ಬದುಕಿನಲ್ಲಿ ನವಚೈತನ್ಯವನ್ನು ನೀಡಿತು. ಪ್ರಜಾಪ್ರಭುತ್ವದ ವಿರೋಧಿಯಾಗಿದ್ದ ನಿಜಾಂನು ಪ್ರಜಾಪ್ರಭುತ್ವದ ಅಸ್ತಿತ್ವವನ್ನು ಒಪ್ಪಿ ಶಾಂತಿಯನ್ನು ಸಾರಿದನು.

## ಆಧಾರ ಸೂಚಿ


*೧. ರಾ. ಗು. ಜೋಶಿ: *ನೆನಹಿನ ಪುಟಗಳು* ವಿಜಯಪ್ರಕಾಶನ ಗಾಜಗಾರಪೇಟೆ, ರಾಯಚೂರು (೧೯೭೧)

*೨. *ಸ್ವಾತಂತ್ರ್ಯಾಂದೋಳನ ರಾಯಚೂರು ಜಿಲ್ಲೆ*: (ಸಂ.) ಧ್ರುವನಾರಾಯಣ; ಕರ್ನಾಟಕ ಸಂಘ ರಾಯಚೂರು (೧೯೭೧)

*೩. *ಹೈದರಾಬಾದ ಕರ್ನಾಟಕ*: (ಸಂ.) ಆರ್. ಜಿ. ಜಾಗೀರದಾರ ಹಾಗು ಲಿಂಗಸೂಗೂರು ವಿಟ್ಠಲರಾವ್, ಕನ್ನಡ ಪ್ರಕಟನಾಲಯ ಹೈದರಾಬಾದ ದಕ್ಷಿಣ (೧೯೪೧)

*೪. ಸ್ವಾಮೀ ರಾಮಾನಂದ ತೀರ್ಥ : *ಹೋರಾಟದ ನೆನಪುಗಳು* (ಅನುವಾದ : ಡಾ॥ ಸೂರ್ಯನಾಥ ಕಾಮತ್), ಗೀತಾ ಬುಕ್ ಹೌಸ್, ಮೈಸೂರು (೧೯೭೭)

*೫. Commemoration Volume Presented to Poojya Swami Ramananda Teerth as his 61st BirthDay: by the Shashtyabdi Poorti Celebration-Committee Hyderabad.

*೬. ರಾಮಣ್ಣ ಹವಳೆ: *ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ*, ಚೇತನ ಪ್ರಕಾಶನ, ರಾಯಚೂರು (೧೯೯೯)

*೭. ರಾಮಣ್ಣ ಹವಳೆ: *ಸ್ವಾತಂತ್ರ್ಯಸೇನಾನಿ ಪುಂಡಲೀಕಪ್ಪ ಜ್ಞಾನಮೋಠೆ*, ಚೇತನ ಪ್ರಕಾಶನ, ರಾಯಚೂರು (೧೯೯೬)

*೮. ಜಿ. ರಾಮಾಚಾರ್ ಆಬಿದ್‌ರೋ: *ನಡುಗಾಲ ಸರಕಾರದಲ್ಲಿ ನಲವತ್ತು ದಿನ*, ಹೈದರಾಬಾದ್ (೧೯೪೯)

*೯. K. M. Munshi : ***The end of an era (Hyderabad Memories)***, Bharatiya Vidya Bhavan, Mumbai (1990)

ಡಾ॥ ಬಿ. ಲೀಲಾ *

# ಡಾಕ್ಟರ್ ಪಲ್ಪು ಪದ್ಮನಾಭನ್ – ಒಂದು ವಿಶ್ಲೇಷಣೆ

ಹತ್ತೊಂಬತ್ತನೇ ಶತಮಾನದಲ್ಲಿ ಹಲವಾರು ಸಮಾಜ ಸುಧಾರಕರು ಹಿಂದುಳಿದ ಜನಾಂಗ ಮತ್ತು ಅಲ್ಪಸಂಖ್ಯಾತರಿಗಾಗಿ ಅತಿ ದೀರ್ಘವಾದ ಹೋರಾಟವನ್ನು ನಡೆಸಿದರು. ಸಂಘ, ಸಂಸ್ಥೆಗಳು ಹಿಂದುಳಿದ ಜನಾಂಗದ ಏಳ್ಗೆಗಾಗಿ ಶ್ರಮಿಸಿದವು.

ಮೈಸೂರು, ತಿರುವಾಂಕೂರು ಮತ್ತು ಕೊಚ್ಚಿನ್ ದೇಶೀಯ ಸಂಸ್ಥೆಗಳು ಬ್ರಿಟೀಷರ ಅಧೀನದಲ್ಲಿದ್ದರೂ, ಮೈಸೂರಿನಲ್ಲಿ ರಾಜರ ಅಧಿಕಾರವಿದ್ದು ಸ್ವಲ್ಪ ಮಟ್ಟಿಗೆ ಸ್ವತಂತ್ರ ಚಿಂತನೆಗೆ ತೊಡಗಿದ್ದ ದಿವಾನರ ಆಡಳಿತವಿತ್ತು. ಆದರೆ ನೆರೆಯ ಊರಾದ ತಿರುವಾಂಕೂರಿನಲ್ಲಿ *೧ ಇದಕ್ಕೆ ವಿರುದ್ಧವಾದ ಸರ್ಕಾರ ಮತ್ತು ಕೆಳವರ್ಗದ ಶೋಷಣೆ ಹೆಚ್ಚಾಗಿ ಜಾತಿ ಸಂಕೋಲೆಯಿಂದ ಸುತ್ತುವರಿದ ಜನಾಂಗಕ್ಕೆ, ತಮ್ಮ ಊರಿನಲ್ಲಿ ನೌಕರಿ ಸಿಗದೆ, ನೆರೆಯ ಪ್ರಾಂತ್ಯಗಳಾದ ಮದ್ರಾಸ್, ಮೈಸೂರು ಈ ಕಡೆ ಆರಿಸಿ ಹೋಗುವಂತಾ ಪರಿಸ್ಥಿತಿ ವದಗಿತ್ತು. ಇಳವರ (Izavas) *೨ ಪರಿಸ್ಥಿತಿ ಶೋಚನೀಯವಾಗಿತ್ತು. ಈಚಲು ಮರದಿಂದ ಹೆಂಡವನ್ನು ತೆಗೆದು, ಅಥವಾ ಮರಗಳನ್ನು ಬೆಳಸಿ, ವ್ಯಾಪಾರ ಮಾಡುತ್ತಿದ್ದ ಈ ಜನಾಂಗ ಕೇರಳದಲ್ಲಿ ೧೭% ಇದ್ದರೂ ಅವರಿಗೆ ಕೀಳ್ಜಾತಿ ಎಂಬ ಪಟ್ಟ ಕಟ್ಟಿ ಅವರಿಗೆ ದೊರಕಬಹುದಾದ ಸೌಕರ್ಯದಿಂದ ಅವರನ್ನು ವಂಚಿಸಲಾಗಿತ್ತು. ಇಳವರನ್ನು 'ತಿಯಾ' ಎಂದು ಮಲಬಾರಿನಲ್ಲೂ, ಬಿಲ್ಲವರೆಂದು ಮಂಗಳೂರಿನಲ್ಲಿ ಕರೆಯುತ್ತಾರೆ.

**ಹಿನ್ನೆಲೆ :** ಕೇರಳದಲ್ಲಿ (೧೮೮೯) ಮೊದಲನೆ ಪ್ರಿಂಟಿಂಗ್ ಪ್ರೆಸ್ ಶುರುವಾಯಿತು ಮತ್ತು ೧೮೩೪ರಿಂದ ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿ ಶುರುವಾಯಿತು. ಆದರೆ ೧೮೬೭ರ ವರೆಗೆ ಸರ್ಕಾರದ ಗಮನ ಸಾಮಾನ್ಯ ಜನರಿಗೆ ವಿದ್ಯಾಭ್ಯಾಸ ಸೌಕರ್ಯವನ್ನು ಏರ್ಪಡಿಸುವ ಕಡೆಗೆ ಹರಿದಿರಲಿಲ್ಲ. ೧೮೯೪ರಲ್ಲಿ ೧೫ ಸ್ಕೂಲುಗಳನ್ನು ಕೆಳದರ್ಜೆಯವರಿಗೆಂದು ಸರ್ಕಾರವು (ಇಳವರಿಗೆಂದು) ತೆಗೆಯಿತು. ೧೯೦೪ರಲ್ಲಿ ಮೊದಲನೆ ಬಾರಿಗೆ ಸರ್ಕಾರವು ಇಳವರಿಗೆಂದು ಸರ್ಕಾರಿ ಶಾಲೆಯನ್ನು ತೆಗೆದು ವಿದ್ಯಾಭ್ಯಾಸ ಮಾಡಲು ಪ್ರೋತ್ಸಾಹಿಸಿತು. ಇದರ ಶ್ರೇಯಸ್ಸು ಬಹುಶಃ ದಿವಾನ್ ವಿ. ಪಿ. ಮಾಧವರಾವ್‌ಗೆ ಸೇರಬೇಕು. ಕೇರಳದಲ್ಲಿ ಕೇವಲ ೧½ ವರ್ಷ ಮಾತ್ರ ದಿವಾನರಾಗಿದ್ದ ವಿ. ಪಿ. ಮಾಧವರಾವ್ (೧೯೦೪) ಸರ್ಕಾರಿ ಆಜ್ಞೆಯನ್ನು ಹೊರಡಿಸಿ "No child in the State Whatever his caste or Social position should be allowed to grow up without the rudiments of education and to realise the benefit of education, free education was given to all backward classes" *೩

ಇಂಗ್ಲಿಷ್ ವಿದ್ಯಾಭ್ಯಾಸದ ಲಾಭವನ್ನು ಪಡೆದವರೆಂದರೆ ನಾಯರ್‌ಗಳು ಮತ್ತು ಸಿರಿಯನ್ ಕ್ರಿಶ್ಚಿಯನ್ ಜನರು. ಸರ್ಕಾರಿ ನೌಕರಿಯನ್ನು ಪಡೆಯಲು ಮೇಲ್ಜಾತಿ ಹಿಂದುಗಳು ಮತ್ತಿತರು ಯಾವಾಗಲೂ ಮುನ್ನಡೆಯಲ್ಲಿದ್ದರು. ಇದರಿಂದಾಗಿ ಸಾಮಾನ್ಯನಿಗೆ ತನ್ನ ಊರಿನಲ್ಲಿ ಕೆಲಸ ಸಿಗುವ ಸಾಧ್ಯತೆ ಇರಲಿಲ್ಲ. ಇಳವರರನ್ನು ಕೀಳ್ಜಾತಿ ಎಂದು ಭಾವಿಸಿದ್ದರೂ ಇಳವರಲ್ಲಿ ಅನೇಕರು, ನೆರೆಯ ಊರಾದ ಮದ್ರಾಸಿಗೆ ತಮ್ಮ ಮಕ್ಕಳನ್ನು ಕಳುಹಿಸಿ ವಿದ್ಯಾಭ್ಯಾಸ ಮಾಡಿಸಿದ್ದರು. ಆದರೆ ವಿದ್ಯಾವಂತರಾಗಿ ತಮ್ಮ ಊರಿಗೆ ವಾಪಸ್ ಬಂದಾಗ ಅವರಿಗೆ ಯಾವ ಪ್ರೋತ್ಸಾಹ ದೊರಕದೆ ವಿದ್ಯಾವಂತ ಯುವಕರ ಪಾಲಿಗೆ ಸರ್ಕಾರಿ ನೌಕರಿ ಗಗನ ಕುಸುಮವಾಗಿಯೇ ಉಳಿದಿತ್ತು. ಅವರ್ಣ ಎಂದು ಇಳವರು ಕರೆಯಲ್ಪಟ್ಟು ತಿರುವಾಂಕೂರಿನಲ್ಲಿ ಅವರನ್ನು ಪೋಸ್ಟ್ ಆಫೀಸ್, ಸ್ಕೂಲ್, ಊರಿನ ದಾರಿ (ಎರಡು ದಾರಿಯಲ್ಲಿ ಒಂದನ್ನು ಮಾತ್ರ ಉಪಯೋಗಿಸಬೇಕು) ಯಾವುದರಲ್ಲೂ ಪ್ರವೇಶವಿರಲಿಲ್ಲ. ಹಲವಾರು ಇಳವರು ಕ್ರಿಶ್ಚಿಯನ್ ಜಾತಿಗೆ ಮತಾಂತರಹೊಂದಿ ಉತ್ತಮ ನೌಕರಿಯನ್ನು ಪರ ಊರಿನಲ್ಲಿ ಹೊಂದಿದ್ದರು. ಕೆ. ರಂಗರಾವರವರು ಮಂಗಳೂರಿನಲ್ಲಿ ಅವರ್ಣ ಜಾತಿಯವರ ಏಳ್ಗೆಗಾಗಿ ತಮ್ಮ ಉತ್ತಮವಾದ ವಕೀಲಿವೃತ್ತಿಯನ್ನು ಬಿಟ್ಟು (೧೮೯೭) ಅವರಿಗಾಗಿ ಸ್ಕೂಲ್, ವಸತಿ, ಸ್ಥಳ ತಮ್ಮ ಸಮಯವನ್ನು

---

* ಫ್ಲಾಟ್ ನಂ. ೪೭, ಶ್ಯಾಮಲ, ೧ನೇ ಅಂತಸ್ತು, ಮಾತುಂಗ, ಮುಂಬಯಿ – ೪೭೦ ೦೧೯

ವಿನಿಯೋಗಿಸಿ ಇಳವರ ಏಳ್ಗೆಗಾಗಿ ನಿರಂತರ ಶ್ರಮವಹಿಸಿದ್ದನ್ನು ಎಂದು "First Indian attempt at organised work among the depressed class"[*೪] ಹೇಳಬಹುದು.

ಬ್ರಾಹ್ಮಣ, ಬ್ರಾಹ್ಮಣೇತರ ಎಂಬ ಅಸಮಾನದ ಹೊಗೆ ಮೈಸೂರು, ಮದ್ರಾಸಿನಲ್ಲಿ ೨೦ ಶತಮಾನದ ಮೊದಲಿನಲ್ಲಿ ಇತ್ತಾದರೂ ಇಂಗ್ಲಿಷ್ ಕಲಿತ ವಿದ್ಯಾವಂತರಿಗೆ ಸರ್ಕಾರಿ ನೌಕರಿ ಸಿಕ್ಕುತಿತ್ತು. ಇದಲ್ಲದೆ ಮದ್ರಾಸ್‌ಗಳಲ್ಲಿ ಸೇರಿದ್ದು. ಮಲಬಾರಿನಲ್ಲಿ 'ತಿಯಾ' ಜನರಿಗೆ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಅನುಕೂಲವಿತ್ತು. ಮದ್ರಾಸ್ ಸರ್ಕಾರದ ಎಲ್ಲಾ ಸೌಲಭ್ಯಗಳು ಸಿಕ್ಕುತಿತ್ತು. ಆದರೆ ತಿರುವಾಂಕೂರಿನಲ್ಲಿ ಇದಕ್ಕೆ ಅವಕಾಶವಿರಲಿಲ್ಲ. ಅದಲ್ಲದೆ ಯುರೋಪಿಯನ್ ಅಧಿಕಾರಿಗಳು ಮತ್ತು ಸಿಪಾಯಿಗಳು 'ತಿಯಾ' ಹೆಂಗಸರೊಂದಿಗೆ ಸಂಬಂಧ ಹೊಂದಿದ್ದರಿಂದ ಎಲ್ಲಾ ಆಧುನಿಕ ಸೌಲಭ್ಯಗಳೂ ಅವರ ಮಕ್ಕಳಿಗೆ ದೊರಕುತ್ತಿತ್ತು. ಒಂದೇ ಜಾತಿಗೆ ಸೇರಿದ, 'ಇಳವ' ತಿರುವಾಂಕೂರಿನಲ್ಲಿ, 'ತಿಯಾ' ಮಲಬಾರಿನಲ್ಲಿ ಸರ್ಕಾರ ಬೇರೆ ಬೇರೆ ರೀತಿಯಲ್ಲಿ ನಡೆಸಿಕೊಳ್ಳುತ್ತಿದ್ದರು. ಇಳವರು ತಿರುವಾಂಕೂರಿನಲ್ಲಿ ಉದ್ಯೋಗದಿಂದ ವಂಚಿತರಾಗಿದ್ದರೆ, 'ತಿಯಾ' ಮಲಬಾರಿನಲ್ಲಿ ಉನ್ನತ ಸ್ಥಾನದಲ್ಲಿದ್ದರು. ಇಳವರಾರೂ ಐದು ರೂಪಾಯಿ ಮೇಲಿನ ನೌಕರಿ ಹೊಂದಿರಲಿಲ್ಲ. ಎಷ್ಟಾದರೂ ಅವರು ಅವರ್ಣರಲ್ಲವೆ !



**ಪಲ್ಪುಪದ್ಮನಾಭನ್ :** ಮೈಸೂರಿನ ದಿವಾನರಾಗಿದ್ದ ಶೇಷಾದ್ರಿ ಐಯರ್ ಹಲವಾರು ವಿದ್ಯಾವಂತರನ್ನು ಪ್ರೋತ್ಸಾಹಿಸಿ ಮೈಸೂರಿನಲ್ಲಿ ನೌಕರಿ ಕೊಡಿಸಿದ್ದು ವಿದಿತವಾಗಿದೆ. ವಿವೇಕಾನಂದರಿಂದ ಸ್ಫೂರ್ತಿಹೊಂದಿದ ದೇಶೀಯ ಸಂಸ್ಥಾನಗಳಲ್ಲಿ ಮೈಸೂರು ಒಂದು. ತಮ್ಮ ಊರಿನಲ್ಲಿ ನೌಕರಿಯ ಅವಕಾಶ ದೊರಕದಿದ್ದರಿಂದ ನೆರೆಯೂರಾದ ಮೈಸೂರಿಗೆ ಪದ್ಮನಾಭನ ಪಲ್ಪು ಹೋಗ ಬೇಕಾಯ್ತು.

೧೮೬೩, ೨ನೇ November ನಲ್ಲಿ ಭಗವತಿ ಪದ್ಮನಾಭನ ಮತ್ತು ಮಾತಾ ಪೆರುಮಾಳರವರಿಗೆ ಹುಟ್ಟಿದ ಪಲ್ಪು ೧೮೮೩ರಲ್ಲಿ ಮನೆಯಲ್ಲೇ ಸ್ಥಳೀಯ ಉಪಾಧ್ಯಾಯರಿಂದ ತರಬೇತಿ ಹೊಂದಿ, ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸು ಮಾಡಿದರು. ಕೇರಳದ ಅವರ್ಣ ಪಂಗಡದ ಅವರ ತಂದೆ ಕೂಡ ಪಲ್ಪುವಿನಂತೆ ಕಷ್ಟಪಟ್ಟು ಓದಿ ಮುಂದಕ್ಕೆ ಬಂದವರು. ಅವರಿಗೂ ಜಾತಿಯ ಕಾರಣದಿಂದ ಕಾನೂನು ಅಭ್ಯಾಸಕ್ಕೆ ಅವಕಾಶವಾಗಲಿಲ್ಲ. ವೈದ್ಯಕೀಯ ಹಂಬಲ ಹೊತ್ತ ಪಲ್ಪು ತಿರುವಾಂಕೂರಿನಲ್ಲಿ ವೈದ್ಯಕೀಯ ಪರೀಕ್ಷೆಗೆ ಸೇರಲು ಅರ್ಹತೆಯ ಪರೀಕ್ಷೆಯಲ್ಲಿ ಅತ್ಯುತ್ತಮವಾಗಿ ಪ್ರಸಂಗ ಮಾಡಿದರೂ, 'ಅವರ್ಣ' ಎಂಬ ಒಂದೇ ಕಾರಣದಿಂದ ವೈದ್ಯಕೀಯ ವೃತ್ತಿಗೆ ಪ್ರವೇಶ ದೊರೆಯಲಿಲ್ಲ. ಆಗ ಅವರ್ಣರಿಗೆ (Ezhavas) ಕೇರಳದಲ್ಲಿ ಬ್ಯಾಂಕ್, ಪೋಸ್ಟ್ ಆಫೀಸ್, ಸ್ಕೂಲ್, ಊರಿನದಾರಿ ಯಾವುದರಲ್ಲೂ ಪ್ರವೇಶವಿರಲಿಲ್ಲ. ನಿರಾಶೆಗೊಂಡ ಪಲ್ಪು ೧೮೮೪ರಲ್ಲಿ ಮದ್ರಾಸ್ ಮೆಡಿಕಲ್ ಕಾಲೇಜ್ ಸೇರಿದರು. ೧೮೯೦ರಲ್ಲಿ ವೈದ್ಯಕೀಯ ಪದವಿಯಲ್ಲಿ (L.M.S.) ಉತ್ತಮವಾಗಿ ತೇರ್ಗಡೆ ಹೊಂದಿದರು. ಮೆಡಿಕಲ್ ಪಾಸ್ ಮಾಡಿದ ಮೇಲೆ ತಿರುವಾಂಕೂರಿನಲ್ಲಿ ಮೆಡಿಕಲ್ ಇಲಾಖೆಯಲ್ಲಿ ನೌಕರಿ ಯತ್ನದಲ್ಲಿ ಸೋತ ಪಲ್ಪುರವರು ಮದ್ರಾಸಿನಲ್ಲಿ ಕೆಲವು ಕಾಲ Vaccination Superintendent ಆಗಿ ಕೆಲಸ ಮಾಡಿ ಮೈಸೂರು ಸರ್ಕಾರದ ವೈದ್ಯಕೀಯ ಶಾಖೆಗೆ ಸೇರಿದರು (೧೮೯೧).[*೫೮]

**ಸಾಮಾಜಿಕ ಆರೋಗ್ಯ ರಕ್ಷಣೆ; ಸರ್ಕಾರದ ಲಕ್ಷ್ಯ**

ಇಪ್ಪತ್ತನೇ ಶತಮಾನದ ಮೊದಲಿನಲ್ಲಿ ಸರ್ಕಾರದಲ್ಲಿ ಇತರಕ್ಕಿಂತಾ ವೈದ್ಯಕೀಯ ಇಲಾಖೆಗಳಾದ ಆರೋಗ್ಯ ರಕ್ಷಣೆ, ವ್ಯಾಕ್ಸಿನೇಷನ್ (ಮೈಲಿ ತೆಗೆಯುವಿಕೆ) ಮತ್ತು ವೈದ್ಯಕೀಯ ಮತ್ತು ಸಮಾಜ ಇವುಗಳೆಲ್ಲದರ ಉದ್ದೇಶ ಒಂದೇ (ಸಮಾಜ ಕಲ್ಯಾಣ ನೈರ್ಮಲ್ಯ). ಆದರೂ ಇವುಗಳ ಸಂಬಂಧ ಮತ್ತು ತೀವ್ರಗತಿಯಲ್ಲಿ ಕೆಲಸದ ವೇಗ, ಇವುಗಳ ಕಡೆ ಲಕ್ಷ ಹೆಚ್ಚಾಗಿದ್ದಿಲ್ಲ. ಅದೂ ಅಲ್ಲದೆ ಆರೋಗ್ಯ ನಿರ್ವಹಣೆಯ ಕಾರ್ಯಮಂಡಲಿಗೆ ಅಧಿಕಾರವಿತ್ತೆ ವಿನಹಾ ಮುನಿಸಿಪಾಲಿಟಿ ಅಥವಾ ಸ್ಥಳೀಯ ಬೋರ್ಡಿಗೆ, ದೈನಂದಿಕವಾಗಿ ಶಿಫಾರಸ್ಸು ಮಾಡುವ ಅಧಿಕಾರವನ್ನು ಹೊಂದಿರಲಿಲ್ಲ. ಮತ್ತು ಇದಕ್ಕೆ ಒದಗಿಸುವ ಸಿಬ್ಬಂದಿ ಇತ್ಯಾದಿ ವಿಷಯಗಳಲ್ಲಿ ಸೂಕ್ತ

ಸೂಚನೆಗಳನ್ನು ಕೊಡುವದೇ ಆಗಲಿ ಇರಲಿಲ್ಲ. ಸರ್ಕಾರದ ಹೆಚ್ಚಿನ ಗಮನ ಕುಡಿಯುವ ನೀರಿನ ಪೂರೈಕೆ ಮತ್ತು ನಾಲೆಗಳ ದುರಸ್ತಿಗಳ ಕಡೆಗೆ ಸೀಮಿತವಾಗಿತ್ತು. ಇದರಿಂದಾದ ಪರಿಣಾಮ ಉತ್ತಮ ಅಧಿಕಾರಿಗಳು ಕೇವಲ ಲಸಿಕೆ ಹತೋಟಿ ಮತ್ತು ಮಹತ್ವವಾಗಿ ಕಲೆ ಹಾಕಿದ ಅಂಕಿ ಸಂಖ್ಯೆಗೆ ಸೀಮಿತವಾಗಿತ್ತು. *೫

ಇಂಡಿಯಾ ಸರ್ಕಾರಕ್ಕೆ ಇದೆಲ್ಲದರ ಕುಂದುಕೊರತೆ ಕಂಡುಬಂದದ್ದು ೧೮೯೫ರಲ್ಲಿ. ಕೇಂದ್ರ ಸರ್ಕಾರ ಠರಾವು ಮಂಡಿಸಿ ಎಲ್ಲಾ ಸ್ಥಳೀಯ ಸರ್ಕಾರಗಳಿಗೆ ಮನವಿ ಮಾಡಿ, ಕನಿಷ್ಟ ನಾಗರೀಕರ ಪ್ರಾಥಮಿಕ ಆರೋಗ್ಯ ಸಂರಕ್ಷಣೆಯನ್ನು ಕಾಪಾಡಬೇಕೆಂದೂ ಮತ್ತು ಆರೋಗ್ಯ ರಕ್ಷಣಾ ಅಧಿಕಾರಿಗಳನ್ನು ನೇಮಿಸಿ, ಅವರು ನೈರ್ಮಲ್ಯ, ವ್ಯಾಕ್ಸಿನೇಷನ್ ಮತ್ತು ಅಂಕಿ ಸಂಖ್ಯೆ ಇವುಗಳ ಜವಾಬ್ದಾರಿ ಮತ್ತು ದೊಡ್ಡ ಊರುಗಳಲ್ಲಿ ಹೆಲ್ತ್ ಆಫಿಸರ್‌ಗಳು (ಪುರಸಂಸ್ಥೆ) ಸ್ಯಾನಿಟರಿ ಕಮಿಟಿಯ ಕೆಳಗೆ ಕೆಲಸ ಮಾಡಬೇಕೆಂದೂ ಮತ್ತು ಈ ಕಮಿಟಿಯಲ್ಲಿ ಅಧ್ಯಕ್ಷರಾಗಿ, ಸೀನಿಯರ್ ಸರ್ಜನ್ ಇರಬೇಕೆಂದಿತು. ಮತ್ತು ಸಿವಿಲ್ ಸರ್ಜನ್ ಜವಾಬ್ದಾರಿ ಹೊತ್ತಿದ್ದರೂ, ಒಬ್ಬ ಸಹಾಯಕ ಸರ್ಜನ್ ಅಥವಾ ಖಾಸಗಿ ಸಹಾಯಕ ಇರಬೇಕೆಂದೂ, ಇದರಿಂದ ನಗರದ ಪುರೋಭಿವೃದ್ಧಿ ಸಾಧ್ಯವೆಂದು ಅಭಿಪ್ರಾಯ ಪಟ್ಟಿರು. ಇದಕ್ಕೆ ಕೇಂದ್ರ ಸಹಾಯವಿದ್ದದ್ದರಿಂದ ಮೈಸೂರಿನಲ್ಲಿ ಇದೆಲ್ಲಾ ಅವಕಾಶವನ್ನು ಉಪಯೋಗಿಸಿಕೊಂಡಿದ್ದರಿಂದ ಆರೋಗ್ಯ ಶಾಖೆಗೊಂದು ಹೆಲ್ತ್ ಆಫಿಸರ್ ದೊರಕಿದ್ದು ೧೮೯೮ರಲ್ಲಿ. ಅದುವರೆಗೂ ಮೈಸೂರಿನಲ್ಲಿ ಹೆಲ್ತ್ ಆಫೀಸರ್ ಇರಲಿಲ್ಲ.

ಸರ್ಕಾರ ದೊಡ್ಡ ದೊಡ್ಡ ಸಾಂಕ್ರಾಮಿಕ ರೋಗ ನಿಯಂತ್ರಣವನ್ನು ಮಾಡಿದ ಪ್ರಯತ್ನ ಅತಿ ಕಡಿಮೆ ಎಂದು ಪ್ಲೇಗ್ ಪಿಡುಗು ಬೆಂಗಳೂರಿನಲ್ಲಿ (೧೮೯೮) ಆವರಿಸಿದಾಗ ತಿಳಿಯಿತು. ಮೈಸೂರು ಸರ್ಕಾರವು ಪ್ರತ್ಯೇಕ ಇಲಾಖೆಯ ಅಗತ್ಯವನ್ನು ಕಂಡು ಕೊಂಡಿತ್ತು. ಮತ್ತು ಇದರಿಂದ ಕಾಲಕ್ರಮೇಣ ಪ್ಲೇಗ್ ನಿರ್ಮೂಲ ಸಾಧ್ಯವೆಂಬ ನಂಬಿಕೆ ಹೊಂದಿತ್ತು. ಇದಕ್ಕಾಗಿ ವಿಶೇಷ ಆರೋಗ್ಯ ಅಧಿಕಾರಿಗಳನ್ನು ಬೆಂಗಳೂರು, ಮೈಸೂರು, ಕೋಲಾರ ಗೋಲ್ಡ್ ಫೀಲ್ಡ್‌ನಲ್ಲಿ ಸರ್ಕಾರ ನೇಮಿಸಿತು. ಡಾ|| ಪಲ್ಪು ಬೆಂಗಳೂರಿನ ವೈದ್ಯಾಧಿಕಾರಿಯಾಗಿ ನೇಮಕ ಹೊಂದಿದ್ದನ್ನು (೧೮೯೧) ಈ ಹಿಂದೆ ತಿಳಿಸಿದೆ. ೧೮೯೮ರಲ್ಲಿ ಪ್ಲೇಗ್ ಮೈಸೂರನ್ನು ಆವರಿಸಿದಾಗ ಅಸಿಸ್ಟೆಂಟ್ ಸರ್ಜನ್ ಆಗಿದ್ದ ಪಲ್ಪು ಅವರನ್ನು ಪ್ಲೇಗ್ Suptd. ಎಂದು ನೇಮಿಸಲಾಯ್ತು. *೬ ಪಲ್ಪುರವರನ್ನು ಮೈಸೂರು ಸರ್ಕಾರ Diploma in Health ಪಡೆಯಲು ಇಂಗ್ಲೆಂಡಿಗೆ ಕಳುಹಿಸಿತ್ತು. *೭ ಸರಕಾರಕ್ಕೆ ಆರೋಗ್ಯದಲ್ಲಿ ತರಬೇತಿ ಹೊಂದಿದ ಅಧಿಕಾರಿಗಳ ಅವಶ್ಯಕತೆ ಇತ್ತು. ಪ್ಲೇಗ್ ನಿಯಂತ್ರಣದಲ್ಲಿ ಪಲ್ಪುರವರ ಉತ್ತಮವಾದ ಸೇವೆಯನ್ನು ಸರ್ಕಾರ ಮೆಚ್ಚಿತು. "He Conducted his arduous duties with great tact, devotion and zeal". *೮

ಪ್ಲೇಗ್‌ನಿಂದ ಉಂಟಾದ ಕಷ್ಟ ನಷ್ಟ ಅಪಾರ. ಪಲ್ಪುರವರ ಕೈಕೆಳಗೆ ದೊಡ್ಡ ಅಧಿಕಾರ ವರ್ಗವಿತ್ತು. ತಮ್ಮ ದಕ್ಷತೆಯಿಂದ ಪ್ಲೇಗ್ ನಿಯಂತ್ರಣ ಕೆಲಸವನ್ನು ಕೈಗೊಳ್ಳಲು ಸಾಧ್ಯವಾದದ್ದೇ ಅಲ್ಲದೆ ಸಾಂಕ್ರಾಮಿಕ ರೋಗಿಗಳ ಆಸ್ಪತ್ರೆಯನ್ನು ಸರಕಾರಿ ಪ್ಲೇಗ್ ಆಸ್ಪತ್ರೆಯಾಗಿ ಅವರ ನೇತೃತ್ವದಲ್ಲಿ ಪರಿವರ್ತಿಸಲಾಯಿತು. ಮುಂದೆ ೧೯೦೦ರಲ್ಲಿ ಈ ಆಸ್ಪತ್ರೆ ವಿಕ್ಟೋರಿಯಾ ಆಸ್ಪತ್ರೆಯಾಗಿ ಲಾರ್ಡ್ ಕರ್ಸನ್‌ರವರಿಂದ ಉದ್ಘಾಟಿಸಲ್ಪಟ್ಟಿತು. ೧೯೦೦ರಲ್ಲಿ ಪಲ್ಪುರವರು ಬೆಂಗಳೂರಿನ ಆರೋಗ್ಯದ ಅಧಿಕಾರಿಯಾಗಿ (೪೦೦ ರೂಪಾಯಿ ಸಂಬಳದ) ನೇಮಕ ಹೊಂದಿದರು. ಮತ್ತು ಅವರಿಗೆ ಕೊಡುವ ಭತ್ಯವನ್ನು ಮುನಿಸಿಪಾಲಿಟಿ ಭರಿಸಬೇಕೆಂದು ತೀರ್ಮಾನಿಸಿತು. *೯

ಆರೋಗ್ಯ ರಕ್ಷಣೆಗೆ ಒಂದು Board ಇರಬೇಕೆಂಬುದು ಮತ್ತು ಸ್ಯಾನಿಟರಿ ಅಧಿಕಾರಿ ಅವರ ಮುಖ್ಯಸ್ಥನಾಗಿ, ತನ್ನ ಕಾರ್ಯ ನಿರ್ವಹಿಸಲು ಯಾವುದೇ ಅಡಚಣೆ ಇರಬಾರದೆಂದು, ಇದಕ್ಕೆ ಖಚಿತವಾದ ನಿಲುವಿನ 'ಸಾರ್ವಜನಿಕ ಸ್ವಸ್ಥತೆಯ ಇಲಾಖೆ' ಇರಬೇಕೆಂದೂ ಸ್ಯಾನಿಟರಿ ಕಮೀಷನರ್ ಆಗಿದ್ದ ಡ್ರೇಕ್ ಬ್ರೂಕಮಾನರವರ ಸ್ಪಷ್ಟ ನಿಲುವಾಗಿತ್ತು. *೧೦ ಇದು ಜೀವಗಳನ್ನು, ಉಳಿಸುವ ಪ್ರಶ್ನೆ ಆದ್ದರಿಂದ, ಸರ್ಕಾರದ ಸಹಾಯ ಅತ್ಯಗತ್ಯ ಮತ್ತು ಸ್ಯಾನಿಟರಿ ಸೆಂಟರಿಗೆ, ಸರ್ಕಾರಕ್ಕೆ ಸೀದಾ ಪ್ರವೇಶದ್ವಾರ ಇರಬೇಕೆಂದು ತಿಳಿಸಿದ್ದರು.

ಕಾಲರಾ, ಸಿಡುಬು ತೀವ್ರ ವೇಗದಲ್ಲಿ ಹಬ್ಬುವ ಖಾಯಿಲೆಗಳಾದ್ದರಿಂದ ಇದಕ್ಕೆ ಉತ್ತಮ ಗುಣಮಟ್ಟದ ಔಷಧಿ ಮತ್ತು ಡಾಕ್ಟರಗಳು ಅತ್ಯವಶ್ಯಕ. ಡಾ|| ಪಲ್ಪುರವರ ವಿಶೇಷ ಆಸ್ಥೆ ಇಲ್ಲಿ ಕಂಡುಬರುತ್ತದೆ. ೧೯೦೩-೧೯೦೭ರ ಸ್ಯಾನಿಟರಿ ರಿಪೋರ್ಟ್ ನೋಡಿದಾಗ ಬೆಂಗಳೂರಿನಲ್ಲಿ ಕಾಲರಾ ಹೆಚ್ಚು ಹಬ್ಬಿದ್ದರೂ, ಸಾವು ಕಡಿಮೆ ಇತ್ತು. ಯಾಕೆಂದರೆ ಬೆಂಗಳೂರು ನಗರದಲ್ಲಿ ಕುಡಿಯುವ ನೀರು ಸ್ವಚ್ಛತೆ ಇಂದ ಕೂಡಿದ್ದು ಮತ್ತು ತಾತ್ಕಾಲಿಕ ಭಾವಿಗಳನ್ನು ತೆಗೆದು, ನೀರಿನ ಅಭಾವ ಕಡಿಮೆ ಮಾಡಿದ್ದು. *೧೧ ೧೯೦೭ರಲ್ಲಿ ಡಾ|| ಪಲ್ಪು ಡೆಪ್ಯುಟಿ ಸ್ಯಾನಿಟರಿ ಕಮಿಷನರ್ ಎಂದು ನೇಮಕ ಹೊಂದಿದರು. H.E. Drake Brockman ರವರು ಸ್ಯಾನಿಟರಿ ಕಮಿಷನರ್ ಆದರು. ೬-೭-೧೯೦೭ರಲ್ಲಿ ಮೈಸೂರಿನ ಸರ್ಕಾರವು ಸ್ಯಾನಿಟರಿ ಬೋರ್ಡ್ ಸ್ಥಾಪಿಸಿ ಸ್ಯಾನಿಟರಿ ಕಮಿಷನರ್ ಪ್ರೆಸಿಡೆಂಟ್ ಎಂದೂ, ಅದಕೊಬ್ಬ ರೆವಿನ್ಯೂ ಕಮಿಷನರ್ ಮೆಂಬರ್ ಮತ್ತು ಅದಕ್ಕೆ, ಇಂಜನಿಯರ್ ಮತ್ತು Deputy Sanitary Commissioner and Inspector of Vaccination ಎಂದು ಡಾ|| ಪಲ್ಪುರವರನ್ನು ನೇಮಿಸಿತು. ಆಗ ಪಲ್ಪುರವರಿಗೆ ಒಂದು ಖಚಿತ ನಿಲುವಿನ ಕೆಲಸ ನಿರ್ವಹಣೆ ಸಿಕ್ಕಂತಾಯ್ತು. ಮತ್ತು ಮೊದಲನೆ ಬೋರ್ಡ್ ಮೀಟಿಂಗ್ ೧೬-೧೨-೧೯೦೭ರಲ್ಲಿ ನಡೆಯಿತು.

ಸರ್ಕಾರವು ಕುಡಿಯುವ ನೀರಿನ ಕಡೆ ಪೂರ್ತಿ ಲಕ್ಷ್ಯವನ್ನು ಹರಿಸಿ, ಜನರಿಗೆ ದೊರಕುವ ನೀರಿನ ಕುಂದು ಕೊರತೆಗಳನ್ನು ಕಂಡು ಹಿಡಿಯಲು ಸಮೀಕ್ಷೆ ನಡೆಸಿತು. ಮತ್ತು ಹಳ್ಳಿಗಳಲ್ಲೂ ಸಮೀಕ್ಷೆ ನಡೆಸುವಂತೆ ಆದೇಶ ಮಾಡಿತು. ಇದರ ಉದ್ದೇಶ ಜನರ ಹಿತಾಸಕ್ತಿ ಮತ್ತು ಸಾಮಾನ್ಯ ಜನರ ಆರೋಗ್ಯದ ಕಡೆ ಲಕ್ಷ್ಯ. ಬಹುಶಃ ಇದು ಮುಖ್ಯ ಏರ್ಪಾಡು ಎಂದು ಹೇಳಬಹುದು. ಇದೇ ಸಮಯದಲ್ಲಿ 'Mysore Industrial and Agricultural Exhibition' 1907 ನಡೆಸಿದ್ದು ಜನರಿಗೆ ತಿಳುವಳಿಕೆಯನ್ನು ನೀಡಿದ್ದಲ್ಲದೆ, ಆಕರ್ಷಣೆ ಆಯಿತು. ಇದೆಲ್ಲಾ ಡಾ॥ ಪಲ್ಪುರವರ ನೇತೃತ್ವದಲ್ಲಿ ನಡೆಯಿತು.

ಹುಟ್ಟಿನಿಂದಲೇ ತಮ್ಮ ಸ್ವಾತಂತ್ರ್ಯಕ್ಕೆ ಹೋರಾಡಿದ ಪಲ್ಪು, ಹಲವಾರು ಬಾರಿ ತಮ್ಮ ಖಚಿತವಾದ ನಿಲುವಿನಿಂದ ವಿರೋಧ ಹೊಂದಿದ್ದುಂಟು. ೧೯೦೫-೭ರ ವರಿಗೆ ಡೆಪ್ಯುಟಿ ಸ್ಯಾನಿಟರಿ ಇನ್ಸ್‌ಪೆಕ್ಟರ್ ಆಗಿದ್ದ ವಿಷಯ ಈಗಾಗಲೆ ತಿಳಿಸಿದೆ. ಸಾಂಕ್ರಾಮಿಕ ಜಾಡ್ಯವಾದ ಸಿಡುಬು ಬೆಂಗಳೂರಿನಲ್ಲಿ ವ್ಯಾಪಿಸಿದಾಗ ಹಲವಾರು ಜನ ಲಸಿಕೆ ಹಾಕಿಸಿಕೊಂಡು ಆಮೇಲೆ ಸತ್ತಿಂದ್ದುಂಟು. ವೈಯಾಪುರಿ ಚೆಟ್ಟಿ ಎಂಬ (Retired Asst. Controller in Mysore) ಸರ್ಕಾರಕ್ಕೆ ಒಂದು ಲಿಖಿತ ಸ್ವರೂಪ ದೂರನ್ನು ಕೊಟ್ಟರು- ''ತನ್ನ ಮೊಮ್ಮಗನು ಲಸಿಕೆ ಹಾಕಿಸಿಕೊಂಡು ಮರಣ ಹೊಂದಿದನು.'' ಆದರೆ ವೈಯಾಪುರಿಗೆ ಯಾವ ತರಹ ಸಮಾಧಾನ ಉತ್ತರವನ್ನು ಸರ್ಕಾರ ಕೊಡಲು ಸಿದ್ಧವಾಗಿರಲಿಲ್ಲ. ಅದೂ ಅಲ್ಲದೆ ಇವರ ವಿಷಯ ಹೊರಗಿನಿಂದ ತನಿಖಾ ಸಮಿತಿಯೊಂದನ್ನು ನೇಮಿಸಲು ಸರ್ಕಾರ ಸಿದ್ಧವಿರಲಿಲ್ಲ. ಆರೋಗ್ಯ ವ್ಯವಸ್ಥೆಯನ್ನು ಆರಂಭಿಸುವಾಗ (Aug. 1907) ''ವ್ಯಾಕ್ಸಿನೇಷನ್ ಮಾಡುವವರನ್ನು ಸರಿಯಾಗಿ ಮೇಲ್ವಿಚಾರಣೆ ಮಾಡಿಲ್ಲ ಮತ್ತು ಸರಿಯಾಗಿ ಆರಿಸಿಲ್ಲ'' ಎಂಬ ಧೋರಣೆಯನ್ನು ಸರ್ಕಾರ ಹೊಂದಿತ್ತು. ಆದರೆ ಅದೇ ಸರ್ಕಾರ ೧೯೧೦ರಲ್ಲಿ, ವಿಧಾನ ಸಭೆ, ದಿವಾನರ ಮುಂದೆ ಸೇರಿದಾಗ ವ್ಯಾಕ್ಸಿನೇಷನ್ ಕೆಲಸ ಸಮರ್ಪಕವಾಗಿ ನಡೆದಿದೆ ಎಂದು ತಿಳಿಸಿತು. ಮೈಸೂರು ವ್ಯಾಕ್ಸಿನ್ ಇನ್ಸ್‌ಟ್ಯೂಟಿಟ್‌ನಲ್ಲಿ ಲಸಿಕೆಯನ್ನು ತಯಾರಿಸುತ್ತಿದ್ದರು. ''ಮೈಸೂರಿನಲ್ಲಿ ತಯಾರು ಮಾಡುತ್ತಿರುವ ಲಸಿಕೆಯಲ್ಲಿ ಗುಣಮಟ್ಟದ ಕಡಿಮೆಯಿದೆ ಎಂದೂ, ಲಸಿಕೆಯನ್ನು ಕೊಡುವ ಡಾಕ್ಟರ್‌ಗಳಲ್ಲಿ ಯಾವ ಕೊರತೆಯೂ ಇಲ್ಲವೆಂದು ಪಲ್ಪು ತಮ್ಮ ಖಚಿತವಾದ ಅಭಿಪ್ರಾಯವಿತ್ತರು. ಹೀಗೆ ಸ್ಥಳೀಯ ಡಾಕ್ಟರ್‌ಗಳಿಗೂ ಮತ್ತು ಅವರ ಮೇಲಿದ್ದ ಯುರೋಪಿಯನ್ ಅಧಿಕಾರಿಗಳಿಗೆ ಭಿನ್ನಮತ ಉಂಟಾದರೂ ಪಲ್ಪು ಹೆದರದೆ ತಮ್ಮ ಕೆಲಸವನ್ನು ನಿರ್ವಹಿಸಿದ್ದುಂಟು. *೧೨

ಹಲವು ಕಾಲ ಸೆಂಟ್ರಲ್ ಜೈಲ್ ಸೂಪರ್ ಇನ್‌ಟೆಂಡೆಂಟ್ ಆಗಿದ್ದ ಪಲ್ಪು ಸಮರ್ಪಕವಾಗಿ ಕಾರ್ಯನಿರ್ವಹಿಸಿದರು. ಸೆಂಟ್ರಲ್ ಜೈಲ್‌ನಲ್ಲಿದ್ದ ಖೈದಿಗಳಿಗೆ, ನೀರಿನ ವ್ಯವಸ್ಥೆಗಾಗಿ *೧೩ ವಿಶೇಷ ಆಸ್ಥೆ ಮತ್ತು ಖೈದಿಗಳ ಸ್ವಸ್ಥತೆ ಮತ್ತು ಹೆಚ್ಚಾಗಿ ಒಂದೇ ಕಡೆ ಖೈದಿಗಳ ಕೂಡುವಿಕೆ ಇವುಗಳ ಬಗ್ಗೆ ಲಕ್ಷ್ಯ. ಇವಕ್ಕೆ ವಿಶೇಷ ಗಮನ ಹರಿಸಿದರು. ಕ್ರಿಶ್ಚಿಯನ್, ಮಹಮದ್ ಖಾಜಿ, ಭಾನುವಾರ ದಿನ ನೀತಿಬೋಧನೆ ತರಗತಿಯಲ್ಲಿ ಬೋಧಿಸುತ್ತಿದ್ದರು. ಅದೂ ಅಲ್ಲದೆ ರಾಮಕೃಷ್ಣ ಮಠದ ಸ್ವಾಮಿ ಸುಮನಂದಾಜಿ ಅವರು ಹಿಂದೂ ಖೈದಿಗಳಿಗೆ ವಿಶೇಷ ವಾಖ್ಯಾನ ಮಾಡುತ್ತಿದ್ದರು ಮತ್ತು ಸ್ಥಳೀಯ ಥಿಯಾನಫಿಕಲ್ ಸೊಸೈಟಿ ಮತ್ತು Majlise Rajahal ಮೈಸೂರು ಕೂಡ ತಮ್ಮ ಮತದ ಧರ್ಮದ ತತ್ವಗಳನ್ನು ಬೋಧಿಸಿದ್ದರಿಂದ ಖೈದಿಗಳಲ್ಲಿ ಆರೋಗ್ಯ, ಉತ್ತಮಗುಣ ಕಂಡಿತು. *೧೪

ಪಲ್ಪುರವರ ಸೇವೆಯನ್ನು ಮೆಚ್ಚಿದ ಸರ್ಕಾರ ಅವರನ್ನು ಬರೋಡಾಕ್ಕೆ ವಿಶೇಷ ಆರೋಗ್ಯ ಅಧಿಕಾರಿಯೆಂದು ಕಳುಹಿಸಿತು. ಆಗ ಅಲ್ಲಿ ದಿವಾನರಾಗಿದ್ದ ವಿ.ಪಿ. ಮಾಧವರಾವ್ ಪಲ್ಪುರವರನ್ನು ಹೆಚ್ಚು ಮೆಚ್ಚಿದ್ದ ಕಾರಣ. ಪಲ್ಪುರವರಿಗೆ ರೂ. ೬೦೦ ಕೊಡುವದಕ್ಕೆ ಬರೋಡ ಸರಕಾರ ಸಮ್ಮತಿಸಿತು. ಬರೋಡ ಸರ್ಕಾರ ಪಲ್ಪುರವರ ಸೇವೆಯನ್ನು ಅತ್ಯುತ್ತಮ ಎಂದು ಮೆಚ್ಚಿತು.'' *೧೫ ಆದರೆ ಅವರ ಸೇವೆಯನ್ನು ಹೊಗಳಿದ ಸರ್ಕಾರ ಅವರಿಗೆ ಹೆಚ್ಚಿನ ಸಂಬಳ ಕೊಡುವದಕ್ಕೆ ಒಪ್ಪಲಿಲ್ಲ. ಇಲ್ಲೂ ಪಲ್ಪು ನಿರಾಸೆಗೊಂಡರೆಂದು ಕಾಣುತ್ತದೆ ಎಂಬುದು 'Representation of Mr. Palpu claiming losses incurred by him during his Deputation to the Baroda State. *೧೬ ಎಂಬುದರಿಂದ ವ್ಯಕ್ತವಾಗುತ್ತೆ. ಒಂದು ವರ್ಷ ಉತ್ತಮ ಸೇವೆಸಲ್ಲಿಸಿ ಬರೋಡದಿಂದ ಮೈಸೂರಿಗೆ ವಾಪಸ್ಸು ಬಂದು ಅಧಿಕಾರವಹಿಸಿದ ಮೇಲೂ ಪಲ್ಪುರವರು ತಮಗೆ ಬರಬೇಕಾದ ಪ್ರಯಾಣ ಭತ್ಯಕ್ಕೆ ಒಂದು ವರ್ಷ ಕಾಯಬೇಕಾಯ್ತು. ಮೈಸೂರು ಮತ್ತು ಬರೋಡ ದರ್ಬಾರು ಪಲ್ಪುರವರ ಪ್ರಯಾಣ ಭತ್ಯೆಯನ್ನು ಯಾರು ಭರಿಸಬೇಕು ಎಂಬುದರ ವಿಶೇಷ ದಾಖಲೆಯನ್ನು ನೋಡುತ್ತೇವೆ. *೧೭

**ಸಮಾಜ ಸುಧಾರಣೆ**

ಮೈಸೂರಿನಲ್ಲಿ ಉದ್ಯೋಗವನ್ನು ಸಮರ್ಪಕವಾಗಿ ನಡೆಸಿದ್ದರೂ ತಮ್ಮ ಜಾತಿಯವರಿಗಾಗಿಯೂ ಪಲ್ಪುರವರ ಹೋರಾಟ ನಡೆದಿತ್ತು. ೧೮೮೫ರಲ್ಲಿ ಡಾ॥ ಪಲ್ಪು ತಮ್ಮ ಜನರಿಗೆ ಆಗುತ್ತಿರುವ ಅನ್ಯಾಯದ ಬಗ್ಗೆ ಒಂದು ಮನವಿ ಪತ್ರವನ್ನು ತಿರುವಾಂಕೂರು ದಿವಾನರಾದ ಎಸ್. ಶಂಕರ ಸುಬ್ಬೈಯ್ಯರ್‌ಗೆ ಸಲ್ಲಿಸಿ ವಿದ್ಯಾವಂತ ಇಳವರಿಗೆ ಸೂಕ್ತವಾದ ನೌಕರಿಯನ್ನು ದೊರಕಿಸುವಂತೆ ಕೋರಿದರು. ಆದರೆ ಇದಕ್ಕೆ ಯಾವ ಪ್ರತಿಕ್ರಿಯೆ ಬರಲಿಲ್ಲ. ೧೮೯೦ರಲ್ಲಿ ಮತ್ತೊಂದು ದೊಡ್ಡ ಮನವಿ ಪತ್ರಕ್ಕೆ ೧೩,೧೭೬ ಇಳವರ ಸಹಿ ಮಾಡಿಸಿ ಸಲ್ಲಿಸಿದರು. ತಿರುವಾಂಕೂರು ಮಹಾರಾಜರಿಗೆ ಅರ್ಪಿಸಿದ ಈ ಪತ್ರದಲ್ಲಿ ಇಳವರನ್ನು ಜಾತಿ ಮತ್ತು ಊರಿನಿಂದ ಹೊರದೂಡಬಾರದೆಂದೂ ಮತ್ತು ನೆರೆಯ

ಊರಾದ ಮದ್ರಾಸ್ ಪ್ರಾಂತ್ಯದಲ್ಲಿದ್ದ ಇಳವ ಕ್ರಿಶ್ಚಿಯನ್‌ರಿಗೆ ಯಾವ ರೀತಿ ಸೌಕರ್ಯ ದೊರೆಯುತ್ತದೆಯೋ ಆ ಸೌಕರ್ಯ ದೊರೆಯಬೇಕೆಂದೂ ಮನವಿ ಮಾಡಿದರು. ಆದರೆ ಇದಕ್ಕೂ ಯಾವ ಸಮರ್ಪಕವಾದ ಉತ್ತರ ಬರಲಿಲ್ಲ. ಆದ್ದರಿಂದ ಪಲ್ಪುರವರು ಮೈಸೂರು ಸಂಸ್ಥಾನಕ್ಕೆ ಭೇಟಿಕೊಟ್ಟ ವೈಸರಾಯ್ ಕರ್ಸನನನ್ನು ಬೆಂಗಳೂರಿನಲ್ಲಿ ಭೇಟಿಮಾಡಿ ಅವರಿಗೆ ಒಂದು ಮನವಿ ಪತ್ರ ಸಲ್ಲಿಸಿದರು. ಇದಲ್ಲದೆ ಆ ಕಾಲದಲ್ಲಿ ಹೆಸರು ವಾಸಿಯಾದ ಜಿ. ಪರಮಶಿವನ ಪಿಳ್ಳೆಯವರನ್ನು ಬ್ರಿಟೀಷ್ ಪಾರ್ಲಿಮೆಂಟನಲ್ಲಿ ಇಳವರ ಬಗ್ಗೆ ಮಾತಾಡುವಂತೆ ಸೂಚನೆ ಮಾಡಿದರು. ಇದಲ್ಲದೆ Indina National Congress ಪೂನ ಅಧಿವೇಶನದಲ್ಲಿ (೧೮೯೫) ಒಂದು ಠರಾವು ಮಂಡಿಸಿ ಇಳವರ ಕಷ್ಟವನ್ನು ಪಾರು ಮಾಡುವಂತೆ ಕೇಳಿದರು. ಇದು ಬಹುಶಃ ಇಳವರೆಲ್ಲರನ್ನೂ ಕೂಡಿಸಿ ಮಾಡಿದ ಮೊದಲನೆ ಪ್ರಯತ್ನ. ಇದರಲ್ಲಿ ಪಲ್ಪುರವರಿಗೆ ಸ್ವಲ್ಪ ಉತ್ತೇಜನ ಸಿಕ್ಕಿತು. ಆದರೆ ತಾವು ಕೈಕೊಂಡ ಪ್ರಯತ್ನಕ್ಕೆ ಅಷ್ಟೇನೂ ಯಶಸ್ಸು ಸಿಗಲಿಲ್ಲ. ಇಳವರನ್ನೆಲ್ಲಾ ಕೂಡಿಸಿ ಅವರ ಸ್ವಾಭಿಮಾನವನ್ನು ಕೆರಳಿಸಿ ಅವರಿಗೆ ನ್ಯಾಯವಾಗಿ ದೊರಕಬೇಕಾದ ನಾಗರೀಕ ಹಕ್ಕುಗಳನ್ನು ಕೊಡಿಸುವ ಪ್ರಯತ್ನ, ಪಲ್ಪು ಕೈಗೊಂಡ ಎರಡನೆ ಹಂತ.

ಸ್ವಾಮಿ ವಿವೇಕಾನಂದರು ಬೆಂಗಳೂರಿಗೆ ಭೇಟಿಯಿತ್ತಾಗ, ಪಲ್ಪು ಅವರನ್ನು ಭೇಟಿ (೧೮೯೨) ಮಾಡಿದರು. ಸ್ವಾಮಿ ವಿವೇಕಾನಂದರು ಪಲ್ಪು ಅವರಿಗೆ ''ಧರ್ಮಗುರುವಿನ ಮುಂದಾಳತ್ವದಲ್ಲಿ ಇಳವರು ಒಟ್ಟುಗೂಡಿ ನಡೆಯಬೇಕೆಂದು ಸೂಚಿಸಿದರು. ಇದಕ್ಕೆ ಸರಿಯಾದವರು ನಾರಾಯಣಗುರು ಎಂದು ತಿಳಿದು ನಾರಾಯಣಗುರುವಿನ ಸಂಪರ್ಕದಿಂದ (೧೮೯೪) ತಮ್ಮ ಹೋರಾಟವನ್ನು ಮುಂದುವರಿಸಿದರು. ೧೮೮೭ರಲ್ಲೇ ನಾರಾಯಣ ಗುರುಸ್ವಾಮಿ ತಮ್ಮ ಆಶ್ರಮದಲ್ಲಿ (ಅರವಿಪುರ) ಒಂದು ಆಶ್ರಮವನ್ನು ಸ್ಥಾಪಿಸಿದ್ದರು. ಇಳವರಿಗೆ 'ಮಾನವೀಯತೆ ದೇವರು' ಎಂಬುದನ್ನೂ, ಮತ್ತು ಹೆಚ್ಚಿನ ಆಡಂಬರಕ್ಕೆ ಹೋಗದೆ, ತಾವು ಕಟ್ಟಿಸಿದ ಎಳವ ಶಿವನ ದೇವಸ್ಥಾನದಲ್ಲಿ ಪೂಜಿಸಬೇಕೆಂದೂ ಮತ್ತು ವಿದ್ಯಾಭ್ಯಾಸಕ್ಕೂ ಮತ್ತು ಎಳವರ ಶುಚಿ ಇತ್ಯಾದಿ ದೈನಂದಿನ ಜೀವನದ ಹೆಜ್ಜೆಗಳನ್ನು ಮನ ತಿಳಿಯುವಂತೆ ಬೋಧಿಸಿದರು. ಇದು ಇಳವರ ಸುಧಾರಣೆಯಲ್ಲಿ ಒಂದು ಮೈಲಿಗಲ್ಲಾಯಿತು. ಇಳವರಿಗೆ ಹೆಚ್ಚಿನ ಆತ್ಮ ಭರವಸೆ ಮತ್ತು ರೀತಿ ನೀತಿಯುಲ್ಲಿ ತಿದ್ದುವಿಕೆಯುಂಟಾಗಲು ಕಾರಣ ''ಶ್ರೀನಾರಾಯಣ ಗುರು ಚಳುವಳಿ''. ಇದನ್ನು S.N.D.P. (ಶ್ರೀ ನಾರಾಯಣ ಧರ್ಮಗುರು ಪರಿಪಾಲನೆ) ಚಳುವಳಿಯಾಗಿ ಪರಿವರ್ತಿಸಿತು. ಹಿಂದೂ ಧರ್ಮದ ಅಂಚಿನಲ್ಲೇ ಎಳವರು ತಮ್ಮ ಮುಕ್ತಿಯನ್ನು ಕಂಡುಕೊಳ್ಳುವ ರೀತಿಯನ್ನು ನಾರಾಯಣ ಧರ್ಮ ಸಂಸ್ಥೆ ಬೋಧಿಸಿದ್ದೇ ಅಲ್ಲದೆ ತನ್ನತನವನ್ನು ಗುರುತಿಸುವ ಅವಕಾಶವನ್ನು ಎಳವ ಮತ್ತು ಹಿಂದುಳಿದ ಎಲ್ಲಾ ಜನಾಂಗ ಗುರುತಿಸುವಂತಾಯಿತು. S.N.D.P. ಒಂದು ವಿಶ್ವ ಚಳುವಳಿಯಾಗಿ ಪರಿಣಮಿಸಿತು ಇದರಿಂದಾದ ಸಾಮಾಜಿಕ ಬದಲಾವಣೆ, ಕೇರಳದಲ್ಲೇ ಅಲ್ಲದೆ ಎಲ್ಲಾ ಕಡೆಯಲ್ಲೂ ವ್ಯಾಪಿಸಿತು. 'ಒಂದು ಜಾತಿ, ಒಂದು ದೇವರು, ಒಂದು ಧರ್ಮ*೧೫೪ ಸಾಮಾನ್ಯ ಜನರಿಗೆ ಹೆಚ್ಚಿನ ಪ್ರಭಾವ ಬೀರಿತು. ಜಾತಿ ಯಾವುದೇ ಇರಲಿ, ಸಕಾಲದಲ್ಲಿ ವಿದ್ಯಾಭ್ಯಾಸ ಮತ್ತು ಅವಕಾಶ ಸಿಕ್ಕಿದಲ್ಲಿ ಮುಂದುವರಿಯಲು ಸಾಧ್ಯ ಎಂಬುದನ್ನು ಸ್ವಾಮಿ ನಾರಾಯಣಗುರು ತೋರಿಸಿ ಕೊಟ್ಟಿದ್ದರಿಂದ ಎಳವರಲ್ಲಿ ಹಿಂದೂ ಧರ್ಮದಲ್ಲೇ ಇದ್ದು ಕೊಂಡು ಮುಂದುವರಿಯಲು ಅವಕಾಶ ಕಲ್ಪಿಸಿಕೊಟ್ಟಿತು. ಇಲ್ಲದಿದ್ದರೆ ಅಸಂಖ್ಯಾತ ಹಿಂದೂ ಜನರು, ಕ್ರಿಶ್ಚಿಯನ್ ಧರ್ಮಕ್ಕೆ ಮರೆಹೋಗ ಬೇಕಾಗಿತ್ತು. ನಾರಾಯಣಗುರು ಪಲ್ಪುವನ್ನು ಬೆಂಗಳೂರಿನಲ್ಲಿ ಭೇಟಿ ಮಾಡಿದರು. ಮತ್ತು ಕುಮರ ಆಸನ್ ಅವರ ವಿದ್ಯಾಭ್ಯಾಸಕ್ಕೆ ಏರ್ಪಾಡಾಯಿತು. ಆಮೇಲೆ ಆಸನ್‌ರವರು ಕೇರಳದಲ್ಲಿ ಸಮಾಜ ಸುಧಾರಣೆ ಕೈಗನ್ನಡಿ ಆದರು. ಮೂಲಮ್ ಅಸೆಂಬ್ಲಿ, ಮೆಂಬರ್ ಆದದ್ದೆ ಅಲ್ಲದೆ, ನ್ಯಾಯ ವಿಧಾಯಕ ಸಭೆಯ ಮೆಂಬರ್ ಆದರು. "This temple is not dedicated to the Siva of the Brahmins but to the siva of the Izavas" ಎಂಬ ನಾರಾಯಣ ಗುರುವಿನ ಸಂದೇಶ ಹೆಚ್ಚಿಗೆ ಮಹತ್ವದ್ದು. ತಮ್ಮ ಬೌದ್ಧಿಕ ಮಟ್ಟದ ಮತ್ತು ಅದ್ವೈತ ವೇದಾಂತದ ಮೂಲಕ ನಾರಾಯಣಸ್ವಾಮಿ ಎಳವರ ನೈತಿಕ ಮಟ್ಟವನ್ನು ಹೆಚ್ಚಿಸಿದರು. *೧೭ ಟಿ. ಕೆ. ಮಾಧವನ್ ಅವರು ಸ್ವಾಮಿಯ ನಿಧನದ ನಂತರ ೧೯೨೭ S.N.D.P. ಚಳುವಳಿಯನ್ನು ದೊಡ್ಡ ಚಳುವಳಿಯಾಗಿ ಮಾರ್ಪಡಿಸಿದರು. ಟಿ.ಕೆ. ಮಾಧವನ್ ತಮ್ಮ ಪತ್ರಿಕೆಯಲ್ಲಿ ತಿಳಿವು ಮೂಡಿಸಿದ್ದರೆ ಕುಮಾರನ ಆಸನ್ ದೂರವಾಸ ಎಂಬ ಪದ್ಯದಿಂದ ತಿಳಿವು ಮೂಡಿಸಿದ್ದರು. *೧೭ ಪಲ್ಪು ಅವರ ಸಹಾಯ ಇದಕ್ಕೆಲ್ಲಾ ಇದ್ದೇ ಇತ್ತು. ಪಲ್ಪು ಅವರ ಮಗ ನಟರಾಜ ಪಲ್ಪು*೧೮ ಹುಟ್ಟಿದ್ದು ಬೆಂಗಳೂರು. ಪ್ಯಾರಿಸ್‌ನಲ್ಲಿ D.L.T. ಪಡೆದು ತಾಯ್ನಾಡಿಗೆ ವಾಪಸ್ಸು ಬಂದರು. ವೇದಾಂತದ ಕಡೆ ಒಲಿದಿದ್ದ ಪಲ್ಪು ಅವರ ಮಗ ಗುರುಸ್ವಾಮಿಯವರ, ಉತ್ತರಾಧಿಕಾರಿ ತಾನು ಎಂದು ತಿಳಿದಿದ್ದ. ಆದರೆ ವಸ್ತುಸ್ಥಿತಿ ಬೇರೆಯಾಗಿತ್ತು. ತನ್ನ ಗುರುವಾದ ನಾರಾಯಣ ಗುರುವಿನ ಮೂಲತತ್ವವನ್ನು ಪ್ರಚಾರಮಾಡಿ ಅಂತರಾಷ್ಟ್ರಿಯ ಚಾಲನೆ ಕೊಟ್ಟರು. *೧೯ ಜಾನ ಸ್ಪೈರ್ಸ್ ಅವರ ಶಿಷ್ಯನಾದನು. ೧೯೪೭ Spiers ಗುರುಕುಲ ಒಂದನ್ನು ಸ್ಥಾಪಿಸಿ ಕಗ್ಗಲಿಪುರದಲ್ಲಿ ಆಶ್ರಮವೊಂದನ್ನು ಸ್ಥಾಪಿಸಿದನು. ಕಗ್ಗಲಿಪುರ ಬೆಂಗಳೂರಿಗೆ ೧೩ ಮೈಲಿ ದೂರದಲ್ಲಿದೆ. Values ಎಂಬ ಪತ್ರಿಕೆ ಮೂಲಕ ಗುರುವಿನ ಉಪದೇಶವನ್ನೂ ಮಾಡುತ್ತಾ, ಉಪದೇಶ ಪ್ರಸಾರ ಮಾಡಿದನು. ವರ್ಕಾಲದಲ್ಲಿ (ಕೇರಳ), ಮುಖ್ಯ ಸಂಸ್ಥೆ ಮತ್ತು ಕಗ್ಗಲಿಪುರ (ಬೆಂಗಳೂರು)ದಲ್ಲಿ ಕೆಲಸ ಸಂಸ್ಥೆ ಇದೆ. ೧೯೫೭ರಲ್ಲಿ ಮೊದಲನೆ

ವಿಶ್ವನಾರಾಯಣ ಗುರು ಸಮ್ಮೇಳನ ಬೆಂಗಳೂರಿನಲ್ಲಿ ಕಗ್ಗಲಿ ಪುರದಲ್ಲಿ ನಡೆಯಿತು.

ಕೇರಳದ ಸಾಮಾಜಿಕ ಸುಧಾರಣೆಗೆ ಚಾಲನ ಕೊಟ್ಟವರೆಂದರೆ ಪಲ್ಪು ನಾರಾಯಣ ಗುರುವಿನ ಮೂಲಕ ತಮ್ಮ ಪ್ರಗತಿಪರ ದೃಷ್ಟಿ ಕೋನದಿಂದ ಮತ್ತು ಮಾನವಿ ದೃಷ್ಟಿಯಿಂದ ಕೀಳ್ಜಾತಿಯೆಂದು ಪರಿಗಣಿಸಿದ್ದ ಎಳವ ಸಮಾಜಕ್ಕೆ ಒಂದು ಗಣ್ಯ ಸ್ಥಾನ ಸಿಗುವಂತೆ ಮಾಡಿದ್ದನ್ನು ನೋಡುತ್ತೇವೆ. ಸಾಮಾಜಿಕ ಸುಧಾರಣೆ ಪ್ರಗತಿ ಪರವಾಗಿ, ಸಾಮಾನ್ಯ ಜನಗಳ ದೃಷ್ಟಿಗೆ ಒಳಿತಾಗಿ ಪರಿಣಮಿಸಿದ್ದನ್ನು ಕೇರಳದಲ್ಲಿ ಕಾಣುತ್ತೇವೆ.

ಹೀಗೆ, ತಾನು ಒಲಿದಿದ್ದ ವ್ಯಕ್ತಿಯನ್ನು ಸಮರ್ಪಕವಾಗಿ ನಿರ್ವಹಿಸಿದ್ದನ್ನು ಮೈಸೂರಿನಲ್ಲಿ ಕಂಡರೆ, ಕೇರಳಲ್ಲಿ ತನ್ನವರ ಏಳ್ಗೆಗಾಗಿ ಇಡಿ ಜೀವಿತವನ್ನು ಸವೆಸಿದ ಇನ್ನೊಂದು ಮುಖದ ಪಲ್ಪು ಪದ್ಮನಾಭರವರನ್ನು ಕಾಣುತ್ತೇವೆ.

## ಆಧಾರ ಮತ್ತು ಟಿಪ್ಪಣಿಗಳು


*೧. A Sreedhara Menon : ***Kerala District Gazetteer,*** Govt. Press 1962

*೨. Izavas or Illavans and Jiyans are the Toddy drawing Caster of Malabar Cochin and Iravancore, These people are called as Izavan in South and Parts of Centrl Travancore and choras in parts of central and North Travancore, As time progress Izavas acquired education & many become profiticient in Ayurveda and Sanskrit Language. (Thurston Edgar : Castes and Tribes of Southern India 1909)

*೩. V. Nagaraja Aiya: ***The Travancore State Manual,*** p. 406, 1906. See also G.A. Natesan : (ed.) **Indian Statesman,** 'Dewans and Prime Ministers and Native States.' Madras, p. 142

*೪. N. Ranganathan : 'Depressedclass' ***Indian Review,*** Nove-Dec 1911 V P, 894-95

*೫. ಇಳವರೇನೂ ಹಿಂದುಳಿದಿರಲಿಲ್ಲ. ೧೮೭೫ ಕೇರಳ census ಪ್ರಕಾರ ವಿದ್ಯಾವಂತರ ಸಂಖ್ಯೆ ೩.೧೫ ಇದ್ದುದು, ೧೮೯೧ರಲ್ಲಿ ೧೨.೧೦. ಅದರಲ್ಲಿ ೩೦% ಜನರು ಇಂಗ್ಲಿಷ್ ಬಲ್ಲವರಾಗಿದ್ದರು. ೧೯೧೧ರಲ್ಲಿ ೧೪೪೧ ಜನರಿಗೆ ಇಂಗ್ಲಿಷ್ ಭಾಷೆ ತಿಳಿದಿದ್ದು, ೧೯೩೧ರಲ್ಲಿ ೫೨೦೧ ವಿದ್ಯಾವಂತರಾಗಿದ್ದರು.

*೫ಅ. ಲಂಡನ್ನಿನ ಕಿಂಗ್ ಕಾಲೇಜ್ ಸೇರಿ ಬ್ಯಾಕ್ಟೀರಿಯಾಲಜಿ ಮತ್ತು ಸೆರಮ್ ಥೆರಪಿ ಮತ್ತು Tropical Medicine ಕುರಿತು ವಿಶೇಷವಾಗಿ ಅಭ್ಯಾಸಮಾಡಿದರು.

*೬. O. P. Jaggi : History of Science, Technology and Medicine in India. Vol, XIV 1979, P. 106

*೭. V.P. Madhava Rao : Report on Plague operations in the Mysore State excluding the Civil and Military Station, Bangalore, 1899

*೭ಅ. G.M. File, 112 of 1897, Depulation of Mr. Palpu to England to obtain the Diploma in Heath (KSA)

*೮. V. P. Madhavarao: ***Report on plague operations,*** 1899, p. 8

*೯. Medical File 63 of 99

*೧೦. Annual Sanitany Report of Mysore for the Calendar year - 1906 (KSA)

*೧೧ Annual Sanitary Report of Mysore for the Calendar Year 1907 (K.S.A.) with the government review there on.

*೧೨. A Native of Mysore, Indian Patriot, Madras 1911, Lt Col. Syth opined the death was due to bad vaccinators. But Palpu gave his expert opinion saying it is due to the bad quality of lymph manufactured in the Mysore vaccine institute.

*೧೩. Mysore Govt. Reports Prisons Report on the of Jails andlockups in the State during the Calendar year. 1914 with the rewiew thereon, P

*೧೪. Prision File no. SI (೧-೯) ೧೯೧೨

*೧೫. prison : File No 22-16 SI. no. 1-2 & 22 of 1915 (K.S.A.)

*೧೫ಅ. V.T. Samuel : ***one caste, one Religion, one god*;** A Study of Sree Narayana Guru, New Delhi, 1977

*೧೬. Prison File no 47-15 (1-11), Correspondence T.A. Bill of Mr. Palpu from Baroda to Bangalore

*೧೭. M.S.A. Rao : ***Social Movements and Social Transformation,*** p. 43

*೧೮. T. K. Ravindran : ***Asan and Social revolution in kerala,*** 1972

*೧೮. Padmanabhan, Natarajan, ***The word of the Guru,*** Bangalore, 1952

*೧೯. Natarajan, ***The Word of the Guru,*** Bangalore, 1952

ಡಾ॥ ಶ್ರೀನಿವಾಸ ಹಾವನೂರ *

# ಧಾರವಾಡದ ಶಿಕ್ಷಣ ಸಂಸ್ಥೆಯೊಂದರ 'ಪ್ರಸವ ವೇದನೆ'

ಶಿಕ್ಷಣ ಸಂಸ್ಥೆಯೊಂದನ್ನು ಆರಂಭಿಸಲು ಮೊದಲು ಹಣ ಬೇಕು. ಅಲ್ಲಿಂದ ಪ್ರಶಸ್ತ ಸ್ಥಳ ಹುಡುಕಬೇಕು. ಆಮೇಲೆ ಶಿಕ್ಷಕವೃಂದ. ಕೊನೆಯದಾಗಿ ಸರಕಾರದ/ವಿಶ್ವವಿದ್ಯಾಲಯದ ಅನುಮತಿ ಪಡೆಯಬೇಕು. ಈಗಿನ ದಿನಗಳಲ್ಲಿ ದುಡ್ಡಿನ ಅನುಕೂಲತೆ ಇರುವ ಹಾಗೂ ತುಸು ಪ್ರತಿಷ್ಠೆ ಹೊಂದಿರುವ ಯಾವುದೇ ವ್ಯಕ್ತಿ, ತಿಂಗಳೊಪ್ಪೊತ್ತಿನಲ್ಲಿಯೆ ನಿರಾಯಾಸವಾಗಿ ಶಾಲೆ-ಕಾಲೇಜನ್ನು ಸ್ಥಾಪಿಸಿಬಿಡಬಹುದು.

ಕರ್ನಾಟಕ ಕಾಲೇಜು ೨೦ ಜೂನ್ ೧೯೧೭ರಂದು ಧಾರವಾಡದಲ್ಲಿ ಅಸ್ತಿತ್ವದಲ್ಲಿ ಬಂದಿತಷ್ಟೆ. ಅದಕ್ಕೂ ಹಿಂದೆ ಸುಮಾರು ಎಂಟು-ಹತ್ತು ವರ್ಷಗಳ ಕಾಲ ಕಾಲೇಜನ್ನು ಹುಟ್ಟಿ ಹಾಕಲು ಅವ್ಯಾಹತ ಪ್ರಯತ್ನ ನಡೆಯಿತು. ಎಲ್ಲ ವರ್ಗದ ಜನರನ್ನು ಒಲಿಸಿಕೊಳ್ಳುವುದು, ಮನೆಮನೆಗೆ, ಅಲೆದಾಡಿ ದುಡ್ಡು ಕೂಡಿಸುವುದು, ಅನುಮತಿಗಾಗಿ ಸರಕಾರೀ ಅಧಿಕಾರಿಗಳ ಮನವೊಲಿಸುವುದು ಏನೆಲ್ಲ ಪರಿಶ್ರಮ ಪಡಬೇಕಾಗಿ ಬಂದಿತು!

**ಪೂರ್ವ ಸಿದ್ಧತೆ**

ಮುಂಬಯಿ ವಿಶ್ವವಿದ್ಯಾಲಯವು ಎಂದು ಅಸ್ತಿತ್ವದಲ್ಲಿ ಬಂತೋ, ಅಂದಿನಿಂದ ನಮ್ಮವರಲ್ಲಿ ಉಚ್ಚ ಶಿಕ್ಷಣದ ವಿಚಾರ ಮೂಡಿ ಬಂದುದು ಸಹಜ. ಆಗಿನ ದಿನಗಳಲ್ಲಿ ಮೆಟ್ರಿಕ್ ಎಂದರೆ, ಹೈಸ್ಕೂಲಿನ ಅಂತಿಮ ಪರೀಕ್ಷೆಯನ್ನು ವಿಶ್ವವಿದ್ಯಾಲಯವೇ ನಡೆಸುತ್ತಿದ್ದಿತು. ಅಲ್ಲಿ ಪಾಸಾದವರಿಗೆ ಮುಂಬಯಿ ಪ್ರಾಂತದಲ್ಲಿ ಎರಡೇ ಕಡೆಗೆ (ಮುಂಬಯಿ ಮತ್ತು ಪುಣೆ) ಕಾಲೇಜುಗಳಿದ್ದುವು. ಧಾರವಾಡ, ಬೆಳಗಾಂವಿ, ಬಿಜಾಪುರ ಇಲ್ಲಿಯ ಹೈಸ್ಕೂಲುಗಳಿಂದ ಮೆಟ್ರಿಕ್ ಪಾಸಾದವರು ಅಲ್ಲಿಗೇ ಹೋಗಬೇಕು; ಹೋಗುತ್ತಿದ್ದರು. ಹಾಗೆ ಎಲ್ಫಿನ್ಸ್ಟನ್ ಡೆಕ್ಕನ್, ಫರ್ಗ್ಯುಸನ್ ಕಾಲೇಜುಗಳಿಗೆ ಹೋಗುತ್ತಿದ್ದವರು ನಮ್ಮಲ್ಲಿಯ ಮಧ್ಯಮ ವರ್ಗದ ಅನುಕೂಲಸ್ಥರು ಮಾತ್ರ. ರಾ. ಹ. ದೇಶಪಾಂಡೆ, ಆಲೂರ ವೆಂಕಟರಾವ ಮೊದಲಾದವರು- ರೊದ್ದ ಅವರಂತೂ ಸರಿಯೇ - ಗ್ರ್ಯಾಜುಯೇಟ್ ಆದದ್ದು ಹೀಗೆ. ಡೆಪ್ಯುಟಿ ಚೆನ್ನಬಸಪ್ಪನವರಂಥ ಕಡು ಬಡವರೂ ಆದರೆ ವಿದ್ಯೆಯ ದಾಹವುಳ್ಳವರು ಪುಣೆಗೆ ಹೇಗೆ ಧಾವಿಸಿದರೆಂಬುದನ್ನೂ ನಾವು ಬಲ್ಲೆವು.

ಇವೆರಡೂ ಅಡಚಣೆಗಳಿಂದಾಗಿ, ತಮ್ಮ ಭಾಗದಲ್ಲಿಯೂ ಒಂದು ಕಾಲೇಜು ಸ್ಥಾಪನೆಯಾಗಬೇಕೆಂಬ ವಿಚಾರ ಟ್ರೇನಿಂಗ್ ಕಾಲೇಜಿನ ಅಧ್ಯಾಪಕ - ಪ್ರಾಧ್ಯಾಪಕರಲ್ಲಿ ಹಾಗೂ ವಕೀಲಿ ವೃತ್ತಿಯವರಲ್ಲಿ ತುಟಿಯುತ್ತಿತ್ತು. ಮುಂಬಯಿ ಪ್ರಾಂತದ ಇತರ ಸ್ಥಳಗಳಲ್ಲಿಯೂ ಹೊಸ ಕಾಲೇಜಿನ ಬೇಡಿಕೆಯಿರುತ್ತಿತ್ತು. ಗುಜರಾತದವರು, ಅದರಂತೆ ಮುಸಲ್ಮಾನರು ಏಳೆಂಟು ಲಕ್ಷ ರೂ.ಗಳ ವರೆಗೆ ಹಣವನ್ನು ನಿರಾಯಸವಾಗಿ ಕೂಡ್ರಿಸಿ ಸರಕಾರದ ಮುಂದೆ ಚಾಚಿ, 'ನಮಗೊಂದು ಕಾಲೇಜು ಬೇಕು' ಎಂದು ಹಕ್ಕಿನಿಂದ ಕೇಳುತ್ತಿದ್ದರು. ಕರ್ನಾಟಕದವರಾದ ನಾವು? ನಮ್ಮದು ಬಾಯ್ದೆರೆದ ಯಾಚನೆ! ಗವರ್ನರ್, ಕಮೀಶನರ್ ಮುಂತಾದ ಮೇಲಧಿಕಾರಿಗಳು ಬಂದಾಗ, 'ಪಾನಸುಪಾರಿ' ಮಾಡಿ ಕಾಲೇಜಿಗಾಗಿ ಯಾಚಿಸುವುದು ನಮ್ಮ ಕ್ರಮವಾಗಿದ್ದಿತು. ಕಾರಣ ಇಷ್ಟೇ ಸ್ಥಳೀಯರು ಹಣ ಸಂಗ್ರಹಿಸಿ ಕೊಡದೇ ಸರಕಾರವು ಏನೂ ಮಾಡಹೋಗುತ್ತಿರಲಿಲ್ಲ.

ಇಂಥ 'ಪಾನಸುಪಾರಿ'' ಕಾರ್ಯಕ್ರಮಗಳು ಧಾರವಾಡದಲ್ಲಿ ಮೇಲಿಂದ ಮೇಲೆ ಜರುಗುತ್ತಿದ್ದವು. ಅವುಗಳಲ್ಲಿ ಎದ್ದು ಕಾಣುವ ಒಂದು ಕಾರ್ಯಕ್ರಮ ೧೯೦೭ರಲ್ಲಿ ಆದದ್ದನ್ನು ಉಲ್ಲೇಖಿಸುವೆ. ಯಾಕಂದರೆ ಆ ದಿನ ಧಾರವಾಡದ ಕೆಲವು ಗಣ್ಯ ನಾಗರಿಕರನ್ನು ಮುದ್ದಾಂ ಕಲೆ ಹಾಕಿ, ಗವರ್ನರ್ ಮಹಾಶಯನಿಗೆ ಕಾಲೇಜಿನ ವಿಚಾರವನ್ನು ಸೂಚಿಸಲಾಗಿದ್ದಿತು. ಆ 'ಶಿಷ್ಟ ಮಂಡಲ'ದಲ್ಲಿ ತರುಣ ವಯೋವೃದ್ಧ ಶ್ರೀನಿವಾಸರಾಯರೂ ಇದ್ದರು. ಇಂಥದೇ ಪಾನಸುಪಾರಿ ಹಾಗೂ ಮನವಿಗಳ ಪರಿಣಾಮವೆಂಬಂತೆ ಪ್ರಾಂತದ

* ಆಶ್ರಯ ಅಪಾರ್ಟ್‌ಮೆಂಟ್, ೩೬, ೧ನೇ ಮೇನ್, ವಿನಾಯಕ ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

ವಿದ್ಯಾಧಿಕಾರಿಯಾದ (ಡಿ.ಪಿ.ಐ) ಎಗ್ಗೆಲ್ಸ್ ತನ್ನ ೧೯೦೨-೩ರ ವಾರ್ಷಿಕ ವರದಿಯಲ್ಲಿ ಕಾಲೇಜಿನ ನಾಸ್ತಿತ್ವವನ್ನು ಎತ್ತಿ ತೋರಿಸಿದ್ದನು. ಮೆಚ್ಚಬೇಕಾದ ಸಂಗತಿಯೆಂದರೆ ಅದರ ಮರುವರ್ಷ ಎಂದರೆ ೧೯೦೪ರಲ್ಲಿ ಧಾರವಾಡದ ಆಗಿನ ನಗರ ಸಭೆಯವರು ಗವರ್ನರ್ ಲ್ಯಾಮಿಂಗ್ಟನ್ ತಮ್ಮಲ್ಲಿಗೆ ಬಂದಾಗ ಬಿಚ್ಚು ನಾಡಿಗಳಲ್ಲಿ ಕಾಲೇಜ್ ಬೇಡಿಕೆಯನ್ನು ಮುಂದಿರಿಸಿದ್ದರು. ಅದಕ್ಕೆ ಗವರ್ನರ್ ಸಾಹೇಬರು "ಈಗಾಗಲೇ ಎರಡು ಕಾಲೇಜುಗಳಿವೆಯಲ್ಲ? ಇಲ್ಲಿಯವರು ಅಲ್ಲಿಗೆ ಹೋಗ್ತಾನೇ ಇದ್ದಾರೆ. ಹೊಸ ಕಾಲೇಜ್ ಎಂದರೆ ತುಂಬಾ ವೆಚ್ಚದ್ದು. ಆದರೂ ನೋಡುವಾ" ಎಂಬ ಧರತಿಯಲ್ಲಿ ಉತ್ತರವಿತ್ತರಂತೆ.

೧೯೦೪ರ ಜುಲೈ ತಿಂಗಳಲ್ಲಿ ರೊದ್ದರ ಶೈಕ್ಷಣಿಕ ಸೇವಾ ನಿವೃತ್ತಿ. ಅದೇ ವರ್ಷ ಅವರು ಬೆಳಗಾವಿಗೆ ಹೋಗಿ, ಅಲ್ಲಿಗೆ ಬಂದಿದ್ದ ಗವರ್ನರರೊಂದಿಗೆ , ಎರಡು ತಾಸು ಸಂವಾದಿಸಿದ್ದರು. ಅದರ ಎಳೆಯನ್ನು, ಎತ್ತಿಕೊಂಡು ೧೯೧೯ರ ಫೆಬ್ರವರಿ ೨೭ನೆಯ ತಾರೀಖಿನ ದಿವಸ ಕಾಲೇಜು ಸ್ಥಾಪನೆಯ ಬಗ್ಗೆ ಅಧಿಕೃತವಾದ ಮನವಿಯನ್ನು ಎಂದು ಮುಂದಿರಿಸಿದರೊ ಅಂದೇ ಕಾಲೇಜಿನ ಬೀಜಾಂಕುರವಾಯಿತೆನ್ನಬಹುದು. ಆ ಸುದೀರ್ಘ ಮನವಿಯಲ್ಲಿ ಅವರು ಕಾಲೇಜಿನ ಬೇಡಿಕೆಯ ಪೂರ್ವಾಪರಗಳನ್ನು ಕೊಟ್ಟಿದ್ದಾರೆ. ಮುಂಬಯಿ ಕರ್ನಾಟಕದ ನಾಲ್ಕೂ ಜಿಲ್ಲೆಗಳಲ್ಲಿ ೧೦ ಹೈಸ್ಕೂಲು ಗಳಿದ್ದುದನ್ನೂ, ನಮ್ಮವರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಪುಣೆ, ಮುಂಬಯಿಗಳಿಗೆ ಹೋಗುವುದರ ತೊಂದರೆಗಳನ್ನೂ ಕೊಟ್ಟಿದ್ದಾರೆ. ಕಾಲೇಜು ಸ್ಥಾಪನೆಗೆ ಧಾರವಾಡದ ಪ್ರಾಶಸ್ತ್ಯವನ್ನು ತೋರಿಸಿ ಕೊಟ್ಟಿದ್ದಾರೆ. ಹೈಸ್ಕೂಲು ದಾಟಿ ಉನ್ನತ ಶಿಕ್ಷಣವಿಲ್ಲದಿದ್ದರೆ, ಕನ್ನಡ ಮಕ್ಕಳ ಸ್ಥಿತಿ ಏನಾಗುವುದೆಂಬುದನ್ನೂ ವಿವರಿಸಿದ್ದಾರೆ. ಕಾಲೇಜ್ ಸ್ಥಾಪನೆಗೆ ದುಡ್ಡು ಬೇಕಲ್ಲವೆ? ರೊದ್ದ ಅವರು ಆ ಬಗ್ಗೆಯೂ ಹೇಳಿದ್ದಾರೆ: "ಸರಕಾರದವರೇ ನಮ್ಮ ಸಲುವಾಗಿ ಎಲ್ಲ ಕಾರ್ಯಗಳನ್ನು ಜರುಗಿಸಬೇಕೆಂದು ನಾನು ಇಚ್ಛಿಸುವುದಿಲ್ಲ. ಅದಕ್ಕಾಗಿ ಕರ್ನಾಟಕದ ಜನರು ವರ್ಗಾವಣೆಯಿಂದ ಒಂದು ಲಕ್ಷ ರೂಪಾಯಿಗಳನ್ನು ಕೂಡಿಸಿಕೊಡುವೆವೆಂದು ಈ ಪ್ರಾಂತದೊಳಗಿನ ಕನ್ನಡ ಪ್ರಜೆಗಳ ನಮ್ಮ ಪ್ರತಿನಿಧಿಯಾಗಿ ಹೇಳುತ್ತೇನೆ."

ಆ ಮನವಿಗೆ ನಾಲ್ಕು ತಿಂಗಳಾದ ಮೇಲೆ ಸರಕಾರದಿಂದ ಉತ್ತರ ಬಂದಿತು:

"ಒಂದ ಲಕ್ಷ ಸಾಲುವುದಿಲ್ಲ. ಹಣ ಕೂಡಿಸುವ ಸಂಘವನ್ನು ಸ್ಥಾಪಿಸಿರಿ. ದ್ರವ್ಯ ಸಹಾಯವು ನಿಶ್ಚಿತವಾಗಿ ಎಷ್ಟು ಸಿಗುವುದೆಂದು ತಿಳಿದ ಮೇಲೆ ಕಾಲೇಜಿನ ಯೋಜನೆಯೊಡನೆ ಅರ್ಜಿ ಕೊಡಿರಿ. ಈ ಯೋಜನೆಯನ್ನು ಸಿದ್ಧಪಡಿಸಲಿಕ್ಕೆ ಅವಶ್ಯವಾದ ಸಹಾಯ ಮಾಡಲು ವಿದ್ಯಾಖಾತೆಯ ಡೈರೆಕ್ಟರರಿಗೆ ತಿಳಿಸಿರುವೆವು.

"ಮುಂದೆ ಸ್ಥಾಪಿತವಾಗಲಿರುವ ಕಾಲೇಜಿನಲ್ಲಿ ಲಿಂಗಾಯತ ವಿದ್ಯಾರ್ಥಿಗಳೂ ಸೇರುವದರಿಂದ, ಲಿಂಗಾಯತ ಎಜ್ಯುಕೇಶನ್ ಫಂಡಿಗೆ ಒಪ್ಪಿಸಿಕೊಟ್ಟ ಸಿರಸಂಗಿ ದೇಸಾಯರ ಆಸ್ತಿಯೊಳಗಿಂದ ಕೆಲ ಭಾಗವು ದೊರೆಯಲೂಬಹುದು. ಆ ಫಂಡಿನ ವ್ಯವಸ್ಥಾಪಕರನ್ನು ಕೇಳಿ ನೋಡಿರಿ!"

ಇದರ ಅರ್ಥ ಸರಕಾರವು ಕಾಲೇಜನ್ನು ತೆರೆಯುವುದನ್ನು ತತ್ವತಃ ಒಪ್ಪಿಕೊಂಡಂತೆಯೇ ಆಯಿತಲ್ಲವೆ. ನಮ್ಮವರ ಮುಂದಿನ ಹೆಜ್ಜೆ ಇದಕ್ಕೂ ಹೆಚ್ಚು ಗುಣಾತ್ಮಕವಾಗಿದ್ದಿತು. ಎಂದರೆ, ಶಿಷ್ಟ ಮಂಡಳಿವೊಂದು ಅಕ್ಟೋಬರ್ ೧೯೧೯ರಲ್ಲಿ, ಧಾರವಾಡದಿಂದ ಹೊರಟು, ಬೆಳಗಾವಿಗೆ ಬಂದಿದ್ದ ಪ್ರಾಂತಮಟ್ಟದ ವಿದ್ಯಾಧಿಕಾರಿ ಯನ್ನು ಕಂಡಿತು. ಆ ಶಿಷ್ಟ ಮಂಡಲದಲ್ಲಿ ರೆವರೆಂಡ್ ಬೀಲ್ ಹಾಗೂ ಅರಟಾಳ ರುದ್ರಗೌಡರು ಇದ್ದರೆನ್ನುವುದನ್ನು ವಿಶೇಷವಾಗಿ ಕಾಣಿಸಬೇಕು.

ಒಂದು ಕಾಲೇಜು ನಡೆಸುವುದಕ್ಕೆ ಸುಮಾರು ಎಷ್ಟು ಹಣಬೇಕು? ಆ ಬಗ್ಗೆ ಚರ್ಚೆ ನಡೆದು ವಾರ್ಷಿಕ ವೆಚ್ಚ ೨೫ ಸಾವಿರ ರೂ. ಎಂದು ಲೆಕ್ಕ ಹಾಕಿದರು. ಅದರಲ್ಲಿ ೧೦ ಸಾವಿರ ರೂ. ಸರಕಾರವು ಭರಿಸಬೇಕು. ಫೀ ಹಣ ೮ ಸಾವಿರ ಬರಬಹುದು. ಇನ್ನುಳಿದ ೭ ಸಾವಿರ? ಪ್ರತಿ ವರ್ಷ ಅಷ್ಟು ಬಡ್ಡಿ ಬರುವ ಮೂಲಧನವನ್ನು ಕೂಡಿಸಬೇಕು. ಆಗಿನ ಕಾಲದ ಬಡ್ಡಿಯ ದರ ೩.೫% ಮಾತ್ರ. ಎಂದರೆ ೨ ಲಕ್ಷ ರೂಪಾಯಿ! ಅಷ್ಟು ಹಣ ಬೇರೆ ಮೂಲಗಳಿಂದ ಎಂದರೆ ಸಾರ್ವಜನಿಕರಿಂದ ಬರತಕ್ಕುದು. ರೊದ್ದ, ಅರಟಾಳ ಪ್ರಭೃತಿಗಳು ಕೂಡ್ರಿಸಬೇಕಾಗಿದ್ದ ೨ ಲಕ್ಷ ರೂ. ಲೆಕ್ಕ ಈ ರೀತಿಯದು.

### ಕರ್ನಾಟಕ ಕಾಲೇಜ್ ಅಸೋಸಿಯೇಶನ್

ಸರಕಾರವೇ ಇಂಥ ಅಸೋಸಿಯೇಶನ್ ಸ್ಥಾಪಿಸಬೇಕೆಂದು ಸೂಚಿಸಿದ್ದುದು ಒಂದು ಚೋದ್ಯವೇ ಸರಿ. ಅಂತೂ ೧೯೧೯ರ ಆರಂಭದಲ್ಲಿಯೇ ಈ ಅಸೋಸಿಯೇಶನ್ ಅಸ್ತಿತ್ವದಲ್ಲಿ ಬಂತು. ಒಂಬತ್ತು ಜನರಿದ್ದ ಆ ಸಂಸ್ಥೆಗೆ ರೊದ್ದ ಅವರು ಕಾರ್ಯಾಧ್ಯಕ್ಷರು. ಕರಗುದರಿ ನಾರಾಯಣರಾಯರು ಕಾರ್ಯದರ್ಶಿಯಾದರೆ ಜಠಾರ ಬಳವಂತರಾಯರು ಕೋಶಾಧಿಕಾರಿಗಳಾದರು. ಓರ್ವ ಗೌರವಾನ್ವಿತ ಅಧ್ಯಕ್ಷರಿರುವುದು ಒಳಿತೆಂದು ಆ ಸ್ಥಾನಕ್ಕೆ ಸರ್ ನಾರಾಯಣರಾವ್ ಚಂದಾವರಕರರನ್ನು ವಿನಂತಿಸಲಾಯಿತು. ಆಗ ಅವರು ಮುಂಬಯಿ ವಿಶ್ವವಿದ್ಯಾಲಯದ ವೈಸಚಾನ್ಸಲರ್ ಆಗಿದ್ದವರು.

ಇತ್ತ ಮುಂಬಯಿ ಪ್ರಾಂತದ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಕರ್ನಾಟಕದಿಂದ ಹೋದ ಸಭಾಸದರು ಮೇಲಿಂದ ಮೇಲೆ ಕಾಲೇಜಿನ ಪ್ರಸ್ತಾಪ ಮಾಡುತ್ತಿದ್ದರು. ಅವರಲ್ಲಿ ದತ್ತಾತ್ರೇಯ ವೆಂಕಟೇಶ ಬೆಳವಿ ಅವರ ಭಾಷಣಗಳು ಮನನೀಯವಾಗಿದ್ದುವು.

ಒಂದು ಸಲ ಬೆಳವಿಯವರು "ಧಾರವಾಡದಲ್ಲಿ ಸರಕಾರದವರು ಬೇಗನೆ ಆರ್ಟ್ಸ್ ಕಾಲೇಜನ್ನು ಸ್ಥಾಪಿಸಬೇಕೆಂದು ಗವರ್ನರ್ - ಇನ್- ಕೌನ್ಸಿಲ್ಲವರಿಗೆ, ಈ ಕೌನ್ಸಿಲ್ ಸೂಚಿಸುತ್ತದೆ" ಎಂಬ ನಿಲುವಳಿಯನ್ನು ತಂದರು. ಅದನ್ನು ಸಮರ್ಥಿಸುತ್ತ ಅವರು ಕೊಟ್ಟ ಕೆಲವು ಶೈಕ್ಷಣಿಕ ಮಾಹಿತಿ ಪರಿಣಾಮಕಾರಿಯಾಗಿದ್ದಿತು.

"ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳು ಸೇರಿ, ಸರಕಾರದ ನಾಲ್ಕು ಖಾಸಗಿ-ಏಡೆಡ್ ಆರು-ಹೀಗೆ ೧೦ ಹೈಸ್ಕೂಲುಗಳಿದ್ದು, ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಮೂರು ಸಾವಿರ ಆಗುತ್ತದೆ. ಅವರಲ್ಲಿ ಮೆಟ್ರಿಕ್ ಪಾಸಾದವರು ಮುಂಬಯಿ-ಪುಣೆ ಕಾಲೇಜುಗಳಿಗೆ ಹೋಗಬಯಸುತ್ತಾರೆ. ಆದರೆ ಅಲ್ಲಿಯೂ ದಟ್ಟಣೆ ಹೆಚ್ಚಾಗುತ್ತಲಿದೆಯಾದ್ದರಿಂದ, ಅತ್ಯಂತ ಹುಶಾರೀ ಹುಡುಗರಿಗಷ್ಟೇ ಪ್ರವೇಶ ದೊರತೀತು. ಉಳಿದ ಮಧ್ಯಮ ದರ್ಜೆಯವರು ಏನು ಮಾಡಬೇಕು?"

ಆಮೇಲೆ ಬೆಳವಿಯವರು, ಮುಂಬಯಿ - ಪುಣೆಗಳಲ್ಲಿಯ ಐದು ಕಾಲೇಜುಗಳಲ್ಲಿ ಒಟ್ಟಿಗೆ ೧೪೨೮ ಹುಡುಗರಿದ್ದು ಅವರಲ್ಲಿ ೩೦೦ ಜನ ಕರ್ನಾಟಕದಿಂದ ಬಂದವರೆಂದು ತಿಳಿಸಿ, ಇವರೆಲ್ಲರಿಗಾಗಿ ಕರ್ನಾಟಕದಲ್ಲಿಯೇ ಒಂದು ಕಾಲೇಜು ಹೇಗೆ ಅವಶ್ಯವಾಗುತ್ತ ದೆಂಬುದನ್ನು ಒತ್ತಿ ಹೇಳಿದರು.

ರೊದ್ದ ಅವರು ತಮ್ಮ ಅನುಮೋದನ ಭಾಷಣದಲ್ಲಿ ಮುಸ್ಲಿಮ್ ವಿದ್ಯಾರ್ಥಿಗಳಿಗೂ ಈ ಕಾಲೇಜು ಹೇಗೆ ಅವಶ್ಯ ವೆಂಬುದನ್ನು ಪ್ರತಿಪಾದಿಸಿದರು. ಅದರ ಪರಿಣಾಮವಾಗಿ ಮೌಲ್ವಿ ರಫಿ ಉದ್ದೀನ ಎಂಬವರು ಮಾತನಾಡಿ "ರೊದ್ದ-ಬೆಳವಿಯವರಿಗೆ ಪೂರ್ಣ ಹಣ ಸಂಗ್ರಹ ಸಾಧ್ಯವಾಗದಿದ್ದರೂ ಕಡಿಮೆ ಬಿದ್ದ ಹಣವನ್ನು ಸರಕಾರವೇ ಭರತಿ-ಹಾಕಬೇಕು" ಎಂದರು. ಇದಕ್ಕೆ ಪ್ರತಿಯಾಗಿ ಲಾಲುಭಾಯಿ ಸಾಮಳದಾಸ ಎಂಬವರು, ಕರ್ನಾಟಕಸ್ಥರು ಮೂರು ಲಕ್ಷ ರೂ. ಕೂಡಿಸಬೇಕು ಎಂದರು. ಖ್ಯಾತಿವೆತ್ತ ಫಿರೋಜಶಹಾ ಮೆಹತಾ ಹಾಗೂ ಸೆಟಲವಾಡರು "ಅದೇನಿದ್ದರೂ ಕಾಲೇಜು ಸ್ಥಾಪನೆಯಾಗಬೇಕು" ಎಂದು ಮುಕ್ತ ಮನದಿಂದ ಅನು ಮೋದಿಸಿದರು.

ಇವರೆಲ್ಲ 'ನಾಮದಾರ' ಜನರ ಭಾಷಣ ಮುಗಿದ ಮೇಲೆ ಕೌನ್ಸಿಲಿನ ಸಭಾಪತಿಯು, "ಬೆಳವಿಯವರು 'ಬೇಗನೆ' ಎಂಬ ಶಬ್ದವನ್ನು ಹಿಂತೆಗೆದುಕೊಳ್ಳಬೇಕು" ಎಂದರು. ಬೆಳವಿಯವರು ಹಟ ಹಿಡಿದರು. ಆಗ ಫಿರೋಜ ಶಹಾ ಅವರಿಗೆ "ಒಪ್ಪಿಕೊಂಡು ಬಿಡಿರಿ" ಎಂಬ ಕಿವಿಮಾತು ಹೇಳಬೇಕಾಗಿ ಬಂತು!

ಅಸೋಸಿಯೇಶನ್ನಿನ ಮುಖ್ಯ ಉದ್ದೇಶ ಹಣ ಕೂಡಿಸುವು ದೊಂದೇ ಆಗಿದ್ದಿತು. ಊರಲ್ಲಿ ಇದ್ದಷ್ಟು ಕಾಲ ಮತ್ತು ಹೊರಗೆ ಹೋದಾಗಲೂ ರೊದ್ದ ಅವರಿಗೆ ಒಂದೇ ಕೆಲಸ-ಹಣಯಾಚನೆಯ ಜೋಳಿಗೆಯನ್ನು ಮುಂದೆ ಮಾಡುವುದು. ಜೊತೆಗೆ ವಿವಿಧ ಜಿಲ್ಲೆಗಳಿಗೆ ಹೋಗಿ ಹಣ ಸಂಗ್ರಹಿಸುವುದಕ್ಕಾಗಿ ಜಿಲ್ಲಾ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಯಿತು. ಅವರಲ್ಲಿ ಶಾಂತವೀರಪ್ಪ ಮೆಣಸಿನಕಾಯಿ, ಇಬ್ರಾಹಿಮಖಾನ ಪಠಾಣ ಹಾಗೂ ನಮಗೆ ಹೆಚ್ಚು ಆಪ್ಯಾಯ ಮಾನರಾಗಿರುವ ಫ.ಗು. ಹಳಕಟ್ಟಿಯವರೂ ಇದ್ದರೆಂಬುದು ಗಣನೀಯ.

ಧನ ಸಂಗ್ರಹಕ್ಕೆ ಗಟ್ಟಿಮುಟ್ಟಾದ ಪ್ರಯತ್ನ ನಡೆದದ್ದು ೧೯೧೩ ರಿಂದ. ಆದರೆ ಮರುವರ್ಷದಷ್ಟೊತ್ತಿಗೆ ಹಲವು ವಿಘ್ನಗಳು ತಲೆದೋರಿದುವು. ಒಂದನೆಯದು ೧೯೧೪ರಲ್ಲಿ ಆರಂಭವಾದ ಮಹಾಯುದ್ಧ. ಎರಡನೆಯದು, ಆಗಿನ ವೀರಶೈವ ಸಮಾಜದ ಗಣ್ಯರು, ತಮ್ಮ ವಿದ್ಯಾರ್ಥಿಗಳಿಗಾಗಿ ಮುಂಬಯಿಯಲ್ಲಿ ಒಂದು ಹಾಸ್ಟೆಲ್ ತೆರೆಯಬೇಕೆಂದು ನಿಧಿ ಸಂಗ್ರಹಿಸತೊಡಗಿದ್ದುದು. ಕಾಲೇಜ್ ಶಿಕ್ಷಣಕ್ಕೆಂದು ಆ ವಿದ್ಯಾರ್ಥಿಗಳು ಮುಂಬಯಿಗೆ ಹೋದಾಗ ಅನುಕೂಲವಾಗಬೇಕು ಎಂಬುದು ಅವರ ಅಪೇಕ್ಷೆಯಾಗಿದ್ದಿತು.

ಈ ಪ್ರಸಂಗದಲ್ಲಿ, ಆಡಳಿತದ ಕೌನ್ಸಿಲಿನ ಸದಸ್ಯರಾದ (ಮಂತ್ರಿಸ್ಥಾನ) ಕ್ಲಾಡ್ ಹಿಲ್ ಮಹತ್ವದ ಪಾತ್ರ ವಹಿಸಿದರು. ತಮ್ಮನ್ನು ಕಂಡು ಮಾನಪತ್ರವನ್ನು ಸಮರ್ಪಿಸಿದ ಆ ವೀರಶೈವ ಮುಂದಾಳುಗಳಿಗೆ ಅವರು ಹೇಳಿದ್ದೇನೆಂದರೆ, "ನಿಮ್ಮ ವಿದ್ಯಾರ್ಥಿ ಗಳಿಗೆ ನೀವು ನೆರವಾಗಬೇಕೆನ್ನುವುದು ನ್ಯಾಯವಾದದ್ದೇ. ಆದರೆ ದೂರದ ಅಪರಿಚಿತ ಮುಂಬಯಿಗೆ, ತಮ್ಮ ಮನೆಮಾರು, ಬಂಧು ಬಳಗದವರನ್ನು ಬಿಟ್ಟು ನಿಮ್ಮ ಮಕ್ಕಳನ್ನು ಕಳಿಸುವ ವ್ಯವಸ್ಥೆ ಉಚಿತವೊ, ಅದೇ ಹಣವನ್ನು ನಿಮ್ಮ ಬಾಗಿಲ ಬಳಿಯಲ್ಲಿಯೇ ಒದಗಲಿರುವ ಕಾಲೇಜ್ ಸ್ಥಾಪಿಸುವುದಕ್ಕೆ ವೆಚ್ಚ ಮಾಡುವುದು ಉಚಿತವೊ, ವಿಚಾರ ಮಾಡಿರಿ. ಇಂದಲ್ಲ ನಾಳೆ ಧಾರವಾಡದಲ್ಲಿ ಕಾಲೇಜ್ ಸ್ಥಾಪನೆಯಾಗುವುದು ಖಂಡಿತ. ಆಗ ನೀವು ಇಲ್ಲಿಗೆ ನಿಮ್ಮ ಮಕ್ಕಳನ್ನು ಕಳಿಸುವವರು ತಾನೇ. ಅಂದಾಗ ಆ ಹಾಸ್ಟೆಲ್ಲಿಂದ ಏನು ಪ್ರಯೋಜನ? ಅಲ್ಲದೆ ಇಲ್ಲಿಯ ಕಾಲೇಜ್ ಸ್ಥಾಪನೆಯಲ್ಲಿ ನಿಮ್ಮ ಸಕ್ರಿಯ ಸಹಾಯವೂ ಸಂದಿದೆ - ಎಂದರೇನೇ ಸಾರ್ಥಕವಲ್ಲವೆ?"

ಅವರ ಯುಕ್ತಿಯುಕ್ತವಾದ ಸಲಹೆ ಒಳ್ಳೆಯ ಪರಿಣಾಮ ಮಾಡಿತು. ನಿಧಿ ಸಂಗ್ರಹಕ್ಕೆ ಜೋರು ಬಂದಿತು. ಅರಟಾಳ, ರೊದ್ದ ದ್ವಯರು ತಲಾ ಒಂದೊಂದು ಲಕ್ಷದ ಜವಾಬ್ದಾರಿ ಹೊತ್ತದ್ದು ಈ ಘಟ್ಟದಲ್ಲಿ.

ಆದರೆ ಅವರಿಬ್ಬರ ನಿಧಿ ಸಂಗ್ರಹದ ರೀತಿಯೇ ಬೇರೆ. ರೊದ್ದರು ಮನೆಮನೆಗೆ ಹೋಗಿ, ದೂರ ಇದ್ದವರಿಗೆ ಉದ್ದುದ್ದ ಪತ್ರ ಬರೆದು, 'ಯಾರು ಕೊಟ್ಟಾರು, ಕೊಡಲಿಕ್ಕಿಲ್ಲ' ಎಂಬ

ವಿಚಾರವನ್ನೇ ತಾರದೆ ಕೇಳುವುದು, ಕೇಳುವುದು- ಎಂಬ ಧೋರಣೆಯಿಂದ ಮುಂದುವರಿದರು. ಆ ಲೆಕ್ಕದಿಂದ, ಸ್ವತಹ ಅಧಿಕಾರಿಗಳನ್ನೂ - ಯಾರು ಕಾಲೇಜ್ ಸ್ಥಾಪನೆಗೆ ಸರಕಾರೀ ಮಟ್ಟದಲ್ಲಿ ನೆರವಾಗುತ್ತಿದ್ದರೋ ಅವರನ್ನೂ ಬಿಡದೆ ವಂತಿಗೆಯನ್ನು ಪಡೆದಿದ್ದಾರೆ! ಮುಂದೆ ಪ್ರಿನ್ಸಿಪಾಲ್ ಆಗಿ ಬರಲಿದ್ದ ರಾಲಿನ್ಸಸನ್ನನ ಕಡೆಯಿಂದಲೂ ೧೫ ರೂ. ವಸೂಲು ಮಾಡಿದ್ದಾರೆ. ಇದೀಗ ಪ್ರಸ್ತಾಪಿಸಿದ ಹಿಲ್ ಅವರು ಕೂಡ! (ಕೊಟ್ಟದ್ದು ೨೫ ರೂ.).

ರೊದ್ದ ಅವರ ಮತ್ತೊಂದು ರೀತಿಯ ಸಂಗ್ರಹ-ನಾಟಕ ಕಂಪನಿಗಳವರಿಂದ ನಾಟಕವಾಡಿಸಿ ಆ ದಿನದ ಗಳಿಕೆಯನ್ನು ಪಡೆಯುವುದು. ಇಂಥ ೫-೬ ನಾಟಕ ಪ್ರಯೋಗಗಳ ಹೆಸರಿದೆ, ಅವರ ಯಾದಿಯಲ್ಲಿ, ಎಲ್ಲಕ್ಕೂ ಹೆಚ್ಚು ಹಣ ಕೊಟ್ಟವರು ಕಿರ್ಲೋಸ್ಕರ ನಾಟಕ ಕಂಪನಿಯವರು (ರೂ. ೧೨೬೭). ರೊದ್ದ ಅವರು ಸಂಗ್ರಹಿಸಿದ್ದ ದೊಡ್ಡ ಪ್ರಮಾಣದ ಕೊಡಗೆಗಳ ಒಂದು ಪಟ್ಟಿಯಿದ್ದು, ಅದರಲ್ಲಿ ಉತ್ತರಾದಿ ಮಠದ ಆಗಿನ ಸ್ವಾಮಿಗಳಾದ ಶ್ರೀಸತ್ಯಧ್ಯಾನ ತೀರ್ಥರು ಒಂದು ಸಾವಿರ ರೂ.ಗಳನ್ನು ಕೊಟ್ಟದ್ದು ವಿಶೇಷವೆನಿಸೀತು. ಇತ್ತ ಅರಟಾಳ ಅವರು ಏನೇನೂ ಗದ್ದಲವಿಲ್ಲದೆ ಹಾಗೂ ಅಲ್ಪಾವಧಿಯಲ್ಲಿ ನಿಧಿ ಕೂಡಿಸಿದರಂತೆ. (ಹಾಗೆಂದು ಕಾಲೇಜ್ ಮಿಸಲೆನಿಯ ಮೊದಲ ವರ್ಷದ ಸಂಪಾದಕರು ಮೆಚ್ಚುಗೆಯ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ). ಅರಟಾಳರ ಸಂಗ್ರಹ ಪಟ್ಟಿಯೂ ಲಭ್ಯವಿದ್ದು, ಅದರಲ್ಲಿ ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಸ್ವಾಮಿಗಳು ಐದು ಸಾವಿರ ರೂ.ಗಳನ್ನೂ, ಒಂಟಮುರಿ ದೇಸಾಯಿಯವರು ಏಳು ಸಾವಿರ ರೂ.ಗಳನ್ನೂ ಕೊಟ್ಟದ್ದು, ಎದ್ದು ಕಾಣುವಂತಿದೆ.

ಈ ಮಧ್ಯೆ (೧೯೧೬ ರಲ್ಲಿ) ಇನ್ನೊಂದು ಅಡೆತಡೆ ತಲೆದೋರಿತು. ಎ. ಬಿ. ಲಠ್ಠೆ ಮುಂತಾದ ಬೆಳಗಾವಿಯ ಗಣ್ಯರು ಬೆಳಗಾವಿಯಲ್ಲಿಯೆ ತಾವು ಒಂದು ಕಾಲೇಜ್ ಸ್ಥಾಪಿಸಬೇಕೆಂದು ನಿರ್ಧರಿಸಿ ಹಣ ಸಂಗ್ರಹಕ್ಕೆ ಉದ್ಯುಕ್ತರಾದರು. ಸರಕಾರದ ಗಮನಕ್ಕೂ ತಂದರು. ಈ ಸಂದರ್ಭದಲ್ಲಿ ತೆರೆಮರೆಯಲ್ಲಿ ಕೆಲಸ ಮಾಡಿ ಆ ಎತ್ತುಗಡೆಯನ್ನು ತಡೆದು ನಿಲ್ಲಿಸಿದವರು ನಾಮದಾರ ಮಹದೇವ ಚೌಬಳ ಎಂಬವರು. ಇವರೂ ಮಂತ್ರಿಸ್ಥಾನದಲ್ಲಿದ್ದವರೇ. ಕರ್ನಾಟಕ ಕಾಲೇಜಿನ ಸ್ಥಾಪನೆಯ ಪ್ರತಿಯೊಂದು ಘಟ್ಟದಲ್ಲಿಯೂ ಅವರು ಅನಸ್ಯೂತ ದಾರದಂತೆ ತೆರೆಯಲ್ಲಿ ಶ್ರಮಿಸಿದ್ದಾರೆ. ಎಷ್ಟರ ಮಟ್ಟಿಗೆ ಎಂದರೆ ರೊದ್ದ ಅವರು ಒಂದಿಷ್ಟು ಹೆಚ್ಚೇ ಹಣ ಕೂಡಿಸಿ, ಅವರ ಹೆಸರಿನಲ್ಲಿ ಒಂದು ಸ್ಕಾಲರ್ ಶಿಪ್ ಇಟ್ಟರು.

೧೯೧೭ನೆಯ ಇಸವಿ ಆರಂಭವಾಯಿತು. ಆ ವರ್ಷದ ಅಕಡೆಮಿಕ್ ಅವಧಿಯಿಂದ (ಜೂನ್) ಕಾಲೇಜ್ ಆರಂಭವಾಗಲೇ ಬೇಕು - ಎಂದು ಎಲ್ಲರ ಮನೀಷೆಯಾಗಿತ್ತು. ಆ ಒತ್ತಡಕ್ಕೆ ಮಣಿದು ರೊದ್ದ ಅವರು ಒಂದು ಲಕ್ಷ ರೂ. ಹಣವನ್ನು ಫೆಬ್ರವರಿಯಲ್ಲಿ ಟ್ರೆಜರಿಗೆ ಜಮೆ ಮಾಡಿಬಿಟ್ಟರು. ಇನ್ನು ಅರಟಾಳ ಅವರ ಸಂಗ್ರಹ ಎಲ್ಲಿದೆ? ಎಂದು ಅಂದುಕೊಳ್ಳುವಾಗಲೇ ಅದೂ ಬಂದು ಬಿಟ್ಟಿತು.

ಅಂತೂ ಪೂರ್ಣವಾಗಿ ಎರಡು ಲಕ್ಷ ರೂ. ಸಿದ್ಧವಾಯಿತು. ಅದರ ವಿವರಗಳು ಇಲ್ಲಿವೆ:

| | ರೂಪಾಯಿ |
|---|---|
| ಅರಟಾಳ ರುದ್ರ ಗೌಡರಿಂದ ಬಂದ ಪ್ರಾಮಿಸರಿ ನೋಟುಗಳು | ೯೨,೦೦೦ |
| ಒಂಟಮುರಿ ದೇಸಾಯಿಯವರಿಂದ | ೭,೦೦೦ |
| ರೊದ್ದ ಅವರು ಸಂಗ್ರಹಿಸಿ ಜಮ ಮಾಡಿದ್ದು | ೧,೦೦,೦೦೦ |
| ಇತರರಿಂದ ಸಂಗ್ರಹಿಸಿದ್ದು | ೮೫೦ |
| ಅದುವರೆಗೆ ಕೂಡ್ರಿಸುತ್ತ ಇದ್ದ ಹಣಕ್ಕೆ ಬಂದ ಬಡ್ಡಿ | ೧೫೦ |
| | ರೂ. ೨,೦೦,೦೦೦ |

ಟ್ರೆಜರಿಗೆ ಹಣ ಸಂದಾಯವಾದ ಮೇಲೆ, ಮುಂದಿನ ಕೆಲಸ ತ್ವರಿತಗತಿಯಿಂದ ಸಾಗುವುದು ಅನಿವಾರ್ಯವಾಗಿದ್ದಿತು.

ಪ್ರಥಮತಃ ಪ್ರಾಧ್ಯಾಪಕ ವರ್ಗವು ಬೇಕಲ್ಲವೆ. ಹಾಗೆ ನೇಮಕರಾದವರೆಂದರೆ:

ಎಚ್.ಜಿ. ರಾಲಿನಸನ್ (ಪ್ರಾಂಶುಪಾಲ - ಇತಿಹಾಸ, ಇಂಗ್ಲಿಷ್ ಪ್ರಾಧ್ಯಾಪಕರು)ಜಿ. ಬಿ. ಜಠಾರ (ಕೇಂಬ್ರಿಜ್, ಎಡಿನ್ಬರೋ ಪದವೀಧರ; ತರ್ಕಶಾಸ್ತ್ರ, ರಾಜ್ಯ ಶಾಸ್ತ್ರಗಳ ಪ್ರಾಧ್ಯಾಪಕರು) ಎ. ಬಿ. ಗಜೇಂದ್ರಗಡಕರ (ಉಪಪ್ರಾಧ್ಯಾಪಕರು, ಸಂಸ್ಕೃತ) ಆರ್. ಡಿ. ಕರ್ವೆ (ಉಪಪ್ರಾಧ್ಯಾಪಕರು, ಗಣಿತ ವಿಷಯ) ದೇವಲಾಲಕರ (ಉಪಪ್ರಾಧ್ಯಾಪಕರು, ಭೌತಶಾಸ್ತ್ರ)

ಉಳಿದಿದ್ದ ಕೆಲಸವೆಂದರೆ ಮುಂಬಯಿ ವಿಶ್ವವಿದ್ಯಾಲಯದ ಮಂಜೂರು. ಅದಕ್ಕಾಗಿ ಬಂದ ಸಮಿತಿಯು, ಲೈಬ್ರರಿ, ಪ್ರಯೋಗಶಾಲೆಯ ಉಪಕರಣ, ಹಾಸ್ಟೆಲ್ ಫೀ ದರ, ಮುಂಗಳ. ಬಗ್ಗೆ ಉದಾರವಾದ ಅಭಿಪ್ರಾಯವನ್ನೇ ಹೇಳಿತಲ್ಲದೆ. ಕೊಲ್ಹಾಪುರ ವೊಂದನ್ನು ಬಿಟ್ಟರೆ ಸಮೀಪದಲ್ಲಿ ಯಾವ ಕಾಲೇಜೂ ಇಲ್ಲವಾದ್ದರಿಂದ ಮನ್ನಣೆ ಕೊಡುವುದರಲ್ಲಿ ಯಾವ ಅಭ್ಯಂತರವೂ ಇಲ್ಲ - ಎಂದು ಅಭಿಪ್ರಾಯ ಪಟ್ಟಿತು.

### ಸ್ಥಾಪನೆಯ ಆ ದಿನ

ಆ ದಿನವನ್ನು ಎಂದರೆ '೧೯೧೭ ಜೂನ್ ೨೦' - ಎಂಬುದನ್ನು ಸುವರ್ಣಾಕ್ಷರದಲ್ಲಿ ಮಾತ್ರವಲ್ಲ, ಅದನ್ನು ವಜ್ರಾಕ್ಷರದಲ್ಲಿ ಚಿರಂತನವಾಗಿ ಉಳಿಯುವಂತೆ ಬರೆದಿಡಬೇಕಾಗಿದೆ. ಕಾರ್ಯಕ್ರಮ ನಡೆದದ್ದು ಟ್ರೇನಿಂಗ್ ಕಾಲೇಜಿನ ಸಭಾಗೃಹದಲ್ಲಿ. ಈಗೂ ಆ ಕಾಣಸಿಗುವ ಸ್ಥಳವನ್ನು ನೀವು ನೋಡಿದ್ದೀರೋ ಇಲ್ಲವೊ ಅದರ

ಸ್ಥಳಮಿತಿ. ಹೆಚ್ಚೆಂದರೆ ೫೦೦. ಆದರೆ ಆ ದಿನ ನೆರೆದ ಜನ ಸಮ್ಮರ್ದ ೪ ಸಾವಿರವನ್ನು ಮಿಕ್ಕಿತ್ತಂತೆ!

ಕರ್ನಾಟಕ ಕಾಲೇಜಿಗೆ ನೆರಳನ್ನು ಕೊಟ್ಟದ್ದು ಟ್ರೇನಿಂಗ್ ಕಾಲೇಜು. ಅದು ದಾದಿಯ ಕಾರ್ಯವನ್ನು ಮನಃಪೂರ್ವಕವಾಗಿ ಮಾಡಿತೆನ್ನಬೇಕು. ಸಮಾರಂಭದಲ್ಲಿ 'ಸ್ವಾಗತವೀ ಸುಜನ ವೃಂದಕೆ' ಎಂಬ ಸ್ವಾಗತ ಗೀತೆಯನ್ನು ಹಾಡಿದವರು ಟ್ರೇ.ಕಾ.ದ ವಿದ್ಯಾರ್ಥಿಗಳೇ ಸಮಾರಂಭದ ಅಧ್ಯಕ್ಷತೆಯನ್ನು ಗವರ್ನರ್ ವಿಲಿಂಗ್ಡನ್ ವಹಿಸಬೇಕಾಗಿದ್ದಿತು. ಅನಾರೋಗ್ಯದ ಮೂಲಕ ಬರಲಾಗಲಿಲ್ಲ. ಆಗ ಅವರ ಪರವಾಗಿ ನಾಮದಾರ ಚೌಬಳರು ಅಧ್ಯಕ್ಷರಾಗಿ ಹೇಳಿದ ಈ ಕೆಳಗಿನ ಮಾತು ಉಲ್ಲೇಖನೀಯವಾದದ್ದು.

''ವಿದ್ಯಾರ್ಥಿಗಳೇ, ಈ ಕಾಲೇಜು ನಿಶ್ಚಯವಾಗಿ ರಾಷ್ಟ್ರೀಯ ಕಾಲೇಜು ಎಂದು ತಿಳಿಯಿರಿ. ನಿಮ್ಮ ಪ್ರದೇಶದ ವಿವಿಧ ಜಾತಿಯ ಜನರು ದುಡ್ಡು ಕೊಟ್ಟಿದ್ದಾರೆ. ಹೊರಗಿನವರೂ ಸಹಾಯ ಮಾಡಿದ್ದರಿಂದಲೇ ಅದನ್ನು ಸ್ಥಾಪಿಸುವುದು ಶಕ್ಯವಾಯಿತು. ಯಾರು ಹೆಚ್ಚಿಗೆ ಹಣ ಕೊಟ್ಟರು, ಯಾರು ಕಡಿಮೆ ಕೊಟ್ಟರು - ಎಂಬುದು ಮಹತ್ವದ್ದಲ್ಲ. ಸ್ವಲ್ಪ ಇದ್ದವನು ಆ ಸ್ವಲ್ಪದರಲ್ಲಿಯೇ ಶಿಕ್ಷಣದಂಥ ಪವಿತ್ರ ಕಾರ್ಯಕ್ಕೆಂದು ಕೊಟ್ಟರೆ, ಅವನು ಶ್ರೀಮಂತನಿಗಿಂತಲೂ ಹೆಚ್ಚು ಕೊಟ್ಟಿದ್ದಾನೆಂದು ತಿಳಿಯಬೇಕು.''

ಆ ಸಮಾರಂಭದ ಸಂಭ್ರಮ ಹಾಗೂ ನೆರೆದವರಲ್ಲಿ ಅದು ಮೂಡಿಸಿದ ಗಾಢ ಪರಿಣಾಮ ಅಷ್ಟಿಷ್ಟೆಂದು ಹೇಳುವಂತಿಲ್ಲ. ಸಮಾರಂಭದ ಕೊನೆಯಲ್ಲಿ ಅರಟಾಳ ರುದ್ರಗೌಡರು ಸಾರಿದರು:

''ಈ ಜಿಲ್ಲೆಯ ಸಂಗೂರ ಗ್ರಾಮದ ರುದ್ರವ್ವ ಹೊಳಿಯಪ್ಪನವರ ಎಂಬ ಹೆಣ್ಣುಮಗಳು. ಈಚೆಗೆ, ಬಡ ವಿದ್ಯಾರ್ಥಿಗಳಿಗೆ ಸ್ಕಾಲರಶಿಪ್ ಇಡಬೇಕೆಂದು ೩೦೦೦ ರೂ.ಗಳನ್ನು ಕೊಟ್ಟಿದ್ದಾಳೆಂದು ಸಾಕಲು ಸಂತೋಷಿಸುತ್ತೇನೆ. ಶಿಕ್ಷಣ ಪ್ರೇಮದ ಈ ಪರಿಗೆ ಯಾರೂ ಮೂಕವಿಸ್ಮಿತರಾಗಬೇಕು. ಆಗಿನ ಕಾಲದ ಮೂರು ಸಾವಿರ ರೂ! ಅದೂ ಒಬ್ಬ ಹಳ್ಳಿಯ ಅನಕ್ಷರಸ್ಥ (ಪ್ರಾಯಶಃ) ಹೆಣ್ಣು ಮಗಳಿಂದ.

ಅಂತೂ ಕಾಲೇಜು ಆರಂಭವಾಯಿತು ಶಿಲಾನ್ಯಾಸ ಒಂದೆಡೆ; ತರಗತಿಯ ಕಟ್ಟಡ ಇನ್ನೊಂದೆಡೆ ಎಂಬ ವಿಚಿತ್ರ ಪರಿಸ್ಥಿತಿ ಬೇರೆ ಎಲ್ಲಿಯೂ ಕಾಣಸಿಗದು! All great things have humble beginnings ಎನ್ನುವ ಮಾತು ಸಾರ್ವತ್ರಿಕವಾದುದು. ೭೫-೮೦ ವರ್ಷಗಳ ಹಿಂದಿನ ಕರ್ನಾಟಕ ಕಾಲೇಜು ಹೇಗಿದ್ದಿತು ಎಂಬುದು ತಿಳಿದರೆ ನಗೆ ಬರುವಂತಿದೆ. ಮೂರೇ ಕೋಣೆಗಳು. ಎರಡೇ ವರ್ಗಗಳು - ಫರ್ಸ್ಟ್ ಇಯರ್ ಮತ್ತು ಇಂಟರ್ಮೀಡಿಯೇಟ್. ಇಂತಿಷ್ಟೇ ಎಂಬ ನಿರ್ದಿಷ್ಟ ವಿಷಯಗಳು. ಸಂಸ್ಕೃತದ ಜೊತೆಗೆ ಫಿಜಿಕ್ಸ್ ಅನ್ನೂ ಅಭ್ಯಸಿಸಬೇಕು! ಲೈಬ್ರರಿ? ಅವರಿವರು ತಮಗೆ ಬೇಕೆಂದು ಕೊಂಡುಕೊಂಡು ಮನೆಯಲ್ಲಿಟ್ಟಿದ್ದ ಪುಸ್ತಕಗಳಿಂದ ಕೂಡಿದ್ದಿತು. ಏನಿದ್ದರೂ ಶಿಕ್ಷಣ ಇಲಾಖೆಯು ಪುಸ್ತಕ ಖರೀದಿಗಾಗಿ ೫೦೦ ರೂ.ಗಳ ವಾರ್ಷಿಕ ಅನುದಾನವನ್ನು ಕೊಡಲಿದ್ದಿತು.

ವಿದ್ಯಾರ್ಥಿಗಳು? ವಿಶ್ವವಿದ್ಯಾಲಯವು ೧೨೫ + ೭೫ ಎಂದು ಸಂಖ್ಯೆಯನ್ನು ನಿಗದಿಪಡಿಸಿದ್ದಿತು. ಆದರೇನು? ಮೊದಲ ವರ್ಗಕ್ಕೆ ಅರ್ಜಿ ಸಲ್ಲಿಸಿದವರು ಸಂಖ್ಯೆ ೨೦೦ ನ್ನು ಮೀರಿತ್ತು. ಅರ್ಜಿ ಸಲ್ಲಿಸದೆಯೂ ಇದ್ದ ಭಾವೀ ವಿದ್ಯಾರ್ಥಿಗಳೂ ಸಾಕಷ್ಟು ಜನ ಇದ್ದರಂತೆ. ಅವರೆಲ್ಲ ಆಯ್ತು ಮುಂದಿನ ವರ್ಷದವರೆಗೆ ಕಾಯೋಣ'' ಎಂದೇ ಬಗೆದಿದ್ದರು. ಮುಂಬಯಿ, ಪುಣೆಗಳಿಗೆ ಹೋಗುವ ವಿಚಾರವೇನೂ ಅವರಿಗಿರಲ್ಲ.

ಈ ಕುರಿತು ಒಂದು ಕವಿತೆ ಕಾಲೇಜ್ ಮಿಸಲೆನಿಯಲ್ಲಿ ಪ್ರಕಟವಾಗಿದ್ದು, ನೋಡುವ ಹಾಗಿದೆ.

ಪರನಾಡಿನೊಳೆಡರುಗಳಂ
ಪರಿಪರಿಯಿಂ ಸೋಸುತೆಮ್ಮ ಕನ್ನಡ ಮಿತ್ರರ್
ವರವಿದ್ಯೆಯ ನಾರ್ಜಿಸುತಿರೆ
ಪರಮೇಶ್ವರನಿತ್ತನೆಮಗೆ ಮುದದಿಂದ ವರವಂ
- ಏನೆಂದು ವರವಿತ್ತ?
ಎಲೆ ಮಗುವೆ ಸಾಕು ಕಷ್ಟವು ಭಲೆ ನಿನ್ನಯ ತಪಕೆ ಮೆಚ್ಚಿ
ವರವಿತ್ತೆನು ನಾ
ಸಲೆ ತಂತುಪುರುದೊಳೆಂತನೆ
ನಲಿದಾಡುವುದೀಗ ನಿನಗಭೀಪ್ಸಿತ ಕಾಲೇಜ್!!

ಬರೆದವರು? ಆ ಮುಂದೆ 'ವಿದ್ಯಾರತ್ನ' ಎನಿಸಿಕೊಂಡ
ಆರ್. ಎಸ್. ಪಂಚಮುಖಿಯವರು!

### ಮುಂದಿನ ಮೂರು ವರ್ಷಗಳಲ್ಲಿ

ಈ ಅವಧಿಯಲ್ಲಿ ಎಷ್ಟೊಂದು ಹೊಸ ಕಲ್ಪಗಳು! ಮೊದಲ ಟರ್ಮಿನಲ್ಲಿಯೇ ಕಾಲೇಜ್. Miscellany ಪ್ರಕಟವಾಯಿತು. ಇಷ್ಟೇ ಅಲ್ಲ; ಮರು ಟರ್ಮಿನನಲ್ಲಿಯೂ (ಎಂದರೆ ವರ್ಷಕ್ಕೆ ಎರಡು ಸಂಚಿಕೆಗಳೆಂದಂತಾಯಿತು). ಮುಖ್ಯವೆಂದರೆ ಜಮಖಾನಾ ಚಟುವಟಿಕೆಗಳು ಮರು ತಿಂಗಳಲ್ಲಿಯೆ ಆರಂಭವಾದದ್ದು. ಕ್ರಿಕೆಟ್, ಹಾಕಿ ಇವು ಮುಖ್ಯವಾಗಿ ಬಳಕೆಯಲ್ಲಿದ್ದುವು. ಆಟಗಳು, ಸ್ಪರ್ಧೆಗಳು - ಇವು ವರ್ಷಾದ್ಯಂತ ನಡೆಯುತ್ತಿದ್ದುವು. ಯಾರೊಂದಿಗೆ? ಹೈಸ್ಕೂಲ್ ಗುಂಪಿನವರೊಂದಿಗೆ. ಒಮ್ಮೆ ಬೆಳಗಾವಿಯ ತನಕ ಹೋದದ್ದುಂಟು. ಆದರೆ ಎಲ್ಲ ಆಟಗಳಲ್ಲಿಯೂ ಸೋಲು ಕಟ್ಟಿಟ್ಟದ್ದಾಗಿತ್ತು!

ಲೆಬೊರೇಟರಿಗಾಗಿ ಸಣ್ಣ ಆದರೆ ಪ್ರತ್ಯೇಕ ಕೋಣೆ ಸಿದ್ಧವಾಯಿತು. ಹೊರಗಿನ ವಿದ್ಯಾರ್ಥಿಗಳ ವಸತಿಗಾಗಿ ಓರ್ವ ಪ್ರಾಧ್ಯಾಪಕರೇ ತಮ್ಮ ಮನೆಯ ಹೆಚ್ಚಿನ ಭಾಗವನ್ನು ಬಿಟ್ಟುಕೊಟ್ಟರಂತೆ.

ಆ ಮೂರು ವರ್ಷಗಳಲ್ಲಿಯ, ಎದ್ದು ಕಾಣುವ ಒಂದು ಕಾರ್ಯಕ್ರಮವೆಂದರೆ ಡಿಬೇಟಿಂಗ್. ವರ್ಷದಲ್ಲಿ ಹಲವಾರು ಪರ-ವಿರೋಧೀ ಚರ್ಚೆಗಳು ನಡೆಯುತ್ತಿದ್ದುವು. ಕೆಲವೊಂದು ಚರ್ಚಾ ವಿಷಯಗಳನ್ನು ಹೇಳಲೆ?

"ದೇಶಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು"

ಕನ್ನಡ, ಎಂಬುದಕ್ಕೆ ಮಹತ್ವ

ಬಂದಿರದ ಕಾಲದಲ್ಲಿಯೂ ಈ ವಿಷಯ ಬಹುಮತದಿಂದ ಪಾಸಾಯಿತು.

"ವಿಧವೆಯರು ಮರಳಿ ಮದುವೆಯಾಗಬೇಕು"

- ಬಿದ್ದು ಹೋಯಿತು!

"ಮದುವೆ ಆಗದವರೇ ಸುಖಿಗಳು"

- ಇದೂ ಬಿದ್ದು ಹೋಯಿತು.

"ಜಾತೀಯ ಭೇದವು ಅಳಿಯಬೇಕು"

- ಇದಾದರೂ ಪಾಸಾಯಿತು, ಎನ್ನುತ್ತೀರಾ? ಇಲ್ಲ. ಬಿದ್ದು ಹೋಯಿತು! ಮತ್ತೊಂದು ಕಾರ್ಯಕ್ರಮ ಸೋಶಿಯಲ್ ಗ್ಯಾದರಿಂಗಿನದು. ಮೊದಲ ವರ್ಷದ ಎಲ್ಲ ವಿದ್ಯಾರ್ಥಿಗಳು ಮೊದಲ ಸಲ ಒಂದೆಡೆ ಸೇರಿ ಇಡೀ ದಿನ ಮೋಜು ಮಾಡಿದರು (ಆ ದಿನ ಮಧ್ಯಾಹ್ನದ ಊಟಕ್ಕೆ ತುಪ್ಪದಲ್ಲಿ ಮಾಡಿದ ಉಂಡಿ, ಜಿಲೇಬಿ ಇತ್ತಂತೆ. ಕೇಳಿದಷ್ಟು; ತಿಂದಷ್ಟು!) ಅದೊಂದೇ ವರ್ಷ ಈ ಕಾರ್ಯಕ್ರಮ ನಡೆಯಿತು ಎಂದು ದಿ. ಮಗಳವೇಡೆ ಶ್ರೀನಿವಾಸರಾಯರು ಒಮ್ಮೆ ನನಗೆ ಹೇಳಿದ್ದುದು ನೆನಪಿದೆ.

ಅಂದ ಹಾಗೆ, ಮಂಗಳವೇಢೆಯವರಂತೆ ಮುಂದಿನ ಸಾರ್ವಜನಿಕ ಜೀವನದಲ್ಲಿ ಬೆಳಗಿದ ಇನ್ನು ಕೆಲವು ವ್ಯಕ್ತಿಗಳೂ, ಈ ಮೊದಲ ಘಟ್ಟದ ಅವಧಿಯಲ್ಲಿಯೇ, ಕಾಲೇಜಿನ ವಿದ್ಯಾರ್ಥಿಗಳಾಗಿದ್ದರು. ಎಂ. ಆರ್. ಯಾರ್ದಿ, ಆರ್. ಎಂ. ಬೋಂಗಾಳೆ, ಡಿ. ವಿ. ಫೈಸಾಸ್, ಎಂ. ಬಿ. ಹುರಳಿಕೊಪ್ಪಿ, ಡಿ. ಪಿ. ಕರಮರಕರ ಮುಂ. ಕಾಲೇಜಿನ ಪ್ರಗತಿಯತ್ತ ಎಷ್ಟರ ಮಟ್ಟಿಗೆ ಗಮನವೆಂದರೆ, ಮರುವರ್ಷವೇ ಡಿಗ್ರಿ ಕಾಲೇಜಿನ ಮನ್ನಣೆಗಾಗಿ ಅರ್ಜಿಯನ್ನು ಸಲ್ಲಿಸಲಾಯಿತು.

ಆ ವರ್ಷ ಎಂದರೆ ೧೯೧೮ರಲ್ಲಿ ಮೂರು ವಿಶೇಷ ಘಟನೆಗಳು ಧಾರವಾಡದಲ್ಲಿ ಘಟಿಸಿದವು. ಒಂದು ಕರ್ನಾಟಕ ಎಜ್ಯುಕೇಶನ್ ಬೋರ್ಡ್ ಎಂಬುದು ಅಸ್ತಿತ್ವದಲ್ಲಿ ಬಂದು ೧೯೧೯ರಿಂದ ಈಗಿನ ಸುಪ್ರಸಿದ್ಧ 'ಕರ್ನಾಟಕ ಹೈಸ್ಕೂಲ್' ಆರಂಭವಾದದ್ದು. ಇನ್ನೊಂದು ಸದರ್ನ್ ಮರಾಠಾ ರೇಲ್ವೆದವರು, ತಮ್ಮ ಆಫೀಸ್ ಸಂಕೀರ್ಣವನ್ನು ಮದ್ರಾಸಿಗೆ ಸ್ಥಳಾಂತರಿಸತೊಡಗಿದ್ದು, ಮೂರನೆಯದು, ಧಾರವಾಡದಲ್ಲಿ ಇನ್ನೊಂದು ಕಾಲೇಜನ್ನು ಖಾಸಗಿಯಾಗಿ ಆರಂಭಿಸುವ ಎತ್ತುಗಡೆ ನಡೆದದ್ದು.

ಇಲ್ಲಿ ಪ್ರಿನ್ಸಿಪಾಲ್ ರಾಲಿನ್ಸನ್ ಬಗ್ಗೆ ಒಂದೆರಡು ಮಾತು ಹೇಳಬೇಕು. ಕಾಲೇಜಿಗೆ ಏನೇನು ಬೇಕೊ ಅವನ್ನು ಆಗು ಮಾಡಿಸಬೇಕು; ಎನ್ನುವ ಬಾಬತಿನಲ್ಲಿ ಅವರಿಗೆ ಅತೀವ ಕಾಳಜಿ.

ಕರ್ನಾಟಕ ವಿಶ್ವವಿದ್ಯಾಲಯ ಈಗ ನೆಲೆಗೊಂಡಿರುವ ಜಾಗದಲ್ಲಿ- ಆಗ ಅದಕ್ಕೆ ಛೋಟಾ ಮಹಾಬಳೇಶ್ವರ ಎಂದು ಹೆಸರು - ಶಂಕು ಸ್ಥಾಪನೆ ಬೇಗ ಮಾಡಿಸಬೇಕು. ಅಲ್ಲಿ ಕಟ್ಟಡವನ್ನು ಕಟ್ಟಿಸಬೇಕು; ಡಿಗ್ರಿ ಕಾಲೇಜ್ ಆಗಿ ಪರಿವರ್ತಿಸಬೇಕು, ಹೀಗೆ ಏನೆಲ್ಲ? ಇದನ್ನು ಮಾಡಬೇಕು - ಎನ್ನುವ ಧಾವತಿಯ ಮನುಷ್ಯ - ಈ ರಾಲಿನ್ಸನ್. ಅದರಂತೆ ಶಂಕುಸ್ಥಾಪನೆ ನೆರವೇರಿಬಿಟ್ಟಿತು. ೧೯೧೯ರ ಜುಲೈ ೨೯ ರಂದು ಗವರ್ನರ್ ಲಾಯಿಡ್ ಬಂದಿದ್ದರು. ಮಳೆಯ ದಿನಗಳವು. ಆದರೂ 'ದೂರದ' ಆ ಸ್ಥಳಕ್ಕೆ ಧಾರವಾಡದ ಜನ ಧಾವಿಸಿದ್ದರು. ಕಾಲೇಜಿನ ಯಾವುದೇ ಪ್ರಸಕ್ತಿ ಧಾರವಾಡದವರ ಹೃದಯಕ್ಕ ಅಷ್ಟೊಂದು ತಾಗಿದುದಾಗಿತ್ತು. ಈ ಕುರಿತ ಕವನವೊಂದು ಕಾಲೇಜ್ ಮಿಸಲೆನಿಯಲ್ಲಿ ಪ್ರಕಟವಾಗಿದೆ:

The day was rainy, but the Sun
The cloudy curtain oft did shun
At noon along the roads that led
To the bleak moor the people sped
The stone is laid! The seed is sown
Let God's blessing by the own
May the vast marble halls create
Great Newton's peers and poets great!

ಆದರೇನು, ಆ ಜಾಗದಲ್ಲಿ ಕಾಲೇಜಿನ ಸಂಗಮವರಿ ಶಿಲೆಯ ಕೋಣೆಗಳು ನಿರ್ಮಾಣವಾಗಲಿಲ್ಲ. ಆ ಶಂಕುಸ್ಥಾಪನೆಯ ದಿವಸ ರಾಲಿನ್ಸನ್ ಮುದ್ದಾಂ ರೇಲ್ವೆ ಕಟ್ಟಡ ಸಮುದಾಯದತ್ತ ಲಾಯಿಡ್ ಅವರ ಗಮನವನ್ನು ಸೆಳೆದರು. ಇದನ್ನೇ 'ಈಗಿನ ಕಾಲೇಜ್ ಕಟ್ಟಡವು ಗವರ್ನರ್ ಸಾಹೇಬನ ಕಣ್ಣಿಗೆ ಅಕಸ್ಮಾತ್ ಬಿದ್ದಿತು,' ಎಂದು ರೋಚಕವಾಗಿ ಹೇಳುವುದೂ ಇದೆ.

ಇದು ಅರ್ಧ ಸತ್ಯದ ಮಾತು. 'ಕರ್ನಾಟಕ ಕಾಲೇಜ್ ಅಸೋಸಿಯೇಶನ್' ಎಂಬುದು ಸ್ಥಾಪನೆಯಾದಾಗ, ಅದರ ಒಬ್ಬ ಸದಸ್ಯರೂ, ಜಿಲ್ಲೆಯ ಎಕ್ಸಿಕ್ಯೂಟಿವ್ ಎಂಜನಿಯರರೂ ಆಗಿದ್ದ ನಂಜುಂಡಯ್ಯ ಬೆಳವಡಿ - ಎಂಬವರು ಆ ರೇಲ್ವೆ ಕಟ್ಟಡವನ್ನು ಕಾಲೇಜಿಗೆಂದು, ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಬಳಸಬಹುದು - ಎಂದು ರೊದ್ದ ಮುಂತಾದವರಿಗೆ ಸೂಚಿಸಿದ್ದರು. "ಹಾಗಿದ್ದರೆ ಪ್ಲ್ಯಾನ್ ಕೊಡಿರಿ" ಎಂದಿದ್ದರು ರೊದ್ದರು. ಇದು ಬಹುಶಃ ೧೯೧೭-೧೮ರ ಕಾಲದ್ದು ಇರಬೇಕು. ಆಗಿನ ಟೈಮ್ಸ್ ಆಫ್ ಇಂಡಿಯಾದ ಧಾರವಾಡದ ಸುದ್ದಿಗಾರನು-

I have in my possession a draft of rules drawn by this gentleman in his own handwriting for the karnataka College Association and plans drawn up showing how the building could be altered to suit the requirements of a college.

ಆ ರೇಲ್ವೆ ಜಾಗದಲ್ಲಿ ಬೇರೆ ಕೆಲವು ಕಟ್ಟಡಗಳೂ ಇದ್ದುವೆನ್ನುವುದು ಗಮನಿಸಬೇಕಾದ ಅಂಶ. ರೇಲ್ವೆ ಅಧಿಕಾರಿಗಳು ವಾಸವಾಗಿರುವುದಕ್ಕೆ ಬಂಗಲೆಗಳಿದ್ದುವು. ಮುದ್ರಣಾಲಯಕ್ಕೆಂದು ಪ್ರತ್ಯೇಕ ಕಟ್ಟಡವಿದ್ದಿತು. 'ರೇಲ್ವೆ ಇನ್ಸ್ಟಿಟ್ಯೂಟ್' ಎಂಬ ಕ್ಲಬ್ಬಿನ ಕಟ್ಟಡವೂ ಇತ್ತು. (ಅದೇ ಮುಂದೆ ಕಾಲೇಜಿನ ಜಮಖಾನಾ ಆದದ್ದು).

ರಾಲಿನ್ಸನ್ ರೇಲ್ವೆ ಕಟ್ಟಡವನ್ನು ದೊರಕಿಸಿಕೊಡಲು ಗವರ್ನರನಿಗೆ ದುಂಬಾಲು ಬೀಳಲು ಇನ್ನೊಂದು ಕಾರಣವಿತ್ತು. ಅದೆಂದರೆ, ಧಾರವಾಡದಲ್ಲಿಯೆ ಇನ್ನೊಂದು ಖಾಸಗಿ ಕಾಲೇಜ್ ಆಗುವುದಿತ್ತು. ಭೋಟಾ ಮಹಾಬಳೇಶ್ವರದಲ್ಲಿ ಶಂಕುಸ್ಥಾಪನೆ ಯಾದ ಕೆಲವೇ ತಿಂಗಳುಗಳ ಮೇಲೆ ಅದರ ಆರಂಭವೂ ಆಯಿತು - ಈಗಿನ ವಿದ್ಯಾರಣ್ಯ ಹೈಸ್ಕೂಲಿನ ಕಟ್ಟಡದಲ್ಲಿ. ರಾಲಿನ್ಸನ್ನನಿಗೆ ಗಾಬರಿ! ಮೇಲು ಮಾತಿನಲ್ಲಿ ಆ ಕಾಲೇಜನ್ನು ಸ್ವಾಗತಿಸಿದರಾದರೂ.

ಕರ್ನಾಟಕ ಕಾಲೇಜಿನ ಬೆಳವಣಿಗೆಗೆ ಪೆಟ್ಟು ಬೀಳ ಬಾರದಲ್ಲವೆ? ಆದ್ದರಿಂದ ಲಾಯಿಡರಿಗೆ ಶಬ್ದಶಃ ದುಂಬಾಲು ಬಿದ್ದು ಒಪ್ಪಿಸಿದರು. ಅವರು ಮುಂಬಯಿಗೆ ಹಿಂತಿರುಗಿದೊಡನೆಯೇ ತಾವು ಮದ್ರಾಸಿಗೆ ಹೊರಟರು!

ರೇಲ್ವೆ ಕಟ್ಟಡದ ಹಸ್ತಾಂತರ, ಅದರಲ್ಲಿ ಬದಲಾವಣೆ ಹಾಗೂ ಕಾಲೇಜಿನ ವರ್ಗಗಳ ಆರಂಭ - ಇವು ಮೂರೂ ಸುಸೂತ್ರದ ಕೆಲಸಗಳೇನಾಗಿರಲಿಲ್ಲ. ಅಲ್ಲದೆ ಎಲ್ಲವೂ ೮-೯ ತಿಂಗಳುಗಳಲ್ಲಿ ಮುಗಿಯಬೇಕು. ಮೊದಲು ಖರೀದಿಯ ಕಾಗದ ಪತ್ರಗಳು ಲಂಡನ್, ಕಲ್ಕತ್ತ, ಮದ್ರಾಸ, ಮುಂಬಯಿ ಧಾರವಾಡಗಳಲ್ಲಿ ಸುತ್ತಾಡಿದುವು. ಅಂತೂ ಕಟ್ಟಡವು ೧೯೨೦ರ ಜನವರಿಯಲ್ಲಿ ಮುಂಬಯಿ ಸರಕಾರಕ್ಕೆ ಹಸ್ತಾಂತರವಾಯಿತು. ಖರೀದಿಗಾಗಿ ಮುಂಬಯಿ ಸರಕಾರವು ರೇಲ್ವೆ ಕಂಪನಿಗೆ ಕೊಟ್ಟ ಹಣ ಎಷ್ಟು ಗೊತ್ತೆ? ರೂ. ೬,೦೪,೧೨೬! ಅದೇ ದಿನದಿಂದ ಕೂಪರ್ ಎಂಬ ಎಂಜನಿಯರ್ ಮರುಕಟ್ಟೋಣದ ಕೆಲಸ ಕೈಕೊಂಡ. ಅವಿಶ್ರಾಂತವಾಗಿ ಶ್ರಮಿಸಿದ. ಅವನು ಆಯ್ದು ಕೊಂಡಿದ್ದ ಗುತ್ತಿಗೆದಾರನೂ ಒಬ್ಬ ಪಾರ್ಸಿ ಸದ್ಗೃಹಸ್ಥನೇ. ೧೯೨೦ರ ಜೂನ್ ತಿಂಗಳಿನಿಂದ ಕಾಲೇಜಿನ ಹೊಸ ವರ್ಷವು ಅಲ್ಲಿಯೇ ಮೊದಲಾಗಬೇಕು ಎಂದಿತ್ತಲ್ಲವೆ. ಹಾಗೇ ಆಯಿತು. ಹೊರಗೆ ಕಟ್ಟಡದ ಉದ್ಘಾಟನೆ ನಡೆದಾಗಲೂ, ಒಳಗೆ ಕೆಲಸ (finishing touches ಸ್ವರೂಪದ್ದು) ನಡೆದೇ ಇತ್ತು. ಆ ದಿನದ ಭಾಷಣಕಾರರು ಕೂಪರ್ ಎಂಜನಿಯರನನ್ನು ಬಾಯ್ತುಂಬ ಹೊಗಳಿದ್ದರ ದಾಖಲೆ ಇದೆ-ಮಹಾರಾಷ್ಟ್ರದ Archives ನಲ್ಲಿ. ಅದರಂತೆ ರಾಲಿನ್ಸನ್ನರ ಸುದೀರ್ಘ ಭಾಷಣದ ಪ್ರತಿಯೂ ಅಲ್ಲಿ ನನಗೆ ನೋಡಲು ದೊರೆಯಿತು. ಅವರು ಹೇಳಿದ್ದ ಒಂದೆರಡು ಅಂಶಗಳನ್ನು ಇಲ್ಲಿ ಉದ್ಧರಿಸುವುದು ಅಗತ್ಯವಾದದ್ದು.

''ಕರ್ನಾಟಕ ಕಾಲೇಜು ಬಿ.ಎ. ಪದವಿಯ ಜನರನ್ನು ಸಿದ್ಧಪಡಿಸುವ ಯಂತ್ರಾಲಯವಾಗದೇ, ಧೈರ್ಯ, ಸ್ವಾವಲಂಬನ, ದೇಶಭಕ್ತಿ ಮುಂತಾದ ಸದ್ಗುಣಗಳಿಂದ ಮಂಡಿತರಾದ ನಾಗರಿಕರು ಈ ಕಾಲೇಜಿನಲ್ಲಿ ಸಿದ್ಧರಾಗಬೇಕೆಂಬುದು ನನ್ನ ಉತ್ಕಟವಾದ ಅಪೇಕ್ಷೆಯಿರುತ್ತದೆ.''

''ಶಾರೀರಿಕ ಶಿಕ್ಷಣದಲ್ಲಿಯೂ ವಿದ್ಯಾರ್ಥಿಗಳು ಪಾಲು ಗೊಳ್ಳಬೇಕು. ಆಟಗಳ ಫೀಯನ್ನು ಪ್ರತಿಯೊಬ್ಬನಿಂದ ಕಡ್ಡಾಯವಾಗಿ ತೆಗೆದುಕೊಳ್ಳಲಾಗುತ್ತಿದೆಯಷ್ಟೆ. ಇದರರ್ಥ ಪ್ರತಿಯೊಬ್ಬ ವಿದ್ಯಾರ್ಥಿಯೂ ಆಟಗಳಲ್ಲಿ ಪಾಲ್ಗೊಳ್ಳಬೇಕು. ಶಿಕ್ಷಣ ಸಂಸ್ಥೆ ಯೊಂದರ ಯಶಸ್ವಿತೆಯ ಮಾನದಂಡವೇನು? ಹೆಚ್ಚು ಜನ ವಿದ್ಯಾರ್ಥಿಗಳಿದ್ದರೆ, ಅವರಲ್ಲಿ ಹೆಚ್ಚು ಜನ ಪಾಸಾದರೆ ಸಾಕೆ? ಅಲ್ಲ. ಅವರ ಸರ್ವತೋಮುಖ ಪ್ರಗತಿಯಾಗಿರಬೇಕು. ಆದ್ದರಿಂದ ಪಾಲಕರೇ, ನಿಮ್ಮ ಮಗ ನಾಲ್ಕು ವರ್ಷ ಕಲಿತು, ಬಿ.ಎ.ದಲ್ಲಿ ಮೇಲ್ದರ್ಜೆಯಲ್ಲಿ ಪಾಸಾಗಿ, ದೊಡ್ಡ ಸರಕಾರೀ ನೌಕರಿ ದೊರಕಿಸಬೇಕು - ಎಂದಿಷ್ಟೇ ನಿಮ್ಮ ವಿಚಾರ ಇದ್ದರೆ, ನಿಮ್ಮ ಹುಡುಗನನ್ನು ನಮ್ಮ ಕಾಲೇಜಿಗೆ ಕಳಿಸಬೇಡಿರಿ!''

ಅಂತೂ. ೧೯೨೦ರ ಜೂನ್ ತಿಂಗಳಿನ ಆ ದಿನದಿಂದ ಕರ್ನಾಟಕ ಕಾಲೇಜಿನ ಅಸ್ತಿವಾರದ ಕೆಲಸ ಮುಗಿದಿತ್ತು. ಗಾಡಿ ಹಳಿಯ ಮೇಲೆ ಬಂದಂತಾಯಿತು. ಕಾಲೇಜಿನ ಮುಂದಿನ ಚಟುವಟಿಕೆಗಳಿಗೆ ಉತ್ಸಾಹದ ವಾತಾವರಣ ಸೃಷ್ಟಿಯಾಯಿತು.

ಎಸ್. ಶ್ರೀನಿವಾಸ್ *

# ಸ್ವಾತಂತ್ರ್ಯ ಪೂರ್ವದ ಬೆಂಗಳೂರು ಪೌರ ಸಭೆಯ ಕಾರ್ಯನೀತಿಯ ಕೆಲವು ನೋಟಗಳು

ಬೆಂಗಳೂರು ನಿವಾಸಿಗಳ ಕಷ್ಟ ಸಮಸ್ಯೆಗೆ ಪರಿಹಾರ ಹಾಗೂ ನಾಗರೀಕರಿಗೆ ಮೂಲಭೂತ ಸೌಕರ್ಯ ಕೊಡುವುದರಲ್ಲಿ ಇಂದಿನ ಪೌರಸಭೆಯ ಉದಾಸೀನತೆ ಎಲ್ಲರಿಗೂ ತಿಳಿದ ಸಾಮಾನ್ಯ ವಿಷಯ. ಆದರೆ ಸ್ವಾತಂತ್ರ ಪೂರ್ವದ ಕಾಲದಲ್ಲಿ, ನಾಗರೀಕರ ಸಣ್ಣ ಪುಟ್ಟ ಸಮಸ್ಯೆಗಳಿಗೆ, ಹೆಬ್ಬಯಕೆಯ ಬಗ್ಗೆ ಪೌರಸದಸ್ಯರ ಹಾಗೂ ಅಧಿಕಾರಿಗಳ ಮನೋವೃತ್ತಿ ಹೇಗಿತ್ತೆಂದು ಇಲ್ಲಿ ನಿದರ್ಶಿಸಲಾಗಿದೆ.

೧೯೦೩*[1]ರಲ್ಲಿ ಬೆಂಗಳೂರು ಪೌರಸಭೆಯ ಮೇಲ್ವಿಚಾರಣೆಯಲ್ಲಿರುವ ಶಾಲೆಯಲ್ಲಿ ತಮಿಳು ಬೋಧಿಸುವ ಶಿಕ್ಷಕರ ಹುದ್ದೆಯನ್ನು ರದ್ದುಗೊಳಿಸುವ ಬಗ್ಗೆ ಪೌರಸಭೆಯ ಶಾಲಾ ಸಮಿತಿಯ ಕಾರ್ಯದರ್ಶಿ ಸೂಚಿಸಿದಾಗ, ನಾಗರೀಕರು ಅದನ್ನು ಪ್ರತಿಭಟಿಸಲು, ಪೌರಸಭೆಯು, ನಾಗರೀಕರ ಮನವಿ ಪತ್ರವನ್ನು ಶಾಲೆಯ ಸಮಿತಿಯ ಗಮನಕ್ಕೆ ತಂದಿತು. ವಿವಿಧ ಭಾಷೆಯನ್ನು ಕಲಿಯುವ ವಿದ್ಯಾರ್ಥಿಗಳ ಅಂಕಿ ಅಂಶಗಳನ್ನು ಗಮನಿಸಿ, ತೆಲುಗು ಭಾಷೆಯನ್ನು ಕಲಿಯುವ ವಿದ್ಯಾರ್ಥಿಗಳ ಸಂಖ್ಯೆ, ತಮಿಳು ಕಲಿಯುವ ವಿದ್ಯಾರ್ಥಿಗ[illegible]ಗಣಿತ ಕಡಿಮೆ ಇದ್ದರೂ, ಆ ಭಾಷೆಯನ್ನು ಶಾಲೆಯಲ್ಲಿ ಬೋಧಿಸುತ್ತಿದ್ದು, ತಮಿಳು ಭಾಷೆಯ ಬೋಧನೆಯನ್ನು ಶಾಲೆಯಲ್ಲಿ ಮುಂದುವರಿಸಲು ಸಮಿತಿಯು ತೀರ್ಮಾನಿಸಿತು.

೧೯೧೫*[2]ರಲ್ಲಿ ಸರ್ಕಾರವು ಬೆಂಗಳೂರು ಪೌರಸಭೆಗೆ ಸಾರ್ವಜನಿಕ ಆಸ್ಪತ್ರೆಗಳ ಪ್ರಯೋಜನವನ್ನು ಪಡೆದುಕೊಳ್ಳುವ ರೋಗಿಗಳ ಮೇಲೆ ಶುಲ್ಕವನ್ನು ವಿಧಿಸಬೇಕೆಂದು ಆಜ್ಞೆ ಹೊರಡಿಸಿದಾಗ, ಪೌರ ಸಭೆಯು ಈ ಕ್ರಮದಿಂದ ಜನ ಸಾಮಾನ್ಯರು ಸಾರ್ವಜನಿಕ ಆಸ್ಪತ್ರೆಗಳಿಗೆ ಬರುವುದು ನಿಲ್ಲಿಸುವರೆಂದು, ಇದರಿಂದ ರೋಗ ಹಾಗೂ ಸಾವು ಹೆಚ್ಚಾಗುವುದೆಂದು, ಈ ಕ್ರಮವನ್ನು ಬಿಡಬೇಕೆಂದು ಸರ್ಕಾರಕ್ಕೆ ಮನವಿ ಮಾಡಿತು.

೧೯೧೬*[3] ರಲ್ಲಿ ಬೆಂಗಳೂರು ನಿವಾಸಿಗಳಿಂದ, ಮುಂಜಾನೆ ಕೆಲ ಮಿಲ್‌ಗಳಲ್ಲಿ ಸೈರನ್ ಕೂಗಿಸುವುದರಿಂದ ತಮಗೆ ಬಾಧೆಯಾಗುತ್ತಿದೆಯೆಂದು, ಪೌರಸಭೆಗೆ ದೂರು ನೀಡಿದರು. ಪೌರ ಸಭೆಯು ತನ್ನ ಕಾಯ್ದೆಯನ್ನು ತಿದ್ದುಪಡಿ ಮಾಡಿ ಪೌರಸಭೆಯ ಅಧ್ಯಕ್ಷರಿಂದ ಲೈಸೆನ್ಸ್ ಪಡೆಯದೆ ಯಾವ ವ್ಯಕ್ತಿಯೂ ಸೈರನ್ ಕೂಗಿಸಬಾರದೆಂದು ಹಾಗೂ ಲೈಸೆನ್ಸ್ ಪಡೆದುಕೊಂಡವರು, ಮುಂಜಾನೆ ೬ ಘಂಟೆಯ ನಂತರ ಮತ್ತು ಕೇವಲ ೧೦ ಸೆಕೆಂಡ್ ಅವಧಿಗೆ ಸೈರನ್ ಕೂಗಿಸಬೇಕೆಂದು ನಿರ್ಣಯ ತೆಗೆದುಕೊಂಡಿತು.

ಪೌರ ಸದಸ್ಯರ ಆದರ್ಶವನ್ನು ಎತ್ತಿ ತೋರುವ ಅಂಶ ಒಂದು ಇಲ್ಲಿದೆ:

೧೯೨೫ರಲ್ಲಿ *[4] ಬಿ. ಎಲ್. ಬೈಯಣ್ಣನವರು, ಪೌರ ಸಭೆಯಲ್ಲಿ ಒಂದು ಠರಾವನ್ನು ಪ್ರಸ್ತಾಪಿಸಿದರು. ಅದರಂತೆ ಒಂದು ವಿಭಾಗದ ಅರ್ಧಕ್ಕೂ ಹೆಚ್ಚು ಮತದಾರರು, ಆ ವಿಭಾಗದ ಪೌರಸದಸ್ಯನ ವಿರುದ್ಧ ಅವಿಶ್ವಾಸವನ್ನು ವ್ಯಕ್ತಪಡಿಸಿ, ಇದರ ಬಗ್ಗೆ ಮುನಿಸಿಪಲ್ ಕಮಿಷನರಿಗೆ ಮನವಿ ಪತ್ರ ಕಳುಹಿಸಿದಾಗ, ಆ ಸದಸ್ಯನನ್ನು ಸ್ಥಾನಚ್ಯುತಿ ಮಾಡಬೇಕೆಂದು ಪ್ರಸ್ತಾಪ ಮಾಡಿದರು. ಆದರೆ ಠರಾವಿಗೆ ಬೆಂಬಲಿಸಿದ ಜಿ. ಬಿ. ರಾಘವೇಂದ್ರಾಚಾರ್, ತಮ್ಮ ಬೆಂಬಲವನ್ನು ಕಡೆಯಲ್ಲಿ ಹಿಂದಕ್ಕೆ ತೆಗೆದುಕೊಂಡ ಕಾರಣ, ಈ ಪ್ರಸ್ತಾಪ ವ್ಯರ್ಥವಾಯಿತು.

ಪೌರಸಭೆಯ ಆರ್ಥಿಕ ಸ್ಥಿತಿಯ ಬಗ್ಗೆ ಕಾಳಜಿ ಇದ್ದ ಸದಸ್ಯರ ತ್ಯಾಗ ಮನೋಭಾವವನ್ನು, ಈ ಕೆಳಗಿನ ಅಂಶ ತಿಳಿಸುತ್ತದೆ:

ಪೌರ ಸದಸ್ಯ ಮಹಮದ್ ಅಬ್ಬಾಸ್ ಖಾನ್, ದಿನಾಂಕ ೧೭-೫-೧೯೨೩ರ *[5] ತಮ್ಮ ಪತ್ರದಲ್ಲಿ ಮುನಿಸಿಪಲ್ ಕಾಯಿದೆಯ ತಿದ್ದುಪಡಿಯಿಂದ ಮುನಿಸಿಪಲ್ ಕಮಿಷನರ್ ನೇಮಕಾತಿಯನ್ನು ಸರ್ಕಾರ ಮಾಡುವುದಾಗಿಯೂ ಹಾಗೂ ಪೌರಸಭೆಯ ಕಾರ್ಯಾಂಗ

* ಇತಿಹಾಸ ವಿಭಾಗ, ವಾಸವಿ ಜ್ಞಾನಪೀಠ ಪದವಿ ಸಂಜೆ ಕಾಲೇಜು, ವಿಜಯನಗರ, ಬೆಂಗಳೂರು - ೫೬೦ ೦೪೦

ಅಧಿಕಾರವನ್ನು ಮುನಿಸಿಪಲ್ ಕಮಿಷನರರಿಗೆ ಒಪ್ಪಿಸುವ ಕಾರಣ, ಪೌರ ಸಭೆಯ ಉಪಾಧ್ಯಕ್ಷ ಸ್ಥಾನವನ್ನು ರದ್ದುಗೊಳಿಸಬೇಕೆಂದು ಹಾಗೂ ಅಧ್ಯಕ್ಷರಿಗೆ ಕೊಡುತ್ತಿರುವ ಮಾಸಿಕ ಭತ್ಯವನ್ನು ನಿಲ್ಲಿಸಬೇಕೆಂದು ಠರಾವು ಪ್ರಸ್ತಾಪಿಸಿದರು. ಆದರೆ ಮಾತುಕತೆಯ ನಂತರ ಠರಾವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ೧೯೨೫ ಫೆಬ್ರವರಿ *೬ ತಿಂಗಳಲ್ಲಿ ಜಿ. ಬಿ. ರಾಘವೇಂದ್ರಚಾರ್ ಪೌರಸಭೆಯ ಆರ್ಥಿಕ ಸ್ಥಿತಿ ಉತ್ತಮವಿಲ್ಲದ ಕಾರಣ, ಅಧ್ಯಕ್ಷರಿಗೆ ಕೊಡುತ್ತಿದ್ದ ಮಾಸಿಕ ಭತ್ಯ ೨೫೦ ರೂಪಾಯಿಯನ್ನು ನಿಲ್ಲಿಸಬೇಕೆಂಬ ಠರಾವನ್ನು ಪ್ರಸ್ತಾಪ ಮಾಡಿದರು. ಈ ಮೇಲಿನ ಸಮಾನ ರೂಪದ ಠರಾವನ್ನು ೧೯೨೭ರಲ್ಲಿ *೭ ಬಿ. ಎಲ್. ಬೈಯಣ್ಣ ಹಾಗೂ ಬಿ. ವಿ. ಕೃಷ್ಣ ಅಯಂಗಾರ್ ಪೌರಸಭೆಯಲ್ಲಿ ಮಂಡನೆ ಮಾಡಿದರು. ಆದರೆ ಕಾರಣಾಂತರಗಳಿಂದ ಠರಾವನ್ನು ಜಾರಿಗೊಳಿಸಲಾಗಲಿಲ್ಲ.

ಪೌರಸಭೆಯ ಅಧಿಕಾರಿಗಳ ದಕ್ಷತೆ ಹಾಗೂ ಜವಾಬ್ದಾರಿಯನ್ನು ನಿಭಾಯಿಸುವುದರಲ್ಲಿ ಪ್ರಾಮಾಣಿಕತೆಯ ನಿದರ್ಶನವನ್ನು ೧೮೮೩ರಿಂದ ೧೮೯೦ರ ವರೆಗೆ ಬೆಂಗಳೂರು ಪೌರಸಭೆಯ ಉಪಾಧ್ಯಕ್ಷರಾಗಿದ್ದ ಆರ್ಕಾಟ್ ಶ್ರೀನಿವಾಸಾಚಾರ್‌ರಲ್ಲಿ ಕಾಣಬಹುದು. ಪ್ರತಿದಿನ *೮ ಬೆಳಿಗ್ಗೆ ೬ ಘಂಟೆಗೆ ಪಟ್ಟಣದ ಪ್ರತಿಯೊಂದು ಭಾಗಕ್ಕೂ, ವಾರಕ್ಕೆ ಒಂದು ಸಲವಾದರೂ ಹೋಗಿ, ಆ ಪ್ರದೇಶದ ನಿವಾಸಿಗಳಿಂದ ಮುನಿಸಿಪಾಲಿಟಿಗೆ ಬಂದಿದ್ದ ಕಾಗದ ಪತ್ರಗಳನ್ನು ಅಧಿಕಾರಿಗಳಿಂದ ಅಲ್ಲಿಗೆ ತರಿಸಿಕೊಂಡು, ಪ್ರತಿಯೊಂದು, ಖುದ್ದಾಗಿ ಪರಿಶೀಲಿಸಿ ತಕ್ಕ ತೀರ್ಮಾನವನ್ನು ಅಲ್ಲಿಯೇ ಹೇಳಿ ಅರ್ಜಿಯ ಮೇಲೆ ಬರೆಯಿಸಿರುತ್ತಿದ್ದರು.

ಈ ಮೇಲಿನ ಸಂಗತಿಗಳು, ಆ ಕಾಲದ ಪೌರಸದಸ್ಯರ ಹಾಗೂ ಅಧಿಕಾರಿಗಳ ನಿಷ್ಠೆ ಹಾಗೂ ದಕ್ಷತೆಯನ್ನು ತೋರಿಸುತ್ತದೆ. ಇದನ್ನು ಈವತ್ತಿನ ಪೌರಾಡಳಿತಕ್ಕೆ ಹೋಲಿಸಿ ನೋಡಿದಾಗ ಜುಗುಪ್ಸೆ ಉಂಟಾಗುತ್ತದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. Bangalore Municipaal Council proccedings 26/3/1903
*೨. B.M.C.P. 8/1/1916
*೩. Municipal File No. 96 of 1916, Karnataka State Archives
*೪. B.M.C.P. 18/7/1925
*೫. B.M.C.P. 7/7/1925
*೬. B.M.C.P. 11/2/1925
*೭. B.M.C.P. 4/7/1927
*೮. D. V. Gundappa's Kruti Sreni, Vol. Sixth, page 128

ಹರಿಹರ ಶ್ರೀನಿವಾಸರಾವ್ *

# ಬೆಂಗಳೂರಿನ ಹಳೆಯ ಪೇಟೆಯ ಗರಡಿಗಳು

'ಗರುಡ' ಎಂದರೆ ಅಂಗ ರಕ್ಷಕ. ಅಂಗ ರಕ್ಷಕನಿಗೆ ಮಲ್ಲವಿದ್ಯೆ ಅಥವಾ ಕುಸ್ತಿಯ ಜ್ಞಾನ ಅವಶ್ಯ. ಅದನ್ನು ರೂಢಿಮಾಡುವ ಸ್ಥಳ ಗರಡಿ. ಇದು ಕುಸ್ತಿ ಶಾಲೆ ಅಥವಾ ಕುಸ್ತಿ ಪಟುಗಳು ತರಬೇತಿ ಗೊಳ್ಳುವ ಸ್ಥಳ. ರಾಮಾಯಣ, ಮಹಾಭಾರತಗಳಿಂದಲೂ ಉಲ್ಲೇಖಿತವಾಗಿ, ಮಾನಸೋಲ್ಲಾಸ, ಪಂಪಭಾರತ, ರನ್ನನ ಗದಾಯುದ್ಧ, ಶಿವತತ್ವರತ್ನಾಕರ ಮುಂತಾದ ಕಾವ್ಯಗಳಲ್ಲಿ ಮಲ್ಲಯುದ್ಧದ ಬಗ್ಗೆ ವಿವರಣೆ ಸಿಗುತ್ತದೆ. ಈ ವಿದ್ಯೆಯಲ್ಲಿ ನಿಷ್ಣಾತರಾಗಿ ತಮ್ಮ ಹೆಸರಿನ ಕೊನೆಗೆ 'ಮಲ್ಲ' ಎನ್ನುವ ಉಪನಾಮವನ್ನೇ ಸೇರಿಸಿಕೊಂಡಿರುವುದಕ್ಕೆ ಆಹವ ಮಲ್ಲ, ತ್ರಿಭುವನ ಮಲ್ಲ ಇತ್ಯಾದಿ ಹೆಸರುಗಳು ಉದಾಹರಣೆಯಾಗಿವೆ. ಇವುಗಳು ಬಿರುದುಗಳಾಗಿಯೂ ಶಾಸನೋಕ್ತವಾಗಿವೆ. ಆದ್ದರಿಂದ ಪ್ರಾಚೀನ ರಾಜರು ಅಂಗಸಾಧನೆಯೊಂದಿಗೆ ಬೌದ್ಧಿಕವಾಗಿಯೂ ಉನ್ನತಿ ಯನ್ನು ಹೊಂದಿರುವುದು ತಿಳಿದುಬರುತ್ತದೆ.

ಈ ನೆಲೆಯಿಂದ ಬೆಂಗಳೂರಿನ ಹಳೆಯ ಪೇಟೆಗಳಲ್ಲಿ ಕಂಡುಬರುವ, ಅಲ್ಲದೆ ಕೆಲವು ಹೆಸರಿಗೆ ಮಾತ್ರ ಉಳಿದಿರುವಂಥ ಗರಡಿಮನೆಗಳ ಪಟ್ಟಿ ಹೀಗಿದೆ.

| ಕ್ರ.ಸ. | ಹೆಸರುಗಳು | ಪೇಟೆ/ಗಲ್ಲಿಗಳು | ಇಂದಿನ ಸ್ಥಿತಿ |
|---|---|---|---|
| ೧. | ಕುಂಜಣ್ಣನವರಗರಡಿ | ತಿಗಳರ ಪೇಟೆ | ಇದೆ |
| ೨. | ಅಣ್ಣಯ್ಯಪ್ಪನವರ ಗರಡಿ | ತಿಗಳರ ಪೇಟೆ | ಇದೆ |
| ೩. | ವೆಂಕಟದಾಸಪ್ಪನವರ ಗರಡಿ | ದೊಡ್ಡಪೇಟೆ | ಇದೆ |
| ೪. | ಗಾಣಿಗರ ಗರಡಿ | ಚೆನ್ನಕೇಶವ ದೇವಸ್ಥಾನ ರಸ್ತೆ | ಇಲ್ಲ |
| ೫. | ಚಿಕ್ಕ ಅಣ್ಣೆಮ್ಮ ಗರಡಿ | ಕಬ್ಬನ್ ಪೇಟೆ | ದೇವಸ್ಥಾನ ಕಟ್ಟುತ್ತಿದ್ದಾರೆ. |
| ೬. | ಆನೆಕಲ್ಲಪ್ಪನ ಮಠದ ಗರಡಿ | ಕಬ್ಬನ್ ಪೇಟೆ | ಷಾಪಿಂಗ್ ಕಾಂಪ್ಲೆಕ್ಸ್ ಆಗಿದೆ. |
| ೭. | ಮುರಾರಿ ಸ್ವಾಮಿ ಮಠದ ಗರಡಿ | ಅರಳೇ ಪೇಟೆ | ಇದೆ |
| ೮. | ಬೀರೇದೇವರ ಅಥವಾ ಪೈಲ್ವಾನ್ ದಾಸಪ್ಪ ನವರ ಗರಡಿ | ಸೂಪರ್ ಟಾಕೀಸ್ ಪಕ್ಕದ ಗಲ್ಲಿ | ಇದೆ |
| ೯. | ಚಿಕ್ಕಗರಡಿ | ಶೆಟ್ಟಿ ಮುದ್ದಣ್ಣ ಗಲ್ಲಿ | ಇದೆ |
| ೧೦. | ಅರಳೇಪೇಟೆ ಗುರು ಮಹಂದಾತ್‌ರವರ ದೊಡ್ಡಗರಡಿ | ಅರಳೇ ಪೇಟೆ | ಇದೆ |
| ೧೧. | ನಾನಾರಾವ್ ಗರಡಿ ಭಾವಸಾ ಕ್ಷತ್ರಿಯರು ನಡೆಸುತ್ತಿದ್ದಾರೆ. | ಬಳೇಪೇಟೆ | ಇದೆ |
| ೧೨. | ಜಟ್ಟಿಗರಡಿ | ಬಿ.ವಿ.ಕೆ ಐಯ್ಯಂಗಾರ್ ರಸ್ತೆ ಟೆಂಪೂ ನಿಲ್ದಾಣದ ಹತ್ತಿರ | ರಾಮ ಮಂದಿರ ಕಟ್ಟುತ್ತಿದ್ದಾರೆ. |
| ೧೩. | ಬಳೇಗರಡಿ | ಬಳೇಪೇಟೆ | ಇದೆ |
| ೧೪. | ಬೋರಿಮುನಿಯಪ್ಪ ಅವರ ಗರಡಿ | ಸೂಪರ್ ಟಾಕೀಸ್ ಹತ್ತಿರ | ಇದೆ |

ಮೇಲೆ ಹೇಳಿದ ಒಟ್ಟು ೧೪ ಗರಡಿಗಳಲ್ಲಿ ೩ ಮಾತ್ರವೇ ಸ್ಥಿತ್ಯಂತರ ಹೊಂದಿರುವುದನ್ನು ಗಮನಿಸಿ. ಇಲ್ಲಿಯ ಪ್ರತಿ ಚದರ ಮೀಟರ್ ಜಾಗದ ಬೆಲೆ ಕೆಲವು ಸಾವಿರ ರೂಪಾಯಿಗಳು ! ಹೀಗಿದ್ದೂ ಇಲ್ಲಿಯ ಮಹಾನ್ ಜನಪದರು ಕೇವಲ ಅಭಿಮಾನ, ಜನಸೇವೆ ಯನ್ನೇ ಪ್ರಮುಖ ಗುರಿಯಾಗಿಸಿಕೊಂಡು ಥಳಕು ಬಳುಕಿನ ಜಿಮ್ಸ್‌ಗಳಿಗೆ ಮಾರುಹೋಗದೇ ದೇಶೀಯ ರೀತಿಯಲ್ಲೇ ಅಂಗಸಾಧನೆಯನ್ನು ಬಡಹುಡುಗರಿಗೆ ಮತ್ತು ಅಂಗಸಾಧನೆಯಲ್ಲಿ

* 'ಸಮರ್ಥ', ೭ನೇ ಅಡ್ಡರಸ್ತೆ, ಹೊಸ ವಿಕಾಸ ಪ್ರೈಮರಿ ಶಾಲೆ ಎದುರು, ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

ಇಚ್ಛೆ ಇದ್ದು ತೊಡಗಿಸಿಕೊಳ್ಳುವವರಿಗೆ ಕಡಿಮೆ ವೆಚ್ಚ ಅಥವಾ ಉಚಿತವಾಗಿಯೇ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವುದು ಆಶ್ಚರ್ಯ ಮತ್ತು ಕುತೂಹಲವನ್ನುಂಟು ಮಾಡುತ್ತದೆ. ಬೆಂಗಳೂರಿನ ಗರಡಿಗಳು ಕೇವಲ ರೌಡಿಗಳನ್ನು ತಯಾರಿಸುತ್ತವೆ ಎಂದು ಬೊಬ್ಬೆ ಹಾಕುವ ಪತ್ರಿಕೆಗಳವರು ಇಲ್ಲಿ ನಡೆವ ಅಂಗಸಾಧನೆ, ಶಿಸ್ತು, ಸಂಯಮ ಶೀಲತೆ, ಪರಿಶ್ರಮಗಳನ್ನೊಮ್ಮೆ ನೋಡಿ ಬಂದರೆ ಅವರ ಮನಸ್ಸು, ಆಲೋಚನೆಗಳು ಧನಾತ್ಮಕವಾಗಿ ಪರಿವರ್ತನೆಗೊಳ್ಳುವುದರಲ್ಲಿ ಸಂಶಯವಿಲ್ಲ.

ಸ್ಥಳನಾಮದ ಹಿನ್ನೆಲೆಯಲ್ಲಿ ಈ ಗರಡಿಗಳ ಹೆಸರುಗಳನ್ನು ಹೀಗೆ ಪರಿಶೀಲಿಸಲಾಗಿದೆ.

ಅ) ಕುಲಕ್ಕೆ ಸಂಬಂಧಿಸಿದಂತೆ ಇರುವ ಹೆಸರು

ಗಾಣಿಗರ ಗರಡಿ – ಗಾಣಿಗರು

ನಾನಾರಾವ್ ಗರಡಿ – ಭಾವಸಾರ ಕ್ಷತ್ರಿಯ ಜನಾಂಗದವರು

ಆ) ಜಟ್ಟಿಗಳನ್ನೇ ತಯಾರಿಸುವ ಹೆಸರು – ಜಟ್ಟೀಗರಡಿ

ಇ) ದೊಡ್ಡಗರಡಿ, ಚಿಕ್ಕಗರಡಿ – ವಿಸ್ತೀರ್ಣವನ್ನು ತಿಳಿಸುತ್ತದೆ.

ಈ) ಜನಪದ ದೇವರ ಹೆಸರು – ಚಿಕ್ಕ ಅಣ್ಣೆಮ್ಮ, ಬೀರೇ ದೇವರು

ಉ) ಮಠಗಳು – ಆನೇಕಲ್ಲಪ್ಪನ ಮಠ, ಮುರಾರಿ ಸ್ವಾಮಿಮಠ

ಊ) ವ್ಯಕ್ತಿ ವಿಶೇಷ – ಕುಂಜಣ್ಣನವರು – ಸುಮಾರು ೧೦೦ ವರ್ಷದ ಹಿಂದೆ ಇದ್ದವರು

ಅಣ್ಣಯ್ಯಪ್ಪ – ಪೈ. ಅಣ್ಣಯ್ಯಪ್ಪ ರಸ್ತೆಯ ಹೆಸರೇ ಇದೆ. ವೆಂಕಟದಾಸಪ್ಪ, ನಾನಾರಾವ್.

ಒಂದು ಹೊತ್ತಿಗೆಯಾಗುವಷ್ಟು ವಿಷಯಗಳು ಸ್ಥಳನಾಮಗಳ ಬಗ್ಗೆ ಇದೆ. ಇದು ಒಂದು ಕ್ಷ–ಕಿರಣವಷ್ಟೇ.

**ಇತಿಹಾಸದ ಪುಟಗಳಲ್ಲಿ**

ಬೆಂಗಳೂರಿನ ಇತಿಹಾಸ ಪುಸ್ತಕದಲ್ಲಿ ಶ್ರೀಯುತ ಬ.ನ. ಸುಂದರರಾಯರು ಹೀಗೆ ದಾಖಲಿಸಿದ್ದಾರೆ. ''ಬೆಂಗಳೂರಿನಲ್ಲಿ ಕತ್ತೀಗೋಪಾಲರಾಜ ಅರಸರು ಪಾರುಪತ್ತೇದಾರರಾಗಿದ್ದರು. (ಪುಟ. ೧೩೬. ಬೆಂಗಳೂರಿನ ಪೇಟೆ ಕೋಟೆಗಳೆರಡೂ ಅಭಿವೃದ್ಧಿ ಯಾದದ್ದು ಇವರ ಕಾಲದಲ್ಲಿಯೇ) ಇವರು ಕೋಟೆಯೊಳಗಡೆ ಒಂದು ಭವ್ಯವಾದ ಬಂಗಲೆಯಲ್ಲಿ ವಾಸಿಸುತ್ತಿದ್ದರು. ಆಗ ಬೆಂಗಳೂರಿನ 'ಅರಳೇ ಪೇಟೆ'ಯಲ್ಲಿ ಒಂದು ಗರಡಿ ಮನೆಯಿತ್ತು (ಪುಟ. ೧೩೭). ಹೈದರನು ತನ್ನ ಬಿಡುವಿನ ವೇಳೆಯಲ್ಲಿ ಆ ಗರಡಿ ಮನೆಗೆ ಹೋಗುತ್ತಿದ್ದನು. ಅಲ್ಲಿ ಲಾಠಿ ವರಸೆ, ಕುಸ್ತಿ, ಮೊದಲಾದ ಸಮರೋಚಿತವಾದ ಅಂಗಸಾಧನೆಗಳನ್ನು ಕಲಿತುಕೊಂಡು ಕಟ್ಟು ಮಸ್ತಾದ ಆಳಾದನು.

ದಿನಗಳೆದಂತೆ ಹೈದರಾಲಿಯು ಯುವಕನಾಗಿ ಗಟ್ಟಿಮುಟ್ಟಾದ ಆಳಾದನು. ಅವನಿಗೆ ಕತ್ತೀಗೋಪಾಲರಾಜ ಅರಸರು, ಮನೆಗೆಲಸ ವನ್ನು ತಪ್ಪಿಸಿ, ಬೇರೆ ಜವಾಬ್ದಾರಿಯುತವಾದ ಕೆಲಸ ವಹಿಸಿದರು. ಹೀಗಿರುವಾಗ ಕ್ರಿ.ಶ. ೧೭೪೯ರಲ್ಲಿ ಚಿಕ್ಕಪ್ಪಗೌಡನೆಂಬುವನು ದೇವನಹಳ್ಳಿಯಲ್ಲಿ ಪಾಳೇಗಾರನಾಗಿದ್ದಾಗ ಮೈಸೂರು ಸೈನಿಕರು ದೇವನಹಳ್ಳಿಗೆ ಮುತ್ತಿಗೆ ಹಾಕುವ ಸಂದರ್ಭ ಬಂದೊದಗಿತು. ಕತ್ತೀಗೋಪಾಲ ಅರಸರೇ ಈ ಮುತ್ತಿಗೆಯ ದಳಪತಿ ಆಗಿದ್ದರು. ಈ ಮುತ್ತಿಗೆ ೯ ತಿಂಗಳ ಕಾಲ ನಡೆಯಿತು. ಇದರಲ್ಲಿ ಹೈದರನೂ ಸೈನಿಕನಾಗಿ ಸೇರಿಕೊಂಡಿದ್ದನು. ಈ ಮುತ್ತಿಗೆಯಲ್ಲಿ ತೋರಿದ ಧೈರ್ಯ, ಸಾಹಸಗಳು ಅಂದಿನ ಸರ್ವಾಧಿಕಾರಿಯಾಗಿದ್ದ ನಂಜರಾಜಯ್ಯನ ಮೆಚ್ಚುಗೆ ಗಳಿಸಿದವು. ಅನಂತರ ಹೈದರನು ಐವತ್ತು ಸಾವಿರ ಕುದುರೆ ಸವಾರರು ಮತ್ತು ಇನ್ನೂರು ಕಾಲಾಳುಗಳಿದ್ದ ಪಡೆಯದಳಪತಿಯಾಗಿ ನೇಮಿಸಲ್ಪಟ್ಟನು. ಇದೇ ಸಮಯದಲ್ಲಿ ಹೈದರನು ಬೆಂಗಳೂರಿನ ಗರಡಿಮನೆ ಪೈಲ್ವಾನರನ್ನೆಲ್ಲಾ ಬಳಸಿಕೊಂಡನು. ಇಲ್ಲಿಯ ಎಲ್ಲಾ ಗರಡಿಮನೆಗಳು ಸ್ಥಾಪನೆಗೊಂಡಿದ್ದು ಯಾವಾಗ? ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟವಾದರೂ ದೊಡ್ಡಗರಡಿ ಅಲ್ಲಿರುವ ಶಿಲಾಲೇಖದ ಪ್ರಕಾರ ಕ್ರಿ.ಶ. ೧೬೮೦ ಅಂದರೆ ಈಗ್ಗೆ ೩೧೮ ವರ್ಷಗಳ ಹಿಂದೆ! ಅಷ್ಟೇ ಅಲ್ಲ ಕತ್ತೀಗೋಪಾಲರಾಯರ ಮನೆಯಲ್ಲಿದ್ದ ಹೈದರ್ ಅರಳೇಪೇಟೆಯಲ್ಲಿರುವ ಈ ದೊಡ್ಡ ಗರಡಿಯಲ್ಲಿಯೇ ಅಂಗಸಾಧನೆ ಮಾಡಿ, ಕೋಟೆಯೊಳಗಿನ ಪೈಲ್ವಾನರುಗಳ ನಿಕಟ ಸಂಬಂಧವಿರಿಸಿಕೊಂಡಿದ್ದರಿಂದಲೇ ಅವನು ಕ್ರಿ.ಶ. ೧೭೪೯ರಲ್ಲಿ ದೇವನಹಳ್ಳಿಯ ಮುತ್ತಿಗೆಯಲ್ಲಿ ಗೆದ್ದು ದಳಪತಿಯಾಗಿದ್ದಿರಬೇಕೆನ್ನುವ ಸತ್ಯ ಸಂಗತಿಗೆ ಒತ್ತು ಸಿಗುತ್ತದೆ. ಈ ದೊಡ್ಡ ಗರಡಿಯು ೧೯೨೭ ಮತ್ತು ಕ್ರಿ.ಶ. ೧೯೭೩ ಹೀಗೆ ಎರಡು ಸಲ ಪುನರ್ ನಿರ್ಮಾಣಗೊಂಡಿರುವುದಕ್ಕೂ ದಾಖಲೆಗಳಿವೆ. ಇಂದಿಗೂ ಗುರು ಮಹಾಂದಾತ್ ದೊಡ್ಡಗರಡಿ ಎಂದೇ ಕರೆಯಲ್ಪಡುವ ಈ ಗರಡಿಯ ಸಂಸ್ಥಾಪಕರು ಮಹಾಂದಾತ್ ಗೋಪಾಲರಾಯರು. ಉತ್ತರ ಭಾರತದ ಕಾನ್ಪುರದ ಕಡೆಯಿಂದ ಬಂದವರಾಗಿಯೂ, ಬ್ರಹ್ಮಚಾರಿಗಳಾಗಿದ್ದು ಕುಸ್ತಿಪಟ್ಟುಗಳನ್ನು ಸ್ವತಃ ಹೇಳಿಕೊಡುತ್ತಿದ್ದರಂತೆ. ಇನ್ನೊಂದು ಕುತೂಹಲಭರಿತ ಸಂಗತಿ ಎಂದರೆ ಮೊದಲು ಈ ಗರಡಿಯು ರಾಮಭಜನಾ ಮಂದಿರವಾಗಿದ್ದು, ಅನಂತರ ಗರಡಿಮನೆಯಾಗಿ ಪರಿವರ್ತಿತ ವಾಗಿದೆ. ಇದರ ಆಡಳಿತವನ್ನು ಗೋಣಿಗ ಜನಾಂಗದವರು ನೋಡಿಕೊಳ್ಳುತ್ತಿದ್ದರು. ಅವರಿಗೂ ಮತ್ತು ಗೌಡ ಜನಾಂಗದ ವರಿಗೂ ಭಿನ್ನಾಭಿಪ್ರಾಯ ಬಂದು ಕೊನೆಗೆ ಪೈಲ್ವಾನ್ ತಿಮ್ಮ ರಾಯಪ್ಪನರ ಸುಪರ್ದಿಗೆ ಬಂದಿತು. ಇದು ನಡೆದ ಕಾಲ ತಿಳಿದಿಲ್ಲವಾದರೂ ಅವರು ಸಮಾಜ ಸೇವಕರಾಗಿದ್ದರೆನ್ನಲು ಈಗ ಅವರ ಹೆಸರಿನಲ್ಲಿಯೇ ಇರುವ ಒಂದು ರಸ್ತೆ ತಿಳಿಸುತ್ತದೆ. ಅವರ ನಂತರದ ವಂಶಾವಳಿ ಹೀಗಿದೆ.




ಪೈ ॥ ಕೆಂಪಣ್ಣನವರು ಎನ್.ಜಿ.ಈ.ಎಫ್ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರು ತಮ್ಮ ಸೈಟನ್ನೇ ಮಾರಿ ಮುತ್ತಾತ ತಿಮ್ಮರಾಯಪ್ಪನವರ ಹೆಸರಿನಲ್ಲಿ ೧೯೯೧, ೧೯೯೩ ಹಾಗೂ ೧೯೯೫ರಲ್ಲಿ ರಾಜ್ಯಮಟ್ಟದ ಕುಸ್ತಿ ಪಂದ್ಯಗಳನ್ನು ನಡೆಸಿದ್ದಾರೆ.

ಅಣ್ಣಯ್ಯಪ್ಪನವರ ಗರಡಿಯ ಸ್ಥಾಪನೆ ಅಲ್ಲಿಯೇ ಬರೆದಿರುವಂತೆ ಕ್ರಿ.ಶ. ೧೮೯೦. ಈಗಿನ ಕಟ್ಟಡದ ಪುನರ್ ನಿರ್ಮಾಣವಾಗಿರುವುದು ಕ್ರಿ.ಶ. ೧೯೪೯. ಕುಂಜಣ್ಣನವರ ಗರಡಿ ಪ್ರಾರಂಭವಾದದ್ದು ಸುಮಾರು ಒಂದು ನೂರು ವರ್ಷಗಳ ಹಿಂದೆ ಎಂದು ಅದನ್ನು ನಡೆಸುತ್ತಿರುವ ಶ್ರೀ ಪೈ ॥ ಎಂ. ಜಯರಾಂ ಅವರ ಅಭಿಪ್ರಾಯ. ಇವರ ಸಮಾಜಸೇವೆ ಕುಸ್ತಿ ಮತ್ತು ಅಂಗಸಾಧನೆಯನ್ನು ಗುರ್ತಿಸಿ ೧೯೯೭ರಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯವರು ಕೆಂಪೇಗೌಡ ಪ್ರಶಸ್ತಿಯನ್ನು ನೀಡಿದ್ದಾರೆ.

ಗರಡಿ ಮನೆಯಲ್ಲಿ ಉಪಯೋಗಿಸುವ ಕೆಲವು ಸಾಮಗ್ರಿಗಳು:

೧. **ಸಾಂಬ್ರಾಣಿಕಲ್ಲು** – ಚಿಕ್ಕದು ಇದನ್ನು ಮುಂಗೈ ವ್ಯಾಯಾಮಕ್ಕೆ ಉಪಯೋಗಿಸುತ್ತಾರೆ.

೨. **ದೊಡ್ಡ ಸಾಂಬ್ರಾಣಿಕಲ್ಲು** – ಕತ್ತಿನ ಮತ್ತು ಭುಜಗಳನ್ನು ಬಲಗೊಳಿಸಲು ಇದು ದುಂಡಗಿದ್ದು ಮಧ್ಯದಲ್ಲಿ ೩/೪ ಅಡಿ ವ್ಯಾಸದ ರಂಧ್ರ ಹೊಂದಿದ್ದು ಹೊರಗಡೆ ವ್ಯಾಸ ೨೧/೪' ಇರುತ್ತದೆ. ಭಾರ ಸು. ೨೦ ಕೆ.ಜಿ.

೩. **ಬಲದಂಡೆ** – ಭುಜಗಳಿಗೇ ಇರುವ ಪ್ರತ್ಯೇಕ ಉಪಕರಣ.

೪. **ಕಲ್ಲಿನಗುಂಡುಗಳು**– ಬಾಹು, ಬೆನ್ನುಗಳಿಗೆ ಇದನ್ನು ಅವುಗಳ ಮೇಲೆ ತಿರುಗಿಸಿ ಗಟ್ಟಿಗೊಳ್ಳಲು ಸಹಾಯ ಮಾಡುತ್ತವೆ. ಇವು ಗಾತ್ರ, ತೂಕಗಳಲ್ಲಿ ಚಿಕ್ಕವೂ – ದೊಡ್ಡವೂ ಇರುತ್ತವೆ.

೫. **ಮಲ್ಲಕಂಭ** – ಹುಣಸೇಮರದಿಂದ ಮಾಡಿರುವ ಸುಮಾರು ೫ ಅಡಿ ಎತ್ತರವಿರುವ ಇವುಗಳಿಗೆ ಎಣ್ಣೆಯನ್ನು ಹಚ್ಚಿಯೂ ರೋಚಕವಾದ ವ್ಯಾಯಾಮ ಮಾಡುತ್ತಾರೆ. ಕುಂಜಣ್ಣನವರ ಗರಡಿ, ಮಹಾಂದಾತ ಅವರ ದೊಡ್ಡಗರಡಿಯಲ್ಲಿ ನೋಡಬಹುದಾಗಿದೆ.

೬. **ಗದೆ** – ಮರದ ಗದೆಗಳು – ಕೈಗಳಿಗೆ ಶಕ್ತಿ ಬರಲು ಇದರ ಉಪಯೋಗ.

೭. **ವಜ್ರಮುಷ್ಟಿ** – ವಜ್ರಗಳಿಂದ ಕೂಡಿದ ಚೂಪಾದ ಮೊನೆಯುಳ್ಳ ಆಯುಧ.

೮. ವಿವಿಧ ರೀತಿಯ **ಕತ್ತಿಗಳು, ಲಾಠಿಗಳು** ಇತ್ಯಾದಿ.

೯. **ಡಂಬಲ್ಸ್**, ನೂಲಿನ ಹಗ್ಗ...... ಮುಂತಾದವು.

### ಪೂರ್ವಭಾವಿ ವ್ಯಾಯಾಮ

ಕುಸ್ತಿಯ ಆಖಾಡಕ್ಕೆ ಇಳಿಯುವ ಮುನ್ನ ಕೆಲವು ಪೂರ್ವಭಾವಿ ವ್ಯಾಯಾಮಗಳನ್ನು ಮಾಡಲೇ ಬೇಕೆಂಬ ಪದ್ಧತಿ ಇದೆ. ಅವುಗಳಲ್ಲಿ ಕೆಲವು ಹೀಗಿವೆ:

೧) **ದೌಡು** – ಓಡುವುದು

೨) **ಉಟ್-ಬೈಟ್** – ಕುಳಿತು ಏಳುವುದು

೩) **ದಂಡ ಹೊಡೆಯುವುದು**

೪) **ಮಣ್ಣೀಕುರಾಯಿಸುವುದು** – ಸು. ೧೦ ಕೆ.ಜಿ. ಮಣ್ಣನ್ನು ಒಂದೇ ಬಾರಿಗೆ ಸಲಿಕೆಯಿಂದ ತಿರುಗಿಸುವುದು.

೫) **ಸೂರ್ಯ ನಮಸ್ಕಾರ**

೬) **ಹಗ್ಗದಾಟ**

### ಕುಸ್ತಿಯ ನಂತರದ ವ್ಯಾಯಾಮ

ಮಣ್ಣಲ್ಲಿ ಮಲಗಿ ದೇಹದ ಮೇಲೆ ಮಣ್ಣನ್ನು ಎಳೆದು ಕೊಳ್ಳುವುದು, ನೀರು ಸೇದುವುದು. ತಣ್ಣೀರಿನ ಸ್ನಾನ, ಎಣ್ಣೆಯನ್ನು ಹಚ್ಚಿಕೊಳ್ಳುವುದು. ಇತ್ಯಾದಿ

### ಮಣ್ಣಿನ ವೈಜ್ಞಾನಿಕ ವಿಶ್ಲೇಷಣೆ

ಪೂರ್ವಭಾವೀ ವ್ಯಾಯಾಮದಲ್ಲಿ ಗರಡಿ ಮನೆಯ ಕೆಂಪು ಜೇಡಿ ಮಣ್ಣನ್ನು ಮತ್ತೆ ಮತ್ತೆ ಸನಿಕೆಯ ಮೂಲಕ ತಿರುವಿ ಹಾಕುವುದರಿಂದ ಅವರ ಬಾಹುಗಳಿಗೆ ಅಷ್ಟೇ ಅಲ್ಲ ಇಡೀ ದೇಹವೇ ಮಣ್ಣಿನ ಸೂಕ್ಷ್ಮಾಣುಗಳ ಸಂಪರ್ಕ ಹೊಂದಿ ಪ್ರಕೃತಿ ಚಿಕಿತ್ಸೆಯಲ್ಲಿ ಹೇಳಿರುವಂತೆ ಔಷಧೀಯ ಗುಣಗಳನ್ನು ಅವರಿಗೆ ಅರಿವಿಲ್ಲದಂತೆಯೇ ಪಡೆಯುತ್ತಾರೆನ್ನುವುದನ್ನು ಹೀಗೆ ಸಮರ್ಥಿಸುತ್ತದೆ.

೧. ಮಣ್ಣಿನ ಬೇರೆ ಬೇರೆ ಪದರುಗಳಲ್ಲಿ ವಿದ್ಯುದ್ ಕಾಂತೀಯತೆ ಹೊಂದಿದ್ದ ಋಣಾತ್ಮಕ ಮತ್ತು ಧನಾತ್ಮಕ ಕಣಗಳಿರುತ್ತವೆ. ಅದನ್ನು ತಿರುವಿ ಹಾಕುವುದರಿಂದ ಈ ವಿದ್ಯುತ್ ಕಾಂತೀಯ ಗುಣಗಳು ಹೆಚ್ಚಾಗಿ, ಕಾರ್ಬಾನಿಕ್ ಅಣುಗಳಿರುವ ದೇಹಭಾಗವು ಅದು ಕಡಿಮೆ ಇರುವ ದೇಹದ ಇತರ ಭಾಗಗಳಿಗೂ ಪ್ರಾಕೃತಿಕ ಜೈವಿಕ ಚೇತನ (Magnetic Bio-Energy)ವನ್ನು ತಲುಪಿಸಿ ಆ ಭಾಗಗಳಿಗೆ ಹೆಚ್ಚಿನ ಉಲ್ಲಾಸವನ್ನು ಹಾಗೂ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ.

೨. ಹೊಸದಾಗಿ ಉತ್ಪತ್ತಿಗೊಂಡ ಜೀವಕಣಗಳನ್ನು ಅಲ್ಟ್ರಾ (Altra) ಕಿರಣ (ವಿಕಿರಣ) ಗಳಿಂದ ರಕ್ಷಿಸುತ್ತವೆ.

೩. ಪ್ಯಾಥೋಜನ್ಸ್ (pathogens) ಮತ್ತಿತರ ರೋಗಯುಕ್ತ ಕಣಗಳನ್ನು ನಾಶ ಮಾಡುತ್ತದೆ. ಅದು ಅತ್ಯುತ್ಕೃಷ್ಟ ರೋಗ ನಿರೋಧಕವೂ ಹೌದು (Antibiotic). ಡಾ॥ ಪೆಲ್‌ಮನ್ ಎಂಬ ವೈದ್ಯನು ೧೯೪೩ರಲ್ಲಿ ಕ್ಷಯ ರೋಗದ ಅಣುಗಳನ್ನು (Streptomycin ಮತ್ತು Neomycin) ಮಣ್ಣಿನ ಕಣಗಳ ಸಂಶೋಧನೆ ಮತ್ತು 'ಮಣ್ಣಿನ ವಾಸನೆ'ಯ ಸಹಾಯದಿಂದಲೇ ಕಂಡುಹಿಡಿದ !

೪. ಎಮರೋಲ್ಡ್ ಎಂಬ ವಿಜ್ಞಾನಿ ಮಣ್ಣಿನ ರೋಗ ನಿಧಾನದ ಬಗ್ಗೆ ಮಾರುಹೋಗಿ. 'The greatest Medicine in the world is Mud only' ಎಂದು ಉದ್ಗರಿಸಿದ. ಆತ ೧೦ ಸಾವಿರ ಮೈಕ್ರೋಬ್ಸ (Micro Bacteria) ಗಳನ್ನು ಕಂಡು ಹಿಡಿದು ಅದರ ರೋಗ ನಿರೋಧಕ ಗುಣಗಳ ಬಗ್ಗೆ ವಿವರಿಸಿದ್ದಾನೆ.

ಇದನ್ನೇ ಆಧಾರವಾಗಿಟ್ಟುಕೊಂಡು ನಾನು ಪೈಲ್ವಾನರನ್ನು ಸಂದರ್ಶಿಸಿದಾಗ ಬಿ.ಇ., ಸಿವಿಲ್ ಇಂಜಿನೀಯರಿಂಗ್ ವಿದ್ಯಾರ್ಥಿ, ಬಿ.ಎ. ವಿದ್ಯಾರ್ಥಿಗಳಿಂದ ಹಿಡಿದು ಹೋಟೆಲ್ ಮಾಣಿಗಳ ತನಕ ಎಲ್ಲರೂ ಉದ್ಗರಿಸಿದ್ದು ಒಂದೇ ಈ ಮಣ್ಣೀ ನಮ್ಮ ತಾಯಿಗಿಂತ ಹೆಚ್ಚು. ಕುಸ್ತಿ ಆಡಿದ ನಂತರ ಮೈ ಮೇಲೆ ಮಣ್ಣೆರಚಿಕೊಳ್ಳುತ್ತಾ ೧/೨ ಗಂಟೆ ಮಲಗಿದರೆ ದೇಹದ ನೋವು ಮರೆತು ಮನಸ್ಸಿನ ಡೋಲಾಯ ಸ್ಥಿತಿ ಎಂದೂ ಕಂಡಿಲ್ಲ ಎಂಬುದು. ಈ ಅನುಭವದ ಗಮನವಿರಿಸಿಕೊಂಡು ಮಣ್ಣಿನ ನುಣುಪಿನ ಬಗ್ಗೆ ವೈಜ್ಞಾನಿಕ ಪರೀಕ್ಷೆ ನಡೆಸಿದಾಗ ದೊಡ್ಡಗರಡಿಯ ಕೆಂಪು ಮಣ್ಣಿನ ಕಣಗಳು ೭೫ ಮತ್ತು ೨೦೦ ಮೈಕ್ರಾನು ಜರಡಿಗಳ ಮೂಲಕ ಹಾದು ಹೋಗಿದ್ದುದರಿಂದ ಇದರ ಹುಡಿ ಅಳತೆ ಮತ್ತು ಮೃದುತ್ವದ ಮಹತ್ವದ ಅರಿವುಂಟಾಯಿತು. ಈ ಕೆಂಪು ಹುತ್ತದ ಮಣ್ಣಿಗೆ ಹಬ್ಬ ಹರಿದಿನಗಳಲ್ಲಿ ಪೂಜೆ ಮಾಡಿ ದುಂಡು ಮಲ್ಲಿಗೆ, ಕಡಲೇ ಕಾಯಿ ಎಣ್ಣೆ, ಎಳ್ಳೆಣ್ಣೆ, ಕುಂಕುಮಗಳಂಥ ಔಷಧಿ ಗುಣವುಳ್ಳ ವಸ್ತುಗಳನ್ನು ಆಗಾಗ ಬೆರೆಸುತ್ತಾರೆಂದೂ ತಿಳಿದು ಬಂದಿತು. ಮಲ್ಲಾಡಿಹಳ್ಳಿಯ ರಾಘುವೇಂದ್ರ ಸ್ವಾಮಿಯವರ ಆಶ್ರಮದಲ್ಲಿಯ ಗರಡಿಯ ಮಣ್ಣಿಗೆ ವಿಶೇಷವಾದ ಔಷಧೀ ಸಸ್ಯಗಳ ಕಷಾಯವನ್ನು ಬೆರೆಸಿದ್ದರೆಂಬ ಮಾಹಿತಿ ಇಲ್ಲಿ ದಾಖಲಾರ್ಹ.

ಭಾರತೀಯ ಕುಸ್ತಿ ಪಟ್ಟುಗಳಲ್ಲಿ ೪ ವಿಧ. ಇವು ಕರ್ನಾಟಕದಲ್ಲಿಯೂ ಪ್ರಚಲಿತವಿದೆ.

೧) ದೈಹಿಕ ಬಲವನ್ನು ಉಪಯೋಗಿಸಿ ಹಾಕುವ ಪಟ್ಟು - **ಭೀಮಸೇನೀ**

೨) **ಕೈಚಳಕದ ಪಟ್ಟುಟ - ಜಾಂಬವತೀ**

೩.) **ಕೈ ಕಾಲುಗಳನ್ನು ಮುರಿಯುವಂಥಪಟ್ಟು - ಜರಾಸಂಧೀ**

ಕುಸ್ತಿಯ ಪಂದ್ಯಾಟಗಳು ನಡೆಯುವ ಸ್ಥಳವನ್ನು 'ಆಖಾಡ' ವೆನ್ನುತ್ತಾರೆ. ಈ ಆಖಾಡವನ್ನು ಜರಾಸಂಧನ ಆಖಾಡವೆಂದೇ ಕರೆಯುತ್ತಾರೆ. ಹಲವು ಶತಮಾನಗಳೇ ಉರುಳಿ ಹೋಗಿದ್ದರೂ ಜರಾಸಂಧನ ಹೆಸರು ಅಜರಾಮರವಾಗಿ ಇನ್ನೂ ಉಳಿದು ಬಂದಿರುವುದು ಆತನ ಸಾಧನೆಯ ದ್ಯೋತಕವಲ್ಲದೆ ಮತ್ತೇನು?

ತಮ್ಮ ಸ್ನಾಯು ಬಲದಿಂದಷ್ಟೇ ಗೆಲ್ಲಬಯಸುವ ಜಟ್ಟಿಗಳು ಸಾಮಾನ್ಯವಾಗಿ ಭೀಮಸೇನೀ ಪಟ್ಟುಗಳನ್ನು ಉಪಯೋಗಿಸುತ್ತಾರೆ. ಹನುಮಂತೀ ಪಟ್ಟಿನ ಪ್ರಭುತ್ವವನ್ನು ಸಾಧಿಸುವುದು ನುರಿತ ಶಿಕ್ಷಕರ ನೇತೃತ್ವದಲ್ಲಷ್ಟೇ ಸಾಧ್ಯ. ಇದನ್ನು ಅಭ್ಯಾಸ ಮಾಡಿದವರು ತಮಗಿಂತಲೂ ಬಲಿಷ್ಠರಾದವರನ್ನು ಸೋಲಿಸಲು ಶಕ್ತರಾಗುತ್ತಾರೆ. ಜಾಂಬವತೀ ಪಟ್ಟನ್ನು ಹಾಕಿ ಎದುರಾಳಿಯನ್ನು ನಿಶ್ಚೇಷ್ಟಿತನನ್ನಾಗಿ ಮಾಡಿ ಬಹಳ ಬೇಗನೇ ಆಯಾಸಗೊಳ್ಳುವಂತೆ ಮಾಡಬಹುದು. ಆದರೆ ಇದರಲ್ಲಿ ನೆಲಕ್ಕೆ ಕೆಡಹುವುದು ಕಷ್ಟ.

ಕುಸ್ತಿ ಪಟ್ಟುಗಳಲ್ಲಿ ೨ ಪ್ರಮುಖ ವಿಭಾಗಗಳುಂಟು:

೧) **ಕುಸ್ತಿ ಕೆಲಸ** = ಪಟ್ಟುಗಳನ್ನು ಹಾಕುವುದು.

೨) **ಪ್ರತಿಕೆಲಸ** = ತೋಡುಗಳು, ಪಟ್ಟುಗಳನ್ನು ಬಿಡಿಸಿಕೊಳ್ಳುವುದು.

ಈ ಕುಸ್ತಿ ಕೆಲಸಗಳಲ್ಲಿ ೫೦ಕ್ಕೂ ಹೆಚ್ಚಿನ ವೈವಿಧ್ಯಮಯ ಪಟ್ಟುಗಳಿದ್ದು ಅವುಗಳಲ್ಲಿ ಗರೆ ಎಳೆದಿರುವ ಕೆಲವೊಂದನ್ನು ಈಗಲೂ ಉಪಯೋಗಿಸುತ್ತಿದ್ದಾರೆ.

| ಕ್ರ.ಸ. | ಸಂಸ್ಕೃತ | ಉರ್ದು | ಕನ್ನಡ |
|---|---|---|---|
| ೧. | ಜಯಡಿಂಡಿಮ | ಮುಲ್ತಾನಿ | |
| ೨. | 1) ನಂದಿಘೋಷ | | |
| | ೨) ಉರಗ ಬಂಧ | ಗಜಾಡೋಲ್ | - |
| ೩. | ಸುಪ್ರತೀಕ | ಟಾಂಗ್ | ಜನಿವಾರ |
| ೪. | ಅರಿರುದ್ರ | ಬಾಹರ್‌ಟಾಂಗ್ | ಉಲ್ಟಾಜನಿವಾರ |
| ೫. | ಹಸ್ತಿಮಲ್ಲ | ದೋಬಿಚಟ್ | |
| | ಖೊಪ್ಪರ | | |
| ೬. | ವಜ್ರ ಸೂರ್ಯ | ಕುಹರ | - |
| ೭. | ಯಕ್ಷ ಬಂಧ | - | ಕೊಕ್ಕರೆ |
| ೮. | ದೇವದತ್ತ | ಬಾರಲ್ಲಿ | ಚಡಿಕೆ |
| ೯. | ಮಲ್ಲಚಕ್ರ | ಗಿರ್ರ | ಮಲ್ಲಚಕ್ರ |
| ೧೦. | ಮಣಿ ಭದ್ರತೋರಹತ್ತ | ದಸ್ತಿ | - |
| ೧೧. | ಗಂಭೀರವೇಧಿ | - | - |
| ೧೨. | ಮಾರ್ತಾಂಡ | ಮೋಹು | - |
| ೧೩. | ಸಂದರ್ಶನ ಬಿಸಲೇವು | ಕಾಚ | - |
| ೧೪. | ಮಣಿಗೀವ | ರೂಂ.. | ನಿಲವು ತಿರುಗಣೆ |
| ೧೫. | ಭೀಮ ಬಂಧ | - | - |
| ೧೬. | ಪಾತಾಳ ಬಂಧ | - | - |
| ೧೭. | ವಾಲಿಪ್ರಹಾರ | ಕಲಾರ್‌ಜಂಗ್ | - |

ಕುಸ್ತಿ ಕೆಲಸ-೧, -ಸುಪ್ರತೀಕ-ಟಾಂಗ್-ಜನಿವಾರ



ಪ್ರತಿಕೆಲಸಗಳು-ತೋಡುಗಳು



ಪ್ರತಿಕೆಲಸ-೩, ಸುಪ್ರತೀಕದ ಒಂದನೇ ಪ್ರತಿಕೆಲಸ



ಕುಸ್ತಿ ಕೆಲಸ-೨, ಅರಿರುದ್ರ-ಕರವಲಯ-ಬಾಹರ್ ಟಾಂಗ್



# ಮಲ್ಲಯುದ್ಧ

# ಕುಸ್ತಿ ಪಟ್ಟುಗಳು

ಕುಸ್ತಿ ಕೆಲಸ-೩, ಹಸ್ತಿಮಲ್ಲ-ಚೊಪ್ಪರ-ದೋಬಿಚಿಟ್



ಮಲ್ಲಯುದ್ಧ



ಮಲ್ಲಯುದ್ಧ



ಕುಸ್ತಿ ಕೆಲಸ-೪ , ಮಣಿ ಗ್ರೀವ.- ನಿಲವು ತಿರುಗಣೆ



ಕುಸ್ತಿ ಕೆಲಸ-೪, ಮಣಿ ಗ್ರೀವ - ನಿಲವು ತಿರುಗಣೆ



ಕುಸ್ತಿ ಕೆಲಸ - ವಜ್ರ ಸೂರ್ಯ ಕುಹರ



ಕುಸ್ತಿ ಕೆಲಸ - ೫, ಯಕ್ಷ ಬಂಧ- ಕೊಕ್ಕರೆ



| | | | |
|---|---|---|---|
| ೧೮. | ಮಹಾಶಂಖ | ಕಮ್ಚಿ | - |
| ೧೯. | ಊರ್ಧ್ವಲ್ಲುಂಠನ | ಆಧಾಸಮಟ್ | - |
| ೨೦. | ವಿಜಯನಾರಸಿಂಹ | ಸಕ್ಕಿಮಟ್ | - |
| ೨೧. | ಏಕಪಾದ ಬಂಧ | - | ಅರಲಗಡಿ |
| ೨೨. | ಜೀಮೂತ ಬಂಧ | ಜೋಲಿ | - |
| ೨೩. | ಕೀಚಕ ಬಂಧ | ತಳಹತ್ತ | ತಳಹತ್ತ |
| ೨೪. | ವ್ಯಾಘ್ರನಖ | ವೆರತೊಲಗು | - |
| ೨೫ | ಮಯೂರ | - | ಕರಿವಳ |
| ೨೬. | ಬ್ರಹ್ಮಸರ್ಪ | - | ನಿಲವು ತಿರುಗಣೆ |
| ೨೭. | ಐರಾವತ | ಓಬ್ಬಿ | - |
| ೨೮. | ಚತುರ್ಗತಿ | ಚೌಲಂಗ | - |
| ೨೯. | ಪಕ್ಷಿಸಿಂಹ | ಉಖಾಡ್ | ಮಲ್ಲಗಂಟು |
| ೩೦. | ಕೂರ್ಮಬಂಧ | ಮಚ್ಛಕೋಣ | ಅಡಿಮಂಡಿ |
| ೩೧. | ಅನಂತವಿಜಯ | ದುವಲಂಗ | ಚಪ್ಪಡಿ |
| ೩೨. | ಗರುಡವಿಕ್ರಮ | - | ಬಂಧಪಟ್ಟಸ |
| ೩೩. | ಊರ್ಧ್ವ ಚಕ್ರ | ಕೋನಿಬಿಸಲೇವು | - |
| ೩೪. | ಜಾಂಬಲುಕೋನಿ | - | ಕಾಲುಸುತ್ತಿ |
| ೩೫. | ಬಾಹು ಬಂಧ | - | ಅರಲ ಗಡಿ |
| ೩೬. | ಅಜಗರ ಬಂಧ | - | ಗಳ ಹತ್ತ |
| ೩೭. | ನಾಗ ಬಂಧ | - | ರಣು ವಟ್ಟ |
| ೩೮. | ಅಮೋಘಬಂಧ | - | ಅಗಡಿ |
| ೩೯. | ಉರಗ ಬಂಧ | ಪತ್ರಜಂಕಾರ್ | - |
| ೪೦. | ಮತ್ಸ ಬಂಧ | - | ಖಮ್ಮರಿ |
| ೪೧. | ನಂದಿನಿಕಂದ | - | - |
| ೪೨. | ಬಾಹು ಜಟ | ಸಾಂಡಿ | ಸಿರಲಗಡಿ |
| ೪೩. | ನೀಲಧ್ವಜ | - | ಡೊಕ್ಕರ |
| ೪೪. | ಅಂಗಬಂಧ | ಧಡಿಮೋಹು | - |
| ೪೫. | ಭದ್ರ ಬಂಧ | - | ಮಢಾಳಾಂಕ |
| ೪೬. | ಪುರೋಲುಂಠನ | - | ಬೊಕ್ಕಯ |
| ೪೭. | <u>ಹನುಮಬಂಧ</u> | - | <u>ಕುಹರ</u> |
| ೪೮. | ಬೇತಾಳ ಬಂಧ | - | ವಟ್ಟತಳ |
| ೪೯. | - | ಏಕ್‌ಟಾಂಗ್ | - |
| ೫೦. | - | ತಲ್ವಾರ್ ಜಂಗ್ | - |
| ೫೧. | - | ಡೂಬ್ | - |
| ೫೨. | - | ಮಂಕೀರೋಲ್ (ಇಂಗ್ಲಿಂಶ್‌ಭಾಷೆ) | - |
| ೫೩. | - | ಆರಮ್ಸ್ ಥ್ರೊ (ಇಂಗ್ಲಿಂಶ್) | |
| ೫೪. | - | - | ಅಂಟುಮುರಿಯುವುದು |
| ೫೫. | - | - | <u>ಕಾಲಿಗೆ ಪಟ್ಟು</u> |
| ೫೬. | - | ಸಿಂಗಲ್ ನೆಲ್ಸನ್ (ಇಂ.) | - |
| ೫೭. | - | ಡಬಲ್ ನೆಲ್ಸನ್ (ಇಂ.) | - |

ಈ ಮೇಲಿನ ಪಟ್ಟುಗಳು ಪಂಪಭಾರತ, ಗದಾಯುದ್ಧ, ಭರತೇಶ ವೈಭವ, ಗದುಗಿನ ಭಾರತ ಇತ್ಯಾದಿ ಕಾವ್ಯಗಳಲ್ಲಿಯೂ ದೊರೆಯಬಹುದಾಗಿದ್ದರೂ ಲೇಖನಭಾರದಿಂದ ಅವುಗಳ ಪರಿಶೀಲನೆ ಮಾಡಲಾಗಿಲ್ಲ. ಆದರೆ ಒಂದೆರಡು ಕುಸ್ತಿ ಕೆಲಸ (ಪಟ್ಟು)ಗಳಿಗೆ, ತೋಡು ಎಂದರೆ ಆ ಬಂಧನಗಳನ್ನು ಬಿಡಿಸಿ ಕೊಳ್ಳುವ ಬಗೆಗಳನ್ನೀಗ ಪರಿಶೀಲಿಸೋಣ (ಈ ಕುಸ್ತಿ ಕೆಲಸಗಳು ಸುಲಭವಾಗಿ ಅರ್ಥವಾಗಲು ದ್ವಿತೀಯ ಪುರುಷ ಏಕವಚನವನ್ನು ಬಳಸಲಾಗಿದೆ).

**ಸುಪ್ರತೀಕ : ಟಾಂಗ್:** ಇದು ಕುಸ್ತಿಯ ಹೆಸರಾದ ದೊಡ್ಡ ಕೆಲಸಗಳ ಸಾಲಿಗೆ ಸೇರುತ್ತದೆ. ಈ ಪ್ರಕಾರದಲ್ಲಿ ಪ್ರಾವೀಣ್ಯತೆ ಪಡೆದವರ ಕಾಲನ್ನು ಹಿಡಿಯಲು ಎಲ್ಲರೂ ಹಿಂದೆಗೆಯುತ್ತಾರೆ. ನಿನ್ನ ಎದುರಾಳಿಯು ಎಡಗಾಲನ್ನು ಮುಂದಿಟ್ಟು ನಿಂತಿರುವನೆಂದು ಭಾವಿಸುವ (ಚಿತ್ರ ನೋಡಿ). ಈಗ ನೀನು ನಿನ್ನ ಬಲತೋಳನ್ನು ಅವನ ಬಲತೋಳಿಗೆ ಮೇಲುಗಡೆಯಿಂದ ಸುತ್ತಿ, ಅದೇ ಕಾಲದಲ್ಲಿ ನಿನ್ನ ಬೆನ್ನನ್ನು ತಟ್ಟನೇ ಅವನ ಕಡೆಗೆ ತಿರುಗಿಸಿ, ತಿರುಗಿಸುತ್ತಿದ್ದ ಹಾಗೆ ಮುಂದಿರುವ ಅವನ ಎಡಗಾಲಿನ ಒಳಗಡೆ ನಿನ್ನ ಬಲಗಾಲನ್ನು ಸೇರಿಸಿ ಎಗರಿಸು. ಇದು ಸರಿಯಾಗಿ ಅಭ್ಯಾಸವಾದಲ್ಲಿ ಕುಸ್ತಿಯ ಅನೇಕ ಸಂದರ್ಭಗಳಲ್ಲಿ ಉಪಯೋಗಕ್ಕೆ ಬರುವುದು. ಒಂದು ವೇಳೆ ನಿನ್ನ ಎದುರಾಳಿಯು, ನೀನು ಅವನ ಬಲಗೈಯನ್ನು ಹಿಡಿಯಲು ಹೋದಾಗ, ಅವನು ಎಡಗೈಯಿಂದ ವಿರೋಧಿಸುವ ಸಂದರ್ಭ ವಿದ್ದಲ್ಲಿ ಅಥವ ಅವನು ಜಾಗರೂಕನಾಗಿದ್ದಲ್ಲಿ, ಆಗ ನಿನ್ನ ಬಲಗೈಯನ್ನು ಅವನಿಗೆ ಕಾಣುವಂತೆ ಅವನ ಮುಂದೆ ಹಾಯಿಸದೆ, ಅವನ ಭುಜದ ಮೇಲಿರುವ ನಿನ್ನ ಬಲಗೈಯನ್ನು ಅವನ ತಲೆಯ ಮೇಲಿಂದ ಹಾಯಿಸಿ, ಅವನ ಬಲ ತೋಳನ್ನು ಹಿಡಿ. ಎದುರಾಳಿಯು ಬೆನ್ನ ಹಿಂದಿರುವಾಗಲೂ ಈ ಕೆಲಸವನ್ನು ಮಾಡಬಹುದು.

**ಪ್ರತಿಕೆಲಸಗಳು ( ತೋಡುಗಳು )**

**ಪ್ರತಿಕೆಲಸ ೧ :** ಚಿತ್ರ ನೋಡಿ. ಎದುರಾಳಿಯು ಈ ಕೆಲಸ ಮಾಡಲು ಒಳಗಡೆಗೆ ಸೇರಿಸುವ ಅವನ ಬಲಗಾಲನ್ನು ನಿನ್ನ ಎಡಗೈಯಿಂದ ಕೆಳಗಡೆ ಅದುಮಿ ಹಿಡಿ.

**ಪ್ರತಿಕೆಲಸ ೨:** ಚಿತ್ರ ನೋಡಿ. ನಿನ್ನ ಎಡಗೈಯನ್ನು ಹಿಂದಿನಿಂದ ಅವನ ಎಡತೊಡೆಯ ಮೇಲ್ಭಾಗಕ್ಕೆ ಸೇರಿಸಿ ಎದುರಾಳಿಯನ್ನು ಮೇಲಕ್ಕೆತ್ತು. ಜಯ ಭೈರವ ಮತ್ತು ಜಯಡಿಂಡಿಮ (ಮಲ್ತಾನಿ, ನಂದಿ ಘೋಷ, ಉರಗ ಬಂಧ) ಕೆಲಸಗಳಲ್ಲಿ ನಿನ್ನ ಎಡಗೈಯಿಂದ ಎದುರಾಳಿಯ ಬಲಗೈಯನ್ನು ಸುತ್ತಿ ಹಿಡಿದು ನಿನ್ನ ಬಲಗಡೆಗೂ ಮತ್ತು ನಿನ್ನ ಬಲಗೈಯಿಂದ ಎದುರಾಳಿಯ ಎಡಗೈಯನ್ನು ಸುತ್ತಿ ನಿನ್ನ ಎಡಗಡೆಗೇ ಕಲಿ ಹೊಡೆಯುವುದು (ಅಭ್ಯಾಸ ಮಾಡುವುದು) ಸರಿಯಷ್ಟೆ. ಆದರೆ ಸುಪ್ರತೀಕ (ಟಾಂಗ್) ಮಾಡುವಾಗ ಮಾತ್ರ, ನೀನು ಸುತ್ತಿಕೊಂಡಿರುವ ಕೈ ಕಡೆಯೇ ಕಲಿ ಹೊಡೆಯಬೇಕು. ಈ ವಿಶೇಷ ಬದಲಾವಣೆಯನ್ನು ಗಮನಿಸಬೇಕು.

**ಪ್ರತಿ ಕೆಲಸ ೩ :** ಮೇಲೆ ಹೇಳಿದಂತೆ ಎದುರಾಳಿಯ ಕೆಲಸಕ್ಕೆ

ತಡೆಹಾಕಿದ ತಕ್ಷಣ, ತಡೆ ಹಾಕಿದ ಕೈಯನ್ನು ಎದುರಾಳಿಯ ಬೆನ್ನಿಗೆ ಸೇರಿಸಿ, ಅವನು ಸುತ್ತ ಹಿಡಿದ ನಿನ್ನ ಕೈಯನ್ನು ಸರ್ರನೆ ಎದೆಯ ಮೇಲೇರಿಸಿ, ಅವನ ಕತ್ತಿನ ಎಡಪಕ್ಕದಿಂದ ಹಾದು, ಬೆನ್ನ ಕಡೆಗಿರುವ ನಿನ್ನ ಮತ್ತೊಂದು ಕೈಗೆ ಸೇರಿಸಿ (ಜನಿವಾರದಂತೆ) ಎದುರಾಳಿಯನ್ನು ಬಂಧಿಸಿ, ಅವನನ್ನು ಹಿಂದಕ್ಕೆ ಮುರಿ. ಎದುರಾಳಿಯ ಬೆನ್ನು ಮೂಳೆಯಲ್ಲುಂಟಾಗುವ ಅಸಹ್ಯ ವೇದನೆಯನ್ನು ತಡೆಯಲಾರದೆ ಹಿಂದಕ್ಕೆ ಒರಗುತ್ತಾನೆ. ಈ ಪ್ರತಿಕೆಲಸವನ್ನು ಜಯ ಭೈರವದಲ್ಲೂ ಸಹ ಉಪಯೋಗಿಸಬಹುದು. ಅಲ್ಲದೇ, ಈ ಕೆಲಸವನ್ನು ಪ್ರತ್ಯೇಕವೆಂದೇ ಪರಿಗಣಿಸಿ ಮಾಡಬಹುದು.

ಎದುರಾಳಿಯು ಬೆನ್ನ ಕಡೆಗಿದ್ದ ಅವನು ನೀನು ಮಾಡುವ ಸುಪ್ರತೀತ, ಬ್ರಹ್ಮಸರ್ಪ, ಐರಾವತ ಮೊದಲಾದ ಯಾವ ಕೆಲಸಕ್ಕೂ ಸಿಕ್ಕಬಾರದೆಂಬ ಉದ್ದೇಶ್ಯದಿಂದ ನಿನ್ನ ನಡುವನ್ನು ಹಿಡಿದು ನಿನ್ನ ಕಾಲಿನ ಹಾಗೂ ಕೈ ಅಳತೆಗಿಂತ ದೂರವಾಗಿ, ಬಹಳ ಹಿಂದಕ್ಕೆ ಕಾಲುಗಳನ್ನು ಕಟ್ಟಿ ನಿಂತಿರುವಾಗ ಮುಂದೆ ಹೇಳುವಂತೆ ಮಿಂಚಿನ ವೇಗದಲ್ಲಿ ಮಾಡುವುದನ್ನು ಕಲಿ. ಈಗಾಗಲೇ ಹೇಳಿರುವಂತೆ ಎದುರಾಳಿಯು ನಿನ್ನನಡುವನ್ನು ಹಿಡಿದು ನಿಂತಿರುವಾಗ ಅವನ ಬಲಗೈಯನ್ನು ನಿನ್ನ ಬಲಗೈಯಿಂದ ಸುತ್ತಿಹಿಡಿದು ಅತ್ಯಂತ ರಭಸದಿಂದ ನಿನ್ನ ಬಲವನ್ನೆಲ್ಲಾ ಪ್ರಯೋಗಿಸಿ, ನಿನ್ನ ಎದುರಾಳಿಯನ್ನು ಮುಂದಕ್ಕೆಳೆದು, ಜೊತೆಯಲ್ಲೇ ನೀನು ಸಹ ಮುಖ ಕೆಳಗಾಗಿ ಮುಂದಕ್ಕೆ ಬೀಳು. ಹೀಗೆ ನೀನು ಬೀಳುವಾಗ ಜೊತೆಯಲ್ಲೇ ನಿನ್ನ ಎದುರಾಳಿಯು ನಿನ್ನ ಹಿಂದೆಯೇ ಬೀಳುವನು. ಆದ್ದರಿಂದ ನೀನು ಅವನನ್ನು ಎಳೆದು ಮುಂದಕ್ಕೆ ಬೀಳುತ್ತಿದ್ದ ಹಾಗೆಯೇ ನಿನ್ನ ಬಲಗಾಲಿನಿಂದ ಬಾಹ್ಯ ಸುಪ್ರತೀಕವನ್ನು ಪ್ರಯೋಗಿಸು.

**ಕುಸ್ತಿ ಕೆಲಸ ೨. ಆರಿರುದ್ರ – ಕರವಲಯ – ಬಾಹರ್ ಟಾಂಗ್ ಚಿತ್ರ ನೋಡಿ :** ಇದು ಸುಪ್ರತೀಕದ ಸ್ವಲ್ಪ ಬದಲಾವಣೆಯಿಂದ ಮಾಡುವ ಕೆಲಸ. ಸುಪ್ರತೀಕದಲ್ಲಿ ಎದುರಾಳಿಯ ಯಾವ ಕಾಲು ಮುಂದಿದೆಯೋ ಅದರ ಎದುರು ಗಡೆಯ ಕೈ ಸುತ್ತಿದರೆ, ಬಾಹ್ಯ ಸುಪ್ರತೀಕದಲ್ಲಿ ಎದುರಾಳಿಯ ಯಾವ ಕಾಲು ಮುಂದಿದೆಯೋ, ಆ ಕಡೆಯ ಕೈಯನ್ನು ಸುತ್ತಿ, ಎದುರಾಳಿಯ ಕಡೆಗೆ ಬೆನ್ನು ತಿರುಗಿಸಿ, ನಮ್ಮ ಮುಂದಿರುವ ಕಾಲಿನಿಂದ, ಎದುರಾಳಿಯು ಮುಂದಿರುವ ಕಾಲನ್ನು ಹೊರಗಡೆಯಿಂದ ಗೆಣ್ಣಿನ ಮೇಲ್ಭಾಗಕ್ಕೆ ಕಟ್ಟಿ ಹೊಡೆಯಬೇಕು. ಈಗ ಎದುರಾಳಿಯು ವಜ್ರದಂತೆ, ಛತ್ರಪತಿ ಅಥವಾ ಮತ್ತಾವ ಕೆಲಸಕ್ಕಾದರೂ, ನಮ್ಮ ಪಕ್ಕದಲ್ಲಿ ಹಾದು ಹೋಗುವಂತೆ ಮಾಡುವಲ್ಲಿ ಬಹಳ ಅನುಕೂಲವಾಗುವುದು.

**ಕುಸ್ತಿಕೆಲಸ ೩ : ಹಸ್ತಿಮಲ್ಲ – ಖೊಪ್ಪರ – ದೋಬಿಚಟ್** ಚಿತ್ರ ನೋಡಿ. ಈ ಕೆಲಸವನ್ನು ಎದುರಾಳಿಯು ಅವನ ಕೈಯನ್ನು ನಿನ್ನ ಕತ್ತಿನ ಮೇಲೆ ಹಾಕಿದಾಗ ಆಗಲೀ ಅಥವಾ ಕೈ ಮಿಲನ ಮಾಡುತ್ತಿರುವಾಗ ಆಗಲೀ ಮಾಡಬಹುದು. ಕೆಲವರು ಎದುರಾಳಿಯು ತಗ್ಗಿದಾಗ ಮಾಡಿದರೆ, ಮತ್ತೆ ಕೆಲವರು ಎದುರಾಳಿಯು ಎದೆಯೆತ್ತಿ ನಿಂತಿದ್ದಾಗಲೂ ಮಾಡುವರು. ಇವೆಲ್ಲವೂ ಅವರವರ ಅಭ್ಯಾಸಕ್ಕೆ ಅನುಗುಣವಾಗಿರುತ್ತವೆ.

**ಪ್ರತಿಕೆಲಸ – ತೋಡುಗಳು ಚಿತ್ರ ನೋಡಿ :** ಎದುರಾಳಿಯು ಈ ಕೆಲಸ ಪ್ರಯೋಗಿಸುವಷ್ಟರಲ್ಲೇ ನಿನ್ನ ಎಡಗೈಯನ್ನು ಅವನ ಎರಡು ತೊಡೆಗಳ ಮಧ್ಯೆ ಪೃಷ್ಠದ ಕೆಳಗಡೆ ತೂರಿಸಿ ಅವನನ್ನು ಮೇಲಕ್ಕೆತ್ತು.

ಎದುರಾಳಿಯು ನಿನ್ನನ್ನು ಎಗರಿಸುವಷ್ಟರಲ್ಲೇ ಅವನ ಬೆನ್ನಿನ ಮೇಲೆ ನಿನ್ನ ಎದೆಯ ಪ್ರದೇಶವನ್ನು ಊರಿ ಚಕ್ರಾಕಾರವಾಗಿ ಅವನ ಎಡಗಡೆಗೆ ತಿರುಗಿಸಿ ಅವನಿಗೆ ಎದುರಾಗಿ ನಿಲ್ಲು.

ಅವನ ಎಡಸೊಂಟವನ್ನು ನಿನ್ನ ಎಡಗೈಯಿಂದ ನಿನ್ನ ಬಲ ಭಾಗಕ್ಕೆ ತಳ್ಳಿ, ನೀನು ಎದುರಾಳಿಯ ಎಡಭಾಗಕ್ಕೆ ಸರಿದು ಹೋಗು. ಹೀಗೆ ಅವನ ಸೊಂಟವನ್ನು ಎಳೆಯುವಾಗ, ಅದು ಸರಾಗವಾಗಿ, ನಿನ್ನ ಬಲಗಡೆಗೆ ಸರಿದುಹೋಗಲು ಅನುಕೂಲವಾಗುವಂತೆ, ನಿನ್ನ ಕೆಳಹೊಟ್ಟೆಯ ಭಾಗವನ್ನು ಹಿಂದಕ್ಕೆ ಸರಿಸು.

ಕುಸ್ತಿಕೆಲಸ – ೪ ಚಿತ್ರ ನೋಡಿ ಮಣಿಗ್ರೀವ – ನಿಲುವ ತಿರುಗಣಿ ರೂಂ ಬಲಗಾಲನ್ನು ಮುಂದಿಟ್ಟು ನಿಂತಿರುವ ಎದುರಾಳಿಯ ಬಲಗೈ ಹಸ್ತ ಅಥವಾ ಮಣಿಕಟ್ಟನ್ನು ನಿನ್ನ ಎಡಗೈಯಲ್ಲಿ ಹಿಡಿದು ಸಾಧ್ಯವಾದಷ್ಟು ಅವನ ಕೈಯನ್ನು ನಿನ್ನ ಬಲಗಡೆಗೆ ಅಂಗೈ ನೆಲದ ಕಡೆಗೆ ನೋಡುವಂತೆ ತಿರುಗಿಸು. ಹೀಗೆ ತಿರುಗಿಸುತ್ತಿರುವ ವೇಳೆಯಲ್ಲೇ, ನಿನ್ನ ಬಲಗೈಯನ್ನು ಅವನ ಮೊಳಕ್ಕೆ ಮೇಲ್ಗಡೆಗೆ ಒತ್ತುತ್ತಾ, ನಿನ್ನ ಹಸ್ತವನ್ನು ಅವನ ಬಲಗಾಲ ತೊಡೆಯ ಒಳಗಡೆ ಇಟ್ಟು, ಪಕ್ಕದಿಂದ ಹಾದು ಅವನ ನಡುವನ್ನು ಹಿಡಿ.

ಹಿಂದಕ್ಕೆ ಹೋಗುವುದರ ಬದಲು ಅವನ ತೊಡೆಯ ಒಳಗಡೆ ತೇಲಿಸುವ ನಿನ್ನ ಕೈಯಿಂದ, ಅವನ ತೊಡೆಯನ್ನು ಹಾಗೆಯೇ ಮೇಲಕ್ಕೆತ್ತಿ ಅವನ ತೊಡೆಯನ್ನು ನಿನ್ನ ಬಲಗಾಲಿನಿಂದ ಹೊಡೆಯಲು ಅವಕಾಶವಿದೆ.

**ಪ್ರತಿಕೆಲಸ ೧. ( ಚಿತ್ರ ನೋಡಿ ) :** ಎದುರಾಳಿಯು ನಿನ್ನ ಬೆನ್ನು ಹಿಡಿಯುವ ಮಾರ್ಗದಲ್ಲಿ ನಿನ್ನ ಬಲ ಪಕ್ಕಕ್ಕೆ ಬಂದೊಡನೆ ಅವನ ತೊಡೆಯ ಒಳಗಡೆ ಬಲಗೈಯನ್ನು ಸೇರಿಸಿ, ಅವನ ಮುಂಭಾಗವನ್ನು ಸೇರಿಸಿ ಬೆನ್ನು ಹಿಡಿ.

**ಪ್ರತಿಕೆಲಸ ೨.** ಅವನು ನಿನ್ನ ಬೆನ್ನ ಕಡೆಗೆ ಹೋಗುತ್ತಿರುವಂತೆಯೇ ಅವನ ಬಲಗೈಯನ್ನು ಹಿಡಿದು ಬಾಹ್ಯ ಸುಪ್ರತೀಕದಿಂದ ಹೊಡಿ.

**ಕುಸ್ತಿ ಕೆಲಸ ೫ : ಯಕ್ಷಬಂಧ – ಕೊಕ್ಕರೆ, ಚಿತ್ರ ನೋಡಿ.** ಎದುರಾಳಿಯು ಕಾಲು ಕೆಳಗೆ ನೀನು ನುಗ್ಗಿದಾಗ, ಅವನು ನಿನ್ನ

ಬೆನ್ನಿನ ಮೇಲೆ ಎದೆಯೂರಿ ಅದುಮಲು ಪ್ರಯತ್ನಿಸುವ ವೇಳೆಯಲ್ಲಿ ಈ ಕೆಲಸ ಮಾಡಬೇಕಾಗುತ್ತದೆ. ಆದರೆ ಚತುರನಾದ ಎದುರಾಳಿ, ತೂಕವನ್ನು ನಿನ್ನ ಬೆನ್ನಿನ ಮೇಲೆ ಬಿಡದೆ ಕತ್ತಿನ ಮೇಲೆ ಬಿಟ್ಟು, ಅವನ ಕಡೆ ಎಳೆದು ಕುಳ್ಳಿರಿಸಲು ಪ್ರಯತ್ನಿಸಿದರೆ ಆಗ ತೊಂದರೆಯಾಗುವುದು. ಇದಕ್ಕಿಂತ ಉತ್ತಮವೆಂದರೆ, ಎದುರಾಳಿಯು ಎದುರಿಗೆ ನಿಂತು, ಕಟಿಯ ಮೇಲೆ ಕೈ ಇಡುವ ಮೊದಲು ನಿನ್ನ ಕೈಗಳೊಡನೆ ಕೈಗಳನ್ನು ಮಿಲನ ಮಾಡುತ್ತಾ, ಹಿಡಿಯುತ್ತ, ಬಿಡುವು ಪಡೆಯುವುದು ಸ್ವಾಭಾವಿಕ. ಈ ವೇಳೆಯಲ್ಲಿ ಅವನ ಎರಡೂ ಕೈಗಳನ್ನು ನಿನ್ನ ಎರಡೂ ಕೈಗಳಿಂದ ಹತ್ತಿರಕ್ಕೆ ತಂದು ನೀನು ನುಗ್ಗುವಷ್ಟು, ಅಂದರೆ ನಿನ್ನ ಎದೆಯಗಲಕ್ಕೆ ಹಿಡಿದು ಸರ್‍ರನೆ ತಲೆ ತಗ್ಗಿಸಿ, ಮುಂದೆ ನುಗ್ಗಿ ನಿನ್ನ ತಲೆಯನ್ನು ಅವನ ಎದೆಯ ಕೆಳಗಡೆ ಹೊಟ್ಟೆಯ ಬಳಿ ಸೇರಿಸು. ಹೀಗೆ ಮಾಡುವಾಗ ಹಿಡಿದಿರುವ ಅವನ ಎರಡೂ ಕೈಗಳನ್ನು ಎಳೆದು, ಆಕೈಗಳು ನಿನ್ನ ಬೆನ್ನನ್ನು ಸುತ್ತಿ ಎದೆಯ ಕೆಳಗಡೆ ಬರುವಂತೆ ಹಿಡಿ. ಈಗ ನಿನ್ನ ಬೆನ್ನಿನ ಮೇಲೆ ಅವನ ದೇಹದ ಮುಕ್ಕಾಲು ಭಾಗ ಆಶ್ರಿತವಾಗಿದ್ದು, ಅವನ ತೋಳುಗಳು ನಿನ್ನ ಎದೆಗೆ ಇರುತ್ತವೆ. ಕಣ್ಣುಮುಚ್ಚಿ ತೆಗೆಯುವಷ್ಟು ತಡವಾದರೂ ನಿನ್ನ ವೇಗ ಕುಂದಿ, ಎದುರಾಳಿಯು ನಿನ್ನ ಮೇಲೆ ಅವನ ಸಂಪೂರ್ಣ ಬಲ ಹಾಗೂ ತೂಕವನ್ನು ಬಿಟ್ಟು ಅದುಮುವ ಪ್ರಸಂಗ ಬಂದೀತು. ಆದ್ದರಿಂದ ನೀನು ಅವನ ಕೈಗಳನ್ನು ಹಿಡಿದು ಮುನ್ನುಗ್ಗಿದ ವೇಗದಲ್ಲೇ ಅವನ ತೂಕವನ್ನು ನಿನ್ನ ಬೆನ್ನ ಕಡೆಗೆ ಎಳೆಯುತ್ತಾ, ಅವನು ನಿನ್ನನ್ನು ಅಮುಕಲು ಪ್ರಯತ್ನಿಸುವ ಮೊದಲೇ, ಅವನ ಹೊಟ್ಟೆಯ ಬಳಿಯಿರುವ ತಲೆಯಿಂದ ಅವನನ್ನು ಬೆನ್ನಿನ ಕಡೆಗೆ ಚಿಮ್ಮಿ ಎಗರಿಸಿ, ಬಲಗಾಲು ಅಥವಾ ಎಡಗಾಲಿನ ಚಪ್ಪಡಿ ಬಿಟ್ಟು ಕುಳಿತು ಕೋ. ಸರಿಯಾಗಿ ಅಭ್ಯಾಸ ಮಾಡದಿದ್ದಲ್ಲಿ, ಎದುರಾಳಿಯನ್ನು ಹಿಂದಕ್ಕೆ ಚಿಮ್ಮುವ ರಭಸದಲ್ಲಿ ನಿನ್ನ ಸಮತ್ವ ತಪ್ಪಿ ಹಿಂದಕ್ಕೆ ಬಿದ್ದು ನಿನ್ನ ಬೆನ್ನು ನೆಲಕ್ಕೆ ತಾಕುವ ಸಂಭವವಿರುತ್ತದೆ. ಆದ್ದರಿಂದ ಚಪ್ಪಡಿ ಬಿಟ್ಟು ಕೂತೊಡನೆ, ಚಪ್ಪಡಿ ಬಿಟ್ಟದಿಕ್ಕಿನಲ್ಲೇ ನಿನ್ನ ಶರೀರವನ್ನು ತುಸು ತಿರುಗಿಸಿ ನೆಲದ ಕಡೆಗೆ ಮುಖ ಮಾಡಿ ಕೂರಲು ಕಲಿ. ಅಥವಾ ಹಿಂದಕ್ಕೆ ವಾಲಿ ಬೀಳುತ್ತಿರುವ ನೀನು, ನಿನ್ನ ತಲೆಯನ್ನು ಎದುರಾಳಿಯ ಮೇಲೆ ಊರು.

ಧ್ಯಾನದಲ್ಲಿಡಬೇಕಾದ ಮುಖ್ಯವಿಷಯವೆಂದರೆ ನೀನು ನುಗ್ಗುವ ವೇಗದಲ್ಲೇ ತಡಮಾಡದೆ, ಗೂಳಿಯು ನುಗ್ಗಿ, ಎತ್ತಿ ಚಿಮ್ಮುವ ವರಸೆಯಲ್ಲೇ ಕೆಲಸ ಮಾಡು.

**ಪ್ರತಿ ಕೆಲಸ ೧ :** ಈ ಕೆಲಸವನ್ನು ನಿನ್ನ ಮೇಲೆ ಪ್ರಯೋಗಿಸುವ ಎದುರಾಳಿಯು ನಿನ್ನನ್ನು ಮುಂದುಗಡೆಯಿಂದ ಮೇಲಕ್ಕೆ ಎಗರಿಸುವ ನಷ್ಟೆ. ಆದ್ದರಿಂದ ನಿನ್ನ ಕಾಲುಗಳನ್ನು ಸ್ವಲ್ಪವಾದರೂ ಸಡಿಲವಾಗಿಡದೆ ಭದ್ರವಾಗಿ ಊರಿ, ದೇಹದ ಭಾರವನ್ನೆಲ್ಲಾ ಹಿಂದೆ ಬಿಟ್ಟು ಎದುರಾಳಿಯನ್ನು ನಿನ್ನ ಎರಡೂ ಕೈಗಳಿಂದಲೂ ಬಲವಾಗಿ ಅದುಮಿ ಹಿಡಿ.

**ಪ್ರತಿ ಕೆಲಸ - ೨ :** ಎದುರಾಳಿಯು ನಿನ್ನ ಕೈಗಳನ್ನು ಮೈಕಟ್ಟು ಅಥವಾ ಮುಂಗೈಗಳನ್ನು ಹಿಡಿದು ಸುತ್ತಿಕೊಳ್ಳದೆ ನಿನ್ನ ತೋಳಿನ ಮೇಲ್ಭಾಗವನ್ನು ಹಿಡಿದು ಸುತ್ತಿಕೊಂಡು ಎದುರಾಳಿಯು ಮೇಲೇಳದಂತೆ ಸಾಧ್ಯವಾದಷ್ಟು ಅಮುಕುತ್ತಾ ನಿನ್ನ ಎರಡು ಕೈಗಳನ್ನೂ ಅವನ ಪಕ್ಕದಿಂದ ಕಂಕುಳ ಕೆಳಗಡೆ ಹಾಯಿಸಿ ಕತ್ತಿನ ಹಿಂಭಾಗಕ್ಕೆ ತಂದು ಬಂಧಿಸು.

**ಪ್ರತಿಕೆಲಸ ೩ :** ಅವನು ನಿನ್ನ ಕೈಗಳನ್ನು ಸುತ್ತಿ ಹಿಡಿಯುತ್ತಿದ್ದ ಹಾಗೆಯೇ, ನಿನ್ನ ಯಾವುದಾದರೂ ಒಂದು ಕೈಯನ್ನು ಅವನ ಪಕ್ಕದಿಂದ ಕಂಕುಳ ಕಡೆ ಹಾಯಿಸಿ, ಅವನ ಕತ್ತಿನ ಮೇಲ್ಗಡೆಗೆ ಬರುವಂತೆ ಇಟ್ಟುಕೋ.

**ಪ್ರತಿಕೆಲಸ ೪ :** ಅವನು ನಿನ್ನ ಕೈಗಳನ್ನು ಸುತ್ತಿ ಹಿಡಿಯುತ್ತಿದ್ದಂತೆಯೇ ಸರ್‍ರನೆ, ನಿನ್ನ ಎರಡು ಕಾಲುಗಳನ್ನು ಸಹ ನಿನ್ನ ಎದುರು ದಿಕ್ಕಿಗೆ ಅಂದರೆ ಅವನ ಕಡೆಗೆ ಅಗಲವಾಗಿ ಜಾರಿಸಿ, ಜಾರುತ್ತಿರುವ ವೇಗದಲ್ಲೇ ನೀನು ನಿನಗೆ ಅನುಕೂಲವಾದ ದಿಕ್ಕಿಗೆ ತಿರುಗಿ ಅವನ ಎದೆಯ ಮೇಲೇರಲು ಪ್ರಯತ್ನಿಸು.

**ಉಪ ಸಂಹಾರ**

ಹೈದರಾಲೀ ಖಾನನು ದೇವನಹಳ್ಳಿ ಯುದ್ಧದಲ್ಲಿ ಭಾಗವಹಿಸಿ ಬೆಂಗಳೂರಿನ ಗರಡಿಮನೆಯ ಪೈಲ್ವಾನರನ್ನೆಲ್ಲಾ ಬಳಸಿಕೊಂಡದ್ದು ಕ್ರಿ.ಶ. ೧೭೪೯ರಲ್ಲಿ. ಅರಳೇ ಪೇಟೆಯಲ್ಲಿರುವ ದೊಡ್ಡಗರಡಿ, ಅಲ್ಲಿರುವ ಶಿಲಾಲೇಖದ ಪ್ರಕಾರ ಕ್ರಿ.ಶ. ೧೬೮೦ರಲ್ಲೇ ಸ್ಥಾಪಿತಗೊಂಡಿತ್ತು. ಅಲ್ಲದೇ ಕತ್ತೀಗೊಪಾಲರಾಯರ ಮನೆಯೂ ಹಳೆಯ ಕೋಟೆ ಯೊಳಗಡೆಯೇ ಇದ್ದಿತೆಂದು ಬ.ನ. ಸುಂದರರಾಯರು ದಾಖಲಿಸಿದ್ದಾರೆ. ಈ ಆಧಾರಗಳ ಮೇಲೆ ಹೈದರಾಲಿಯು ದೊಡ್ಡ ಗರಡಿಯಲ್ಲಿಯೇ ಅಂಗಸಾಧನೆ ಮಾಡಿ ಕಟ್ಟುಮಸ್ತಾದ ಆಳಾದನೆಂದು ನಿರ್ಧರಿಸಬಹುದು. ಹಳೆಯಪೇಟೆಯ ಗರಡಿಗಳಲೆಲ್ಲಾ ಹಳೆಯದಾದ ಮತ್ತು ಸ್ಥಾಪನೆಯ ಇಸವಿಯೂ ಇರುವ ಗರಡಿ ಇದೊಂದೇ ಆಗಿರುವುದು ಈ ನಿರ್ಧಾರಕ್ಕೆ ಹೆಚ್ಚಿನ ಒತ್ತು ಸಿಗುತ್ತದೆ.

ಇಂಥಹ ಚಾರಿತ್ರಿಕ, ವೈಜ್ಞಾನಿಕ, ಸಾಮಾಜಿಕ ಮಹತ್ವದ ಅಂಶಗಳನ್ನೊಳಗೊಂಡ ಗರಡಿಮನೆಗಳನ್ನು ತಮ್ಮ ಮನೆ, ದೇವಾಲಯಗಳಿಗಿಂತ ಹೆಚ್ಚಿಗೆ ಪ್ರೀತಿಸುತ್ತಾ, ಎಷ್ಟೇ ಆರ್ಥಿಕ ಆಮಿಷಗಳಿದ್ದರೂ ಕೇವಲ ಅಭಿಮಾನ, ಜನಸೇವೆಯ ಉದ್ದೇಶಕ್ಕಾಗಿಯೇ ಉಳಿಸಿಕೊಂಡು ಬಂದಿರುವ ಇಲ್ಲಿನ ಜನತೆಯನ್ನು ವಿದ್ವಾಂಸರು ಗುರುತಿಸಬೇಕು ಸರ್ಕಾರವು ಪುರಸ್ಕರಿಸಬೇಕು.

ಜನಸಾಮಾನ್ಯರಲ್ಲಿ 'ಗರಡಿ' ಎಂದರೆ ಸಮಾಜ ಘಾತುಕರನ್ನು ತಯಾರಿಸುವ ಕಾರ್ಖಾನೆಗಳೆಂಬ ಹಣೆ ಪಟ್ಟಿಯನ್ನು ಕಟ್ಟದೇ ಅಲ್ಲಿ ನಡೆಯುವ ದೈಹಿಕ ಅಂಗಸಾಧನೆಯ ವೈಜ್ಞಾನಿಕ ವಿಶ್ಲೇಷಣೆಗೆ

ಗುರಿಮಾಡಿ ಮೇಲೆ ಹೇಳಿರುವಂಥ ಉತ್ತಮ ಅಂಶಗಳನ್ನು ಬೆಳಕಿಗೆ ತಂದದ್ದೇ ಆದರೆ ಕುಸ್ತಿಯು ಕರಾಟೆ, ಜುಡೆಗೆ ಕುಂಫೂ, ಮುಂತಾದ ಯುದ್ಧ ಕಲೆ ಅಂಗಸಾಧನೆಗಳಷ್ಟೇ ಉತ್ಕೃಷ್ಟವಾದದ್ದು ಎಂದು ಸಾಬೀತು ಪಡಿಸುವುದು ಕಷ್ಟವೇನಲ್ಲ. ಅಲ್ಲದೇ ದಿಕ್ಕು ತಪ್ಪುತ್ತಿರುವ ಯುವಜನತೆಗೆ ಅಂಗಸಾಧನೆಯ ಮಹತ್ವವೂ ತಿಳಿದು ಈ ಕಡೆಗೆ ಅವರ ಗಮನ ಸೆಳೆಯಬಹುದು.

ಕ್ರಿಕೆಟ್‌ಗೆ ಕೊಡುವ ಆರ್ಥಿಕ ಬೆಂಬಲ ಹಾಗೂ ಮಾಧ್ಯಮ ಗಳ ಪ್ರಚಾರದಲ್ಲಿ ಕೇವಲ ಓನೇ ಒಂದಂಶದ ಹಣವನ್ನು ಖರ್ಚುಮಾಡಿ ಪೌಷ್ಠಿಕ ಆಹಾರ ಮತ್ತು ಇನ್ನೂ ಲಭ್ಯವಿರುವ ಹಿರಿಯ ನುರಿತ ಕುಸ್ತಿ ಪಟುಗಳಿಂದ ತರಬೇತಿಯನ್ನು ಒದಗಿಸಿದ್ದೇ ಆದಲ್ಲಿ ನಮ್ಮ ಇಲ್ಲಿಯ ಪೈಲ್ವಾನರೂ ರಾಷ್ಟ್ರೀಯ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಗಳಸುವುದರಲ್ಲಿ ಸಂಶಯವಿಲ್ಲ ಎನ್ನುವುದಕ್ಕೆ ಈ ಸಮೀಕ್ಷೆಯಲ್ಲಿ ನಾನು ಸಂದರ್ಶಿಸಿದ ಬಿ.ಇ, ಬಿ.ಎ. ಹುಡುಗರೂ, ಹೋಟೆಲ್ ಮಾಣಿಗಳು, ಮೆಕ್ಯಾನಿಕ್‌ಗಳೂ ಸಾಕ್ಷಿಯಾಗಿದ್ದಾರೆ. ಮೆಕ್ಯಾನಿಕ್ ಕೆ. ಶೇಖರ್ (೨೫ರ ಯುವಕ) ಈಗಾಲೇ ರಾಜ್ಯಮಟ್ಟದ ೨ ಪ್ರಶಸ್ತಿಗಳನ್ನೂ ೨೦ ಕ್ಕೂ ಹೆಚ್ಚು ಪಂದ್ಯಗಳಲ್ಲಿ ಭಾಗವಹಿಸಿ ಪ್ರಶಸ್ತಿಪಡೆದಿದ್ದಾರೆ.

**ಕುಸ್ತಿ ಕೆಲಸಗಳು** - ತೋಡುಗಳಲ್ಲಿ ವಿವರಿಸಿರುವಂತೆ ಜಾಂಬವತೀ, ಜರಾಸಂಧ, ಹನುಮಾನ್ ಪಟ್ಟುಗಳು ದೇಹದಾರ್ಢ್ಯತೆ, ಅಂಗಸಾಧನೆ, ಸ್ನಾಯುಗಳ ಶಕ್ತಿಯನ್ನಷ್ಟೇ ಅಲ್ಲದೇ ಸಮಯ ಪ್ರಜ್ಞೆ ಹಾಗೂ ಬುದ್ಧಿಮತ್ತೆ ಸೇರಿದಂತೆ ಮಿಂಚಿನ ಕಾರ್ಯಾಚರಣೆ ಅತಿಮುಖ್ಯವೆನ್ನುವ ಅಂಶಗಳನ್ನು ದೃಢೀಕರಿಸುತ್ತವೆ. ಆದ್ದರಿಂದ ಇವು ಕೇವಲ ಪುರಾಣಗಳಲ್ಲಿ ಸ್ಥಾನ ಪಡೆದಿರುವ ಐತಿಹ್ಯ ಸಂಗತಿಗಳಾಗಿರದೆ ಇಂದಿಗೂ ಉಳಿದು ಬಂದಿರುವ ಅವರ ಸಾಧನೆ ಹೆಸರುಗಳನ್ನೇ ಹೊತ್ತ ಕುಸ್ತಿಯ ಅಥವಾ ಮಲ್ಲಯುದ್ಧದ ಸೂಕ್ಷ್ಮ ತಾಂತ್ರಿಕ ಅಂಶಗಳಾಗಿವೆ ಎನ್ನುವುದರಲ್ಲಿ ಯಾವ ಸಂಶಯವಿಲ್ಲ.

(ಈ ಸಂಪ್ರಬಂಧವನ್ನು ರಚಿಸಲು ಸಹಕರಿಸಿದವರು: ಸತ್ಯನಾರಾಯಣ, ಕೇಂದ್ರ ಚಲನಚಿತ್ರ ಭಂಡಾರ, ಗ.ರಾ. ಅರವಿಂದ, ಪೈ || ಮೋಹನ್, ಪೈ || ಕಿಟ್ಟಿ, ಅರುಣಕುಮಾರ್ ಬಿ.ಎ ; ಈ ಲೇಖನದ ಚಿತ್ರಗಳು ಮತ್ತು ಈ ಪಟ್ಟುಗಳ ಬಗ್ಗೆ ಮಾಹಿತಿ ನೀಡಿದವರು : ಪೈ || ಕೆ. ಶೇಖರ್ ವಯಸ್ಸು ೨೪ ವರ್ಷ, ಪೈ || ಅರುಣ್ ಕುಮಾರ್ (ವಿದ್ಯಾರ್ಥಿ) ೨೧ ವರ್ಷ, ಪೈ || ಜಯರಾಂ ೫೭ ವರ್ಷ, ಪೈ || ಮೋಹನ್ ४೦ ವರ್ಷ.)

ಪ್ರೊ॥ ಧ್ರುವನಾರಾಯಣ *

# ಜವಾಬ್ದಾರಿ ಸರಕಾರದ ವ್ಯವಸ್ಥೆಗೆ ಡಿ.ವಿ.ಜಿ. ಕೊಡುಗೆ

ಭಾರತದ ಸ್ವಾತಂತ್ರ್ಯಕ್ಕಾಗಿ ೧೮೫೭ರಿಂದಲೇ ಹೋರಾಟ ನಡೆದ ಸಂಗತಿ ಈಗ ಇತಿಹಾಸವಾಗಿದೆ. ಕಾಂಗ್ರೆಸ್ ಸಂಸ್ಥೆಯು ಹುಟ್ಟುವ ಮುಂಚೆಯೇ ರಾಷ್ಟ್ರದ ಅನೇಕ ನಾಯಕರು ಈ ವಿಷಯದಲ್ಲಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ವಾದ ಮಾಡಿದ್ದುಂಟು. ಆದರೆ ೧೯೦೧ರಿಂದ ಈಚೆಗೆ ಹೋಂರೂಲ್ ಚಳವಳಿಯಿಂದಾಗಿ ಈ ಹೋರಾಟಕ್ಕೆ ಹೊಸ ಆಯಾಮ ದೊರೆತು ಈ ವಿಷಯ ಕುರಿತು ಆಳರಸರನ್ನು ಗಂಭೀರವಾಗಿ ಆಲೋಚಿಸುವಂತೆ ಮಾಡಿತು. ಹೀಗಾಗಿ ೧೯೦೯, ೧೯೧೯ ಇತರ ಸುದಾರಣೆಗಳು ಜಾರಿಯಲ್ಲಿ ಬಂದವು.

ಡಿ.ವಿ.ಜಿ.ಯವರು ಸಾರ್ವಜನಿಕ ಜೀವನವನ್ನು ತಮ್ಮ ''ಕರ್ನಾಟಕ'' ಪತ್ರಿಕೆಯಿಂದ ಆರಂಭ ಮಾಡಿದರು. ಡಿ.ವಿ.ಜಿ ಯವರ ಜೀವನದ ಮೇಲೆ ಗಾಢವಾಗಿ ಪ್ರಭಾವ ಬೀರಿದವರೆಂದರೆ ಗೋಪಾಲ ಕೃಷ್ಣಗೋಖಲೆ, ಗಾಂಧಿ, ತಿಲಕ, ವಿಶ್ವೇಶ್ವರಯ್ಯ ಹಾಗೂ ದಿವಾನ್ ರಂಗಾಚಾರ್ಯ. ಗಾಂಧಿ ಹಾಗೂ ವಿಶ್ವೇಶ್ವರಯ್ಯರ ಕಾರ್ಯನೀತಿ, ಗೋಖಲೆ ಹಾಗೂ ತಿಲಕರ ದೇಶಭಕ್ತಿಗಳಿಂದ ಮಂತ್ರ ಮುಗ್ಧರಾಗಿದ್ದರು. ಪಾಶ್ಚಿಮಾತ್ಯ ರಾಜಕೀಯ ಮೀಮಾಂಸಕರಾದ ಟಿ. ಹೆಚ್. ಗ್ರೀನ್, ಎಡ್ವರ್ಡ್ ಸ್ಟೂವರ್ಟ್ ಮಿಲ್ ಹಾಗೂ ಮಾರ್ಲೆ ಮುಂತಾದವರ ವಿಚಾರ ಶಕ್ತಿಗೆ ಮಾರುಹೋಗಿದ್ದರು. ಈ ಎಲ್ಲರ ಪ್ರಭಾವದಿಂದ ಅವರು ತಮ್ಮ ಜೀವನದ ಗುರಿಯನ್ನು ಕಂಡುಕೊಂಡರು. ಅದೇ ಅವರು ಪದೇ ಪದೇ ಹೇಳುತ್ತಿದ್ದ ಸಂಗತಿ ಎಂದರೆ ಜನತೆಯ ಬದುಕು ಸಹನೀಯ, ಪ್ರಿಯ ಹಾಗೂ ಅರ್ಥ ಪೂರಿತವಾಗಿರಬೇಕು. ಈ ಒಂದು ಜೀವನವನ್ನು ಜನತೆಗೆ ನೀಡಲೆಂದೇ ರಾಜ್ಯಾಂಗ ಮತ್ತು ಅಧಿಕಾರವನ್ನು ಉಪಯೋಗಿಸಬೇಕು. ಇದೇ ಸರಕಾರ ಅದರಲ್ಲಿಯೂ ಜವಾಬ್ದಾರಿ ಸರಕಾರದ ಧ್ಯೇಯ. ಹೀಗಾಗಿ ಅವರಿಗೆ ಜವಾಬ್ದಾರಿ ಸರಕಾರದ ಬಗೆಗೆ ಇದ್ದ ಕಳಕಳಿ ಹಾಗೂ ಅವರು ನೀಡಿದ ಕೊಡುಗೆಯ ಕಿರುಪರಿಚಯವೇ ಈ ಪ್ರಬಂಧದ ಗುರಿ.

ಡಿ.ವಿ.ಜಿಯವರು ದೇಶೀಯ ಸಂಸ್ಥಾನದ ಪ್ರಜೆ ಯಾಗಿದ್ದರು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಸುಮಾರು ೫೬೧ ದೇಶೀಯ ಸಂಸ್ಥಾನಗಳಿದ್ದು ಅವುಗಳ ಆಡಳಿತ ರಾಜರ ವಶದಲ್ಲಿಯೇ ಇದ್ದಿತು. ಈ ರಾಜ್ಯಗಳು ನಿರಂಕುಶ ಆಡಳಿತ ವ್ಯವಸ್ಥೆಯನ್ನೇ ಹೊಂದಿದ್ದವು. ಮುಂದುವರೆದ ಮೈಸೂರು ಹಾಗೂ ತಿರುವಾಂಕೂರು ಸಂಸ್ಥಾನಗಳಲ್ಲಿ ಪ್ರಜಾಪ್ರತಿನಿಧಿಗಳ ಸಭೆಗಳಿದ್ದರೂ, ಅವು ಜನತೆಗೆ ಹೆಚ್ಚು ಪ್ರಯೋಜನಕಾರಿಯಾಗಿರದೇ, ಕೇವಲ ಅಹವಾಲುಗಳನ್ನು ಹೇಳಿಕೊಳ್ಳುವ ವೇದಿಕೆಗಳಾಗಿದ್ದವೆಂದೇ ಹೇಳಬಹುದು. ಹೀಗಾಗಿ ಪ್ರಜಾಹಿತವ್ಯವಸ್ಥೆ ಯಾವ ಸಂಸ್ಥಾನಗಳಲ್ಲಿಯೂ ಇರಲಿಲ್ಲ. ಇದರಿಂದಾಗಿ ದೇಶೀಯ ಸಂಸ್ಥಾನದ ಪ್ರಜೆಗಳ ಸ್ಥಿತಿಯು ಕರುಣಾಜನಕವಾಗಿತ್ತು. ಈ ಪ್ರಜೆಗಳು ಹೊಣೆಗಾರಿಕೆಯ ಭೀತಿಯೇ ಇರದ ಸ್ವಕೀಯರ ದರ್ಪಕ್ಕೆ ಈಡಾಗಿದ್ದವು. ಮತ್ತೊಂದು ವಿಷಯವೆಂದರೆ ಈ ಸಂಸ್ಥಾನಗಳು ಬ್ರಿಟಿಷ್ ಇಂಡಿಯಾದ ಸುಧಾರಣೆಗಳಿಂದ ದೂರ ಉಳಿದಿದ್ದು ನಿರಂಕುಶ ಆಡಳಿತ ವ್ಯವಸ್ಥೆಯನ್ನೇ ಹೊಂದಿದ್ದವು. ಈ ಒಂದು ಅಂಶವನ್ನು ಮನವರಿಕೆ ಮಾಡಿಕೊಂಡಿದ್ದ ಡಿ.ವಿ.ಜಿಯವರಿಗೆ ದೇಶೀಯ ಸಂಸ್ಥಾನಗಳ ಈ ಒಂದು ಗಂಭೀರ ಸಮಸ್ಯೆಗೆ ಪರಿಹಾರ ಒದಗಿಸಲು ಹಾರೈಸಿದರು. ಪಾಶ್ಚಿಮಾತ್ಯ ರಾಜಕೀಯ ತತ್ವಗಳ ಪರಿಚಯ ಪಡೆದಿದ್ದ ಡಿ.ವಿ.ಜಿ.ಯವರ ವಿಶೇಷ ಅಧ್ಯಯನದ ಫಲವಾಗಿ ಅವರು ಈ ಕೆಳಗಿನ ನಿರ್ಣಯಕ್ಕೆ ಬಂದರು.

''ರಾಜ್ಯದ ಮೂಲ ಸಾಮಗ್ರಿ ಪ್ರಜೆ, ಆಮೇಲೆ ಬರತಕ್ಕವರು ರಾಜರು. ಪ್ರಜೆಯ ಹಿತ ಸಾಧನೆಯೇ ರಾಜ್ಯದ ಮೊದಲನೆಯ ಕರ್ತವ್ಯ. ಆ ಕರ್ತವ್ಯವನ್ನು ನೆರವೇರಿಸಲು ನಿರಂಕುಶನಾದ ರಾಜನನ್ನೋ ನವಾಬನನ್ನೋ ನಂಬಲಾಗದು. ಯಾವ ಒಬ್ಬನ ನಿರಂಕುಶಾಧಿಕಾರವೂ ಜನಹಿತಕ್ಕೆ ಅಸಂಗತ ವಾದುದ್ದೇ. ಇಂಥ ನಿರಂಕುಶ ಪ್ರವರ್ತನೆಯ ಲಕ್ಷಣವೇ ಈಗ ನಮ್ಮ ದೇಶೀಯ

* ನಂ. ೧೦/೨, ವೇದಾಂತ ಮಂದಿರ ರಸ್ತೆ, ೧೩ನೇ 'ಎ' ಕ್ರಾಸ್, ಜಯನಗರ ೨ನೇ ಬ್ಲಾಕ್, ಬೆಂಗಳೂರು - ೫೬೦ ೦೧೧

ಸಂಸ್ಥಾನಗಳಲ್ಲಿ ದೊಡ್ಡದಾಗಿ ಎದ್ದು ಕಾಣುವ ದೋಷ. ನಮ್ಮ ಸಂಸ್ಥಾನದ ಪ್ರಭುಗಳು ರಾಜ್ಯಾಧಿಕಾರದಲ್ಲಿ ತಮ್ಮ ಪ್ರಜೆಗಳನ್ನು ಪ್ರತ್ಯಕ್ಷ ಭಾಗಸ್ಥರನ್ನಾಗಿ ಮಾಡಿ ಪ್ರಜಾ ಸಮ್ಮತವಾದ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕು''[*೧] ಈ ತಮ್ಮ ಅಭಿಪ್ರಾಯಕ್ಕೆ ಅಂಟಿಕೊಂಡ ಅವರು ಈ ವಿಷಯ ಕುರಿತು ಅನೇಕ ಬಾರಿ ಆಡಳಿತದೊಂದಿಗೆ ವಾದಮಾಡಿದ್ದುಂಟು. ಈ ವಿಷಯದಲ್ಲಿ ಮೊದಲು ದೇಶೀಯ ಮಹರಾಜರುಗಳಲ್ಲಿ ಅರಿವು ಮೂಡಿಸಬೇಕೆಂದೇ ಅವರು ಕ್ರಿ.ಶ. ೧೯೧೭ರಲ್ಲಿಯೇ ಬಿಕಾನೇರ್ ಸಂಸ್ಥಾನದ ದೊರೆಗೆ ತಾವು ತಮ್ಮ ''ಕರ್ನಾಟಕ'' ಪತ್ರಿಕೆಯಲ್ಲಿ ಬರೆದು ಪ್ರಕಟಿಸಿದ್ದ ಮೂರು ಲೇಖನಗಳನ್ನು ಒಂದು ಚಿಕ್ಕ ಪುಸ್ತಕರೂಪದಲ್ಲಿ ಕಳಿಸಿಕೊಟ್ಟರು. ಆ ಪುಸ್ತಕದ ಹೆಸರು 'The Problems of Indian Native States'[*೨]. ಈ ಪುಸ್ತಕಕ್ಕೆ ಅಂದಿನ ಹೋಂರೂಲ್ ಮೂಮೆಂಟಿನ ಅಧ್ಯಕ್ಷರಾದ ಮದ್ರಾಸಿನ ಸರ್ ಎಸ್. ಸುಬ್ರಮಣ್ಯ ಅಯ್ಯರ್ ಅವರು ಮುನ್ನುಡಿ ಬರೆದಿದ್ದಾರೆ. ಈ ಮೂರು ಲೇಖನಗಳಲ್ಲಿ ಡಿ.ವಿ.ಜಿಯವರು ಸಂಸ್ಥಾನಗಳ ಸಮಸ್ಯೆ ಸರಕಾರ ಮತ್ತು ಅಲ್ಲಿಯ ಪ್ರಜೆಗಳು ಜವಾಬ್ದಾರಿ ಸರಕಾರ ವ್ಯವಸ್ಥೆಗೆ ಹಾತೊರೆಯುವ ವಿಷಯಗಳನ್ನು ಮನಮುಟ್ಟುವಂತೆ ವಿವರಿಸಿದ್ದಾರೆ. ನ್ಯಾಯ, ಸ್ವಾತಂತ್ರ್ಯ, ವ್ಯಕ್ತಿ ವಿಕಾಸ ಹಾಗೂ ರಾಷ್ಟ್ರೀಯ ಸ್ವಾವಲಂಬನೆ ಮತ್ತು ವಿಕಾಸಗಳನ್ನು ಕುರಿತು ಬರೆದಿರುವುದು ಶ್ಲಾಘನೀಯ ಸಂಗತಿ. ಅಲ್ಲದೆ ಉತ್ತಮವಾದ ರಾಜ್ಯ ಹೊಂದಿರಬೇಕಾದ ಅಂಶಗಳನ್ನೂ ಎತ್ತಿ ತೋರಿಸಿದ್ದಾರೆ. ಅವನ್ನು ಸ್ಥೂಲವಾಗಿ ಈ ಕೆಳಕಂಡಂತೆ ಹೇಳಬಹುದು. ೧) Rule of Law ಅಂದರೆ ರಾಜ್ಯದಲ್ಲಿ ಕಾನೂನಿನ ಆಡಳಿತ ವ್ಯವಸ್ಥೆ ಇರಬೇಕು. ೨) ಪ್ರಜೆಗಳಿಂದ ಆಯ್ಕೆಯಾದ ಪ್ರಜಾಪ್ರತಿನಿಧಿಗಳ ಸಭೆ ಇರಬೇಕು. ೩) ಹೊಣೆಗಾರ ಸರಕಾರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆ ಇರಬೇಕು. ೪) ಪ್ರಜೆಗಳಿಗೆ ವಾಕ್ ಸ್ವಾತಂತ್ರ್ಯ ಮತ್ತು ವಿಮರ್ಶಾ ಸ್ವಾತಂತ್ರ್ಯವಿರಬೇಕು. ೫) ಅಧಿಕಾರಿಗಳ ಕೈಯಲ್ಲಿರುವ ಅಧಿಕಾರವು ಪ್ರಜೆಗಳಿಗೆ ಬರಬೇಕು. ೬) ಮಹಾರಾಜರುಗಳು ಪ್ರಜಾ ಸತ್ತಾತ್ಮಕ ವಿಧಾನದಲ್ಲಿ ಆಡಳಿತ ನಡೆಸಬೇಕು. ನಾವು ಸ್ಮರಿಸಲೇಬೇಕಾದ ಇನ್ನೊಂದು ಸಂಗತಿ ಎಂದರೆ ಬ್ರಿಟಿಷ್ ಇಂಡಿಯಾದಲ್ಲಿ ನಡೆದ ರಾಜಕೀಯ ಚಳವಳಿಗಳು ಸಂಸ್ಥಾನಗಳಲ್ಲೂ ನಡೆಯಬೇಕೆಂದು ಅವರು ಪ್ರಸ್ತಾಪಿಸಿದರು.

ಅಂದಿನ ದಿನಗಳಲ್ಲಿ ಸರಕಾರದ ಬಗೆಗೆ ಸೊಲ್ಲೆತ್ತದ ಪರಿಸ್ಥಿತಿಯಲ್ಲಿ ಎಂಟೆದೆಯ ಗಂಡಾದ ಎಡವಟ್ಟು ಗುಂಡಪ್ಪನವರು ಈ ಸಾಹಸಕ್ಕೆ ಕೈಹಾಕಿದ್ದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಸೋಜಿಗದ ಮತ್ತೊಂದು ಸಂಗತಿ ಎಂದರೆ ಕಾಂಗ್ರೆಸ್ ಸಂಸ್ಥೆ, ತನ್ನ ಚಳವಳಿಯನ್ನು ಕೇವಲ ಬ್ರಿಟಿಷ್ ಇಂಡಿಯಾಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿತ್ತು. ದೇಶೀಯ ಸಂಸ್ಥಾನಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಡಲಾಗಿತ್ತು. ಈ ಒಂದು ಅಭಿಪ್ರಾಯವನ್ನು ಒಪ್ಪದ ಡಿ.ವಿ.ಜಿ ೧೯೧೮ರಲ್ಲಿ ನಡೆದ ಮುಂಬೈ ಕಾಂಗ್ರೆಸ್ ಅಧಿವೇಶನಕ್ಕೆ ತೆರಳಿ ಅಲ್ಲಿ ಕಾಂಗ್ರೆಸ್, ದೇಶೀಯ ಸಂಸ್ಥಾನಗಳ ಸಮಸ್ಯೆಯನ್ನು ಅಧ್ಯಯನ ಮಾಡಲು ಒಂದು ಸಮಿತಿಯನ್ನು ರಚಿಸಬೇಕೆಂದು ಆಗ್ರಹಿಸಿದರು. ಅಲ್ಲದೆ ಕಾಂಗ್ರೆಸ್, ಸಂಸ್ಥಾನದ ಪ್ರಜೆಗಳನ್ನು ಅವರ ಪಾಡಿಗೆ ಬಿಡದೆ ಅವರನ್ನೂ ದೇಶದ ಸ್ವಾತಂತ್ರ್ಯಕ್ಕೆ ಅಣಿಗೊಳಿಸಬೇಕೆಂದೂ ವಾದ ಮಾಡಿದರು.

ಈ ಮಧ್ಯೆ ನಾವು ಸ್ಮರಿಸಲೇಬೇಕಾದ ಇನ್ನೊಂದು ವಿಷಯ ಎಂದರೆ ಕ್ರಿ.ಶ. ೧೯೧೮ರಲ್ಲಿಯೇ ಡಿ.ವಿ.ಜಿಯವರು ''ಬ್ರಿಟಿಷ್ ಸಾಮ್ರಾಜ್ಯದಲ್ಲಿ ದೇಶೀಯ ಸಂಸ್ಥಾನಗಳ ಸ್ಥಾನ'' ಎಂಬ ಮನವಿಯನ್ನು ಸಿದ್ಧಗೊಳಿಸಿ ಭಾರತ ರಾಜ್ಯದ ಕಾರ್ಯದರ್ಶಿಯಾದ (Secretary of State & India) ಎಡ್ವಿನ್ ಸ್ಯಾಮುಯೆಲ್ ಮಾಂಟೆಗೋ ಅವರಿಗೆ ಸಾದರಪಡಿಸಿದರು.[*೩] ಈ ಮನವಿಯಲ್ಲಿ ಅವರು ಭಾವೀ ಭಾರತದ ರಾಜ್ಯಾಂಗ ವ್ಯವಸ್ಥೆಯು ಸಂಯುಕ್ತ ಸರಕಾರ (Federal) ಪದ್ಧತಿಯಿಂದ ಕೂಡಿರಬೇಕೆಂದೇ ಪ್ರತಿಪಾದಿಸಿದ್ದರು. ಇದು ಸಾಮಾನ್ಯ ಮಾತಾಗಿರಲಿಲ್ಲ. ಇದು ಅವರ ಮೇಧಾವಿ ಬುದ್ಧಿಗೆ ಸಾಕ್ಷಿ.

ಜವಾಬ್ದಾರಿ ಸರಕಾರದ ಅಧ್ಯಯನದಲ್ಲಿ ತೊಡಗಿಸಿಕೊಂಡ ಅವರು ೧೯೨೫ರಲ್ಲಿ ಭಾರತದ ಮಹಾನಗರಗಳಿಗೆ ಭೇಟಿ ನೀಡಿ ಈ ವಿಷಯವನ್ನು ನಾಯಕರಿಗೆ ಮನವರಿಕೆ ಮಾಡಿದ್ದಲ್ಲದೆ ತಮ್ಮ ಈ ಹೋರಾಟಕ್ಕೆ ಬೇಕಾದ ಮಾಹಿತಿಯನ್ನೂ ಸಂಗ್ರಹಿಸಿಕೊಂಡು ಬಂದರು.

೧೯೨೭ರಲ್ಲಿ ಅವರು ''ಭಾರತ ಸರಕಾರ ಮತ್ತು ಭಾರತೀಯ ಸಂಸ್ಥಾನಗಳು''[*೪] ಸಂಯುಕ್ತ ಸರಕಾರದ ಲೋಪದೋಷಗಳ ಬಗೆಗೆ ಒಂದು ಕರಡು ಯೋಜನೆಯನ್ನೇ ಸಿದ್ಧಪಡಿಸಿ, ಸಾರ್ವಜನಿಕರಿಗೆ ಸಾದರಪಡಿಸಿದರು. ಇದು ಅವರ ಸಂವಿಧಾನಾತ್ಮಕ ಆಡಳಿತ ಜ್ಞಾನಕ್ಕೆ ಜೀವಂತ ಉದಾಹರಣೆಯಾಗಿದೆ.

೧೯೨೭ರಲ್ಲಿ ಡಿ.ವಿ.ಜಿ ಅವರು ಸೆಂಟ್ರಲ್ ಕಾಲೇಜು ವಿದ್ಯಾರ್ಥಿ ಸಂಘದಲ್ಲಿ ಮಾಡಿದ ಭಾಷಣದಲ್ಲಿ ಆಧುನಿಕ ''ಭಾರತದ ಸಮಸ್ಯೆಗಳು ಮಾರ್ಲೆ ಅವರ ರಾಜೀಸೂತ್ರದ ಬಗೆಗೆ'' ಮನಮುಟ್ಟುವಂತೆ ಅಂದಿನ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ.[*೫] ೧೯೨೮ರಲ್ಲಿ ಬಟ್ಲರ್ ಸಮಿತಿಗೆ ''ಭಾರತೀಯ ಸಂಸ್ಥಾನಗಳ ಸಮಿತಿ''[*೬] ಎಂಬ ಮನವಿಯಲ್ಲಿ ಭಾರತ ಹಾಗೂ ದೇಶೀಯ ಸಂಸ್ಥಾನಗಳ ಆರ್ಥಿಕ ಹಾಗೂ ಒಳಾಡಳಿತ ವಿಷಯ ಕಾನೂನುಗಳ ಹಾಗೂ ಒಪ್ಪಂದಗಳ ಕರಾರುಗಳು ಹಾಗೂ ಪರಿಣಾಮದ ಬಗೆಗೆ ವಿವೇಚಿಸಿದ್ದಾರೆ.

೧೯೨೯ರಲ್ಲಿ ಕೇರಳದ ತಿರುವಾಂಕೂರಿನಲ್ಲಿ ''ದಕ್ಷಿಣ ಭಾರತೀಯ ಸಂಸ್ಥಾನಗಳ ಪ್ರಜೆಗಳ ಸಮ್ಮೇಳನದ''[*೭] ಜರುಗಿತು.

ಈ ಸಮ್ಮೇಳನದ ಅಧ್ಯಕ್ಷರು ಸರ್ ಎಂ. ವಿಶ್ವೇಶ್ವರಯ್ಯ ಅವರು. ಈ ಸಮ್ಮೇಳನದ ಪ್ರಮುಖ ಪಾತ್ರಧಾರಿ ಡಿ.ವಿ.ಜಿ. ಏಕೆಂದರೆ ಈ ಸಮ್ಮೇಳನದ ಕಾರ್ಯ ಸಮಿತಿಯ ಪರವಾಗಿ ಗೊತ್ತುವಳಿಗಳನ್ನು ತಯಾರಿಸಿದವರು ಡಿ.ವಿ.ಜಿ.

ಸ್ವೀಕರಿಸಲಾದ ಗೊತ್ತುವಳಿಗಳೆಂದರೆ:

೧) ಇಂಡಿಯಾ ಏಕೈಕವಾದ ಸಂಯುಕ್ತರಾಷ್ಟ್ರವಾಗಿರತಕ್ಕದ್ದು.

೨) ಯಾವ ದೇಶೀಯ ಸಂಸ್ಥಾನಗಳು ಸ್ವಾವಲಂಬಿ ಸಾಮರ್ಥ್ಯವನ್ನು ಹೊಂದಿವೆಯೋ ಅವು ಹಾಗೆಯೇ ಉಳಿದು ಸಂಯುಕ್ತ (federal) ಭಾರತದ ಅಂಗವಾಗಿ ಮುಂದುವರಿಯಬೇಕು.

೩) ಸಂಯುಕ್ತ ಭಾರತದ ಎಲ್ಲಾ ಭಾಗಗಳಲ್ಲಿಯೂ ಪ್ರಜಾಭಿಪ್ರಾಯಕ್ಕೆ ಆಧೀನವಾದ ಸರಕಾರಗಳೇ ಇರತಕ್ಕದ್ದು.

೧೯೪೭ರಲ್ಲಿ ಸ್ವಾತಂತ್ರ್ಯ ದೊರೆತು ಸಂಸ್ಥಾನಗಳ ವಿಲೀನೀಕರಣ ಸಮಸ್ಯೆಯನ್ನು ಅಂದೇ ಮನಗಂಡಿದ್ದರು ಡಿ.ವಿ.ಜಿ. ಇದು ಅವರ ದೂರದೃಷ್ಟಿ ಅಥವಾ ಮುಂದಾಲೋಚನೆಗೆ ಕುರುಹು. ಅಲ್ಲದೆ ಈ ಅಧಿವೇಶನದ ಗೊತ್ತುವಳಿಗಳಲ್ಲಿ ಜವಾಬ್ದಾರಿ ಸರಕಾರ ಹಾಗೂ ಅದರ ವ್ಯವಸ್ಥೆಯನ್ನು ಸಮಗ್ರವಾಗಿ ಚಿತ್ರಿಸಿದ್ದಾರೆ. ಈ ಒಂದು ಕಾರ್ಯ ದೇಶದ ಭವಿಷ್ಯತ್ತಿಗೆ ದಿಕ್ಸೂಚಿಯಾಗಿತ್ತೆಂದರೆ ಅತಿಶಯೋಕ್ತಿ ಅಲ್ಲ. ಏಕೆಂದರೆ ಭಾವಿ ಭಾರತದ ಸಂವಿಧಾನ ಹೇಗೆ ಇರಬೇಕು ಎಂಬುದರ ಬಗೆಗೆ ಬೆಳಕು ಬೀರಿದ್ದಾರೆ. ಸಂಯುಕ್ತ ಸಂವಿಧಾನ, ಜವಾಬ್ದಾರಿ ಸರಕಾರ, ಸುಪ್ರೀಂಕೋರ್ಟು ಹಾಗೂ ಕೇಂದ್ರ ಮತ್ತು ರಾಜ್ಯಗಳಲ್ಲಿ ಹಂಚಬೇಕಾದ ವಿಷಯಗಳನ್ನೂ ಪ್ರಸ್ತಾಪಿಸಿದ್ದಾರೆ. ೧೯೨೯ರ ಅವಧಿಯಲ್ಲಿಯೇ ಭಾವೀ ಭಾರತದ ರೂಪರೇಷೆಗಳನ್ನು ನೀಡಿದವರಲ್ಲಿ ಡಿ.ವಿ.ಜಿ ಅವರು ಪ್ರಮುಖರು. ಈ ಹಲವಾರು ವಿಷಯಗಳು ಅವರ ಮುತ್ಸದ್ದಿತನವನ್ನು ಎತ್ತಿ ಹಿಡಿಯುತ್ತವೆ. ಈ ಬಗೆಯ ವಿಚಾರಗಳನ್ನೇ ಮಾಡದೇ ಹೋದ ಸಮಯದಲ್ಲಿ ಡಿ.ವಿ.ಜಿ ಯವರು ಈ ಒಂದು ಕೊರತೆಯನ್ನು ತುಂಬಿರುವುದು ಹೆಮ್ಮೆಯ ಸಂಗತಿ.

೧೯೩೧ರಲ್ಲಿಯೇ ಸಮಗ್ರ ಭಾರತದ ಕಲ್ಪನೆಯನ್ನು ಕಂಡವರು ಡಿ.ವಿ.ಜಿ. ಬ್ರಿಟಿಷ್-ಭಾರತದಲ್ಲಿಯ ರಾಜಕೀಯ ಸುಧಾರಣೆ ಗಳನ್ನು ದೇಶೀಯ ಸಂಸ್ಥಾನಗಳಿಗೆ ಏಕೆ ಅನ್ವಯಿಸ ಬಾರದೆಂದು ಆಗ್ರಹಿಸಿದರು. ರಾಷ್ಟ್ರದ ರಾಜ್ಯಾಂಗದ ವಿಕಾಸದಲ್ಲಿ ದ್ವಂದ್ವಕ್ಕೆ ಆಸ್ಪದ ನೀಡಬಾರದು ಇದರಿಂದ ಸಂಸ್ಥಾನಗಳನ್ನು ಕಡೆಗಣಿಸಿದಂತಾಗುತ್ತದೆ ಎಂದು ಎಚ್ಚರಿಸಿದರು. ಈ ವಿಷಯಗಳನ್ನೇ ಪ್ರಮುಖವಾಗಿರಿಸಿಕೊಂಡು ಅವರು ''ಭಾರತೀಯ ಸಂವಿಧಾನದಲ್ಲಿ ದೇಶೀಯ ಸಂಸ್ಥಾನಗಳ ಪ್ರಜೆಗಳ ಸ್ಥಾನ'' ಎಂಬ ಪುಸ್ತಿಕೆಯನ್ನು ಪ್ರಕಟಿಸಿದರು. *೮

೧೯೩೧ರಲ್ಲಿ ಲಂಡನ್ನಿನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿಗೆ ದೇಶೀಯ ಸಂಸ್ಥಾನಗಳ ಪ್ರಜೆಗಳ ಪರವಾಗಿ ಪ್ರತಿನಿಧಿಗಳು ಹೋಗಲೇಬೇಕೆಂದು ಆಗ್ರಹಿಸಿದರು. ಅಲ್ಲದೆ ಭಾರತಕ್ಕೆ ಸ್ವತಂತ್ರ ರಾಜ್ಯಾಂಗ ವ್ಯವಸ್ಥೆಯನ್ನು ನಿರ್ಧರಿಸುವ ಕಾರ್ಯವನ್ನು ಸಂವಿಧಾನ ಸಮಿತಿಗೆ ವಹಿಸಿಕೊಡಬೇಕೆಂದೇ ಅಂದಿನ ದಿನಗಳಲ್ಲಿಯೇ ಸೂಚಿಸಿದ್ದರು. ಈ ಒಂದು ಪ್ರಸ್ತಾಪ ವನ್ನು ಗುಂಡು ಮೇಜಿನ ಪರಿಷತ್ತಿನಲ್ಲಿ ಡಿ.ವಿ.ಜಿ.ಯವರ ಹೆಸರಿನಲ್ಲಿಯೇ ದಿವಂಗತ ಅಂಬೇಡ್ಕರರು ಪ್ರಸ್ತಾಪಿಸಿದರೆಂದೂ ಬಲ್ಲ ಮೂಲಗಳಿಂದ ತಿಳಿದುಬರುತ್ತದೆ. ಇದು ಕೇವಲ ಕರ್ನಾಟಕಕ್ಕಲ್ಲ ಸಮಸ್ತ ಭಾರತಕ್ಕೆ ಗೌರವ ತಂದ ವಿಷಯ.

ಈ ವಿಧವಾಗಿ ಡಿ.ವಿ.ಜಿಯವರು ಜವಾಬ್ದಾರಿ ಸರಕಾರದ ಪದ್ಧತಿಗೆ ಅಪಾರ ಕೊಡುಗೆಯನ್ನು ಮುಂದುವರಿಸಿಕೊಂಡ ವಿಷಯವನ್ನು ಸ್ಥೂಲವಾಗಿ ಈ ಕೆಳಗೆ ಹೇಳಲಾಗಿದೆ:

೧೯೪೧ರಲ್ಲಿ ''ಭಾರತದ ರಾಜಕೀಯ ಸಂದಿಗ್ಧತೆ''*೯ ಯಲ್ಲಿ ಅಂದಿನ ಸಮಸ್ಯೆಗಳನ್ನು ಕುರಿತುಕೂಲಂಕಷವಾಗಿ ಚರ್ಚಿಸಿದ್ದಾರೆ.

೧೯೪೨ರಲ್ಲಿ ''ನೂತನ ವಿಶ್ವದ ಆಡಳಿತೆಯತ್ತ''*೧೦ ಎಂಬ ಕೃತಿಯಲ್ಲಿ ವಿಶ್ವಸರಕಾರದ ಹೊಳಪನ್ನು ಬೆಳಗಿಸಿ ತಮ್ಮ ವಿಶ್ವಮಾನವತೆಯ ಕಲ್ಪನೆಯನ್ನು ನೀಡಿದ್ದಾರೆ ಈ ಕೃತಿ ಮುಂಬರಲಿರುವ ಸಂಯುಕ್ತ ರಾಷ್ಟ್ರಗಳ ಸಂಘದ ಕಲ್ಪನೆಯನ್ನು ಮೂರು ವರ್ಷಗಳ ಮುಂಚೆಯೇ ನೀಡಿದೆ ಎಂದರೆ ಯಾರಾದರೂ ಹೆಮ್ಮೆ ಪಡಲೇಬೇಕಾದ ವಿಷಯ.

ಈ ಒಂದು ಅವಧಿಯಲ್ಲಿಯೇ ಅವರು ಸರ್ ಸ್ಟ್ಯಾಫೋರ್ಡ್ ಕ್ರಿಪ್ಸ್ ಅವರಿಗೆ ದೇಶೀಯ ಸಂಸ್ಥಾನಗಳ ಪ್ರಜೆಗಳು ಹೇಗೆ ಸ್ವಾತಂತ್ರ್ಯಕ್ಕೆ ಹಾತೊರೆಯುತ್ತಿದ್ದಾರೆ ಎಂಬ ವಿಷಯವನ್ನು ಮನವರಿಕೆಯಾಗಲೆಂದೇ ಮನವಿ ನೀಡಿದರು. *೧೧ ಸರ್ ಸ್ಟ್ಯಾಫೋರ್ಡ್ ಕ್ರಿಪ್ಸ್ ಅವರ ನೇತೃತ್ವದ ಸಮಿತಿಯ ಕಾರ್ಯಾಚರಣೆಯ ನಂತರ ಡಿ.ವಿ.ಜಿ. ಅವರು ''ತ್ರಿವೇಣಿ'' ತ್ರೈಮಾಸಿಕ ಪತ್ರಿಕೆಯಲ್ಲಿ ''ಸಂಪುಟ ಸಮಿತಿ ಮತ್ತು ನಂತರ'' ಎಂಬ ಲೇಖನದಲ್ಲಿ ತಮ್ಮ ಅನಿಸಿಕೆಗಳನ್ನು ವಿವರಿಸಿರುವುದು ಗಮನಾರ್ಹ ಸಂಗತಿ. ಈ ವಿಷಯ ಅವರ ಮನೋಚಿಂತನೆಗೆ ದಿಕ್‌ಸೂಚಿಯಾಗಿದೆ. *೧೨

ಇದರಂತೆಯೇ ಅವರು ೧೯೪೫ ಹಾಗೂ ೧೯೪೬ರಲ್ಲಿ ಕ್ರಮವಾಗಿ ''ಅಖಿಲ ಭಾರತ ಒಕ್ಕೂಟ'' (All India Union) ಮತ್ತು ಅಖಿಲ ಭಾರತ ಸಂಯುಕ್ತ ಒಕ್ಕೂಟ (All India Federal Union) ಎಂಬ ಎರಡು ಪ್ರಕಟನೆಗಳನ್ನು ಹೊರತಂದರು. ಮೊದಲನೆಯ ಪ್ರಕಟನೆಯಲ್ಲಿ ಅವರು ಸಪ್ರೂ ಸಮಿತಿ (Sapru Committee) ಯವರ ಪ್ರಶ್ನಾವಳಿಗೆ ಸೂಕ್ತವಾಗಿ ಉತ್ತರಿಸಿದ್ದರೆ, ಎರಡನೆಯ ಪ್ರಕಟನೆಯಲ್ಲಿ ಅವರು ದೇಶೀಯ ಸಂಸ್ಥಾನಗಳು

ಹಾಗೂ ಜಾತೀಯತೆಯ ಪ್ರಶ್ನೆ ಕುರಿತು ಬರೆದಿರುವುದು ಅವರು ರಾಷ್ಟ್ರದ ಬಗೆಗೆ ಹೊಂದಿದ ಕಾಳಜಿ ಯನ್ನು ತೋರಿಸುತ್ತದೆ. *೧೩

ರಾಷ್ಟ್ರಕ ಡಿ.ವಿ.ಜಿಯವರು ಸಂವಿಧಾನ ರಚನೆಯ ಸಮಯದಲ್ಲಿ "ಸಂವಿಧಾನ ಸಭೆ ಹಾಗೂ ರಾಜ್ಯಗಳು" ಎಂಬ ಪ್ರಕಟನೆಯ ಮೂಲಕ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದ್ದಾರೆ*೧೪ ಈ ಹೊತ್ತಿಗೆಯಲ್ಲಿ ಅವರು ಜವಾಬ್ದಾರಿ ಸರಕಾರದ ಬಗೆಗೆ ಹೊಂದಿದ್ದ ವಿಷಯಗಳನ್ನೇ ಪ್ರಸ್ತಾಪಿಸಿದ್ದಾರೆ. ಸಂವಿಧಾನ ನಿರ್ಮಾಣಕಾರ್ಯ ಮುಗಿದ ನಂತರ, ಭಾರತದ ಗಣರಾಜ್ಯ ಕುರಿತು ಅವರು "ಗಣತಂತ್ರ ಮತ್ತು ಅದರ ಅವಶ್ಯಕತೆಗಳೇನು?" ಎಂಬ ಪ್ರಕಟನೆಯಲ್ಲಿನೂತನವಾಗಿ ಉದಯಿಸಿದ ಗಣತಂತ್ರ ರಾಜ್ಯದ ಸಮಸ್ಯೆಗಳನ್ನು ಸೊಗಸಾಗಿ ವಿಮರ್ಶೆ ಮಾಡಿ ಸರಕಾರವನ್ನು ಎಚ್ಚರಿಸಿದ್ದಾರೆ. ಇದು ಅವರ ಒಂದು ಅಮೂಲ್ಯ ಕಾಣಿಕೆ ಎಂದರೆ ತಪ್ಪಾಗಲಾರದು. *೧೫

೧೯೫೪ರಲ್ಲಿ ಭಾಷಾವಾರು ಪ್ರಾಂತಗಳ ರಚನೆ ಕುರಿತು ಅವರು ಬರೆದು ಸಮಸ್ಯೆಯ ವಿವಿಧ ಮುಖಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ. ಈ ಎಲ್ಲಾ ಬರಹಗಳಿಗೆ ಕಳಸಪ್ರಾಯವಾದ ಅವರ ಪುಟ್ಟ ಪ್ರಕಟನೆ ಎಂದರೆ ಭಾರತ ೧೮೫೦-೧೯೫೦-೨೦೦೦. ಈ ಪ್ರಕಟನೆಯಲ್ಲಿ ಈ ಮಹಾನ್ ಮಾನವತಾವಾದಿ, ಪ್ರಜಾಪ್ರಭುತ್ವದ ಪ್ರತಿಪಾದಕ ಭಾರತ ಸಂವಿಧಾನದ ಸತ್ಯವನ್ನು ಹೊಗಳಿ ಗಾಂಧೀ ಪ್ರಣಾಳಿಕೆಯನ್ನು ಒಳಗೊಂಡಿರುವ ನಮ್ಮ ಸಂವಿಧಾನವು ವಿಶ್ವಕ್ಕೆ ಶಾಂತಿಮಾರ್ಗವನ್ನೇ ತೋರಿಸಲಿ ಎಂದೇ ಹಾರೈಸಿದ್ದಾರೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


*೧. ವಿರಕ್ತ ರಾಷ್ಟ್ರಕ ಡಿ.ವಿ.ಜಿ., ಪುಟ. ೬೬, ಡಿ. ಆರ್. ವೆಂಕಟರಮಣ

*೨. ***The Problems of Indian Native States,*** The Home Rule League, Madras, Karnataka Office, Bangalore, 26 October, 1917

*೩. ***A Memorial on the Position of the Native States in the Empire,*** Addressed to the Right Hon'able Edwin Samuel Montagu M.P. His Majesty's Secretary for State of India by D.V.G. Feb 1918, The "Karnataka" office, Bangalore City, Mysore State

*೪. ***The Government of India & The Indian States,*** Karnataka Publishing House - B'lore, June 1926

*೫. Morley 'oncompromise' and Modern Indian Problems, D.V.G. 1927

*೬. The Indian States Committee a note on its terms and implications by D.V.G. B'lore Press Mysoe Road 1928

*೭. ದೇಶೀಯ ಸಂಸ್ಥಾನಗಳು : ವಿರಕ್ತ ರಾಷ್ಟ್ರಕ ಡಿ.ವಿ.ಜಿ., ಪೇಜಿ ೬೧

*೮. ***The States & Their People in the Indian Costitution*** by D.V.G. Karnataka Publishing House, B'lore, 1931

*೯. India's Political Dilemma by D.V.G. Karnataka Pub. House, 1941

*೧೦. ***Towards A new world order An Indian View*** by D.V.G. K.P. House, 1942

*೧೧. ***The case of the People of the Indian States*** by D.V.G. 1942 (Not issued to the Public) Memorandum to Sir Stafford cripps.

*೧೨. ***The Cabinet delegation and After*** by D.V.G. 1946, Triveni, Vol, XVIII, No.2

*೧೩. All India Union, All India Federal Union, D.V.G. 1945, GIP-K.P. House Publications

*೧೪. The Constituent Assembly & The States D.V.G. GIPA

*೧೫. ***What the Republic Needs,*** D.V.G. Hosali Press, 1953

ಎಂ. ಬಿ. ಪಾಟೀಲ *

# ಸರ್ ಮಿರ್ಜಾ ಇಸ್ಮಾಯಿಲ್ ಆಡಳಿತದಲ್ಲಿ ಸಹಕಾರ ವ್ಯವಸ್ಥೆ

**ಆ**ಧುನಿಕ ಮೈಸೂರು ಸಂಸ್ಥಾನದ ಆಡಳಿತಾತ್ಮಕ ಇತಿಹಾಸವನ್ನು ಅವಲೋಕಿಸಿದಲ್ಲಿ ೧೮೩೧ರಿಂದ ಪ್ರಾರಂಭಗೊಂಡು ೧೮೮೧ರ ವರೆಗಿನ ೫೦ ವರ್ಷಗಳ ಕಮಿಶನರ್ ಆಡಳಿತದ ಹಂತ, ತದನಂತರದ ಸುಮಾರು ೬೭ ವರ್ಷಗಳ-೧೮೮೧ರಿಂದ ೧೯೪೮ರ ವರೆಗಿನ ದಿವಾನರುಗಳ ಆಡಳಿತ ಅವಧಿಯು ಅತ್ಯಂತ ಪ್ರಮುಖವಾದುದು. ಈ ಅವಧಿಯನ್ನು (೧೧೭ ವರ್ಷ) ಮಾದರಿ ಮೈಸೂರಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಕೈಗಾರಿಕೆ, ವ್ಯವಸಾಯ, ನೀರಾವರಿ, ಶಿಕ್ಷಣ, ಸಮಾಜ ಕಲ್ಯಾಣ ಮುಂತಾದ ಹತ್ತು ಹಲವಾರು ರಂಗಗಳಲ್ಲೂ ವ್ಯಕ್ತಿಗತ ಮತ್ತು ಸಮಷ್ಠಿಯ ಅಭಿವೃದ್ಧಿಗೆ ಪೂರಕವಾದ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಮೂಲಕ ಹೊಸ ಆಯಾಮುಗಳನ್ನು ಒದಗಿಸಿದ ಕಾಲವೆಂದು ಪರಿಗಣಿಸಬಹುದು.

ಬ್ರಿಟೀಷ್ ಸರ್ಕಾರದ ಆಡಳಿತ ವಿಧಾನದ ಎಲ್ಲಾ ಉತ್ತಮ ಅಂಶಗಳನ್ನು ಈ ದಿವಾನರುಗಳು ಅಳವಡಿಸಿಕೊಂಡಿದ್ದರು. ಭಾರತಕ್ಕೆ ಅನ್ವಯವಾಗುವ ಬಹುಪಾಲು ಪ್ರಗತಿಪರ ಕಾಯಿದೆಗಳನ್ನು, ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಯೋಜನೆಗಳನ್ನು ಮೈಸೂರು ಸರ್ಕಾರದಲ್ಲಿ, ಸ್ಥಳೀಯ ಅವಶ್ಯಕತೆಗಳನ್ನು ಗಮನದಲ್ಲಿಟ್ಟುಕೊಂಡು ಅಳವಡಿಸಿಕೊಳ್ಳಲಾಯಿತು. ಅವುಗಳಲ್ಲಿ ಸಹಕಾರ ವ್ಯವಸ್ಥೆಯೂ ಒಂದಾಗಿತ್ತು.

ಮೈಸೂರು ಸಂಸ್ಥಾನದಲ್ಲಿ ೧೮೮೧ರಿಂದ ೧೯೪೮ರ ವರೆಗೆ ೧೨ ಜನ ದಿವಾನರು ಅಧಿಕಾರವನ್ನು ನಿರ್ವಹಿಸಿದರು. ಅವರಲ್ಲಿ ೧೦ನೇ ದಿವಾನರಾಗಿದ್ದ ಮಿರ್ಜಾರವರು (೧೮೮೩-೧೯೫೯) ಸುದೀರ್ಘ ಅವಧಿಯವರೆಗೆ (೧೯೨೬-೧೯೪೧) ಅಧಿಕಾರದಲ್ಲಿ ಇದ್ದರು. ಅವರು ದಿವಾನರಾಗಿದ್ದಾಗ ಅವರ ವಯಸ್ಸು ಕೇವಲ ೪೨, ಮೇಲಾಗಿ ಆಳುವ ಅರಸರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರ್ (೧೯೦೨-೧೯೪೦) ಅವರಿಗೆ ಅತ್ಯಂತ ನಂಬಿಗಸ್ಥ, ವಿಶ್ವಾಸಾರ್ಹ ಆತ್ಮೀಯ ಗೆಳೆಯರಾಗಿದ್ದರು. ಬೇರೆ ದಿವಾನರಿಗೆ ಇರದ ಈ ವಿಶೇಷ ಅರ್ಹತೆಗಳು ಮಿರ್ಜಾರವರಿಗೆ ಇದ್ದುದರಿಂದ ಅವರ ಅನೇಕ ಜನಹಿತದ ಕೆಲಸಗಳು ಯೋಜನೆಗಳು ಸಾಕಾರಗೊಂಡು ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ಭದ್ರವಾದ ಬುನಾದಿಯನ್ನು ಒದಗಿಸುವಲ್ಲಿ ಸಹಾಯಕವಾದವು. ಅಂತೆಯೇ ರಾಜ್ಯ ಪುನರ್ ರಚನೆಯ ನಂತರವೂ ಹಳೆಯ ಮೈಸೂರು ಪ್ರಾಂತೀಯ ಪ್ರದೇಶಗಳು ಆರ್ಥಿಕ ಅಭಿವೃದ್ಧಿಯಲ್ಲಿ ಮುನ್ನಡೆಯಲು ಸಹಾಯಕವಾಗಿವೆ.

ಬಹುಪಾಲು ಜನಸಮುದಾಯದ ಅಭಿವೃದ್ಧಿಗೆ ಮಿರ್ಜಾರವರು ಸಹಕಾರ ವ್ಯವಸ್ಥೆಯನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡದ್ದನ್ನು, ಈ ಲೇಖನದಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಸಹಕಾರ ಮತ್ತು ವ್ಯವಸಾಯ ಇಲಾಖೆಗಳನ್ನು ದಿವಾನ ಪಿ. ಎನ್. ಕೃಷ್ಣಮೂರ್ತಿಯವರ ಕಾಲದಲ್ಲಿ ೧೯೦೧-೧೯೦೬ರಲ್ಲಿ ಪ್ರಾರಂಭಿಸಲಾಯಿತು. ಕಾನೂನಿನ ಚೌಕಟ್ಟಿನಲ್ಲಿ ಭಾರತ ಸರ್ಕಾರವು ೧೯೦೪ರಲ್ಲಿ ಸಹಕಾರ ಆಂಧೋಲನವನ್ನು ಪ್ರಮುಖವಾಗಿ ಗ್ರಾಮೀಣ ಅರ್ಥವ್ಯವಸ್ಥೆಯನ್ನು ಸುಧಾರಿಸಲು ಪ್ರಾರಂಭಿಸಿತು. ಸದರಿ ಕಾನೂನಿನ ಅನ್ವಯ ೧೯೦೫ರಲ್ಲಿ ಮೈಸೂರು ಸಹಕಾರ ಕಾನೂನನ್ನು ಕೆಲವೊಂದು ಪ್ರಮುಖ ಮಾರ್ಪಾಡುಗಳೊಂದಿಗೆ ಜಾರಿಯಲ್ಲಿ ತರಲಾಯಿತು. ಈ ಸಂದರ್ಭದಲ್ಲೂ ಒಂದು ವಿಷಯವನ್ನು, ಗಮನಿಸುವದು ಅತ್ಯಂತ ಪ್ರಮುಖವಾದುದು. ಭಾರತದ ಆದ್ಯಂತ ಸಹಕಾರ ವ್ಯವಸ್ಥೆಯು ತನ್ನದೇ ಆದ ಕಾನೂನಿನ ಅಡಿಯಲ್ಲಿ ೧೯೦೪ರಲ್ಲಿ ರೂಪುಗೊಳ್ಳುವ ಒಂದು ದಶಕದಷ್ಟು ಮೊದಲೇ ಅಂದರೆ ೧೮೮೪ರಲ್ಲಿ ದಿವಾನ್ ಶೇಷಾದ್ರಿ ಅಯ್ಯರ್ ಅವರ ಕಾಲದಲ್ಲಿಯೇ ಸಹಕಾರ ತತ್ವಗಳನ್ನು ಒಳಗೊಂಡಂತೆ ಕಂಪನಿಯ ಕಾನೂನಿನ ಅನ್ವಯ

---

* ಮುಖ್ಯ ಸಂಪಾದಕರು (ನಿವೃತ್ತ), ಕರ್ನಾಟಕ ಗ್ಯಾಸೆಟಿಯರ್, 'ಶ್ರೀ ರೇಣುಕ', ೩೫೬, ೬ನೇ ಅಡ್ಡರಸ್ತೆ, ಚನ್ನಮ್ಮನ ಕೆರೆ ಅಂಗಳ, ಬನಶಂಕರಿ ೨ ನೇ ಹಂತ, ಬೆಂಗಳೂರು - ೫೬೦ ೦೭೦

ರಚನೆಗೊಂಡ ''ವ್ಯವಸಾಯ ಬ್ಯಾಂಕು''ಗಳನ್ನು ಪ್ರಾಯೋಗಿಕವಾಗಿ ಪ್ರಾರಂಭಿಸಲಾಗಿತ್ತು. ಇದು ದೇಶದಲ್ಲಿಯೇ ಒಂದು ಮಾದರಿ ವ್ಯವಸ್ಥೆಯಾಗಿತ್ತು. ಚಿಕ್ಕ ಮತ್ತು ಬಡರೈತರಿಗೆ ಸುಲಭ ದರದಲ್ಲಿ ವ್ಯವಸಾಯ ಸಾಲವನ್ನು ಒದಗಿಸುವದು ಈ ಬ್ಯಾಂಕುಗಳ ಪ್ರಮುಖ ಉದ್ದೇಶವಾಗಿತ್ತು. ಸರ್ ಎಂ. ವಿಶ್ವೇಶ್ವರಯ್ಯನವರ ನಂತರ, ಮಿರ್ಜಾರವರ ಕಾಲದಲ್ಲಿ ಜನಸಾಮಾನ್ಯರ ಹೆಚ್ಚುತ್ತಿರುವ ಬೇಡಿಕೆಗಳಿಗೆ ಸ್ಪಂದಿಸುವಂತೆ ಹೊಸ ಆರ್ಥಿಕ ಚಟುವಟಿಕೆಗಳನ್ನು ಸಹಕಾರಿ ವಲಯದಲ್ಲೂ ಪ್ರಾರಂಭಿಸಲು ಎಲ್ಲಾ ಬಗೆಯ ಉತ್ತೇಜನ ನೀಡಲಾಯಿತು. ೧೯೨೬ರ ಸುಮಾರಿಗೆ ಸಹಕಾರ ವಲಯ ಕೇವಲ ವ್ಯವಸಾಯಪತ್ತಿನ ಸಾಲದ ಸಂಘಗಳಿಗೆ ಸೀಮಿತವಾಗಿತ್ತು ಎಂದು ಅಂಕಿ ಅಂಶಗಳಿಂದ ತಿಳಿದುಬರುವುದು.

೧೯೨೬ರಲ್ಲಿ ರಾಜ್ಯದಲ್ಲಿದ್ದ ಒಟ್ಟು ಸಹಕಾರ ಸಂಘಗಳ ಸಂಖ್ಯೆ ೧೬೦೦ ಆಗಿದ್ದರೆ ಸದಸ್ಯರ ಸಂಖ್ಯೆ ೯೬೦೦೦, ದುಡಿಯುವ ಬಂಡವಾಳ ೩೮½ ಲಕ್ಷ ರೂ. ಆಗಿತ್ತು ಎಂದು ತಿಳಿದು ಬರುವದು. ಸಹಕಾರದ ಅಭಿವೃದ್ಧಿಯನ್ನು ಅದುವರೆಗೆ ಕೇವಲ ಒಂದು ಮಗ್ಗುಲಿನ ಅಭಿವೃದ್ಧಿ ಎಂದು ಭಾವಿಸಲಾಗುತ್ತಿತ್ತು. ಮುಂದಿನ ಎರಡು ವರ್ಷಗಳಲ್ಲಿ ಅಂದರೆ ೧೯೨೮ರಲ್ಲಿ ಸಂಘಗಳ ಸಂಖ್ಯೆ ೧೮೬೭ ಕ್ಕೆ ಹೆಚ್ಚಳಗೊಂಡು, ಸದಸ್ಯರ ಸಂಖ್ಯೆ ೧.೦೭ ಲಕ್ಷಕ್ಕೆ ಹೆಚ್ಚಳಗೊಂಡರೆ ದುಡಿಯುವ ಬಂಡವಾಳ ರೂ. ೧೩೧ ಲಕ್ಷದಷ್ಟಾಗಿತ್ತು ಎಂದು ವರದಿಗಳಿಂದ ತಿಳಿದುಬರುವದು.

ಮಿರ್ಜಾರವರ ಕಾಲದಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಪೂರಕ ಆರ್ಥಿಕ ಚಟುವಟಿಕೆಗಳಾದ ಪತ್ತೇತರ, ವ್ಯವಸಾಯೇತರ, ಅಂದರೆ ಗೃಹನಿರ್ಮಾಣ, ಸಹಕಾರ ಮಾರಾಟ, ಸಂಗ್ರಹಣೆ; ಶಿಕ್ಷಣ, ಜಮೀನು ಅಭಿವೃದ್ಧಿ, ಕೈಗಾರಿಕೆಗಳು, ಹಿಂದುಳಿದವರ ಕಲ್ಯಾಣ, ಅಭಿವೃದ್ಧಿ ಯೋಜನೆಗಳು, ಹೈನುಗಾರಿಕೆ, ರೇಷ್ಮೆ ವ್ಯವಸಾಯ, ಸಹಕಾರಿ ಬೇಸಾಯ ಮುಂತಾದವುಗಳನ್ನು ವ್ಯಾಪಕಗೊಳಿಸ ಲಾಯಿತು. ಇದು ಮಿರ್ಜಾರವರು ತಂದ ಪ್ರಮುಖ ಬದಲಾವಣೆ ಎಂದು ಹೇಳಬಹುದು.

ಮಿರ್ಜಾರವರು ಸಹಕಾರದಷ್ಟೇ ಆಸಕ್ತಿಯನ್ನು ವ್ಯವಸಾಯದ ಅಭಿವೃದ್ಧಿಗೆ ನೀಡಿದ್ದರು. ವ್ಯವಸಾಯಕ್ಕೆ ಮೂಲ ಭೂತವಾದ ನೀರಾವರಿ ಯೋಜನೆಗಳನ್ನು ಒದಗಿಸುವಲ್ಲಿ ಸಮಗ್ರವಾದ ನೀರಾವರಿ ಯೋಜನೆಗಳನ್ನು ನಿರೂಪಿಸಿದ್ದರು. ಅವುಗಳಲ್ಲಿ ಅತ್ಯಂತ ಪ್ರಮುಖವಾದುದು. ಕೃಷ್ಣರಾಜಸಾಗರ ನೀರಾವರಿ ಯೋಜನೆ (೧೯೧೧-೧೯೩೭). ಮಂಡ್ಯ, ಮಳವಳ್ಳಿ, ಟಿ.ನರಸೀಪುರ ತಾಲ್ಲೂಕುಗಳನ್ನು ಒಳಗೊಂಡಂತೆ ೧.೨೦ ಲಕ್ಷ ಎಕರೆ ಭೂಮಿ ಯನ್ನು ನೀರಾವರಿಗೆ ಒಳಪಡಿಸಲಾಯಿತು. ಈ ಭಾಗದಲ್ಲಿ ಸಹಕಾರ ವಲಯದಲ್ಲಿ ಬೇಸಾಯ ಸಂಘ, ಮಾರುಕಟ್ಟೆ ಸಂಘ, ಸಕ್ಕರೆ ಕಾರ್ಖಾನೆಗಳನ್ನು ಪ್ರಾರಂಭಿಸಿಲಾಯಿತು. ''ಸಹಕಾರ ಮತ್ತು ವ್ಯವಸಾಯ ಈ ಎರಡೂ ದೇಶದ ಆರ್ಥಿಕ ವಲಯದ ಪ್ರಮುಖ ಚಟುವಟಿಕೆಗಳಾಗಿದ್ದು ಇವುಗಳು ಪರಸ್ಪರ ಪೂರಕವಾಗುವಂತೆ ಸರಿಯಾಗಿ ದಕ್ಷತೆಯಿಂದ ನಿರ್ದೇಶಿಸಲ್ಪಟ್ಟರೆ ಗ್ರಾಮೀಣ ಪ್ರದೇಶದಲ್ಲಿ ಹೊಸ ಚೈತನ್ಯ ಮೂಡಿ ಗ್ರಾಮೀಣ ಪುನರ್ ನಿರ್ಮಾಣಕ್ಕೆ ಸಹಾಯಕವಾಗುವದೆಂದು ಅವರು ಬಲವಾಗಿ ನಂಬಿದ್ದರು''.

### ಹಿಂದುಳಿದವರ ಅಭಿವೃದ್ಧಿ

ಒಂದು ಅಂದಾಜಿನಂತೆ ೧೯೩೦-೪೦ರ ದಶಕದಲ್ಲಿ ಮೈಸೂರು ರಾಜ್ಯದಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಆರನೇ ಒಂದು ಭಾಗ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದರು. ''ಒಂದು ಸರಪಳಿಯ ಶಕ್ತಿಯನ್ನು ಅದರ ದುರ್ಬಲ ಕೊಂಡಿಗಳಿಂದ ಅಳೆಯಲ್ಪಡುವಂತೆ, ಸಮಾಜದಲ್ಲಿ ದುರ್ಬಲ ವರ್ಗದವರು ಇದುವರೆಗೆ ಇಟ್ಟಂತೆ ಮುಂದೆಯೂ ಇದ್ದರೆ ದೇಶದ ಸಾಮಾನ್ಯ ಪ್ರಗತಿಯಾಗುವುದಿಲ್ಲ ಎಂದು ಅವರು ನಂಬಿದ್ದರು. ಅದರಂತೆ ಹಿಂದುಳಿದವರನ್ನು ಸಹಕಾರಿ ವಲಯದಲ್ಲಿ ತರುವ ಮೂಲಕ ಅವರ ಅಭಿವೃದ್ಧಿಯತ್ತ ಹಲವಾರು ಯೋಜನೆಗಳನ್ನು ರೂಪಿಸಲಾಯಿತು. ಆದಿ ಕರ್ನಾಟಕ ಜನಾಂಗದವರಿಗೆ ವ್ಯವಸಾಯ ವಸಾಹತು (ಕಾಲೋನಿ) ಪ್ರಾರಂಭಿಸಲು ಹಣಕಾಸಿನ ನೆರವನ್ನು ಒದಗಿಸಲಾಯಿತು, ಆದಿ ಕರ್ನಾಟಕ ಸಮಾಜದವರಿಗೆ ಭೂಮಿ ಹಣಕಾಸಿನ ನೆರವು, ಜಾನುವಾರು, ಮಾರ್ಗದರ್ಶನ ಒದಗಿಸ ಲಾಯಿತು. ವಿಶೇಷವಾಗಿ ರೇಷ್ಮೆ ವ್ಯವಸಾಯದಲ್ಲಿ ತೊಡಗಿದವರಿಗೆ ಭೂಮಿ ಮತ್ತು ಹಣಕಾಸಿನ ನೆರವು ನೀಡಲಾಯಿತು. ೧೯೪೦ರ ವರೆಗೆ ಹಿಂದುಳಿದವರ ಸಮಗ್ರ ಅಭಿವೃದ್ಧಿಯ ಯೋಜನೆಗಳು ಸಹಕಾರ ಇಲಾಖೆಯ ಉಸ್ತುವಾರಿಯಲ್ಲಿ ಇದ್ದವು. ೧೯೪೧ರ ನಂತರ ಈ ಕಾರ್ಯವನ್ನು ರೆವಿನ್ಯೂ ಕಮಿಶನರ್ ಅವರಿಗೆ ವಹಿಸಲಾಯಿತು.

### ಗೃಹನಿರ್ಮಾಣ ಯೋಜನೆ

ಇವರ ಕಾಲದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸಹಕಾರಿ ವಲಯದಲ್ಲಿ ಯೋಜಿಸಿದ ಗೃಹ ನಿರ್ಮಾಣ ಯೋಜನೆಯು ಅತ್ಯಂತ ಪ್ರಗತಿಪರ ವಿಚಾರದಿಂದ ಕೂಡಿತ್ತಲ್ಲದೇ ನಿಜವಾದ ಅರ್ಥದಲ್ಲಿ ಸಹಕಾರ, ಸಹಜೀವನ, ಸಾಮರಸ್ಯದಿಂದ ಕೂಡಿದ ಸಮಾಜ ವ್ಯವಸ್ಥೆಯನ್ನು ಬೆಳೆಸುವದಲ್ಲದೆ, ಪರಸ್ಪರ ಪ್ರೀತಿ ವಿಶ್ವಾಸವನ್ನು ಬಿಂಬಿಸುವದಾಗಿತ್ತು. ಇದು ಯುರೋಪಿನ ಅವರ ಅನುಭವದ ಮಾದರಿಯ ಸಹಕಾರಿ ವಸಾಹತು (ಕಾಲೋನಿ) ವ್ಯವಸ್ಥೆಯಾಗಿತ್ತು ಎಂದು ತಿಳಿದು ಬರುವದು. ಗೃಹ ನಿರ್ಮಾಣ ಕೇವಲ ಮನೆಗಳ ನಿರ್ಮಾಣಕ್ಕೆ ಸೀಮಿತವಾಗಿರದೆ ಒಂದು ಆದರ್ಶ ಗ್ರಾಮ ಸಮುದಾಯಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಆಟದ ಮೈದಾನ,

ವಿಶಾಲವಾದ ರಸ್ತೆಗಳು, ಶುದ್ಧವಾದ ಕುಡಿಯುವ ನೀರು, ಗ್ರಾಮನೈರ್ಮಲ್ಯ, ಸಮುದಾಯ ಭವನ, ಪಾಠಶಾಲೆ, ಸಹಕಾರ ಸಂಘ, ವಿವಿಧ ಮತಗಳ ಪೂಜಾಮಂದಿರಗಳು ಮುಂತಾದವುಗಳನ್ನು ಒಳಗೊಂಡಿರುವಂತೆ ಯೋಜಿಸಲಾಗಿತ್ತು. ಆದರೆ ಇಂತಹ ಯೋಜನೆಗಳು ಕಾರ್ಯ ರೂಪದಲ್ಲಿ ಬಂದ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಹಿಂದುಳಿದವರಿಗೆ ವಸತಿ ಒದಗಿಸುವಲ್ಲಿ ಸಹಾಯ ಮಾಡುವ ಗೃಹ ನಿರ್ಮಾಣ ಸಂಘಗಳಿಗೆ ಉಚಿತವಾಗಿ ಸರ್ಕಾರದಿಂದ ನಿವೇಶನಗಳನ್ನು ಒದಗಿಸಲಾಗುತ್ತಿತ್ತು. ಮತ್ತು ಅವರ ಅಭಿವೃದ್ಧಿಗೆ ಶ್ರಮಿಸುವ ಸಮಾಜ ಕಾರ್ಯಕರ್ತರಿಗೆ ಉಚಿತ ರೈಲು ಪಾಸುಗಳನ್ನು ಒದಗಿಸಲಾಗುತ್ತಿತ್ತು.

### ವಿಕೇಂದ್ರಿಕರಣ ಮತ್ತು ದಕ್ಷತೆ

ಮಿರ್ಜಾರವರ ಕಾಲದಲ್ಲಿ ಸಹಕಾರ ಆಡಳಿತ ವ್ಯವಸ್ಥೆಯಲ್ಲಿ ವಿಕೇಂದ್ರಿಕರಣವನ್ನು ತರಲಾಯಿತಲ್ಲದೇ ಆಡಳಿತ ದಕ್ಷತೆಯನ್ನು ಹೆಚ್ಚಿಸಲಾಯಿತು. ಸಹಕಾರ ಸಂಘಗಳ ನಿರ್ವಹಣಾ ವೆಚ್ಚವನ್ನು ಕಡಿಮೆ ಮಾಡಲು ಹಲವಾರು ಕ್ರಮಗಳನ್ನು ಯೋಜಿಸಲಾಯಿತು. ೧೯೩೮ರಲ್ಲಿ ಸಹಕಾರ ಇಲಾಖೆಯ ಆಡಳಿತವನ್ನು ೫ ವಿಭಾಗಗಳಲ್ಲಿ ವಿಂಗಡಿಸಲಾಗಿತ್ತು. ಹಳೆಯ ಸಂಘಗಳ ಬಾಕಿ ವಸೂಲಾತಿಯನ್ನು ಚುರುಕುಗೊಳಿಸಲಾಯಿತು. ಒಬ್ಬನೇ ವ್ಯಕ್ತಿ ಸಾಲ ನೀಡುವ ಹಲವಾರು ಸಂಘಗಳಿಂದ ಸಾಲ ಪಡೆದಿರುವ ಬಹು ಸಂಘಗಳ ಸದಸ್ಯತ್ವವನ್ನು ನಿರ್ಬಂಧಿಸಲಾಯಿತು. ಇಂದಿನ ಸಹಕಾರ ಕಾನೂನಿನಲ್ಲಿಯೂ ಈ ನಿರ್ಬಂಧ ಉಂಟು. ಬಹುದೊಡ್ಡ ಸಾಲಗಳನ್ನು ತೀರಿಸಲು ಅನೇಕ ಬಡ್ಡಿ ರಿಯಾಯಿತಿಗಳನ್ನು ಅನುಸರಿಸಲಾಯಿತು. ಸಹಕಾರ ಸಂಘಗಳ ಲೆಕ್ಕ ತಪಾಸಣೆ, ನಿಯಂತ್ರಣ, ಉಸ್ತುವಾರಿ ಕ್ರಮಗಳನ್ನು ಬಿಗಿಗೊಳಿಸಲಾಯಿತು.

ಹೆಚ್ಚುತ್ತಿರುವ ಸಹಕಾರಿ ವಲಯದ ವ್ಯಾಜ್ಯಗಳನ್ನು ತಡೆಯಲು ಸಹಾಯವಾಗುವಂತೆ ಪ್ರಾರಂಭದಲ್ಲಿಯೇ ಸಾಲಗಾರನ ಅರ್ಜಿಯ ಸೂಕ್ತ ಪರಿಶೀಲನೆ, ಅವನ ಪ್ರಾಮಾಣಿಕತೆ, ಸಾಲದ ಹಣದ ಉಪಯೋಗ, ಮರುಪಾವತಿ ಸಾಮರ್ಥ್ಯ ಮುಂತಾದ ವಿಷಯಗಳನ್ನು ಕುರಿತಂತೆ ನಿಗಾ ವಹಿಸುವಂತೆ ಅಧಿಕಾರಿಗಳಿಗೆ ಸೂಚಿಸಲಾಯಿತು. ಸಹಕಾರ ಸಂಘಗಳ ಆಡಳಿತ ನಿರ್ವಹಣಾ ವೆಚ್ಚವನ್ನು ತಗ್ಗಿಸಲು ಅರಿತ, ನುರಿತ, ಸದಸ್ಯರನ್ನು ಲೆಖ್ಖ ತಪಾಸಣೆ ಮತ್ತು ಮಾರ್ಗದರ್ಶನಕ್ಕೆ ನೇಮಿಸಿಕೊಳ್ಳಲಾಯಿತು ಇವರನ್ನು ಗೌರವ ಸುಪರ್‌ವಾಯಿಸರ್ ಎಂದು ಕರೆಯಲಾಗುತ್ತಿತ್ತು.

### ವ್ಯಕ್ತಿ ವಿಕಸನ ಸಹಕಾರ ಶಿಕ್ಷಣ

ಸಹಕಾರದ ಪ್ರಗತಿಯನ್ನು ಕೇವಲ ಸಂಘಗಳ ಸಂಖೆಯಿಂದ, ಸದಸ್ಯರ ಸಂಖೆಯಿಂದ, ಗುರುತಿಸುವದು ಸರಿಯಾದ ಕ್ರಮದಲ್ಲ. ಸಹಕಾರ ಸಂಸ್ಕೃತಿ ಎಂಬುದು ಕೇವಲ ಅಂಕಿ ಅಂಶಗಳಿಂದ ಬೆಳೆಯುವದಿಲ್ಲ, ಸಹಕಾರ ದೀಕ್ಷೆ ಇಲ್ಲದ ಜನರಿಂದ ಕೂಡಿದ ಸಹಕಾರ ಸಂಸ್ಥೆಗಳು ತಮ್ಮ ಗುರಿಸಾಧನೆಯಲ್ಲಿ ಫಲಪ್ರದವಾಗುವದಿಲ್ಲ. ಸಹಕಾರ ಶಿಕ್ಷಣದ ಉದ್ದೇಶ ಉತ್ತಮ ಸದಸ್ಯ, ಉತ್ತಮ ಬೇಸಾಯಗಾರ, ಉತ್ತಮ ನಾಗರಿಕರ ನಿರ್ಮಾಣ ಮುಂತಾದವುಗಳನ್ನು ಒಳಗೊಂಡಿರುವದು. ಈ ಗುಣಗಳಿಲ್ಲದ ಆರ್ಥಿಕ ಅಭಿವೃದ್ಧಿಯು ನಿಜವಾದ ಆರ್ಥಿಕ ಅಭಿವೃದ್ಧಿಯಲ್ಲ. ಅಂತೆಯೇ ಅವರು ಅಂದು ಪ್ರಾಂತೀಯ ಸಹಕಾರ ಶಿಕ್ಷಣದ ಹೊಣೆಯನ್ನು ನಿರ್ವಹಿಸುತ್ತಿದ್ದ ಸಹಕಾರ ಯೂನಿಯನ್ನಿಗೆ ಅದರ ಪ್ರಮುಖ ಉದ್ದೇಶಗಳಾಗಿದ್ದ ಸಹಕಾರ ಶಿಕ್ಷಣ ಮತ್ತು ಪ್ರಚಾರಕ್ಕೆ ಎಲ್ಲಾ ಅನುಕೂಲತೆಗಳನ್ನು ಒದಗಿಸಿದರು. ೧೯೩೮ರಲ್ಲಿ ಯೂನಿಯನ್ನಿನ ಅಧ್ಯಕ್ಷರಾಗಿದ್ದ ಎಂ. ಶಾಮರಾವ್ ಅವರನ್ನು ಮಿರ್ಜಾರವರು ಮೈಸೂರು ರಾಜ್ಯದಲ್ಲಿ 'ಸಹಕಾರ ಚಳವಳಿಯ ಜನಕ ಎಂದು' ಕರೆದಿರುವರು.

ಪ್ರಾಥಮಿಕ ಸಹಕಾರಿ ಸಂಘಗಳಿಗೆ ಹಣಕಾಸಿನ ನೆರವು, ಸೂಕ್ತ ಮಾರ್ಗದರ್ಶನ ನೀಡಲು 'ಈ ಮೊದಲೆ (೧೯೧೫-೧೬) ಕಡಿತಗೊಂಡಿದ್ದ ಕೇಂದ್ರೀಯ ಹಣಕಾಸು ಸಂಸ್ಥೆಯನ್ನು ಸರ್ಕಾರದ ಉದಾರ ಆರ್ಥಿಕ ನೆರವಿನಿಂದ ಮಿರ್ಜಾರವರು ಇನ್ನಷ್ಟು ಬಲಪಡಿಸಿದರು.

### ಜಮೀನು ಅಡಮಾನ ಬ್ಯಾಂಕುಗಳು

ಬಹುಪಾಲು ರೈತರಿಗೆ ಬೇಕಾಗುವ ಮಧ್ಯಮ ಮತ್ತು ದೀರ್ಘಾವಧಿಯ ಸಾಲದ ಅವಶ್ಯಕತೆಗಳನ್ನು ಪೂರೈಸಲು ಸಹಾಯಕವಾಗುವಂತೆ ಮಿರ್ಜಾರವರ ಕಾಲದಲ್ಲಿ ಜಮೀನು ಅಡಮಾನ (ಅಭಿವೃದ್ಧಿ) ಬ್ಯಾಂಕುಗಳು ಪ್ರಾರಂಭದಲ್ಲಿ ಮಲೆನಾಡು ಪ್ರದೇಶದಲ್ಲಿ (ಸಾಗರ, ಕೊಪ್ಪ) ಪ್ರಾಯೋಗಿಕವಾಗಿ ಪ್ರಾರಂಭಗೊಂಡರೂ ನಂತರ ಇತರೇ ಪ್ರದೇಶಗಳಿಗೂ ವಿಸ್ತರಿಸಲ್ಪಟ್ಟವು; ಈ ಬ್ಯಾಂಕುಗಳಿಗೆ ಸರ್ಕಾರ ಷೇರುಹಣ ಮತ್ತು ಸಾಲ ಪತ್ರಗಳ ಮೂಲಕ ಸಹಾಯ ಮಾಡುತ್ತಿತ್ತು. ೧೯೪೯ರ ಸುಮಾರಿಗೆ ರಾಜ್ಯಾದಂತ ಇಂತಹ ೩೩ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿದ್ದವು. ಈ ಯೋಜನೆ ಮೊದಲಿಗೆ ೧೯೨೮ರಲ್ಲಿ ಪ್ರಾರಂಭವಾಯಿತು.

### ಮಾರಾಟ ಸಹಕಾರ ಸಂಘಗಳು

ಈ ಹಿಂದೆಯೇ ತಿಳಿಸಿದಂತೆ ಮಿರ್ಜಾರವರ ಕಾಲದಲ್ಲಿ ಹೊಸ ಸಹಕಾರ ಸಂಘಗಳ ಸ್ಥಾಪನೆಯಲ್ಲಿ ಸಹಕಾರಿ ಪತ್ತಿನ ಸಂಘಗಳಿಗಿಂತಲು ಪತ್ತೇತರ, ವ್ಯವಸಾಯೇತರ, ಸಂಗ್ರಹಣಾ ಮತ್ತು ಮಾರಾಟ, ಗೃಹನಿರ್ಮಾಣ, ಬೇಸಾಯ ಮುಂತಾದವುಗಳಿಗೆ ಹೆಚ್ಚಿನ ಒತ್ತು ನೀಡಲಾಯಿತು. ವ್ಯವಸಾಯ ಉತ್ಪನ್ನಗಳ ಮಾರಾಟಕ್ಕೆ

ಅದರಲ್ಲಿಯೂ ವಿಶೇಷವಾಗಿ. ತೆಂಗು, ಅಡಿಕೆ, ಬಾಳೆ, ಅಂಜೂರು, ಹಣ್ಣು, ಹತ್ತಿಬೀಜ, ಮೊಟ್ಟೆ ಮುಂತಾದವುಗಳ ಮಾರಾಟಕ್ಕೆ ಸಹಕಾರ ವ್ಯವಸ್ಥೆಯನ್ನು ಬಳಸಿಕೊಳ್ಳಲಾಯಿತು.

ಸಹಕಾರ ವಲಯದಲ್ಲಿ ಬೆಣ್ಣೆಯನ್ನು ಪೂರೈಸಲು ಸಹಾಯಕ ವಾಗುವಂತೆ ೧೯೩೪ರಲ್ಲಿ ಮಂಡ್ಯ, ನಂಜನಗೂಡು, ಚಾಮರಾಜ ನಗರ, ಮದ್ದೂರುಗಳಲ್ಲಿ ಯೋಜಿಸಲಾಯಿತು. ಮಧುಗಿರಿಯಿಂದ ಗ್ರೆನೈಟ್ ಶಿಲೆಗಳನ್ನು, ರಾಮಗೊಂಡನಹಳ್ಳಿಯಲ್ಲಿ ಆಲೂಗಡ್ಡೆ ಯನ್ನು, ಹಿರಿಯೂರಿನಲ್ಲಿ ಬಾಳೆಹಣ್ಣು, ಶ್ರೀರಂಗಪಟ್ಟಣದ ಗಂಜಾಮನಲ್ಲಿ ಅಂಜೂರ ಹಣ್ಣನ್ನು ಸಂಗ್ರಹಿಸಿ ಮಾರಾಟಮಾಡುವ ಸಂಘಗಳನ್ನು ಹುಟ್ಟುಹಾಕಲಾಯಿತು. ವ್ಯವಸಾಯ ಉತ್ಪನ್ನಗಳಿಗೆ ಉತ್ತಮ ಮಾರಾಟ ವ್ಯವಸ್ಥೆಯನ್ನು ಕಲ್ಪಿಸುವಲ್ಲಿ ಇದು ಅತ್ಯಂತ ಪ್ರಮುಖ ಹೆಜ್ಜೆಯಾಗಿತ್ತು.

ಪ್ರಥಮವಾಗಿ ಬೆಂಗಳೂರಿನಲ್ಲಿ ೧೯೨೯-೩೦ರಲ್ಲಿ ಹಾಲು ಪೂರೈಕೆಯ ಸಂಘವು ರಚನೆಗೊಂಡರೆ, ೧೯೩೪ರ ಸುಮಾರಿಗೆ ವಿಮೆ ವ್ಯವಹಾರವನ್ನು ಸಹಾಕರದ ಅಡಿಯಲ್ಲಿ ತರುವ ಪ್ರಯತ್ನ ಮಾಡಲಾಯಿತು ಅಲ್ಲದೇ ಮಲೇರಿಯಾದಂತ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಸಹಕಾರ ವ್ಯವಸ್ಥೆಯನ್ನು ಬಳಸ ಲಾಯಿತು ಎಂದು ವರದಿಗಳಿಂದ ತಿಳಿಯುವದು. ಮೈಸೂರಿನ ಅಡಿಕೆಯನ್ನು ಮದ್ರಾಸ್ ಪ್ರಾಂತ್ಯದಲ್ಲಿ ಮಾರಾಟ ಮಾಡುವ ಸಾಧ್ಯತೆಯನ್ನು ಅಭ್ಯಸಿಸಲು ಅಧಿಕಾರಿಗಳನ್ನು ಕಳಿಸಲಾಯಿತು. ೧೯೩೪ರ ಆಡಳಿತ ವರದಿ ತಿಳಿಸುವಂತೆ, ಸಹಕಾರಿ ಸಂಘಗಳ ಸಂಖ್ಯೆ ಆ ವರ್ಷ ೧೮೪೪ಕ್ಕೆ ಹೆಚ್ಚಿದರೆ, ಸದಸ್ಯರ ಸಂಖ್ಯೆ ೧.೪೮ ಲಕ್ಷ, ಷೇರು ಬಂಡವಾಳ ರೂ. ೫೫.೦೧ ಲಕ್ಷ, ಠೇವಣಿಗಳು ರೂ. ೧೨೪ ಲಕ್ಷ, ಕಾಯ್ದಿಟ್ಟ ನಿಧಿಗಳು ರೂ. ೩೫ ಲಕ್ಷ, ಒಟ್ಟು ವ್ಯವಹಾರ ರೂ. ೯ ಕೋಟಿ ಮತ್ತು ನಿವ್ವಳ ಲಾಭ ರೂ. ೩.೯೩ ಲಕ್ಷ ಎಂದು ತಿಳಿದು ಬರುವರದು.

ಈ ರೀತಿ ಮಿರ್ಜಾರವರ ಆಡಳಿತ ಕಾಲದಲ್ಲಿ ಸಹಕಾರ ಇಲಾಖೆಯು ಗಾತ್ರದಲ್ಲಿ ಬೆಳೆಯುವದಲ್ಲದೇ. ಗುಣಾತ್ಮಕ ವಾಗಿಯೂ ಪ್ರಗತಿಯನ್ನು ಸಾಧಿಸಿತ್ತು. ಈ ಹಲವಾರು ಹೊಸ ಚಾಲನೆಗಳನ್ನು ಪಡೆಯಿತು ಎಂದು ಹೇಳಬಹುದು.

**ಆಧಾರ ಸೂಚಿ**


*೧. ಮಿರ್ಜಾ ಇಸ್ಮಾಯಿಲ್ ಅವರ ಭಾಷಣ ಸಂಪುಟಗಳು (೧೯೨೬-೧೯೪೧)
*೨. ಡಿ. ವಿ. ಗುಂಡಪ್ಪ : *ಮೈಸೂರಿನ ದಿವಾನರು,* (೧೯೭೨)
*೩. ವಿ. ಎಸ್. ನಾರಾಯಣರಾವ್: *ಮಿರ್ಜಾರವರ ಜೀವನಚರಿತ್ರೆ,* (೧೯೭೫)
*೪. *ವಿಷಯ ವಿಶ್ವಕೋಶ,* ಮೈಸೂರು ವಿಶ್ವವಿದ್ಯಾಲಯ (೧೯೭೯)

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ

ಬಸವನಗುಡಿ ರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು-೫೬೦ ೦೧೯

## ೧೯೯೮ನೆಯ ಸಾಲಿನ ವರದಿ

**ಪ್ರಿಯ ಸದಸ್ಯ ಬಂಧುಗಳೇ,**

ಅಕಾದೆಮಿಯ ೧೨ನೆಯ ವಾರ್ಷಿಕ ಸಮ್ಮೇಳನ ಮುಗಿದು ಇನ್ನೂ ಏಳು ತಿಂಗಳು ಪೂರ್ಣಗೊಳ್ಳಲು ಇನ್ನೂ ಮೂರು ದಿನಗಳು ಉಳಿದಿವೆ. ವರ್ಷ ತುಂಬುವ ಮೊದಲೇ ನಾವು ಮತ್ತೆ ಸಮಾವೇಶಗೊಂಡು, ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಹಲವು ವಿಷಯಗಳ ಬಗೆಗೆ ಚರ್ಚಿಸಲು ಮತ್ತು ಇತಿಹಾಸದ ಅಧ್ಯಯನವು ನಿರಂತರವಾಗಿ ಹಾಗೂ ವಿಶಿಷ್ಟವಾಗಿ ಮುಂದುವರಿಯಲು ಮತ್ತು ಐತಿಹಾಸಿಕ ಪರಂಪರೆಯ ರಕ್ಷಣೆ ಕುರಿತು ಆಲೋಚಿಸಲು ಸಜ್ಜಾಗಿದ್ದೇವೆ. ೧೧ ಮತ್ತು ೧೨ನೆಯ ಸಮ್ಮೇಳನಗಳ ನಡುವಿನ ಅಂತರ ಹೆಚ್ಚಾಗಿದ್ದು, ೧೨ ಮತ್ತು ೧೩ನೆಯ ಸಮ್ಮೇಳನದ ನಡುವಿನ ಅಂತರ ಕಡಿಮೆಯಾಗಿದೆ. ಕಳೆದ ೧೯೯೮ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಚಟುವಟಿಕೆಗಳ ಬಗೆಗೆ ತಮಗೆ ತಿಳಿಸುವ ಉದ್ದೇಶದಿಂದ, ಈ ವರದಿಯನ್ನು ಸಿದ್ಧಪಡಿಸಲಾಗಿದೆ.

**ಕರ್ನಾಟಕ ಇತಿಹಾಸ ಲೇಖನದ ಪರಾಮರ್ಶೆ : ವಿಚಾರಸಂಕಿರಣ**

ಕರ್ನಾಟಕ ಇತಿಹಾಸದ ಬಗೆಗಿನ ಸಂಶೋಧನೆಗೆ ಆದ್ಯತೆ ನೀಡುವುದರ ಜೊತೆಗೇ, ಈವರೆಗೆ ಆಗಿರುವ ಅಧ್ಯಯನದ ಬಗೆಗೆ ಪರಾಮರ್ಶೆಯೂ ಆಗಬೇಕೆಂಬುದು ಅಕಾದೆಮಿಯ ಆಶಯಗಳಲ್ಲೊಂದು. ಆ ಪ್ರಕಾರವೇ ಈವರೆಗೆ ಹಲವಾರು ಕಾರ್ಯಕ್ರಮಗಳನ್ನು ನಡೆಸಿರುವ ಅಕಾದೆಮಿಯು ೧೯೯೮ರ ಜುಲೈ ೧೧ನೆಯ ತಾರೀಕು ಇಡೀ ದಿನ, ಬೆಂಗಳೂರು ಮಿಥಿಕ್ ಸೊಸೈಟಿಯ ಸಹಯೋಗದೊಂದಿಗೆ **ಕರ್ನಾಟಕ ಇತಿಹಾಸ ಲೇಖನದ ಪರಾಮರ್ಶೆ** ಎಂಬ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು.

ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ, ಮಿಥಿಕ್ ಸೊಸೈಟಿಯಲ್ಲಿ ಬೆಳಗು ೧೦ ಘಂಟೆಗೆ ನಡೆದ ವಿಚಾರ ಸಂಕಿರಣ ಕಾರ್ಯಕ್ರಮದ ಉದ್ಘಾಟನೆಯನ್ನು ಖ್ಯಾತ ಅರ್ಥಶಾಸ್ತ್ರಜ್ಞ ಡಾ॥ ಜಿ. ತಿಮ್ಮಯ್ಯ ಅವರು ಮಾಡಿದರು. ಖ್ಯಾತ ಸಂಶೋಧಕರಾದ ಡಾ॥ ಎಂ. ಚಿದಾನಂದಮೂರ್ತಿ ಅವರು ಮಾರ್ಗಸೂಚಿ ಭಾಷಣ ಮಾಡಿದರು.

ಈವರೆಗೆ ಕರ್ನಾಟಕ ಇತಿಹಾಸದ ಬಗೆಗೆ ಆಗಿರುವ ಲೇಖನ ಕಾರ್ಯದ ಬಗೆಗೆ ಡಾ॥ ಪ್ರತಿಭಾ ಚೆನ್ನಪ್ಪ, ಡಾ॥ ಜ್ಯೋತ್ಸ್ನಾ ಕಾಮತ್, ಶ್ರೀ ಎಂ. ಜಿ. ನಾಗರಾಜ್, ಡಾ॥ ಎಸ್. ಎಚ್. ರಿತ್ತಿ, ಡಾ॥ ಹೆಚ್. ಆರ್. ರಘುನಾಥ ಭಟ್ ಮತ್ತು ಡಾ॥ ಎಸ್. ನಾಗರಾಜು ಅವರ ಅಧ್ಯಕ್ಷತೆಯಲ್ಲಿ ನಡೆದ ಆರು ವಿವಿಧ ಗೋಷ್ಠಿಗಳಲ್ಲಿ ಇತಿಹಾಸ ಪೂರ್ವಕಾಲದಿಂದ ಆಧುನಿಕ ಕಾಲದ ಇತಿಹಾಸದವರೆಗೆ ನಡೆದಿರುವ ಅಧ್ಯಯನವನ್ನು ಇಪ್ಪತ್ತುಜನ ವಿದ್ವಾಂಸರು ಪರಾಮರ್ಶೆ ಮಾಡಿದರು.

**ಐತಿಹಾಸಿಕ ಪರಂಪರೆ ಉಳಿಸಿ – ೧೯೯೮**

೧೬-೮-೧೯೯೮, ಭಾನುವಾರ ಸಂಜೆ ೬-೦೦ ಘಂಟೆಗೆ ಬೆಂಗಳೂರಿನ ವೆಂಕಟಪ್ಪ ಆರ್ಟ್ ಗ್ಯಾಲರಿಯ ಸಭಾಭವನದಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ಸಹಯೋಗದೊಂದಿಗೆ ೧೯೯೮ನೆಯ ಸಾಲಿನ **ಐತಿಹಾಸಕ ಪರಂಪರೆ ಉಳಿಸಿ** ಸಪ್ತಾಹ ಕಾರ್ಯಕ್ರಮದ ಉದ್ಘಾಟನಾ ಸಮಾರಂಭ ನಡೆಯಿತು.

ಸಪ್ತಾಹವನ್ನು ಕನ್ನಡ, ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಇಲಾಖೆಗಳ ರಾಜ್ಯಸಚಿವೆಯರಾದ ಮಾನ್ಯ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು, ಈ ವರ್ಷಕ್ಕೆಂದೇ ವಿಶೇಷವಾಗಿ ಸಿದ್ಧಪಡಿಸಿದ ಭಿತ್ತಿಪತ್ರಗಳ ಅನಾವರಣ ಮಾಡುವುದರ ಮೂಲಕ ಉದ್ಘಾಟಿಸಿದರು. ನ್ಯಾಯಮೂರ್ತಿ ಶ್ರೀ ಎ. ಜೆ. ಸದಾಶಿವ ಮಾರ್ಗಸೂಚಿ ಭಾಷಣ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರು ವಹಿಸಿದ್ದು, ಸಮಾರಂಭದಲ್ಲಿ ಪುರಾತತ್ವ ಇಲಾಖೆಯ ನಿರ್ದೇಶಕರಾದ ಶ್ರೀ ಎಂ.ಎಲ್. ಶಿವಶಂಕರ್ ಉಪಸ್ಥಿತರಿದ್ದರು. ಈ ಬಾರಿಯೂ ಪುರಾತತ್ವ ಇಲಾಖೆಯು 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಕ್ಕೆ ಆರ್ಥಿಕ ನೆರವು ನೀಡಿ ಸಹಕರಿಸಿದೆ.

ಬೆಂಗಳೂರಿನಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದ ಉದ್ಘಾಟನೆಯ ನಂತರ ರಾಜ್ಯದ ವಿವಿಧ ಸ್ಥಳಗಳಲ್ಲಿ ನಡೆದಿರುವ ಕಾರ್ಯಕ್ರಮಗಳ ವಿವರಗಳು ಈ ಕೆಳಕಂಡಂತಿವೆ. ಇನ್ನೂ ಅನೇಕ ಸ್ಥಳಗಳಲ್ಲಿ ಕಾರ್‍ಯಕ್ರಮಗಳು ನಡೆದಿದ್ದರೂ ನಮಗೆ ಅಧಿಕೃತ ವರದಿಗಳು ಬಂದಿಲ್ಲ. ಸದ್ಯ ಬಂದಿರುವಷ್ಟನ್ನು ಮುಂದಿನಂತೆ ಪ್ರಕಟಿಸಲಾಗಿದೆ.

# 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಗಳ ಪಟ್ಟಿ ೧೯೯೮-೯೯

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು/ಅಧ್ಯಕ್ಷರು/ಅತಿಥಿಗಳು/ಸಂಚಾಲಕರು | ಇತರ ವಿಷಯಗಳು |
|---|---|---|---|
| | | ಸರ್ವಶ್ರೀ | |
| ೧೭-೮-೯೮ | ವೆಂಕಟಪ್ಪ ಕಲಾಶಾಲೆ, ಬೆಂಗಳೂರು | ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್<br>*( ಕನ್ನಡ ಸಂಸ್ಕೃತಿ ಯುವಜನ ಇಲಾಖಾ ಸಚಿವೆ )*<br>ಡಾ ॥ ಸೂರ್ಯನಾಥ ಕಾಮತ್ | ರಾಜ್ಯಪುರಾತತ್ತ್ವ ಇಲಾಖೆಯ ಸಹಯೋಗ |
| ೧೭-೮-೯೮ | ಜಿ. ವಿ. ವಿ. ಪಿ.<br>ಸರ್ಕಾರಿ ಪ್ರಥಮದರ್ಜೆ ಕಾಲೇಜು<br>ಹಗರಿಬೊಮ್ಮನಹಳ್ಳಿ | ಹಿ. ಮ. ಗುರುಬಸವರಾಜ<br>*( ಪ್ರಾಚಾರ್ಯರು, ಇಟಗಿ )*<br>ಐ. ಬಸವರಾಜು, *( ಪ್ರಾಚಾರ್ಯರು )* | |
| ೧೭-೮-೯೮ | ನಗರ ಮನೋರಂಜನಾ ಕೇಂದ್ರ<br>ಹರಪನಹಳ್ಳಿ | ಬಿ. ವಿ. ವೀರಭದ್ರಪ್ಪ<br>ಎಸ್.ಎಚ್. ಪಟೇಲ್<br>*( ನಿವೃತ್ತ ಪ್ರಾಚಾರ್ಯರು, ದಾವಣಗೆರೆ )* | ಕುಂ.ಬಾ. ಸದಾಶಿವಪ್ಪನವರ ನಿಯೋಜನೆ |
| ೧೭-೮-೯೮ | ಪ್ರಾಥಮಿಕ ಶಾಲೆ, ತಂಬಾಹಳ್ಳಿ | ಶ್ರೀಮತಿ ಜಯಲಕ್ಷ್ಮಿ<br>*( ಮುಖ್ಯೋಪಾಧ್ಯಯಿನಿ )* | |
| ೧೮-೮-೯೮ | ರಾಷ್ಟ್ರೋತ್ಥಾನ ಪ್ರೌಢಶಾಲೆ<br>ಹಗರಿಬೊಮ್ಮನಹಳ್ಳಿ | ಶ್ರೀ ಕೆ. ಕೃಷ್ಣಮೂರ್ತಿ<br>*( ಮುಖ್ಯೋಪಾಧ್ಯಾಯರು )*<br>ಕೆ. ಪನ್ನಂಗಧರ<br>ತೂ. ಕ. ಶಂಕರಯ್ಯ ಮತ್ತು ಕೆ. ಸತೀಶ್ | |
| ೧೮-೮-೯೮ | ಸ. ಹಿ. ಪ್ರಾ. ಶಾಲೆ ಅರಸನಾಳು | ಎ. ಗುಡ್ಡಪ್ಪ<br>ಪ್ರಸಾದಯ್ಯ ಕಬ್ಬಿಣಕಂತಿಮಠ | |
| ೧೮-೮-೯೮ | ಸ.ಮಾ.ಹಿ ಪ್ರೌಢಶಾಲೆ, ಕುಂಚೂರು | ಜಿ. ಕೋಟೆಪ್ಪ<br>ಎಲ್. ಆರ್. ರಂಗಪ್ಪ | |
| ೧೮-೮-೯೮ | ವಾಚನಾಲಯ, ತಂಬಾಹಳ್ಳಿ | ಚಿದಾನಂದ | |
| ೧೮-೮-೯೮ | ವಿಜಯನಗರ ಕಾಲೇಜು<br>ಹೊಸಪೇಟೆ | ಪ್ರೊ ॥ ಜಿ. ಎಂ. ಗುರುಬಸವರಾಜ್<br>*( ಪ್ರಾಚಾರ್ಯರು )*<br>ಪ್ರೊ ॥ ಬಿ. ಎಸ್. ಭಾಸ್ಕರ್ | |
| ೧೯-೮-೯೮ | ಕೆ. ಪಿ. ಸರ್ಕಾರಿ ಪ್ರೌಢಶಾಲೆ<br>ಹಗರಿಬೊಮ್ಮನಹಳ್ಳಿ | ಕೆ. ಚಂದ್ರಸೇನ್<br>*(ಮುಖ್ಯೋಪಾಧ್ಯಾಯರು )*<br>ಶ್ರೀಮತಿ ಸುಧಾ ಚಿದಾನಂದಗೌಡ | |
| ೧೯-೮-೯೮ | ಶ್ರೀ ನಾರದಮುನಿ ಪ್ರೌಢಶಾಲೆ<br>ಚಿಗಟೇರಿ | ಭೀಮಪ್ಪ<br>ಐ. ಬಸವರಾಜು | |
| ೧೯-೮-೯೮ | ಬಾಲಕಿಯರ ಸರ್ಕಾರಿ<br>ಪ.ಪೂ. ಕಾಲೇಜು, ಹೊಸಪೇಟೆ | ಡಿ. ರಾಜಗೋಪಾಲರಾವ್, *( ಪ್ರಾಚಾರ್ಯರು )*<br>ಪ್ರೊ ॥ ಎಚ್. ಎಂ. ಚಂದ್ರಶೇಖರಶಾಸ್ತ್ರಿ<br>( ವಿಜಯನಗರ ಕಾಲೇಜು, ಹೊಸಪೇಟೆ)<br>ವಿ. ಪ್ರಾಣೇಶ್‌ರಾವ್, ಹೊಸಪೇಟೆ | |
| ೨೦-೮-೯೮ | ಇಂದಿರಾಗಾಂಧಿ ಪ್ರೌಢಶಾಲೆ<br>ಹಗರಿಬೊಮ್ಮನಹಳ್ಳಿ | ಕೆ. ಪ್ರಕಾಶ್, *( ಮುಖ್ಯೋಪಾಧ್ಯಾಯರು )* | |
| ೨೦-೮-೯೮ | ಟಿ. ಎಂ. ಎ. ಇ. ಸಂಸ್ಥೆ ಪ್ರೌಢಶಾಲೆ<br>ಹರಪನಹಳ್ಳಿ | ಜಿ. ಮಲ್ಲಿಕಾರ್ಜುನ<br>ಎಂ.ಪಿ. ಬಸವಲಿಂಗನ ಗೌಡ<br>ಎಂ. ಪಿ. ಎಂ. ಶಾಂತವೀರಯ್ಯ | |
| ೨೦-೮-೯೮ | ಸರಕಾರಿ ಪ್ರೌಢಶಾಲೆ<br>ಅನಂತಶಯನಗುಡಿ | ಎಂ. ಶಂಕ್ರಪ್ಪ, *( ಮುಖ್ಯ ಗುರುಗಳು )*<br>ಪ್ರೊ ॥ ವಿಜಯಕುಮಾರ್, ಕೆ ಭೀಮಸೇನರಾವ್ | |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು/ಅಧ್ಯಕ್ಷರು/ಅತಿಥಿಗಳು/ಸಂಚಾಲಕರು | ಇತರ ವಿಷಯಗಳು |
|---|---|---|---|
| | | ಸರ್ವಶ್ರೀ | |
| ೨೦-೮-೯೮ | ಪ್ರೌಢಶಾಲೆ ಮತ್ತು ಪ.ಪೂ. ಕಾಲೇಜು, ತಂಬಾಹಳ್ಳಿ | ಸತೀಶ್ | |
| ೨೧-೮-೯೮ | ಮಹಾವಿದ್ಯಾಲಯ, ಕಲ್ಬುರ್ಗಿ | ನರಲಾ ಬಾಲರೆಡ್ಡಿ | ರಾಷ್ಟ್ರಕೂಟರ ಸಾಂಸ್ಕೃತಿಕ ಕೊಡುಗೆಗಳು ಬಗೆಗೆ ಪ್ರಬಂಧ ಸ್ಪರ್ಧೆ ನಡೆಸಲಾಗಿದೆ. |
| ೨೧-೮-೯೮ | ಸ. ಹಿ. ಪ್ರ. ಶಾಲೆ, ಹರಪನಹಳ್ಳಿ | ಶ್ರೀಮತಿ ಸುಭದ್ರ ಮಾಡ್ಲಿಗೇರಿ<br>ಎಂ. ಪಿ. ಎಂ. ದಯಾನಂದಸ್ವಾಮಿ | |
| ೨೧-೮-೯೮ | ಥಿಯಾಸಾಫಿಕಲ್ ಮಹಿಳಾಕಾಲೇಜು ಹರಪನಹಳ್ಳಿ | ಶ್ರೀಮತಿ ಉಷಾರಾಣಿ ಶರ್ಮ<br>ಪ್ರೊ॥ ಇಟಗಿ ಈರಣ್ಣ | |
| ೨೧-೮-೯೮ | ಗಂ. ಭೀ. ಪದವಿಪೂರ್ವ ಕಾಲೇಜು ಹಗರಿಬೊಮ್ಮನಹಳ್ಳಿ | ಹೆಚ್. ಎಂ. ಶಿವಪ್ಪ ,(ಪ್ರಾಚಾರ್ಯರು)<br>ಶ್ರೀಮತಿ ಪದ್ಮಾ ವಿಠಲ್ | ನಿಯೋಜನೆ, ಶ್ರೀ ಗುರುಮೂರ್ತಿ ಪೆಂಡಕೂರು |
| ೨೨-೮-೯೮ | ಶ್ರೀ ಮುರುಳಿ ಪ. ಪೂ. ಕಾಲೇಜು ಮತ್ತು ವೃತ್ತಿಶಿಕ್ಷಣ ಕಾಲೇಜು ನೆಲಮಂಗಲ | ಹೆಚ್. ಬಿ. ಪ್ರಕಾಶ್, (ಪ್ರಾಂಶುಪಾಲರು)<br>ಎಸ್. ರಾಜೇಂದ್ರಪ್ಪ<br>ಡಾ॥ ಎಚ್. ಎಸ್. ಗೋಪಾಲರಾವ್ | ಇದರ ಅಂಗವಾಗಿ ಜನಜಾಗೃತಿ ಜಾಥಾ ವನ್ನು ಏರ್ಪಡಿಸಿದ್ದರು. |
| ೨೨-೮-೯೮ | ರೇಣುಕಾ ಸಮನ್ವಯ ಪ.ಪೂ. ಕಾಲೇಜು ಹಗರಿಬೊಮ್ಮನಹಳ್ಳಿ | ಶ್ರೀಮತಿ ಇಂದುಮತಿ, (ಪ್ರಾಚಾರ್ಯರು)<br>ಚೆಲುವರಾಜು, ಕನ್ನಡ ವಿ. ವಿ. ಹಂಪಿ | ನಿಯೋಜನೆ ಶ್ರೀ ಗುರುಮೂರ್ತಿ ಪೆಂಡಕೂರು |
| ೨೨-೮-೯೮ | ಪಿ. ವಿ. ಎಸ್. ಬಿ ಸಿ. ಪದವಿ ಪೂರ್ವ ಕಾಲೇಜು, ಹೊಸಪೇಟೆ | ವಸಂತರಾವ್ ದೇಸಾಯಿ,(ಪ್ರಾಚಾರ್ಯರು)<br>ಪ್ರೊ॥ ಟಿ. ಪರಮೇಶ್ವರಪ್ಪ<br>ಡಾ॥ ಮೃತ್ಯುಂಜಯ ರುಮಾಲೆ<br>(ವಿಜಯನಗರ ಕಾಲೇಜು, ಹೊಸಪೇಟೆ) | |
| ೨೪-೮-೯೮ | ಗವಿಸಿದ್ಧೇಶ್ವರ ಪ್ರೌಢಶಾಲೆ ಮತ್ತು ಕಾಳಿದಾಸ ಪ್ರೌಢಶಾಲೆ ಕೊಪ್ಪಳ | ಪಿ. ಡಿ. ಬಡಿಗೇರ<br>ಎಚ್. ಎಸ್. ಪಾಟೀಲ್<br>ಗವಿಸಿದ್ಧಪ್ಪ ಕೊಪ್ಪಳ | ನಗರದ ಪ್ರಮುಖ ಬೀದಿಗಳಲ್ಲಿ ಪ್ರಭಾತ್‌ಪೇರಿ ನಡೆಸಿ, ಜಿಲ್ಲಾಧಿಕಾರಿ ಗಳಿಗೆ ಐತಿಹಾಸಿಕ ಸ್ಮಾರಕಗಳನ್ನು ರಕ್ಷಿಸುವಂತೆ ಮನವಿಪತ್ರ ಸಲ್ಲಿಸಿದ್ದಾರೆ. |
| ೨೭-೮-೯೮ | ಸರಕಾರಿ ಕಿರಿಯ ಮಹಾವಿದ್ಯಾಲಯ ವಿಜಯಪುರ | ಸಿ. ಎಂ. ವೀರಣ್ಣ<br>ಡಾ॥ ಎಚ್. ಎಸ್. ಗೋಪಾಲರಾವ್<br>ಎಲ್ಲೇಗೌಡ ಬೆಸಗರಹಳ್ಳಿ<br>ಯಲ್ಲಪ್ಪ ದೃಶ್ಯಾವಂತರ್<br>ಎ. ವೀರಶೆಟ್ಟಪ್ಪನವರು | |
| ೨೭-೮-೯೮ | ವಿಜಯ ಯುವಕ ಸಂಘ ಸಂತೆಬೆನ್ನೂರು | ಶ್ರೀಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮೀಜೀ, ಚೆಕ್ಕಿನ ಕಲ್ಮಠ<br>ಡಾ॥ ಕೆಳದಿ ವೆಂಕಟೇಶ ಜೋಯ್ಸ್<br>ಜಯದೇವಪ್ಪ ಜೈನಕೇರಿ | ಶ್ರೀ ಎಸ್. ರಾಮಚಂದ್ರ ಕಾರಂತರವರು ಪ್ರಾಚೀನ ನಾಣ್ಯಪ್ರದರ್ಶನ ನಡೆಸಿದ್ದರು ರಾಜ್ಯ ಪುರಾತತ್ವ ಇಲಾಖೆಯ ವತಿ ಯಿಂದ ಛಾಯಾಚಿತ್ರ ಪ್ರದರ್ಶನ ಏರ್ಪಡಿಸಲಾಗಿತ್ತು |
| ೨೭-೮-೯೮ | ಖಾಸಗಿ ಪ್ರೌಢಶಾಲೆ, ಚಿತ್ತಾಪುರ ಗುಲ್ಬರ್ಗ ಜಿಲ್ಲೆ | ವಿಶ್ವನಾಥ ಜೆ. ಪತಂಗೆ | |
| ೩೦-೮-೯೮ | ದೇವಲಾಪುರ | ಎಂ. ಜಿ. ಶ್ರೀರಾಮ್, (ಪ್ರಾಂಶುಪಾಲರು)<br>ಗವಿಗೌಡರು ಸಣ್ಣ ಬೋರೆಗೌಡರು | |
| ೩೦-೮-೯೮ | ಕಮಲಾಬಾಯಿ ಪ್ರೌಢಶಾಲೆ ಕಡಿಯಾಳ, ಉಡುಪಿ | ಶ್ರೀಮತಿ ಐಸಾಬಿ, (ಮುಖ್ಯೋಪಾಧ್ಯಾಯಿನಿ)<br>ಡಾ॥ ಪಿ. ಎನ್. ನರಸಿಂಹಮೂರ್ತಿ | ಶಾಲಾ ಇಂಟರ್ ಆರ್ಟ್ಸ್ ಕಾರ್ಯಕ್ರಮ ದೊಂದಿಗೆ ಈ ಕಾರ್ಯಕ್ರಮವನ್ನು ನಡೆಸಲಾಯಿತು |

| ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು/ಅಧ್ಯಕ್ಷರು/ಅತಿಥಿಗಳು/ಸಂಚಾಲಕರು | ಇತರ ವಿಷಯಗಳು |
|---|---|---|---|
| | | ಸರ್ವಶ್ರೀ | |
| ೧-೯-೯೮ | ಸರಕಾರಿ ಪ್ರೌಢಶಾಲೆ<br>ನಾಗತಿ ಬಸಾಪುರ, ಹೂವಿನ ಹಡಗಲಿ | ಡಿ. ಬಿ. ಬಡಿಗೇರ<br>ಎಂ. ಪಿ. ಎಂ. ಶಿವಪ್ರಕಾಶ್ | |
| ೨-೯-೯೮ | ವಿ. ಕೆ. ಕೆ. ಸರಕಾರಿ ಪ. ಪೂ.<br>ಮಹಾವಿದ್ಯಾಲಯ, ಹಿರೇಹಡಗಲಿ | ಎಂ. ಎಂ. ಗುರುಬಸವರಾಜು<br>( ಪ್ರಾಚಾರ್ಯರು )<br>ದಯಾನಂದ ಕಿನ್ನಾಳ | |
| ೩-೯-೯೮ | ಜ್ಞಾನಗಂಗಾ ಪ್ರೌಢಶಾಲೆ<br>ಹೂವಿನ ಹಡಗಲಿ | ಹೆಚ್. ವಿಶ್ವನಾಥ್<br>ಶ್ರೀಮತಿ ಆರ್. ಸುಚಿತ್ರಾ | |
| ೪-೯-೯೮ | ಸೊ. ಕಾ. ಬಾಲಕಿಯರ ಸಂ. ಪ. ಪೂ.<br>ಕಾಲೇಜು, ಹೂವಿನ ಹಡಗಲಿ | ಎಸ್. ಪಿ. ಸುರೇಶ್‌ಬಾಬು<br>( ಪ್ರಾಚಾರ್ಯರು )<br>ವಿಜಯಕುಮಾರ್<br>( ಡಿ ಪಿ ಇ ಪಿ ಅಧಿಕಾರಿಗಳು ) | |
| ೫-೯-೯೮ | ಕನ್ನಡ ಸಾಹಿತ್ಯ ಭವನ, ಬೆಳಗಾವಿ | ಎಸ್. ಎಂ. ಕುಲಕರ್ಣಿ<br>( ನ್ಯಾಯವಾದಿಗಳು )<br>ಡಾ॥ ಎಸ್. ರಾಜಶೇಖರಯ್ಯ<br>( ಕುಲಪತಿಗಳು ) | ಈ ಸಂದರ್ಭದಲ್ಲಿ ಮಾನ್ಯ ಸಚಿವರಾದ ಶ್ರೀ ಬಾಬಾಗೌಡ ಪಾಟೀಲರನ್ನು ಸನ್ಮಾನಿಸಲಾಯಿತು |
| ೬-೯-೯೮<br>೭-೯-೯೮ | ಸರಕಾರಿ ಪ. ಪೂ. ಕಾಲೇಜು<br>ಮಾಗಡಿ | ಶ್ರೀ ಸಂಪತ್ ( ಪ್ರಾಚಾರ್ಯರು )<br>ಶ್ರೀಮತಿ ಕಲ್ಪನಾ ಶಿವಣ್ಣ<br>ಜೆ. ಟಿ. ಜಯರಾಮಯ್ಯ | |
| ೬-೯-೯೮ | ಎಸ್. ಆರ್. ವಿ. ಸಭಾಂಗಣ<br>ಜಮಖಂಡಿ | ಡಾ॥ ಎಸ್. ಆರ್. ಮಾದಣ್ಣ<br>( ರೋಟರಿ ಕ್ಲಬ್ ಅಧ್ಯಕ್ಷರು )<br>ಕೇಶವ ಮೂರ್ತಿ | ಈ ಸಂದರ್ಭದಲ್ಲಿ ಅನಂತಜೋಶಿ ಯವರ 'ಗುರುಚರಿತ ರತ್ನಾವಳಿ' ಪುಸ್ತಕವನ್ನು ಬಿಡುಗಡೆ ಮಾಡಲಾಯಿತು |
| ೭-೯-೯೮ | ಡಾ॥ ಪಿ. ಬಿ. ದೇಸಾಯಿ ವೇದಿಕೆ<br>ಮಹಾದೇವ ದೇವಾಲಯ ನವರಂಗ<br>ಇಟಗಿ | ಡಾ॥ ದೇವರ ಕೊಂಡಾರೆಡ್ಡಿ<br>ಈಶಪ್ಪ ಗುಳಗಣ್ಣನವರು<br>ಪ್ರೊ॥ ಲಕ್ಷ್ಮಣ ಅಳವಂಡಿ | ಶ್ರೀ ಎ. ಟಿ. ಕಲ್ಮಠರವರು ವಾಸ್ತುಶಿಲ್ಪ ಚಿತ್ರಪ್ರದರ್ಶನ ಏರ್ಪಡಿಸಿದ್ದರು. |
| ೮-೯-೯೮ | ನಗರದ ಚೌಕ, ಹೊಳೆಆಲೂರು | ಎಂ. ಎನ್. ಕಡಪಟ್ಟಿ | |
| ೮-೯-೯೮ | ಹಿರಿಯ ಪ್ರಾಥಮಿಕ ಶಾಲೆ<br>ಚೌಡದಾನಪುರ, ರಾಣೆಬೆನ್ನೂರು | ಜೆ. ಎಂ. ಮಠದ್<br>( ರಾಜ್ಯಪ್ರಶಸ್ತಿ ವಿಜೇತ ಶಿಕ್ಷಕರು ) | 'ಶ್ರೀ ವೀರೇಂದ್ರ ಗುತ್ತಲ' ಅವರಿಗೆ ಸನ್ಮಾನ ಮಾಡಲಾಯಿತು |
| ೧೭-೯-೯೮ | ಶ್ರೀನೀಲಕಂಠ ಪ್ರೌಢಶಾಲೆ<br>ಆಸುಂಡಿ, ರಾಣೆಬೆನ್ನೂರು | ಶ್ರೀಮತಿ ಲಲಿತಾ ಸಿ.ಕಳ್ಳಿಹಾಳ<br>( ಅಧ್ಯಕ್ಷ ಗ್ರಾ. ಪಂ. ಆಸುಂಡಿ )<br>ಸಿ.ಎನ್. ಜಗದೇವನವರ್<br>ಶ್ರೀಮತಿ ವಿಜಯಕುಮಾರಿ ಪುನಿತ್ | |
| ೨೦-೯-೯೮ | ಬೇಂದ್ರೆ ಕುಟೀರ, ಹುಬ್ಬಳ್ಳಿ | ಡಾ॥ ವಾಮನ ಬೇಂದ್ರೆ<br>ಡಾ॥ ಎಚ್. ಆರ್. ರಘುನಾಥಭಟ್<br>ಶ್ರೀ ಜಿ. ಕೃಷ್ಣಪ್ಪ | |
| ೨-೧-೯೯ | ಬಸವೇಶ್ವರ ಪ್ರಥಮದರ್ಜೆ<br>ಕಾಲೇಜು, ಬೆಂಗಳೂರು | ಹೆಚ್. ಎಸ್. ರೇಣುಕಾಪ್ರಸಾದ್<br>( ಅಧ್ಯಕ್ಷರು, ಕಾಲೇಜು ಅಭಿವೃದ್ಧಿಯ ಪರಿಷತ್ತು )<br>ಡಾ॥ ಸೂರ್ಯನಾಥ ಕಾಮತ್<br>ಎಂ. ಬಿ. ಸಜ್ಜನ್<br>( ಅಧ್ಯಕ್ಷರು, ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘ ) | ಈ ಕಾರ್ಯಕ್ರಮದೊಂದಿಗೆ ಚಿತ್ರ ಮತ್ತು ವಸ್ತು ಪ್ರದರ್ಶನವನ್ನು ಅಡ್ವೆಂಚರರ್ಸ್ ಕ್ಲಬ್ ಏರ್ಪಡಿಸಿತ್ತು. |

## ಹನ್ನೆರಡನೆಯ ವಾರ್ಷಿಕ ಸಮ್ಮೇಳನ

ಅಕಾದೆಮಿಯ ೧೨ನೆಯ ವಾರ್ಷಿಕ ಸಮ್ಮೇಳನವು ೧೪-೧೧-೯೮ ರಿಂದ ೧೬-೧೧-೯೮ ರವಗೆ ಮೂರೂ ದಿನಗಳು ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ನಡೆಯಿತು. ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸಭಾಪತಿಗಳಾದ ಶ್ರೀ ಡಿ. ಬಿ. ಕಲ್ಮಣಕರ್ ಅವರು ೧೪-೧೧-೯೮ರಂದು ಬೆಳಿಗ್ಗೆ ೧೦ ಘಂಟೆಗೆ ಸಮ್ಮೇಳನವನ್ನು ಉದ್ಘಾಟಿಸಿ, ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಕುರಿತಂತೆ ಇನ್ನೂ ಸಾಕಷ್ಟು ಅಧ್ಯಯನಕ್ಕೆ ಅವಕಾಶಗಳಿರುವುದನ್ನು ಪ್ರಸ್ತಾಪಿಸಿ, ಅಂತಹ ಅಧ್ಯಯನಗಳು ಆಕರಗಳು ನಶಿಸುವ ಮೊದಲೇ ಆಗಬೇಕಾಗಿವೆ ಎಂದು ತಿಳಿಸಿದರು.

ಅಕಾದೆಮಿಯ ಉಪಾಧ್ಯಕ್ಷ ಶ್ರೀ ಎಂ. ಜಿ. ನಾಗರಾಜ್ ಮತ್ತು ಶ್ರೀ ಪಿ. ವಿ. ಕೃಷ್ಣಮೂರ್ತಿ ಸಂಪಾದಿತ, ಅಕಾದೆಮಿಯ ವಾರ್ಷಿಕ ವಿದ್ವತ್‌ಸಂಪುಟವಾದ **ಇತಿಹಾಸ ದರ್ಶನ** ೧೩/೧೯೯೮ ನೇ ಸಂಪುಟವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ॥ ಎನ್.ಬಸವಾರಾಧ್ಯರು ಬಿಡುಗಡೆ ಮಾಡಿದರು.

ಕರ್ನಾಟಕದ ಪ್ರಮುಖ ಇತಿಹಾಸಕಾರರಲ್ಲಿ ಒಬ್ಬರಾದ ಡಾ॥ ಕೆ. ಜಿ. ವಸಂತ ಮಾಧವ ಅವರ **ಕರಾವಳಿ ಕರ್ನಾಟಕದ ಇತಿಹಾಸ ಅಧ್ಯಯನ** ಎಂಬ ಕೃತಿಯನ್ನು ಅಕಾದೆಮಿಯ ಗೌರವಾಧ್ಯಕ್ಷರಾದ ಡಾ॥ ಜಿ. ಎಸ್. ದೀಕ್ಷಿತ್ ಅವರು ಬಿಡುಗಡೆ ಮಾಡಿದರು.

ಹೈದರಾಬಾದ್ ವಿಶ್ವವಿದ್ಯಾಲಯ ನಿವೃತ್ತ ಪ್ರಾಧ್ಯಾಪಕರೂ, ಕರ್ನಾಟಕದ ಇತಿಹಾಸಕಾರರಲ್ಲಿ ಪ್ರಮುಖರೂ ಆದ ಡಾ॥ ಎಸ್. ನಾಗರಾಜು ಅವರು ಸಮ್ಮೇಳನಾಧ್ಯಕ್ಷ ಪೀಠದಿಂದ ಇತಿಹಾಸ ಮತ್ತು ಪುರಾತತ್ವಶಾಸ್ತ್ರಗಳಿರುವ ಸಂಬಂಧ ಮತ್ತು ವಿಭಿನ್ನ ಸ್ವರೂಪಗಳ ಬಗೆಗೆ ವಿವರವಾಗಿ ಪ್ರಸ್ತಾಪಿಸುತ್ತಾ *ವಿಶ್ಲೇಷಣೆಯು ಇತಿಹಾಸದ ಜೀವಾಳವಾದರೆ ಸಂಯೋಜನೆಯು ಪುರಾತತ್ವದ ಜೀವಾಳ* ಎಂದು ತಿಳಿಸಿದರು. 'ವ್ಯವಸ್ಥಿತವೂ, ತಾರ್ಕಿಕವೂ ಆದ ಸಿದ್ಧಾಂತ-ಪ್ರಮೇಯ-ವಿಧಾನಗಳನ್ನು ಅನುಸರಿಸಿ ವಸ್ತುನಿಷ್ಠವಾದ, ವೈಜ್ಞಾನಿಕವಾದ ಇತಿಹಾಸ ಪುನಾರಚನೆ ಆಗಲಿ ಮತ್ತು ಅದು ಕರ್ನಾಟಕದ ಇತಿಹಾಸದಲ್ಲೇ ಮೊದಲಾಗಲಿ ಎಂದು ಸಮ್ಮೇಳನಾಧ್ಯಕ್ಷರು ಆಶಿಸಿದರು.

ಇದೇ ಸಂದರ್ಭದಲ್ಲಿ ಕಳೆದ ಸಮ್ಮೇಳನದ ನಂತರ ಈವರೆಗೆ ವಿವಿಧ ವಿಶ್ವವಿದ್ಯಾಲಯಗಳಿಂದ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ತಮ್ಮ ಸಂಶೋಧನೆಗಾಗಿ ಪಿಎಚ್. ಡಿ., ಪದವಿಯನ್ನು ಪಡೆದ ಅಕಾದೆಮಿಯ ೧೩ಜನ ಸದಸ್ಯರಿಗೆ ನೆನಪಿನ ಫಲಕಗಳನ್ನಿತ್ತು ಗೌರವಿಸಲಾಯಿತು.

*ಈ ಬಾರಿ ಗೌರವ ಪಡೆದ ಸದಸ್ಯರ ವಿವರಗಳು ಕೆಳಕಂಡಂತಿವೆ.*

೧೯೯೭-೯೮ರಲ್ಲಿ ಪಿಎಚ್. ಡಿ. ಪಡೆದು ಅಕಾದೆಮಿಯ ೧೨ನೆಯ ವಾರ್ಷಿಕ ಸಮ್ಮೇಳನದಲ್ಲಿ
(೧೪, ೧೫, ೧೬ ನವೆಂಬರ್, ೧೯೯೮) ಸನ್ಮಾನಿತರಾದ ಅಕಾದೆಮಿ ಸದಸ್ಯರು

| ಪಿ.ಎಚ್.ಡಿ. ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ | ವರ್ಷ |
|---|---|---|---|---|
| ಪ್ರೊ॥ ಎಂ. ಪ್ರಸನ್ನಕುಮಾರ್ | ಡಾ. ಕೆ.ಎಸ್. ಶಿವಣ್ಣ | Brahmadayas & Devadayas in the Wodeyar Kingdom of Mysore-An integrated study (1600-1883 A.D.) | ಮೈಸೂರು ವಿಶ್ವವಿದ್ಯಾಲಯ | ೧೯೯೮ |
| ಪಯಸ್ ಫಿಡೆಲಿಸ್ ಪಿಂಟೋ | ಡಾ.ಕೆ.ಎಸ್. ಶಿವಣ್ಣ | History of Christianity under Vijaya nagara & Nayakas of Keladi (1500-1763) | ಮೈಸೂರು ವಿಶ್ವವಿದ್ಯಾಲಯ | ೧೯೯೮ |
| ರೊನಾಲ್ಡ್ ಕುಟಿನ್ಹೊ | ಡಾ. ಕೆ.ಎಸ್. ಶಿವಣ್ಣ | Socio-Economic study of the Kaifiyats of South & North Canara Districts in Historical perspective | ಮೈಸೂರು ವಿಶ್ವವಿದ್ಯಾಲಯ | ೧೯೯೮ |
| ವಿದ್ಯಾ. ಕೆ | ಡಾ. ಎ.ಡಿ. ಹೆಗಡೆ | ಹಿಂದಿ ಔರ್ ಕನ್ನಡ್ ಕೆ. ಐತಿಹಾಸಿಕ್ ನಾಟಕೋಂಕ ತುಲನಾತ್ಮಕ್ ಅಧ್ಯಯನ್ | ಮೈಸೂರು ವಿಶ್ವವಿದ್ಯಾಲಯ | ೧೯೯೭ |
| ರಾಜಶೇಖರ ಇಚ್ಚಂಗಿ | ಡಾ. ಬಿ.ವಿ. ಶಿರೂರ | ಪಾರ್ಶ್ವನಾಥ ಪುರಾಣ: ಒಂದು ತಾಲನಿಕ ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ | ೧೯೯೭ |

| | | | | |
|---|---|---|---|---|
| ವೈ. ಪಿ. ಭಾನುಮತಿ | ಡಾ. ಪದ್ಮಾಶೇಖರ್ | ಕನ್ನಡ ವರ್ಧಮಾನ ಚರಿತೆಗಳು : ಒಂದು ಅಧ್ಯಯನ | ಮೈಸೂರು ವಿಶ್ವವಿದ್ಯಾಲಯ | ೧೯೯೮ |
| ಹೆಚ್. ಪಿ. ಮಂಜುಳಾ | ಡಾ. ಅಂಬಳಿಕೆ ಹಿರಿಯಣ್ಣ | ನಂಜನಗೂಡು : ಒಂದು; ಸಾಂಸ್ಕೃತಿಕ ಅಧ್ಯಯನ | ಮೈಸೂರು ವಿಶ್ವವಿದ್ಯಾಲಯ | ೧೯೯೮ |
| ಅಜಿತ್ ಪ್ರಸಾದ್ | ಡಾ. ಎಚ್. ಆರ್. ರಘುನಾಥ ಭಟ್ | Jainism in Dharwad Region - A cultural study | ಕರ್ನಾಟಕ ವಿಶ್ವವಿದ್ಯಾಲಯ | ೧೯೯೭ |
| ಕೆ.ಎಸ್. ಮಠ | ಡಾ. ವಿ. ಎಸ್. ಕಂಬಿ | ಚನ್ನಬಸವಣ್ಣನವರ ವಚನಗಳು : ಒಂದು ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ | ೧೯೯೭ |
| ಸುಷ್ಮಾ ಆರೂರು | ಡಾ. ಕೆ.ಎಸ್. ಶಾಸ್ತ್ರಿ | Shivaji & Karnatak:1636-1707 A. D. | ಪೂನಾ ವಿಶ್ವವಿದ್ಯಾಲಯ | ೧೯೯೮ |
| ಎಸ್. ಜಿ.ಸಮಕ್ | ಡಾ. ಬಿ. ಆರ್. ಕೇಶವಮೂರ್ತಿ | Art & Architecture of the Nayakas of Keladi with Special reference to Kavaledurga and Nagara | ಬೆಂಗಳೂರು ವಿ. ವಿ. | ೧೯೯೮ |
| ಬಾಬೂರಾವ್ ಮುಡಬಿ | ಡಾ. ಜೋಗನ ಶಂಕರ್ | Dr. Ambedkar & Emancipation of Indian Women | ಮೈಸೂರು . ವಿ. ವಿ. | ೧೯೯೮ |
| ಡಾ. ಪಿ. ಎಸ್. ಹಸಬಿ | ಡಾ. ರು. ಮ. ಷಡಕ್ಷರಮ್ಮ | Indian Women Pilgrimage through the ages | ಕ. ವಿ. ವಿ. | ೧೯೯೮ |

---

ಅಕಾದೆಮಿಯ ಸದಸ್ಯರಿಗೆ, ವಾರ್ಷಿಕ ಸಮ್ಮೇಳನಗಳು, ತಮ್ಮ ಹೊಸ ಸಂಶೋಧನೆಗಳ ಬಗೆಗೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲು ಮಹತ್ವದ ವೇದಿಕೆಯಾಗುತ್ತಿವೆ. ೧೪-೧೧-೯೮ರ ಮಧ್ಯಾಹ್ನ ೧೨-೩೦ ಘಂಟೆಗೇ ವಿಚಾರ ವಿನಿಮಯದ ಮೊದಲಗೋಷ್ಠಿ ಆರಂಭವಾಗಿ, ೧೬-೧೧-೯೮ರಂದು ಸಂಜೆ ೫ ಘಂಟೆಗೆ ಹನ್ನೊಂದನೆಯ ಮತ್ತು ಕೊನೆಯ ಗೋಷ್ಠಿಗಳು ಮುಗಿದವು.

ಕ್ರಮವಾಗಿ ಪ್ರೊ || ಲಕ್ಷ್ಮಣ್ ತೆಲಗಾವಿ, ಡಾ || ದೇವರಕೊಂಡಾರೆಡ್ಡಿ ಶ್ರೀ ಎಂ. ಜಿ. ನಾಗರಾಜ, ಡಾ || ರು. ಮ. ಷಡಕ್ಷರಯ್ಯ, ಡಾ || ಎಚ್. ಆರ್. ರಘುನಾಥಭಟ್, ಡಾ || ಎಂ. ಎಸ್. ಕೃಷ್ಣಮೂರ್ತಿ, ಡಾ || ಎ. ಕೆ. ಶಾಸ್ತ್ರಿ, ಡಾ || ವಸುಂಧರಾ ಫಿಲಿಯೋಜಾ, ಡಾ || ಶ್ರೀನಿವಾಸ ಹಾವನೂರು, ಡಾ || ಜ್ಯೋತ್ಸ್ನಾ ಕಾಮತ್ ಮತ್ತು ಡಾ || ಪ್ರತಿಭಾ ಚಿಣ್ಣಪ್ಪ ಅವರುಗಳ ಅಧ್ಯಕ್ಷತೆಯಲ್ಲಿ ನಡೆದ ೧೧ ಗೋಷ್ಠಿಗಳಲ್ಲಿ ಪ್ರಾಗಿತಿಹಾಸದಿಂದ ಹಿಡಿದು ಸಾಂಸ್ಕೃತಿಕ ಇತಿಹಾಸವನ್ನೂ ಒಳಗೊಂಡಂತೆ ಆಧುನಿಕ ಇತಿಹಾಸದವರೆಗೆ ಒಟ್ಟು ೧೦೦ ಪ್ರಬಂಧಗಳು ಮಂಡನೆ ಆದವು.

೧೪-೧೧-೯೮ರಂದು ಸಂಜೆ ೫-೦೦ ಘಂಟೆಗೆ ಸಮ್ಮೇಳನದ ಸಮಾರೋಪ ಸಮಾರಂಭವು ಅಕಾದೆಮಿಯ ಗೌರವಾಧ್ಯಕ್ಷರಾದ ಡಾ || ಜಿ. ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ನಡೆದು, ಸಮ್ಮೇಳನದ ಯಶಸ್ಸಿಗೆ ಕಾರಣರಾದ ಬಿ. ಆರ್. ಆರ್. ಫ್ಯಾಮಿಲಿ ಟ್ರಸ್ಟ್ ಹಾಗೂ ಇತರ ಸಂಸ್ಥೆಗಳು ಮತ್ತು ಶ್ರೀಮತಿ ಸಿ. ಆರ್. ಶ್ಯಾಮಲಾ, ಮುಂಬಯಿ ಹಾಗೂ ಇತರ ಸದಸ್ಯರನ್ನೂ ಕೃತಜ್ಞತಾಪೂರ್ವಕವಾಗಿ ಸ್ಮರಿಸಿ, ಧನ್ಯವಾದಗಳನ್ನು ಸಲ್ಲಿಸಲಾಯಿತು.

## ಸರ್ವ ಸದಸ್ಯರ ಸಭೆಯ ವರದಿ - ೧೯೯೮

ದಿನಾಂಕ ೧೫-೧೧-೧೯೯೮, ಭಾನುವಾರ ಸಂಜೆ ೬.೩೦ ಘಂಟೆಗೆ, ಅಕಾದೆಮಿಯ ಅಧ್ಯಕ್ಷರಾದ ಡಾ || ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ, ಆ ಮೊದಲೇ ಸರ್ವ ಸದಸ್ಯರಿಗೂ ಪತ್ರ ಮುಖೇನ ತಿಳಿಸಿದ್ದ ಪ್ರಕಾರ, ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಅಕಾದೆಮಿಯ ೧೯೯೮ನೇ ಸಾಲಿನ ವಾರ್ಷಿಕ ಸರ್ವಸದಸ್ಯರ ಸಭೆಯು ನಡೆಯಿತು.

### ಸಭೆಯ ನಡವಳಿಕೆಗಳು ಕೆಳಕಂಡಂತಿವೆ

ಸಭೆಯಲ್ಲಿ ೧೧೨ ಜನ ಸದಸ್ಯರು ಹಾಜರಿದ್ದರು (ಅವರ ಸಹಿಗಳನ್ನುಳ್ಳ ಪಟ್ಟಿಯನ್ನು ವರದಿಯ ಜೊತೆಗೆ ಲಗತ್ತಿಸಲಾಗಿದೆ).

ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಡಾ || ಎಚ್. ಎಸ್. ಗೋಪಾಲ ರಾವ್ ಅವರು ಸಭೆಯ ಆರಂಭಕ್ಕೆ ಸದಸ್ಯರ ಅನುಮತಿ ಕೋರಿದರು. ಧ್ವನಿಯ ಮೂಲಕ ಸರ್ವ ಸದಸ್ಯರೂ ಸಭೆಯನ್ನು ಆರಂಭಿಸಲು ಅನುಮತಿ ನೀಡಿದ ನಂತರ, ಪ್ರಧಾನ ಕಾರ್ಯದರ್ಶಿಯವರು ಕಳೆದ ಸಾಲಿನಲ್ಲಿ ನಿಧನರಾದ, ಇತಿಹಾಸ/ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದ, ಈ ಕೆಳಕಂಡ ಗಣ್ಯರಿಗೆ ಶ್ರದ್ಧಾಂಜಲಿ ಸಲ್ಲಿಸಬೇಕೆಂಬ

ಸೂಚನೆ ನೀಡಿದರು. ಡಾ ॥ ಶ್ರೀನಿವಾಸ ಹಾವನೂರ್ ಮತ್ತಿತರ ಸದಸ್ಯರು ಶ್ರದ್ಧಾಂಜಲಿ ಸಲ್ಲಿಕೆಗೆ ಅನುಮತಿ ನೀಡಿದರು. ನಂತರ ಶ್ರದ್ಧಾಂಜಲಿ ಸಲ್ಲಿಸಲಾದ ಇತಿಹಾಸಕಾರ/ಸಾಹಿತಿಗಳ ಹೆಸರುಗಳು ಕೆಳಕಂಡಂತಿವೆ.

೧. ಕಳೆದ ವರ್ಷ ಶಿರಸಿಯಲ್ಲಿ ನಡೆದ ಅಕಾದೆಮಿಯ ಹನ್ನೊಂದನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದ ಶ್ರೀ ಕೆ. ಅಭಿಶಂಕರ್

೨. ಅಕಾದೆಮಿಯ ಆಜೀವ ಸದಸ್ಯರಾಗಿದ್ದ ಶ್ರೀಮತಿ ಕೆ. ಎನ್. ರಾಧ, ಶ್ರೀಕಟ್ಟೆ ನಾಗರಾಜ್ ಮತ್ತು ಶ್ರೀ ಆಳ್ಲ ಚಿರಂಜೀವಿ

೩. ಇತಿಹಾಸ/ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದ

ಅ. ಡಾ ॥ ಶಿವರಾಮ ಕಾರಂತ

ಆ. ಡಾ ॥ ಪು. ತಿ. ನರಸಿಂಹಾಚಾರ್

ಇ. ಶ್ರೀ ತ. ಸು. ಶಾಮರಾವ್

ಈ. ಶ್ರೀ ಚದುರಂಗ

ಉ. ಶ್ರೀ ಸತ್ಯಕಾಮ

ಊ. ಡಾ ॥ ಡಿ. ಆರ್. ನಾಗರಾಜ್

ಋ. ಡಾ ॥ ಆರ್. ರಾಮಕೃಷ್ಣ

ೠ. ಶ್ರೀ ಭೀಮರಾವ್ ಚಿಟಗುಪ್ಪಿ

**೧೯೯೭ನೆಯ ಸಾಲಿನ ವರದಿ**

ಕಳೆದ ವರ್ಷದ ಅವಧಿಯಲ್ಲಿ ನಮ್ಮನ್ನು ಅಗಲಿದ ಹಿರಿಯರಿಗೆ ಶ್ರದ್ಧಾಂಜಲಿ (ಮೌನ ಆಚರಣೆ) ಸಲ್ಲಿಸಿದ ನಂತರ, ಡಾ ॥ ಸುಭದ್ರಾ ಮತ್ತು ಶ್ರೀಮತಿ ಪ್ರಭಾ ಅವರುಗಳಿಂದ ಪ್ರಾರ್ಥನೆ ನಡೆಯಿತು. ಪ್ರಾರ್ಥನೆಯ ನಂತರ ಅಧ್ಯಕ್ಷರಾದಿಯಾಗಿ ಎಲ್ಲ ಸದಸ್ಯರಿಗೂ ಸ್ವಾಗತ ಕೋರಿದ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಡಾ ॥ ಎಚ್. ಆರ್. ರಘುನಾಥಭಟ್ ಅವರು, ಕಾರ್ಯಕ್ರಮ ಸೂಚಿಯ ಪ್ರಕಾರ ೧೯೯೭ನೆಯ ಸಾಲಿನ ವರದಿ ವಾಚನಕ್ಕೆ ಸಿದ್ಧರಾದರು. ಆಗಲೇ ವರದಿಯ ಮುದ್ರಿತ ಪ್ರತಿಗಳನ್ನು ಹಾಜರಿದ್ದ ಸದಸ್ಯರಿಗೆ ಹಂಚಿದ್ದರಿಂದ, ಡಾ ॥ ಎಂ. ಎಸ್. ಕೃಷ್ಣಮೂರ್ತಿ ಅವರು ವರದಿಯನ್ನು ಸ್ವೀಕರಿಸಬಹುದೆಂದು ಮಾಡಿದ ಸೂಚನೆಯನ್ನು ಡಾ ॥ ಹೆಚ್. ಚಂದ್ರಶೇಖರ್ ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯು ದೊರೆಯಿತು.

**೧೯೯೭ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳು**

೧೯೯೭ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಮುದ್ರಿತ ಪ್ರತಿಗಳನ್ನು, ಸಭಾರಂಭದಲ್ಲೇ ಸದಸ್ಯರಿಗೆ ಹಂಚಲಾಗಿತ್ತು. ಅದನ್ನು ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರು ಮಂಡಿಸಿದರು. ಪರಿಶೋಧಕರು ಪರಿಶೋಧಿತ ಲೆಕ್ಕಪತ್ರಗಳನ್ನು ಕನ್ನಡದಲ್ಲಿಯೂ ನೀಡಲು ಅಥವಾ ವರದಿಯನ್ನು ಕನ್ನಡ ಭಾಷೆಗೆ ಅನುವಾದಿಸಿ ನೀಡಲು ಕೋರಬೇಕೆಂದು ಡಾ ॥ ಹೆಚ್. ಚಂದ್ರಶೇಖರ್ ಮಾಡಿದ ಸಲಹೆಯನ್ನು ಒಪ್ಪಿಕೊಳ್ಳಲಾಯಿತು. ಅದೇ ಸದಸ್ಯರು ಅಕಾದೆಮಿಯ ಠೇವಣಿಗಳು ಯಾವ ಬ್ಯಾಂಕಿನಲ್ಲಿವೆ ಮತ್ತು ಎಷ್ಟು ಬಡ್ಡಿ ಬರುತ್ತದೆ ಎಂಬ ಬಗೆಗೆ ಮಾಹಿತಿ ಕೋರಿದರು. ಕೋಶಾಧಿಕಾರಿ ಶ್ರೀ ಎಂ. ಬಿ ಪಾಟೀಲರು ವಿವರಗಳನ್ನು ನೀಡಿದರು. ಅಕಾದೆಮಿಗೆ ಧನಸಹಾಯ ಮಾಡಿದವರ ಹೆಸರುಗಳನ್ನು ವರದಿಯಲ್ಲಿ ಸೇರಿಸಬೇಕೆಂಬ ಶ್ರೀ ವ್ಹಿ.ಸಿ. ಮಾಲಗತ್ತಿ ಅವರ ಸಲಹೆಯನ್ನು ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರು ಒಪ್ಪಿಕೊಂಡರು. ವರದಿಯಲ್ಲಿ ನಿಶ್ಚಿತ ಠೇವಣಿಗಳ ವರದಿ ಮಾಡಬೇಕೆಂಬ ಶ್ರೀ ಮಾಲಗತ್ತಿ ಅವರ ಸಲಹೆಯನ್ನು ಸರ್ವಸದಸ್ಯರು ಒಪ್ಪಿದರು. ಚರ್ಚೆಯ ನಂತರ, ಪರಿಶೋಧಿತ ಲೆಕ್ಕಪತ್ರಗಳನ್ನು ಒಪ್ಪಿಕೊಳ್ಳಬಹುದೆಂಬ ಪ್ರೊ ॥ ವಸಂತ ಕುಷ್ಟಗಿ ಅವರ ಸೂಚನೆಯನ್ನು ಡಾ ॥ ಎ. ಕೆ. ಶಾಸ್ತ್ರಿ ಅನುಮೋದಿಸಿದರು.

**೧೯೯೮ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳು**

೧೯೯೮ನೆಯ ಸಾಲಿನ ಮುಂಗಡ ಲೆಕ್ಕಪತ್ರವನ್ನು ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರು ಮಂಡಿಸಿದರು. ಅದನ್ನು ಸ್ವೀಕರಿಸಬಹುದೆಂಬ ಡಾ ॥ ರು. ಮ. ಷಡಕ್ಷರಯ್ಯ ಅವರ ಸೂಚನೆಯನ್ನು ಪ್ರೊ ॥ ಎಂ. ಪ್ರಸನ್ನಕುಮಾರ್ ಅವರು ಅನುಮೋದಿಸಿದರು.

**೧೯೯೮ನೆಯ ಸಾಲಿನ ಆಡಿಟರ್ ನೇಮಕ**

ಈವರೆಗೆ ಅಕಾದೆಮಿಯ ಲೆಕ್ಕಪತ್ರಗಳನ್ನು ಪರಿಶೋಧಿಸುತ್ತಿರುವ ಆಚಾರ್ಯ ಮತ್ತು ಕಂಪೆನಿ(ಕೆ. ವಿ. ಆಚಾರ್ಯ)ಯನ್ನೇ

ಮುಂದಿನ ಸಾಲಿಗೂ ಆಡಿಟರ್ ಆಗಿ ನೇಮಿಸಿಕೊಳ್ಳಬಹುದು ಮತ್ತು ಅವರಿಗೆ ರೂ. ೨,೦೦೦/- (ಎರಡು ಸಾವಿರ ರೂಪಾಯಿಗಳು) ಸಂಭಾವನೆ ನೀಡಬಹುದೆಂಬ ಡಾ॥ದೇವರ ಕೊಂಡಾರೆಡ್ಡಿ ಅವರ ಸೂಚನೆಯನ್ನು ಶ್ರೀ ಗುರುಮೂರ್ತಿ ಪೆಂಡಕೂರು ಅನುಮೋದಿಸಿದರು. ಲೆಕ್ಕ ಪರಿಶೋಧಕರು ತಮ್ಮ ಪರಿಶೋಧನಾ ವರದಿಯನ್ನು ಕನ್ನಡ ಭಾಷೆಯಲ್ಲಿ ನೀಡುವಂತೆ ಅಥವಾ ಅನುವಾದಕ್ಕೆ ಕ್ರಮ ತೆಗೆದುಕೊಳ್ಳಬೇಕೆಂಬ ಡಾ॥ ಹೆಚ್. ಚಂದ್ರಶೇಖರ್ ಅವರ ಸೂಚನೆಯನ್ನು ಆಡಿಟರ್ ಅವರಿಗೆ ತಿಳಿಸಲಾಗುವುದೆಂದು ಶ್ರೀ ಎಂ. ಬಿ. ಪಾಟೀಲರು ಸಭೆಗೆ ತಿಳಿಸಿದರು.

**ಠರಾವುಗಳ ಮಂಡನೆ**

೧. ಕರ್ನಾಟಕದ ಕೆಲವು ಜಿಲ್ಲೆಗಳ ಪುನರ್ವಿಂಗಡಣೆ ಆಗಿರುವ ಸಂದರ್ಭದಲ್ಲಿ, ಕರ್ನಾಟಕದ ಇತಿಹಾಸ ಪ್ರಸಿದ್ಧವಾದ ಬನವಾಸಿ, ತಲಕಾಡು, ಪಟ್ಟದ ಕಲ್ಲು, ಹಂಪಿ, ಮಳಖೇಡ, ಕಿತ್ತೂರು, ಮೂಡಬಿದಿರೆ ಮುಂತಾದ ಊರುಗಳನ್ನು ತಾಲ್ಲೂಕು ಕೇಂದ್ರಗಳನ್ನಾಗಿ ಮಾಡಿ, ಆ ಮೂಲಕ ಅವುಗಳನ್ನು ಅಭಿವೃದ್ಧಿ ಪಡಿಸಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ರಾಜ್ಯಸರ್ಕಾರಕ್ಕೆ ವಿನಂತಿ ಮಾಡುತ್ತದೆ.

**ಸೂಚನೆ : ಪಿ. ವಿ. ಕೃಷ್ಣಮೂರ್ತಿ** **ಅನುಮೋದನೆ : ಎಂ.ಜಿ. ನಾಗರಾಜ್**

೨. ಕರ್ನಾಟಕ ಸರ್ಕಾರವು ಪ್ರತಿವರ್ಷವೂ ಇತಿಹಾಸ ಸಂಶೋಧಕರೊಬ್ಬರಿಗೆ ಒಂದು ಲಕ್ಷ ರೂಪಾಯಿ ಮೌಲ್ಯದ ಪ್ರಶಸ್ತಿ ನೀಡಿ ಪುರಸ್ಕರಿಸಬೇಕೆಂದು ಅಕಾದೆಮಿಯ ಸರ್ವ ಸದಸ್ಯರ ಸಭೆಯು ರಾಜ್ಯಸರ್ಕಾರಕ್ಕೆ ಮನವಿ ಮಾಡುತ್ತದೆ.

**ಸೂಚನೆ : ಡಾ॥ ಚೆನ್ನಕ್ಕ ಪಾವಟೆ** **ಅನುಮೋದನೆ : ಡಾ॥ ಹೆಚ್. ಚಂದ್ರಶೇಖರ್**

೩. ಕರ್ನಾಟಕ ರಾಜ್ಯ ಪತ್ರಾಗಾರವನ್ನು ವಿಧಾನಸೌಧದಿಂದ ಬೇರೊಂದು ವಿಶಾಲ ಪ್ರತ್ಯೇಕ ಕಟ್ಟಡಕ್ಕೆ ವರ್ಗಾಯಿಸಲು ಕ್ರಮಕೈಗೊಳ್ಳಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ರಾಜ್ಯ ಸರ್ಕಾರವನ್ನು ಒತ್ತಾಯಿಸುತ್ತದೆ.

**ಸೂಚನೆ : ಜೆ. ಟಿ. ಜಯರಾಮಯ್ಯ** **ಅನುಮೋದನೆ : ಡಾ॥ ಕೆ. ಆರ್. ಗಣೇಶ್**

೪. ಕರ್ನಾಟಕದ ಇತಿಹಾಸ, ಪುರಾತತ್ವ, ಕಲೆಗಳು ಜಾನಪದ, ಸಂಸ್ಕೃತಿ, ಸಾಹಿತ್ಯ - ಇತ್ಯಾದಿ ಎಲ್ಲ ವಿಷಯಗಳನ್ನೂ ಸಮಗ್ರವಾಗಿ ಹಾಗೂ ಸತ್ವಪೂರ್ಣವಾಗಿ ಬಿಂಬಿಸುವ ಒಂದು ಬೃಹತ್ ವಸ್ತುಸಂಗ್ರಹಾಲಯವನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ರಾಜ್ಯಸರ್ಕಾರಕ್ಕೆ ಬಿನ್ನವಿಸುತ್ತದೆ.

**ಸೂಚನೆ : ಡಾ॥ ಕೆ. ಬಿ ಸುದರ್ಶನ್** **ಅನುಮೋದನೆ : ಡಾ॥ ಸೂರ್ಯನಾಥ ಕಾಮತ್**

೫. 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟಗಳ ಪರಿಷ್ಕರಣ ಮತ್ತು ಮುದ್ರಣಗಳ ಜೊತೆ ಜೊತೆಗೇ, ಸಂಶೋಧಕರಿಗೆ ಅಲಭ್ಯವಾಗಿರುವ ಮತ್ತು ಇನ್ನೂ ಪರಿಷ್ಕರಣೆಗೆ ಕಾಲಾವಕಾಶ ಬೇಡುವ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳನ್ನು ಯಥಾವತ್ತಾಗಿ ಪುನರ್ಮುದ್ರಿಸಬೇಕೆಂದು ಅಕಾದೆಮಿಯ ಸರ್ವಸದಸ್ಯರ ಸಭೆಯು ರಾಜ್ಯಸರ್ಕಾರಕ್ಕೆ ಕೋರಿಕೆ ಸಲ್ಲಿಸುತ್ತದೆ.

**ಸೂಚನೆ : ಡಾ॥ ಎಚ್. ಎಸ್. ಗೋಪಾಲರಾವ್** **ಅನುಮೋದನೆ : ಡಾ॥ ಎಚ್. ಆರ್. ರಘುನಾಥಭಟ್**

೬. ಬೆಂಗಳೂರಿನ 'ಕ್ವೀನ್ಸ್ ರಸ್ತೆ'ಗೆ 'ರಾಣಿ ಅಬ್ಬಕ್ಕದೇವಿ ರಸ್ತೆ'ಯೆಂದೂ, ಭಾರತೀಯ ನೌಕಾದಳದ ಒಂದು ನೌಕೆಗೆ 'ರಾಣಿ ಅಬ್ಬಕ್ಕದೇವಿ' ಎಂದೂ, ಬೆಂಗಳೂರಿನ ರಸ್ತೆಯೊಂದಕ್ಕೆ 'ಬೆಳವಾಡಿ ಮಲ್ಲಮ್ಮ ರಸ್ತೆ' ಎಂದೂ ನಾಮಕರಣ ಮಾಡಲು ಅಕಾದೆಮಿಯ ಸರ್ವಸದಸ್ಯರ ಸಭೆಯು ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಕ್ಕೆ ಮನವಿ ಮಾಡುತ್ತದೆ.

**ಸೂಚನೆ : ಡಾ॥ ಸೂರ್ಯನಾಥ ಕಾಮತ್** **ಅನುಮೋದನೆ : ಡಾ॥ ಸರೋಜಿನಿ ಚವಲಾರ**

ಠರಾವುಗಳು ಕಾರ್ಯರೂಪಕ್ಕೆ ಬರಲು ಅಕಾದೆಮಿಯ ಪದಾಧಿಕಾರಿಗಳು ಸಂಬಂಧಿಸಿದ ಸರ್ಕಾರ ಇಲಾಖೆಗಳಿಗೆ ಪತ್ರ ಬರೆಯುವುದಲ್ಲದೆ, ಮಂತ್ರಿಗಳನ್ನು ಕಂಡು ತೀವ್ರ ಪ್ರಯತ್ನಗಳನ್ನು ನಡೆಸಬೇಕೆಂಬ ಶ್ರೀ ವ್ಹಿ ಸಿ. ಮಾಲಗತ್ತಿಯವರ ಸೂಚನೆಯನ್ನು ಸ್ವೀಕರಿಸಲಾಯಿತು.

**ಇತರ ವಿಷಯಗಳು**

೧. ಅಕಾದೆಮಿಯ ಸದಸ್ಯರು ತಾವು ಬರೆದ/ಪ್ರಕಟಿಸಿದ ಪುಸ್ತಕಗಳನ್ನು ಪರಸ್ಪರ ವಿತರಿಸಿಕೊಂಡರೆ ಮಾರಾಟ/ಸಂಶೋಧನೆಯ ದೃಷ್ಟಿಯಿಂದ ಸಹಾಯವಾಗುತ್ತದೆ ಎಂಬ ಡಾ॥ ಚೆನ್ನಕ್ಕ ಪಾವಟೆಯವರ ಸೂಚನೆಯನ್ನು ಡಾ॥ ಹನುಮಾಕ್ಷಿಗೋಗಿ ಅನುಮೋದಿಸಿದರು.

೨. ಇತಿಹಾಸ ದರ್ಶನದ ೧೨ ಸಂಪುಟಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನೆಲ್ಲ ಒಂದು ಸಂಪುಟವಾಗಿ ಪ್ರಕಿಟಸಬಹುದೆಂಬ ಡಾ॥ ಶ್ರೀನಿವಾಸ ಹಾವನೂರ್ ಅವರ ಸೂಚನೆಗೆ ಡಾ॥ ಸೂರ್ಯನಾಥ ಕಾಮತರು ಇದು ಸಾಧುವಾದ ಸಲಹೆಯಾದರೂ, ಹಣ/ಸ್ಥಳದ ದೃಷ್ಟಿಯಿಂದ ಅಕಾದೆಮಿಗೆ ಸಾಧ್ಯವಾಗದ ಕಾರ್ಯವೆಂದೂ, ಬೇರೆ ಯಾರಾದರೂ ಪ್ರಕಾಶಕರಿಗೆ ಸಾಧ್ಯವಾದಷ್ಟು ಕನಿಷ್ಠ ಪ್ರಮಾಣದಲ್ಲಿ ಹಣ ನೀಡಿ ಪ್ರಕಟಣೆಯತ್ತ ಶಾಸನ ತಜ್ಞರಾದ ಅಕಾದೆಮಿಯ ಸದಸ್ಯರು ಪ್ರಯತ್ನಿಸಬಹುದೆಂದು ತಿಳಿಸಿದರು.

೩. ತಾಲ್ಲೂಕು ಸ್ಥಳಗಳಲ್ಲಿರುವ ಕೇಂದ್ರ ಗ್ರಂಥಾಲಯಗಳಲ್ಲಿ ಸಂಶೋಧಕರಿಗೆ ಅವಶ್ಯಕವಾಗಿರುವ ಗ್ರಂಥಗಳು ಲಭ್ಯವಾಗಬೇಕೆಂದು ಶ್ರೀಮತಿ ಚಂದನಾ ಅವರ ಸಲಹೆ. ಅದನ್ನು ಎಲ್ಲರೂ ಒಪ್ಪಿದರು.

೪. ಪಿಎಚ್‌ಡಿ ಪದವಿ ಪಡೆದ ಅಕಾದೆಮಿಯ ಸದಸ್ಯರ ವಿವರವಾದ ಪರಿಚಯವನ್ನು ಇತಿಹಾಸ ದರ್ಶನದಲ್ಲಿ ಅನುಬಂಧವಾಗಿ ಪ್ರಕಟಿಸುವುದು ಅವಶ್ಯಕ ಎಂದು ಸೂಚಿಸಿದರು ಶ್ರೀ ಪಿ. ವಿ. ಕೃಷ್ಣಮೂರ್ತಿ.

೫. ಕೆಳದಿ ರಾಜ್ಯದ ೫೦೦ನೇ ವರ್ಷದ ಉತ್ಸವವನ್ನು ಸರ್ಕಾರವು ರಾಜ್ಯಮಟ್ಟದಲ್ಲಿ ಆಚರಿಸಬೇಕೆಂದು ಒತ್ತಾಯಿಸಬೇಕೆಂಬ ಸೂಚನೆಯನ್ನು ಶ್ರೀ ಜಯದೇವಪ್ಪ ಜೈನಕೇರಿ ನೀಡಿದರು.

೬. ಭಾರತ ಮತ್ತು ಜಾಗತಿಕ ಇತಿಹಾಸದ ಸಂಪುಟಗಳನ್ನು ಕರ್ನಾಟಕ ಇತಿಹಾಸ ಅಕಾದೆಮಿಯು ಕನ್ನಡದಲ್ಲಿ ಪ್ರಕಟಿಸಬೇಕೆಂಬ ಶ್ರೀ ಟಿ. ಎಚ್. ಎಂ. ಬಸವರಾಜ್ ಅವರ ಸೂಚನೆಯನ್ನು, ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ರವಾನಿಸುವುದಾಗಿ ಡಾ॥ ಕಾಮತ್ ಅವರು ತಿಳಿಸಿದರು.

**೧೯೯೮-೯೯, ೧೯೯೯-೨೦೦೦ನೇ ಅವಧಿಗೆ ಕಾರ್ಯಕಾರೀ ಸಮಿತಿಯ ಆಯ್ಕೆ**

ಧಾರವಾಡದಲ್ಲಿ ಆಯ್ಕೆಗೊಂಡಿದ್ದ ಕಾರ್ಯಕಾರೀ ಸಮಿತಿಯ ೨ ವರ್ಷಗಳ ಅವಧಿಯು ಮುಗಿದಿರುವುದರಿಂದ, ಮುಂದಿನ ಎರಡು ವರ್ಷಗಳ ಅವಧಿಗೆ (೧೯೯೮-೯೯ ಮತ್ತು ೧೯೯೯-೨೦೦೦) ಹೊಸದಾಗಿ ಕಾರ್ಯಕಾರಿ ಸಮಿತಿಯ ಆಯ್ಕೆಯಾಗಬೇಕಾಗಿದ್ದು, ಈ ಸಂಬಂಧವಾಗಿ ಶ್ರೀ ಜೆ. ಟಿ. ಜಯರಾಮಯ್ಯ ಅವರು ತಾವು ಸೂಚಿಸಿದ್ದ ೨೦ ಜನರ ಒಂದು ಪಟ್ಟಿಯನ್ನು ಸಭೆಯಲ್ಲಿ ಮಂಡಿಸಿದರು

**ಸೂಚಿತವಾದ ಸದಸ್ಯರ ಹೆಸರುಗಳು ಕೆಳಕಂಡಂತಿವೆ**

*ಸರ್ವಶ್ರೀ*

೧. ಡಾ॥ ಸೂರ್ಯನಾಥ ಯು. ಕಾಮತ್
೨. ಪ್ರೊ॥ ಲಕ್ಷ್ಮಣ ತೆಲಗಾವಿ
೩. ಎಂ. ಜಿ. ನಾಗರಾಜ್
೪. ಡಾ॥ ಎಚ್.ಎಸ್. ಗೋಪಾಲರಾವ್
೫. ಡಾ॥ ಎಚ್. ಆರ್. ರಘುನಾಥ ಭಟ್ಟ
೬. ಡಾ॥ ಕೆ. ವಸಂತಲಕ್ಷ್ಮಿ
೭. ಎಂ. ಬಿ ಪಾಟೀಲ
೮. ತ. ರಂ. ಕೃಷ್ಣಗೌಡ
೯. ಬಿ. ರಾಜಶೇಖರಪ್ಪ
೧೦. ಡಾ॥ ಚೆನ್ನಕ್ಕ ಪಾವಟೆ
೧೧. ಡಾ॥ ಎ. ಕೆ. ಶಾಸ್ತ್ರಿ
೧೨. ಗುರುಮೂರ್ತಿ ಪೆಂಡಕೂರು
೧೩. ಡಾ॥ ದೇವರ ಕೊಂಡಾರೆಡ್ಡಿ
೧೪. ವ್ಹಿ. ಸಿ. ಮಾಲಗತ್ತಿ
೧೫. ಪ್ರೊ॥ ವಸಂತ ಕುಷ್ಟಗಿ
೧೬. ಕೇಶವ ಉಮರ್ಜಿ
೧೭. ಡಾ॥ ಕೆ. ಜಿ. ವಸಂತ ಮಾಧವ
೧೮. ಸಿದ್ಧಯ್ಯ ಹಿರೇಮಠ
೧೯. ಡಾ॥ ಎಂ. ಎಸ್. ಕೃಷ್ಣಮೂರ್ತಿ
೨೦. ಡಾ॥ ರು. ಮ. ಷಡಕ್ಷರಯ್ಯ

ಶ್ರೀ ಜೆ.ಟಿ.ಜಯರಾಮಯ್ಯನವರು ಮಂಡಿಸಿದ ಪಟ್ಟಿಯಲ್ಲಿನ ೨೦ ಸದಸ್ಯರುಗಳು ಮುಂದಿನ ಎರಡು ವರ್ಷಗಳ ಅವಧಿಗೆ ಕಾರ್ಯಕಾರೀ ಸಮಿತಿಯ ಸದಸ್ಯರಾಗಿರಬೇಕೆಂದು ಅನುಮೋದಿಸಿದವರು ಶ್ರೀ ಟಿ. ಎಚ್. ಎಂ. ಬಸವರಾಜು. ಅದಕ್ಕೆ ಸರ್ವಸದಸ್ಯರ ಅನುಮೋದನೆಯೂ ದೊರೆಯಿತು.

**ಅಕಾದೆಮಿಯ ಹದಿಮೂರನೆಯ ಸಮ್ಮೇಳನ**

ಅಕಾದೆಮಿಯ ಹದಿಮೂರನೆಯ ವಾರ್ಷಿಕ ಸಮ್ಮೇಳನವನ್ನು ಹರಪನಹಳ್ಳಿಯಲ್ಲಿ ನಡೆಯಬೇಕೆಂದು ಶ್ರೀ ಕುಂ. ಬಾ. ಸದಾಶಿವಪ್ಪ ಅವರು ನೀಡಿದ ಆಹ್ವಾನಕ್ಕೆ ಶ್ರೀ ಗುರುಮೂರ್ತಿ ಪೆಂಡಕೂರು ಅವರ ಒತ್ತಾಸೆಯೂ ಇತ್ತು. ಮಾನ್ಯ ಸದಸ್ಯರ ಆಹ್ವಾನವನ್ನು ಒಪ್ಪಿ ೧೯೯೯ರ ಜೂನ್-ಜುಲೈ ತಿಂಗಳಿನಲ್ಲಿ ಸಮ್ಮೇಳನವನ್ನು ನಡೆಸಲು ಏರ್ಪಾಡು ಮಾಡಿಕೊಳ್ಳಬಹುದೆಂದು ಸೂಚಿಸಲಾಯಿತು.

ಅಕಾದೆಮಿಯ ಪ್ರಧಾನ ಕಾರ್ಯದರ್ಶಿಯವರು ಹನ್ನೆರಡನೆಯ ವಾರ್ಷಿಕ ಸಮ್ಮೇಳನಕ್ಕೆ ನೆರವು ನೀಡಿದವರೆಲ್ಲರಿಗೆ ಮತ್ತು ಅಕಾದೆಮಿಯ ಸರ್ವ ಸದಸ್ಯರಿಗೆ ವಂದನೆಗಳನ್ನು ಸಲ್ಲಿಸಿದರು.

**ಕರ್ನಾಟಕ ಇತಿಹಾಸ ಅಕಾದೆಮಿ ( ರಿ., ), ಬೆಂಗಳೂರು**

೧೯೯೮-೯೯, ೧೯೯೯-೨೦೦೦ನೆಯ ಸಾಲಿನ ಕಾರ್ಯಕಾರೀ ಸಮಿತಿಯ ಸದಸ್ಯರ ವಿವರಗಳು

| ಕ್ರ. ಸಂ. | ಹೆಸರು ಮತ್ತು ವಿಳಾಸ | ವಯಸ್ಸು (ವರ್ಷಗಳಲ್ಲಿ) | ವೃತ್ತಿ | ಹುದ್ದೆ |
|---|---|---|---|---|
| | ಸರ್ವಶ್ರೀ | | | |
| ೧ | **ಡಾ॥ ಸೂರ್ಯನಾಥ ಕಾಮತ್**<br>೭೯೮, ೧೧ನೇ ಮುಖ್ಯರಸ್ತೆ<br>೭ನೇ ಅಡ್ಡರಸ್ತೆ, ಹನುಮಂತನಗರ<br>ಬೆಂಗಳೂರು - ೫೬೦ ೦೧೯ | ೬೨ | ನಿವೃತ್ತ ಮುಖ್ಯಸಂಪಾದಕರು<br>*(ಕರ್ನಾಟಕ ಗ್ಯಾಜೆಟಿಯರ್)* | ಅಧ್ಯಕ್ಷರು |
| ೨. | **ಎಂ. ಜಿ. ನಾಗರಾಜ್**<br>೧೬೫, (ಮಹಡಿ), ೭ನೇ ತಿರುವು<br>ಶ್ರೀರಾಮನಗರ, ಮಹಾಲಕ್ಷ್ಮಿಪುರಂ<br>ಬೆಂಗಳೂರು - ೫೬೦ ೦೮೬ | ೬೯ | ನಿವೃತ್ತ ಪ್ರಾಂಶುಪಾಲರು | ಉಪಾಧ್ಯಕ್ಷರು |
| ೩. | **ಪ್ರೊ॥ ಲಕ್ಷ್ಮಣ್ ತೆಲಗಾವಿ**<br>ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು<br>ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ<br>ಹಂಪಿ - ೫೮೩ ೨೧೧ | ೫೧ | ಪ್ರಾಧ್ಯಾಪಕರು | ಉಪಾಧ್ಯಕ್ಷರು |
| ೪. | **ಡಾ॥ ಎಚ್. ಎಸ್. ಗೋಪಾಲರಾವ್**<br>'ಸ್ವಸ್ತಿಶ್ರೀಸ್ಕಂದ', ಅರಿಶಿನಕುಂಟೆ<br>ನೆಲಮಂಗಲ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೦ ೦೫೦ | ೫೨ | ಸಹಾಯಕ ಎಂಜಿನಿಯರ್ (ವಿ) | ಪ್ರಧಾನ ಕಾರ್ಯದರ್ಶಿ |
| ೫. | **ಡಾ॥ ಎಚ್. ಆರ್. ರಘುನಾಥಭಟ್**<br>೧೧೮, ಸೌರಭ, ೧ನೇ ಮುಖ್ಯರಸ್ತೆ<br>೨ನೇ ಅಡ್ಡರಸ್ತೆ, ಶ್ರೀನಗರ<br>ಧಾರವಾಡ - ೫೮೦ ೦೦೩ | ೫೧ | ಪ್ರಾಧ್ಯಾಪಕರು | ಕಾರ್ಯದರ್ಶಿ |
| ೬. | **ಡಾ॥ ಕೆ. ವಸಂತಲಕ್ಷ್ಮಿ**<br>'ಕಶ್ಯಪ', ೩೫೬, ೧೧ನೇ ಮುಖ್ಯರಸ್ತೆ<br>ಶ್ರೀನಿವಾಸನಗರ<br>ಬೆಂಗಳೂರು - ೫೬೦ ೦೫೦ | ೪೫ | ಉಪನ್ಯಾಸಕರು | ಕಾರ್ಯದರ್ಶಿ |

| | | | | |
|---|---|---|---|---|
| | ಸರ್ವಶ್ರೀ | | | |
| ೭. | **ಎಂ. ಬಿ. ಪಾಟೀಲ್**<br>೩೫೬, ಶ್ರೀ ರೇಣುಕಾ<br>೬ನೇ ತಿರುವು, ಚನ್ನಮ್ಮನ ಕೆರೆ ಅಂಗಳ<br>ಬನಶಂಕರಿ ೨ನೇ ಹಂತ<br>ಬೆಂಗಳೂರು – ೫೬೦ ೦೭೦ | ೫೯ | ನಿವೃತ್ತ ಮುಖ್ಯಸಂಪಾದಕರು<br>*(ಕರ್ನಾಟಕ ಗ್ಯಾಜೆಟಿಯರ್)* | ಕೋಶಾಧ್ಯಕ್ಷರು |
| ೮. | **ತ. ರಂ. ಕೃಷ್ಣಗೌಡ**<br>೬೮೦/೧, ೧೦೦ ಅಡಿರಸ್ತೆ<br>೧ನೇ ಹಂತ, ಇಂದಿರಾ ನಗರ<br>ಬೆಂಗಳೂರು – ೫೬೦ ೦೩೮ | ೬೫ | ನಿವೃತ್ತ ಎಂಜಿನಿಯರ್ | ಸದಸ್ಯರು |
| ೯. | **ಬಿ. ರಾಜಶೇಖರಪ್ಪ**<br>೪ನೇ ಅಡ್ಡರಸ್ತೆ, ಪೂರ್ವಕೊನೆ<br>ಜೆ. ಸಿ. ಆರ್. ಬಡಾವಣೆ<br>ಚಿತ್ರದುರ್ಗ – ೫೭೭ ೫೦೧ | ೫೧ | ಪ್ರವಾಚಕರು | ಸದಸ್ಯರು |
| ೧೦. | **ಡಾ॥ ಚೆನ್ನಕ್ಕ ಪಾವಟೆ**<br>'ಚೈತ್ರ ಗಂಗೋತ್ರಿ', ೨ನೇ ತಿರುವು<br>ಸಾಧನಕೇರಿ, ಧಾರವಾಡ – ೫೮೦ ೦೦೮ | ೪೬ | ಪ್ರಾಧ್ಯಾಪಕರು | ಸದಸ್ಯರು |
| ೧೧. | **ಡಾ॥ ಎ. ಕೆ. ಶಾಸ್ತ್ರಿ**<br>ಟಿ. ಎಸ್. ಎಸ್. ರೈಸ್ ಮಿಲ್ ಹತ್ತಿರ<br>ಶಿರಸಿ, ಉತ್ತರ ಕನ್ನಡ ಜಿಲ್ಲೆ – ೫೮೧ ೪೦೨ | ೫೮ | ನಿವೃತ್ತ ಬೋಧಕರು | ಸದಸ್ಯರು |
| ೧೨. | **ಗುರುಮೂರ್ತಿ ಪೆಂಡಕೂರು**<br>ನೇತಾಜಿ ರಸ್ತೆ, ರಾಮನಗರ<br>ಹಗರಿಬೊಮ್ಮನಹಳ್ಳಿ – ೫೮೩ ೨೧೨ | ೬೧ | ವರ್ತಕರು | ಸದಸ್ಯರು |
| ೧೩. | **ಡಾ॥ ದೇವರ ಕೊಂಡಾರೆಡ್ಡಿ**<br>ಪ್ರವಾಚಕರು, ಶಾಸನ ವಿಜ್ಞಾನ ವಿಭಾಗ<br>ಕನ್ನಡ ವಿಶ್ವವಿದ್ಯಾಲಯ, ಕಮಲಾಪುರ<br>ಹಂಪಿ – ೫೬೩ ೨೧೧ | ೫೧ | ಪ್ರವಾಚಕರು | ಸದಸ್ಯರು |
| ೧೪. | **ವ್ಹಿ. ಷಿ. ಮಾಲಗತ್ತಿ**<br>೭೫, ಶಿವಚೇತನ, ೧ನೇ ಮೆಯ್ನ್<br>ಸದಾಶಿವನಗರ<br>ಬೆಳಗಾವಿ – ೫೬೦ ೦೦೧ | ೭೬ | ನಿವೃತ್ತ ಪ್ರಾಧ್ಯಾಪಕರು | ಸದಸ್ಯರು |
| ೧೫. | **ಪ್ರೊ॥ ವಸಂತ ಕೃಷ್ಟಗಿ**<br>ಎಂ. ಐ. ಜಿ. ೨೬, ಆದರ್ಶನಗರ ೨ನೇ ಹಂತ<br>ಗುಲುಬರ್ಗಾ – ೫೮೫ ೧೦೫ | ೬೨ | ನಿವೃತ್ತ ಪ್ರಾಂಶುಪಾಲರು | ಸದಸ್ಯರು |
| ೧೬. | **ಕೇಶವ ಉಮರ್ಜಿ**<br>ಹುಣ್ಣೂರು, ಜಮಖಂಡಿ ತಾಲ್ಲೂಕು<br>ಬಿಜಾಪುರ ಜಿಲ್ಲೆ – ೫೮೭ ೧೧೯ | ೪೬ | ಬ್ಯಾಂಕ್ ಉದ್ಯೋಗಿ | ಸದಸ್ಯರು |
| ೧೭. | **ಡಾ॥ ಕೆ. ಜಿ. ವಸಂತ ಮಾಧವ**<br>'ಆರಾಧನಾ', ಪಾವಂಜೆ<br>ಹಳೆಯಂಗಡಿ<br>ದಕ್ಷಿಣ ಕನ್ನಡ ಜಿಲ್ಲೆ – ೫೭೪ ೧೪೬ | ೬೦ | ನಿವೃತ್ತ ಪ್ರಾಧ್ಯಾಪಕರು | ಸದಸ್ಯರು |

ಸರ್ವಶ್ರೀ

| | | | | |
|---|---|---|---|---|
| ೧೮. | ಸಿದ್ಧಯ್ಯ ಹಿರೇಮಠ<br>ಹೊತ್ತಾರ, ಮೊದಲನೇ ತಿರುವು<br>ರವೀಂದ್ರನಗರ<br>ಶಿವಮೊಗ್ಗ - ೫೭೭ ೨೦೧ | ೬೭ | ವರ್ತಕರು | ಸದಸ್ಯರು |
| ೧೯. | ಡಾ॥ ಎಂ. ಎಸ್. ಕೃಷ್ಣಮೂರ್ತಿ<br>ಪ್ರಾಧ್ಯಾಪಕರು<br>ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ<br>ಮೈಸೂರು ವಿಶ್ವವಿದ್ಯಾಲಯ<br>ಮಾನಸ ಗಂಗೋತ್ರಿ<br>ಮೈಸೂರು - ೫೭೦ ೦೦೬ | ೫೨ | ಪ್ರಾಧ್ಯಾಪಕರು | ಸದಸ್ಯರು |
| ೨೦. | ಡಾ॥ ರು. ಮ. ಷಡಕ್ಷರಯ್ಯ<br>ನಿರ್ದೇಶಕರು (ಪ್ರಭಾರ)<br>ಕನ್ನಡ ಸಂಶೋಧನ ಸಂಸ್ಥೆ<br>ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ - ೫೮೦ ೦೦೩ | ೪೮ | ಪ್ರಾಧ್ಯಾಪಕರು | ಸದಸ್ಯರು |

## ಇತಿಹಾಸ ಪ್ರಶಸ್ತಿ ಪರೀಕ್ಷೆಗಳು - ೧೯೯೮

ಎರಡನೆಯ ಪಿ. ಯು. ಸಿ. ಇತಿಹಾಸ ವಿದ್ಯಾರ್ಥಿಗಳಿಗೆ, ಈ ವರ್ಷವೂ ೧೫-೩-೧೯೯೮ರಂದು ಮಧ್ಯಾಹ್ನ ೧ ರಿಂದ ೪ ಗಂಟೆಯ ವರೆಗೆ ಏಕಕಾಲದಲ್ಲಿ ಕರ್ನಾಟಕದ ಐದುಕೇಂದ್ರಗಳಲ್ಲಿ ಇತಿಹಾಸ ಪ್ರಶಸ್ತಿ ಪರೀಕ್ಷೆಗಳನ್ನು ನಡೆಸಲಾಯಿತು. ಈ ವರ್ಷ ಒಟ್ಟು ೪೪೦೫ ವಿದ್ಯಾರ್ಥಿಗಳು ಅರ್ಜಿಸಲ್ಲಿಸಿದ್ದು, ಅವರಲ್ಲಿ ೩೯೯೮ ವಿದ್ಯಾರ್ಥಿಗಳು ಪರೀಕ್ಷೆಗಳಿಗೆ ಹಾಜರಾಗಿದ್ದಾರೆ. ಬಹುಮಾನಿತ ವಿದ್ಯಾರ್ಥಿಗಳ ವಿವರಗಳು ಕೆಳಕಂಡಂತಿವೆ.

೧ನೇ ಬಹುಮಾನ (ರೂ. ೧,೦೦೦-೦೦) : **ಚಂದ್ರಯ್ಯ ಶಿ. ಹಿರೇಮಠ,** ಶ್ರೀ ಶಿವಾನಂದ ಪ. ಪೂ ಕಾಲೇಜು, ಇಂಚಲ

೨ನೇ ಬಹುಮಾನ (ರೂ. ೬೦೦-೦೦) : **ಚಂದ್ರಪ್ಪ ಚ. ಶೀಗಿಹಳ್ಳಿ,** ಶ್ರೀ ಶಿವಾನಂದ ಪ. ಪೂ. ಕಾಲೇಜು, ಇಂಚಲ

೩ನೇ ಬಹುಮಾನ (ರೂ. ೪೦೦-೦೦) : **ಟಿ. ಆರ್. ಕಾರ್ತಿಕ,** ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಂತಾಮಣಿ

ಸಮಾಧಾನ ಬಹುಮಾನಗಳು ಮತ್ತು ಕೇಂದ್ರಗಳಲ್ಲಿ ಅತ್ಯಂತ ಹೆಚ್ಚಿನ ಅಂಕ ಪಡೆದುದಕ್ಕೆ ಬಹುಮಾನಗಳು (ತಲಾ ರೂ. ೨೦೦)

ಮಂಜುನಾಥ ನೇಮದಿ ಎಂ. ಎಚ್. ಮೆಣಸಗಿ, ಪ. ಪೂ. ಕಾಲೇಜು, ಕೆರೂರು

**ಕಿರಣ ಎ. ಬೈರಣ್ಣನವರ,** ಲಿಂಗರಾಜ ಕಾಲೇಜು, ಬೆಳಗಾವಿ; **ಕು॥ ಶಿಲ್ಪಕಲಾ,** ಎಸ್. ವಿ. ಪಿ. ಪ. ಪೂ. ಕಾಲೇಜು, ಸರ್ಜಾಪುರ

*ಕೇಂದ್ರಕ್ಕೆ ವಿಶೇಷ ಬಹುಮಾನ :*

ಎ. ಎನ್. ಗಿರಿಜೇಶ, ನವೋದಯ ಪ. ಪೂ. ಕಾಲೇಜು, ಚನ್ನರಾಯಪಟ್ಟ, ಹಾಸನ ಜಿ.

**ಕು॥ಮಾಲತಿ,** ಸರಕಾರಿ ಪ. ಪೂ. ಕಾಲೇಜು, ಗುರುಪುರ, ದ. ಕನ್ನಡ ಜಿಲ್ಲೆ; **ಕು॥ಲಕ್ಷ್ಮಿ,** ಸತ್ಯಾಶ್ರಯ, ಪ.ಪೂ. ಕಾಲೇಜು, ರಾಜೇಶ್ವರ, ಬೀದರ ಜಿಲ್ಲೆ

ಪರೀಕ್ಷೆಗಳನ್ನು ಯಶಸ್ವಿಯಾಗಿ ನಡೆಸಲು ಬೆಂಗಳೂರಿನ ಶ್ರೀ ಸಿ. ಆರ್. ಗಾಡಗೋಳಿ, ಶೇಷಾದ್ರಿಪುರ ಪ. ಪೂ. ಕಾಲೇಜಿನ ಪ್ರಾಂಶುಪಾಲರಾದ ಪ್ರೊ॥ ವೆಂಕಟರಾಜು ಮತ್ತು ಇತಿಹಾಸ ವಿಭಾಗದ ಪ್ರೊ॥ ರಾಧಾಕೃಷ್ಣ, ಎಸ್. ಜೆ. ಆರ್. ಸಿ. ಕಾಲೇಜಿನ ಇತಿಹಾಸ ವಿಭಾಗದ ಡಾ॥ ಮಲ್ಲಿಕಾರ್ಜುನ, ಮೈಸೂರಿನ ಡಾ॥ ಎಂ. ಎಸ್. ಕೃಷ್ಣಮೂರ್ತಿ, ಧಾರವಾಡದ ಡಾ॥ ಎಚ್. ಆರ್ ರಘುನಾಥಭಟ್, ಗುಲಬರ್ಗಾದ ಡಾ॥ಸ್ವಾಮಿರಾವ್ ಕುಲಕರ್ಣಿ ಹಾಗೂ ಮಂಗಳೂರಿನ ಶ್ರೀ ಬಿ. ವಿ. ಉಪಾಧ್ಯಾಯ ಹಾಗು ಪ್ರೊ॥ ಎಂ. ರಾಘವೇಂದ್ರಪ್ರಭು ಇವರು ಅತ್ಯಂತ ಉತ್ತಮ ಸಹಕಾರ ನೀಡಿದ್ದಾರೆ. ಅವರೆಲ್ಲರಿಗೂ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ. ಪರೀಕ್ಷೆಗಳನ್ನು ನಡೆಸಲು ಸ್ಥಳಾವಕಾಶ ನೀಡಿದ ಎಲ್ಲಾ ಕೇಂದ್ರಗಳ ವಿದ್ಯಾಸಂಸ್ಥೆಗಳ ಅಧಿಕಾರ ವರ್ಗ ಮತ್ತು ಸಿಬ್ಬಂದಿಯ ನೆರವನ್ನೂ ಅಕಾದೆಮಿಯು ಕೃತಜ್ಞತೆಯಿಂದ ನೆನೆಯುತ್ತದೆ. ಉತ್ತರ ಪತ್ರಿಕೆಗಳ ಮೌಲ್ಯಮಾಪನಕ್ಕೆ ಸ್ಥಳಾವಕಾಶ ನೀಡಿದ ಶಿಕ್ಷಣ ಸಂಸ್ಥೆಯ ಅಧಿಕಾರಿಗಳು ಮತ್ತು ಮೌಲ್ಯಮಾಪನ ಮಾಡಿದ ಇತಿಹಾಸ ಬೋಧಕರಿಗೂ ಮೌಲ್ಯಮಾಪನ ವ್ಯವಸ್ಥೆಯನ್ನು ನಿರ್ವಹಿಸಿದವರಿಗೂ ಅಕಾದೆಮಿಯು ಧನ್ಯವಾದಗಳನ್ನು ಸಲ್ಲಿಸುತ್ತದೆ.

**ಕಾರ್ಯಕಾರೀ ಸಮಿತಿಯ ಸಭೆಗಳು**

೧೯೯೮ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ನಾಲ್ಕು ಬಾರಿ (೧೭-೪-೯೮, ೫-೧೦-೯೮, ೧೨-೧೦-೯೮, ೧೫-೧೧-೯೮) ಸಭೆ ಸೇರಿ, ವಿವಿಧ ಚಟುವಟಿಕೆಗಳ ಬಗೆಗೆ ಚರ್ಚಿಸಿ, ಕಾರ್ಯನಿರ್ವಹಣೆಗೆ ಸಹಕರಿಸಿದೆ. ಸಭೆಗೆ ಹಾಜರಾಗಿ ಅಥವಾ ಪತ್ರಮುಖೇನ ಸೂಕ್ತ ಸಲಹೆ-ಸೂಚನೆಗಳನ್ನು ನೀಡಿ ಸಹಕರಿಸುತ್ತಿರುವ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸದಸ್ಯರು ಅಕಾದೆಮಿಯ ಸರ್ವಾಂಗೀಣ ಬೆಳವಣಿಗೆಗೆ ಮತ್ತು ಕ್ರಿಯಾತ್ಮಕ ಚಟುವಟಿಕೆಗಳಿಗೆ ಕಾರಣರಾಗಿದ್ದಾರೆ. ೧೫-೧೧-೧೯೯೮ರಂದು ನಡೆದ ಸಭೆಯು ೧೯೯೮-೯೯ ಮತ್ತು ೧೯೯೯-೨೦೦೦ನೆಯ ಸಾಲಿಗೆ ಆಯ್ಕೆಯಾದ ಹೊಸ ಕಾರ್ಯಕಾರೀ ಸಮಿತಿಯ ಮೊದಲ ಸಭೆ ಮತ್ತು ಆ ಸಭೆಯಲ್ಲಿ ಹೊಸ ಪದಾಧಿಕಾರಿಗಳ ಸರ್ವಾನುಮತದ ಆಯ್ಕೆಯಾಯಿತು.

**ಸದಸ್ಯರ ಸಂಖ್ಯೆ**

೧೯೯೮ರ ಅಂತ್ಯಕ್ಕೆ ಅಕಾದೆಮಿಯ ಸದಸ್ಯ ಬಳಗವು ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಘ-ಸಂಸ್ಥೆಗಳು | ಒಟ್ಟು |
|---|---|---|---|
| ೭೩೦ | ೧೦ | ೨೫ | ೭೬೫ |

**ಅಕಾದೆಮಿಯ ಘಟಕಗಳು**

ಬೆಂಗಳೂರು ಘಟಕವು ಡಾ॥ ಬೆಂ. ಶಾ. ಶ್ಯಾಮಲಾ ರತ್ನಕುಮಾರಿ ಅವರ ಅಧ್ಯಕ್ಷತೆಯಲ್ಲಿ ಮತ್ತು ಮೈಸೂರು ಘಟಕವು ಡಾ॥ಕೆ. ವಿ. ರಮೇಶ್ ಅವರ ಅಧ್ಯಕ್ಷತೆಯಲ್ಲಿ ಹೊಸದಾಗಿ ಆಯ್ಕೆಯಾಗಿವೆ. ಉಳಿದಂತೆ ಧಾರವಾಡ, ಬಿಜಾಪುರ, ಶಿವಮೊಗ್ಗ, ಬಳ್ಳಾರಿ, ಹರಪನಹಳ್ಳಿಗಳಲ್ಲಿ ಕಳೆದ ಅವಧಿಯ ಪದಾಧಿಕಾರಿಗಳೇ ೧೯೯೮ನೆಯ ಸಾಲಿಗೂ ಮುಂದುವರಿದಿದ್ದಾರೆ. ಹೊಸ ಸಮಿತಿಗಳ ಆಯ್ಕೆಯು ೧೯೯೯ನೆಯ ಸಾಲಿನಲ್ಲಿ ಆಗುವ ನಿರೀಕ್ಷೆ ಇದೆ.

**ಘಟಕಗಳ ವರದಿಗಳು**

**ಶಿವಮೊಗ್ಗ ಜಿಲ್ಲಾ ಘಟಕದ**

೧೯೯೭ನೆಯ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ಶಿವಮೊಗ್ಗ ಘಟಕವು ೧೯೯೮ರ ಆಗಸ್ಟ್ ತಿಂಗಳವರೆಗೂ ಮುಂದುವರಿಸಿ ಈ ಕೆಳಕಂಡ ಕಾರ್ಯಕ್ರಮಗಳನ್ನು ನಡೆಸಿದೆ.

| ದಿನಾಂಕ | ಸ್ಥಳ | ಉದ್ಘಾಟಕರು/ಅಧ್ಯಕ್ಷರು/ಅತಿಥಿಗಳು | ಇತರೆ |
|---|---|---|---|
| | | **ಸರ್ವಶ್ರೀ** | |
| ೨೯-೧-೯೮ | ಸರ್ಕಾರಿ ಪ್ರೌಢಶಾಲೆ ಗಾಜನೂರು | ಎಂ. ಮಾಧವ ಪೈ<br>ಹೆಚ್. ಎಂ. ಚಂದ್ರಶೇಖರಪ್ಪ | ಪ್ರಾಚೀನ ನಾಣ್ಯ ಪ್ರದರ್ಶನ : ಶ್ರೀ ರಾಮಚಂದ್ರ ಕಾರಂತ ಅವರಿಂದ |
| ೩೦-೧-೯೮ | ವಿಜಯ ಯುವಕಸಂಘ ಸಂತೇಬೆನ್ನೂರು | ಸಿದ್ದಯ್ಯ ಹಿರೇಮಠ<br>ಜಗದೀಶ ಅಗಸಿ ಬಾಗಿಲಿನವರ<br>ಜಯದೇವಪ್ಪ ಜೈನಕೇರಿ<br>ಶ್ರೀಮತಿ ಕಿರಣ ದೇಸಾಯಿ<br>ಜಯದೇವಪ್ಪ ಜೈನಕೇರಿ<br>ಎಸ್. ಮಂಜಪ್ಪ | |

| | | |
|---|---|---|
| ೨೪-೨-೯೮ | ಪ್ರಾಚ್ಯವಸ್ತು ಇಲಾಖೆ<br>ಶಿವಪ್ಪನಾಯಕನ ಅರಮನೆ<br>ಶಿವಮೊಗ್ಗ | ಸಾನಿಧ್ಯ : ಪರಮ ಪೂಜ್ಯ ಜಗದ್ಗುರು<br>ಶ್ರೀ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ<br>ಮಹಾಸ್ವಾಮಿಗಳು<br>ಡಾ ॥ ಹೆಚ್. ಎಲ್. ನಾಗೇಗೌಡ |
| ೯-೫-೯೮<br>೧೦-೫-೯೮ | ಶಿವಪ್ಪನಾಯಕ ಅರಮನೆ<br>ಶಿವಮೊಗ್ಗ<br>ನಗರಾಭಿವೃದ್ಧಿ ಪ್ರಾಧಿಕಾರ<br>ಪ್ರಾಚ್ಯವಸ್ತು ಇಲಾಖೆ, ಶಿವಮೊಗ್ಗ | ಸಾನಿಧ್ಯ : ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ<br>ಮಲ್ಲಿಕಾರ್ಜುನ ಮುರುಘರಾಜೇಂದ್ರ<br>ಮಹಾಸ್ವಾಮಿಗಳು<br>ಮಾನ್ಯ ಶ್ರೀ ಜಿ. ಬಸವಣ್ಣೆಪ್ಪ, ಜಿಲ್ಲಾ ಉಸ್ತುವಾರಿ ಸಚಿವರು<br>ಶ್ರೀ ಕೆ. ಎಸ್. ಈಶ್ವರಪ್ಪ, ಶಾಸಕರು<br>ಡಾ ॥ ಅ. ಸುಂದರ<br>ಪ್ರೊ ॥ ಪಿ. ವೆಂಕಟರಾಮಯ್ಯ<br>ಆರ್. ಪ್ರಸನ್ನಕುಮಾರ್<br>ಜಿ. ಎಸ್. ಬಲಗಣ್ಣವರ್<br>ಬಿ. ಪಿ. ರಾಜು<br>ಡಾ ॥ ಸೂರ್ಯನಾಥ ಕಾಮತ್<br>ಟಿ. ಆರ್. ಪಾಂಡುರಂಗ |
| ೮-೮-೯೮<br>೯-೮-೯೮<br>೧೦-೮-೯೮ | ಶಿವಮೊಗ್ಗ<br>ಕೆಳದಿ, ಚನ್ನಗಿರಿ<br>-ಕೆಳದಿ ಚೆನ್ನಮ್ಮಾಜಿ<br>ಶತಮಾನೋತ್ಸವ | ಸಾನಿಧ್ಯ : ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ<br>ಮುರುಘರಾಜೇಂದ್ರ ಮಹಾಸ್ವಾಮಿಗಳು<br>ಶ್ರೀ ಬಸವಣ್ಣೆಪ್ಪ ಜಿಲ್ಲಾ ಉಸ್ತುವಾರಿ ಸಚಿವರು<br>ಶ್ರೀ ಕೆ. ಎಸ್. ಈಶ್ವರಪ್ಪ, ಶಾಸಕರು<br>ಡಾ ॥ ಎಸ್. ಆರ್. ರಾವ್<br>ಕಾಗೋಡು ತಿಮ್ಮಪ್ಪ<br>ಕೆಳದಿ ಗುಂಡಾಜೋಯಿಸ್<br>ಶ್ರೀಮತಿ ಸರ್ವಮಂಗಳಮ್ಮ ಜೆ. ಎಚ್. ಪಟೇಲ್<br>ಶ್ರೀ ಮಹಿಮಾ ಪಟೇಲ್ |

ವಿ. ಸೂ. ಕೆಲವು ಘಟಕಗಳು ನಡೆಸಿದ ಕಾರ್ಯಕ್ರಮಗಳು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಪಟ್ಟಿಯಲ್ಲೇ ಸೇರಿವೆ.

---


**ಕೃತಜ್ಞತೆಗಳು**

ಬೆಂಗಳೂರಿನ ಮಿಥಿಕ್ ಸೊಸೈಟಿ, ಗೋಖಲೆ ಸಾರ್ವಜನಿಕ ವಿದ್ಯಾಸಂಸ್ಥೆ ಬೆಂಗಳೂರು ಮಹಾನಗರ ಪಾಲಿಕೆ ಬಿ.ಆರ್. ಆರ್. ಫ್ಯಾಮಿಲಿ ಟ್ರಸ್ಟ್, ವಾಗ್ದೇವಿ ಮುದ್ರಣಾಲಯ, ಲಕ್ಷ್ಮಿ ಮುದ್ರಣಾಲಯ, ಜೈಗೊರ್‍ಸ್ ಸಾಫ್ಟ್‌ವೇರ್ ಪ್ರೈವೇಟ್ ಲಿ., ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಸಿಂಡಿಕೇಟ್ ಬ್ಯಾಂಕ್, ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು, ಶ್ರೀಜಗಜ್ಯೋತಿ ಬಸವೇಶ್ವರ ಸಹಕಾರ ಸಂಘ, ಪ್ರಗತಿ ಸಹಕಾರ ಬ್ಯಾಂಕ್, ಶ್ರೀ ನಿಜಗುಣ ಜಂಗಮತ ಶ್ರೀ ಅಶೋಕ್‌ಕುಮಾರ್, ಶ್ರೀ ತ. ರಂ. ಕೃಷ್ಣಗೌಡ ಮುಂಬಯಿಯ ಶ್ರೀಮತಿ ಸಿ. ಆರ್. ಶ್ಯಾಮಲಾ ಹಾಗೂ ಇನ್ನೂ ಅನೇಕ ಸದಸ್ಯ ಬಂಧುಗಳು, ಮತ್ತು ಅನೇಕರು ಅಕಾದೆಮಿಯ ಕೃತಜ್ಞತೆಗಳಿಗೆ ಪಾತ್ರರಾಗಿದ್ದಾರೆ.


**ಕಾರ್ಯಕಾರಿ ಸಮಿತಿಯ ಅನುಮತಿಯ ಮೇರೆಗೆ**

**ಡಾ ॥ ಸೂರ್ಯನಾಥ ಕಾಮತ್**
ಅಧ್ಯಕ್ಷರು

**ಎಂ. ಜಿ. ನಾಗರಾಜ್**
ಉಪಾಧ್ಯಕ್ಷರು

**ಪ್ರೊ ॥ ಲಕ್ಷ್ಮಣ್ ತೆಲಗಾವಿ**
ಉಪಾಧ್ಯಕ್ಷರು

**ಡಾ ॥ ಎಚ್. ಎಸ್. ಗೋಪಾಲ್‌ರಾವ್**
ಪ್ರಧಾನ ಕಾರ್ಯದರ್ಶಿ

**ಎಂ. ಬಿ.ಪಾಟೀಲ್**
ಕೋಶಾಧ್ಯಕ್ಷರು

**ಡಾ ॥ ಹೆಚ್. ಆರ್.ರಘುನಾಥಭಟ್**
ಕಾರ್ಯದರ್ಶಿ

**ಡಾ ॥ ಕೆ. ವಸಂತಲಕ್ಷ್ಮಿ**
ಕಾರ್ಯದರ್ಶಿ

**ACHARYA K. V.** B.Com., F.C.A.
Chartered Accountant

**'SRI KRISHNA'**
13/3, Pampamahakavi Road,
Bangalore - 560004
Phone : 6509606

---

Ref. :

Date : ..........................................

## AUDITOR'S REPORT

To

The Members of Karnataka Itihasa Academy

We have audited the Balance Sheet of Karnataka Itihasa Academy as at 31st December 1998 and Income and Expenditure Account on that date annexed thereto and report that :

1. The method of accounting adopted by the Academy is Cash System.
2. We have obtained all the information and explanations which to the best of our knowledge and belief were necessary for the purposes of our Audit.
3. The Balance Sheet and the Income & Expenditure Account dealt with by this report are in agreement with the Books of Accounts.
4. In our opinion and to the best of our information and according to the explanations given to us, the accounts give a true and fair view :-
   - i. in the case of Balance Sheet of the State of Affairs of the Academy as at 31st March 1999 and
   - ii. In the case of the Income & Expenditure Account of the Income for the year ended on that date.

**For Acharya & Co.,**
*Chartered Accountants*

*Sd/-*
**(K. V. ACHARYA)**
*Proprietor*

BANGALORE
7th June 1999

## KARNATAKA ITIHASA ACADEMY : BANGALORE - 560 019

### Receipts and Payments Account for the Year Ended 31st December 1998

| Receipts | | | Payments | | |
|---|---|---|---|---|---|
| To Balance B/f | | | By Fixed Deposit with The Pragathi Co-op. | | |
| " Cash in hand | 72.01 | | " Bank Ltd., F. D. R. No. 5127 | 20,000.00 | 70,000.00 |
| " Cash at Syndicate Bank | | | " The S. J. B. S. F. D. R. No. 70 | 50,000.00 | |
| BWSSB Branch, S.B. A/c | | | | | |
| No.12467 | 2,854.70 | 2,926.71 | " K. H. Examination Expenses | | 1,07,393.60 |
| " Life Membership Fees | | 25,250.00 | " Prize Money Awarded | | 3,000.00 |
| " Institutional Membership Fees | | 500.00 | " K. H. Seminar Expenses | | 13,136.00 |
| " Annual Membership Fees | | 790.00 | " Heritage Week Celebrations Expenses | | 29,260.00 |
| " Donations received | | 20,700.00 | " 12th Annual Conference Expenses | | 49,407.00 |
| " Grants received for Heritage | | | " Printing of I.D.XIII | | 70,000.00 |
| Week Celebrations | | 25,000.00 | " Rent | | 3,600.00 |
| " K. H. Examination fees | | 1,76,130.00 | " Printing & Stationery | | 5,039.00 |
| " Fixed Deposit (Withdrawal of | | | " Postage & Telegrams | | 1,895.00 |
| FDR No. 26 with Shri S. J. B. S. S | | | " Conveyance | | 1,125.00 |
| Bank) | | 20,000.00 | " Audit Fees for 1997 | | 1,500.00 |
| " Interest on Fixed Deposits | | | " Bank Charges | | 308.00 |
| The Pragathi Co-op. Bank Ltd. | 27,864 | | " Miscellaneous Expenses | | 5,718.00 |
| The S. J. B. S.S. Bank | 7,231 | 25,095.00 | Balance C/d | | |
| " Interest on S. B.A/c | | 721.00 | " Cash on hand | 928.41 | |
| " Interest on Rental Deposit | | 800.00 | " Cash at Syndicate Bank, BWSSB Branch | | |
| " 12th Annual Conference Collections | | | " S. B. A/c No. 12,467 | 10,399.70 | 11,328.11 |
| Donations | 48,629 | | | | |
| Delegate Fees | 13,401 | 62,030.00 | | | |
| " Sale of Publications | | 1,800.00 | | | |
| " Miscellaneous Receipts | | 967.00 | | | |
| Total | Rs. | 3,72,709.71 | Total | Rs. | 3,72,709.71 |

| | | | | |
|---|---|---|---|---|
| | *Sd/-* | *Sd/-* | *Sd/-* | *Sd/-* |
| Bangalore | **Suryanath Kamath** | **H. S. Gopal Rao** | **M. B. Patil** | **K.V. Acharya** |
| 7th June 99 | *President* | *Gen. Secretary* | *Treasurer* | *Chartered Accountant* |

## KARNATAKA ITIHASA ACADEMY : BANGALORE - 560 019

### Income & Expenditure Account For the Year Ending 31st December 1998

| Expenditure | Amount | Income | | Amount |
|---|---|---|---|---|
| To K. H. Examination | 1,07,393.60 | By Institutional Membership Fees | | 500.00 |
| " Prize Money Awarded | 3,000.00 | " Annual Membership Fees | | 790.00 |
| " K. H. Seminar Expenses | 13,136.00 | " Donations received | | 20,700.00 |
| " Heritage Week Celebrations | 29,260.00 | " Grant for Heritage Week Celebrations | | 25,000.00 |
| " 12th Annual Conference Expenses | 49,407.00 | " K. H.Examination Fees | | 1,76,130.00 |
| " Printing of Ithihasa Drashana, Volume XIII | 70,000.00 | " Interest | | |
| " Rent | 3,600.00 | " i. On Fixed Deposits | | |
| " Printing & Stationery | 5,039.00 | The Pragathi Co-op. Bank Ltd | 27,864.00 | |
| " Postage & Telegrams | 1,895.00 | The S. J. B. S. S. (N) | 7,231.00 | |
| | | | 35,095.00 | |
| " Travelling & Conveyance | 1,125.00 | ii. On Rental Deposit | 800.00 | |
| " Audit Fees | 2,000.00 | iii. On S.B.A/c | 721.00 | 36,616.00 |
| " Bank Charges | 308.00 | " 12th Annual Conference Collections: | | |
| " Miscellaneous Expenses | 5,718.00 | Donations | 48,629.00 | |
| " Depreciation | 287.60 | " Delegate Fees | 13,401.00 | 62,030.00 |
| " Excess of Income over Expenditure | 32,363.80 | " Sale of Publications` | | 1,800.00 |
| | | " Miscellaneous Recepts | | 967.00 |
| Total Rs. | 3,24,533.00 | Total | Rs. | 3,24,533.00 |

| | | | | |
|---|---|---|---|---|
| | Sd/- | Sd/- | Sd/- | Sd/- |
| *Bangalore* | ***Suryanath Kamath*** | **H. S. Gopal Rao** | **M. B. Patil** | **K.V. Acharya** |
| 7th June 99 | *President* | *Gen. Secretary* | *Treasurer* | *Chartered Accountant* |

## KARNATAKA ITIHASA ACADEMY : BANGALORE - 560 019
### Balance Sheet As At 31st December 1998

| Liabilities | | Amount | Assets | | Amount |
|---|---|---|---|---|---|
| Life Membership Fees | | | Furniture & Fixtures | 2,875.90 | |
| As per Last Balance Sheet | 2,04,042.00 | | Less : Depreciation @ 10% | 287.60 | 2,588.30 |
| Add : Collected during the year | 25,250.00 | 2,29,292.00 | Rental Deposit | | 10,000.00 |
| | | | Fixed Deposit with | | |
| Excess of Income over Expenditure | | | The Pragathi Coop. Bank Ltd | | |
| As per Last Balance Sheet | 30,260.61 | | (per Sch) | 2,20,000.00 | |
| Add : Excess of Income over | | | Sri Jagadjyothi Basaveshwara | | |
| Expenditure | 32,363.80 | 62,624.41 | Sahakara Sangha (N) | 50,000.00 | 2,70,000.00 |
| | | | Cash and Bank Balances : | | |
| Outstanding Audit Fees | | 2,000.00 | Cash on hand | 928.41 | |
| | | | Cash at Syndicate Bank | 10,399.70 | 11,328.11 |
| Total | | Rs. 2,93,916.41 | Total | | Rs. 2,93,916.41 |

| | | | | |
|---|---|---|---|---|
| | *Sd/-* | *Sd/-* | *Sd/-* | *Sd/-* |
| **Bangalore** | **Suryanath Kamath** | **H. S. Gopal Rao** | **M. B. Patil** | **K.V. Acharya** |
| **7th June 99** | *President* | *Gen. Secretary* | *Treasurer* | *Chartered Accountant* |

## ಕರ್ನಾಟಕ ಇತಿಹಾಸ ಅಕಾದೆಮಿ - ಬೆಂಗಳೂರು

# ೧೯೯೯ನೇ ಸಾಲಿನ (ಮುಂಗಡ) ಆಯ-ವ್ಯಯ ಪಟ್ಟಿ

### ಆದಾಯ

| | | | |
|---|---|---|---|
| ೧. | ಸದಸ್ಯತ್ವದ ಶುಲ್ಕ | | |
| | ಆಜೀವ | ೧೦,೦೦೦ | |
| | ಸಾಮಾನ್ಯ | ೫,೦೦ | |
| | ಸಂಸ್ಥೆ | ೨,೦೦೦ | ೧೨,೫೦೦ |
| ೨. | ಸದಸ್ಯತ್ವದ ಬಾಕಿ ವಸೂಲಿ | | ೫,೦೦೦ |
| ೩. | ಪರೀಕ್ಷಾ ಶುಲ್ಕ | | ೧,೯೨,೬೬೫ |
| ೪. | ದೇಣಿಗೆಗಳು ಸದಸ್ಯರಿಂದ | | ೫,೦೦೦ |
| ೫. | ಸರ್ಕಾರದ ಆರ್ಥಿಕ ನೆರವು | | ೨೫,೦೦೦ |
| | (ಪರಂಪರೆ ಉಳಿಸಿ) | | |
| ೬. | ಠೇವಣಿಗಳ ಮೇಲಿನ ಬಡ್ಡಿ | | ೪೦,೦೦೦ |
| ೭. | ಇತರೇ | | ೨,೦೦೦ |
| | | | ೨,೮೨,೧೬೫ |
| | ಆದಾಯಕ್ಕಿಂತ ಹೆಚ್ಚಿನ ಖರ್ಚು | | ೧೨,೮೩೫ |
| | | | ೨,೯೫,೦೦೦ |

### ಖರ್ಚು

| | | |
|---|---|---|
| ೧. | ಪರೀಕ್ಷಾ ವೆಚ್ಚ | ೧,೨೪,೦೦೦ |
| ೨. | ೧೩ನೇ ವಾರ್ಷಿಕ ಸಮ್ಮೇಳನಾ | ೧೫,೦೦೦ |
| ೩. | ಪರಂಪರೆ ಉಳಿಸಿ ಸಪ್ತಾಹ | ೪೫,೦೦೦ |
| ೪. | ವಿಶೇಷ ಉಪನ್ಯಾಸಗಳು | ೧೦,೦೦೦ |
| ೫. | ಸ್ಥಳೀಯ ಘಟಕಗಳಿಗೆ ಮತ್ತು ಇತರ ಸಂಸ್ಥೆಗಳಿಗೆ ಆರ್ಥಿಕ ನೆರವು | ೫,೦೦೦ |
| ೬. | ಅ. ಕಛೇರಿಯ ಬಾಡಿಗೆ | ೪,೦೦೦ |
| | ಆ. ಕಛೇರಿ ಕಾರ್ಯದರ್ಶಿಯವರ ಓಡಾಟ ಭತ್ಯೆ | ೩,೦೦೦ |
| ೭. | ಇತಿಹಾಸ ದರ್ಶನ ಮುದ್ರಣ (೧೪) | ೭೦,೦೦೦ |
| ೮. | ಲೇಖನ ಸಾಮಗ್ರಿ ಮುದ್ರಣ ವೆಚ್ಚ | ೫,೦೦೦ |
| ೯. | ಅಂಚೆ ವೆಚ್ಚ | ೫,೦೦೦ |
| ೧೦. | ಲೆಖ್ಖ ತಪಾಸಣೆ ಶುಲ್ಕ | ೨,೦೦೦ |
| ೧೧. | ಇತರೆ ಸಾದಿಲ್ವಾರು ಖರ್ಚು | ೫,೦೦೦ |
| | | ೨,೯೫,೦೦೦ |

ಒಟ್ಟು ಠೇವಣಿಗಳು ೩,೧೦,೦೦೦

| | |
|---|---|
| ಪ್ರಗತಿ ಬ್ಯಾಂಕ್ | ೨,೦೦,೦೦೦ |
| ಬಸವೇಶ್ವರ ಸಹಕಾರ ಸಂಘ | ೧,೦೦,೦೦೦ |
| ಗೋಖಲೆ ಸಾರ್ವಜನಿಕ ಸಂಸ್ಥೆ | ೧೦,೦೦೦ |
| | ೩,೧೦,೦೦೦ |

ದಿ॥ ಅಭಿಶಂಕರ ಅವರ ಕುಟುಂಬದ ದತ್ತಿನಿಧಿ ೨೦,೦೦೦

ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

# ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ

ಪ್ರಾಚೀನ ಕೋಟೆ, ದೇವಾಲಯ, ಮಸೀದಿ
ಚರ್ಚು, ಕೆರೆ, ಶಾಸನ, ವೀರಗಲ್ಲು, ತಾಮ್ರಪಟ, ತಾಳೆಗರಿ
ಹೊತ್ತಿಗೆ, ನಾಣ್ಯ, ಕಲಾಕೃತಿ, ಆಯುಧ
ಮುಂತಾದ ವಸ್ತುಗಳು ನಾಡಿನ ಸಾಂಸ್ಕೃತಿಕ ಸಂಪತ್ತು

## ಅವುಗಳ ಸಂರಕ್ಷಣೆ ನಮ್ಮ ಕರ್ತವ್ಯ



ನೆರವು : ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ